# ಆರಾಧ್ಯಸಂಪದ-೨

## ಪ್ರೊ. ಎನ್. ಬಸವಾರಾಧ್ಯರ ಸಾಹಿತ್ಯ ಸಂಪುಟ





ಪಾದಕರು
. ಸಿ. ಶಿವಕುಮಾರಸ್ವಾಮಿ
ೊ. ಎಂ. ಪ್ರಸನ್ನಕುಮಾರ್



# ಆರಾಧ್ಯ ಸಂಪದ-೨

ಸಂಪಾದಕರು:

ಡಾ. ಸಿ. ಶಿವಕುಮಾರಸ್ವಾಮಿ

ಪ್ರೊ. ಎಂ. ಪ್ರಸನ್ನಕುಮಾರ್

ಪ್ರಕಾಶಕರು

ಪ್ರೊ. ಎಸ್. ಬಸವಾರಾಧ್ಯ ಅಭಿನಂದನ ಸಮಿತಿ

ನಂ. 743, 12ನೇ ಮುಖ್ಯರಸ್ತೆ, 3ನೇ ಬ್ಲಾಕ್

ರಾಜಾಜಿನಗರ, ಬೆಂಗಳೂರು–560010

**ARADHYA SAMPADA - 2** : *Collection of Kannada articles written by* : ***Prof. N. Basavaradhya,*** *Former President, Kannada Sahitya Parishat, Bangalore. Edited by:* ***Dr. C. Shivakumaraswamy and Prof. M. Prasannakumar.*** *Published by: Prof. N. Basavaradhya Abhinandana Samiti, No. 742, 12th Main, 3rd Block, Rajajinagar, Bangalore-560010.*



First Impression : 2013

Pages : xiv+512

Copies : 500

Paper used : 70 GSM NS Maplitho

Size : 1/4 Crown

Price : **Rs. 500/-**



Cover Design :

Type Setting : **Mahesh M.**
Kumuda Graphics, Bangalore-560026
Mob: 9945814774

Printed at : **M/s Vishwas Prints**
No. 23, 3rd Cross, Nanjamba Agrahara
Chamarajpet, Bangalore-560018
Phone : 26604835, 56974235




# ಅಭಿನಂದಿತರ ನುಡಿ

ನನ್ನ ಎಂಬತ್ತನೆಯ ವರ್ಷದಲ್ಲಿ ಅಭಿನಂದನ ಸಮಿತಿಯವರು ಅರ್ಪಿಸಿದ 'ಆರಾಧ್ಯ ಸಂಪದ'ದಲ್ಲಿ ನಾನು ಆವರೆಗೆ ಸಂಪಾದಿಸಿದ ಕೃತಿಗಳಲ್ಲಿನ ಪೀಠಿಕೆ ಪ್ರಸ್ತಾವನೆಗಳ ಜೊತೆಗೆ ಬಿಡಿಬಿಡಿಯಾದ ಕೆಲವು ಲೇಖನಗಳನ್ನು ಸೇರಿಸಲಾಗಿದೆ. ಆದರೆ ನಾನು ಆವರೆಗೆ ಬರೆದಿದ್ದ ಅನೇಕ ಲೇಖನಗಳು ಸಕಾಲಕ್ಕೆ ಲಭ್ಯವಾಗದಿದ್ದುದರಿಂದ ಅವು ಸಂಭಾವನ ಸಂಪುಟದಲ್ಲಿ ಸೇರ್ಪಡೆಯಾಗದೆ ಹಾಗೆಯೇ ಉಳಿದುಬಿಟ್ಟಿದ್ದುವು. ಈ ವಿಷಯ ನನ್ನ ಗಮನಕ್ಕೆ ಬಂದುದೇ ಅಲ್ಲದೆ ಹಲವರು ಈ ಸಂಗತಿಯನ್ನು ನನ್ನಲ್ಲಿ ಪ್ರಸ್ತಾಪಿಸಿ ಈ ಸಂಪುಟದಲ್ಲಿ ಸೇರ್ಪಡೆಯಾಗದಿರುವ ಲೇಖನಗಳನ್ನು ಮತ್ತೊಂದು ಸಂಪುಟದಲ್ಲಿ ಹೊರತರುವಂತೆ ಸಲಹೆ ಮಾಡಿದರು. ಅಭಿನಂದನ ಸಮಿತಿಯ ಎಲ್ಲ ಸದಸ್ಯರು ಈ ಸಲಹೆಯನ್ನು ಅನುಮೋದಿಸಿದರು. ಅದರಂತೆ ಈ ಎರಡನೆಯ ಸಂಪುಟವನ್ನು ಸಿದ್ಧಪಡಿಸಿ ಹೊರತರಲಾಗಿದೆ.

ಸುಮಾರು ನಾಲ್ಕೈದು ದಶಕಗಳಲ್ಲಿ ನಾನು ಪತ್ರಿಕೆಗಳಿಗೆ ಬರೆದ ಲೇಖನಗಳಾಗಲಿ; ಆಕಾಶವಾಣಿಯಲ್ಲಿ ಮಾಡಿದ ಭಾಷಣಗಳಾಗಲಿ; ವಿಚಾರ ಸಂಕಿರಣಗಳಲ್ಲಿ ಪ್ರಸ್ತುತಪಡಿಸಿದ ಪ್ರಬಂಧಗಳಾಗಲಿ; ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾದ ವಿಮರ್ಶೆಗಳಾಗಲಿ, ಬೇರೆ ಬೇರೆ ಅಭಿನಂದನ ಗ್ರಂಥಗಳಿಗೆ ಬರೆದುಕೊಟ್ಟ ಲೇಖನಗಳನ್ನಾಗಲಿ, ನಾನು ಅವುಗಳ ಪ್ರತಿಗಳನ್ನಾಗಲಿ ಒಂದೆಡೆ ಕೂಡಿಡಲಿಲ್ಲ. ಅಂದಿನ ಕಾಲದಲ್ಲಿ ಈ ಬರವಣಿಗೆಗಳನ್ನು ಪ್ರತಿಮಾಡಿಸುವ ಝೆರಾಕ್ಸ್, ಬೆರಳಚ್ಚು, ನೆರಳಚ್ಚು, ಡಿಟಿಪಿ ಮೊದಲಾದ ಸೌಲಭ್ಯಗಳಿರಲಿಲ್ಲ. ನನ್ನ ಲೇಖನಗಳ ಮತ್ತೊಂದು ಪ್ರತಿಯನ್ನು ಸಂಘಟಕರಿಂದಲೇ ಪಡೆದುಕೊಳ್ಳುವ ಪರಿಸ್ಥಿತಿ ಪ್ರಾಪ್ತವಾಯಿತು. ಹಲವಾರು ಮಿತ್ರರು ತಮಗೆ ಸಿಕ್ಕಿದ ನನ್ನ ಲೇಖನಗಳನ್ನು ಪ್ರತಿಮಾಡಿಸಿಕೊಟ್ಟರು. ನಾನೂ ಕೆಲವು ಲೇಖನಗಳನ್ನು ಸಂಗ್ರಹಿಸಿದೆ. ಅಂತೂ ಕೊನೆಗೆ ಸಾಹಿತ್ಯ ವಿಭಾಗದ ಐವತ್ತು ಲೇಖನಗಳು; ವ್ಯಕ್ತಿಚಿತ್ರಗಳ ಲೇಖನಗಳು ಮತ್ತು ಪುಸ್ತಕ ವಿಮರ್ಶೆಗಳು; ಸಂಕೀರ್ಣ ಲೇಖನಗಳೇ ಮೊದಲಾದ ನೂರಾರು ಲೇಖನಗಳನ್ನು ಸಂಗ್ರಹಿಸಿ ಈ ಸಂಪುಟದಲ್ಲಿ ಸಮಾವೇಶಗೊಳಿಸಲಾಗಿದೆ.

ಈ ಸಂಪುಟದ ಹಲವು ಲೇಖನಗಳು ಮೇಲೆ ತಿಳಿಸಿದಂತೆ ಸುಮಾರು ನಲವತ್ತು ಐವತ್ತರ ಕಾಲಘಟ್ಟದಲ್ಲಿ ಬರೆದಂತಹವು. ಅವುಗಳನ್ನು ಬರೆಯುವ ವೇಳೆಗೆ ಲಭ್ಯವಿದ್ದ ಎಲ್ಲ ಮಾಹಿತಿಯನ್ನೂ ಬಳಸಿಕೊಳ್ಳಲಾಗಿದೆ. ಇಂದು ಅದೇ ವೇಳೆಗೆ ಅದೇ ವಿಷಯದ ಬಗೆಗೆ ಹೆಚ್ಚಿನ ಮಾಹಿತಿ ಲಭ್ಯವಾಗಿರಬಹುದು. ಅಂದಿನ ಅಭಿಪ್ರಾಯಗಳು ಇಂದು ಬದಲಾವಣೆಯಾಗಿರಬಹುದು. ಅಂದಿನ ವಿದ್ಯಮಾನಗಳನ್ನೂ ಸ್ಥಿತಿಗತಿಗಳನ್ನೂ ಇಂದಿನ ಕಾಲಘಟ್ಟದಲ್ಲಿ ವಿಮರ್ಶಿಸುವುದೂ, ವಿಶ್ಲೇಷಿಸುವುದೂ ಅಸಹಜ ಅಕಾಲಿಕ ಎಂದು ಕಾಣಬಹುದು. ಇವನ್ನು ಪರಿಶೀಲಿಸುವ ಸಹೃದಯರು ಈ ಅಂಶವನ್ನು ನೆನಪಿನಲ್ಲಿಟ್ಟುಕೊಳ್ಳಬೇಕೆಂದು ವಿನಂತಿಸಿಕೊಳ್ಳುತ್ತೇನೆ. ಹಿಂದೆ ಬರೆದಿರುವ ಈ ಲೇಖನಗಳಿಗೆ ಇಂದಿನ ಅಗತ್ಯ ತಿದ್ದುಪಡಿಗಳನ್ನು ಮಾಡಬೇಕಾಗಬಹುದು ಎಂಬುದನ್ನು ಮುಕ್ತಮನಸ್ಸಿನಿಂದ ಒಪ್ಪಿಕೊಳ್ಳುತ್ತೇನೆ. ನಾನು ಎಲ್ಲ ಕಾಲಕ್ಕೂ ಎಲ್ಲ ಜನಕ್ಕೂ ಒಪ್ಪಿಗೆಯಾಗಿರುವುದನ್ನೇ ಬರೆದಿದ್ದೇನೆ ಎಂಬ ಹಠವಾಗಲಿ, ಅಹಂಭಾವವಾಗಲಿ ನನ್ನಲ್ಲಿ ಎಳ್ಳಷ್ಟೂ ಇಲ್ಲ. ಈ ಲೇಖನಗಳನ್ನು ಬರೆದ ಕಾಲದೃಷ್ಟಿಯಿಂದ ಇವುಗಳ ಮೌಲ್ಯಮಾಪನವನ್ನು ಮಾಡಿಕೊಳ್ಳಬೇಕೆಂದು ವಿನಂತಿಸಿಕೊಳ್ಳುತ್ತೇನೆ.

ಈ ಸಂಪುಟದ ಸಾಹಿತ್ಯ ವಿಭಾಗದಲ್ಲಿ ನಲವತ್ತೈದು ಲೇಖನಗಳಿವೆ. ಅವುಗಳನ್ನು ಪರಿಭಾವಿಸಬೇಕಾದ ವಿಧಾನವನ್ನೂ ಅವುಗಳ ಸ್ವರೂಪ ಲಕ್ಷಣಗಳನ್ನೂ ತಿಳಿಸಲಾಗಿದೆ. ಒಬ್ಬನೇ ಕವಿಯ ಕೃತಿಯ ಬಗೆಗೆ ಎರಡೆರಡು ಲೇಖನಗಳಿವೆ. ಷಡಕ್ಷರಿ, ಬಸವಪ್ಪಶಾಸ್ತ್ರಿ ಇವರನ್ನು ಕುರಿತು ಎರಡು ಲೇಖನಗಳನ್ನು ಬರೆಯಬೇಕಾಯಿತು. ಹಾಗೆಯೇ ಬಿ. ಪುಟ್ಟಸ್ವಾಮಯ್ಯನವರ ಕಲ್ಯಾಣ ಕ್ರಾಂತಿಯನ್ನು ಕುರಿತ ಎರಡು ಲೇಖನಗಳಿವೆ. ಈ ಲೇಖನಗಳಲ್ಲಿ ಪುನರುಕ್ತಿಗಳು

ಅನಿವಾರ್ಯ ಎಂಬುದನ್ನು ಎಲ್ಲರೂ ಬಲ್ಲವರೇ. ಆದರೂ ಸಹೃದಯರ ಕ್ಷಮೆಯನ್ನು ಕೋರುತ್ತೇನೆ. ಸುತ್ತೂರು ಸಂಸ್ಥಾನದ ಗುರುಪರಂಪರೆಯ ಪೀಠಾಧಿಪತಿಗಳೂ ಶ್ರೇಷ್ಠ ವಚನಕಾರರೂ ಆದ ಶ್ರೀ ಘನಲಿಂಗಿದೇವರ ಇತಿವೃತ್ತಗಳನ್ನು ಹಲವಾರು ಮೂಲಗಳಿಂದ ಸಂಗ್ರಹಿಸಿಕೊಡಲಾಗಿದೆ.

ವ್ಯಕ್ತಿಪರಿಚಯ ವಿಭಾಗದಲ್ಲಿ ನಾಡು, ನುಡಿ, ಧರ್ಮ, ಸಾಹಿತ್ಯ, ಸಂಸ್ಕೃತಿ, ಕಲೆ, ವಿಜ್ಞಾನ –ಇವೇ ಮೊದಲಾದ ಕ್ಷೇತ್ರಗಳಿಗೆ ಗಣನೀಯ ಸೇವೆಯನ್ನು ಸಲ್ಲಿಸಿರುವ ಕೆಲವು ಮಹನೀಯರ ಕಿರುಚಿತ್ರಣಗಳಿವೆ. ಇವು ಪರಿಪೂರ್ಣವಾದುವು. ಅಧಿಕೃತವಾದುವು ಎಂದು ಭಾವಿಸಲೆಡೆಯಿಲ್ಲ. ಇವು ಕೇವಲ ಪರಿಚಯಾತ್ಮಕವಾದುವು. ಇಲ್ಲಿ ಸ್ಮರಣೆಗೊಂಡವರಲ್ಲಿ ಕೆಲವರು ಇಂದು ನಮ್ಮ ಮಧ್ಯದಲ್ಲಿಲ್ಲ. ಆ ಪುಣ್ಯಚೇತನಗಳ ಆತ್ಮಕ್ಕೆ ಶಾಂತಿಯನ್ನು ಕೋರುತ್ತೇನೆ.

ವಿಮರ್ಶಾ ವಿಭಾಗದಲ್ಲಿನ ಅನೇಕ ಕೃತಿಗಳು ಇಂದಿನ ಸಾಹಿತಿಗಳ ಮತ್ತು ಓದುಗರ ಲಕ್ಷ್ಯಕ್ಕೆ ಬಾರದಿರಬಹುದು. ಆದರೆ ಪತ್ರಿಕೆಗಳಲ್ಲಿ ವಿಮರ್ಶೆಗೊಳಗಾಗಿರುವ ಕೃತಿಗಳ ಒಂದು ಸ್ಥೂಲಚಿತ್ರಣ ಇಲ್ಲಿ ಲಭ್ಯವಾಗುತ್ತದೆ. ಅಂದಿನ ಕೃತಿ ವಿಮರ್ಶೆಯ ದೃಷ್ಟಿಯಿಂದಲಾದರೂ ಇಲ್ಲಿಯ ಕೃತಿಗಳು ಅಗತ್ಯವೆನಿಸಬಹುದು.

ಕೆಲವು ಕೃತಿಗಳಿಗೆ ಬರೆದುಕೊಟ್ಟಿರುವ ನಾಲ್ಕಾರು ಮುನ್ನುಡಿಗಳು ಇಲ್ಲಿ ಸಮಾವೇಶಗೊಂಡಿವೆ. ಇವು ಆ ಕೃತಿಗಳಿಗೆ ಕಟ್ಟಿದ ನಾಂದಿ ತೋರಣಗಳಂತಿವೆ. ಇಲ್ಲಿಯ ಯಾವ ವಿಭಾಗಗಳಿಗೂ ಸೇರ್ಪಡೆಯಾಗದ ವಿವಿಧ ವಿಷಯಗಳಿಗೆ ಸಂಬಂಧಿಸಿದ ಕೆಲವು ಲೇಖನಗಳನ್ನು ಸಂಕೀರ್ಣ ಎಂಬ ವಿಭಾಗದಲ್ಲಿ ಅಳವಡಿಸಲಾಗಿದೆ. ಹೀಗಿದ್ದರೂ ಕೆಲವು ಬಿಟ್ಟುಹೋಗಲುಬಹುದು.

ಸುಮಾರು ಇಪ್ಪತ್ತು ವರ್ಷಗಳ ಕಾಲ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಕಾರ್ಯದಲ್ಲಿ ನಿಯೋಜಿತನಾಗಿದ್ದ ನಾನು ಡಾ. ಎ.ಆರ್. ಕೃಷ್ಣಶಾಸ್ತ್ರೀ, ಪ್ರೊ. ತೀ.ನಂ. ಶ್ರೀಕಂಠಯ್ಯ, ಪ್ರೊ. ಡಿ.ಎಲ್. ನರಸಿಂಹಾಚಾರ್, ಪ್ರೊ. ಕೆ.ವಿ. ರಾಘವಾಚಾರ್ ಅವರ ನೇರ ಮಾರ್ಗದರ್ಶನದಲ್ಲಿ ಕೆಲಸ ಮಾಡುವ ಅವಕಾಶ ಪ್ರಾಪ್ತವಾಗಿತ್ತು. ಆದುದರಿಂದ ನಾನು ಇನ್ನೂ ಮಹತ್ತರವಾದುದನ್ನೂ ಲೋಕೋತ್ತರವಾದುದನ್ನೂ ಬರೆಯಬಹುದಾಗಿತ್ತು ಎಂದು ಕೆಲವರಿಗೆ ಅನ್ನಿಸಬಹುದೇನೊ!

ಈ ಸಂಪುಟವನ್ನು ಹೊರತರುವಲ್ಲಿ ಅನೇಕ ಮಿತ್ರರೂ ಅಭಿಮಾನಿಗಳೂ ವಿಶೇಷ ನೆರವನ್ನು ನೀಡಿದ್ದಾರೆ. ಡಾ. ಎಸ್.ಸಿ. ನಂದೀಮಠ ಅವರಿಗೆ ಸಂಬಂಧಿಸಿದ ಸಮಸ್ತ ಮಾಹಿತಿಯನ್ನು ಒದಗಿಸಿಕೊಟ್ಟ ಡಾ. ಬಸವರಾಜ ಪುರಾಣಿಕರಿಗೆ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಈ ಸಂಪುಟದ ಲೇಖನಗಳನ್ನು ಸಂಗ್ರಹಿಸುವುದರಿಂದ ಹಿಡಿದು ಅವನ್ನು ವರ್ಗೀಕರಿಸುವುದು, ಪರಿಷ್ಕರಿಸುವುದು, ತಾಳೆ ನೋಡುವುದು, ಡಿಟಿಪಿ ಮಾಡುವುದು –ಇವೇ ಮೊದಲಾದ ಕಾರ್ಯಗಳನ್ನು ನಿರ್ವಹಿಸುವಲ್ಲಿ ಡಾ. ಸಿ. ಶಿವಕುಮಾರಸ್ವಾಮಿ, ಪ್ರೊ. ಎಂ. ಪ್ರಸನ್ನಕುಮಾರ್, ಡಾ. ಬಿ. ನಂಜುಂಡಸ್ವಾಮಿ, ಡಾ. ಸಿ. ನಾಗಭೂಷಣ, ಪ್ರೊ. ಶೀಲವಂತ ಇವರೇ ಮೊದಲಾದವರು ನೀಡಿದ ಸಹಕಾರ ಮಾಡಿದ ಉಪಕಾರ ಅತ್ಯಮೂಲ್ಯವಾದುದು. ಅವರಿಗೆ ನಮ್ಮ ಕೃತಜ್ಞತೆಗಳು.

ಈ ಅಭಿನಂದನ ಸಮಿತಿಯ ರೂವಾರಿಗಳೂ ಪ್ರಧಾನ ಕಾರ್ಯದರ್ಶಿಗಳೂ ಆಗಿದ್ದ ಶ್ರೀ ಎಸ್. ಈಶ್ವರದೇವರು ಅವರ ನೇತೃತ್ವದಲ್ಲಿ ರೂಪುಗೊಂಡ ಈ ಸಮಿತಿಯ ಅಧ್ಯಕ್ಷರಾಗಿದ್ದ ದಿ|| ಪ್ರೊ. ಹೆಚ್.ಆರ್. ದಾಸೇಗೌಡರೂ ಇಂದು ನಮ್ಮ ಮಧ್ಯೆಯಿಲ್ಲ. ಪ್ರಧಾನ ಕಾರ್ಯದರ್ಶಿಗಳಾಗಿದ್ದ ಶ್ರೀ ಎಸ್. ಈಶ್ವರದೇವರು, ಕಾರ್ಯದರ್ಶಿಗಳಾಗಿದ್ದ ಡಾ. ಕೆ.ವಿ. ಚಂದ್ರಣ್ಣಗೌಡ, ಡಾ. ಕೆ.ಆರ್. ಸಂಧ್ಯಾರೆಡ್ಡಿ, ಪ್ರೊ. ಎಂ. ಪ್ರಸನ್ನಕುಮಾರ್ ಅವರೂ, ಕೋಶಾಧಿಕಾರಿಗಳಾಗಿದ್ದ ಯಜಮಾನ್ ಶ್ರೀಕಂಠಪ್ಪನವರೂ, ಆರಾಧ್ಯ ಸಂಪದ ಮತ್ತು ಆರಾಧ್ಯ ಸಿರಿ ಸಂಪುಟಗಳ ಸಂಪಾದಕರುಗಳಾದ ಡಾ. ಎಸ್. ವಿದ್ಯಾಶಂಕರ ಮತ್ತು ಡಾ. ಸಿ. ಶಿವಕುಮಾರಸ್ವಾಮಿಗಳೂ ಈ ಕಾರ್ಯವನ್ನು ಸಮರ್ಥವಾಗಿ ಕಾರ್ಯವನ್ನು ನಿರ್ವಹಿಸಿದ್ದಾರೆ. ಅವರೆಲ್ಲರಿಗೂ ಅನಂತ ಅಭಿನಂದನೆಗಳು.

ಈ ಸಂಪುಟ ಹೊರಬರುವ ವೇಳೆಗೆ ಸಮಿತಿಯ ಅಧ್ಯಕ್ಷರಾಗಿದ್ದ ಪ್ರೊ. ಹೆಚ್.ಆರ್. ದಾಸೇಗೌಡ, ಪ್ರಧಾನ ಕಾರ್ಯದರ್ಶಿಗಳಾಗಿದ್ದ ಎಸ್. ಈಶ್ವರದೇವರು ಶಿವಾಧೀನರಾಗಿದ್ದಾರೆ. ಅವರ ಆತ್ಮಕ್ಕೆ ಚಿರಶಾಂತಿಯನ್ನು ಕೋರುತ್ತೇನೆ.

ಆರಾಧ್ಯ ಸಿರಿಯ ಎರಡನೆಯ ಸಂಪುಟದ ಸಂಪಾದಕರಾದ ಸಮಿತಿಯ ಕೋಶಾಧ್ಯಕ್ಷರಾದ ಡಾ. ಸಿ. ಶಿವಕುಮಾರಸ್ವಾಮಿ ಮತ್ತು ಕಾರ್ಯದರ್ಶಿಗಳಾದ ಪ್ರೊ. ಎಂ. ಪ್ರಸನ್ನಕುಮಾರ್ ಅವರಿಗೆ ಸಮಿತಿಯ ಅಭಿನಂದನೆಗಳು.

**–ಪ್ರೊ. ಎನ್. ಬಸವಾರಾಧ್ಯ**

# ಅಧ್ಯಕ್ಷರ ನುಡಿಹದುಳ

## ಸಾರಸ್ವತ ಸಂಶೋಧನ ಯೋಗಿಗೆ ಆರಾಧ್ಯ ಸಂಪುಟದರ್ಪಣೆ

**ಯೋ**ಗ್ಯವ್ಯಕ್ತಿತ್ವವನ್ನು ಮಾನಿಸುವಂಥ ಚರ್ಯೆ, 'ಆರಾಧ್ಯ'ರ ಗುಣವೆನ್ನಬಹುದು. ಸಾಂಪ್ರದಾಯಿಕ ಅರ್ಥದಲ್ಲಿ ಅದು ಸೇವಾಯೋಗ, ಪೂಜಾಯೋಗವೆನ್ನಬಹುದು. ವರ್ತಮಾನದ ಮಾನಸಕ್ಕೆ ಈ ಶಬ್ದಗಳು ಬೌದ್ಧಿಕ ಕಷ್ಟವೆನಿಸುವುದರಿಂದ ಅಥವಾ ಹಾಗೆ ಭಾವಿಸುವುದರಿಂದ, ಗೌರವಿಸುವುದು 'ಆರಾಧ್ಯರಿಗೆ' ಎಂದರೆ ಸಾಮಯಿಕವಾದೀತು.

ಪ್ರೊ. ಎನ್. ಬಸವಾರಾಧ್ಯರು ನಮ್ಮ ಮಧ್ಯದಲ್ಲಿ ವರ್ತಮಾನದ ಹಿರಿಯ ಜೀವ; ಸಜ್ಜನ. ವಿದ್ವತ್ ಸಾಧನೆಯ ತೊಂಬತ್ತರ ಗಡಿಯ ವಯೋವರ್ಧಿಷ್ಣು ಪಥಗಾಮಿ. ಪಕ್ವ ಮನಸ್ಸಿನ, ಪಳಗಿದ ಭಾವ ವ್ಯವಹಾರದ, ಚೈತನ್ಯವನ್ನು ರಕ್ಷಿಸಿಕೊಂಡು ಬಂದಿರುವ ಆಳೆತ್ತರದ ಜೀವಿ. ಇವರ ಸಾಹಿತ್ಯಿಕ, ಸಂಶೋಧಕ, ಶಾಸ್ತ್ರಜ್ಞಾನ ವೈದುಷ್ಯದ ಲೇಖನಗಳ ಸಂಚಯದ ಒಂದು ಭಾಗ 'ಆರಾಧ್ಯ ಸಂಪದ'ದಲ್ಲಿ ಈ ಮೊದಲೇ ಬೆಳಕು ಕಂಡಿದೆ. ಅದೊಂದು ಪ್ರಾಚೀನ ಕಾವ್ಯಗಳ ಆಸ್ವಾದ, ವಿಮರ್ಶೆ, ಬರೆಹದ ಶೈಲಿಯ ಒಂದು ಆರ್ಷೇಯ ಪ್ರತೀಕ ಅರ್ಥಾತ್ ಕ್ಲಾಸಿಕಲ್ ಬಗೆಯದು. ಸದ್ಯದ ತದೋ ವೈಶಿಷ್ಟ್ಯದ ಲೇಖನ ಸಂಚಯ 'ಆರಾಧ್ಯ ಸಂಪದ'ದ ಎರಡನೆಯ ಸಂಪುಟವಾಗಿ ಹೊರಬಂದಿದೆ. ಇದರಲ್ಲಿ ಸಾಹಿತ್ಯಿಕ ಲೇಖನಗಳು, ಕೃತಿಗಳಿಗೆ ಬರೆದ ಮುನ್ನುಡಿಗಳು, ಕೃತಿ ವಿಮರ್ಶಾ ಬರೆಹಗಳು, ಸಂಕೀರ್ಣ ಲೇಖನಗಳು, ವ್ಯಕ್ತಿಚಿತ್ರಗಳು– ಹೀಗೆ ೫ ವಿಭಾಗಗಳಲ್ಲಿ ಆರಾಧ್ಯರ ವಿದ್ವತ್ತು, ಸಾಹಿತ್ಯಿಕ ಶೋಧಗಳು, ಅನುಭವ, ವೈವಿಧ್ಯಮಯ ಆಸಕ್ತಿ ಹಾಗೂ ನೋಟ ನಿಲುವುಗಳು ಕಾಣಬರುತ್ತವೆ. ಆರಾಧ್ಯರು ನೀಡಿರುವ ಪರಾಮರ್ಶನ ಗ್ರಂಥಗಳ ಹೆಸರೇ ಒಂದು ಗ್ರಂಥನಾಮಕೋಶದಂತಿದೆ. ಅವೆಲ್ಲವೂ ಇಂದಿನವರಿಗೆ ಲಭ್ಯವಾಗುವುದು ಕಷ್ಟ. ಆದರೆ ಅವುಗಳಿದ್ದ ಬಗ್ಗೆ ಲಭ್ಯವಾದ ಮಾಹಿತಿಯಂತು ದೊರೆಯುತ್ತದೆ.

ಸಾಹಿತ್ಯ ವಿಭಾಗದಲ್ಲಿ ಪೊನ್ನನ ಶಾಂತಿಪುರಾಣದಲ್ಲಿ ಬರುವ 'ಮೋರು' ಶಬ್ದವು ತಮಿಳಿನಲ್ಲಿ 'ಮಜ್ಜಿಗೆ' ಎಂಬರ್ಥದಲ್ಲಿ ಬಳಕೆ ಇಂದಿಗೂ ಬಳಕೆಗಿದೆ. ಪೊನ್ನನ ಕಾಲದಲ್ಲಿ ಈ ಶಬ್ದ ಕನ್ನಡ ಜನರಲ್ಲಿ 'ಮೊಸರು' ಎಂಬ ಅರ್ಥದಲ್ಲಿ ಬಳಕೆಯಲ್ಲಿದ್ದುದು ಇಂದಿಲ್ಲ. ಒಂದೇ ಮೂಲದ ಸೋದರ ಭಾಷೆಯಲ್ಲಿ ಬಳಕೆಗಿರುವ 'ಮೋರು' ಕನ್ನಡದಲ್ಲಿ ಮರೆಯಾದ ಬಗ್ಗೆ ಅಚ್ಚರಿಗೊಂಡು ವಿಮರ್ಶಿಸಿದ್ದಾರೆ ಆರಾಧ್ಯರು. ಬಹುಶಃ 'ಮೊಸರು' ಶಬ್ದ ಕನ್ನಡ ಜನತೆಗೆ ಮುಂದೆ ಬಾಯಸುಖವಾಗಿ ಬಾಯ್ದೆರೆಗೆ ಬಂದು ರೂಢಿಗೆ ಮುಂದುವರಿಸಿರುವಂತಿದೆ. ಹಾಗೆ ನೋಡಿದರೆ ನಾನು ಗಮನಿಸಿರುವಂತೆ ಕ್ರಿ.ಶ. ೬೦೦ರ ಮಂಗಲೇಶನ ಬಾದಾಮಿ ಶಾಸನದಲ್ಲಿ 'ಅಕು(ಕ್ಕು)ಮ್' ಎಂಬ ಶಬ್ದ 'ಆಗು' ಎಂಬರ್ಥದಲ್ಲಿ ಬಳಕೆಯಲ್ಲಿದ್ದು ಇಂದು ಕನ್ನಡದಲ್ಲಿ ಬಳಕೆಗಿಲ್ಲ. ಅದೇ ಕರ್ನಾಟಕದ ಒಳಪಶ್ಚಿಮ ನಾಡು ಕೊಡಗಿನ ಕೊಡವ ಭಾಷಿಕರಲ್ಲಿ ಇಂದಿಗೂ 'ಅಕ್ಕು, ಅಕ್ಕುವಾ' ಶಬ್ದ ಬಳಕೆಗಿದ್ದು ಒಡಹುಟ್ಟಿದ ಭಾಷೆಯಾಗಿ ಆ ಶಬ್ದದ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಈ ದೃಷ್ಟಿಯಿಂದ ಆರಾಧ್ಯರ ಲೇಖನದ 'ಮೋರು' ತೌಲನಿಕ ಚಿಂತನ ಪ್ರೇರಣೆಗಳನ್ನು ನೀಡುತ್ತದೆ.

ಈ ಬಗೆಯಲ್ಲಿ ಸಾಹಿತ್ಯಿಕ ವಿಮರ್ಶೆ, ವಿವೇಚನೆ ಅವರ ಹರಿಶ್ಚಂದ್ರ ಕಾವ್ಯಸಂಗ್ರಹ, ಜಗದ್ದಳ ಸೋಮನಾಥ, ಗಂಗಾಂಬಿಕೆ–ನೀಲಾಂಬಿಕೆ, ಉದ್ಭಟದೇವ, ಕುಮಾರ ವಾಲ್ಮೀಕಿ, ಘನಲಿಂಗಿದೇವ, ಷಡಕ್ಷರಿ, ಷಡಕ್ಷರದೇವನ ವೃಷಭೇಂದ್ರ ವಿಜಯ, ಬಸವಪ್ಪ ಶಾಸ್ತ್ರಿಗಳು (ಉಭಯ ಲೇಖನಗಳು), ಪಿ.ಆರ್. ಕರಿಬಸವಶಾಸ್ತ್ರಿಗಳು, ಪಾಶ್ಚಾತ್ಯರ ಕೊಡುಗೆ (ಕನ್ನಡ ಸಾಹಿತ್ಯಕ್ಕೆ), ವೀರಶೈವ ಪ್ರಾಚೀನ ಕಥಾಸಂಗ್ರಹ ಸಾಹಿತ್ಯ, ಸರ್ವಜ್ಞ, ಗೋವಿಂದ ಪೈ, ಎ.ಆರ್. ಕೃಷ್ಣಶಾಸ್ತ್ರಿ,

ಡಿ.ಎಲ್.ಎನ್., ತೀನಂಶ್ರೀ, ಎಸ್.ಸಿ. ನಂದೀಮಠ, ಕ್ರಾಂತಿ ಕಲ್ಯಾಣ, ಅನುಭವ ಮಂಟಪ, ಶರಣರ ಪಾರಿಭಾಷಿಕ ಶಬ್ದ, ಕನ್ನಡ ಕಾವ್ಯಗಳಲ್ಲಿ ಸಂಪ್ರದಾಯ ಮತ್ತು ಪ್ರತಿಭಟನೆ, ಇತ್ಯಾದಿ ಶೀರ್ಷಿಕಾ ಪ್ರಬಂಧಗಳಲ್ಲಿ ಆರಾಧ್ಯರ ಲೇಖನಿ ಪ್ರಸ್ತುತಗೊಳಿಸಿದೆ. ಅಂದಿನ, ಇಂದಿನ ಸಾಹಿತ್ಯಿಕ ಒಳನೋಟಗಳ ತೋಲನೆಗೆ ಈ ಪ್ರಬಂಧಗಳು ಬಹಳ ನೆರವಾಗುತ್ತವೆ.

ಎರಡನೆ ಅಧ್ಯಾಯದಲ್ಲಿ ಆರಾಧ್ಯರು ವಿವಿಧ ಲೇಖಕರ ಕೃತಿಗಳಿಗೆ ಬರೆದ ಮುನ್ನುಡಿಗಳ ಸಂಚಯವಿದೆ. ಮೂರನೆಯ ಅಧ್ಯಾಯದಲ್ಲಿಯೂ ವಿವಿಧ ಲೇಖಕರ ಕೃತಿಗಳ ವಿಮರ್ಶೆಗಳು ಸಂಪಾದಿತ ಪ್ರಾಚೀನ ಕಾವ್ಯಗಳಿಂದ ಹಿಡಿದು ಆಧುನಿಕ ಕೃತಿಕಾರರವರೆಗೆ ಚೊಕ್ಕವಾಗಿ, ಸಂಕ್ಷಿಪ್ತವಾಗಿ ಒಡಮೂಡಿವೆ. ನಾಲ್ಕನೆಯ ಅಧ್ಯಾಯ 'ಸಂಕೀರ್ಣ'ದಲ್ಲಿ ಹೆಸರೇ ಸೂಚಿಸುವಂತೆ, ವಿವಿಧ ವಿಷಯಗಳ ವಿವೇಚನೆಯ ಲೇಖನಗಳ ಮಾಲೆ ಆಗಿದೆ. ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ, ಗೋವಿಂದ ಪೈ ವಿಮರ್ಶಾ ಸಾಹಿತ್ಯ, ಶಿವನಾಗಮಯ್ಯ, ವಚನಗಳಲ್ಲಿ ಆಚಾರ್ಯರ ಉಲ್ಲೇಖಗಳು, ವಚನಸಾಹಿತ್ಯದ ವಿನಮ್ರಭಾವ ಇತ್ಯಾದಿ ಲೇಖನಗಳು ಗಮನ ಸೆಳೆಯುತ್ತವೆ, ಮಾನಸ ಮುದವನ್ನು ತರುತ್ತವೆ.

ಅಧ್ಯಾಯ ೫ರಲ್ಲಿ ವ್ಯಕ್ತಿ ಚಿತ್ರಗಳ ಸಂದೋಹವೇ ಆತ್ಮೀಯ ಶೈಲಿಯಲ್ಲಿ ಬಿಂಬಿತವಾಗಿದೆ. ಸಿದ್ದಗಂಗೆಯ ಡಾ. ಶಿವಕುಮಾರ ಮಹಾಸ್ವಾಮಿಗಳು, ಸುತ್ತೂರು ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು, ರಾಜಾಪುರಮಠದ ಷ॥ ಬ್ರ॥ ಪಟ್ಟದ ಶ್ರೀ ರೇಣುಕ ಶಿವಾಚಾರ್ಯ ಮಹಾಸ್ವಾಮಿಗಳು, ಆಚಾರ್ಯ ದೇವೋಭವ, ಡಾ. ಆರ್.ಸಿ. ಹಿರೇಮಠ, ಎಚ್. ದೇವೀರಪ್ಪ, ಲೂಯಿಸ್‌ರೈಸ್, ಕೆ.ಪಿ, ಪುಟ್ಟಣ್ಣ ಶೆಟ್ಟರು, ತೀ.ನಂ.ಶ್ರೀ, ಎಂ.ಜಿ. ನಂಜುಂಡಾರಾಧ್ಯ, ಪ್ರೊ. ಜಿ.ಎಸ್. ಸಿದ್ದಲಿಂಗಯ್ಯ, ಜಿ.ಎಸ್. ಗಾಯಿ, ಡಾ. ಎಂ.ಪಿ. ಮಂಜಪ್ಪ ಶೆಟ್ಟಿ ಇತ್ಯಾದಿ ೨೨ ವ್ಯಕ್ತಿತ್ವಗಳ ಪರಿಚಯದಲ್ಲಿ, ಭಕ್ತಿಪ್ರಸಂಗ, ಸಾಹಿತ್ಯಕ ಮೆಚ್ಚುಗೆ, ಸಾಧನೆಗಳ ಬಗೆಗಿನ ಅಭಿಮಾನ, ಸ್ನೇಹ ಮಾಧುರ್ಯ ಹಾಗೂ ವಿದ್ವತ್‌ಗೌರವದ ಕುರಿತು ಮಂಡನೆ ಇದೆ.

ಇನ್ನು ಕೆಲವಾರು ಲೇಖನಗಳು, ಕೃತಿಗಳಿಗೆ ಬರೆದಿರುವ ಅರ್ಥಪೂರ್ಣ ಬೆನ್ನುಡಿಗಳು ಈ ಸಂಪುಟದಲ್ಲಿ ಸೇರಿಲ್ಲ. ('ವಚನಧ್ವನಿ' ವಚನ ಸಂಕಲನಕ್ಕೆ 'ಶ್ರೀ ನಿಡುಮಾಮಿಡಿ ಪೀಠದ ಸಂಕ್ಷಿಪ್ತ ಚರಿತ್ರೆ' ಇತ್ಯಾದಿ) ಅದೇನೇ ಇರಲಿ ಸದ್ಯದ ಸಂಪುಟದ ಈ ಲೇಖನಗಳನ್ನು ಪ್ರೊ. ಎನ್. ಬಸವಾರಾಧ್ಯರು ಯಾವಕಾಲಘಟ್ಟದಲ್ಲಿಯೇ ಬರೆದಿರಲಿ, ಅವುಗಳಲ್ಲಿ ಅವರು ಕಂಡ ಅನುಭವಗಳು, ಸಾರಸ್ವತ ಅಧ್ಯಯನದ ವಿಸ್ತಾರ, ಸ್ವಯಂ ಚಿಂತನೆ, ವಿವೇಚನೆ, ವಿಮರ್ಶೆಯ ಸೊಗಡು, ಓದುಗರ ಅನುಭವಕ್ಕೆ ಬರುತ್ತವೆ. ಆದರೂ ವಿನಮ್ರವಾಗಿಯೇ, ಬರೆಹಗಳ ಒಡಲಲ್ಲಿ ಮಿತಿ ಇರಬಹುದೆಂಬುದನ್ನು ದಾಖಲಿಸಿದ್ದಾರೆ. ಅದು ಸಜ್ಜನಿಕೆ. ಆದರೆ ಓದುಗರಿಗೆ ಅವರ ಬರೆಹದ ವೈವಿಧ್ಯತೆ, ಪ್ರಾಚೀನ ವಿಷಯಗಳ ಆಧುನಿಕ ವಿವೇಚನೆಯ ದರ್ಶನ ಒದಗುತ್ತದೆ. ಇಂಥ ಸಂಪುಟವು ಬಸವಾರಾಧ್ಯ ಅಭಿನಂದನ ಸಮಿತಿಯಿಂದ ಪ್ರಕಟಣೆಗೊಂಡಿರುವುದು ಸಾರಸ್ವತ ಲೋಕಕ್ಕೆ ಒಂದು ಗಣ್ಯಕೊಡುಗೆ ಎನ್ನಬೇಕು.

ಈ ಸಂಪುಟದ ಲೇಖನಗಳನ್ನು ಆರಾಧ್ಯರು ಡಿ.ಟಿ.ಪಿ.ಗೆ ಕೊಡುವ ಮೊದಲೇ ನನ್ನ ಆಯ್ಕೆ ಹಾಗೂ ವಿಮರ್ಶೆಗಾಗಿ ನೀಡಿದ್ದರು. ಆ ಬಗ್ಗೆ ನನ್ನ ಅನಿಸಿಕೆಗಳನ್ನು ಅವರಿಗೆ ತಿಳಿಸಿ ಅಗತ್ಯವಾಗಿ ಪ್ರಕಟವಾಗಬೇಕಾದ ಸಂಪುಟ ಎಂದು ತಿಳಿಸಿದೆ.

ಸಂಪುಟದ ಸಂಪಾದನಾ ಕಾರ್ಯವನ್ನು ನಾಡಿನ ತರುಣ ಪ್ರತಿಭಾವಂತ ವಿದ್ವಾಂಸರಾದ ಅಭಿನಂದನ ಸಮಿತಿಯ ಕೋಶಾಧ್ಯಕ್ಷ ಡಾ. ಸಿ. ಶಿವಕುಮಾರಸ್ವಾಮಿ ಹಾಗೂ ಕಾರ್ಯದರ್ಶಿ ವಿದ್ವಾಂಸರಾದ ಶ್ರೀ ಪ್ರಸನ್ನಕುಮಾರ್ ಅವರಿಗೆ ವಹಿಸಲಾಯಿತು. ಅವರು ಅತೀವ ಶ್ರದ್ಧೆಯಿಂದ, ಅಚ್ಚುಕಟ್ಟಾಗಿ ವಿಭಾಗಗಳನ್ನು ರೂಪಿಸಿ, ಸಂಪಾದಿಸಿಕೊಟ್ಟಿದ್ದಾರೆ. ಅಕ್ಷರ ಜೋಡಣಾ ವ್ಯವಸ್ಥೆ, ಮುದ್ರಣ ವ್ಯವಸ್ಥೆಯನ್ನು ಮಾಡಿದ್ದಾರೆ. ಅವರ ಈ ಶ್ರೀ ಆರಾಧ್ಯ ಕಾರ್ಯಕ್ಕೆ ಮನಸಾ ಅಭಿನಂದನಾಪೂರ್ವಕ ಕೃತಜ್ಞತೆಗಳು. ಈ ಸಂಬಂಧದಲ್ಲಿ ನೆರವಾದವರಿಗೆಲ್ಲರಿಗೆ ನನ್ನ ಅಭಿಮಾನಗಳಿವೆ. ಅಕ್ಷರ ಜೋಡಣೆ ಮಾಡಿದ ಕುಮುದ ಗ್ರಾಫಿಕ್ಸ್‌ನ ಎಂ. ಮಹೇಶ್, ಮುದ್ರಿಸಿದ ವಿಶ್ವಾಸ್ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ವೆಂಕಟೇಶ್‌ರವರಿಗೆ ಕೃತಜ್ಞತೆಗಳು. ಅಭಿನಂದನ ಸಮಿತಿಯ ವತಿಯಿಂದ ಈ ಸಂಪುಟವು ಮುದ್ರಣಗೊಂಡು, ಬಿಡುಗಡೆ ಆಗುತ್ತಿರುವ ಈ ಸಂದರ್ಭವು ನನಗೂ ಸಂತೋಷ ತಂದಿದೆ. ಇದಕ್ಕೆ ಕಾರಣರಾದ ಸರ್ವರಿಗೂ ನನ್ನ ಹಾರೈಕೆಗಳಿವೆ.

ಬೆಂಗಳೂರು

**–ಡಾ. ಎಂ.ಜಿ. ನಾಗರಾಜ್**

ದಿನಾಂಕ : ೧೧.೦೫.೨೦೧೩

ವಿಜಯಸಂವತ್ಸರ, ವೈಶಾಖಶುದ್ಧ ಪಾಡ್ಯ, ಭರಣಿ, ಶುಕ್ರವಾರ

# ಸಂಪಾದಕೀಯ

ಶಕ್ತಿರ್ನಿಪುಣತಾ ಲೋಕಶಾಸ್ತ್ರಕಾವ್ಯಾದ್ಯವೇಕ್ಷಣಾತ್ ।
ಕಾವ್ಯಜ್ಞಶಿಕ್ಷಯಾಭ್ಯಾಸ ಇತಿ ಹೇತುಸ್ತದುಸ್ಭವೇ ॥

[ಶಕ್ತಿ (ಪ್ರತಿಭೆ), ಲೋಕ ಮತ್ತು ಶಾಸ್ತ್ರದ ಹಾಗೂ ಕಾವ್ಯಾದಿಗಳ ಪರಿಚಯದಿಂದ ಬರುವ ನಿಪುಣತೆ(ವ್ಯುತ್ಪತ್ತಿ), ಕಾವ್ಯತತ್ತ್ವಜ್ಞರ ಉಪದೇಶದ ಮೂಲಕ ಕಾವ್ಯಾನುಶೀಲನೆ(ಅಭ್ಯಾಸ)- ಈ ಮೂರು ಒಟ್ಟಾಗಿ ಸೇರಿದಾಗ ಕಾವ್ಯಕ್ಕೆ ಕಾರಣವಾಗುತ್ತದೆ].

ಮಮ್ಮಟನ ಕಾವ್ಯಪ್ರಕಾಶದ ಕಾವ್ಯಹೇತುವನ್ನು ಹೇಳುವ ಈ ಕಾರಿಕೆ ಕನ್ನಡ ಸಾಹಿತ್ಯ ಲೋಕದ ಹಿರಿಯ ತಲೆಮಾರಿನ ಬಹುಶ್ರುತ ವಿದ್ವಾಂಸರಾದ ಪ್ರೊ. ಎನ್. ಬಸವಾರಾಧ್ಯರಿಗೆ ಸರ್ವವಿಧದಲ್ಲೂ ಅನ್ವರ್ಥವಾಗಿದೆ. ಪ್ರತಿಭಾವಂತರಾದ ಆರಾಧ್ಯರು ತಮ್ಮ ಇಡೀ ಜೀವನವನ್ನು ಪ್ರಾಚೀನ ಕನ್ನಡದ ಶಾಸ್ತ್ರ, ಕಾವ್ಯ, ನಾಟಕ, ಹಸ್ತಪ್ರತಿಶಾಸ್ತ್ರ, ನಿಘಂಟು ಮೊದಲಾದ ಗ್ರಂಥಗಳ ಅಧ್ಯಯನದಿಂದ ಗಳಿಸಿದ ವ್ಯುತ್ಪತ್ತಿ ಮತ್ತು ಆಚಾರ್ಯ ತೀನಂಶ್ರೀ., ಡಿ.ಎಲ್.ಎನ್., ಕುವೆಂಪು ಮೊದಲಾದ ಕನ್ನಡ ಸಾಹಿತ್ಯ ತತ್ತ್ವಜ್ಞರ ಮಾರ್ಗದರ್ಶನದಲ್ಲಿ ಮಾಡಿದ ಅಭ್ಯಾಸ- ಈ ಮೂರೂ ಗುಣಗಳು ಒಟ್ಟಾಗಿ ಮೇಳೈಸಿದ್ದು ಅವು ಅವರ ಬರವಣಿಗೆಯಲ್ಲಿ ವ್ಯಕ್ತವಾಗುತ್ತಿವೆ. ಕಾವ್ಯಪ್ರಯೋಜನದಲ್ಲಿ ಮೌಲಿಭೂತವಾದದ್ದು ಕಾವ್ಯರಚನೆ ಅಥವಾ ಅಧ್ಯಯನದಿಂದುಂಟಾಗುವ ಅಪರಿಮಿತ ಆನಂದ. ತಮ್ಮ ಬರವಣಿಗೆ ಅಧ್ಯಯನಗಳಿಂದ ಉಂಟಾಗುವ ಅಲೌಕಿಕ ಆನಂದವನ್ನು ಸ್ವತಃ ಅನುಭವಿಸುತ್ತಾ, ಇತರರೊಂದಿಗೆ ಹಂಚಿಕೊಂಡು ತೃಪ್ತಿಪಡುವ ಹಿರಿಯ ಚೇತನ ಬಸವಾರಾಧ್ಯರು.

ಇಂತಹ ಹಿರಿಯ ಚೇತನ ನಾಡು-ನುಡಿಗೆ ಸಲ್ಲಿಸಿರುವ ಸೇವೆಯನ್ನು ಅಭಿನಂದಿಸಲು ತೀರ್ಮಾನಿಸಿದ ಅವರ ಆತ್ಮೀಯ ಬಳಗ ಅವರ ೮೦ನೇ ವರ್ಧಂತಿಯ ಸಂದರ್ಭದಲ್ಲಿ 'ಆರಾಧ್ಯ ಸಂಪದ' (ಬಸವಾರಾಧ್ಯರ ಲೇಖನಗಳ ಸಂಗ್ರಹದ ೧/೪ ಕ್ರೌನ್ ಆಕಾರದ ೧೦೫೩ ಪುಟಗಳ ಬೃಹತ್ ಸಂಪುಟ) ಮತ್ತು 'ಆರಾಧ್ಯ ಸಿರಿ' (ಆರಾಧ್ಯರನ್ನು ಕಂಡಂತೆ ಅವರ ಆತ್ಮೀಯರು ಬರೆದ ಲೇಖನಗಳ ಸಂಗ್ರಹ) ಎಂಬ ಎರಡು ಮೌಲಿಕ ಗ್ರಂಥಗಳನ್ನು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ದಿನಾಂಕ ೧೩-೦೩-೨೦೦೫ನೇ ಭಾನುವಾರ ಜರುಗಿದ ವೈಭವೋಪೇತ ಸಮಾರಂಭದಲ್ಲಿ ಸಮರ್ಪಿಸಿ ಗೌರವಿಸಿತು.

ಈ ಗ್ರಂಥಗಳ ಮಾರಾಟದಿಂದ ಬಂದ ಹಣದಲ್ಲಿ ಖರ್ಚು-ವೆಚ್ಚಗಳನ್ನು ಕಳೆದು ಸ್ವಲ್ಪ ಹಣ ಉಳಿಯಿತು. ಉಳಿಕೆಯ ಹಣವನ್ನು ಆರಾಧ್ಯರಿಗೆ ಸಮರ್ಪಿಸಲು ಸಮಿತಿ ಮುಂದಾದಾಗ ಅವರು ಅದನ್ನು ನಯವಾಗಿ ತಿರಸ್ಕರಿಸಿದರು. ಆ ಸಂದರ್ಭದಲ್ಲಿ ಸಮಿತಿಯ ಎಲ್ಲ ಸದಸ್ಯರು ಆರಾಧ್ಯರೊಂದಿಗೆ ಚರ್ಚಿಸಿದಾಗ ಅವರು "ನಾನು ಹಿಂದೆ ಬರೆದಿದ್ದ ಬಹಳಷ್ಟು ಲೇಖನಗಳು 'ಆರಾಧ್ಯ ಸಂಪದ' ಸಂಪುಟದಲ್ಲಿ ಸೇರ್ಪಡೆಯಾಗಿರುವುದಿಲ್ಲ. ಅವುಗಳನ್ನು ಈ ಹಣದಿಂದ ಮುದ್ರಣ ಮಾಡಲು ಸಾಧ್ಯವೇ? ಎಂಬುದನ್ನು ಸಮಿತಿಯು ಪರಿಶೀಲಿಸಿ ತೀರ್ಮಾನಿಸಬಹುದು" ಎಂದರು.

ಆರಾಧ್ಯರ ಈ ಸಲಹೆ ಸಮುಚಿತವೆನಿಸಿ, ಈ ಕಾರ್ಯವನ್ನು ಕೂಡಲೇ ಆರಂಭಿಸಬೇಕೆಂದು ಸಮಿತಿ ನಿರ್ಣಯಿಸಿತು ಮತ್ತು ಸಮಿತಿಯು ಡಾ. ಸಿ. ಶಿವಕುಮಾರ ಸ್ವಾಮಿ ಮತ್ತು ಪ್ರೊ. ಎಂ. ಪ್ರಸನ್ನಕುಮಾರ್ ಅವರನ್ನು ಸಂಪಾದಕರನ್ನಾಗಿ ನೇಮಿಸಿತು. ಸಂಪಾದಕ ಮಂಡಲಿಯು 'ಆರಾಧ್ಯ ಸಂಪದ'ದಲ್ಲಿ ಸೇರ್ಪಡೆಯಾಗದ, ಆರಾಧ್ಯರ ಸಂಗ್ರಹದಲ್ಲಿದ್ದ

ಲೇಖನಗಳನ್ನು ಸಂಗ್ರಹಿಸಿ, ಅವುಗಳನ್ನು ವಿಷಯಾವಾರು ವರ್ಗೀಕರಿಸಿ ಡಿ.ಟಿ.ಪಿ. ಕಾರ್ಯಕ್ಕೆ ನೀಡಲಾಯಿತು. ಅಷ್ಟರಲ್ಲಿ ಅಭಿನಂದನ ಸಮಿತಿಯ ಅಧ್ಯಕ್ಷರಾಗಿದ್ದ ಪ್ರೊ. ಹೆಚ್.ಆರ್. ದಾಸೇಗೌಡರು ಮತ್ತು ಕಾರ್ಯದರ್ಶಿಗಳಾಗಿದ್ದ ಶ್ರೀ ಎಸ್. ಈಶ್ವರದೇವರು ಅವರುಗಳು ದೈವಾಧೀನರಾದರು. ಸಮಿತಿಯ ಎರಡು ಆಧಾರಸ್ತಂಭಗಳ ಅಕಾಲಿಕ ಮರಣದಿಂದ ಮುದ್ರಣಕಾರ್ಯ ಕುಂಠಿತವಾಯಿತು. ತರುವಾಯ ಬಸವಾರಾಧ್ಯರಿಗೆ ಆತ್ಮೀಯರಾದ ಡಾ. ಎಂ.ಜಿ. ನಾಗರಾಜ್ ಅವರನ್ನು ಅಧ್ಯಕ್ಷರನ್ನಾಗಿ, ಪ್ರೊ. ಎಂ. ಪ್ರಸನ್ನಕುಮಾರ್ ಅವರನ್ನು ಕಾರ್ಯದರ್ಶಿಯನ್ನಾಗಿ ಮತ್ತು ಡಾ. ಸಿ. ಶಿವಕುಮಾರಸ್ವಾಮಿ ಅವರನ್ನು ಖಜಾಂಚಿಯನ್ನಾಗಿ ಮಾಡಿ ಸಮಿತಿಯನ್ನು ಪುನಾರಚಿಸಲಾಯಿತು. ಪುನಾರಚಿತ ಅಭಿನಂದನ ಸಮಿತಿಯು ಕಾರ್ಯಪ್ರವೃತ್ತವಾಗಿ ಹಿಂದೆ ಬಿದ್ದಿದ್ದ ಮುದ್ರಣಕಾರ್ಯವನ್ನು ಚುರುಕುಗೊಳಿಸಿ, ಮುದ್ರಣಕಾರ್ಯ ಒಂದು ಹಂತಕ್ಕೆ ಬಂದು ತಲುಪಿತು.

ಪ್ರಕೃತ ಲೇಖನ ಸಂಗ್ರಹಕ್ಕೆ 'ಆರಾಧ್ಯ ಸಂಪದ – ೨' ಎಂದು ಸಮಿತಿಯು ನಾಮಕರಣ ಮಾಡಿದೆ. ಸಂಪುಟದಲ್ಲಿ ಬಸವಾರಾಧ್ಯರು ಸುಮಾರು ೪೦–೫೦ ವರ್ಷಗಳಷ್ಟು ಹಿಂದೆ ಹಾಗೂ ಇತ್ತೀಚೆಗೆ ಬರೆದ ಲೇಖನಗಳಿದ್ದು ಅವುಗಳನ್ನು ಸಾಹಿತ್ಯ, ಮುನ್ನುಡಿ, ವಿಮರ್ಶೆ, ಸಂಕೀರ್ಣ ಮತ್ತು ವ್ಯಕ್ತಿಚಿತ್ರ ಎಂಬ ಐದು ಶೀರ್ಷಿಕೆಗಳಡಿಯಲ್ಲಿ ವಿಂಗಡಿಸಲಾಗಿದೆ. ಶಿಸ್ತಿನ ಸಿಪಾಯಿಗಳಾದ ಪ್ರೊ. ಬಸವಾರಾಧ್ಯರ ಅಧ್ಯಯನದ ಶಿಸ್ತು ಈ ಎಲ್ಲ ಲೇಖನಗಳಲ್ಲಿ ಹಾಸುಹೊಕ್ಕಾಗಿವೆ. ಈ ಎಲ್ಲ ಬರವಣಿಗೆಗಳಲ್ಲಿ ಬಸವಾರಾಧ್ಯರ ವಿದ್ವತ್ತು, ಶಾಸ್ತ್ರಪಾಂಡಿತ್ಯ, ಸೂಕ್ಷ್ಮ ಚಿಕಿತ್ಸಕ ಬುದ್ಧಿ, ಲೋಕಾನುಭವಗಳು ಸ್ಫುಟವಾಗಿ ವ್ಯಕ್ತವಾಗುತ್ತಿದ್ದು ಯುವ ವಿದ್ವಾಂಸರಿಗೆ ಮಾರ್ಗದರ್ಶನಗಳಾಗಿವೆ.

ಈ ಸಂಪುಟದಲ್ಲಿರುವ ಲೇಖನಗಳು ನಿರ್ದಿಷ್ಟ ಕಾಲಮಾನದಲ್ಲಿ, ನಿರ್ದಿಷ್ಟ ಸಂದರ್ಭದಲ್ಲಿ ಬಸವಾರಾಧ್ಯರ ಲೇಖನಿಯಿಂದ ಮೂಡಿದವುಗಳಾಗಿದ್ದು, ವಿವಿಧ ಗ್ರಂಥಗಳಲ್ಲಿ, ನಿಯತಕಾಲಿಕೆಗಳಲ್ಲಿ ಪ್ರಕಟವಾಗಿವೆ. ಇಲ್ಲಿನ ಲೇಖನಗಳಲ್ಲಿ ಬಹುಶ್ರುತ ವಿದ್ವಾಂಸರ ಪರಿಣತ ಪ್ರತಿಭೆಯ ಅನಾವರಣ ಸ್ಪಷ್ಟವಾಗಿ ಸಹೃದಯರಿಗೆ ಗೋಚರವಾಗುತ್ತದೆ.

ಪಕ್ವ ಪ್ರತಿಭೆಯ ಹಿರಿಯ ಚೇತನದ ಮೌಲ್ಯಯುತವಾದ ಸಾಹಿತ್ಯ ಸೇವೆಯನ್ನು ಈ ಸಂಪುಟದಲ್ಲಿ ಸಂಕಲಿಸಿ ಪ್ರಕಟಿಸುವ ಮೂಲಕ ಅವರನ್ನು ಅಭಿಮಾನಿ ಬಳಗ ಅಭಿನಂದಿಸಿ, ಆನಂದಿಸುತ್ತಿದೆ. ಇದು ವಿದ್ವತ್ ಪರಂಪರೆಯನ್ನು ಸಾಂಕೇತಿಕವಾಗಿ ಗೌರವಿಸುವ ಸಂಕೇತ.

ಈ ಸಂಪುಟದಲ್ಲಿನ ಲೇಖನಗಳನ್ನು ಹುಡುಕಿಕೊಡುವುದರಿಂದ ಮೊದಲ್ಗೊಂಡು ಮುದ್ರಣಗೊಳ್ಳುವವರೆಗೆ ಸದಾ ನಮಗೆ ಮಾರ್ಗದರ್ಶನ ಮಾಡಿದ ಹಿರಿಯರಾದ ಪ್ರೊ. ಬಸವಾರಾಧ್ಯರಿಗೆ ಕೃತಜ್ಞತಾಪೂರ್ವಕ ಧನ್ಯವಾದಗಳನ್ನು ಸಮರ್ಪಿಸುತ್ತೇವೆ. ಅರಾಧ್ಯರ ಲೇಖನಗಳ ಸಂಗ್ರಹ, ಅವುಗಳ ವರ್ಗೀಕರಣದಲ್ಲಿ ಸಹಕರಿಸಿದ ಹಿರಿಯ ವಿದ್ವಾಂಸರಾದ ಡಾ. ಎಂ.ಜಿ. ನಾಗರಾಜ್, ಆತ್ಮೀಯ ಮಿತ್ರರಾದ ಡಾ. ಬಿ. ನಂಜುಂಡಸ್ವಾಮಿ, ಡಾ. ಸಿ. ನಾಗಭೂಷಣ್, ಶ್ರೀ ಶೀಲವಂತ ಇವರಿಗೆ ಅಭಾರಿಯಾಗಿದ್ದೇವೆ. ಈ ಗ್ರಂಥ ಪ್ರಕಟಣೆಗೆ ಸಹಕರಿಸಿದ ಅಭಿನಂದನ ಸಮಿತಿಯ ಅಧ್ಯಕ್ಷರನ್ನು ಮೊದಲ್ಗೊಂಡು ಎಲ್ಲ ಸದಸ್ಯರಿಗೆ ಧನ್ಯವಾದಗಳು. ಈ ಗ್ರಂಥದ ಛಾಯಾಕ್ಷರ ಜೋಡಣೆ ಮಾಡಿದ ಶ್ರೀ ಎಂ. ಮಹೇಶ್ ಅವರಿಗೆ, ಸೊಗಸಾಗಿ ಮುದ್ರಿಸಿದ ವಿಶ್ವಾಸ್ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ವೆಂಕಟೇಶ್ ಮತ್ತು ಅವರ ಸಿಬ್ಬಂದಿವರ್ಗದವರಿಗೆ ನಮಸ್ಕಾರಗಳು. ಈ ಕೃತಿಯ ಮಾರಾಟದಿಂದ ಬರುವ ಹಣವನ್ನು ವಿಶ್ವವಿದ್ಯಾಲಯ ಅಥವಾ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ದತ್ತಿನಿಧಿಯನ್ನಾಗಿ ಸ್ಥಾಪಿಸಲಾಗುವುದೆಂದು ಸಮಿತಿಯು ತೀರ್ಮಾನಿಸಿದೆ. ಸಹೃದಯ ವಿದ್ವಾಂಸರು ಈ ಕೃತಿಯನ್ನು ಆದರದಿಂದ ಸ್ವಾಗತಿಸುವ ಮೂಲಕ ಹಿರಿಯ ಚೇತನವನ್ನು ಗೌರವಿಸುತ್ತಾರೆಂಬ ವಿಶ್ವಾಸ ನಮ್ಮದು.

–ಡಾ. ಸಿ. ಶಿವಕುಮಾರಸ್ವಾಮಿ

–ಪ್ರೊ. ಎಂ. ಪ್ರಸನ್ನಕುಮಾರ್

# ಪರಿವಿಡಿ

## ಅಧ್ಯಾಯ-೨ : ಮುನ್ನುಡಿ

## ಅಧ್ಯಾಯ–೩ : ವಿಮರ್ಶೆ

## ಅಧ್ಯಾಯ–೪ : ಸಂಕೀರ್ಣ



## ಅಧ್ಯಾಯ–೫ : ವ್ಯಕ್ತಿಚಿತ್ರ

# ಕವಿಚಕ್ರವರ್ತಿ ಪೊನ್ನನ "ಮೋರು"

**ಪೊ**ನ್ನನ ಶಾಂತಿಪುರಾಣದ ದಶಮಾಶ್ವಾಸ ೧೮೨ನೆಯ ಪದ್ಯದಲ್ಲಿ 'ಮೋರು' ಎಂಬ ಶಬ್ದಪ್ರಯೋಗವಾಗಿದೆ. ಈ ಅಪೂರ್ವಶಬ್ದ ಮತ್ತಾವ ಕನ್ನಡ ಕಾವ್ಯಗಳಲ್ಲಿಯೂ ಬಳಕೆಯಾದಂತೆ ಕಾಣುವುದಿಲ್ಲ.

ಪ್ರಸ್ತುತ ಶಾಂತಿಪುರಾಣದಲ್ಲಿ ಆ ಪ್ರಸಂಗ ಈರೀತಿ ಇದೆ:

ಪಱಗಾಂಪರ ನುಡಿ ಮುತ್ತುಂ ।
ಮೆಱಸುಂಗೋದಂದದಕ್ಕೆ ಭಾಷ್ಯಮನೊರ್ವಂ ॥
ಕಱಿಯೋದಿದಾತನಲ್ಲದೆ ।
ಬಱಿವಳಿಯಿಂ ಬಂದು ಬರೆಯಲಾಗದಗಣ್ಯಂ ॥

ಸಾರತರೋಕ್ತಿಗೆ ನೆಲ್ಲುಂ ।
ಮೋರುಂಗೋದಂತೆ ನೇಱಿ ಕಲ್ತಾರ್ಪರವ ॥
ಗೋಱೆ ನಿಬಂಧನ ಟೀಕಾ ।
ಕಾರಂಗಲ್ಲದೆ ಪೆಱಂಗೆ ಕೋಟ್ಗೋದಪುದೇ ॥

ಮೇಲಿನ ಎರಡನೆಯ ಪದ್ಯದಲ್ಲಿನ 'ಮೋರು'ವಿಗೆ ಮೊಸರು ಎಂಬರ್ಥವಾಗುತ್ತದೆ. ಅನನ್ವಯವನ್ನು ಹೇಳುವಾಗ, ಒಂದಕ್ಕೂ ಮತ್ತೊಂದಕ್ಕೂ ಹೋಲಿಕೆಯಿಲ್ಲದಿರುವಾಗ ನೆಲ್ಲೂ ಮೊಸರೂ ಕಲಸಿದಂತೆ ಎಂದು ಹೇಳುವುದು ನಮ್ಮಲ್ಲಿ ರೂಢಿಯಲ್ಲಿದೆ. ನೆಲ್ಲೂ ಮೊಸರೂ ಒಂದಕ್ಕೊಂದು ಬೆರೆಯುವುದಿಲ್ಲ. ಪಱಗಾಂಪರು ನೇಱಿ ಕಲ್ತಾರ್ಪರವರಾದರೂ ಅವರು ಸಾರತರೋಕ್ತಿಗೆ ನೆಲ್ಲುಂ ಮೋರುಂಗೋದಂತೆ. ಟೀಕಾಕಾರನಿಗೆ ಮಾತ್ರ ಅದು ಗ್ರಾಹ್ಯವಾಗುತ್ತದೆ. ಮೇಲಿನ ಪದ್ಯದಲ್ಲಿನ ನೇಱಿ ಸಾಮಾನ್ಯ ರೇಫಕ್ಕೆ ಬದಲಾಗಿ ಶಕಟರೇಫದಲ್ಲಿ ಅಚ್ಚಾಗಿದೆ. ಅದು ಸಾಮಾನ್ಯ ರೇಫ ಇರಬೇಕು.

ಮೋರು ಶಬ್ದಕ್ಕೆ ತಮಿಳು ಕೋಶದಲ್ಲಿ ಮಜ್ಜಿಗೆ ಎಂಬ ಅರ್ಥವನ್ನು ಕೊಟ್ಟಿದ್ದಾರೆ. ಮೊಸರು ಎಂಬ ಅರ್ಥ ಆ ಶಬ್ದಕ್ಕಿಲ್ಲ. ಅದಕ್ಕೆ ತೈರ್ ಎಂಬ ಬೇರೊಂದು ಶಬ್ದವಿದೆ. ಈ ಎರಡು ಶಬ್ದಗಳೂ ಮೇಲಿನ ಅರ್ಥದಲ್ಲಿ ತಮಿಳಿನಲ್ಲಿ ಹಿಂದಿನಿಂದಲೂ ಬಳಕೆಯಲ್ಲಿವೆ. ಹಾಗಾದರೆ ಪೊನ್ನನ ಈ 'ಮೋರು'ವಿಗೆ ಮೊಸರು ಎಂಬ ಅರ್ಥ ಹೇಗೆ ಬಂತು? ಇಂದಿಗೂ ತಮಿಳಿನಲ್ಲಿ ಪ್ರಚಲಿತವಾಗಿರುವ ಈ ಶಬ್ದಕ್ಕೆ ತಮಿಳು ಭಾಷೆಯಲ್ಲಿಲ್ಲದ ಮೊಸರು ಎಂಬ ಅರ್ಥ ಕನ್ನಡದಲ್ಲಿ ಹೇಗೆ ಬಂತು? ಒಂದು ವೇಳೆ ತಮಿಳಿನಲ್ಲಿರುವ ಮಜ್ಜಿಗೆ ಎಂಬ ಅರ್ಥವನ್ನೇ ಇಟ್ಟುಕೊಂಡರೆ ಮೇಲಿನ ಪ್ರಸಂಗಕ್ಕೆ ಅರ್ಥಪುಷ್ಟಿ ದೊರಕುವುದಿಲ್ಲ. ಅನನ್ವಯದಲ್ಲಿ ಸಾಮಾನ್ಯವಾಗಿ ನೆಲ್ಲು ಮೊಸರು ಹೇಳುವುದು ವಾಡಿಕೆಯೇ ಹೊರತು ನೆಲ್ಲು ಮಜ್ಜಿಗೆಯನ್ನಲ್ಲ.

ಕನ್ನಡ ಮತ್ತು ತಮಿಳು ಭಾಷೆಗಳೆರಡೂ ದ್ರಾವಿಡ ಭಾಷಾವರ್ಗಕ್ಕೆ ಸೇರಿದುವು ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಆದುದರಿಂದ ಪ್ರಸ್ತುತ ಶಬ್ದ 'ಮೋರು' ದ್ರಾವಿಡ ಭಾಷಾವರ್ಗಕ್ಕೆ ಸೇರಿದುದು. ಅದು ತಮಿಳು ಕನ್ನಡ ಭಾಷೆಗಳೆರಡರಲ್ಲೂ ಬಳಕೆಯಾಗಿದೆ. ತಮಿಳಿನಲ್ಲಿ ಮಜ್ಜಿಗೆ ಎಂಬ ಅರ್ಥದಲ್ಲಿ ಇಂದಿಗೂ ಬಳಕೆಯಲ್ಲಿದೆ. ಆದರೆ

ಕನ್ನಡದಲ್ಲಿ ಅದು ಅರ್ಥವ್ಯಾಪ್ತಿಯನ್ನು ಪಡೆದು ಮೊಸರಾಯಿತು. ಬಹಳ ಹಿಂದೆಯೇ ಈ ಶಬ್ದ ಕನ್ನಡ ಭಾಷೆಯಲ್ಲಿ ಮರೆಯಾಯಿತು.

ಪೊನ್ನನ ಈ ಮೋರು ಶಬ್ದದ ಬಳಕೆಯಿಂದ ಕೆಲವು ಅಂಶಗಳನ್ನು ಗಮನಿಸಬೇಕಾಗುತ್ತದೆ:

೧. ಕ್ರಿ.ಶ. ೯೫೦ರಲ್ಲಿಯೇ ಕನ್ನಡ ಕಾವ್ಯಗಳಲ್ಲಿ ಈ ಶಬ್ದ ಪ್ರಯೋಗವಾಗಿದೆ.

೨. ಈ ಅಪೂರ್ವಶಬ್ದ ಪೊನ್ನನಿಂದೀಚೆಗೆ ಕನ್ನಡ ಕಾವ್ಯಗಳಲ್ಲಿ ಎಲ್ಲೂ ಬಳಕೆಯಾದಂತೆ ಕಂಡುಬರುವುದಿಲ್ಲ.

೩. ಮೊಸರಿನ ಅರ್ಥದಲ್ಲಿ ಪೊನ್ನನು 'ಮೋರು'ವನ್ನು ಉಪಯೋಗಿಸಿದ್ದಾನೆ.

೪. ಪೊನ್ನನ ಕಾಲದಲ್ಲಿ ಮೊಸರಿನ ಅರ್ಥದಲ್ಲಿ ಈ ಶಬ್ದ ಕನ್ನಡ ಜನದಲ್ಲಿ ಬಳಕೆಯಲ್ಲಿದ್ದಿರಬೇಕು. ಇಲ್ಲದಿದ್ದಲ್ಲಿ ಪೊನ್ನನೇಕೆ ತನ್ನ ಕಾವ್ಯದಲ್ಲಿ ಆ ಶಬ್ದವನ್ನು ಪ್ರಯೋಗಿಸುತ್ತಿದ್ದನು?

ಒಂದೇ ಮೂಲದಿಂದ ಹುಟ್ಟಿದ ಸಹೋದರ ಭಾಷೆಗಳಲ್ಲಿ ಒಂದು ಭಾಷೆಯಲ್ಲಿ ಈ ಶಬ್ದ ಇಂದಿಗೂ ಬಳಕೆಯಲ್ಲಿದ್ದು, ಮತ್ತೊಂದು ಭಾಷೆಯಲ್ಲಿ ಬಹಳ ಹಿಂದೆಯೇ ಮರೆಯಾಗಿಹೋಗಿರುವುದು ಆಶ್ಚರ್ಯಕರವಾಗಿದೆ.



# ಹರಿಶ್ಚಂದ್ರಕಾವ್ಯ ಸಂಗ್ರಹ

ಗುರುಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।
ಗುರುಸ್ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀಗುರವೇ ನಮಃ ॥

ಕನ್ನಡ ಸಾರಸ್ವತಲೋಕದ ಅಶ್ವಿನೀದೇವತೆಗಳೆಂದು ಪರಿಕೀರ್ತಿತರಾಗಿರುವ ದಿ. ಟಿ.ಎಸ್. ವೆಂಕಣ್ಣಯ್ಯ ಮತ್ತು ಡಾ. ಎ.ಆರ್. ಕೃಷ್ಣಶಾಸ್ತ್ರೀ ಅವರು ಸಂಪಾದಿಸಿ ಸಂಗ್ರಹಿಸಿರುವ ಹರಿಶ್ಚಂದ್ರ ಕಾವ್ಯಸಂಗ್ರಹ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಒಂದು ಮಹತ್ತರವಾದ ಕೊಡುಗೆಯಾಗಿದೆ. ಈ ಶ್ರೇಷ್ಠಸಂಗ್ರಹ ಸಹಸ್ರಾರು ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಗಿ ಅವರ ಜ್ಞಾನಾರ್ಜನೆಗೆ ನೆರವಾಗಿದೆ. ಅಂತಹ ಭಾಗ್ಯಶಾಲಿ ವಿದ್ಯಾರ್ಥಿಗಳಲ್ಲಿ ನಾನೂ ಒಬ್ಬನಾಗಿ ಈ ಮಹತ್ಕಾವ್ಯದ ಉದಾತ್ತತತ್ತ್ವಗಳಿಗೆ ಮಾರುಹೋಗಿ ಮೂಲಕಾವ್ಯವನ್ನೇ ಸಂಪಾದಿಸುವುದಕ್ಕೆ ಉತ್ತೇಜನವನ್ನೂ ಪ್ರೋತ್ಸಾಹವನ್ನೂ ಪಡೆದುಕೊಂಡೆನು.

ಹರಿಶ್ಚಂದ್ರ ಕಾವ್ಯಸಂಗ್ರಹದ ಸಂಪಾದಕರಲ್ಲೊಬ್ಬರಾದ ಡಾ. ಕೃಷ್ಣಶಾಸ್ತ್ರಿಗಳು ಕನ್ನಡದ ಮಹಾನ್ ವಿದ್ವಾಂಸರಲ್ಲಿ ಒಬ್ಬರು. ಪ್ರಕಾಂಡಪಂಡಿತರು. ಕನ್ನಡವೇ ಅಲ್ಲದೆ ಸಂಸ್ಕೃತ, ಇಂಗ್ಲಿಷ್, ಬಂಗಾಳಿ ಮೊದಲಾದ ಭಾಷೆಗಳಲ್ಲಿ ಪರಿಣತರಾಗಿದ್ದವರು. ಪ್ರಬುದ್ಧಕರ್ನಾಟಕವನ್ನು ಪ್ರಾರಂಭಿಸಿ ಪ್ರಚುರಗೊಳಿಸಿದ ಕೀರ್ತಿ ಶ್ರೀಯುತರಿಗೆ ಸಲ್ಲತಕ್ಕದ್ದು. ಕನ್ನಡ ಸಾಹಿತ್ಯಕ್ಕೆ ಕೃಷ್ಣಶಾಸ್ತ್ರಿಗಳು ಸಲ್ಲಿಸಿರುವ ಸೇವೆ ಶಾಶ್ವತವಾದುದು. ಶ್ರೀಯುತರು ರಚಿಸಿರುವ ಒಂದೊಂದು ಕಾವ್ಯವೂ ಪಾಂಡಿತ್ಯ ಪ್ರಪೂರ್ಣವಾಗಿದೆ. ಸಂಸ್ಕೃತನಾಟಕ, ವಚನಭಾರತ, ಶ್ರೀರಾಮಕೃಷ್ಣ ಪರಮಹಂಸರ ಚರಿತ್ರೆ, ಸ್ವಾಮಿ ಶಿಷ್ಯಸಂವಾದ, ಭಾಸಕವಿ, ಬಂಕಿಮಚಂದ್ರ, ಭಾಷಣಗಳು ಮತ್ತು ಲೇಖನಗಳು, ಸರ್ವಜ್ಞಕವಿ, ನಾಗಮಹಾಶಯ, ಶ್ರೀಪತಿಯ ಕಥೆಗಳು, ಕವಿಜಿಹ್ವಾಬಂಧನ, ನಿರ್ಮಲಭಾರತ –ಇವೇ ಮೊದಲಾದವು ಶಾಸ್ತ್ರಿಗಳ ಹೆಸರನ್ನು ಅಮರಗೊಳಿಸಿವೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿಗೆ ಶ್ರೀಯುತರು ಸಲ್ಲಿಸಿರುವ ಸೇವೆ ಅವಿಸ್ಮರಣೀಯವಾದುದು. ಮಾನವ ಮೌಲ್ಯಗಳನ್ನು ಎತ್ತಿಹಿಡಿದು ಕನ್ನಡಕ್ಕಾಗಿಯೇ ನಿರಂತರವಾಗಿ ದುಡಿದು ಅಮರರಾಗಿರುವ ಪೂಜ್ಯ ಗುರುವರ್ಯರಾದ ಡಾ. ಕೃಷ್ಣಶಾಸ್ತ್ರಿಗಳು ಕನ್ನಡದ ಅತ್ಯಂತ ಶ್ರೇಷ್ಠವಿದ್ವಾಂಸರು, ಪ್ರಾತಃಸ್ಮರಣೀಯರು.

ಹರಿಶ್ಚಂದ್ರಕಾವ್ಯಸಂಗ್ರಹ ನಿಜವಾದ ಅರ್ಥದಲ್ಲಿ ಒಂದು ಅತ್ಯುತ್ತಮವಾದ ಸಂಗ್ರಹ. ಪ್ರಾಚೀನ ಕಾವ್ಯಗಳ ಸಂಗ್ರಹ ಸುಲಭಸಾಧ್ಯವಲ್ಲ ಎಂಬುದು ಆ ಕಾರ್ಯ ಕೈಕೊಂಡವರಿಗೆ ಮಾತ್ರ ಗೊತ್ತು. ಮೂಲಕಾವ್ಯದ ಕಥಾಸರಣಿಗೆ ಭಂಗಬಾರದಂತೆ ಸಮರ್ಥವಾಗಿ ನಿರ್ವಹಿಸಿಕೊಂಡು ಹೋಗುವುದೂ ಒಂದು ಪುಣ್ಯವಿಶೇಷವೇ. ಒಂದು ದೃಷ್ಟಾಂತವನ್ನು ಕೊಡುವುದಾದರೆ ಹಲಸಿನ ಹಣ್ಣನ್ನು ಹೆಚ್ಚಿ ಅದರ ಅಂಟು ಸೋಲೆಗಳನ್ನು ಬೇರ್ಪಡಿಸಿ ತೊಳೆಗಳನ್ನು ಬಿಡಿಸಿಟ್ಟಂತಹುದು ಸಂಗ್ರಹಕಾರ್ಯ. ಈ ಕಾರ್ಯವನ್ನು ಅತ್ಯಂತ ಸಮರ್ಪಕವಾಗಿ ಮಾಡಿದ್ದಾರೆ ಹರಿಶ್ಚಂದ್ರಕಾವ್ಯ ಸಂಗ್ರಹಕಾರರು.

ಹರಿಶ್ಚಂದ್ರಕಾವ್ಯದಲ್ಲಿ ಸುಮಾರು ಏಳುನೂರ ನಲವತ್ತು ವಾರ್ಧಕ ಷಟ್ಪದಿಗಳಿವೆ. ಇವನ್ನು ಕೇವಲ ಮುನ್ನೂರು ಪದ್ಯಗಳಲ್ಲಿ ಭಟ್ಟಿಯಿಳಿಸಿದ್ದಾರೆ. ಆದರೆ ಯಾವೊಂದು ಮುಖ್ಯಪದ್ಯವನ್ನಾಗಲಿ ಕೈಬಿಡದಿರುವುದು ಈ ಸಂಗ್ರಹದ ವೈಶಿಷ್ಟ್ಯ. ಕಥಾರಂಭದಲ್ಲಿ ಮೂಲಕಾವ್ಯದಲ್ಲಿರುವ ೪೯ ಪದ್ಯಗಳನ್ನು ೧೬ ಪದ್ಯಗಳಲ್ಲಿ ಸಂಗ್ರಹಿಸಿದ್ದಾರೆ. ಎರಡನೆಯದಾದ ವಸಿಷ್ಠ ವಿಶ್ವಾಮಿತ್ರರ ಸಂವಾದ ಬಹುಮುಖ್ಯವಾದುದರಿಂದ ೩೫ ಪದ್ಯಗಳಿರುವ ಮೂಲವನ್ನು ೨೧ ಪದ್ಯಗಳಿಗೆ ಇಳಿಸಿದ್ದಾರೆ. ಮುಂದಿನ ಬೇಟೆಪ್ರಸಂಗವನ್ನು ೯೧ ಪದ್ಯಗಳಿಂದ ೩೯ ಪದ್ಯಗಳಿಗೆ ಸಂಗ್ರಹಿಸಲಾಗಿದೆ. ಮೂಲಕಾವ್ಯದಲ್ಲಿ ಬರುವ ಪುರವಿಹಾರವನ್ನು ವಿದ್ಯಾರ್ಥಿಗಳ ದೃಷ್ಟಿಯಿಂದ ಅನಾವಶ್ಯವೆಂದು ಸಂಪೂರ್ಣವಾಗಿ ಕೈಬಿಡಲಾಗಿದೆ. ವಿಶ್ವಾಮಿತ್ರನ

ಆಶ್ರಮದ ವರ್ಣನೆ ರಾಜರಾಣಿಯರ ಸಂಭಾಷಣೆ, ರಾಜ್ಯಸಮರ್ಪಣೆ ಈ ಭಾಗಗಳಲ್ಲಿ ಮೂಲದ ಬಹುಪದ್ಯಗಳನ್ನು ಹಾಗೆಯೇ ಉಳಿಸಿಕೊಂಡಿದ್ದಾರೆ. ಲೋಕನೀತಿಯನ್ನೂ ಆದರ್ಶವನ್ನೂ ಸಾರುವ ಪ್ರತಿಪದ್ಯವನ್ನೂ ಈ ಸಂಗ್ರಹದಲ್ಲಿ ಸಮಾವೇಶಗೊಳಿಸಿದ್ದಾರೆ. ಒಟ್ಟಿನಲ್ಲಿ ಮೂಲಕಾವ್ಯದ ಯಾವುದೇ ಪ್ರಕರಣವಾಗಲಿ ಉತ್ತಮ ಉದಾಹರಣೆಗಳಾಗಲಿ ಉದಾತ್ತನೀತಿ ನಿರೂಪಣೆಯ ಸನ್ನಿವೇಶಗಳನ್ನಾಗಲಿ ಅಲಕ್ಷಿಸಿರುವುದು ಎಲ್ಲಿಯೂ ಕಂಡುಬರುವುದಿಲ್ಲ. ಈ ಎಲ್ಲ ದೃಷ್ಟಿಗಳಿಂದ ಹರಿಶ್ಚಂದ್ರ ಕಾವ್ಯಸಂಗ್ರಹ ಎಲ್ಲ ಕಾಲಕ್ಕೂ ಮಾದರಿಯಾಗಿ ನಿಲ್ಲಬಲ್ಲ ಶ್ರೇಷ್ಠ ಸಂಗ್ರಹವೆಂದು ಧಾರಾಳವಾಗಿ ಹೇಳಬಹುದು.

ಈ ಸಂಗ್ರಹಕ್ಕೆ ತಿಲಕವಿಟ್ಟಂತಿದೆ ಇದರ ಪೀಠಿಕಾವಿಭಾಗ. ವಿದ್ಯಾರ್ಥಿಗಳಿಗಷ್ಟೇ ಅಲ್ಲದೆ ವಿದ್ವಾಂಸರಿಗೂ ಸಂಶೋಧಕರಿಗೂ ಇದು ಕೈದೀವಿಗೆಯಂತಿದೆ. ಕವಿ ಕಾಲ ಕೃತಿಗಳನ್ನು ಕುರಿತು ಸಮಗ್ರವಾಗಿಯೂ ಅಧಿಕೃತವಾಗಿಯೂ ವಿಷಯ ನಿರೂಪಣೆ ಮಾಡಲಾಗಿದೆ. ರಾಘವಾಂಕನ ಎಲ್ಲ ಕೃತಿಗಳ ಸಾರಸರ್ವಸ್ವವನ್ನೂ ನಿರೂಪಿಸುವುದರ ಜೊತೆಗೆ ಹರಿಶ್ಚಂದ್ರೋಪಾಖ್ಯಾನದ ಇತಿಹಾಸವನ್ನು ಸುದೀರ್ಘವಾಗಿ ಪ್ರಸ್ತಾಪಿಸಿದ್ದಾರೆ. ಹರಿವಂಶ, ಬ್ರಹ್ಮಪುರಾಣ, ಶಿವಪುರಾಣ. ವಾಯುಪುರಾಣ, ಬ್ರಹ್ಮಾಂಡಪುರಾಣ, ಲಿಂಗಪುರಾಣ, ಐತರೇಯಬ್ರಾಹ್ಮಣ –ಇವುಗಳಲ್ಲಿ ಬಂದಿರುವ ಭಾಗಗಳನ್ನು ಯಥಾವತ್ತಾಗಿ ಉದ್ಧರಿಸಿದ್ದಾರೆ. ಇಷ್ಟೊಂದು ಪರಿಶ್ರಮದಿಂದ ಅಪಾರ ಪರಿಕರಗಳೊಂದಿಗೆ ಪ್ರಕಟವಾಗಿರುವ ಹರಿಶ್ಚಂದ್ರ ಕಾವ್ಯಸಂಗ್ರಹ ಆದರ್ಶಪ್ರಾಯವೆಂಬುದು ನಿರ್ವಿವಾದವಾದುದು.

ಈ ತೆರನ ಸಂಗ್ರಹಗಳು ವಿದ್ಯಾರ್ಥಿಗಳ ದೃಷ್ಟಿಯಿಂದ ಸ್ವಾಗತಾರ್ಹವೆನಿಸಿದರೂ ವಿದ್ವಾಂಸರ ದೃಷ್ಟಿಯಿಂದ ಮೂಲಕೃತಿಗಳ ಅವಲೋಕನೆ ಅವಶ್ಯವೆನಿಸುತ್ತದೆ. ಕವಿಯ ಪಾಂಡಿತ್ಯ ಪ್ರತಿಭೆ ಲೋಕಾನುಭವಗಳನ್ನು ಗುರುತಿಸುವಲ್ಲಿ ಮೂಲಕಾವ್ಯದ ಅನುಸಂಧಾನ ಅನಿವಾರ್ಯವೆನಿಸುತ್ತದೆ. ಈ ದೃಷ್ಟಿಯಿಂದ ರಾಘವಾಂಕನ ಹರಿಶ್ಚಂದ್ರ ಕಾವ್ಯದ ಕೆಲವು ಪ್ರಕರಣಗಳನ್ನು ಸ್ಥೂಲವಾಗಿ ಸಮೀಕ್ಷಿಸಬೇಕಾಗುತ್ತದೆ; ರಾಘವಾಂಕನ ಇತಿವೃತ್ತಗಳನ್ನೂ ಗಮನಿಸಬೇಕಾಗುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ರಾಘವಾಂಕನ ಹರಿಶ್ಚಂದ್ರಕಾವ್ಯ ಒಂದು ಅಭೂತಪೂರ್ವ ಕೃತಿ. ರಾಘವಾಂಕನ ಕೃತಿಗಳಲ್ಲೆಲ್ಲ ಕಮನೀಯವಾದ ಕಾವ್ಯಗುಣಗಳಿಂದ ನಿರಂತರವಾಗಿ ಕಂಗೊಳಿಸುವ ಕೃತಿ ಇದು. ಇಂದಿಗೆ ಸುಮಾರು ಆರುಶತಮಾನಗಳು ಕಳೆದಿದ್ದರೂ ಹರಿಶ್ಚಂದ್ರಕಾವ್ಯ ಜನಮನದಲ್ಲಿ ನವನವೋನ್ಮೇಷಶಾಲಿಯಾಗಿಯೇ ಉಳಿದಿದೆ. ನಾಡಿನಾದ್ಯಂತ ಇಂದಿಗೂ ಈ ಕಾವ್ಯ ಪಾರಾಯಣಗೊಳ್ಳುತ್ತಿರುವುದೇ ಇದರ ಜನಪ್ರಿಯತೆಗೆ ಜ್ವಲಂತಸಾಕ್ಷಿಯಾಗಿದೆ. ರಾಘವಾಂಕನ ತರುವಾಯ ಬಂದವರು ಹರಿಶ್ಚಂದ್ರನ ಕಥೆಯನ್ನು ಇಡಿಯಾಗಿಯೋ ಬಿಡಿಯಾಗಿಯೋ ನಿರೂಪಿಸಿಕೊಂಡು ಬಂದಿದ್ದಾರೆ. ಸಾಂಗತ್ಯ ಯಕ್ಷಗಾನ ಗದ್ಯ –ಇವೇ ಮೊದಲಾದ ಪ್ರಕಾರಗಳಲ್ಲಿ ಇದು ಮೈತಾಳಿ ನಿಂತಿದೆ. ಇಷ್ಟು ದೀರ್ಘಕಾಲದಿಂದ ಈ ಕಾವ್ಯ ಜೀವಂತವಾಗಿರುವುದಕ್ಕೆ ಕಾರಣವಾದರೂ ಏನಿರಬಹುದು? ಈ ಕಾವ್ಯದಲ್ಲಿ ಪ್ರತಿಪಾದಿತವಾಗಿರುವ ಮಾನವೀಯ ಮೌಲ್ಯಗಳನ್ನು ನಿರೂಪಿಸುವ ನಿರಂತರ ಸತ್ಯವೇ ಕಾರಣವಾಗಿದೆ. ಅಲ್ಲದೆ ಇದು ಮಾನವರ ಉದ್ಧಾರಕ್ಕೂ ಉತ್ಥಾನಕ್ಕೂ ನೆರವಾಗಬಲ್ಲುದೆಂಬ ಆತ್ಮವಿಶ್ವಾಸವನ್ನು ನಮ್ಮ ಜನತೆಯಲ್ಲಿ ಮೂಡಿಸಿದೆ.

ರಾಘವಾಂಕನ ಕಾಲ ದೇಶ ವರ್ತಮಾನಗಳ ಬಗೆಗೆ ವಿದ್ವಾಂಸರಲ್ಲಿ ಈಗಾಗಲೇ ಸಾಕಷ್ಟು ಜಿಜ್ಞಾಸೆ ನಡೆದಿದೆ. ಈವರೆಗೆ ಹೊಸಮಾಹಿತಿಗಳು ಯಾವುವೂ ದೊರಕದಿರುವುದರಿಂದ ಅವುಗಳ ಚರ್ಚೆಗೆ ತೊಡಗುವುದು ಚರ್ವಿತಚರ್ವಣವಾಗುತ್ತದೆ.

ರಾಘವಾಂಕನ ಬಗೆಗೆ ಖಚಿತವಾಗಿ ತಿಳಿದುಬಂದಿರುವ ಮಾಹಿತಿಗಳು ಇಷ್ಟೆ: ಬಹುಜನ ವಿದ್ವಾಂಸರ ಅಭಿಪ್ರಾಯದಂತೆ ಈತನು ಹದಿಮೂರನೆಯ ಶತಮಾನದಲ್ಲಿ ಬದುಕಿ ಬಾಳಿದವನು. ಈತನು ಹರಿಶ್ಚಂದ್ರ ಕಾವ್ಯವನ್ನೇ ಅಲ್ಲದೆ ಸಿದ್ಧರಾಮ ಪುರಾಣ, ಸೋಮನಾಥ ಚರಿತೆ, ವೀರೇಶ ಚರಿತೆ, ಶರಭ ಚಾರಿತ್ರ, ಹರಿಹರಮಹತ್ವ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಶರಭಚಾರಿತ್ರ ಹರಿಹರಮಹತ್ವ ಈವರೆಗೂ ಉಪಲಬ್ಧವಾಗಿಲ್ಲ.

ರಾಘವಾಂಕ ಹಂಪೆಯಲ್ಲಿ ಜನ್ಮವೆತ್ತಿ ವಿರೂಪಾಕ್ಷನ ಭಕ್ತನಾಗಿದ್ದನು. ಈತನ ತಂದೆ ಮಹದೇವಭಟ್ಟ, ತಾಯಿ ರುದ್ರಾಣಿ. ಸೋದರಮಾವ ಮತ್ತು ಗುರು ಹರಿಹರ. ಈತನು ರಾಘವಾಂಕನ ರಕ್ಷಾಗುರುವೂ ಶಿಕ್ಷಾಗುರುವೂ ಆಗಿದ್ದನು. ರಾಘವಾಂಕನ ಜ್ಞಾನವಿಕಾಸಕ್ಕೂ ಲೌಕಿಕಪ್ರಕಾಶಕ್ಕೂ ಹರಿಹರನೇ ಕಾರಣ. ರಾಘವಾಂಕ ದೇವರಾಜನ ಜಿನ್ನಹದಂತೆ

ಹರಿಶ್ಚಂದ್ರ ಕಾವ್ಯವನ್ನು ಧರೆಗೆ ಪೊಸತೆಂಬಂತೆ ಕರ್ನಾಟಕ ಭಾಷೆಯಲ್ಲಿ ನವರಸಭರಿತವಾಗಿ ವಿರಚಿಸಿದನು. ದೇವರಾಜ ರಾಘವಾಂಕನಿಗೆ ಕವಿಶರಭಭೇರುಂಡನೆಂಬ ಪಾದದ ಪೆಂಡೆಯವನ್ನೂ ನಾನಾ ರತ್ನಭೂಷಣಗಳನ್ನೂ ಕೊಟ್ಟು ಗೌರವಿಸಿದನು.

ರಾಘವಾಂಕನನ್ನು ಕುರಿತ ಮಾಹಿತಿ ಚೆನ್ನಬಸವಪುರಾಣ, ಪದ್ಮರಾಜಪುರಾಣ, ಗುರುರಾಜ ಚಾರಿತ್ರ, ರಾಘವಾಂಕ ಚಾರಿತ್ರ, ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ –ಇವೇ ಮೊದಲಾದ ಕಾವ್ಯಗಳಲ್ಲಿ ಬಂದಿದೆ. ಇವುಗಳಲ್ಲಿ ರಾಘವಾಂಕನ ಜೀವನಚರಿತ್ರೆಯನ್ನೇ ಕಾವ್ಯವಸ್ತುವನ್ನಾಗಿಟ್ಟುಕೊಂಡು ಬರೆದ ಸಿದ್ಧನಂಜೇಶನ ರಾಘವಾಂಕ ಚಾರಿತ್ರ ಹಲವಾರು ದೃಷ್ಟಿಗಳಿಂದ ಗಮನಾರ್ಹವಾದುದು. ರಾಘವಾಂಕನ ಅನುಪಲಬ್ಧ ಕೃತಿಗಳಾದ ಶರಭಚಾರಿತ್ರ ಮತ್ತು ಹರಿಹರ ಮಹತ್ವಗಳ ಸಾರಸಂಗ್ರಹವನ್ನು ಈ ಕಾವ್ಯದಲ್ಲಿ ಕಾಣಬಹುದಾಗಿದೆ. ರಾಘವಾಂಕನ ತರುವಾಯ ನಾಲ್ಕೈದು ಶತಮಾನಗಳ ಮೇಲೆ ಹುಟ್ಟಿಕೊಂಡ ಈ ಕಾವ್ಯ ಹಲವಾರು ಪವಾಡಗಳನ್ನು ಒಳಗೊಂಡು ಅದ್ಭುತರಮ್ಯವಾಗಿದೆ.

ರಾಘವಾಂಕನ ಕೃತಿಗಳಲ್ಲಿ ಹರಿಶ್ಚಂದ್ರಕಾವ್ಯ ಮತೀಯಾಂಶಗಳಿಗೆ ಮಹತ್ವವನ್ನು ಕೊಡದೆ ಇರುವುದರಿಂದ ಕಾವ್ಯಗುಣಗಳಿಂದ ಮಿಗಿಲಾಗಿದೆ. ಹರಿಶ್ಚಂದ್ರ ಕಾವ್ಯದ ಬಗೆಗೆ ಈಗಾಗಲೇ ಸಾಕಷ್ಟು ಸಾಹಿತ್ಯ ಹೊರಬಂದಿದೆ. ಆದಾಗ್ಯೂ ಹಲವಾರು ದೃಷ್ಟಿಗಳಿಂದ ಈ ಕಾವ್ಯ ನಿಚ್ಚನೂತನವಾಗಿದೆ.

ರಾಘವಾಂಕ ಷಟ್ಪದಿನಿರ್ಮಾಪಕನೆಂಬ ಪ್ರತೀತಿ ಸಾರ್ವತ್ರಿಕವಾಗಿದೆ. ವಾರ್ಧಕ ಷಟ್ಪದಿಯಲ್ಲಿಯೇ ಬಹುಮಟ್ಟಿನ ಕೃತಿಗಳನ್ನು ಬರೆದ ರಾಘವಾಂಕ ಈ ಬಿರುದಿಗೇನೋ ಪಾತ್ರನಾಗಿದ್ದಾನೆ. ಈತನನ್ನು ಷಟ್ಪದಿ ಸಂಸ್ಥಾಪಕನೆನ್ನಲಾಗದಿದ್ದರೂ ಷಟ್ಪದಿಪ್ರವರ್ತಕನೆನ್ನುವುದಕ್ಕೆ ಯಾವ ಅಡ್ಡಿಯೂ ಇಲ್ಲ.

ಹರಿಶ್ಚಂದ್ರಕಾವ್ಯದ ಕಥೆ ಪ್ರತಿಯೊಬ್ಬರಿಗೂ ಚಿರಪರಿಚಿತವಾದುದು. ಆದರೆ ಕಥೆ ಬೆಳೆದು ಬಂದ ವಿಧಾನ, ಇದರ ಆಕರ ಇವು ಯಾವೂ ಖಚಿತವಾಗಿಲ್ಲ. ರಾಘವಾಂಕನ ಕಾಲಕ್ಕೆ ಹರಿಶ್ಚಂದ್ರಕಾವ್ಯ ಆ ರೂಪದಲ್ಲಿ ಮತ್ತೆಲ್ಲೂ ನಿರೂಪಿತವಾದಂತೆ ಕಂಡುಬರುವುದಿಲ್ಲ. ಆದರೆ ಹರಿಶ್ಚಂದ್ರನ ಕಥೆಯ ಪೂರ್ವವೃತ್ತಾಂತಗಳು ಮಾತ್ರ ಐತರೇಯ ಬ್ರಾಹ್ಮಣ, ಸಾಂಖ್ಯಾಯನ ಶ್ರೌತಸೂತ್ರ, ವಾಯುಪುರಾಣ, ಬ್ರಹ್ಮಾಂಡಪುರಾಣ, ಬ್ರಹ್ಮಮಹಾಪುರಾಣ, ಮಾರ್ಕಂಡೇಯ ಪುರಾಣ, ಲಿಂಗಪುರಾಣ, ಶಿವಮಹಾಪುರಾಣ, ಸ್ಕಾಂದಮಹಾಪುರಾಣ, ಶ್ರೀಮದ್ಭಾಗವತ, ದೇವೀಭಾಗವತ, ಹರಿವಂಶ, ಮಹಾಭಾರತ, ರಾಮಾಯಣ, ವೇದಾರ್ಥದೀಪಿಕಾ ಮೊದಲಾದ ವೈದಿಕಗ್ರಂಥಗಳಲ್ಲಿಯೂ, ಪುರಾಣಗಳಲ್ಲಿಯೂ ಕಂಡುಬರುತ್ತವೆ. ಆದರೆ ಈ ಯಾವ ಗ್ರಂಥಗಳಲ್ಲಿಯೂ ರಾಘವಾಂಕನ ಹರಿಶ್ಚಂದ್ರಕಾವ್ಯದ ಕಥೆ ಯಥಾವತ್ತಾಗಿ ನಿರೂಪಿತವಾಗಿಲ್ಲ. ಆದುದರಿಂದ ರಾಘವಾಂಕನೇ ಇದರ ಸೃಷ್ಟಿಕರ್ತನಿರಬಹುದೇನೋ?

ವಸಿಷ್ಠ ವಿಶ್ವಾಮಿತ್ರರ ವೈರದಿಂದಾಗಿ ನಿರಪರಾಧಿಯಾದ ಹರಿಶ್ಚಂದ್ರ ಕೋಟಲೆಪರಂಪರೆಗಳಿಗೆ ಗುರಿಯಾಗುತ್ತಾನೆ. ವಿಶ್ವಾಮಿತ್ರ ಒಡ್ಡಿದ ಎಲ್ಲ ಪರೀಕ್ಷೆಗಳಲ್ಲೂ ತೇರ್ಗಡೆಯಾಗಿ ಸತ್ಯವನ್ನು ಪ್ರತಿಪಾದಿಸಿ ಶಿವನನ್ನು ಸಾಕ್ಷಾತ್ಕರಿಸಿಕೊಂಡು ಕೊನೆಗೆ ವಿಶ್ವಾಮಿತ್ರನಿಂದಲೇ ಕಳೆದುಹೋದ ರಾಜ್ಯವನ್ನೂ ಸತಿಸುತರನ್ನೂ ಪಡೆದುಕೊಳ್ಳುತ್ತಾನೆ.

ರಾಘವಾಂಕ ಸಂಪ್ರದಾಯಬದ್ಧನಾದ ಕವಿಯಾದುದರಿಂದ ಅಷ್ಟಾದಶವರ್ಣನೆಗಳ ಸಂಕೋಲೆಯಿಂದ ಕಳಚಿಕೊಳ್ಳಲು ಸಮರ್ಥನಾಗಲಿಲ್ಲ. ಹರಿಶ್ಚಂದ್ರನಿಗೆ ಪುರವಿಹಾರವನ್ನೂ ಮಾಡಿಸಿದ್ದಾನೆ. ಸಂದರ್ಭಕ್ಕೆ ಇದು ಅಷ್ಟೇನೂ ಪ್ರಯೋಜನವಾಗದಿದ್ದರೂ ಕೂಡ ರಾಘವಾಂಕನ ವರ್ಣನಾಸಾಮರ್ಥ್ಯಕ್ಕೆ ನಿದರ್ಶನವೆನ್ನುವಂತಿದೆ. ವನದ ವರ್ಣನೆಯನ್ನು ನೋಡಿ:

ಈವನಂ ಸತಿಯರಿಂ ನೋವನಂ ಕಾವನಿಂ
ಬೇವನಂ ವಿರಹದಿಂ ಸಾವನಂ ಸಂತವಿಸಿ
ಕಾವನಂ ನಿಗ್ರಹಂ ನೋವನಂ ಸುಖಮನೊಸೆದೀವನಂ ನಗುವುದೊಲಿದು
ಈವನಂ ಶುಕಪಿಕದ ಜೀವನಂ ಪಥಿಕಜನ
ಪಾವನಂ ಸೌಖ್ಯಸಂಜೀವನವೆನುತ್ತಲಂ
ದಾ ವನವನಾ ನೃಪಂ ಕೊಂಡಾಡುತೆಯ್ತರುತ್ತಿರಲಿದಿರಲೇಂವೊಗಳ್ವೆನು ॥ ೩-೬೧ ॥

ರಾಘವಾಂಕ ವರ್ಣನಾಪ್ರಿಯನಾದ ಕವಿ. ಬೇಟೆಯ ಪ್ರಕರಣದ ಈ ಪದ್ಯ ಆತನ ಪರಿಣತಿಗೆ ದೃಷ್ಟಾಂತವಾಗಿದೆ.

ತಡಿಕೆವಲೆ ತಟ್ಟಿವಲೆ ಹಾಸುವಲೆ ಬೀಸುವಲೆ
ಕೊಡತಿವಲೆ ಕೋಲುವಲೆ ತಳ್ಳಿವಳೆ ಬಳ್ಳಿವಲೆ
ತೊಡಕುವಲೆ ತೋಱುವಲೆ ತೊಟ್ಟಿವಲೆ ಗೂಟವಲೆ ಕಣ್ಣಿವಲೆ ಕಾಲುವಲೆಯ
ಸಿಡಿವವಲೆ ಸಿಲುಕವಲೆ ಹಾಱುವಲೆ ಜಾಱುವಲೆ
ಬಡಿಗೆವಲೆ ಚಾಚುವಲೆ ಗಾಢವಲೆ ಗೂಢವಲೆ
ಮಡಿಕೆವಲೆ ಮಂದಸಿನವಲೆಯ ಹೊಱೆಗಳ ಬೇಡವಡೆ ನೆರೆದುದೇನೆಂಬೆನು ॥ ೫-೮೦ ॥

ಪ್ರಕಾಂಡ ಪಂಡಿತನಾದ ರಾಘವಾಂಕನ ಪಾಂಡಿತ್ಯಕ್ಕೆ ಈ ಮುಂದಿನ ಪದ್ಯ ಮಕುಟವಿಟ್ಟಂತಿದೆ:

ಸಲೆ ಶಿವಮಯಂ ಶಿವಮಯಂ ಶಿವಮಯಂ ಸಮು
ಜ್ವಲ ಶಿಖಿಮಯಂ ಶಿಖಿಮಯಂ ಶಿಖಿಮಯಂ ನಿರಾ
ಕುಲ ಶುಕಮಯಂ ಶುಕಮಯಂ ಶುಕಮಯಂ ಗಿರಿಯ ಸಾನುವಿಂದೊಸರ್ದು ಪರಿವ
ಜಲ ಹರಿಮಯಂ ಹರಿಮಯಂ ಹರಿಮಯಂ ಮೃಗಾ
ಕುಲ ಮಧುಮಯಂ ಮಧುಮಯಂ ಮಧುಮಯಂ ಶಬರ
ಬಲ ಬಾಣಮಯ ಬಾಣಮಯ ಬಾಣಮಯವಾಗಿ ಕಾನನಂ ಕಣ್ಗೆಸೆದುದು ॥ ೫-೮೧ ॥

ರಾಘವಾಂಕ ಜಲಚರ ಪ್ರಾಣಿಗಳನ್ನೂ ಕೂಡ ಎಷ್ಟು ಸೂಕ್ಷ್ಮವಾಗಿ ಅವಲೋಕಿಸಿದ್ದನೆಂಬುದಕ್ಕೆ ಹಲವಾರು ದೃಷ್ಟಾಂತಗಳಿವೆ. ಸ್ತ್ರೀಯರ ವರ್ಣನೆಯನ್ನಂತೂ ಮನಮುಟ್ಟುವಂತೆ ಮಾಡಿದ್ದಾನೆ. ಈತನಿಗೆ ಹಲವಾರು ಶಾಸ್ತ್ರಗಳಲ್ಲಿ ಪರಿಣತಿಯಿದ್ದುದಕ್ಕೂ ನಿದರ್ಶನಗಳಿವೆ. ಚಂದ್ರಮತಿಯ ಪ್ರಲಾಪದಲ್ಲಿ ಬರುವ ಒಂದುಪದ್ಯ ಲೋಕಪ್ರಸಿದ್ಧವಾಗಿದೆ. ಎಂದಿನಂತೆ ಸಕಾಲಕ್ಕೆ ಮನೆಗೆ ಬರದ ಮಗನ ಬರವನ್ನು ಆಕೆ ಹಾರೈಸಿದ್ದು ಹೀಗೆ:

ಬಂದರಂ ಲೋಹಿತಾಶ್ವಾ ಎಂದು ಬಟ್ಟೆಯೊಳು
ನಿಂದರಂ ಲೋಹಿತಾಶ್ವಾ ಎಂದು ಗಾಳಿ ಗಿಜಿ
ಕೆಂದಡಂ ಲೋಹಿತಾಶ್ವಾ ಎಂದು ಕರೆಕರೆದು ಬಿಡೆಬೀದಿಗಱುವಿನಂತೆ
ಮಂದಮತಿಯಾಗಿರ್ದ ಚಂದ್ರಮತಿಗೊಬ್ಬನೈ
ತಂದಿಂದು ಕೂಡೆ ಹೋಗಿರ್ದ ಕಂಡೆಂ ನಿನ್ನ
ಕಂದನೊಂದುಗ್ರಫಣಿ ತಿಂದು ಜೀವಂಗಳೆದನೆಂದು ಹೇಳಿದನಾಗಳು ॥ ೧೨-೧೭ ॥

ರಾಘವಾಂಕನ ಲೋಕಾನುಭವ ಅಪಾರವಾದುದು. ಅನೇಕ ನಾಣ್ಣುಡಿಗಳನ್ನೂ ಸಾಮತಿಗಳನ್ನೂ ತನ್ನ ಕಾವ್ಯಗಳಲ್ಲಿ ಹರಡಿ ಹಂಚಿದ್ದಾನೆ. ಹರಿಶ್ಚಂದ್ರಕಾವ್ಯದಲ್ಲಿ ಬರುವ ಈ ಕೆಲವನ್ನು ನೋಡಿ:

೧. ಕುಲವ ನಾಲಗೆಯಱುಹಿತು ॥ ೨-೩೨ ॥
೨. ಕೋಣನೆರಡು ಹೋಱೆಗಿಡುವಿಂಗೆ ಮಿತ್ತು ॥ ೩-೧ ॥
೩. ಸುಟ್ಟು ಬೊಟ್ಟಿಡುವೆನ್ ॥ ೮-೯ ॥
೪. ತಳದ ಬೇರಂ ಬಲ್ಲವಂಗೆಲೆಯನಜಿಪುವರೆ ॥ ೮-೩೮ ॥
೫. ಅವನಿಪರು ಮರುಳರೆಂಬುದು ತಪ್ಪದು ॥ ೮-೫೦ ॥
೬. ಹೆತ್ತ ತಾಯಂ ಮಾಜಿ ತೊತ್ತ ಕೊಂಬರೆ ॥ ೮-೭೬ ॥
೭. ಅತಿದುಃಖಿಗುಂಟೇ ಬುದ್ಧಿ
೮. ಕುಡಿದೌಷಧಂ ಬಾಯ್ಗೆ ನಿಗ್ರಹಂಮಾಡಿ ತಾಳ್ದೊಡಲಿಂಗೆ ಸುಖವನೀವಂತೆ ॥ ೧೪-೩ ॥
೯. ಅತಿಹುಸಿವ ಯತಿ ಹೊಲೆಯ ಹುಸಿಯದಿಹ ಹೊಲೆಯನುನ್ನತಯತಿವರನು ॥ ೧೪-೧೦ ॥
೧೦. ಹರನೆಂಬುದೇ ಸತ್ಯ ಸತ್ಯವೆಂಬುದೆ ಹರನು ॥ ೧೪-೩೩ ॥

ಕಾವ್ಯವನ್ನು ನಡೆಸುವಾತ ಮಱಹು ಆಲಸ್ಯಗಳಿಂದ ಎಲ್ಲಿಯಾದರೂ ತಪ್ಪಿದರೆ ಆ ತಪ್ಪನ್ನೇ ಕಡೆತನಕ ಹಿಡಿದು ಸಾಧಿಸಬಾರದು ಎಂಬುದನ್ನು:

ನಡೆವರೆಡಹದೆ ಬಱುಬರೆಡಹುವರೆ ಕಾವ್ಯಮಂ
ನಡೆಸುವಾತಂ ರಸಾವೇಶ ಮಱಹಾಲಸ್ಯ
ವೆಡೆಗೊಳಲು ತಪ್ಪುಗಲ್ಲದೆ ಕಾವ್ಯಕರ್ತೃ ತಪ್ಪುವನೆವೊಂದೆರಡೆಡೆಯೊಳು
ಎಡೆವಾಯ್ದು ಬಂದ ತಪ್ಪಂ ಹಿಡಿದು ಸಾಧಿಸದೆ
ಕಡೆತನಕ ಬಂದ ಲೇಸಿಂಗೆ ತಲೆದೂಗೆ ತಲೆ
ಯೊಡೆವುದೇ ಬೇನೆಯಱಿಯದ ನೀರಸರನೇಕೆಪುಟ್ಟಿಸಿದನಬುಜಭವನು ॥ ೧-೨೩ ॥

ಈ ಪದ್ಯದಲ್ಲಿ ನಿರೂಪಿಸಿದ್ದಾನೆ.

ಪರಮಶಿವಭಕ್ತನಾದ ರಾಘವಾಂಕನ ಭಾಷೆಯಾದರೂ ಎಂತಹುದು?

ಎನಿತುಸಿರಿ ಸಾರ್ವಡಂ ಮಾಣ್ಬಡಂ ನಿತ್ಯತ್ವ
ವನುವಪ್ಪಡಂ ಸಾವಡಂ ಮತ್ತೆ ಹಂಪೆಯರ
ಸನ ಪೊಗಳ್ವ ನಾಲಗೆಯೊಳನ್ಯದೈವವ ಭವಿಗಳಂ ಕೀರ್ತಿಸಿದೆನಾದೊಡೆ
ಮನಸಿಜಾರಿಯ ಭಕ್ತನಲ್ಲ ತಾನೆನಿಪ ಬಿರು
ದಿನ ಕವಿಯೆನಿಪ್ಪ ಹಂಪೆಯ ರಾಘವಾಂಕನೊ
ಯ್ಯನೆ ಪೇಳ್ದನೆಂಬಾಗಳೀ ಕೃತಿಯನಾವ ಸಜ್ಜನರು ಕೊಂಡಾಡದಿಹರು ॥ ೧-೨೯ ॥

ಹರಿಶ್ಚಂದ್ರಕಾವ್ಯ ಒಂದು ಶ್ರೇಷ್ಠ ಕಲಾಕೃತಿ. ಇದು ಕಾವ್ಯವೂ ಹೌದು, ನಾಟಕವೂ ಹೌದು. ಈ ಕಾವ್ಯದಲ್ಲಿ ಬಂದಿರುವ ವಸಿಷ್ಠ ವಿಶ್ವಾಮಿತ್ರ ಹರಿಶ್ಚಂದ್ರ ನಕ್ಷತ್ರಕ ಚಂದ್ರಮತಿ ಇವೇ ಮೊದಲಾದ ಪಾತ್ರಗಳು ಇಂದಿಗೂ ಜೀವಂತವಾಗಿ ದಿನನಿತ್ಯದ ಬಳಕೆಯಲ್ಲಿವೆ.

ಹರಿಶ್ಚಂದ್ರ ಕಾವ್ಯದಲ್ಲಿ ನಿರೂಪಿತವಾಗಿರುವ ತತ್ತ್ವ ಸಾರ್ವಕಾಲಿಕ ಮೌಲ್ಯವನ್ನುಳ್ಳದ್ದು. ಕಾಲದೇಶ ವರ್ತಮಾನಗಳನ್ನು ಮೀರಿ ನಿಂತದ್ದು. ಈ ದೃಷ್ಟಿಯಿಂದ ಈ ಕಾವ್ಯವನ್ನು ಮತ್ತೆ ಮತ್ತೆ ಓದುವುದು ಅನಿವಾರ್ಯವಾಗುತ್ತದೆ. ಮಾನವ ಜೀವಿತದ ಮೌಲ್ಯಗಳು ಸಂಪೂರ್ಣವಾಗಿ ಕುಸಿದುಬಿದ್ದು ವಿನಾಶದ ಅಂಚಿನಲ್ಲಿ ತೊಳಲುತ್ತಿರುವ ಇಂದಿನ ಜನತೆ ಹರಿಶ್ಚಂದ್ರಕಾವ್ಯದ ಪಠನದಿಂದ ಆತ್ಮಸಾಕ್ಷಾತ್ಕಾರವನ್ನು ಪಡೆದುಕೊಳ್ಳಬಹುದೆಂದು ನಂಬಬಹುದಾಗಿದೆ. ಹರಿಶ್ಚಂದ್ರಕಾವ್ಯ ಸಂಗ್ರಹದ ಪೀಠಿಕೆಯಲ್ಲಿ ಡಾ. ಕೃಷ್ಣಶಾಸ್ತ್ರಿಗಳು ಹೇಳಿರುವ ಮಾತುಗಳು ಮನನೀಯವಾಗಿವೆ:

"ತಾವು ಸರಿಯೆಂದು ನಂಬಿದ ಅಭಿಪ್ರಾಯಗಳನ್ನು ಮನೋವಾಕ್ಕಾಯಗಳಿಂದ ಸಾಧಿಸುತ್ತ ತಮ್ಮ ಧ್ಯೇಯಸಾಧನೆಗಾಗಿ ಪಡಬಾರದ ಕಷ್ಟಗಳನ್ನೆಲ್ಲಾ ಪಟ್ಟು ಕೊನೆಗೆ ಜೀವವನ್ನೂ ಕೊಟ್ಟವರು ಚರಿತ್ರೆಗೆ ಅಪರಿಚಿತರಲ್ಲ. ಹರಿಶ್ಚಂದ್ರನು ಅಂಥವನೊಬ್ಬ ಮಹಾಪುರುಷ. ಅವನು ಕೇವಲ ಕವಿಕಲ್ಪನೆ, ಐತಿಹಾಸಿಕ ವ್ಯಕ್ತಿಯೇನಲ್ಲ ಎಂದುಕೊಂಡರೂ ಅವನ ಧ್ಯೇಯ ಅವನ ಆದರ್ಶ ಇವು ಕುಸಿಯುವ ಹಾಗಿಲ್ಲ. ಒಂದು ಸತ್ಕಾರ್ಯವನ್ನು ಹಿಡಿದರೆ ಅದು ಎಷ್ಟು ಉತ್ತಮವಾಗಿರಲಿ ಅದನ್ನು ಸಾಧಿಸಬೇಕಾದರೆ ಕಷ್ಟಗಳು ಒದಗಬಹುದು. 'ಶ್ರೇಯಾಂಸಿ ಬಹುವಿಘ್ನಾನಿ' ಕಷ್ಟ ಯಾರಿಗೂ ತಪ್ಪದು. ಅದು ನಮ್ಮ ದುಷ್ಕರ್ಮದಿಂದ ಬರುತ್ತದೆಯೋ ವಿಧಿಯಿಂದ ಒದಗುತ್ತದೆಯೋ ಅಂತೂ ಕಷ್ಟ ಬರುತ್ತದೆ. ಅನಿರೀಕ್ಷಿತವಾಗಿ ಬರುತ್ತವೆ. ಅದು ಬಂದಾಗ ನಿರಾಶೆಗೂ ಚಾಪಲ್ಯಕ್ಕೂ ಒಳಗಾಗದೆ ಧರ್ಮದಲ್ಲಿದ್ದರೆ ಬೆಟ್ಟದ ಹಾಗೆ ಕವಿದದ್ದು ಮಂಜಿನ ಹಾಗೆ ಕರಗಿಹೋಗುತ್ತದೆ. ಆ ಕಷ್ಟದಿಂದ ಬರುವ ಶಿಕ್ಷಣಾನುಭವದಲ್ಲಿ ಮನುಷ್ಯನು ತನ್ನ ಲೋಪದೋಷಗಳನ್ನು ಕಳೆದುಕೊಂಡು ಪುಟಕ್ಕೆ ಹಾಕಿ ತೆಗೆದ ಚಿನ್ನದಂತಾಗುತ್ತಾನೆ. ಹರಿಶ್ಚಂದ್ರನ ಕಥೆಯು ಇದಕ್ಕೆ ಒಂದು ಉತ್ತಮವಾದ ಉದಾಹರಣೆ.

[ಡಾ. ಕೃಷ್ಣಶಾಸ್ತ್ರಿಗಳು ಜನಿಸಿದ್ದು ೧೨.೨.೧೮೯೦ ರಂದು. ದೈವಾಧೀನರಾದದ್ದು ೧.೨.೧೯೬೮. ಸುಮಾರು ಎಪ್ಪತ್ತೆಂಟು ವರ್ಷಗಳು ಬಾಳಿ ಬದುಕಿ ಸಾಹಿತ್ಯ ಕ್ಷೇತ್ರದಲ್ಲಿ ಅದ್ವಿತೀಯರೂ ಅಮರರೂ ಎನಿಸಿರುವ ಶ್ರೀಯುತರಿಗೆ ಮತ್ತೊಮ್ಮೆ ಪ್ರಾಂಜಲ ಮನಸ್ಸಿನಿಂದ ಪ್ರಣಾಮಗಳನ್ನರ್ಪಿಸುತ್ತೇನೆ.]

# ಜಗದ್ದಳ ಸೋಮನಾಥ

**ಸು.**೧೧೭೫. ಕರ್ಣಾಟಕ ಕಲ್ಯಾಣಕಾರಕ ಎಂಬ ವೈದ್ಯಗ್ರಂಥವನ್ನು ಬರೆದ ಜೈನಕವಿ. ಈತನಿಗೆ ವಿಚಿತ್ರ ಕವಿಯೆಂಬ ಬಿರುದು ಇದ್ದಂತೆ ತಿಳಿಯುತ್ತದೆ. ತನ್ನ ಗ್ರಂಥವನ್ನು ಸುಮನೋಬಾಣಕವಿಯೂ ಅಭಯಚಂದ್ರ ಸಿದ್ಧಾಂತಿಯೂ ತಿದ್ದಿದಂತೆ ಹೇಳಿರುವುದರಿಂದ ಈತ ಸುಮನೋಬಾಣನ ಕಾಲದವನೆಂದು ತಿಳಿಯುತ್ತದೆ; ಕೀರ್ತಿವರ್ಮನ (ಸು.೧೧೦೦) ಗೋವೈದ್ಯವನ್ನು ಬಿಟ್ಟರೆ ಇದೇ ಕನ್ನಡ ವೈದ್ಯಗ್ರಂಥಗಳಲ್ಲಿ ಪುರಾತನವಾದುದು.

ಸೋಮನಾಥ ತನ್ನ ಗ್ರಂಥದ ಪ್ರಾರಂಭದಲ್ಲಿ ಚಂದ್ರನಾಥನನ್ನು ಸ್ತುತಿಸಿದ್ದಾನೆ. ತರುವಾಯ ಸಿದ್ಧರು, ಸರಸ್ವತಿ, ಮಾಧವೇಂದು, ಸೈದ್ಧಾಂತಿಕಚಕ್ರವರ್ತಿ ಅಭಯಚಂದ್ರ, ಕನಕಚಂದ್ರ, ಪಂಡಿತದೇವ ಮೊದಲಾದವರನ್ನು ಸ್ಮರಿಸಿದ್ದಾನೆ. ಈ ಗ್ರಂಥ ಕಂದ ಮತ್ತು ವೃತ್ತಗಳಲ್ಲಿ ರಚಿತವಾಗಿದೆ. ಇದರಲ್ಲಿ ಒಟ್ಟು ಹದಿಮೂರು ಪ್ರಕರಣಗಳಿರುವಂತೆ ತೋರುತ್ತದೆ. ಸಂಸ್ಕೃತದಲ್ಲಿ ಪೂಜ್ಯಪಾದ ಮುನಿಗಳು ಬರೆದಿರುವ ಕಲ್ಯಾಣಕಾರಕವನ್ನು ಆಧರಿಸಿ ತನ್ನ ಗ್ರಂಥವನ್ನು ಬರೆದಂತೆ ಕವಿ ಹೇಳಿಕೊಂಡಿದ್ದಾನೆ; ಜೊತೆಗೆ ಚರಕ, ವಾಗ್ಭಟ, ಸಿದ್ಧಸಾರ ಮುಂತಾದವರ ಗ್ರಂಥಗಳಿಂದಲೂ ವಿಷಯಗಳನ್ನು ಆರಿಸಿ, ಮದ್ಯಮಾಂಸ ವರ್ಜಿತವಾಗಿ, ತನ್ನ ಕಲ್ಯಾಣಕಾರಕವನ್ನು ಬರೆದಿರುವುದಾಗಿ ತಿಳಿಸಿದ್ದಾನೆ.

ಎಲ್ಲ ಕಲೆಗಳಲ್ಲಿಯೂ ಲೋಕೋಪಕಾರಿಯಾದ ವೈದ್ಯಕಲೆಯೇ ಮುಖ್ಯ ವಾದುದು ಎಂದು ಕವಿಯ ಅಭಿಮತ.

ಆವಾವ ಕಲಾವಿದ್ಯೆಗ  
ಗಳೇವುವೊ ಲೋಕೋಪಕಾರಿ ವೈದ್ಯಮೆ ಸಾಲ್ಗುಂ ।  
ಭಾವಿಸೆ ಷಡ್ದ್ರವ್ಯದೊಳಂ  
ಜೀವದ್ರವ್ಯಮೆ ಜಗಕ್ಕೆ ದೈವಮೆಂಬರ್ ॥

ಎಂದು ಹೇಳಿ, ವೈದ್ಯವನ್ನು ಎಂಥವರಿಗೆ ಮಾಡಬಾರದು ಎಂಬುದನ್ನು ಈ ಮುಂದಿನ ಪದ್ಯದಲ್ಲಿ ವಿವರಿಸಿದ್ದಾನೆ:

ಕ್ರೂರಾಳಾಪಂಗೆ ದುರಾ  
ಚಾರಿಗೆ ಮಾತ್ಸರ್ಯಸಂಯುತಂಗಮಹಂ ।  
ಕಾರಿಗೆ ಮಿಥ್ಯಾದೃಷ್ಟಿಗೆ  
ಪಾರಕೆಯ್ವವಂಗೆ ಮಾಡಲಾಗದು ಮರ್ದಂ ॥

ಕಲ್ಯಾಣಕಾರಕದ ಪ್ರತಿಪ್ರಕರಣದಲ್ಲೂ ವ್ಯಾಧಿಗಳ ವಿವರಗಳನ್ನು ನೀಡಲಾಗಿದೆ. ಪೀಠಿಕಾ ಪ್ರಕರಣವಾದ ಮೇಲೆ ದ್ವಿತೀಯ ಪರಿಭಾಷಾಪ್ರಕರಣದಲ್ಲಿ– ಅಸಾಧ್ಯಲಕ್ಷಣಂ, ದೇಶವಿಭಾಗಂ, ಋತುಗಳ್, ವಯಸ್ಸು, ಗಿಡಮೂಲಿಕೆ ಸಂಗ್ರಹ ಕಾಲಂ, ಧಾತುಗಳ್, ಆಹಾರಬಲಂ, ವರ್ಜಕ್ರಿಯೆಯವರ್, ದಶವಾಯುಗಳ್, ದೂತಲಕ್ಷಣಂ, ಶುಭಧೂತ ಲಕ್ಷಣಂ, ಸ್ವಪ್ನಂ, ಪ್ರಕೃತಿಗಳ್, ನಿಮಿತ್ತಂ, ಸೂರ್ಯಚಂದ್ರನಾಡಿ, ಅರಿಷ್ಟ, ಜ್ಯೋತಿಷಂ –ಈ ವಿಷಯಗಳಿವೆ. ಮೂರನೆಯ ಷೋಡಶಜ್ವರನಿದಾನ ಚಿಕಿತ್ಸಾ ನಿರೂಪಣ ಪ್ರಕರಣದಲ್ಲಿ ಭೂತಜ್ವರಲಕ್ಷಣ, ಕಾಮಜ್ವರಂ, ವಾತಜ್ವರಲಕ್ಷಣ, ವಾತಪಿತ್ತಶ್ಲೇಷ್ಮ ಜ್ವರಕ್ಕೆ ಲಕ್ಷಣಂ, ವಾತಶ್ಲೇಷ್ಮಜ್ವರಕ್ಕೆ, ತ್ರಿದೋಷಜ್ವರಂ, ಸನ್ನಿಪಾತಜ್ವರಂ, ಅಭಿಚಾರ ಕೃತ್ರಿಮ ಅಮಜ್ವರಲಕ್ಷಣಂ, ಶೀತಜ್ವರಂ,

ಆಹಿಕಜ್ವರಂ, ವ್ಯಾಧಿಭೇದ, ಜ್ವರಪರಿಪಾಕಂ, ಜ್ವರಾದಿ ಪಥ್ಯಕ್ರಮ, ಗಂಜಿಯ ಗುಣಂ, ಕಷಾಯ, ಪಿತ್ತಜ್ವರಕ್ಕೆ ಕಷಾಯ, ಶ್ಲೇಷ್ಮಜ್ವರ ಕಷಾಯಂ, ಪಿತ್ತವಾತಜ್ವರ ಕಷಾಯಂ, ವಾತಶ್ಲೇಷ್ಮ ಕಷಾಯಂ, ತ್ರಿದೋಷಜ್ವರಕ್ಕೆ, ಪಿತ್ತಜ್ವರಕ್ಕೆ ಕಲ್ಯಂ, ಸನ್ನಿಪಾತಜ್ವರಕ್ಕೆ, ಮದನಜ್ವರಕ್ಕೆ, ಎದೆನೋವಿಗೆ, ಪಿತ್ತವಾತಾರ್ಜೀಣ ಜ್ವರಕ್ಕೆ, ಶೀತಜ್ವರಕ್ಕೆ, ಎಲ್ಲಾ ಜ್ವರಂಗಳ್ಗೆ, ಭೂತಜ್ವರಕ್ಕೆ, ಧೂಪಂ. ಸಾಮಾನ್ಯಮಲಹರಣಕ್ಕೆ -ಎಂಬ ಸಂಗತಿಗಳಿವೆ. ನಾಲ್ಕನೆಯ ಅತಿಸಾರ ಗ್ರಹಣೀನಿದಾನಚಿಕಿತ್ಸ ನಿರೂಪಣ ಪ್ರಕರಣದಲ್ಲಿ ವಾತಾತಿಸಾರ ಲಕ್ಷಣಂ, ಪಿತ್ತಾತಿಸಾರಲಕ್ಷಣಂ ಶ್ಲೇಷ್ಮಾತಿಸಾರಂ ವಾಮಾತಿಸಾರ ಲಕ್ಷಣಂ ಅಸಾಧ್ಯಾತಿಸಾರಂ, ಅಪಕ್ವಾತಿಸಾರಂ, ಪಿತ್ತಾತಿಸಾರವೂ ಐದನೆಯ ರಕ್ತಪಿತ್ತ ನಿಧಾನ ಚಿಕಿತ್ಸಾ ನಿರೂಪಣ ಪ್ರಕರಣದಲ್ಲಿ ರಕ್ತಪಿತ್ತನಿದಾನ ರಕ್ತಪಿತ್ತದಲ್ಲಿ ವಿರೇಚನಂ, ಕಿಱುಎಲಾದಿ, ಪಿಲೆಯೇಲಾದಿಗಳೂ ಆರನೆಯ ಪ್ರಕರಣದಲ್ಲಿ ಕ್ಷಯ ನಿಧಾನ ಚಿಕಿತ್ಸಾ ನಿರೂಪಣವೂ ಏಳನೆಯ ಉದರರೋಗ ನಿಧಾನ ಚಿಕಿತ್ಸಾ ನಿರೂಪಣ ಪ್ರಕರಣದಲ್ಲಿ ವಾತೋದರಂ, ಪಿತ್ತೋದರಂ, ಕಪೋದರಂ, ಸನ್ನಿಪಾತೋದರಂ, ಜಲೋದರಂ, ನಾರಾಚಘೃತಂ ಸೆರೆಯ ಲಕ್ಷಣಂ, ಉದರಕುಷ್ಠಗುಲ್ಮಕ್ಕೆ, ಶ್ವಾಸಕ್ಕೆ -ಎಂಬ ವಿಷಯಗಳೂ ಎಂಟನೆಯ ಗುಲ್ಮನಿಧಾನ ಚಿಕಿತ್ಸಾ ನಿರೂಪಣಾ ಪ್ರಕರಣದಲ್ಲಿ ವಾತಗುಲ್ಮಂ, ಪಿತ್ತಗುಲ್ಮಂ, ಶ್ಲೇಷ್ಮಗುಲ್ಮಂ, ರಕ್ತಗುಲ್ಮಂಗಳೂ ಒಂಬತ್ತನೆಯದರಲ್ಲಿ ಅಶ್ಮರೀ-ಪ್ರಕರಣವೂ ಹತ್ತನೆಯದರಲ್ಲಿ ಕಾಮಾಲೆಯ ನಿಧಾನ ಚಿಕಿತ್ಸಾಪ್ರಯೋಗವೂ ಹನ್ನೊಂದನೆಯದರಲ್ಲಿ ಮೂಲವ್ಯಾಧಿ ನಿಧಾನ ಚಿಕಿತ್ಸಾ ಪ್ರಕರಣವೂ ಇನ್ನು ಉಳಿದ ಪ್ರಕರಣಗಳಲ್ಲಿ ಶ್ವಾಸಖಾಸ ಪ್ರಯೋಗಂ, ಸರ್ವವಿಷಕ್ಕೆ, ನಯನರೋಗ ನಿಧಾನ ಚಿಕಿತ್ಸಾ ಪ್ರಕರಣಂ, ಭಗಂದರ ಪ್ರಯೋಗಂ, ವಿಷಪ್ರಯೋಗಂ -ಮೊದಲಾದ ವಿಷಯಗಳೂ ನಿರೂಪಿಸಲ್ಪಟ್ಟಿವೆ.

ಕಲ್ಯಾಣಕಾರಕದಲ್ಲಿ ವ್ಯಾಧಿಗಳಿಗೆ ನಿರೂಪಿಸಿರುವ ನಿಧಾನಕ್ರಮ ಸುಲಭವೂ ಪರಿಣಾಮಕಾರಿಯೂ ಆಗಿರುವಂತೆ ತೋರುತ್ತದೆ. ಉದಾಹರಣೆಗೆ ಜ್ವರೋತ್ಪತ್ತಿ ಮತ್ತು ಅದರ ಚಿಕಿತ್ಸಾವಿಧಾನಗಳನ್ನು ನೋಡಬಹುದು.

**ಜ್ವರೋತ್ಪತ್ತಿಗೆ:**

ಮಲಸಂಗ್ರಹದಿಂದಾ
ನಲನಜೆವಿಂದಾಮಚಲನೆಯಿಂ ಜ್ವರಮೊಗೆಗುಂ ।
ಕೆಲರಾ ತ್ರಿಪುರಧ್ವಂಸಿಯ
ಲಲಾಟಲೋಚನದಿಮೊಗೆದುದೆಂಬರ್ ಜ್ವರಮಂ ॥

**ಚಿಕಿತ್ಸೆ:**

ಜ್ವರದಾದಿಯೊಳುಪವಾಸಂ
ಜ್ವರಮಧ್ಯದಲ್ಲಿ ಗಂಜಿ ಪೇಳ್ವ ಕಷಾಯಂ ।
ಜ್ವರಪಾಕದೊಳಸ್ತಮಿತ
ಜ್ವರದೊಳ್ ಮಲಹರಣಮಿವಿನಿತಿವಾರೋಗ್ಯಕರಂ ॥

ಪೊಸಚಿಕ್ಕಣಿಕೆಯ ಪುಲ್ಲಂ
ಪೊಸಬೆಳ್ಳುಳ್ಳಿಯ ರಸಂಗಳಂ ತಳದಿಂದಂ ।
ಪೊಸೆದಾಗಳೆ ನಸ್ಯಂಗೆಯೆ
ಬಸವಲ್ಲೆನಿಪಾ ಜ್ವರಂಗಳಂ ಮಸುಳಿಸುಗುಂ ॥

ಕಲ್ಯಾಣಕಾರಕ ಗ್ರಂಥ ಇತ್ತೀಚೆಗೆ ಇದು ಪ್ರಕಟವಾಗಿದೆ. ಒಟ್ಟಿನಲ್ಲಿ ಇದು ಒಂದು ಅತ್ಯಂತ ಉಪಯುಕ್ತ ವೈದ್ಯಗ್ರಂಥ.

೧. ಕನ್ನಡ ವಿಶ್ವಕೋಶ, ಸಂಪುಟ ಏಳು, ಪು. ೬೪೫

೨. ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೪

# ಗಂಗಾಂಬಿಕೆ–ನೀಲಾಂಬಿಕೆ

**ಕ**ರ್ನಾಟಕದಲ್ಲಿ ಕ್ರಿ.ಶ. ೧೨ನೆಯ ಶತಮಾನದಲ್ಲಿ ನಡೆದ ಧಾರ್ಮಿಕ ಆಂದೋಲನ ಬಹುಮುಖ್ಯವಾದುದು. ಈ ಆಂದೋಲನದ ನೇತಾರರಾದ ಬಸವಣ್ಣನವರು ಮಾನವರ ಉದ್ಧಾರಕ್ಕೂ, ಉತ್ಥಾನಕ್ಕೂ ಕೈಕೊಂಡ ಮಾರ್ಗಗಳು ಸರ್ವಜನಾದರಣೀಯವಾಗಿವೆ, ಸಾರ್ವಕಾಲಿಕವಾಗಿವೆ. ವಿವಿಧ ಪಾತ್ರಗಳಲ್ಲಿ ಅವರು ಕೈಕೊಂಡ ವಿಧಿವಿಧಾನಗಳು ಇತರರಿಗೆ ಮೇಲ್ಪಂಕ್ತಿಯಾಗಿವೆ. ಬಸವಣ್ಣನವರ ಸಾಧನೆ ಸಿದ್ಧಿಗಳಿಗೆ ಕಾರಕರಾಗಿ, ಪ್ರೇರಕರಾಗಿ, ಪೂರಕರಾಗಿ, ನಿಂತವರು ಹಲವಾರು ಮಂದಿ. ಇದಕ್ಕೆ ಕಾರಣ ಬಸವಣ್ಣನವರಲ್ಲಿದ್ದ ಸರ್ವೋದಯ ದೃಷ್ಟಿ, ಪ್ರಗತಿಪರ ಮನೋಭಾವ ಎಲ್ಲಕ್ಕಿಂತ ಮಿಗಿಲಾಗಿ ಅವರ ಕಾಯಕನಿಷ್ಠೆ.

ಬಸವಣ್ಣನವರು ಕೀರ್ತಿ ಗೌರವ ಪ್ರತಿಷ್ಠೆಗಳನ್ನೂ ಸಾಧನೆ ಸಿದ್ಧಿಗಳನ್ನೂ ಪಡೆಯಲು ಅವರಿಗೆ ಜೀವನಾಡಿಯಂತೆ ನಿಂತವರು ಅವರ ಧರ್ಮಪತ್ನಿಯರಾದ ಗಂಗಾಂಬಿಕೆ ಮತ್ತು ನೀಲಾಂಬಿಕೆಯವರು. ಇವರು ಬಸವಣ್ಣನವರಿಗೆ ಎರಡು ಕಣ್ಣುಗಳಂತಿದ್ದರು. ಅವರ ಕಾರ್ಯಗಳಿಗೆ ಎಡಭುಜ, ಬಲಭುಜಗಳಂತಿದ್ದರು. ಇಂತಹ ಆದರ್ಶಪತ್ನಿಯರಿದ್ದುದರಿಂದಲೇ ಬಸವಣ್ಣನವರು ಪ್ರತಿನಿತ್ಯ ಲಕ್ಷದ ತೊಂಬತ್ತಾರುಸಾವಿರ ಜಂಗಮಕ್ಕೆ ದಾಸೋಹವನ್ನೂ ಮಹಾಮನೆಯ ಕಾರ್ಯಕಲಾಪಗಳನ್ನೂ ಅನುಭವಮಂಟಪದ ಮೇಲ್ವಿಚಾರಣೆಯನ್ನೂ ನಿರ್ವಹಿಸುವುದು ಸಾಧ್ಯವಾಯಿತು. ಆದ್ದರಿಂದಲೇ ಗಂಗಾಂಬಿಕೆ ನೀಲಾಂಬಿಕೆಯರು ಭಾರತದ ಆದರ್ಶನಾರೀಮಣಿಯರಂತಿದ್ದಾರೆ. ಇವರಿಬ್ಬರಲ್ಲಿ ಸೋದರಿಯರೆಂಬ ಸೌಹಾರ್ದವಿತ್ತೇ ಹೊರತು ಸವತಿಯರೆಂಬ ಮಾತ್ಸರ್ಯವಿರಲಿಲ್ಲ. ಪತಿಯೇ ಪರದೈವವೆಂದು, ಗತಿಮತಿಯೆಂದು ದೃಢವಾಗಿ ನಂಬಿ ಅದರಂತೆ ಬಾಳಿ ಸದ್ಗತಿಯನ್ನು ಪಡೆದುಕೊಂಡರು. ಮಂತ್ರಿಪುತ್ರಿಯರಾಗಿದ್ದ ಇವರು ಉತ್ತಮ ಸಂಸ್ಕಾರವನ್ನು ಹೊಂದಿದ್ದುದಲ್ಲದೆ ಸಾಹಿತ್ಯ ಸಂಗೀತವೇ ಮೊದಲಾದ ವಿದ್ಯೆಗಳಲ್ಲಿ ಪರಿಣತಿಯನ್ನೂ ಪಡೆದಿದ್ದರು. ಐಶ್ವರ್ಯ ಅಧಿಕಾರಿಗಳ ವ್ಯಾಮೋಹ ಇವರಿಗೆ ಕಿಂಚಿತ್ತಾದರೂ ಇರಲಿಲ್ಲ. ಬಸವಣ್ಣನವರು ಬಿಜ್ಜಳನಲ್ಲಿ ಕರಣಿಕವೃತ್ತಿಯನ್ನು ಕೈಕೊಂಡ ಮೇಲೆ ಮಂತ್ರಿಪುತ್ರಿಯರಾದ ಗಂಗಾಂಬಿಕೆ ನೀಲಾಂಬಿಕೆಯರು ತಮ್ಮ ಎಲ್ಲ ವೈಭವಗಳನ್ನು ತೊರೆದು ಪತಿಯ ಗೃಹವನ್ನು ಸೇರುವರು. ಅದೇ ಅವರಿಗೆ ಸರ್ವಸ್ವವಾಗುವುದು; ಸ್ವರ್ಗವಾಗುವುದು. ಅವರು ಪತಿಸೇವೆಯನ್ನೂ ಗುರುಲಿಂಗಜಂಗಮ ಸೇವೆಯನ್ನೂ ದೀನದಲಿತರ ಸೇವೆಯನ್ನೂ ನಿರಂತರವಾಗಿ ನಿರ್ವಹಿಸುತ್ತ ಎಲ್ಲರ ಪ್ರೀತಿಗೌರವಗಳಿಗೂ ಪಾತ್ರರಾದರು.

ಗಂಗಾಂಬಿಕೆ ನೀಲಾಂಬಿಕೆಯರು ಬಸವಣ್ಣನವರ ಪತ್ನಿಯರಷ್ಟೇ ಆಗದೆ ಶ್ರೇಷ್ಠ ಅನುಭಾವಿಗಳೂ ಆಗಿದ್ದರು. ತಮ್ಮ ಪತಿಯ ಪ್ರಭಾವದಿಂದ ಇಹದಲ್ಲಿ ಕೀರ್ತಿಯನ್ನೂ ಪರದಲ್ಲಿ ಸದ್ಗತಿಯನ್ನೂ ಪಡೆದುಕೊಂಡರು. ಇವರಿಬ್ಬರೂ ಸಾಧನೆಯನ್ನು ನಡೆಸಿ ಸಿದ್ಧಿಯನ್ನು ಹೊಂದಿದರು; ಉತ್ತಮ ವತನಕಾರ್ತಿಯರಾಗಿ ಅಂದಿನ ಅನೇಕ ಸ್ತ್ರೀಯರಿಗೆ ಮಾರ್ಗದರ್ಶಕರಾದರು. ಇಂತಹ ಸಾಧ್ವೀಮಣಿಯರಿದ್ದುದರಿಂದಲೇ ಬಸವಣ್ಣನವರು ಮಹತ್ಕಾರ್ಯಗಳನ್ನು ಸಾಧಿಸಲು ಸಾಧ್ಯವಾಯಿತು. ಇದರಿಂದ ಬಸವಣ್ಣನವರ ಬಾಳು ಬಂಗಾರವಾಯಿತು. ಅವರು ಅಜರಾಮರವಾದ ಕೀರ್ತಿಯನ್ನು ಪಡೆದರು. ಗಂಗಾಂಬಿಕೆ ನೀಲಾಂಬಿಕೆಯರು ಬಸವಣ್ಣನವರ ಹೆಂಡತಿಯರೆಂದು ಕೀರ್ತಿಯನ್ನು ಪಡೆಯುವುದರ ಜೊತೆಗೆ ಅವರ ಸಾನ್ನಿಧ್ಯದಿಂದ

ಮುಕ್ತಿಯನ್ನು ಪಡೆದುಕೊಂಡರು. ಈ ಹಿನ್ನೆಲೆಯಲ್ಲಿ ನಿಂತು ಈ ಆದರ್ಶ ಮಹಿಳೆಯರ ಜೀವನಚರಿತ್ರೆಯನ್ನು ಸ್ವಲ್ಪಮಟ್ಟಿಗೆ ವಿಚಾರಮಾಡಬೇಕಾಗಿದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬಸವೇಶ್ವರರನ್ನು ಕುರಿತು ರಚಿತವಾದ ಗ್ರಂಥಗಳಲ್ಲಿ ಹರಿಹರನ ಬಸವರಾಜದೇವರ ರಗಳೆಯೇ ಮೊಟ್ಟಮೊದಲನೆಯದು. ಬಸವಣ್ಣನವರ ಜೀವನಚರಿತ್ರೆ ಜನಜೀವನದಲ್ಲಿ ಇನ್ನೂ ಹಚ್ಚಹಸುರಾಗಿದ್ದಾಗಲೇ ಹರಿಹರ ಆತನ ಜೀವಿತದ ಒಂದು ಯಥಾರ್ಥಚಿತ್ರವನ್ನು ನಮ್ಮ ಮುಂದೆ ಇಟ್ಟಿದ್ದಾನೆ. ಆತನು ನಿರೂಪಿಸಿರುವ ಸಂಗತಿಗಳು ಬಹುಮಟ್ಟಿಗೆ ವಾಸ್ತವವಾದವು. ಆದರೆ ಆತನಲ್ಲಿ ಉಕ್ತವಾಗಿರುವ ಕೆಲವು ಸಂಗತಿಗಳು ತರುವಾಯದವರಲ್ಲಿ ಭಿನ್ನಾಭಿಪ್ರಾಯಕ್ಕೆ ಎಡೆಮಾಡಿಕೊಟ್ಟಿವೆ. ಗಂಗಾಂಬಿಕೆ ಬಲದೇವ ಮಂತ್ರಿಯ ಮಗಳೆಂದು ಹರಿಹರನ ತರುವಾಯದ ಎಲ್ಲ ಕಾವ್ಯಗಳೂ ಏಕಕಂಠದಿಂದ ಸಾರುತ್ತಿವೆ. ಆದರೆ ಹರಿಹರನಾದರೋ ಸಿದ್ಧದಂಡಾಧೀಶನ ಮಗಳೆಂದು ಹೇಳುತ್ತಾನೆ. ಗಂಗಾಂಬಿಕೆಗೆ ಮಕ್ಕಳಿರಲಿಲ್ಲವೆಂದು ತರುವಾಯದ ಕಾವ್ಯಗಳು ಸಾರುತ್ತಿವೆ. ಇದೇ ಅಭಿಪ್ರಾಯವನ್ನು ಆಕೆಯ:

ಅವಳ ಕಂದ ಬಾಲಸಂಗ ನಿನ್ನ ಕಂದ ಚನ್ನಲಿಂಗ
ಎಂದು ಹೇಳಿದರಮ್ಮ ಎನ್ನ ಒಡೆಯರು
ಹೊಲಬಿಲ್ಲದ ಕಂದನಿರ್ಪನವಳಿಗೆ ಎನಗೆ ಫಲವಿಲ್ಲ ಕಂದನಿಲ್ಲ
ಇದೇನೊ ದುಃಖದಂದುಗ ಗಂಗಾಪ್ರಿಯ ಕೂಡಲಸಂಗಮದೇವಾ.

ಈ ಮೇಲಿನ ವಚನ ಪುಷ್ಟೀಕರಿಸುತ್ತದೆ. ಆದರೆ ಹರಿಹರನ ಬಸವರಾಜದೇವರ ರಗಳೆಯಲ್ಲಿ,

ಸುರನದಿಯೊಳನರ್ಘ್ಯರತ್ನವುದಯಿಸುವಂತೆ ತನ್ನರಸಿ
ಗಂಗಾದೇವಿಯರ್ಗೆ ಗರ್ಭವುದಯಿಸಿ... ಸುಮುಹೂರ್ತದೊಳು
ಸುಪುತ್ರನುದ್ಭವಿಸೆ ಜಾತಕರ್ಮವನಲಂಕರಿಸಿ ನಾಮಕರಣಮಂ

ಸಿದ್ಧರಸನೆಂದಿಟ್ಟು (ಬಸವರಾಜದೇವರ ರಗಳೆ, ೧೦-೧೦೫) ಈರೀತಿ ಕಂಡುಬರುತ್ತದೆ. ಗಂಗಾಂಬಿಕೆಗೆ **ಸಿದ್ಧರಸ**ನೆಂಬ ಮಗನಿದ್ದರೆ **ನೀಲಾಂಬಿಕೆ ಬಾಲಸಂಗಯ್ಯ**ನೆಂಬ ಮಗನಿರುವುದು ಉಕ್ತವಾಗಿದೆ. ಈ ಮೇಲಿನ ಭಿನ್ನಾಭಿಪ್ರಾಯಗಳನ್ನೂ, ವ್ಯತ್ಯಾಸಗಳನ್ನೂ ಬದಿಗಿಟ್ಟು ಗಂಗಾಂಬಿಕೆ ನೀಲಾಂಬಿಕೆಯರ ಜೀವನ ಚರಿತ್ರೆಯನ್ನು ಸಂಕ್ಷೇಪವಾಗಿ ಹೀಗೆ ನಿರೂಪಿಸಬಹುದು.

## ಗಂಗಾಂಬಿಕೆ

ಈಕೆ ಬಲದೇವಮಂತ್ರಿಯ ಮಗಳು. ಈ ಬಲದೇವಮಂತ್ರಿ ಬಸವಣ್ಣನ ಸೋದರಮಾವ ಸಿದ್ಧಣ್ಣಮಂತ್ರಿಯ ತಮ್ಮ. ಬಲದೇವಮಂತ್ರಿಗೆ ಗಂಗಾಂಬಿಕೆ ಏಕಮಾತ್ರ ಪುತ್ರಿ, ಈಕೆಯ ತಾಯಿ ಯಾವಾಗ ಗತಿಸಿದಳು ಎಂಬ ಸಂಗತಿ ಗೊತ್ತಾಗುವುದಿಲ್ಲ. ತಾಯಿಯಿಲ್ಲದ ಮಗಳನ್ನು ಬಲದೇವಮಂತ್ರಿ ತುಂಬ ಪ್ರೀತಿಯಿಂದ ಸಲಹುತ್ತಿದ್ದನು. ಈಕೆಗೆ ಸಂಗೀತ, ಸಾಹಿತ್ಯ ಮುಂತಾದ ಲಲಿತಕಲೆಗಳ ಜೊತೆಗೆ ಧನುರ್ವಿದ್ಯೆಯನ್ನು ಕಲಿಸಿದಂತೆ ತಿಳಿದುಬರುತ್ತದೆ. ಈಕೆಯ ಗುರು ರುದ್ರಮುನಿ. ಗಂಗಾಂಬಿಕೆ ಅತ್ಯಂತ ಸೌಂದರ್ಯವತಿಯಾಗಿದ್ದಳೆಂದು ಭೀಮಕವಿ ತನ್ನ ಬಸವಪುರಾಣದಲ್ಲಿ ವರ್ಣಿಸಿದ್ದಾನೆ.

ಕ್ಷಿತಿಗೆ ಲಕ್ಷ್ಮಿಗೆ ರೋಹಿಣಿಗೆ ಭಾ
ರತಿಗೆ ರತಿಗೆ ಪುಲೋಮಜೆಗರುಂ
ಧತಿಗೆ ಸೀತೆಗೆ ಜಾಹ್ನವಿಗೆ ರವಿಸತಿಗೆ ನೂರುಮಡಿ
ಧೃತಿ ಸಿರಿಪ್ರಭೆ ಜಾಣ್ಮೆರೂಪು
ನ್ನತಿ ಪತಿವ್ರತದಾಚರಣೆ ಸಂ
ತತ ಪವಿತ್ರತೆ ತೇಜವೆಂಬಿವರಿಂದ ಗಂಗಾಯಿ ॥

ಆಭರಣತತಿಗೀ ತಳೋದರಿ
ಯಾಭರಣಮಹುದಲ್ಲದೇ ಬಳಿ

ಕಾಭರಣವೀ ರೂಪವತಿಗಾಭರಣವಲ್ಲೆಂದು
ಶೋಭನಾರ್ಥಕ್ಕಾದಡಂ ಕೆಲ
ವಾಭರಣಮಂ ತೊಡಿಸವೇಳ್ಕು ಮ
ದೇಭಗಮನೆಗೆನುತೊಸೆದು ಮುತ್ತೈದೆಯರು ಬಂದು ॥ (ಸಂಧಿ ೪, ಪದ್ಯ ೩೦,೩೩)

ಬಸವಣ್ಣನವರ ಕೀರ್ತಿ ಪಾಂಡಿತ್ಯ ಸಜ್ಜನಿಕೆಯನ್ನು ಕಂಡು ಕೇಳಿದ ಬಲದೇವ ಮಂತ್ರಿ ತನ್ನ ತಂಗಿಯ ಮಗನಾದ ಬಸವಣ್ಣನವರಿಗೇ ಗಂಗಾಂಬಿಕೆಯನ್ನು ಕೊಟ್ಟು ಮದುವೆಮಾಡಿದನು. ಬಿಜ್ಜಳನಲ್ಲಿ ಕರಣಿಕವೃತ್ತಿಯನ್ನು ಕೈಕೊಂಡ ಮೇಲೆ ಮಾವನ ಮನೆಯನ್ನು ಬಿಟ್ಟು ಸ್ವತಂತ್ರವಾಗಿ ಸಂಸಾರ ಮಾಡುವಾಗ ಗಂಗಾಂಬಿಕೆ ಅವರ ಪ್ರತಿಯೊಂದು ಕಾರ್ಯದಲ್ಲಿಯೂ ತನು ಮನಗಳನ್ನು ಸವೆಸಿದ್ದಾಳೆ. ತ್ರಿಕಾಲವೂ ಗುರುಲಿಂಗಜಂಗಮ ಪೂಜೆಯಲ್ಲಿ ನಿರತಳಾಗಿರುತ್ತಿದ್ದಳು. ಮಹಾಮನೆಯ ಕಾರ್ಯಕಲಾಪಗಳನ್ನೂ ಅನುಭವಮಂಟಪದ ಮೇಲ್ವಿಚಾರಣೆಯನ್ನೂ ಅತ್ಯಂತ ದಕ್ಷತೆಯಿಂದಲೂ ಜಾಣ್ಮೆಯಿಂದಲೂ ನಿರ್ವಹಿಸುತ್ತಿದ್ದಳು.

ಅಂತರ್ಜಾತಿಯ ವಿವಾಹದಿಂದಾಗಿ ಕಲ್ಯಾಣದಲ್ಲಿ ನಡೆದ ಕ್ರಾಂತಿಯಿಂದ ಬಸವಣ್ಣನವರು ಕೂಡಲಸಂಗಮಕ್ಕೆ ಹೋದುದು ಸರಿಯಷ್ಟೆ. ತನ್ನ ಕಾಲವು ಸಮೀಪಿಸುತ್ತಿದ್ದುದನ್ನು ಅರಿತ ಬಸವಣ್ಣನವರು ಕಲ್ಯಾಣದಿಂದ ಗಂಗಾಂಬಿಕೆಯನ್ನು ಕರೆತರಲು ಹಡಪದ ಅಪ್ಪಣ್ಣನನ್ನು ಕಳಿಸುವರು. ಆ ವೇಳೆಗಾಗಲೇ ಬಿಜ್ಜಳನ ಕೊಲೆಯಾಗಿತ್ತು. ಅದರಿಂದ ಕ್ರೋಧಗೊಂಡ ಬಿಜ್ಜಳನ ಮಗ ರಾಯಮುರಾರಿ ಶಿವಶರಣರನ್ನು ಸದೆಬಡಿಯಲು ಸಂಕಲ್ಪತೊಟ್ಟನು. ಅಸಂಖ್ಯಾತ ಶಿವಶರಣರು ಕಲ್ಯಾಣವನ್ನು ಬಿಟ್ಟು ಓಡಿಹೋದರು. ಪ್ರಾಣಭೀತಿಯಿಂದ ಕಂಗೆಟ್ಟು ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದ ಶಿವಶರಣರನ್ನೆಲ್ಲಾ ಒಟ್ಟಿಗೆ ಕೂಡಿಸಿ ಅವರಿಗೆ ಧೈರ್ಯವನ್ನೂ ಸ್ಥೈರ್ಯವನ್ನೂ ನೀಡಿ ಅವರನ್ನು ರಕ್ಷಿಸುವ ಹೊಣೆಗಾರಿಕೆ ಗಂಗಾಂಬಿಕೆಯ ಮೇಲೆ ಬೀಳುತ್ತದೆ. ಘನಲಿಂಗಿ ಮುನಿಗಳ ಅಪೇಕ್ಷೆಯಂತೆ ಆಕೆ ಈ ಜವಾಬ್ದಾರಿಯನ್ನು ವಹಿಸಿಕೊಂಡು ಚನ್ನಬಸವಣ್ಣ, ಮಡಿವಾಳ ಮಾಚಯ್ಯ ಇವರೊಡನೆ ಉಳವಿಗೆ ಹೊರಟಳು. ಆದರೆ ಮಾರ್ಗಮಧ್ಯೆ ಇವರನ್ನು ಅಟ್ಟಿಸಿಕೊಂಡು ಬಂದ ಸೈನ್ಯದೊಡನೆ ಕಾತರವಳ್ಳಿಯ ಬಳಿ ಹೋರಾಡಬೇಕಾಗುತ್ತದೆ. ಆ ಹೋರಾಟದಲ್ಲಿ ಆಕೆ ವೀರಸ್ವರ್ಗವನ್ನು ಪಡೆದಂತೆ ಪ್ರತೀತಿಯಿದೆ. ಕಾತರವಳ್ಳಿಯಿಂದ ಮೂರು-ನಾಲ್ಕು ಮೈಲು ದೂರದಲ್ಲಿರುವ ಮುಗುಟಖಾನಹುಬ್ಬಳ್ಳಿಯಲ್ಲಿ ಈಕೆಯ ಸಮಾಧಿಯೂ ಮಲಾಪಹಾರಿನದಿಯ ದಂಡೆಯಲ್ಲಿ ಈಕೆಯ ದೇವಸ್ಥಾನವೂ ಇವೆ. ಈಕೆಯ ಕೆಲವೇ ಕೆಲವು ವಚನಗಳು ದೊರೆತಿವೆ. ಅಷ್ಟರಿಂದಲೇ ಈಕೆ ಎಂತಹ ಶ್ರೇಷ್ಠ ಅನುಭಾವಿ ಎಂಬುದು ವ್ಯಕ್ತವಾಗುತ್ತದೆ. ಬಸವಣ್ಣನವರನ್ನು ಕುರಿತ ವಚನ:

ಸಾಂದ್ರವಾಗಿ ಹರಗಣಭಕ್ತಿಯ ಮಾಳ್ಪನೆಂತೋ
ಮಾದಲಾಂಬಿಕಾ ನಂದನನು ಸಾಂದ್ರವಾಗಿ
ಬಿಜ್ಜಳನರಮನೆಯ ನೋಳ್ಪನೆಂತೋ
ಮಾದರಸನ ಮೋಹದ ಮಗನು ಸಾಂದ್ರವಾಗಿ
ಲಿಂಗಾರ್ಚನೆ ಲಿಂಗತೃಪ್ತಿ ಅನುಗೈವನೆಂತೋ
ಗಂಗಾಪ್ರಿಯ ಕೂಡಲಸಂಗನಶರಣ ಚೆನ್ನ.

ಸಿದ್ಧರಾಮನನ್ನು ಕುರಿತ ವಚನ:

"ನೇತ್ರಮಧ್ಯ"ದಲ್ಲಿ ಸೂಸುವ ತ್ರಿನೇತ್ರರೂಪವೇ
ಸಿದ್ಧರಾಮಯ್ಯನಾದ
ಜಿಹ್ವೆಮಧ್ಯದಲ್ಲಿ ಸೂಸುವ ರುಚಿಯೇ
ಸಿದ್ಧರಾಮಯ್ಯನಾದ

ಪ್ರಾಣದಲ್ಲಿ ತುಂಬಿ ತುಳುಕುವ ಮೂರ್ತಿಯೇ
ಸಿದ್ಧರಾಮಯ್ಯನಾದ
ತ್ವಕ್ಕಿನಲ್ಲಿ ಅರಿವ ಮೂರ್ತಿಯೇ ಅಚ್ಚೊತ್ತಿದ
ಸಿದ್ಧರಾಮಯ್ಯನಾದ
ಇಂತಪ್ಪ ಪರಶಿವಮೂರ್ತಿ ಸಿದ್ಧರಾಮಯ್ಯನ
ಪಾದೋದಕವ ಕೊಂಡು ಪರವಸ್ತು ನಾನಾದೆ
ಗಂಗಾಪ್ರಿಯ ಕೂಡಲಸಂಗಮದೇವಾ.

ಇಷ್ಟಲಿಂಗದಲ್ಲಿಯೇ ಶಿವನು ಸಾಕ್ಷಾತ್ಕಾರವಾದುದನ್ನು ನಿರೂಪಿಸುವ ವಚನ-

ಇದೇನೋ ಮಿರಿ ತೋರುವ ಮೂರುತಿ ಪುಷ್ಪಗುಂಪಿನಲ್ಲಿ
ಕಾಣದೆ ಹೋಗಿದೆ
ಇದೇನೋ ಮಿರಿ ತೋರುವ ಮೂರುತಿ ಕರದಲ್ಲಿಯ
ಲಿಂಗದಂತೆ ಉಲುಹದ ನೆಲೆಯ ತೋರುತ್ತಿದೆ.
ಇಂತಪ್ಪ ಮೂರ್ತಿಯ ಕಂಡು ಗಂಗಾಪ್ರಿಯ ಕೂಡಲಸಂಗನ
ಶರಣನ ಸತಿ ಧನ್ಯಳಾದಳೋ ಚೆನ್ನಬಸವಣ್ಣ.

## ನೀಲಾಂಬಿಕೆ

ಈಕೆಗೆ ನೀಲಮ್ಮ, ನೀಲಲೋಚನೆ ಎಂಬ ಪರ್ಯಾಯನಾಮಗಳೂ ಕಂಡುಬರುತ್ತವೆ. ಹರಿಹರ ಈಕೆಯನ್ನು ಮಾಯಾದೇವಿ ಎಂದು ಕರೆದಿದ್ದಾನೆ. ಈಕೆ ಬಿಜ್ಜಳನ ಮಂತ್ರಿಯಾಗಿದ್ದ ಸಿದ್ಧರಸನ ಮಗಳು. ಈ ವೃದ್ಧಮಂತ್ರಿ ಸಿದ್ಧರಸನೂ ಬಿಜ್ಜಳನ ತಂದೆ ಪೆರ್ಮಾಡಿಯೂ ತುಂಬ ಸ್ನೇಹಿತರಾಗಿದ್ದರು. ಪೆರ್ಮಾಡಿ ಸಾಯುವ ಕಾಲದಲ್ಲಿ ತನ್ನ ಮಕ್ಕಳಾದ ಬಿಜ್ಜಳ ಮತ್ತು ಕರ್ಣದೇವರನ್ನು ಸಾಕುವ ಜವಾಬ್ದಾರಿಯನ್ನು ಸಿದ್ಧರಸನಿಗೆ ವಹಿಸಿದನು. ಅದರಂತೆ ಸಿದ್ಧರಸನು ತನ್ನ ಮಗಳು ನೀಲಾಂಬಿಕೆಯೊಡನೆ ಕರ್ಣದೇವ ಮತ್ತು ಬಿಜ್ಜಳರನ್ನೂ ಸಲಹುತ್ತಿದ್ದನು. ಸಿದ್ಧರಸ ಮತ್ತು ಆತನ ಪತ್ನಿ ಪದ್ಮಗಂಧಿ ಗತಿಸಿದ ಮೇಲೆ ನೀಲಾಂಬಿಕೆ ಬಿಜ್ಜಳನ ಪೋಷಣೆಯಲ್ಲೇ ನಿಲ್ಲುವಳು. ಆಕೆ ಸಾಹಿತ್ಯ, ಸಂಗೀತ ಮೊದಲಾದ ವಿದ್ಯೆಗಳಲ್ಲಿ ಪರಿಣತಳಾದಳು. ಬಸವಣ್ಣ ಬಿಜ್ಜಳನಲ್ಲಿ ಕರಣಿಕನಾದ ಮೇಲೆ ಆತನ ಅಪಾರ ಪಾಂಡಿತ್ಯ, ಶಕ್ತಿಸಾಮರ್ಥ್ಯ, ನಿಷ್ಠೆ, ಪ್ರಾಮಾಣಿಕತೆಗಳನ್ನು ಮನಗಂಡ ಬಿಜ್ಜಳ ನೀಲಲೋಚನೆಯನ್ನು ಆತನಿಗೆ ಮದುವೆ ಮಾಡಿಕೊಟ್ಟನೆಂದು ತಿಳಿದುಬರುತ್ತದೆ. ಸಿದ್ಧರಸನ ಆಸ್ತಿಗೂ ಬಸವೇಶ್ವರನೇ ಒಡೆಯನಾಗುವನು. ನೀಲಲೋಚನೆ ಪತಿಯ ಇಂಗಿತವನ್ನು ಅರಿತು ನಡೆಯುವ ಸಾಧ್ವೀಮಣಿಯಾಗಿದ್ದಳು. ಪ್ರತಿನಿತ್ಯ ಬಸವಣ್ಣನವರ ಮಹಾಮನೆಯಲ್ಲಿ ನಡೆಯುತ್ತಿದ್ದ ಒಂದುಲಕ್ಷ ತೊಂಬತ್ತಾರುಸಾವಿರ ಜಂಗಮರ ದಾಸೋಹ ಕಾರ್ಯವನ್ನು ತೃಪ್ತಿಕರವಾಗಿ ನಿರ್ವಹಿಸಿಕೊಂಡು ಬರುತ್ತಿದ್ದಳು. ಜೊತೆಗೆ ಪತಿಯ ಸಾನ್ನಿಧ್ಯದಿಂದ ಶ್ರೇಷ್ಠಅನುಭಾವಿಯಾದಳು. ಅದಕ್ಕೆ ಆಕೆಯ ವಚನಗಳೇ ಸಾಕ್ಷಿಯಾಗಿವೆ.

ಗಂಗಾಂಬಿಕೆಯದು ಒಂದು ತೆರನಾದರೆ ನೀಲಲೋಚನೆಯದೇ ಮತ್ತೊಂದು ತೆರ. ನೀಲಲೋಚನೆ ಕೆಲವಾರು ಸಂದರ್ಭಗಳಲ್ಲಿ ಆತ್ಮಪರೀಕ್ಷೆಗೆ ಒಳಗಾಗಬೇಕಾಗುತ್ತದೆ. ಒಮ್ಮೆ ಪರಶಿವನು ಕಳ್ಳನ ವೇಷದಲ್ಲಿ ಬಂದು ನೀಲಲೋಚನೆಯ ಆಭರಣಗಳನ್ನು ಅಪಹರಿಸುತ್ತಿದ್ದಾಗ ಎಚ್ಚೆತ್ತ ನೀಲಲೋಚನೆ ಚೀರಿಕೊಂಡಾಗ ನಡೆದ ಸಂಗತಿಯನ್ನು ಅರಿತ ಬಸವಣ್ಣ "ಅಯ್ಯೋ ನಮ್ಮಯ್ಯನ ಕೈನೊಂದೀತು. ತೆಗೆದು ಕೊಡಾ ಚಂಡಾಲಗಿತ್ತಿ, ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದೊಡೆ ಕೂಡಲಸಂಗನಲ್ಲದೆ ಮತ್ತಾರೂ ಅಲ್ಲ" ಎಂದು ಆಕೆಯನ್ನು ದಟ್ಟಿಸುವನು. ಬಸವಣ್ಣನವರ ಈ ಬೈಗುಳದ ನುಡಿಯನ್ನು ಕೇಳಿ ಕ್ರೋಧಗೊಳ್ಳದೆ, ವ್ಯಾಕುಲಗೊಳ್ಳದೆ ಪತಿಯ ಆಜ್ಞೆಯಂತೆ ನಡೆದುಕೊಳ್ಳುವಳು.

ನೀಲಲೋಚನೆಯ ಪತಿಭಕ್ತಿಗೆ ಮತ್ತೊಂದು ನಿದರ್ಶನವನ್ನು ನೋಡಬಹುದು. ಪರಶಿವನು ಬಸವಣ್ಣನವರನ್ನು ಪರೀಕ್ಷಿಸುವುದಕ್ಕಾಗಿ ವಿಟನಾಗಿ ಬಸವಣ್ಣನ ಮನೆಗೆ ಬರುವ ಪ್ರಕರಣ. ಹರಿಹರ ಈ ಪ್ರಕರಣವನ್ನು ಮನಮುಟ್ಟುವಂತೆ

ಚಿತ್ರಿಸಿದ್ದಾನೆ. ಅದು ಇಂತಿದೆ: "ಬಸವರಾಜನ ಮಹಾಮನೆಯ ಶಿವರಾತ್ರಿಯ ಸಂಭ್ರಮಕ್ಕೆ ಸಂತಸಂಬಡುತ್ತಂ ಬಂದು ನಿಂದಿರ್ದ ಶಿವನಂ ಷೋಡಶಹರೆಯದ ಕಮನೀಯನಂ ಜಂಗಮವೆಂಬುದನರಿದು ಬಸವಂ ಪುಳಕದೊಡನೆ ಭೋಂಕನೆದ್ದು ಕದವಂ ತೆಗೆದು ಪದತಳದೊಳು ಬಿದ್ದು ಕೊಂಡೊಯ್ದು ಸುಖಿ ಜಂಗಮವೆಂಬುದಂ ಮನದೊಳರಿದು ಕಣ್ಣೆವೆಯೊಳಿಕ್ಕಿ ಪಾದಮಂ ತೊಳೆದು ಕಮ್ಮೆಣ್ಣೆಯಂ ತಂದು ಮಜ್ಜನಂ ಮಾಡಿಸಿ ಅಮೃತಪ್ರಸಾದಮನಾರೋಗಣೆಗಿತ್ತು ಚಂದನ ದ್ರವ್ಯಾನುಲೇಪನಂಗಳಂ ಮಾಡಿ ಸುವರ್ಣಾಭರಣಂಗಳಿಂದಲಂಕರಿಸಿ ಪಚ್ಚ ಕರ್ಪೂರದ ವೀಳೆಯವನಿತ್ತು ಭಯಭಕ್ತಿಯಿಂ ಬೆಸಕೆಯ್ದು ನಿಯತನಾಗಿ ಕಣ್ತೀವಿ ನೋಡಿ ನಾಲಿಗೆ ತೀವಿ ಹಾಡಿ ಕಮಳಕುಟ್ಮಳದೊಳು ಬಾಳಹಂಸನನಿರಿಸುವಂತೆ ಸೆಜ್ಜೆಯ ಮನೆಯಂ ಮೃದುತರವಪ್ಪ ತಳ್ಪದ ಮೇಲೆ ಬಿಜಯಂಗೆಯ್ಸಲೊಡಂ ಬಸವರಾಜಂ ಸನ್ನಿಧಿಯೊಳು ನೀಚಾಸನದಿಂ ಪಾದಮಂ ಪಿಡಿದೊತ್ತುತ್ತಮಿರೆ ಬಸವ ಬಸವಾ ನಾವು ಹೆಂಗೂಸಿಲ್ಲದೆ ಇರ್ದುದಿಲ್ಲೆಂಬ ಮಾತಂಕೇಳ್ದು ದೇವ ದೇವ ನಿಮ್ಮ ಚಿತ್ತವನರಿಯದಂಜಿರ್ದೆಂ ಇದೊಂದರಿದಲ್ಲ ಎಂದು ಪರಿಚಾರಕರಂ ಪುರದೊಳಯಿಂಕೆ ಕಳಂಪಲವರಿವರೆನ್ನದೆ ಪಣ್ಯಾಂಗನೆಯರೆಲ್ಲಂ ಕೂಡಿ ದಂಪತಿಗಳಾಗಿರೆ ದೇವಾ ಎಲ್ಲಿಯುಂ ತೆರಹಿಲ್ಲ ಎಂದು ಬಿನ್ನೈಸಿ ಕೌತುಕಂಬಟ್ಟು ಅರಿದೆನರಿದೆಂತನ್ನ ಮಾಯವೆನ್ನಂ ಕೊಳುವುದೆ ಅದಕ್ಕೇನರಿಯಲಕ್ಕುಮೆನುತ್ತೆ ಸಿರಿಸರಸ್ವತಿಗಳಂ ಕೀಳ್ಮಾಡುವ ತನ್ನರಸಿ ಮಾಯಿದೇವರಂ ತಂದುಕೊಡುವೆಂ ಬಳಿಕ್ಕ ನೋಡಿಕೊಂಬೆನೆಂದು ನೋಡಿ ಮಾಯಿದೇವರನೊಲ್ಲೆರೆಂದರಾದಡೆ ಮೇಲೆ ಮಾಳ್ಪ ಕಜ್ಜಮಂ ಕಾಣವೇಳ್ವುದು ಒಲ್ಲೆನೆಂದ ವಸ್ತುವಂ ಸಂಗಂಗೆ ಕುಡಲಾಗದೆಂತು ಮಾಳ್ಪೆನೆನುತ... ಲಿಂಗಪತಿ ಶರಣಸತಿಯೆಂಬೀ ಮಾತಂ ದಿಟಮಾಡಿ ತೋರ್ಪೆಂ ಮಾಯಿದೇವರನೊಲ್ಲೆವೆಂದ ಬಳಿಕ್ಕ ಎಂದು ಬಸವರಾಜಂ ಶರಣಜನ ಲೀಲಾಶೀಲಂ ಮನದೊಳುಜ್ಜುಗಂಗೆಯ್ವುತ್ತಿರಲು. ಅತ್ತಲಾ ಮಾಯಿದೇವಿಯರು ಊರೊಳಗೆ ಪಣ್ಯಾಂಗನೆಯರಿಲ್ಲದಿರ್ದಡೆನ್ನಂ ಜಂಗಮಕ್ಕೆ ಬಸವರಾಜಂ ಕೊಟ್ಟಲ್ಲದೆ ಮಾಣನೆಂದು ಸಿಂಗರಿಸಿಕೊಂಡು ಬಸವನ ಬರವಂ ಪಾರ್ದಿಪ್ಪ ಸಮಯದೊಳು ಬಸವಂ ಬರಲಿದಿರ್ವಂದು ನಡೆ ಬಸವ ನಿನ್ನ ಮನೋರಥಮಂ ಮಾಡಿದಪೆನೆಂಬ ಸತಿಯಂ ನೋಡಿ ಸಂತೋಷದಿಂ ಶಿವನ ಸುಖವನೊಡಗೊಂಡು ಬಪ್ಪಂತೆ ತಂದು ಸೆಜ್ಜೆಯ ಮನೆಯಂ ಪೊಗಿಸಿ ಮುಚ್ಚುಳನಿಕ್ಕಿಕೊಂಡು ಬಸವಂ ಪೊರವಾಗಿಲೊಳಿರೆ ಮಾಯಿದೇವಿಯರು ದೇವನ ತೊಡೆಯಂ ಹೊಯ್ದೆಬ್ಬಿಸಿ ದೇವನ ಪುಸಿ ಮುಸುಕನೊಯ್ಯನೋಸರಿಸೆ ಮಾಯೆಯ ಜವನಿಕೆಯ ತೆಗೆದಂತೆ ದೇವನ ಚೋಹವಳಿದು ದಶಭುಜಂ ಪಂಚವದನ ತ್ರಿಣೇತ್ರನಾಗಿರೆ ಮಾಯಿದೇವರು ನೋಡಲಮ್ಮದೆ ನಡನಡ ನಡುಗಿ ಬಸವ ಬಸವಾ ಜಂಗಮ ದೇವರು ಸಂಗಮ ದೇವರಾದರೆನೆ ತಾಯೆ ತಾಯೆ ಮುನ್ನವಾರೆಂದು ಕೊಟ್ಟೆನೆಂದು ನುಡಿವಲ್ಲಿಂ ಮುನ್ನವೆ ಸಂಗಮೇಶ್ವರಂ ಬಸವನ ಚಿತ್ತಮಂ ಪರೀಕ್ಷಿಸಲಾರದೆ ಸೋಲ್ತು ಬೇಗದಿಂದಂತರ್ಧಾನಕ್ಕೆ ಸಂದುದಂ ಮಾಯಿದೇವರು ಕಂಡು ಕದವಂ ತೆಗೆದು ಬಸವರಾಜಂಗೆ ಪೇಳೆ" ಈ ಪ್ರಕರಣದಿಂದ ನೀಲಾಂಬಿಕೆ ಎಂತಹ ಪತಿಕಾರ್ಯದುರಂಧರೆ ಎಂಬುದು ವ್ಯಕ್ತವಾಗುತ್ತದೆ.

ನೀಲಲೋಚನೆಗೆ ಬಾಲಸಂಗಯ್ಯನೆಂಬ ಮಗನಿದ್ದಂತೆ ತಿಳಿದುಬರುತ್ತದೆ. ಆತನು ಬಾಲ್ಯದಲ್ಲಿಯೇ ತೀರಿಕೊಂಡಂತೆಯೂ ಕಂಡುಬರುತ್ತದೆ. ಆಕೆಯ ಮುಂದಿನ ವಚನ ಅದನ್ನೇ ಪ್ರತಿಧ್ವನಿಸುವಂತಿದೆ.

ಆಗಿಂಗೆ ಮುಯ್ಯಾನದಿರು ಚೇಗಿಂಗೆ ಬೆಂಬಳದಿರು
ಆಹಾ ಮನವೇ ಸಂತೈಸಿಕೋ ನಿನ್ನ ನೀನೆ
ಆಗೆಂದಡೆ ನಿನ್ನ ವಶವಲ್ಲ ಹೋಗೆಂದಡೆ ನಿನ್ನಿಚ್ಛೆಯಲ್ಲ
ಭೋಗಾದಿಭೋಗಂಗಳೆಲ್ಲವು ಸಂಗಯ್ಯನಧೀನವಾಗಿದೆ.

ಕಲ್ಯಾಣದಲ್ಲಿ ನಡೆದ ಹಿಂಸಾಕಾರ್ಯಗಳಿಂದ ಮನನೊಂದು ಕೂಡಲಸಂಗಮಕ್ಕೆ ಹೋದ ಬಸವಣ್ಣ ನೀಲಲೋಚನೆಯನ್ನು ತನ್ನಲ್ಲಿಗೆ ಕರೆತರುವಂತೆ ಹಡಪದ ಅಪ್ಪಣ್ಣನನ್ನು ಕಳಿಸಿದಾಗ ಆಕೆ ಹೇಳಿರುವ ಮಾತುಗಳು ಲೋಕಪ್ರಸಿದ್ಧವಾಗಿವೆ.

ನೋಡು ನೋಡು ನೋಡು ಲಿಂಗವೇ
ನೋಡು ಬಸವಯ್ಯನಾಟವಾ
ಅಲ್ಲಿಗೆ ಎನ್ನನು ಬರಹೇಳಿದರಂತೆ
ಇಲ್ಲಿ ತಾವಿಲ್ಲವೇ ಸಂಗಯ್ಯನು
ಅಲ್ಲಿ ಇಲ್ಲಿ ಎಂಬ ಉಭಯ ಸಂದೇಹವು
ಬಲ್ಲ ಮಹಾತ್ಮರಿಂಗಿದು ಗುಣವೇ?

ಸಹಧರ್ಮಿಣಿಯಾದ ತನಗೂ ತಿಳಿಸದೆ ಕಲ್ಯಾಣದಿಂದ ಬಸವಣ್ಣ ನಿರ್ಗಮಿಸಿದುದಕ್ಕಾಗಿ ಪರಿತಪಿಸುತ್ತಾಳೆ. ಈ ಸಂದರ್ಭದಲ್ಲಿ ಆಕೆ ಹಾಡಿರುವ ವಚನಗಳು ಇಂತಿವೆ:

ಇಪ್ಪೆಯ ಹುವ್ವನನುಗೊಳಿಸಲು ಇಪ್ಪೆ ಹಿಪ್ಪೆಯಾಯ್ತು
ಸರ್ಪನ ಶಿರಕಂಠದಲ್ಲಿ ಮೂಗುತಿಯ ಸರಗೊಳಿಸಿದೆನಯ್ಯಾ
ನಾವಿಲ್ಲಿದ್ದರೇನು ನಾವಲ್ಲಿದ್ದರೇನು?
ನಮ್ಮ ನಿಮ್ಮ ಸಂಸರ್ಗದಲ್ಲಿ ನಿರುಪಮಾಕಾರಮೂರ್ತಿಗಳಾಗಿ
ನಿರವಯವನ್ನೈದಿ ನಿಜಸುಖಿಯಾದೆನು
ಬಸವನಲ್ಲಿ ಎಮಗೆ ತೆರಹಿಲ್ಲವಯ್ಯ ಅಪ್ಪಣ್ಣ
ಭಾವಶೂನ್ಯಳು ನಾನು ಸಂಗಯ್ಯ

ನಾನಾರ ಸಾರುವೆನೆಂದು ಚಿಂತಿಸಲೇಕಯ್ಯ
ನಾನಾರ ಹೊಂದುವೆನೆಂದು ಭ್ರಮೆಪಡಲೇಕಯ್ಯ
ನಾನಾರ ಇರವನರಿಯನೆಂದು ಪ್ರಳಾಪಿಸಲೇಕಯ್ಯ
ಪರಿಣಾಮಮೂರ್ತಿ ಬಸವನ ರೂಪು ಕರಸ್ಥಳದಲ್ಲಿ ಬೆಳಗಿದ ಬಳಿಕ
ಸಂಗಯ್ಯನ ಹಂಗು ನಮಗೇತಕೆ ಅಪ್ಪಣ್ಣಾ

ಕಾಮಿತ ಸುಖವ ಕಂಗೊಳಿಸಿದ ಗುರುವೆ
ಕಲ್ಪಿತವ ನಷ್ಟಮಾಡಿದ ಗುರುವೆ
ಎತ್ತಡಲಡಗಿದೆಯಯ್ಯ
ಸುಖ ದುಃಖವನೊಂದು ರೂಪವ ಮಾಡಿದ ಗುರುವೆ
ಎತ್ತಲಡಗಿದೆಯಯ್ಯ ಸಂಗಯ್ಯನ ಗುರು ಬಸವಾ

ಮಧ್ಯದಲ್ಲಿ ಕಲ್ಪಿತ ನಾಸ್ತಿಯಾಯಿತ್ತೇ ಬಸವ
ಪ್ರಾಣಪ್ರಸಾದದಲ್ಲಿ ಅಡಗಿತ್ತೇ ಬಸವ
ಭಕ್ತಿ ಬಯಲಾಯಿತ್ತೇ ಬಸವ ಭಾವ ನಿರ್ಭಾವವಾಯಿತ್ತೇ ಬಸವ
ಕಲ್ಪಿತಗುಣ ನಷ್ಟವಾಯಿತ್ತೇ ಬಸವ
ಮನೋಮುಕ್ತಿಯಾಯಿತ್ತೇ ಸಂಗಯ್ಯನ ಗುರು ಬಸವಾ

ಎನಗಿನ್ನೇನು ಎನ್ನಯ್ಯನೈಕ್ಯವನೈದಿದ ಬಳಿಕ
ಎನಗೆ ಕಾಮವಿಲ್ಲ ಎನಗೆ ಪ್ರಾಣವಿಲ್ಲ
ಎನಗೆ ಹೃದಯದ ಹಂಗು ಹರಿದು
ಪರಿಣಾಮ ಪ್ರಸಾದಿಯಾದೆನಯ್ಯ ಸಂಗಯ್ಯ

ನೀಲಾಂಬಿಕೆ ಶ್ರೇಷ್ಠಅನುಭಾವಿ. ಆಕೆಯ ವಚನಗಳು ಆಧ್ಯಾತ್ಮಿಕತತ್ತ್ವಗಳಿಂದ ಪರಿಪ್ಲುತವಾಗಿವೆ. ಕೆಲವು ವಚನಗಳು ಒಗಟುಗಳಂತೆಯೂ ಇವೆ. ನೀಲಾಂಬಿಕೆ ತನ್ನ ಇಷ್ಟಲಿಂಗದಲ್ಲಿಯೇ ಐಕ್ಯವಾದಂತೆ ಮುಂದಿನ ವಚನ ವ್ಯಕ್ತಪಡಿಸುತ್ತದೆ.

ಮಡದಿ ಎನಲಾಗದು ಬಸವಂಗೆ ಎನ್ನನು
ಪುರುಷನೆನಲಾಗದು ಬಸವನ ಎನಗೆ
ಉಭಯಕುಲವ ಹರಿದು ಬಸವಂಗೆ ಶಿಶುವಾನಾದೆನು
ಬಸವನೆನ್ನ ಶಿಶುವಾದನು
ಪ್ರಮಥರು ಪುರಾತರು ಸಾಕ್ಷಿಯಾಗಿ ಸಂಗಯ್ಯನಿಕ್ಕಿದ
ದಿವ್ಯವ ಮೀರದೆ ಬಸವನೊಳಗಾನಡಗಿದೆ
ಎಲೆ ಅಯ್ಯ ಕರಸ್ಥಲ ಬಯಲಾಯಿತ್ತು
ಎನಗೆ ಕರಸ್ಥಲ ಮನಸ್ಥಲವಾಯಿತ್ತು
ಸಂಗಯ್ಯ ಬಸವ ಹೋದನತ್ತ ನಾನಡಗಿದೆನಯ್ಯ ನಿನ್ನತ್ತ

ನೀಲಲೋಚನೆ ವಚನಗಳನ್ನು ಮಾತ್ರವಲ್ಲದೇ 'ಪ್ರಸಾದ ಸಂಪಾದನೆ', 'ಕಾಲಜ್ಞಾನ'ಗಳನ್ನು ಬರೆದಂತೆ ತಿಳಿದುಬರುತ್ತದೆ. ಈಕೆಯ ಪ್ರಭಾವ ತರುವಾಯದ ಶರಣ-ಶರಣೆಯರ ಮೇಲೆ ಸಾಕಷ್ಟು ಆಗಿದೆ. ಈಕೆಯನ್ನು ಕುರಿತು ರಚಿತವಾಗಿರುವ ಸಾಹಿತ್ಯರಾಶಿಯೇ ಇದಕ್ಕೆ ಸಾಕ್ಷಿಯಾಗಿದೆ. ಇದಕ್ಕೆ ನಿದರ್ಶನವಾಗಿ ಒಂದು ಪದ್ಯವನ್ನು ನೋಡಬಹುದು.

ಜಯ ನೀಲಲೋಚನೆ ಚಿದಾನಂದಮಯರೂಪೆ
ಜಯ ನೀಲಲೋಚನೆ ಸದಮಳಚಿದ್ರೂಪೆ
ಜಯ ನೀಲಲೋಚನೆ ಸದಾತುಂಗೆ
ಶುದ್ಧಾಂಗೆ ಜಯಧೀರೆ ದುರಿತದೂರೆ
ಜಯ ನೀಲಲೋಚನೆ ಸದಾಚಾರ ಸಂಚಾರೆ
ಜಯ ನೀಲಲೋಚನೆ ಮಹಾಮಂತ್ರ ವಿಸ್ತಾರೆ
ಜಯ ನೀಲಲೋಚನೆ ಜರಾಜನ್ಮಸಂಹಾರೆ
ಜಯ ಜಯ ನಮಸ್ತೇ ನಮೋ ॥

ಲೋಕಹಿತಾರ್ಥವಾಗಿ ಬಸವಣ್ಣನವರು ಕೈಕೊಂಡ ಕಾರ್ಯಗಳು ಜಯಪ್ರದವಾಗಿ ನೆರವೇರಿಮದು ಆತನ ಧರ್ಮಪತ್ನಿಯರಾದ ಗಂಗಾಂಬಿಕೆ, ನೀಲಾಂಬಿಕೆಯರಿಂದ ಎಂದರೆ ಅತಿಶಯೋಕ್ತಿಯಾಗಲಾರದು. ಭಾರತದ ಸ್ತ್ರೀಯರ ಧರ್ಮನೀತಿ ಅನುಭಾವ ಸಂಸ್ಕೃತಿಯೇ ಮುಂತಾದ ಸದ್ಗುಣಗಳಿಗೆ ಇವರು ಆದರ್ಶ ಪ್ರತೀಕದಂತಿದ್ದಾರೆ.



# ಉದ್ಭಟದೇವ

ಈತನು ಒಬ್ಬ ನೂತನ ಶಿವಶರಣ. ಶಿವಶರಣರಲ್ಲಿ ಪುರಾತನರು ನೂತನರು ಎಂಬ ಎರಡು ಪ್ರಭೇದಗಳಿವೆ. ಈ ಹೆಸರಿನಿಂದಲೇ ಸೂಚಿತವಾಗುವಂತೆ ಈ ಪುರಾತನರು ನೂತನರಿಗಿಂತ ಪ್ರಾಚೀನರು. ಆದರೆ ಇವರು ನೂತನರಿಗಿಂತ ಎಷ್ಟು ಕಾಲ ಹಿಂದಿದ್ದರು ಎಂಬುದನ್ನು ಖಚಿತವಾಗಿ ನಿರ್ಧರಿಸುವುದು ಬಹುಶಃ ಕಷ್ಟಸಾಧ್ಯವಾದುದು. ಈ ಪುರಾತನ ಮತ್ತು ನೂತನ ಶಿವಭಕ್ತರ ಚರಿತ್ರೆಯನ್ನು ಕಾವ್ಯರೂಪದಲ್ಲಿ ಪ್ರಪ್ರಥಮವಾಗಿ ನಿರೂಪಿಸಿದವನು ಭಕ್ತ ಮಹಾಕವಿ, ರಸಿಕಚಕ್ರಿ ಹರಿಹರದೇವ.

ಪ್ರಸ್ತುತ ಉದ್ಭಟದೇವ ಪುರಾತನರಲ್ಲಿ ಪರಿಗಣಿತನಾಗಿಲ್ಲ. ಆದುದರಿಂದ ಈತನು ನೂತನ ಶಿವಭಕ್ತ. ಈ ಭಕ್ತಶಿರೋಮಣಿಯ ಬಗ್ಗೆ (೧) ಹರಿಹರನ (ಕ್ರಿ.ಶ. ೧೧೬೫) 'ಉದ್ಭಟದೇವರಗಳೆ'; (೨) ಸೋಮರಾಜನ (ಕ್ರಿ.ಶ. ೧೨೨೨) 'ಉದ್ಭಟಕಾವ್ಯ'; (೩) ಬಸವಾಂಕನ (ಕ್ರಿ.ಶ. ೧೫೫೦) 'ಉದ್ಭಟದೇವ ಚರಿತೆ'. ಈ ಕಾವ್ಯಗಳು ಹುಟ್ಟಿಕೊಂಡಿವೆ. ಇವೇ ಅಲ್ಲದೆ ಶಿವಶರಣರ ಕಥೆಗಳನ್ನು ಬಿತ್ತರಿಸುವ ಎಲ್ಲ ವೀರಶೈವ ಪುರಾಣಗಳಲ್ಲಿಯೂ, ಕಾವ್ಯಗಳಲ್ಲಿಯೂ ಸಾಮಾನ್ಯವಾಗಿ ಉದ್ಭಟನ ಕಥೆ ಬಂದೇ ಬರುತ್ತದೆ. ಇವುಗಳಲ್ಲಿ ಸೋಮರಾಜನ ಉದ್ಭಟಕಾವ್ಯದ ಹೊರತು ಉಳಿದೆಲ್ಲ ಕಾವ್ಯಗಳಲ್ಲಿಯೂ ಕಥೆಯಲ್ಲಿ ಮಾತ್ರ ಏಕರೂಪತೆ ಇದೆ. ಕ್ರಿ.ಶ. ೧೬೭೨ ರಲ್ಲಿದ್ದ ಶಾಂತಲಿಂಗದೇಶಿಕ ವಿರಚಿತ ಭೈರವೇಶ್ವರನ ಕಾವ್ಯದ ಕಥಾಸೂತ್ರರತ್ನಾಕರದಲ್ಲಿನ ಉದ್ಭಟನಕಥೆ, ಹರಿಹರ ಮತ್ತು ಬಸವಾಂಕನ ಕಾವ್ಯಗಳಲ್ಲಿನ ಪದಗಳನ್ನೇ ಪಾದಗಳನ್ನೇ ತಾನು ಉಪಯೋಗಿಸಿಕೊಂಡಿದ್ದಾನೆ. ಆದುದರಿಂದ ಆ ಕಥೆಯನ್ನು ಇಲ್ಲಿ ಉಲ್ಲೇಖಿಸಿದೆ.

"ಗುರ್ಜರದೇಶದ ಮಂಗಳಪುರಿಯೆಂಬ ಪಟ್ಟಣದಲ್ಲಿ ಕುಮಾರಪಾಲಗುರ್ಜರ ಉದ್ಭಟದೇವನೆಂಬುಭಯನಾಮ ದಿಂದೊಪ್ಪುತ್ತಿರಲು, ಆತನ ಸತಿ ಮಂಗಳಾಂಬಿಕೆಯು ತಾನು ರಾಜ್ಯವಾಳುತ್ತ ಶಿವಭಕ್ತಿಯುಕ್ತರಾಗಿ ಕರಣಂಗಳು ಶಿವನುಪಕರಣಂಗಳಾಗಿ ಇಂದ್ರಿಯಂಗಳೆ ಪರಿಚಾರಕರಾಗಿ ಹೃದಯಕಮಲವೆ ಸಜ್ಜೆಯಾಗಿ ನಿರ್ಮಲಮನವೆ ಕುಸುಮವಾಗಿ ಪ್ರಾಣವೆ ಶಿವಲಿಂಗವಾಗಿ ಪರಿಣಾಮವೆ ಅಮೃತ ನೈವೇದ್ಯವಾಗಿ ಇಂತು ಶಿವಪೂಜೆಯ ಹಗಲಿರುಳು ಮಾಡುತ್ತಿರೆ, ನೋಟಮಾಟವೆಲ್ಲ ಶಿವನೊಳು ಕೂಡಿ, ಕೂಟ ಬೇಟವೆಲ್ಲ ಶಿವನೊಳು ಬೆಱೆದು, ಮಾಡಿದುದೆಲ್ಲ ಪೂಜೆ, ಆಡಿದುದೆಲ್ಲ ಸ್ತುತಿ, ನೆನೆದುದೆಲ್ಲ ಶಿವಧ್ಯಾನ, ತನುಕ್ರೀ ಈಶ್ವರನೊಳಡಗಿ, ಭಕ್ತಿಮೂರ್ತಿ ತಾನಾಗಿ, ಶಿವಭಕ್ತಿ ಸಾಮರ್ಥ್ಯಯುಕ್ತನಾಗಿ, ಶಿವನಲ್ಲಿ ಸಮರಸವುಳ್ಳಾತನಾಗಿರುತ್ತುಂ, ಉದ್ಭಟದೇವನು ತನ್ನ ಮನೋವಲ್ಲಭೆಯೆನಿಪ್ಪ ಸತಿಯುಂ ತಾನುಂ ಸಂತಸದೊಳಿರುತಿರುತಿರ್ದು, ನೆತ್ತವಾಡುತ್ತಂ, ಶಿವತತ್ತ್ವವಂ ಗಣಿಸುತ್ತುಂ, ಆಡುತಾಡುತಂ ಉದ್ಭಟದೇವಂ ನಸುನಗಲು, ಸತಿ ಕಂಡು ಸೆಡೆದಳು, ಸುಯ್ದಳು, ಮನದೊಳು ಮುನಿವುತ್ತುಂ ಕರಗಿ ಕಂದುತ್ತಂ ಮನವಿಳಿದು ಲೆತ್ತದ ಹಾಸಂಗಿಯನಂತಿರಿಸಿ ಲಜ್ಜೆ ನಾಚಿಕೆಯುಂ ಮೊಳೆವುತ್ತಿರೆ ಇಂತೆಂದಳು. ನೆತ್ತವನಾಡುವುದು ಭಕ್ತನೀತಿಯಲ್ಲವೊ, ಸತ್ತಸಾರಿಯೆ ಬಂದಿತ್ತೆಂದೊ, ನೆತ್ತವ ಹಾಕುತ್ತ ತಪ್ಪಿದೆನೆಂದೊ, ಏತಱಲ್ಲಿ ಕುಂದ ಕಂಡು ನೀವು ನಗುತ್ತಿದ್ದಿರಿ? ಎನೆ, ಕಮಲಮುಖಿ ನಿನ್ನ ಕಾರಣವಲ್ಲ, ನಮ್ಮ ಶರಣರ ಕಾರಣ ನಗೆ ಬಂದಿತ್ತೆನಲು, ಸೌರಾಷ್ಟ್ರದಲ್ಲಿರ್ದೋಹಿಲ ದೇವನು ಘೋರತಪವನಾಚರಿಸಿ, ತನ್ನ

ತನುಧೂಪವಂ ಶಿವಂಗಿತ್ತು ಶಿವನನೊಲಿಸಿ ತಾನೊಬ್ಬನೇ ದೇಶಿಕನಂತೆ ಪೋಗುತ್ತಿರ್ದ ಶಿವಪುರಿಗೆ, ಘಂಟೆಯೊಳು ನಾಲಗೆ ಬಿದ್ದುದನಱಿಯದೆ ನಂಟರು ನಲ್ಲರು ನೋಡುತ್ತಿರಲು, ಪೋಗುವುದೇನರಿದು. ಕೆಲವೂರ್ಗಳಿಲ್ಲವೆ? ಜನರನಿನಿಬರನೊಯ್ಯಲಿಲ್ಲವೆ? ಎನುತ ಮತ್ತೆ ನಗಲು, ಸತಿಯನಿತಱೊಳೆ ಸುದೂರದೊಳಾವ ಹವಣಿನೊಳೋಹಿಲದೇವ ಪೋಗುತಿರ್ದಪಮಧೀಶಾ ತೋಱು ಎನಲು, ಆಕಾಶದೊಳು ಕೈಘಂಟೆವಿಡಿದು ಶಿವಭಾವದೊಳು ಪೋಗುತ್ತಿರ್ದಪನದೆ ಎನಲು, ಸತಿ ಕಂಡು ಸಾಷ್ಟಾಂಗವೆಱಗಿ ಪತಿಗೆಂದಳು. ಒಲಿದಡೆ ಕೊಂಡಾಡಿ, ಅಲ್ಲದಡೆ ಸುಮ್ಮನಿರಿ. ಆತ ಯೋಗಿ, ನೀವು ಭೋಗಿ, ಜಱಿವರೆ ಆತ ಸುರಲೋಕದ ತಪಸಿ, ನೀ ನರಲೋಕದರಸು, ನೀ ಕಾಮಿ ಆತ ನಿಷ್ಕಾಮಿ, ಜಱೆಯಲೇನುಕಾರಣವೆನಲು, ಗುರ್ಜರದೇವ ನಗಲು, ವನಿತೆಯೆಂದಳು. ನಗುತ ಜಱಿವ ಶಿವೈಕ್ಯ ನೀಱ ಹೋಗದೆಯಿರೆಯಲಾ ಎನಲು, ಶಿವೈಕ್ಯರಿಗೆ ಹರಲೋಕವೇನು? ನರಲೋಕವೇನು? ಭಕ್ತಿಯ ಮರ್ಮವ ನೀನೆತ್ತಬಲ್ಲೆ? ಅಬಲೆ ಎನಲು, ನಾನಱಿಯೆ ನೀವಱಿವಂ ಗಡಾ! ಎಂದು ಏಸುದಿವಸಕ್ಕೆ ಎನಿಬರಂ ಕೊಂಡೊಯ್ದಪೆಯೆನೆ, ಇಂದು ಈಗಳೆ ಈ ತೆಱದೊಳೆ ಈ ನಾಡಮಂದಿ ಈ ಪುರವಂ ಕೊಂಡೊಯ್ದಪೆಂ. ಇಂದುಮುಖಿ ನೀ ನೋಡೆನುತ ಗುರ್ಜರದೇವನೆನೆ, ಕೊಂಡೊಯ್ವೆಂ ಕೊಂಡೊಯ್ವೆನೆಂಬ ನುಡಿಯನೆ ಕೇಳ್ದೆಂ ಕಂಡಱಿಯೆನೆನೆ ಉದ್ಭಟನ ನುಡಿಬೇಱೆ ನಡೆಬೇಱೆಯೆ? ನಾಳಿನ ಸೋಮವಾರ ಕೈಲಾಸಕ್ಕೆ ಪಯಣವೆಂದು ಸುತ್ತಲೈಗಾವುದಕ್ಕೆ ಡಂಗುರವಂ ಸಾಱಿಸಿ ನಾಡನೆಲ್ಲಾ ಬರಿಸಿ ಪಾಪಿನಿಷ್ಪಾಪಿಗಳು ದುರಿತಭವರೋಗದಿ ನೊಂದವರು ಬಂದಿರಲು, ಕಂಡುಕೇಳ್ದವರೆಲ್ಲ ಮಂಗಳಪುರಕ್ಕೆ ಬಂದು ನೆರೆದಿರಲು, ಸತಿ ಸಂಭ್ರಮಿಸುತ್ತೆಂದಳು. ಕೊಂಡೊಯ್ದಡೆ ಕೈಲಾಸದಲ್ಲಿಪ್ಪೆನು. ಇಲ್ಲದೊಡೆ ಭಕ್ತರೊಳು ಹಂಗಿಸುವೆನು ಎನುತ ಸತಿ ಬಂದು ನುಡಿದಳು. ವಾರಬಂದುದು, ಪುರಜನ ನೆರೆದುದು ಇನ್ನೆಂದು ನೀಂ ಪೋಗುವುದು ಎನಲು, ಗೂರ್ಜರದೇವಂ ಲಿಂಗಾರ್ಚನೆಯಂ ಮಾಡುತ್ತಂ ಮೃಡನ ಜಡೆಮುಡಿಗೊಂದು ಪದ್ಯವನೆಸಗಲು ಪುರವೆದ್ದುದ ಪುರಜನವಱಿಯರು. ಧರೆಯ ಜನರು ಕೊಂಡಾಡುತ್ತಿರಲು, ಆ ಪುರವೆ ಹಱುಗೋಲಾಗಿ ಆಕಾಶವೇ ಭವಶರಧಿಯಾಗಿ ಗುರ್ಜರದೇವನೇ ಅಂಬಿಗನಾಗಿ ಪುರಜನವಂ ದಾಂಟಿಸಿ ಮುಕ್ತಿರಾಜ್ಯಕ್ಕೆ ಪೋದಂತಿರಲು, ಹರನ ಜಡೆಯಿಂದಂಘ್ರಿಪರಿಯಂತರ ನೂಱುಪದ್ಯದಿಂದೆ ವರ್ಣಿಸಲು, ಅನಿತಕ್ಕೆ ಪುರ ಬಂದು ಕೈಲಾಸದೊಳಗಿರಲು, ಬಂದುದ ಸತಿ ತಿಳಿಯದೆ ಮಧ್ಯಾಹ್ನವಾಯ್ತು ನಿನ್ನ ಭಾಷೆ ಘಾಸಿಯಾಯಿತೆನೆ, ನಗುತ ಮೇಲೆ ನೋಡಬಲೆಯೆನಲು, ನೋಡುವಲ್ಲಿ ಕೋಟಿಸೂರ್ಯಚಂದ್ರಾಗ್ನಿಪ್ರಕಾಶವನು ಶಿವನೊಡ್ಡೋಲಗದಿಂದೊಪ್ಪುವ ರಜತಾಚಲವಂ ಕಂಡು ಕಣ್ಮುಚ್ಚಿ ನೋಡಲಮ್ಮದೆ ಬೆಚ್ಚುತ್ತಂ ಗುರ್ಜರದೇವಂಗೆಱಗಲು, ಸತಿಪತಿಗಳು ಶಿವಂಗೆಱಗುತ್ತಿರೆ ಶಿವನೆತ್ತಿ ಕೊಂಡಾಡಿ ನಂದೀಶಾದಿ ಪ್ರಮಥರ್ಗೆ ತೋಱಿ ಗಣತಿಂಥಿಣಿಯ ಸಂತೋಷದೊಳಿರಿಸಿದಂ ಶಿವನು.*

ಮೇಲಿನ ಕಥೆಯಿಂದ ಈತನು ಗುರ್ಜರಾಧಿಪತಿಯಾಗಿದ್ದನೆಂದೂ, ಈತನಿಗೆ ಕುಮಾರ ಪಾಲಗುರ್ಜರ, ಉದ್ಭಟದೇವ ಎಂಬ ಹೆಸರುಗಳಿದ್ದಂತೆಯೂ ವ್ಯಕ್ತವಾಗುತ್ತದೆ. ಅದೂ ಅಲ್ಲದೆ ಈತನಿಗೆ ಕುಮಾರಪಾಲ, ಪಾಲಗುರ್ಜರ, ಉದ್ಭಟ ಮೊದಲಾದ ಪರ್ಯಾಯನಾಮಗಳಿದ್ದುವೆಂದು ಹರಿಹರ, ಸೋಮರಾಜ, ಭೀಮಕವಿ, ಷಡಕ್ಷರದೇವ ಮುಂತಾದವರ ಕಾವ್ಯಗಳಿಂದ ತಿಳಿದುಬರುತ್ತದೆ. ಈ ಉದ್ಭಟನು ಗುರ್ಜರದೇಶದ ರಾಜನಾಗಿದ್ದನೆಂದು ಎಲ್ಲ ಕಾವ್ಯಗಳಲ್ಲೂ ಉಕ್ತವಾಗಿದೆ. ಆದರೆ ಈ ರಾಜ ಎಲ್ಲಿ ಯಾವ ಕಾಲದಲ್ಲಿದ್ದನೆಂಬುದರ ಬಗ್ಗೆ ಹೆಚ್ಚಿನ ಸಂಶೋಧನೆಗಳು ನಡೆಯಬೇಕಾಗಿವೆ.

## ಉದ್ಭಟ ಯಾರು?

ಉದ್ಭಟನ ಕಥೆಯನ್ನು ಮೊಟ್ಟಮೊದಲು ಕನ್ನಡದಲ್ಲಿ ಬರೆದವನು ಭಕ್ತಕವಿ ಹರಿಹರ. ಈತನ ಈ 'ಉದ್ಭಟದೇವರ ರಗಳೆ'ಗೆ ಮೂಲ ಯಾವುದು ಎಂಬುದು ತಿಳಿಯದು. ಆದರೆ ಹರಿಹರನಿಗಿಂತ ಕೆಲವು ವರ್ಷಗಳು ಹಿಂದೆ ಈ ಹೆಸರಿನ

* ಭೈರವೇಶ್ವರನ ಕಾವ್ಯದ ಕಥಾಸೂತ್ರರತ್ನಾಕರ, ಪು. ೧-೪೭-೪೯

ರಾಜ ಗುರ್ಜರದೇಶವನ್ನು ಆಳುತ್ತಿದ್ದಂತೆಯೂ, ಆತನು ಪರಮಶಿವಭಕ್ತನಾಗಿದ್ದಂತೆಯೂ ಮತ್ತು ನೆತ್ತದ ಆಟದಲ್ಲಿ ಪ್ರವೀಣನಾಗಿದ್ದಂತೆಯೂ ಚರಿತ್ರೆ ಮತ್ತು ಶಾಸನಗಳಿಂದ ತಿಳಿದುಬರುತ್ತದೆ. ಈ ವಿಷಯವನ್ನು ಸೋಮರಾಜನ ಉದ್ಭಟಕಾವ್ಯದ ಪೀಠಿಕೆಯಲ್ಲಿ ಹೀಗೆ ಹೇಳಿದ್ದಾರೆ:

"'ಈ ಕುಮಾರಪಾಲ ಮಹಾರಾಜನು ಚಾಳುಕ್ಯ ವಂಶದವನು. ಮೂಲರಾಜ. ಚಾಮುಂಡರಾಜ, ವಲ್ಲಭರಾಜ, ದುರ್ಲಭರಾಜ, ಭೀಮದೇವ, ಕರ್ಣದೇವ ಇವರುಗಳು ರಾಜ್ಯವನ್ನಾಳಿದ ಬಳಿಕ ಸಿದ್ಧರಾಜನೆಂಬ ಮಹಾರಾಜನು ರಾಜ್ಯವನ್ನಾಳಿದನು. ಈತನಿಗೆ ಜಯಸಿಂಹನೆಂದೂ ಬೇರೆ ಹೆಸರಿತ್ತು. ಈತನ ಮಗನೇ ಈ ಗ್ರಂಥ ಪ್ರತಿಪಾದ್ಯನಾದ ಕುಮಾರಪಾಲಾಭಿಧ ಉದ್ಭಟದೇವನು. ಈತನು ಶೈವನಾಗಿದ್ದನು. ಈ ವಿಷಯವನ್ನು ಜೈನರು ಮತ್ತು ಚರಿತ್ರಶೋಧಕರಾದ ಇತರರೂ ಒಪ್ಪುವರು ಮತ್ತು ಕಾವ್ಯಮಾಲೆಯ ೩೪ನೆಯ ಸಂಪುಟದ ಪ್ರಾಚೀನ ಲೇಖಮಾಲೆಯ ಒಂದನೆಯ ಭಾಗದಲ್ಲಿ ಮುದ್ರಿತವಾದ ವಿಕ್ರಮಶಕ ೧೨೦೮ (ಕ್ರಿ.ಶ. ೧೧೫೧)ರಲ್ಲಿ ಬರೆದ ಕುಮಾರಪಾಲಕಾರಿತಪ್ರಕಾರ ಪ್ರಶಸ್ತಿಯ ಶಾಸನದಲ್ಲಿರುವ ವಾಕ್ಯಗಳಿಂದಲೂ ಮತ್ತು ೧೯೧೧-೧೯೧೨ನೆಯ ವರ್ಷದ ಎಫಿಗ್ರಾಫಿಕಾ IXನೆಯ ವಾಲ್ಯೂಮ್ ೪೪, ೪೫ನೆಯ ಪುಟಗಳಲ್ಲಿ ಮುದ್ರಿತವಾದ ೧೨೦೮ ವಿಕ್ರಮವರ್ಷದಲ್ಲಿ ಬರೆದ ಜೋಧಪುರ ಸಂಸ್ಥಾನದ ಕಿರಾಡುಯೆಂಬ ಸ್ಥಳದಲ್ಲಿರುವ ಶಾಸನ ವಾಕ್ಯಗಳಿಂದಲೂ ಈ ಮಹಾರಾಜನು ಶೈವನೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಈ ಕಾರಣಗಳಿಂದ ಈ ಮಹಾರಾಜನು ಕೆಲವು ಕಾಲ ಶೈವನಾಗಿದ್ದನೆಂದು ಹೇಳುವುದಕ್ಕೆ ಆವುದೊಂದು ಪ್ರತಿಬಂಧಕವೂ ಇರುವುದಿಲ್ಲ.

ಈ ಕುಮಾರಪಾಲನು ರಾಜ್ಯದಲ್ಲಿ ಪಟ್ಟಾಭಿಷಿಕ್ತನಾದದ್ದು ಕ್ರಿ.ಶ. ೧೧೪೧. ಅಂದರೆ ವಿಕ್ರಮಶಕ ೧೧೯೯ ಯೆಂದು ಚರಿತ್ರ ಲೇಖಕರು ಬರೆಯುತ್ತಾರೆ. ಈತನಿಗೆ ಶೌರ್ಯಧೈರ್ಯ ಔದಾರ್ಯ ಯುದ್ಧಾಸಕ್ತಿ ಇವೇ ಮೊದಲಾದವುಗಳು ಇದ್ದುವೆಂದು ಪ್ರಾಕಾರಪ್ರಶಸ್ತಿಯ ಶಾಸನ ವಾಕ್ಯಗಳಿಂದ ಗೊತ್ತಾಗುತ್ತದೆ. ಮತ್ತು ಹಿಂದೆ ಉದಾಹರಿಸಿದ ಶಾಸನಗಳೂ ಈತನು ಜೈನನಾಗಿದ್ದನೆಂದು ಸ್ಪಷ್ಟಪಡಿಸುವುವು. ಆದ್ದರಿಂದ ಈ ಕುಮಾರಪಾಲನು ರಾಜ್ಯಭಾರಕ್ಕೆ ಬಂದ ಬಳಿಕ ಕೆಲವು ವರ್ಷಗಳು ಶೈವನಾಗಿದ್ದನೆಂದೂ ಬಳಿಕ ಹೇಮಚಂದ್ರಾಚಾರ್ಯರಿಂದ ಉಪದಿಷ್ಟನಾಗಿ ಜೈನಮತವನ್ನಾಶ್ರಯಿಸಿದನೆಂದೂ ನಿಷ್ಕೃಷ್ಟವಾಗಿ ಹೇಳಬಹುದು.

ಹಾಗಾದರೆ ವೀರಶೈವ ಕವಿಗಳು ವರ್ಣಿಸುವಂತೆ ಶಿವನನ್ನಾರಾಧಿಸಿ ಕಡೆಗೆ ತನ್ನ ನಗರವನ್ನೇ ತೆಗೆದುಕೊಂಡು ಕೈಲಾಸವನ್ನು ಕುರಿತು ಹೋದನೆಂದು ಬರೆದಿರುವುದು ಹೇಗೆ ಸಂಭವಿಸುತ್ತದೆಯೆಂದು ಕೇಳಬಹುದು. ಈ ಮಹಾರಾಜನು ಬಹುದಾಕ್ಷಿಣ್ಯಪರ, ವಿಚಾರಶೀಲ, ದಯಾವಂತ. ವಿಚಾರದಲ್ಲಿ ಯಾವ ವಿಷಯವು ಯುಕ್ತವೆಂದು ಏರ್ಪಡುವುದೋ ಅದನ್ನುಪೇಕ್ಷಿಸುತ್ತಿರಲಿಲ್ಲ. ಹೀಗಿರುವಾಗ ಮಹಾರಾಜನು ಜೈನನಾಗಿದ್ದರೂ ಆತನ ಹೆಂಡತಿಗೆ ಮಾತ್ರ ಪೂರ್ವದಿಂದ ಬಂದ ಮತವನ್ನು ಬಿಡುವುದು ಇಷ್ಟವಿದ್ದಿಲ್ಲ. ಆಗಾಗ ಗಂಡನಿಗೂ ಸಮಯದಲ್ಲಿ ಇದು ಸರಿಯಲ್ಲವೆಂದು ತಿಳಿಸುತ್ತಿದ್ದಳು. ಆಕೆ ವಿದ್ಯಾವತಿ, ಅಭಿಜ್ಞಳು, ಉಪಾಯಜ್ಞಳು. ಹೇಗಾದರೂ ಮಾಡಿ ತನ್ನ ಗಂಡನನ್ನು ಪೂರ್ವದ ಮತವನ್ನೇ ಆಶ್ರಯಿಸುವಂತೆ ಮಾಡಬೇಕೆಂದು ಸಮಯವನ್ನು ನಿರೀಕ್ಷಿಸುತ್ತಿದ್ದಳು. ಹೀಗಿರುವಾಗ ಒಂದಾನೊಂದು ದಿನ ರಾಜಸೌಧದಲ್ಲಿ ನಿಂತು "ಕಿಂಕರೋಮಿ, ಕ್ವ ಗಚ್ಛಾಮಿ, ಕೋ ವೇದಾನುದ್ಧರಿಷ್ಯತಿ" ಎಂದು ಹೇಳುತ್ತಿದ್ದಳು. ಇದು ಕಿವಿಯಿಂದ ಕಿವಿಗೆ ಬಿದ್ದು ವೇದಪ್ರಬೋಧನೆಂಬ ಭಟ್ಟಾಚಾರ್ಯನ ಕಿವಿಗೆ ಬಿತ್ತು. ಬಳಿಕ ಈ ಭಟ್ಟಾಚಾರ್ಯನು "ಮಾವಿಷೀದ ವರಾರೋಹೇ ಭಟ್ಟಾಚಾರ್ಯೋಸ್ತಿ ಭೂತಲೇ" ಎಂದು ಬರೆದು ಕಳುಹಿಸಿದನು. ಬಳಿಕ ಮಹಾರಾಜನಿಗೆ ಆಕೆಯೇ ಉಪದೇಶವನ್ನು ಮಾಡಿ ಒಂದು ದೊಡ್ಡ ಸಭೆಯನ್ನು ಹರಡುವಂತೆ ಮಾಡಿದಳು. ಅಲ್ಲಿ ಅನೇಕ ಜೈನಾಚಾರ್ಯರೂ ಇತರರೂ ಈ ವೇದಪ್ರಬೋಧಾಚಾರ್ಯನೂ ಒಟ್ಟುಗೂಡಿದರು. ಕೆಲವುದಿನ ಆಗ್ರಹವಿಲ್ಲದೆ ವಿಚಾರ ನಡೆದು ಕಡೆಗೆ ಜೈನಾಚಾರ್ಯರು ಹೇಳಿದ ಸಮಾಧಾನವು ಹೃದ್ಯವಾಗದೇ ಹೋಯಿತು. ಬಳಿಕ ಶೈವಮತವನ್ನೇ ಅವಲಂಬಿಸಿದನು. ಈ ವಿಷಯವು ಸಂಪ್ರದಾಯಪ್ರದೀಪವೆಂಬ ಗ್ರಂಥದಲ್ಲಿ ಹೇಳಲ್ಪಟ್ಟಿದೆ.

ಆದುದರಿಂದ ಕೆಲವು ಕಾಲ ಜೈನಮತವನ್ನವಲಂಬಿಸಿದ್ದರೂ ಕಡೆಗೆ ಶೈವನಾದ್ದರಿಂದ ವೀರಶೈವ ಕವಿಗಳು ಈ ವಿಷಯದಲ್ಲಿ ಬರೆಯುವ ಮಹಾತ್ಮೆಯು ಏಕೆ ಯುಕ್ತವಿರಬಾರದು? ಆದುದರಿಂದ ವೀರಶೈವರು ಬರೆಯುವ ಉದ್ಭಟನು ಘೂರ್ಜರ ದೇಶಾಧಿಪತಿಯಾದ ಕುಮಾರಪಾಲನಿದ್ದರೂ ಇರಬಹುದೆಂದೂ ತೋರುತ್ತದೆ."

ಈ ಮೇಲಿನ ಆಧಾರಗಳಿಂದ ಹರಿಹರನಿಗಿಂತ ಮುಂಚೆ ಶಿವಭಕ್ತನಾದ ಒಬ್ಬ ಉದ್ಭಟ ಇದ್ದಿರಬೇಕು. ಆತನು ಘೂರ್ಜರಾಧಿಪತಿಯೂ ಆಗಿದ್ದಿರಬೇಕು. ಇಂತಹ ಶಿವಭಕ್ತನಾದ ಘೂರ್ಜರಾಧಿಪತಿಯ ಕಥೆಯನ್ನೇ ಹರಿಹರನು ಮನಮುಟ್ಟುವಂತೆ ಬಣ್ಣಿಸಿದ್ದಾನೆ.

## ಉದ್ಭಟನ ಕಥೆಯನ್ನು ನಿರೂಪಿಸುವ ಕಾವ್ಯಗಳು

೧. ಹರಿಹರನ 'ಉದ್ಭಟದೇವರ ಮಹಾತ್ಮೆ'. ಇದು ರಗಳೆ ಛಂದಸ್ಸಿನಲ್ಲಿದೆ. ಸಮಗ್ರ ಕಥೆಯನ್ನು ಕವಿ ೧೯೨ ಸಾಲುಗಳಲ್ಲಿ ಹೃದಯಂಗಮವಾಗಿ ವರ್ಣಿಸಿದ್ದಾನೆ. ಈತನ ಕಥೆಯನ್ನು ಆಧಾರವಾಗಿಟ್ಟುಕೊಂಡೇ ತರುವಾಯದ ಕವಿಗಳು ತಮ್ಮ ಕಾವ್ಯಗಳನ್ನು ರಚಿಸಿದ್ದಾರೆ. ಕವಿ ಆವುದೊಂದು ಅನವಶ್ಯವಾದ ವರ್ಣನೆಗಳಿಗೂ ಕೈಹಾಕದೆ ನೇರವಾಗಿ ಕಥೆಯನ್ನೇ ಹೇಳಿದ್ದಾನೆ.

೨. ಸೋಮರಾಜನ 'ಉದ್ಭಟ ಕಾವ್ಯ'. ಇದು ಚಂಪೂಕಾವ್ಯ. ಹನ್ನೆರಡು ಆಶ್ವಾಸಗಳಲ್ಲಿ ಕವಿ ಕಾವ್ಯವನ್ನು ಮುಗಿಸಿದ್ದಾನೆ. ಈ ಕಾವ್ಯಕ್ಕೆ 'ಶೃಂಗಾರಸಾರ' ಎಂಬ ಪರ್ಯಾಯನಾಮವೂ ಉಂಟು. ತನ್ನ ಕಾವ್ಯಕ್ಕೆ ಹರಿಹರನ ರಗಳೆಯನ್ನೇ ಮೂಲವಾಗಿಟ್ಟುಕೊಂಡಿದ್ದಾನೆ. ಈತನು ಸಂಪ್ರದಾಯ ಶರಣ. ಈತನ ಕಾವ್ಯದಲ್ಲಿ ಹರಿಹರನ ಉದ್ಭಟ ರಗಳೆಯಲ್ಲಿಲ್ಲದ ಕೆಲವು ಸ್ವಾರಸ್ಯ ಪ್ರಸಂಗಗಳಿವೆ. ಉದ್ಭಟ ಕಾವ್ಯದಲ್ಲಿನ ಶುಕಸಂಭಾಷಣ, ಚಿದಂಗದ ಚರಿತ್ರೆ, ನಿಘರ್ಜಾಸುರ ಸಂಹಾರ ಮೊದಲಾದುವು ಆತನ ಸ್ವಂತಕಲ್ಪನೆಯೆಂದೇ ತೋರುತ್ತದೆ. ಅದೂ ಅಲ್ಲದೆ ಸೌಂದರ್ಯವತಿಯು ಮದುವೆಗೆ ಮೊದಲು ಉಪವನದಲ್ಲಿದ್ದು ಉದ್ಭಟಾಂಕನಾದ ಕುಮಾರಪಾಲನನ್ನು ಮೋಹಿಸುವುದು ಈ ರಾಜನು ಆಕೆಯನ್ನು ನೋಡಿ ಮರುಳಾಗಿ ತಾಪಪಡುವುದು ಇವನ್ನೆಲ್ಲಾ ಕೇವಲ ರಸಪುಷ್ಟಿಗೋಸ್ಕರ ಸೋಮರಾಜನು ಕಲ್ಪಿಸಿ ಕೊಂಡಿದ್ದಾನೆ. ಈ ಸ್ವಾರಸ್ಯ ಪ್ರಸಂಗಗಳು ಉದ್ಭಟನ ಕಥೆಯನ್ನು ನಿರೂಪಿಸಿರುವ ಮತ್ತಾವ ಗ್ರಂಥಗಳಲ್ಲೂ ಕಂಡುಬರುವುದಿಲ್ಲ.

೩. ಬಸವಾಂಕನ 'ಉದ್ಭಟದೇವ ಚರಿತೆ'. ಈ ಕಾವ್ಯ ಪರಿವರ್ಧಿನಿ, ವಾರ್ಧಕ ಮತ್ತು ಉದ್ದಂಡ ಷಟ್ಪದಿಗಳಲ್ಲಿ ವಿರಚಿತವಾಗಿದೆ. ಇದು ಒಂದು ವರ್ಣಕ ಕಾವ್ಯ. ಉದ್ಭಟನ ಕಥೆ ಅತ್ಯಂತ ಚಿಕ್ಕದಾದರೂ ಪ್ರಾಚೀನ ಸಂಪ್ರದಾಯದಂತೆ ಕವಿ ಮಾಡಿದ್ದಾನೆ. ಈತನು ಮಹಾಸಮರ್ಥನಾದ ಕವಿ. ಈತನಿಗೆ ಸಂಸ್ಕೃತ ಕನ್ನಡ ಭಾಷೆಗಳೆರಡರಲ್ಲೂ ಅದ್ವಿತೀಯವಾದ ಪಾಂಡಿತ್ಯವಿದ್ದಂತೆ ಕಂಡುಬರುತ್ತದೆ. ಈತನ ಪಾಂಡಿತ್ಯದ ಹೊನಲಿನಲ್ಲಿ ಕೆಲವೆಡೆ ಅಸಂಘಟಿತ ಸಮಾಸಗಳೂ ಮೈತಾಳಿ ಮೆರೆಯುತ್ತಿವೆ. ಬಸವಾಂಕನು ಪ್ರಾಸಪ್ರಿಯ. ಈತನ ಶೈಲಿ ಪ್ರೌಢವಾಗಿದೆ; ಬಂಧವು ಲಲಿತವಾಗಿದೆ.

ಮೇಲಿನ ಕಾವ್ಯಗಳೇ ಅಲ್ಲದೆ ಹರಿಹರನ ತರುವಾಯದ ಎಲ್ಲ ವೀರಶೈವಪುರಾಣಗಳಲ್ಲಿಯೂ ಉದ್ಭಟನ ಕಥೆ ಬರುತ್ತದೆ. ವೀರಶೈವರಿಗೆ ಶಿವಶರಣರ ಚರಿತ್ರೆ ಪರಮಪೂಜ್ಯವಾದುದು. ತ್ರಿಕಾಲಜ್ಞಾನಿಯೂ, ಉಜ್ವಲ ಶಿವಭಕ್ತಿಯಿಂದ ಇಡೀ ನಗರವನ್ನೇ ಕೈಲಾಸಕ್ಕೆ ಒಯ್ದವನೂ ಆದ ಉದ್ಭಟನ ಕಥೆಯನ್ನು ಅದರ ಮೈ ಇನಿತೂ ಕೆಡದಂತೆ ನಿರ್ವಹಿಸಿ ಸಾಮರ್ಥ್ಯದಿಂದ ನಡೆಸಿಕೊಂಡು ಹೋಗುವುದೂ ಒಂದು ಪುಣ್ಯವಿಶೇಷವೇ. ಈ ದೃಷ್ಟಿಯಿಂದ ಮೇಲಿನ ಕವಿಗಳೆಲ್ಲ ಕೃತಕೃತ್ಯರಾಗಿದ್ದಾರೆ. ಅವರ ಕಾವ್ಯಗಳನ್ನು ವ್ಯಾಸಂಗಮಾಡಿ ನಾವು ಸಾರ್ಥಕತೆಯನ್ನು ಪಡೆದುಕೊಳ್ಳಬೇಕಾಗಿದೆ.

---

ಉದ್ಭಟ ಕಾವ್ಯಂ, ಪೀಠಿಕೆ XVII-XIX

ವೀರಶೈವ ಸಾಹಿತ್ಯದಲ್ಲಿ ಉದ್ಭಟದೇವನು ಚಿರಪರಿಚಿತನು. ಹರೀಶ್ವರ, ಸೋಮರಾಜ, ಬಸವಾಂಕರಂತಹ ಕವಿಗಳು ಈತನ ಬಗ್ಗೆ ಕಾವ್ಯ ಕಟ್ಟಿ ಹಾಡಿದ್ದಾರೆ. ಕನ್ನಡ, ತೆಲುಗು ಮೊದಲಾದ ಭಾಷೆಗಳಲ್ಲಿ ಕಾವ್ಯಗಳನ್ನು ಬರೆದವರೆಲ್ಲರೂ ಈತನ ಹೆಸರನ್ನು ಸ್ಮರಿಸಿದ್ದಾರೆ. ಇವನು ನೂತನ ಶರಣರಲ್ಲಿ ಪರಿಗಣಿತನಾಗುತ್ತಾನೆ. ಹರಿಹರನು ಗಿರಿಜಾಕಲ್ಯಾಣದ ಪೀಠಿಕೆಯಲ್ಲಿ "ಉದ್ಭಟಯ್ಯನ ಗಭೀರತೆ" ಎಂದೂ, ರಾಘವಾಂಕನು ಹರಿಶ್ಚಂದ್ರ ಕಾವ್ಯದ ಮೊದಲಲ್ಲಿ "ಮನವಚನ ಕಾಯದೊಳಗೊಮ್ಮೆಯುಂ ಫಾಲಲೋಚನನಲ್ಲದೆ ಅನ್ಯರಂ ಪೊಗಳದುದ್ಭಟಯ್ಯನ" ಎಂದೂ ಸ್ಮರಿಸಿದ್ದಾರೆ. ಮೇಲಿನ ಕತೆಯಲ್ಲಿ ಕೂಡ "ಶಿವನ ಜಡೆಮುಡಿಗೊಂದು ಪದ್ಯವನೆಸಗಲು" ಎಂದು ಹೇಳಿದೆ. ಆದುದರಿಂದ ಈತನು ಶರಣನೇ ಅಲ್ಲದೆ ಕವಿಯೂ ಆಗಿದ್ದಿರಬಹುದೆ ಎಂಬ ಪ್ರಶ್ನೆ ನಮ್ಮ ಮುಂದೆ ನಿಲ್ಲುತ್ತದೆ.

ಸಂಸ್ಕೃತದಲ್ಲಿ ಕಾವ್ಯಪ್ರಕಾಶವನ್ನು ಬರೆದು ಪ್ರಸಿದ್ಧನಾದ ಮಮ್ಮಟನಿಗೆ 'ಉದ್ಭಟ' ಎಂಬ ತಮ್ಮನೊಬ್ಬನುಂಟು. ಇವನು ವಾಜಸೇನೆಯ ಸಂಹಿತೆಗೆ ಭಾಷ್ಯವನ್ನು ಬರೆದಿದ್ದಾನೆ. ಆದುದರಿಂದ ಕಥಾನಾಯಕ ಉದ್ಭಟದೇವ, ಹರಿಹರ, ರಾಘವಾಂಕರಿಂದ ಸ್ತುತಿಸಲ್ಪಟ್ಟಿರುವ ಸಂಸ್ಕೃತ ಕವಿ ಉದ್ಭಟಯ್ಯ, ಈ ಭಾಷ್ಯಕಾರ ಹೀಗೆ ಮೂರು ಮಂದಿ ಉದ್ಭಟರು ಪ್ರಸಿದ್ಧರಾಗಿದ್ದಾರೆ. ಪ್ರಾಚೀನ ವೀರಶೈವಕವಿಗಳ ಹೊಗಳಿಕೆಗೆ ಪಾತ್ರನಾದವನು ಸಂಸ್ಕೃತದ ಉದ್ಭಟಕವಿ. ಕಾಶ್ಮೀರ ದೇಶದವನು; ಶಿವಭಕ್ತ. ಹಾಗೆಯೇ "ಬಾಣೋದ್ಭಟ ಮಳೆಯ ರಾಜರು" ಎಂಬಲ್ಲಿಯೂ ಈತನ ಹೆಸರಿದೆ. ಮತ್ತೊಬ್ಬ ಉದ್ಭಟ ಸಂಸ್ಕೃತದ ಆಲಂಕಾರಿಕ. ಈತನು ಕುಮಾರ ಸಂಭವ ಕಾವ್ಯವನ್ನು ಬರೆದಿರುವಂತೆ ತಿಳಿಯುತ್ತದೆ. ಬಹುಶಃ ೮ನೇ ಶತಮಾನಕ್ಕೆ ಹಿಂದೆ ಇವನು ಇದ್ದಿರಬಹುದು.

ಪ್ರಸ್ತುತ ಕುಮಾರಪಾಲ ಘೂರ್ಜರನೆಂಬ ಹೆಸರಿನ ದೊರೆ ಗುಜರಾತಿನವನು. ಇವನು ಮೊದಲು ಶೈವನಾಗಿದ್ದನು. ಜೈನಾಚಾರ್ಯ ಹೇಮಚಂದ್ರನ ಉಪದೇಶದಿಂದ ಜೈನಮತವನ್ನು ಸ್ವೀಕರಿಸಿದನು. ಇವನು ಪಗಡೆಯಾಟದಲ್ಲಿ ತುಂಬ ನಿಪುಣನು. ಇವನಿಗೆ ಉದ್ಭಟನೆಂಬ ಬೇರೆ ಹೆಸರೂ ಇದ್ದಂತೆ ಕಾಣುತ್ತದೆ. ಈ ದೊರೆ ಚಾಲುಕ್ಯ ಜಯಸಿಂಹ ರಾಜನ (ಕ್ರಿ.ಶ. ೧೦೯೪–೧೧೪೩) ಅನಂತರ ಪಟ್ಟಕ್ಕೆ ಬಂದನು. ಕ್ರಿ.ಶ. ೧೧೫೯ರಲ್ಲಿ ಇವನು ಜೈನಮತವನ್ನು ಸ್ವೀಕರಿಸಿದನು. ಹರಿಹರನ 'ಉದ್ಭಟದೇವ ರಗಳೆ' ಸೋಮರಾಜನ 'ಉದ್ಭಟಕಾವ್ಯ' ಬಸವಾಂಕನ 'ಉದ್ಭಟದೇವ ಚರಿತೆ' ಇವುಗಳ ಕಥಾನಾಯಕ ಈ ದೊರೆಯೇ ಇರಬಹುದು. ಈತನು ಶೈವನಾಗಿದ್ದುದು ಮತ್ತು ಪಗಡೆಯಾಟದಲ್ಲಿ ಪ್ರವೀಣನಾಗಿದ್ದುದು ಇವೆರಡು ಮುಖ್ಯಾಂಶಗಳು ಮೇಲಿನ ಆಧಾರಕ್ಕೆ ಪರಿಪೋಷಕವಾಗಿವೆ. –ಸಂ.

---

**Ref** : Life of Hemachandra, by Buhler.
History of Gujarat, by K.M. Munshi

■

# ಕಂಠೀರವನರಸರಾಜ ವಿಜಯ

**ಕಂ**ಠೀರವ ನರಸರಾಜ ವಿಜಯವನ್ನು ಬರೆದ ಕವಿ ಗೋವಿಂದವೈದ್ಯ. ಈತನ ತಂದೆ ಶ್ರೀನಿವಾಸ ಪಂಡಿತ. ಈತನ ವಾಸಸ್ಥಳ ಶ್ರೀರಂಗಪಟ್ಟಣವೆಂದು ತಿಳಿದುಬರುತ್ತದೆ. ತನ್ನ ಕಾವ್ಯವನ್ನು ಶಾಲಿವಾಹನ ಶಕ ೧೫೭೦ರಲ್ಲಿ ಎಂದರೆ ಕ್ರಿ.ಶ. ೧೬೪೮ರಲ್ಲಿ ಬರೆದಂತೆ ಹೇಳಿಕೊಂಡಿದ್ದಾನೆ. ಕಂಠೀರವ ನರಸರಾಜ ವಿಜಯವನ್ನು ನರಸರಾಜರ ದಳವಾಯಿಯಾಗಿದ್ದ ನಂಜರಾಜೇಂದ್ರರ ಪ್ರೇರಣೆಯಿಂದ ರಚಿಸಿ ಭಾರತಿನಂಜ ಎಂಬುವನಿಂದ ರಾಜಾಸ್ಥಾನದಲ್ಲಿ ಓದಿಸಿದಂತೆ ಈ ಕಾವ್ಯದಿಂದ ಗೊತ್ತಾಗುತ್ತದೆ.

ಗೋವಿಂದವೈದ್ಯನು ವೇದಾಧ್ಯಯನವನ್ನೂ ಮಂತ್ರಶಾಸ್ತ್ರವನ್ನೂ ಕಾವ್ಯ ನಾಟಕಾಲಂಕಾರಗಳನ್ನೂ ಬಲ್ಲವನಾಗಿದ್ದನು. ಈತನಿಗೆ ಸಂಸ್ಕೃತ ಕನ್ನಡ ಭಾಷೆಗಳೆರಡರಲ್ಲೂ ಸಾಕಷ್ಟು ಪರಿಶ್ರಮವಿದ್ದಿತು. ಕಂಠೀರವ ನರಸರಾಜ ವಿಜಯವನ್ನು ಕನ್ನಡ ಹಾಡುಗಬ್ಬಗಳಲ್ಲೊಂದಾದ ಸಾಂಗತ್ಯದಲ್ಲಿ ರಚಿಸಿದ್ದಾನೆ.

ಮೈಸೂರು ರಾಜರಲ್ಲಿ ಸುಪ್ರಸಿದ್ಧರಾದ ಶ್ರೀಮತ್ ಕಂಠೀರವನರಸರಾಜ ಮಹಾರಾಜರ ಚರಿತ್ರೆಯು ಈ ಕಾವ್ಯದಲ್ಲಿ ನಿರೂಪಿಸಲ್ಪಟ್ಟಿದೆ. ಕವಿ ತನ್ನ ಕೃತಿಯಲ್ಲಿ ನರಸ್ತುತಿಯನ್ನು ಮಾಡಿದ್ದರೂ ಅದನ್ನು ಯಾರೂ ತೆಗಳಕೂಡದೆಂದು:

ದೇವತಾಸ್ತುತಿಯಲ್ಲ ಕೇಳ್ವೊಡೆ ನರಸ್ತುತಿ
ಯಾವ ವೆಗ್ಗಳವೆನಬೇಡ
ನಾ ವಿಷ್ಣುಃ ಪೃಥಿವೀಪತಿಯೆಂದು ವೇ
ದಾವಳಿಗಳು ಸಾರುತಿವೆಕೊ

ಹೀಗೆ ಹೇಳಿ ಸಮರ್ಥನೆ ಮಾಡಿಕೊಂಡಿದ್ದಾನೆ. ಅಲ್ಲದೆ ಅಂದಿನ ನರಸಿಂಹನೇ ದನುಜಸಂಹರಣಾರ್ಥವಾಗಿ ಕಂಠೀರವ ನರಸರಾಜನಾಗಿ ಜನ್ಮತಾಳಿದನೆಂಬುದನ್ನು:

ಇನಿತಲ್ಲದಂದಿನ ನರಸಿಂಹ ಕಲಿಯುಗ
ದನುಜರ ಸಂಹರಿಸುವೊಡೆ
ಮನುಜವತಾರದೆ ಬಂದರಸನ ಕಥೆ
ವಿನುತ ವಿಜಯ ಕೇಳ್ದರಿಗೆ

ಎಂದು ಹೇಳಿಕೊಂಡು ತನ್ನ ಕಥಾನಾಯಕನನ್ನು ಕುರಿತು:

ಈ ಮಹಿಮನ ಸುಚರಿತ್ರ ಶೌರ್ಯಗಳ ಸು
ತ್ರಾಮ ಭೋಗವ ಧರ್ಮದಿರವ
ನೇಮದೆ ಮಾಂಗಲ್ಯ ಕೃತಿಯಾಗೆ ಪೇಳ್ವೆನು
ಪ್ರೇಮದೆ ಕೇಳ್ವುದುತ್ತಮರು
ಬಿರುದೆಂತೆಂಬರಗಂಡ ಭೀಮಪರಾಕ್ರಮಿ
ಧುರಧೀರನೇಕಾಂಗವೀರ

ನೆರೆ ಕರ್ಣಾಟಕ ಚಕ್ರೇಶ ನರಸಭೂ
ವರನ ಚರಿತೆಯ ಪೇಳುವೆನು

ಈ ರೀತಿ ಹೇಳಿ ಕಾವ್ಯವನ್ನು ಪ್ರಾರಂಭಿಸಿದ್ದಾನೆ. ಇದರಲ್ಲಿ ಹದಿನಾರು ಸಂಧಿಗಳಿವೆ. ಪ್ರತಿ ಸಂಧಿಯೂ:

ಇದು ಸೋಮವಂಶವಾರಿಧಿ ಪೂರ್ಣಚಂದ್ರನ
ಚದುರ ಕಂಠೀರವೇಶ್ವರನ
ಪುದಿದ ಪ್ರತಾಪ ಸಂಪದದೇಳಿಗೆಯ ಸಂಧಿ
ಮುದದ ಸುಧರ್ಮಾನುಬಂಧಿ

ಎಂಬ ಪದ್ಯದಿಂದ ಕೊನೆಗೊಳ್ಳುತ್ತದೆ.

ಕಂಠೀರವನರಸರಾಜ ವಿಜಯ ಒಂದು ಚಾರಿತ್ರಿಕ ಗ್ರಂಥ. ಇದರಲ್ಲಿ ಕಂಠೀರವನರಸರಾಜನ ದಿಗ್ವಿಜಯ ಪರಂಪರೆಯೇ ವರ್ಣಿತವಾಗಿದೆ. ಆದುದರಿಂದ ಇದು ಒಂದು ವೀರರಸ ಪ್ರಧಾನವಾದ ಕಾವ್ಯ. ಇಲ್ಲಿ ಬರುವ ಯುದ್ಧಗಳ ವರ್ಣನೆ ಅತ್ಯಂತ ಸಹಜವಾಗಿದೆ. ಕಣ್ಣಿಗೆ ಕಟ್ಟುವಂತಿದೆ; ಮನಸ್ಸಿಗೆ ಮುಟ್ಟುವಂತಿದೆ. ವೀರರಸಕ್ಕೆ ಸಂಬಂಧಿಸಿದ ಕೆಲವುಭಾಗಗಳನ್ನು ಈಗ ನೋಡೋಣ:

ಕಂಠೀರವನರಸರಾಜನು ರಾಜ್ಯವಾಳುತ್ತಿದ್ದಾಗ ಒಮ್ಮೆ ಇಕ್ಕೇರಿಯ ವೀರಭದ್ರನಾಯಕನಿಗೂ ಕೆಂಗಮನ್ನೆಯನಾದ ಹನುಮಪ್ಪನಾಯಕನಿಗೂ ತಮ್ಮ ರಾಜ್ಯದ ಎಲ್ಲೆಕಟ್ಟಿನ ವಿಷಯವಾಗಿ ಮನಸ್ತಾಪವುಂಟಾಯಿತು. ವೀರಭದ್ರನಾಯಕನು ತನಗಿಂತ ಸಾಮರ್ಥ್ಯವಂತನೆಂಬುದನ್ನು ಅರಿತುಕೊಂಡ ಹನುಮಪ್ಪನಾಯಕ ತನ್ನ ಸಹಾಯಕ್ಕಾಗಿ ಬಿಜಾಪುರದ ಸುಲ್ತಾನನಲ್ಲಿಗೆ ದೂತನನ್ನು ಅಟ್ಟಿದನು. ಆತನಿಗೆ ಹಣದ ಆಸೆಯನ್ನು ತೋರಿಸಿ ಅವನ ಸೈನ್ಯವನ್ನು ತನ್ನ ಸಹಾಯಕ್ಕಾಗಿ ಬರಮಾಡಿಕೊಂಡನು. ಆ ಸೈನ್ಯದ ಮುಖಂಡ ರಣಧೂಳಿಖಾನ ಇಕ್ಕೇರಿಯನ್ನು ಮುತ್ತಲು:

ಇಕ್ಕೇರಿಯ ಭೂಪ ತುರುಕರ ಧಾಳಿಗೆ
ಬೆಕ್ಕಸ ಬೆರಗಾಗುತಾಗ
ಪೊಕ್ಕನು ಮಲೆಯನಾಕ್ಷಣ ದೂಳಿಗೋಟೆಯ
ಗಕ್ಕನೆಕೊಂಡರೇವೇಳ್ವೆ

ಈ ರೀತಿಯಾಗಿ ಇಕ್ಕೇರಿಯ ಕೋಟೆಯು ನಿರಾಯಾಸವಾಗಿ ಆತನ ವಶವಾಯಿತು. ಈ ವಿಜಯದಿಂದ ಉಬ್ಬಿಹೋದ ಬಾದಶಹನು ಕರ್ಣಾಟಕವನ್ನು ಸಾಧಿಸು ಹೋಗು ಎಂದು ಹೇಳಿ ರಣಧೂಳಿಖಾನನನ್ನು ಕಳುಹಿಸಿಕೊಟ್ಟನು. ಈ ತುರುಕರ ದಂಡು ಕರ್ಣಾಟಕದ ಕಡೆ ಬರುತ್ತಿದ್ದಾಗ ಜನಮನದಲ್ಲಿ ಈ ರೀತಿ ಭಾವನೆಯುಂಟಾಯಿತಂತೆ:

ಕಣ್ಣಿನೊಳಗೆ ಖಾನ ಕನಸಿನೊಳಗೆ ಖಾನ
ಬಣ್ಣಿಸೆ ಮನದೊಳು ಖಾನ
ತಿಣ್ಣವಡೆದ ಖಾನನ ಸುದ್ದಿ ಜಪವಾಗಿ
ಬಣ್ಣಗೆಟ್ಟುದು ಲೋಕವೆಲ್ಲ

ಹೀಗೆ ರಣಧೂಳಿಖಾನ ತನ್ನ ಅಪಾರವಾದ ಸೈನ್ಯದೊಂದಿಗೆ ಶ್ರೀರಂಗಪಟ್ಟಣದ ಸಮೀಪದಲ್ಲಿ ಬೀಡುಬಿಟ್ಟನು.

ಇತ್ತ ನರಸರಾಜನು ಗೂಢಚಾರರಿಂದ ಈ ಸುದ್ದಿಯನ್ನು ಕೇಳಿ ಯುದ್ಧಕ್ಕೆ ಸಕಲಸನ್ನಾಹಗಳನ್ನು ಮಾಡುವಂತೆ ತನ್ನ ಸೇನಾಪತಿಗೆ ಆಜ್ಞಾಪಿಸಿದನು. ರಣಧೂಳಿಖಾನನು ಶ್ರೀರಂಗಪಟ್ಟಣಕ್ಕೆ ಮುತ್ತಿಗೆಯಿಕ್ಕುವಂತೆ ತನ್ನ ಸೈನ್ಯಕ್ಕೆ ಅಪ್ಪಣೆ ಕೊಡಲು:

ಲಲಿತ ಜೀಮೂತ ಮಂಡಲ ಭೋರ್ಗರೆದಾಗ
ನಳಿನಸಖನ ಮುತ್ತುವಂತೆ
ಕಳಕಳಮಸಗೆ ಖಾನನ ಬಲ ಚೌದೆಸೆ
ಯೊಳಗೆ ಮುತ್ತಿದುದು ಪಟ್ಟಣವ

ಸುರಗಿರಿಯನು ಸುತ್ತಮುತ್ತಿದ ಮಂಜಿನ
ನೆರವಿಯ ತೆರದಿಂದಲಾಗ
ಕರಿಕಾಲಾಳು ತುರಗ ದಳ ಭೋಯೆಂ
ದುರುಬಿ ಮುತ್ತಿದುದು ಪಟ್ಟಣವ

ನರಸರಾಜನು ತನ್ನ ದಳವಾಯಿಯನ್ನು ಹತ್ತಿರಕ್ಕೆ ಕರೆದು:

ದಳವಾಯಿ ನಂಜರಾಜೇಂದ್ರ ಬಾ ನಮ್ಮಡಿ
ಇಳೆಯ ಮನ್ನೆಯರ ಮಾರ್ಬಲವ
ತಳುವದೆ ಬರಿಸಿ ಮಾರ್ಗವ ಕಟ್ಟಿ ತುರುಕರ
ಗಳಿಲನೆ ಮೂಗರಿಸೆಂದ

ಎಂದು ಆಜ್ಞಾಪಿಸಲು ನಂಜರಾಜನು ಗಡಿಯ ಮನ್ನೆಯರಿಗೆ

ಒಡನೆ ಠಾಣೆಯದೆಗೆದೂರೂರುಗಳ ಹೊಕ್ಕ
ತುಡುಗುಣಿ ತುರುಕರ ಮಾರ್ಬಲವ
ಕಡುತವಕದೆ ಮುತ್ತಿಕೊಂಡು ಮೂಗರಿದಾಗ
ಬಿಡದೆ ಭಂಗಕ್ಕೆ ಬರಿಸೆಂದ

ಅವರು ತಮ್ಮ ಸೈನ್ಯದೊಂದಿಗೆ ತುರುಕರ ದಂಡಿನ ಮೇಲೆ ಬಿದ್ದು ಸಹಸ್ರಾರು ಜನರ ಮೂಗುಗಳನ್ನು ಕತ್ತರಿಸಿ ಭಂಗಪಡಿಸಿದರು. ಒಟ್ಟು ಹನ್ನೆರಡುಸಾವಿರ ಜನಕ್ಕೆ ಮೂಗುಗಳನ್ನು ಕತ್ತರಿಸಿದರು. ತುರುಕರ ದಂಡು ಹೇಳದೆ ಕೇಳದೆ ಪಲಾಯನ ಮಾಡಿತು. ಈ ವಾರ್ತೆಯನ್ನು ಕೇಳಿದ ಬಾದಶಹನು ಕಂಠೀರವನರಸರಾಜನ ಪೌರುಷವನ್ನು:

ಧರೆಯೊಳು ರಾಮರಾಜ್ಯಗೆ ನೆರೆ ಮಣಿಯದ
ತುರುಕರ ಭಂಗಕೆ ತಂದ
ದುರಗಲಿ ಕಂಠೀರವನರಸರಾಜ ಲೋಕಕೆ
ನರನಾರಾಯಣನೆಂದ

ಹೀಗೆ ಕೊಂಡಾಡಿದನು. ಆದರೆ ತನ್ನ ಸೈನ್ಯಕ್ಕೆ ಆದ ಪರಾಭವ ಅಪಮಾನಗಳಿಂದ ಸಿಟ್ಟಿಗೆದ್ದ ಬಾದಶಹ ಶ್ರೀರಂಗಪಟ್ಟಣವನ್ನು ಪುನಃ ಮುತ್ತಿ ಸಾಧಿಸುವಂತೆ ಖಾನನಿಗೆ ಆಜ್ಞೆಮಾಡಿದನು. ಅದನ್ನು ಕೇಳಿದ ರಣಧೂಳಿಖಾನ ರೌದ್ರಾವೇಶದಿಂದ:

ಕೆರಳಿದ ಕಾಲನೇಮಿಯು ರೌದ್ರರೂಪಿನೊ
ಳಿರದೆದ್ದ ಮಹಿಷಾಸುರನೊ
ದುರಗಲಿ ಘೋರಾಂಧಕನೆನೆ ಖಾನ ಮ
ತ್ತುರವಣಿಸಿದ ಲಗ್ಗೆಗಾಗ

ಈ ರೀತಿ ಕೆರಳಿ ಲಗ್ಗೆಗೆ ಬೀಡುಬಿಡುವಂತೆ ವಜೀರಖಾನನಿಗೆ ನೇಮಿಸಿದನು. ಅದರಂತೆ ಅಪಾರವಾದ ಸೈನ್ಯದೊಂದಿಗೆ ಬಂದು:

ಬಡಿದರು ಸನ್ನೆಯ ಭೇರಿ ಡಮಾಮಿಯ
ಕಡುರಭಸಕೆ ಬ್ರಹ್ಮಾಂಡ
ಒಡೆಯಲು ಚೌದೆಸೆ ಜಡಿಯಲು ಭೂತಳ
ನಡುಗುವಂತದಾಗಲೇವೇಳ್ವೆ

ಬಿಲ್ಲಜೇವಡೆ ಪಟುಭಟರ ಬೊಬ್ಬೆಯ ಬಲು
ಘಲ್ಲಣೆ ಹಯಹೇಷೆ ನಿನದ
ಕೊಲ್ಲಾರಬಂಡಿಯ ಚೀತ್ಕೃತಿ ತ್ರಿಜಗಕೆ
ತಲ್ಲಣವಿತ್ತುವಾಕ್ಷಣದೆ

ಆಮೇಲೆ ಕೋಟೆಯನ್ನು ಮುತ್ತಿ:

ಆಗಸವನು ತಡುಕುವ ಮೇರುವೆಗಳ
ಮೇಗೇರಿ ಖಾನನ ಭಟರು
ಬೇಗದೆ ಪೆಟಲ ಗುಂಡುಗಳ ಮಳೆಯನು ಸ
ರಾಗದೊಳುಬ್ಬಿ ಕರೆದರು

ಅಂಬಿನ ತುದಿಗೇರಿಸಿದ ಪೊಟ್ಟಣದುಪ್ಪ
ಲಿಂಬದ ಕಿಚ್ಚ ಕಾರಿಸುತ
ಕುಂಬಿನಿ ನಡುಗೆ ಬೊಬ್ಬಿರಿದೆಚ್ಚು ಶರಗಳ
ತುಂಬಿದರೂರೊಳಗಾಗ

ಕುಲಗಿರಿಯನು ಕೋಪವ ತಾಳಿ ಮಶಕದ
ಹುಳುಗಳು ಮುತ್ತುವಂದದಲಿ
ಇಳೆಗಗ್ಗಳಿಕೆವಡೆದ ಪಟ್ಟಣದ ಲಗ್ಗೆ
ಯೊಳಗೇರಿದರು ತುರುಕರು

ಈ ರೀತಿ ಲಗ್ಗೆ ಮಾಡಲು ಅವರ ಗಜಬಜ ಬ್ರಹ್ಮಾಂಡವನ್ನೇ ಮುಸುಕಿತಂತೆ. ಖಾನನ ಪಡೆ ಪಟ್ಟಣದ ಕೋಟೆಯನ್ನು ಸುತ್ತಲೂ ಮುತ್ತಿದುದನ್ನು ಕಂಡು ಕಂಠೀರವನರಸರಾಜ ತನ್ನ ಸೇನಾಪತಿಗೆ 'ರಿಪುಬಲವನು ಯಮನ ಪಟ್ಟಣಕೆ ಕಳಿಸು' ಎಂದು ಆಜ್ಞೆ ಮಾಡಿದನು. ಆಗ ಸೇನಾಪತಿ ಮನ್ನೆಯ ನಾಯಕರಿಗೆ ತುರುಕರ ದಂಡನ್ನು ಸದೆಬಡಿಯುವಂತೆ ಅಪ್ಪಣೆ ಮಾಡಲು:

ಹಿಂಡು ಹಿಂಡಿನಲೇಣಿಯ ಮೇಲೇರಿ ಮುಂ
ಕೊಂಡುರುಬುವ ರಿಪುಬಲವ
ಖಂಡಿಸಿ ಸಿರಿಗಳ ಮರುಳ್ಗಳ ಕೊರಳಿಗೆ
ದಂಡೆಯ ಹಾಕಿದರಾಗ

ಇರಿದು ಬಲ್ಲೆಹದಿಂದ ಖಾನರ ಕರುಳ್ಗಳ
ಸರಮಾಲೆಗಳ ಬೇಗ ತೆಗೆದು
ದುರದೊಳೊಪ್ಪುವ ಭೂತಗಳ ಕೊರಳೊಳಗಿಕ್ಕಿ
ಮೆರೆದರುನ್ನತ ಸಾಹಸವ

ಕಂಠೀರವನರಸರಾಜ ಸಾಕಿದ್ದ ಅಸಹಾಯ ಮನ್ನೆಯರು ಹಳೆಯ ಪೈಕದ ಪಟುಭಟರು ಖಾನನ ಸೈನಿಕರನ್ನು ತುಂಡುತುಂಡಾಗಿ ಕತ್ತರಿಸಿ, ತಲೆಗಳನ್ನು ಚೆಂಡಾಡಿ, ಭೂತಗಳಿಗೆ ಬಲಿಯನ್ನು ಕೊಟ್ಟರು.

ವಸುಧೇಶ್ವರ ಕಂಠೀರವ ಸಾಕಿ
ರ್ದಸಹಾಯ ಶೂರಮನ್ನೆಯರು
ದೆಸೆದೆಸೆಯೊಳು ಕೋಟೆಗಡರ್ವ ಖಾನರುಗಳ
ಕುಸುರಿದರಿದು ಕೆಡಹಿದರು

ಬಳಿಕ ನಾಲ್ದೆಸೆಯಲಿ ಕಂಠೀರವೇಂದ್ರನ
ಹಳೆಯ ಪೈಕದ ಪಟುಭಟರು
ತಲೆಗಳ ಚಂಡಾಡಿ ವೈರಿ ಮಾರ್ಬಲವನು
ಬಲಿಯನಿತ್ತರು ಭೂತಗಣಕೆ

ಕರ್ಣಾಟಕದ ಬಲದ ಎದುರಿಗೆ ನಿಲ್ಲಲಾರದೆ ಶತ್ರುಬಲ ಪಲಾಯನ ಮಾಡಿತು.

ಬಿರುಗಾಳಿಯಲೆಗೆಣ್ದೆಸೆಗೆದ್ದು ತೂರುವ
ತರಗೆಲೆಗಳ ಮೊತ್ತವೆನಲು
ಸರಿದೋಡಿದುದು ಕಂಠೀರವೇಂದ್ರನ ಭಟ
ರುರುಬೆಗೆ ಪರಬಲವಾಗ

ಹೀಗೆ ಓಡಿಹೋಗಿ ಅರೆಗಾವುದ ದೂರದಲ್ಲಿ ಬೀಡುಬಿಟ್ಟು ಅಪಮಾನದಿಂದ ಚಿಂತಾಕ್ರಾಂತರಾಗಿರಲು ಇತ್ತ ಕಂಠೀರವ ನರಸರಾಜನು ಗೂಢಚಾರರ ಮೂಲಕ ತುರುಕರ ಸ್ಥಿತಿಯನ್ನು ತಿಳಿದುಕೊಂಡು ಬರುವಂತೆ ಹೇಳಿಕಳುಹಿಸಿದನು. ಬೇಹಿನವರು ಬಂದು ತುರುಕರ ಪರಿವಾರದ ಪರಿಸ್ಥಿತಿಯನ್ನು ಸೇನಾಪತಿಗೆ ಅರಿಕೆ ಮಾಡಿ ಅವರ ಮೇಲೆ ಕಗ್ಗೊಲೆಯ ಕಾಳಗ ಮಾಡುವುದಕ್ಕೆ ಇದು ಅತ್ಯಂತ ಸಮಯೋಚಿತ ಸಂದರ್ಭವೆಂದು ಬಿನ್ನವಿಸಿಕೊಂಡರು. ಈ ವಿಷಯವನ್ನು ದಳಪತಿ ನಂಜರಾಜನು ಮಹಾರಾಜರ ಮುಂದೆ ವಿಜ್ಞಾಪಿಸಿಕೊಳ್ಳಲು ಅವರು ಕಗ್ಗೊಲೆಯ ಕಾಳಗಕ್ಕೆ ತಮ್ಮ ಒಪ್ಪಿಗೆಯನ್ನು ಸೂಚಿಸಿ ತಾವೂ ಸಹ ಯುದ್ಧಕ್ಕೆ ಸಿದ್ಧರಾದರು:

ಮಿರುಗುವ ಮಿಸುನಿಯ ದಟ್ಟಿ ಕಟಿಯೊಳೊಪ್ಪಿ
ಮೆರೆವ ರತ್ನದ ಬಾಕಿನಿಂದ
ಒರೆಯನುಗಿದ ಖಡ್ಗವಿಡಿದು ಕಂಬದೆ ಬಂದ
ನರಸಿಂಹನಂತೆ ರಂಜಿಸಿದ

ತಾವು ಯುದ್ಧಕ್ಕೆ ಬರುತ್ತಿರುವ ಸಂಗತಿಯನ್ನು ತುರುಕರಿಗೆ ದೂತನೊಡನೆ ಹೇಳಿಕಳಿಸಿ:

ಇರಿ ಕಡಿ ತರಿಯರಿಯಿಂದು ವೈರಿಗಳನೆಂ
ದುರುಬೆ ಚೌದೆಸೆಯೊಳಗಂದು
ದುರಗಲಿ ಕಂಠೀರವೇಂದ್ರ ನಿಟ್ಟಿಸೆ ಭಟ
ರುರುಬಿ ಮುತ್ತಿದರರಿಗಳನು

ಈ ಪ್ರಕಾರವಾಗಿ ಶತ್ರುಸೈನ್ಯವನ್ನು ಮುತ್ತಲು ಆಗ ಖಾನನ ಸೈನ್ಯ:

ಕವಿ ಕವಿ ಕಗ್ಗೊಲೆಗೈದಿದ ಮೈಸೂ
ರವನಿಪತಿಯ ಮಾರ್ಬಲವ
ತವೆ ಮುರಿಮುರಿಯೆಂದು ಖಾನಖಾನರು ಬಂ
ದವಗಡಿಸಿದರು ಬೊಬ್ಬಿಡುತ

ಹೀಗೆ ಮೇಲೆ ಬೀಳಲು ಆಗ:

ಗಾಯಗಾಣಿಸಿ ಹಲ್ಲಕಿರಿದು ಸಲಾಮೆಂದು
ಬಾಯಬಿಡುವ ಹಂದೆಗಳಿರಾ
ದಾಯದ ಪಂತವೆ ನಿಮಗೆಂದು ಸುಭಟನಿ
ಕಾಯ ಮುತ್ತಿತು ತುರುಕರನು

ಆಗ-

ಉರುಳುವ ನರಳುವ ತೆರಳುವ ಹೊರಳುವ
ಬೆರಳ ಕಚ್ಚುವ ಬೇಡಿಕೊಳ್ವ
ಕರುಳು ಕಾಳಿಜಗಳು ಸುರಿವ ಖಾನರುಗಳ
ನೆರವಿಯೊಪ್ಪಿತು ರಣದೊಳಗೆ

ಎಲ್ಲೆಲ್ಲಿಯೂ ಖಾನರ ಸೈನ್ಯವೇ ಕಗ್ಗೊಲೆಗೆ ಒಳಗಾಗಿದ್ದನ್ನು ನೋಡಿ ಉಳಿದವರು ದಿಕ್ಕಾಪಾಲಾಗಿ ಓಡಿಹೋದರು. ಅವರ ಕನಸು ಮನಸಿನಲ್ಲಿಯೂ ಕಂಠೀರವನ ಸೈನ್ಯವೇ ಕಾಣುತ್ತಿತ್ತಂತೆ:

ಅದೆ ಬಂದರು ಕಂಠೀರವೇಂದ್ರನ ಭಟ
ರೊದಗಿದರೀಕಡೆಯೊಳಗೆ
ಸದೆದು ಮೂಗರಿದ್ಯೆದುತಿಹರೆಂದು ಪಾಳೆಯ
ಗದಗಾಪುಗೊಂಡುದೇವೇಳ್ವೆ

ಅಳಿದುಳಿದ ತುರುಕರ ಸೈನಿಕರು ಪ್ರಾಣಭಿಕ್ಷೆಯನ್ನು ಬೇಡಿಕೊಂಡು ಪಲಾಯನ ಮಾಡಿದರು.

ಅತ್ತ ರಣಧೂಳಿಖಾನ ತನಗಾದ ಅಪಾರವಾದ ಪ್ರಾಣಹಾನಿ ಮಾನಹಾನಿಗಳಿಂದ ಭಂಗಿತನಾಗಿ ತನ್ನ ರಾಜ್ಯಕ್ಕೆ ಹಿಂತಿರುಗಿ ಬಾದಶಹನನ್ನು ಕಂಡನು. ಬಾದಶಹನು ಅವನ ಮುಖವನ್ನು ನೋಡದೆ ತನ್ನ ಸೈನ್ಯವನ್ನೆಲ್ಲಾ ನಾಶಮಾಡಿಕೊಂಡು ಬಂದ ಅವನ ಮೇಲೆ ವಿಶೇಷವಾಗಿ ಕೋಪಗೊಂಡನು. ಆಗ ರಣಧೂಳಿಖಾನ ಕಂಠೀರವ ನರಸರಾಜನ ಪರಾಕ್ರಮವನ್ನು:

ಜೀಯ ಚಿತ್ತೈಸು ಕಂಠೀರವ ರಾಜೇಂದ್ರ
ನೀಯವನಿಯ ಬಡನರನೆ
ಕಾಯಜಪಿತ ನರಸಿಂಹನ ಸಾದೃಶ್ಯ
ದಾಯತವಾ ನೃಪಗಿಹುದು
ಭಾವಿಸಿ ನೋಡಿದೊಡಲ್ಲಿಹ ಭಟನೊರ್ವ
ಸಾವಿರಾಳಾಗೆಮ್ಮ ಕಣ್ಗೆ
ತೀವಿ ಕಾಣಿಸುತಿಹನವಗೆ ಪಶ್ಚಿಮರಂಗ
ದೇವನ ಕೃಪೆ ಕೂಡಿಹುದು

ಬಾದಶಹನಿಗೆ ಈ ರೀತಿ ವರ್ಣಿಸಿದನು. ಇದನ್ನು ಕೇಳಿದ ಬಾದಶಹನ ಕೋಪ ಇಳಿಯಿತು. ಹೀಗಿರಲು ಇಕ್ಕೇರಿಯ ರಾಜ ಪೂವಲ ಹನುಮನ ಸೊಕ್ಕನ್ನು ಮುರಿಯಬೇಕೆಂದು ಅಪಾರ ಹಣವನ್ನು ಕೊಟ್ಟು ತುರುಕರ ದಂಡನ್ನು ಕೊಂಡೊಯ್ಯುವದಕ್ಕಾಗಿ ಬಿಜಾಪುರಕ್ಕೆ ಬಂದನು. ಆಗ ಬಾದಶಹನು:

ಇನ್ನಾದರು ಬಲುಶೌರ್ಯವೆಸಗಿ ನೆರೆ
ಕನ್ನಡವನು ಸಾಧಿಸೆಂದು
ಮನ್ನಿಸಿ ಪಾತ್ಸ್ಯಾವು ರಣಧೂಳಿಖಾನನ
ಸನ್ನಾಹದಲಿ ಕಳುಹಿದನು

ಹೀಗೆ ಪರಾಭವವನ್ನು ಅನುಭವಿಸಿದ್ದ ರಣಧೂಳಿಖಾನ ರೋಷಾವೇಶದಿಂದ ಪಾಳೆಪಟ್ಟುಗಳನ್ನೆಲ್ಲ ಗೆದ್ದುಕೊಂಡು ರಾಮಗಿರಿಯ ಕೋಟೆಯನ್ನು ಮುತ್ತಿದನು. ಕಂಠೀರವ ನರಸರಾಜನು ಈ ವಿಷಯವನ್ನು ಕೇಳಿದ ಕೂಡಲೆ ತನ್ನ ದಳವಾಯಿಯೊಡನೆ ಆಲೋಚಿಸಿ ರಾಮಗಿರಿ ಕೋಟೆಯನ್ನು ಮುತ್ತಿ ಅದನ್ನು ವಶಪಡಿಸಿಕೊಂಡು ಸಹಸ್ರಾರು ಜನ ತುರುಕರನ್ನು ಕೈಸೆರೆ ಹಿಡಿದರು.

ಕಂಠೀರವ ನರಸರಾಜ ಒಡೆಯರು ದಿಗ್ವಿಜಯ ಹೊರಟು ಸುತ್ತಮುತ್ತಲಿನ ಅನೇಕ ಪಾಳೆಪಟ್ಟುಗಳನ್ನು ಜಯಿಸಿ ತಮ್ಮ ರಾಜ್ಯಕ್ಕೆ ಸೇರಿಸಿಕೊಂಡು ಅಷ್ಟದಿಕ್ಕುಗಳಲ್ಲಿಯೂ ತಮ್ಮ ಆಡಳಿತ ನಿರರ್ಗಳವಾಗಿ ನಡೆಯುವಂತೆ ವ್ಯವಸ್ಥೆ ಮಾಡಿ ರಣಧೀರ ಕಂಠೀರವ ಎಂಬ ಬಿರುದನ್ನು ಸಾರ್ಥಕಪಡಿಸಿಕೊಂಡರು. ಕೇವಲ ರಾಜ್ಯ ವಿಸ್ತರಣಕಾರ್ಯದಲ್ಲೇ ಆಸಕ್ತರಾಗದೆ ತಾವು ಜಯಿಸಿದ ರಾಜ್ಯಗಳಲ್ಲೆಲ್ಲಾ ಅನೇಕ ಧರ್ಮಕಾರ್ಯಗಳನ್ನೂ ನಡೆಸುತ್ತ ದೇವತಾರಾಧನೆಯಲ್ಲಿಯೂ ಪ್ರಜಾರಾಧನೆಯಲ್ಲಿಯೂ ತತ್ಪರರಾಗಿದ್ದರು.

ಕನ್ನಡ ಸಾಹಿತ್ಯದಲ್ಲಿ ವೀರರಸಪ್ರಧಾನವಾದ ಕಾವ್ಯಗಳು ಬಹಳ ಕಡಮೆ. ಮೊದಲಿನಿಂದ ಕೊನೆಯವರೆಗೂ ಯುದ್ಧಪ್ರಸಂಗಗಳೇ ಪ್ರಚುರವಾಗಿರುವ ಈ ತೆರನ ಕಾವ್ಯ ಕುಮಾರರಾಮ ಸಾಂಗತ್ಯವನ್ನು ಬಿಟ್ಟಲ್ಲಿ ಮತ್ತಾವುದೂ ಕಂಡುಬರುವುದಿಲ್ಲ. ಕನ್ನಡಿಗರ ಕಲಿತನವನ್ನು ಸಾರುವ, ವೀರರಸಪ್ರಧಾನವಾದ ಕಾವ್ಯ ಕಂಠೀರವನರಸರಾಜ ವಿಜಯ. ■

# ಚೇರಮಕವಿ

**ಕ**ನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹದಿನೈದು ಮತ್ತು ಹದಿನಾರನೆಯ ಶತಮಾನಗಳನ್ನು ವೀರಶೈವ ಸಾಹಿತ್ಯದ ಸುವರ್ಣಯುಗವೆಂದು ಪರಿಗಣಿಸಲಾಗಿದೆ. ಈ ಶತಮಾನಗಳಲ್ಲಿ ಆಗಿಹೋದ ಅಸಂಖ್ಯಾತ ವೀರಶೈವ ಕವಿಗಳು ತಮ್ಮ ವಿಶಿಷ್ಟ ಕೃತಿಗಳಿಂದ ಅಮರರಾಗಿದ್ದಾರೆ. ಅವರಲ್ಲಿ ಚೇರಮಕವಿಯೂ ಒಬ್ಬ. ಈತನು ಹದಿನಾರನೆಯ ಶತಮಾನದ ೧೫೨೬ರಲ್ಲಿ ಚೇರಮಕಾವ್ಯವೆಂಬ ವಾರ್ಧಕ ಷಟ್ಪದಿಯ ಕೃತಿಯನ್ನು ಬರೆದು ಪ್ರಸಿದ್ಧನಾಗಿದ್ದಾನೆ. ಇದರಲ್ಲಿ ಹನ್ನೊಂದು ಸಂಧಿಗಳೂ ಐದುನೂರು ಐವತ್ತೈದು ಪದ್ಯಗಳೂ ಇವೆ.

ಚೇರಮಾಂಕ ವೀರಶೈವಕವಿ. ಈತನ ಪಿತಾಮಹ 'ಆದಯ್ಯ ಸಿರಿಯಾಳನನ್ವಯೋದ್ದಾಮನೂ ಚಿಕ್ಕವೀರೇಶ ಕರಜಾತನೂ ಆದ ನಾಗಲಿಂಗಸೆಟ್ಟಿ. ಈತನ ತಂದೆ ತ್ರ್ಯಕ್ಷಪೂಜಾನಿಷ್ಠನೂ ರಾಜಪೂಜ್ಯನೂ ಆದ ಗಂಗಪ್ಪಸೆಟ್ಟಿ. ಈತನ ಗುರು ಚೆನ್ನವೀರೇಶ. ಈತನು ತನ್ನ ಕಾವ್ಯವನ್ನು

ಪಿರಿದು ವೇದಾಂತ ಸಿದ್ಧಾಂತ ಲಕ್ಷಣವೈದ್ಯ
ಭರತ ಸಾಮುದ್ರಿಕಂ ಜ್ಯೋತಿಷವಲಂಕಾರ
ಸರಸಗೀತಂ ವಾದ್ಯಶಕುನ ಸದ್ವ್ಯಾಕರಣ ಸೂಪರತಿಶಾಸ್ತ್ರದೊಳಗೆ ।
ಪರಿಣತನೆನಿಪ್ಪ ಸತ್ಕವಿ ಮಲ್ಲಣಾರ್ಯ ಗುರು
ವರನ ಕೃಪೆಯಂ ಪಡೆದು ಚೇರಮಾಂಕಂ ಶಿವನ
ಪುರಕೆ ದಾಳಿಯನಿಟ್ಟ ಚೇರಮ ಚರಿತ್ರಮಂ ಪೇಳ್ದೆನ್

ಎಂದು ಹೇಳಿಕೊಂಡಿದ್ದಾನೆ. ಚೇರಮಕಾವ್ಯವನ್ನು ಶಕ ೧೪೪೮ನೆಯ ವ್ಯಯ ಸಂವತ್ಸರದಲ್ಲಿ ಎಂದರೆ ಕ್ರಿ.ಶ. ೧೫೨೬ರಲ್ಲಿ ಬರೆದು ಮುಗಿಸಿದಂತೆ:

ದೇವವಾಕ್ಯಂ ಶಾಲಿವಾಹನಶಕಂ ನಡೆದ
ಪಾವನಾಬ್ದದ ಸಧರ್ಮವ್ಯಯದ ಕಾರ್ತೀಕ
ದಾ ವಿಮಲ ಶುದ್ಧಪಾಡ್ಯೋದಯಂ ರವಿದಿನಂ ಸ್ವಾತಿಸುಪ್ರೀತಿಯೋಗಂ
ಭಾವಿಸಲ್ ಕವಿತುಲಾರಾಶಿ ಶಶಿತಾರೆಗಳು
ತೀವಿರ್ದ ಸುಮೂರ್ತದೊಳಧಿಕ ಸೌಖ್ಯದಿಂ
ಭೂವರಂ ಚೇರಮಾಂಕನ ಚರಿತ್ರಂ ನಾಡೆ ಸಂಪೂರ್ಣಮಾಯ್ತು ಚೆಲ್ವಿಂ ॥ ೧೧-೯

ಈ ಪದ್ಯದಲ್ಲಿ ಹೇಳಿಕೊಂಡಿದ್ದಾನೆ.

ಚೇರಮ ತನ್ನ ಕಾವ್ಯದ ಆದಿಯಲ್ಲಿ ಭೋಗಮಲ್ಲ, ಗಿರಿಜೆ, ವಿಘ್ನೇಶ್ವರ, ಷಣ್ಮುಖ, ನಂದಿ, ಭೃಂಗಿ, ವೀರಭದ್ರ, ಚೆನ್ನವೀರೇಶ, ಸೋಲೂರು ಚಿಕ್ಕಬಸವ ಮೊದಲಾದ ಇಷ್ಟದೇವತಾಸ್ತುತಿಯನ್ನು ಮಾಡಿದ್ದಾನೆ. ಪೂರ್ವಕವಿಗಳಲ್ಲಿ ವಾಲ್ಮೀಕಿ, ಮಯೂರ, ಹಲಾಯುಧ, ಪಾಲ್ಕುರಿಕೆ ಸೋಮ, ಭೋಜ, ಬಾಣ ಇವರುಗಳನ್ನು ಸ್ತುತಿಸಿದ್ದಾನೆ. ಅಲ್ಲದೆ:

ಅರಸನರ್ಥಮನಿತ್ತು ಶರಣರ್ಗೆಯಾ ಕೆಜೆಯ
ಮರುಳಿಂದೆ ಕಟ್ಟಿಸುತ ಬಯಲಾದ ಹಿರಿಯ ಪ
ದ್ಮರಸರವರಣಗನುಜೆ ರಾಮಾನುಜನ ಶಿಷ್ಯನಂ ಭಂಗಿಸುತ್ತಾತನ
ಪೊರೆದನು ವೀರಬಲ್ಲಾಳನ ಸಭೆಯೊಳಗಿರ್ದು
ಕರಮರ್ದನಂಗೈದ ಮಹಿಮೆಗವನಿಪನೆಜಿಗೆ
ಬರುತ ಹಂಪೆಯೊಳೀಶಭಕ್ತರಂ ನುತಿಸಿದ ಹರೀಶನಂ ಬಲಗೊಂಬೆನು. ॥ ೧-೧೪ ॥

ಈ ಪದ್ಯದಲ್ಲಿ ಕೆರೆಯ ಪದ್ಮರಸ, ಕುಮಾರ ಪದ್ಮರಸ, ಹರೀಶ್ವರ ಇವರುಗಳನ್ನು ಸ್ತುತಿಸಿದ್ದಾನೆ. ತನ್ನನ್ನು "ನವರಸ ಭಾವಲಕ್ಷಣಾಂಲಂಕಾರನಿಪುಣ" ಎಂದು ವಿಶ್ಲೇಷಿಸಿಕೊಂಡಿದ್ದಾನೆ. ಶೀಲಸಂಪನ್ನ ಮಲ್ಲಣಾರ್ಯರನ್ನು ವಿಶೇಷವಾಗಿ ಸ್ತುತಿಸಿದ್ದಾನೆ. ಅದು ಇಂತಿದೆ:

ಶ್ರೀಗುರು ನಿರೂಪದಿಂ ನಿಶಿತಶೂಲವನಡರಿ
ಚಾಗೆನಿಸಿಕೊಂಡ ಗುರುಭಕ್ತನನ್ವಯಭವಮ
ಹಾ ಗರಿಮೆಯಾಂತ ಗುಬ್ಬಿಯ ಮಲ್ಲಣಾರ್ಯಪೌತ್ರ ಸಂಸ್ತೋತ್ರಪಾತ್ರ
ಈಗ ಸಂಸತಕವಿತೆ ಕರ್ಣಾಟಲಕ್ಷಣವಿ
ಭಾಗಮದ್ವರದ ಬಸವೇಶ್ವರ ಪುರಾಣಾರ್ಥ
ಭೋಗಿಯೆನಿಸುವ ಶೀಲಸಂಪನ್ನ ಮಲ್ಲಣಾರ್ಯರ ಪದಾಂಬುಜಕೆ ಶರಣು ॥ ೧-೧೧ ॥

ಕವಿ ತನ್ನ ಕಾವ್ಯದ ಉತ್ಕೃಷ್ಟತೆಯನ್ನು:

ಬಿಟ್ಟಕಣ್ಣವರೂರ ಸುಧೆಯ ಸವಿ ಮನವಲರ್ದು
ನಟ್ಟು ಕೂಡುವ ಲತಾಂಗಿಯ ಸೋಂಕು ಪುಳಕವಳ
ವಟ್ಟು ಪಾಡುವ ಗಾನರಸದಿಂಪು ಜಾಜಿಯೊಳ್ಪರಲ ಕಂಪುಗಳ ಸೊಂಪು ।
ಕಟ್ಟಳ್ಕಜೆನ ಸುತನ ರೂಪು ನಲ್ವಿನ ಸೈಪು
ಮುಟ್ಟಿ ಪಂಚೇಂದ್ರಿಯಂ ನಲಿವವೊಲ್ ಗಂಗಪ್ಪ
ಸೆಟ್ಟಿಯಾತ್ಮಜ ಚೇರಮಂ ಪೇಳ್ದ ರಸಕಾವ್ಯವೆಸೆವುದಖಿಳರಿಗೆ ಸೇವ್ಯ ॥ ೧-೧೯ ॥

ರಸಿಕರಾಹಾ ಎನಲು ಭಾವಕರು ತಲೆದೂಗೆ
ಪೊಸಬಗೆಯಿದೆಂದು ಕೊಂಡಾಡೆ ಲಾಕ್ಷಣಿಕರಾ
ಲಿಸಲು ವಿದ್ವಜ್ಜನಂ ಪೇಳಿದೀ ಕಾವ್ಯ ॥ ೧೧-೭೧ ॥

ಈ ಪದ್ಯಗಳಲ್ಲಿ ಹೇಳಿದ್ದಾನೆ.

ತನ್ನ ಕಾವ್ಯದಲ್ಲಿ ಲೋಪದೋಷಗಳಿದ್ದರೆ ಅವನ್ನು ತಿದ್ದಿ ಸರಿಪಡಿಸಬೇಕೆಂದು ವಿದ್ವಜ್ಜರನ್ನು:

ಸತಿಸಪ್ತಮಿಗಳ ಸಮಸಂಸ್ಕೃತಂಗಳನುತದಿ
ಹಿತಮಂ ಕ್ರಿಯಾಗಮಕವರಸಮಾಸಂಗಳಂ
ಕೃತಜಾತಿಭಾವಾದ್ಯಲಂಕಾರಮಂ ವಿನುತ ಮುಖ್ಯಸತ್ತ್ವಾಸಂಗಳಂ
ವಿತತ ಶೃಂಗಾರಾದಿ ರಸನಾಯಕಾದಿಗಳ
ಗತಿಗಳಂ ನೋಡಿ ತಪ್ಪಿರೆ ತಿದ್ದಿಯಾಂ ನಿಮ್ಮ
ಸುತನಲಾ ಶಿವಕವೀಶ್ವರರು ವಿದ್ಯಾಕರರು ಶಂಕರಧ್ಯಾನಪರರು ॥ ೧-೨೧ ॥

ಈ ರೀತಿ ವಿನಯದಿಂದ ಪ್ರಾರ್ಥಿಸಿಕೊಂಡಿದ್ದಾನೆ. ಆದರೆ ದುರ್ಜನ ನಿಂದೆಯನ್ನು ಅತ್ಯಂತ ನಿಷ್ಠುರವಾಗಿ ಮಾಡಿದ್ದಾನೆ. ಅದು ಇಂತಿದೆ:

ರಸಭಾವ ಜಾತಿಮಾಧುರ್ಯ ಸುಕುಮಾರಾರ್ಥ
ವೆಸೆವ ಪೊಸರೀತಿಬರಲನುಮಾನಿಸುತ್ತೆರ್ದೆಯ
ದಸಿ ತಾಗಿದಂತೆ ನೊಂದಿನಿಸೆಡರಿದವೊಲಿರಲು ಗ್ರಹಹೊಡೆದ ಕೋತಿಯಂತೆ

ದೆಸೆದೆಸೆಗೆ ತಿರುಗಿ ಭಂಡಿಸುವನ್ಯಖೊಳಮಾ
ನಿಸರೊಳಾಡಿ ಸ್ನೇಹಮಂ ಮಾಳ್ಪನುಜೆ ಕಾಲ
ಒಸಿತಿಂಬ ಶಂಕೆಯಿಂದಾ ಪಾದರಕ್ಷೆಗೆ ತೈಲಮಂ ಮೊದಲೆ ತೀಡುವಂತೆ ॥ ೧-೨೩ ॥

ಚೇರಮಕಾವ್ಯವನ್ನು ಹೇಳಬೇಕೆಂದು ಸದ್ಭಕ್ತರು ಆಣತಿಮಾಡಲು ತಾನು ಈ ಕಾವ್ಯವನ್ನು ಹೇಳಿದಂತೆ:

ಆ ರಮ್ಯ ಗಂಗಪ್ಪಸೆಟ್ಟಿಯರ ಗರ್ಭಾಬ್ಧಿ
ಚಾರುಚಂದ್ರಂ ಸತ್ಕಲಾಲಕ್ಷಣಂ ಶಿವಪ
ದಾರಾಧಕನನೆನ್ನನೀಕ್ಷಿಸುತ ನುಡಿದರುತ್ತಮರು ಸತ್ಪ್ರೌಢರ್ಕಳು
ಚೇರಮಾಂಕಾ ಶಿವನಪುರಕೆ ಧಾಳಿಯನಿಟ್ಟ
ಚೇರಮಚರಿತ್ರಮಂ ಸಕಲಸಜ್ಜನರ ವಾ
ಚೇರಮಾಂಕರಮಾಗಿ ಪೇಳೆಂದ ಸದ್ಭಕ್ತರಾಣತಿಯೊಳಾಂ ಪೇಳ್ದೆನು ॥ ೧-೧೮ ॥

**ಈ ಪದ್ಯದಲ್ಲಿ ತಿಳಿಸಿದ್ದಾನೆ.**

ಚೇರಮ ಕಾವ್ಯದ ಕಥಾವಸ್ತು ಪುರಾತನವಾದುದು. ಅರುವತ್ತುಮೂವರು ಪುರಾತನರಲ್ಲಿ ಚೇರಮನೂ ಒಬ್ಬ. ನಾರದನ ಬಿನ್ನಪದಂತೆ ಶಿವನು ಭಸಿತಕಾಯನನ್ನುಧಾರಿಣಿಗೆ ಕಳಿಸಿ ವೀರಶೈವಧರ್ಮವನ್ನು ಅಲ್ಲಿ ಪ್ರತಿಷ್ಠಾಪಿಸುವಂತೆ ಆದೇಶಿಸಿದನು. ಅದರಂತೆ ಭಸಿತಕಾಯ ಚೇರಮನಾಗಿ ಭೂಲೋಕದಲ್ಲಿ ಅವತರಿಸಿ ನಂಬಿಯಣ್ಣನೊಡಗೂಡಿ ಶೈವಧರ್ಮವನ್ನು ಸಾರಿ ಮತ್ತೆ ಶಿವನ ಸಾಯುಜ್ಯವನ್ನೇ ಸೇರುವನು. ಆ ಪ್ರಸಂಗ ಚೇರಮಕಾವ್ಯದಲ್ಲಿ ಇಂತಿದೆ:

ನಾರದನ ಬಿನ್ನಪಕೆ ಭಸಿತಕಾಯನ ಶಿವಂ
ಧಾರುಣಿಗೆ ಕಳುಪೆ ಚೇರಮನೆನಿಸಿ ರಕ್ಷಾವಿ
ಚಾರಮಂ ಪರಕಲಿಸಿ ಭವನನುಜ್ಞೆಯ ಭದ್ರಗಾಯಕಂಗಿಷ್ಟವಿತ್ತು
ಆ ರುಚಿರ ನಂಬ್ಯಣ್ಣನೊಡನಿರ್ದು ಬಳಿಕವಂ
ಮಾರಾರಿಯೂರ್ಗೆಯ್ದೆ ಹಿಂದೆ ಧಾಳಿಯ ಪೋಗಿ
ಚಾರುಕಾವ್ಯವನಲ್ಲಿ ಕೇಳಿಸಿದನೆಂಬ ಕಥೆಯದಕೆ ಮೊದಲಾದವುದೆನಲು ॥ ೧-೨೪ ॥

ಚೇರಮಕಾವ್ಯಕ್ಕೆ ಮೂಲ ಯಾವುದು ಎಂಬುದನ್ನು ಕವಿ ತಿಳಿಸಿಲ್ಲ. ಆದರೆ ಹರಿಹರನ ಚೇರಮ ರಗಳೆಯನ್ನೇ ಆಧರಿಸಿ ತನ್ನ ಕಾವ್ಯವನ್ನು ಬರೆದಿರಬಹುದು. ಈತನು ಮೂಲಕಥೆಯಲ್ಲಿನ ಯಾವ ಮಾರ್ಪಾಟುಗಳನ್ನೂ ಮಾಡಿಕೊಂಡಿಲ್ಲ. ಹರಿಹರನ ತರುವಾಯ ಚೇರಮನನ್ನು ಕುರಿತು ಷಟ್ಪದಿಯಲ್ಲಿ ಕಾವ್ಯವನ್ನು ಬರೆದಿರುವವರಲ್ಲಿ ಈತನೇ ಮೊದಲಿಗ. ಆದರೆ ಕ್ರಿ.ಶ. ೧೫೮೯ರಲ್ಲಿದ್ದ ವಿರುಪರಾಜ ಚೇರಮನನ್ನು ಕುರಿತು 'ತ್ರಿಭುವನ ತಿಲಕ' ಎಂಬ ಸಾಂಗತ್ಯ ಗ್ರಂಥವನ್ನು ಬರೆದಿದ್ದಾನೆ. ಚೇರಮಾಂಕ ಮತ್ತು ವಿರುಪರಾಜ ಸಮಕಾಲೀನರಾಗಿದ್ದರೂ ಇವರಿಬ್ಬರೂ ಒಂದೇ ವಿಷಯವನ್ನು ಕುರಿತು ಕಾವ್ಯಗಳನ್ನು ಬರೆದಿದ್ದರೂ ಪರಸ್ಪರ ಪ್ರಸ್ತಾಪವನ್ನೇ ಮಾಡದಿರುವುದು ಸೋಜಿಗವಾಗಿದೆ.

ಚೇರಮಕಾವ್ಯದ ಪ್ರತಿಯೊಂದು ಸಂಧಿಯ ಕೊನೆಯಲ್ಲಿ,

ಇದು ಸಕಲಭಕ್ತಪದಪದ್ಮ ಮಧುಕರಪುಣ್ಯ
ಸದನ ಗುಬ್ಬಿಯ ಮಲ್ಲಣಾರ್ಯರ ಕೃಪಾಪಾತ್ರ
ಮುದಿತ ನವರಸಭಾವ ಲಕ್ಷಣಾಲಂಕಾರ ನಿಪುಣನೆಂದೆನಿಸಿ ಮೆಱೆವ
ಚದುರ ಚೇರಮನೊರೆದ ಚೇರಮಚಾರಿತ್ರಮಂ
ಪದಪಿಂದ ಬರೆದೋದಿ ಕೇಳಿ ವಿಸ್ತರಿಸುವ
ರ್ಗೊದಗಿಪ್ಪುದಾಯುರಾರೋಗ್ಯ ಸಂಪದ ಸರ್ವಸಿದ್ಧಿ ಸತ್ಯಂ ತಥ್ಯವು ೧-೫೨

ಎಂಬ ಪದ್ಯವಿದೆ. ಚೇರಮಕಾವ್ಯದ ಬಂಧ ಲಲಿತವಾಗಿದೆ. ಚೇರಮನಿಗೆ ವಿಶೇಷವಾದ ಲೋಕಾನುಭವವಿದ್ದಂತೆ ಕಂಡುಬರುತ್ತದೆ. ದೇಸೀಯ ನುಡಿಗಟ್ಟುಗಳಿಂದಲೂ ನಾಣ್ನುಡಿಗಳಿಂದಲೂ ತನ್ನ ಕಾವ್ಯದ ಸೊಬಗನ್ನು ಹೆಚ್ಚಿಸಿದ್ದಾನೆ. ಚೇರಮಾಂಕ ನಿಜಕ್ಕೂ ಒಬ್ಬ ಶ್ರೇಷ್ಠ ಕವಿ. ಕನ್ನಡ ಸಾಹಿತ್ಯದಲ್ಲಿ ಈ ಕಾವ್ಯಕ್ಕೆ ಒಂದು ಉತ್ತಮ ಸ್ಥಾನವಿದೆ. ಇದೊಂದು

ವರ್ಣಕಕಾವ್ಯ. ಸಂಸ್ಕೃತವನ್ನು ಅತಿಯಾಗಿ ಬಳಸದೆ ಕನ್ನಡದಲ್ಲಿಯೇ ಸಮಗ್ರ ಕಾವ್ಯವನ್ನು ರಚಿಸಲು ಪ್ರಯತ್ನಿಸಿದ್ದಾನೆ. ಈತನ ಶೈಲಿ ಸುಪ್ರೌಢವಾಗಿದೆ, ಗಂಭೀರತೆಯಿಂದ ಕೂಡಿದೆ. ಕಾವ್ಯದಲ್ಲಿ ಬರುವ ವರ್ಣನೆಗಳನ್ನು ಔಚಿತ್ಯವರಿತು ಮಾಡಿದ್ದಾನೆ. ಈತನು ಚೇರಮಕಾವ್ಯವನ್ನು ಬಿಟ್ಟು ಮತ್ತಾವ ಕಾವ್ಯವನ್ನೂ ಬರೆದಂತೆ ಕಂಡುಬಂದಿಲ್ಲ. ಈತನ ಕಾವ್ಯ ಈ ಶತಮಾನದ ಕೃತಿಗಳ ಸಾಲಿನಲ್ಲಿ ಅವಿಸ್ಮರಣೀಯವಾಗಿ ನಿಲ್ಲುವಂತಹುದಾಗಿದೆ.

ಚೇರಮ ಅರುವತ್ತುಮೂವರು ಪುರಾತನರಲ್ಲಿ ಒಬ್ಬನೆಂದು ಪರಿಗಣಿತನಾಗಿದ್ದಾನೆ. ಈ ಅರುವತ್ತುಮೂವರು ಪುರಾತನರು ತಮಿಳುನಾಡಿನ ಶಿವಭಕ್ತಾಗ್ರಣಿಗಳು. ಇವರು ಚೋಳ, ಚೇರ, ಪಾಂಡ್ಯದೊರೆಗಳ ಕಾಲದಲ್ಲಿ ಬಾಳಿಬೆಳಗಿದವರು. ಈ ಅರುವತ್ತುಮೂರು ಅಥವಾ ತ್ರಿಷಷ್ಟಿ ಪುರಾತನರನ್ನು ಕುರಿತು ತಮಿಳಿನಲ್ಲಿ ಬರೆದ ಮಹಾಕಾವ್ಯ ಪೆರಿಯ ಪುರಾಣ.

ಅರುವತ್ತಮೂವರು ಪುರಾತನರ ಜೀವನದ ಸಾರಸರ್ವಸ್ವವೆಂದರೆ ಶಿವಭಕ್ತಿಯ ರೂಪದಲ್ಲಿ ಪ್ರಕಟವಾದ ವಿಶ್ವಪ್ರೇಮ. ಅವರು ಆ ದಿವ್ಯಪ್ರೇಮದಲ್ಲಿ ಹುಟ್ಟಿ ಆ ಶಿವಪ್ರೇಮದಲ್ಲೇ ಬೆಳೆದು ಶಿವಭಕ್ತಿಯನ್ನೇ ನಡೆದು ಎಲ್ಲೆಲ್ಲಿಯೂ ಪರಶಿವನ ದರ್ಶನಮಾಡಿಕೊಂಡರು.

ಹರಿಹರ ತಮಿಳಿನ ಅರುವತ್ತುಮೂವರು ಪುರಾತನರರನ್ನು ಕುರಿತು ರಗಳೆಗಳನ್ನು ಬರೆದಿರುವುದು ಸರ್ವವಿದಿತ. ಈ ಅರವತ್ತುಮೂವರನ್ನು ಕುರಿತು ಕೆಲವು ಕೃತಿಗಳೂ ಕನ್ನಡದಲ್ಲಿ ಹುಟ್ಟಿಕೊಂಡಿವೆ. ನಿಜಗುಣ ಶಿವಯೋಗಿ, ವೀರಭದ್ರ, ಶಿವಯೋಗಿ ಸೋಮೇಶ, ಕಳಲೆ ನಂಜರಾಜ ಇವರು ಕ್ರಮವಾಗಿ ತ್ರಿಪದಿ, ಷಟ್ಪದಿ, ಸಾಂಗತ್ಯ, ಗದ್ಯದಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಈ ಪುರಾತನರರನ್ನು ಕುರಿತು ಅನೇಕ ವೀರಶೈವ ಕಾವ್ಯ, ಪುರಾಣಗಳು ರಚಿತವಾಗಿವೆ. ಪ್ರಸ್ತುತ ಚೇರಮನನ್ನು ಕುರಿತು ಪ್ರಸ್ತಾಪಿಸಿರುವ ಕೃತಿಗಳು ಇಂತಿವೆ:

೧. ಸುರಂಗ ಕ್ರಿ.ಶ. ೧೫೦೦ – ತ್ರಿಷಷ್ಟಿ ಪುರಾತನಚಾರಿತ್ರ
೨. ಲಕ್ಕಣ್ಣ ದಂಡೇಶ ಕ್ರಿ.ಶ. ೧೪೨೪ – ಶಿವತತ್ವಚಿಂತಾಮಣಿ
೩. ವಿರೂಪಾಕ್ಷ ಪಂಡಿತ ಕ್ರಿ.ಶ. ೧೫೮೪ – ಚೆನ್ನಬಸವಪುರಾಣ
೪. ಭೀಮಕವಿ ಕ್ರಿ.ಶ. ೧೩೬೯ – ಬಸವಪುರಾಣ
೫. ಗುಬ್ಬಿಯ ಮಲ್ಲಣಾರ್ಯ ಕ್ರಿ.ಶ. ೧೫೧೩ – ವೀರಶೈವಾಮೃತಪುರಾಣ
೬ ಷಡಕ್ಷರದೇವ ಕ್ರಿ.ಶ. ೧೬೫೫ – ಬಸವರಾಜ ವಿಜಯ
೭ ಸಿದ್ಧನಂಜೇಶ ಕ್ರಿ.ಶ. ಸು. ೧೬೫೦ – ರಾಘವಾಂಕ ಚಾರಿತ್ರ
೮. ಅದೃಶ್ಯಕವಿ ಕ್ರಿ.ಶ. ಸು. ೧೫೮೦ – ಪ್ರೌಢರಾಯನ ಕಾವ್ಯ
೯. ತೋಂಟದ ಸಿದ್ಧೇಶ್ವರ ಕ್ರಿ.ಶ. ಸು. ೧೪೭೦ – ಷಟ್ಸ್ಥಲಜ್ಞಾನ ಸಾರಾಮೃತ
೧೦. ಶಾಂತಲಿಂಗದೇಶಿಕ ಕ್ರಿ.ಶ. ೧೬೭೨ – ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರ
೧೧. ಬಸವಲಿಂಗ ಕವಿ ಕ್ರಿ.ಶ. ೧೬೭೯ – ಕೊಟ್ಟೂರು ಬಸವೇಶ್ವರಪುರಾಣ
೧೨. ನಿಜಗುಣ ಶಿವಯೋಗಿ ಕ್ರಿ.ಶ. ಸು. ೧೫೦೦ – ಅರುವತ್ತು ಮೂವರ ತ್ರಿಪದಿ
೧೩. ಪಾಲ್ಕುರಿಕೆ ಸೋಮನಾಥ – ಗಣಸಹಸ್ರನಾಮ
೧೪. ಉತ್ತರ ದೇಶದ ಬಸವಲಿಂಗದೇವ ಕ್ರಿ.ಶ. ಸು. ೧೬೦೦ – ಬಸವೇಶ್ವರ ಪುರಾಣದ ಕಥಾಸಾಗರ
೧೫. ಸೋಮರಾಜ – ಉದ್ಭಟಕಾವ್ಯ
೧೬. ಸಂಪಾದನೆಯ ಪರ್ವತೇಶ್ವರ ಕ್ರಿ.ಶ. ೧೬೯೮ – ಚತುರಾಚಾರ್ಯ ಪುರಾಣ
೧೭. ಅಮರಗಣಾಧೀಶ್ವರರ ಚರಿತ್ರೆಗಳು – ಪಿ.ಜಿ. ಹಳಕಟ್ಟಿ
೧೮. ಶಿವಶರಣರ ಚರಿತ್ರೆಗಳು – ಪಿ.ಜಿ. ಹಳಕಟ್ಟಿ
೧೯. ಬಸವೇಶ್ವರ ಷಟ್ಸ್ಥಲ ವಚನ ಕಥಾಸಾರ
೨೦. ಉಪಮನ್ಯು – ಭಕ್ತವಿಲಾಸ

■

## ಕುಮಾರವಾಲ್ಮೀಕಿ

**ಸು**ಪ್ರಸಿದ್ಧ ತೊರವೆ ರಾಮಾಯಣದ ಕರ್ತೃ. ಈತನ ಕಾವ್ಯದಲ್ಲಿ ಕಾಲನಿರ್ದೇಶಕ ಅಂಶಗಳಾವುವೂ ಕಂಡುಬಾರದಿರುವುದರಿಂದ ಖಚಿತವಾಗಿ ಈತನ ಕಾಲವನ್ನು ನಿರ್ಧರಿಸಲು ಸಾಧ್ಯವಿಲ್ಲದಾಗಿದೆ. ಈತ ಸ್ತುತಿಸಿರುವ ಕುಮಾರವ್ಯಾಸನ ಕಾಲವೂ ಖಚಿತವಾಗಿಲ್ಲ. ಕುಮಾರವಾಲ್ಮೀಕಿಯನ್ನು ಸ್ಮರಿಸಿರುವ ಕನಕದಾಸನ ಕಾಲವೂ ನಿರ್ಧಾರವಾಗಿಲ್ಲ. ಆದುದರಿಂದ ಕುಮಾರವ್ಯಾಸ, ಕನಕದಾಸ ಈ ಇಬ್ಬರು ಮಧ್ಯಕಾಲದಲ್ಲಿ ಜೀವಿಸಿದ್ದಿರಬಹುದಾದ ಕುಮಾರವಾಲ್ಮೀಕಿಯ ಕಾಲವೂ ಸ್ಪಷ್ಟವಾಗಿಲ್ಲ. ಕವಿಚರಿತ್ರೆಕಾರರು ಈತನ ಕಾಲವನ್ನು ೧೫೦೦ ಎಂದಿದ್ದಾರೆ. ಈಚಿನ ಅಭಿಪ್ರಾಯದಂತೆ ಈತನ ಕಾಲ ಹದಿನಾರನೆಯ ಶತಮಾನದ ಅಂತ್ಯಭಾಗವೆಂದು ಭಾವಿಸಬಹುದಾಗಿದೆ.

ಕುಮಾರವಾಲ್ಮೀಕಿ ಎಂಬುದು ಕವಿಯ ಬಿರುದೇ ಹೊರತು ನಿಜವಾದ ಹೆಸರಲ್ಲ. ವ್ಯಾಸಭಾರತವನ್ನು ಕನ್ನಡಿಸಿದ ನಾರಣಪ್ಪ ತನ್ನನ್ನು ಕುಮಾರವ್ಯಾಸನೆಂದು ಸಂಬೋಧಿಸಿಕೊಂಡಿರುವಂತೆ ವಾಲ್ಮೀಕಿ ರಾಮಾಯಣವನ್ನು ಕನ್ನಡಿಸಿದ ನರಹರಿ ತನ್ನನ್ನು ಕುಮಾರವಾಲ್ಮೀಕಿ ಎಂದು ಸಂಬೋಧಿಸಿಕೊಂಡಿದ್ದಾನೆ. ಆದುದರಿಂದ ಕವಿಯ ನಿಜವಾದ ಹೆಸರು ನರಹರಿ. ಈತನಿಗೆ ಕವಿರಾಜಹಂಸ ಎಂಬ ಬಿರುದಿದ್ದಂತೆ ಈತನ ಕಾವ್ಯದಿಂದಲೇ ತಿಳಿದುಬರುತ್ತದೆ. ನರಹರಿಯ ಜನ್ಮಸ್ಥಳ ತೊರವೆ. ಈ ತೊರವೆ ಬಿಜಾಪುರದ ಪಶ್ಚಿಮಕ್ಕೆ ನಾಲ್ಕು ಮೈಲಿ ದೂರದಲ್ಲಿದೆ. ಎರಡನೆಯ ಇಬ್ರಾಹಿಂ ಆದಿಲ್‌ಶಾಹಿ ಅಲ್ಲಿ ದೊಡ್ಡ ಅರಮನೆಗಳನ್ನೂ ಮಸೀದಿಗಳನ್ನೂ ಕಟ್ಟಿಸಿ ವಾಸಿಸುತ್ತಿದ್ದಂತೆ ತಿಳಿದುಬರುತ್ತದೆ. ಅಲ್ಲಿ ಅರ್ವಾಚೀನ ಕಾಲದ ಕೆಲವು ಗುಡಿಗಳಿವೆ. ಅವುಗಳಲ್ಲಿ ನರಸಿಂಹದೇವರ ಗುಡಿ ಮುಖ್ಯವಾದುದು. ಆ ಗುಡಿಯನ್ನು ಇಟ್ಟಿಗೆಗಳಿಂದ ಚಚ್ಚೌಕವಾಗಿ ಕಟ್ಟಿದ್ದಾರೆ. ನರಹರಿ ತನ್ನ ಗ್ರಂಥವನ್ನು ತೊರವೆಯ ನರಸಿಂಹದೇವರ ಅಂಕಿತದಲ್ಲಿ ಬರೆದಿದ್ದಾನೆ. ಆದುದರಿಂದಲೇ ಈತನ ರಾಮಾಯಣಕ್ಕೆ ತೊರವೆರಾಮಾಯಣ ಎಂಬ ಹೆಸರೇ ರೂಢಿಯಲ್ಲಿದೆ. ಮೈರಾವಣನ ಕಾಳಗ ಎಂಬ ಮತ್ತೊಂದು ಗ್ರಂಥವನ್ನೂ ಈತನೇ ಬರೆದನೆಂಬ ಪ್ರತೀತಿ ಇದೆ. ಆದರೆ ತೊರವೆ ರಾಮಾಯಣದ ಶೈಲಿಗೂ ಮೈರಾವಣನ ಕಾಳಗದ ಶೈಲಿಗೂ ವಿಶೇಷ ವ್ಯತ್ಯಾಸ ಕಂಡುಬರುವುದರಿಂದ ಇವೆರಡನ್ನೂ ಕುಮಾರವಾಲ್ಮೀಕಿಯೇ ರಚಿಸಿದನೋ ಇಲ್ಲವೋ ಎಂಬುದನ್ನು ವಿಚಾರ ಮಾಡಬೇಕಾಗಿದೆ. ಸದ್ಯಕ್ಕೆ ಈತ ತೊರವೆ ರಾಮಾಯಣವನ್ನು ಮಾತ್ರ ಬರೆದಿದ್ದಾನೆ ಎಂದಿಟ್ಟುಕೊಳ್ಳಬಹುದು.

ತೊರವೆ ರಾಮಾಯಣದಲ್ಲಿ ಕವಿ ಕುಮಾರವ್ಯಾಸನೊಬ್ಬನನ್ನು ಬಿಟ್ಟು ಮತ್ತಾವ ಕನ್ನಡ ಕವಿಯನ್ನೂ ಸ್ಮರಿಸಿಲ್ಲ, ಹೊಗಳಿಲ್ಲ.

ಸರಸವರ್ಣಕ ಕವಿಗಳೊಳು ಭಾ
ಸುರ ಕುಮಾರವ್ಯಾಸನೊಬ್ಬನು
ಪರಿಕಿಸುವೊಡಾನೊಬ್ಬ ಮಗುಳೆಣಿಸುವರೆ ವರ್ಣಕಕೆ
ವರಕುಮಾರವ್ಯಾಸನೊಬ್ಬನು
ಯೆರಡನೆಯಲಾನೊಬ್ಬ ಮಿಕ್ಕಿನ
ಜರಡು ಕವಿಗಳ ಲೆಕ್ಕಿಸುವನೆ ಕುಮಾರವಾಲ್ಮೀಕಿ

ಎಂಬ ಈ ಪದ್ಯದಲ್ಲಿ ತನ್ನ ಅಭಿಪ್ರಾಯವನ್ನು ಕವಿ ಸ್ಪಷ್ಟಪಡಿಸಿದ್ದಾನೆ.

ತೊರವೆ ರಾಮಾಯಣದಲ್ಲಿ ಆರುಕಾಂಡಗಳೂ ಸುಮಾರು ೫.೧೦೦ ಪದ್ಯಗಳೂ ಇವೆ. ಕಾವ್ಯ ಭಾಮಿನೀ ಷಟ್ಪದಿಯಲ್ಲಿದೆ. ಇಲ್ಲಿನ ಯುದ್ಧಕಾಂಡ ಉಳಿದ ಐದುಕಾಂಡಗಳ ಮೊತ್ತಕ್ಕಿಂತಲೂ ದೊಡ್ಡದಾಗಿದೆ. ತೊರವೆ ರಾಮಾಯಣ ವಾಲ್ಮೀಕಿ ರಾಮಾಯಣದ ಕಥಾಸರಣಿಯನ್ನೇ ಅನುಸರಿಸಿ ರಚಿತವಾಗಿದೆ. ಆದರೆ ಕವಿ ಅಲ್ಲಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ಅವುಗಳಲ್ಲಿ ಪ್ರಮುಖವಾದ ಒಂದೆರಡಂಶಗಳನ್ನು ಇಲ್ಲಿ ಗಮನಿಸಬಹುದಾಗಿದೆ. ತೊರವೆ ರಾಮಾಯಣದ ಪ್ರಾರಂಭದಲ್ಲಿ ಈಶ್ವರ ಪಾರ್ವತಿಗೆ ಶ್ರೀರಾಮನ ಚರಿತ್ರೆಯನ್ನು ವಿವರಿಸುತ್ತಾನೆ. ಇಲ್ಲಿಯ ಶ್ರೀರಾಮ ಸಾಮಾನ್ಯ ಮಾನವನಲ್ಲ. ವಿಷ್ಣುವಿನ ಅವತಾರ. ಮಂಥರೆ ಮಾಯೆಯ ಪ್ರತೀಕ. ಇಲ್ಲಿಯ ರಾವಣ ಸ್ವಲ್ಪಮಟ್ಟಿಗೆ ದುರಂತಕನಾಯಕನಾಗಿ ಕಾಣುತ್ತಾನೆ. ಈ ಕೆಲವು ಮಾರ್ಪಾಟುಗಳನ್ನು ಕವಿ ಅಧ್ಯಾತ್ಮರಾಮಾಯಣವನ್ನನುಸರಿಸಿ ಮಾಡಿಕೊಂಡಿರಬಹುದೆಂದು ಊಹಿಸಬಹುದಾಗಿದೆ.

ವಾಲ್ಮೀಕಿ ರಾಮಾಯಣದ ಕಥಾಸರಣಿಯನ್ನು ಅನುಸರಿಸಿ ರಚಿತವಾದ ವೈದಿಕ ರಾಮಾಯಣಗಳು ಕುಮಾರ ವಾಲ್ಮೀಕಿಗಿಂತ ಮುಂಚೆ ಯಾವುವೂ ಕಂಡುಬರುವುದಿಲ್ಲ. ತೊರವೆ ರಾಮಾಯಣದಲ್ಲಿ ಕವಿ ಸರಸವರ್ಣಕ ಕವಿಗಳಲ್ಲಿ ಮೊದಲು ಕುಮಾರವಾಸ ಆಮೇಲೆ ತಾನು, ಉಳಿದವರೆಲ್ಲರೂ ಜರಡು ಕವಿಗಳು. ಶಬ್ದಾಕ್ಷರದರಿದ್ರರು, ಬಂಧುರರಸ ವಿವರ್ಜಿತರು ಎಂದು ಹೇಳಿಕೊಂಡಿದ್ದಾನೆ. ಈ ಹೇಳಿಕೆ ತುಸು ಕೆಚ್ಚಿನ ಮಾತಾದರೂ ಭಕ್ತಕವಿಯಾದ ಕುಮಾರವಾಲ್ಮೀಕಿ ತನ್ನ ಕೃತಿಯ ಮಹಿಮೆಯ ಭರದಲ್ಲಿ ಹೇಳಿದ ಮಾತು -ಎಂದಿಟ್ಟುಕೊಳ್ಳಬಹುದು. ಈತ ತನ್ನ ಕೃತಿಯನ್ನು ರಾಜಾಸ್ಥಾನಕ್ಕಾಗಲಿ ಪಂಡಿತಮಂಡಲಿಗಾಗಲಿ ಬರೆಯಲಿಲ್ಲ. ಜನಸಾಮಾನ್ಯರ ಉದ್ಧಾರಕ್ಕಾಗಿ ವಾಲ್ಮೀಕಿ ರಾಮಾಯಣದ ಕಥೆಯನ್ನು ಕನ್ನಡ ಷಟ್ಪದಿಗಳಲ್ಲಿ ಭಕ್ತಿಪರವಶನಾಗಿ ಹಾಡಿದ. ಈತ ಮಧ್ಯಮವರ್ಗದ ಕವಿ. ಈತನ ಕೃತಿ ಪಂಡಿತರಂಜಕವಲ್ಲದಿದ್ದರೂ ಪಾಮರರಿಗೆ ಪ್ರಿಯವೆನಿಸಿದೆ. ಕಾವ್ಯದಲ್ಲಿ ಭಕ್ತಿಯಷ್ಟು ತೀವ್ರವಾಗಿ ಕಾವ್ಯಗುಣ ವ್ಯಕ್ತವಾಗಿಲ್ಲವೆಂಬ ವಿಷಯ ಸ್ಪಷ್ಟ. ಹೃದ್ಯಸಂದರ್ಭಗಳು ಬಂದಾಗ ಕವಿ ಉಚಿತರೀತಿಯಲ್ಲಿ ಅವನ್ನು ನಿರ್ವಹಿಸಿ ಪಾತ್ರಗಳ ಮನೋಧರ್ಮವನ್ನು ಹೊರಪಡಿಸುತ್ತಾನೆ. ಕಥೆಗಾರಿಕೆಯಲ್ಲಿ ನಿರರ್ಗಳವಾದ ಓಟವಿದೆ. ಅಚ್ಚುಕಟ್ಟಿದೆ. ಆದರೆ ಕಾವ್ಯತೆ ಉಜ್ವಲವಾಗಿ ತೀಕ್ಷ್ಣವಾಗಿ ಮುಂದುವರಿಯುವುದಿಲ್ಲ. ಕವಿಯ ಭಾಷೆ ಮತ್ತು ಛಂದೋರಚನೆ ಬಹಳ ಬಿಗಿಯಾದುದು. ಇಲ್ಲೆಲ್ಲ ಕುಮಾರವ್ಯಾಸನ ಪ್ರಭಾವ ಎದ್ದುತೋರುತ್ತದೆ. ಅಲ್ಲಲ್ಲಿ ಕಾಳಿದಾಸನ ಪ್ರಭಾವವೂ ಕಾಣುತ್ತದೆ. ಒಟ್ಟಿನಲ್ಲಿ ಅಂದಿನ ಕಾಲಕ್ಕೆ ಕುಮಾರವ್ಯಾಸ ಭಾರತ ಎಷ್ಟರಮಟ್ಟಿಗೆ ಜನಪ್ರಿಯವಾಗಿತ್ತೋ ಬಹುಶಃ ಅಷ್ಟರಮಟ್ಟಿಗೇ ತೊರವೆ ರಾಮಾಯಣವೂ ಜನಪ್ರಿಯವಾಗಿತ್ತೆಂದು ಭಾವಿಸಬಹುದಾಗಿದೆ. ಕುಮಾರವಾಲ್ಮೀಕಿ ಜನಸಾಮಾನ್ಯರ ಕವಿ. ಅದಕ್ಕಿಂತ ಮಿಗಿಲಾಗಿ ಭಕ್ತಕವಿ. ವಾಲ್ಮೀಕಿರಾಮಾಯಣವನ್ನು ಮೊದಲಬಾರಿಗೆ ಸಂಗ್ರಹಿಸಿದ ಕನ್ನಡ ಕವಿ.

■

# ಘನಲಿಂಗಿದೇವ

**ಘ**ನಲಿಂಗಿದೇವರು ವಚನ ಸಾಹಿತ್ಯದ ಎರಡನೆಯ ಘಟ್ಟದ ವಚನಕಾರರಲ್ಲಿ ಪ್ರಮುಖರಾದವರು. ಇವರು ಸುತ್ತೂರು ವೀರಸಿಂಹಾಸನದ ಅಧ್ಯಕ್ಷರು. ಈ ಪೀಠದ ಹನ್ನೊಂದನೆಯ ಗುರುವಾಗಿದ್ದರು. ಸುತ್ತೂರು ಸಿಂಹಾಸನದ ಪರ್ವತದೇವರ ಶಿಷ್ಯರು ಭಂಡಾರಿ ಬಸವಪ್ಪೊಡೆಯದೇವರು, ಇವರ ಶಿಷ್ಯರು ಕೂಗಲೂರ ನಂಜಯ್ಯದೇವರು, ಆ ದೇವರ ಕರಕಮಲದಲ್ಲಿ ಉದಯವಾದ ಶರಣವೆಣ್ಣು ತಾನು ಎಂದು ಹೇಳಿಕೊಂಡಿದ್ದಾರೆ. ಎನ್ನ ಗುರುವಿನ ಗುರು ಪರಮಗುರು ಪರಮಾರಾಧ್ಯ ತೋಂಟದಾರ್ಯನಿಗೆ ಗುರುಭಕ್ತಿಯಿಂದೆನ್ನ ಶರಣುಮಾಡಿದರು. ಆ ತೋಂಟದಾರ್ಯನು ತನ್ನ ಕೃಪೆಯೆಂಬ ತೊಟ್ಟಿಲೊಳಗೆನ್ನಂ ಮಲಗಿಸಿ ಪ್ರಮಥ ಗಣಂಗಳ ವಚನಸ್ವರೂಪ ತತ್ವಾರ್ಥವೆಂಬ ಹಾಲುತುಪ್ಪಮಂ ಸದಾ ದಣಿಯಲೆರೆದು ಅಕ್ಕರೆಯಿಂದ ರಕ್ಷಣೆಯಂ ಮಾಡಿ ಘನಲಿಂಗಿ ಎಂಬ ನಾಮಕರಣಮಂ ಕೊಟ್ಟು ಪ್ರಾಯಸಮರ್ಥೆಯಂ ಮಾಡಿ, ಸತ್ಯ ಸದಾಚಾರ ಜ್ಞಾನಕ್ರಿಯೆಗಳೆಂಬ ದಿವ್ಯಾಭರಣಂಗಳಂ ತೊಡಿಸಿ ಅರುಹೆಂಬ ಬಣ್ಣವ ನಿರಿವಿಡಿದುಡಿಸಿ, ಅರ್ತಿಯ ಮಾಡುತಿಪ್ಪ ಸಮಯದಲ್ಲಿ, ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನ, ತನಗೆ ನಾನಾಗಬೇಕೆಂದು ಬೇಡಿ ಕಳುಹಲು, ಎಮ್ಮವರು ಅವಂಗೆ ಮಾತನಿಕ್ಕಿದರಮ್ಮಾ (ವ.೧೧) ಎಂದು ಹೇಳಿಕೊಂಡಿದ್ದಾನೆ.

ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣದಲ್ಲಿ,

ಸಿದ್ಧಲಿಂಗೇಶ್ವರಾ ಕಂಬಳಿಯದೇವರಾ
ಸಿದ್ಧನಂಜೇಶ್ವರಂ ಚೆನ್ನದೇವರು ದೊಡ್ಡ
ಸಿದ್ಧಲಿಂಗೇಶ್ವರಂ ಕಂಕಣದ ದೇವರು ಲಂಬಕರ್ಣದ ದೇವರು
ಸಿದ್ಧಮಲ್ಲೇಶರಂ ಗುಮ್ಮಳಾಪುರವರದ
ಸಿದ್ಧಲಿಂಗೇಶ್ವರಂ ಯೆಡತೊರೆಯ ಪುರದ ಗುರು
ಸಿದ್ಧವೀರಣ್ಣೊಡೆಯರೆಸೆವ ಘನಲಿಂಗಿದೇವರು ಚಿಕ್ಕಮಲ್ಲೇಶನು ॥ (೬೩-೪೭೧)

ಎಂದಿದೆ. ವಿರಕ್ತ ತೋಂಟದಾರ್ಯನ "ಸಿದ್ಧೇಶ್ವರ ಪುರಾಣ"ದಲ್ಲೂ "ನಿರಂಜನ ವಂಶರತ್ನಾಕರ"ದಲ್ಲೂ ಘನಲಿಂಗದೇವನು ತೋಂಟದಾರ್ಯನ ಶಿಷ್ಯಪರಂಪರೆಯವನೆಂದು ತಿಳಿಸಿದ್ದಾರೆ.

ತುಮಕೂರಿನಲ್ಲಿ ಸಿದ್ಧಲಿಂಗಸ್ವಾಮಿಯ ಮೆರವಣಿಗೆ ನಡೆದಾಗ ಅದರಲ್ಲಿ ಭಾಗವಹಿಸಿದ್ದ ಶರಣಸಮೂಹದಲ್ಲಿ ಘನಲಿಂಗಿದೇವರೂ ಒಬ್ಬರು. ಅವರ ಆಗಿನ ವ್ಯಕ್ತಿಚಿತ್ರಣವನ್ನು ವಿರಕ್ತ ತೋಂಟದಾರ್ಯ ಈ ರೀತಿ ಕೊಟ್ಟಿದ್ದಾನೆ.

ಉರೆಕೃಷ್ಣಕಂಬಳವ ಪೊದೆದುತ್ತಮಾಂಗವಂ
ನೆರೆಮುಂಡಿತಂಗೆಯ್ದು ಕರತಳದ ಲಿಂಗದೊಳ್
ಬೆರಗುವಡೆದಿತರೇತರವನರಿಯದಿರ್ಪ ನಿಷ್ಕಲನಿರತನಿವನಾರೆ
ತೊರೆದು ದೇಹೋಪಾಧಿಯಂ ವರ್ಗವಾರಕ್ಕೆ
ಹೆರಸಾರ್ದು ಸುಜ್ಞಾನಮಾರ್ಗದೊಳು ನಿಂದು ಗುಣ
ಕರಿಗೊಂಡ ಘನಲಿಂಗದೇವನೇ ಕಾಣೆ ಶುಕವಾಣಿ ಕಾಳಾಹಿವೇಣಿ (೧೫-೪೬)

"ಘನಲಿಂಗಿದೇವ ತೋಂಟದ ಸಿದ್ಧಲಿಂಗದೇವರ ಕಿರಿಯ ಸಮಕಾಲೀನ. ಸಿದ್ಧಲಿಂಗರು ಕ್ರಿ.ಶ. ೧೫೬೧ರಲ್ಲಿ ಜೀವಂತರಾಗಿದ್ದ ಅಂಶ ಶಾಂತೇಶನ ಸಿದ್ಧೇಶ್ವರ ಪುರಾಣದಿಂದ ತಿಳಿದುಬಂದಿದೆ. ಅಲ್ಲದೆ ಘನಲಿಂಗಿದೇವ ತನ್ನ ವಚನದಲ್ಲಿ ಹೆಸರಿಸಿರುವ ಭಂಡಾರಿ ಬಸವಪ್ಪೊಡೆಯದೇವ ಕ್ರಿ.ಶ. ೧೫೧೪ರಲ್ಲಿನ ನಂಜನಗೂಡಿನ ೩ ಶಿಲಾಶಾಸನಗಳಲ್ಲಿ (ಎಕ III ನಂಜನಗೂಡು ೧೯೭೪, ೩೯೫, ೩೯೬, ೪೦೧) ಉಕ್ತನಾಗಿದ್ದಾನೆ. ಹೀಗಾಗಿ ಘನಲಿಂಗಿದೇವನು ೧೬ನೆಯ ಶತಮಾನದ ಪೂರ್ವೋತ್ತರ ಕಾಲದಲ್ಲಿ ಬದುಕಿ ಬಾಳಿದ್ದಾನೆ.

ಕಾಡಸಿದ್ಧೇಶ್ವರನ ವಚನಗಳ ಟೀಕೆಯಲ್ಲಿ (ಬಳ್ಳಾರಿ ೧೯೩೮, ಪು. ೪೫೦) ಇಂದಿನ ಗಣಂಗಳನ್ನು ತಿಳಿಸುತ್ತ ಘನಲಿಂಗಿದೇವನನ್ನು ಸಿದ್ಧೇಶ್ವರ ಸ್ವಾಮಿಗಳು, ಸಿಂಗಳಾಪುರದ ಬಸವರಾಜದೇವರೊಡನೆ ಹೆಸರಿಸಿದೆ.

ಕುಷ್ಟಗಿ ವಿರಕ್ತ ಕರಿಬಸವರಾಜದೇವನ (೧೭೦೦) ವಚನಗಳ ಮೇಲೆ ಆಗಿರುವ ಘನಲಿಂಗಿದೇವನ ವಚನಗಳ ಪ್ರಭಾವವನ್ನು ಈಗಾಗಲೇ ರೆ. ಉತ್ತಂಗಿ ಚೆನ್ನಪ್ಪ ಮತ್ತು ಪ್ರೊ. ಜಿ.ಎಂ. ಉಮಾಪತಿ ಶಾಸ್ತ್ರಿಗಳು ಗುರುತಿಸಿದ್ದಾರೆ.

ಘನಲಿಂಗಿದೇವರ ವಚನಗಳನ್ನು ಎಳಮಲೆ ಗುರುಶಾಂತದೇವ (೧೬೦೦) ಸಂಪಾದನೆ ಬೋಳಬಸವ (೧೬೭೫) ಹಾಗೂ ಅಜ್ಞಾತ ವಚನ ಸಂಕಲನಗಳಾದ "ನಿಷ್ಕಲಲಿಂಗ ಚಿದಾನಂದಲೀಲೆ" ಮತ್ತು "ಭಕ್ತ್ಯಾನಂದ ಸುಧಾರ್ಣವ"ಗಳಲ್ಲಿ ಕಾಣಬಹುದು.

ಹಸ್ತಪ್ರತಿಗಳಲ್ಲಿ ಪ್ರಾಯಿಕವಾಗಿ ಘನಲಿಂಗಿಗಳ ೬೩/೬೪ ವಚನಗಳು ದೊರೆಯುತ್ತವೆ. "ಭಕ್ತ್ಯಾನಂದ ಸುಧಾರ್ಣವ"ದಲ್ಲಿ "ಎನ್ನ ಕಾಯ ಪ್ರಸಾದವಾಯಿತ್ತು" ಹಾಗೂ "ಮೋಹಮದರಾಗ ವಿಷದ" ಎಂಬ ಎರಡು ಹೆಚ್ಚಿನ ವಚನಗಳು ಲಭಿಸಿವೆ. ಇವುಗಳಲ್ಲಿ "ಎನ್ನ ಕಾಯ ಪ್ರಸಾದವಾಯಿತ್ತು" ಎಂಬ ವಚನ ಎಳಮಲೆ ಗುರುಶಾಂತದೇವನ "ಅಷ್ಟಾವರಣ ಸ್ತೋತ್ರದ ವಚನಗಳು" ಸಂಕಲನದಲ್ಲಿದೆ. ಇದಲ್ಲದೆ "ಅಗ್ನಿ ಅಗ್ನಿಯ ಕೂಡಿ" ಎಂಬ ವಚನ ಕನ್ನಡ ಅಧ್ಯಯನ ಕೇಂದ್ರದ ಕಾಗದದ ಪ್ರತಿ ಕ್ರಮಾಂಕ ಬಿ.೬೩೩ರಲ್ಲಿದ್ದು ಅದು ಈವರೆವಿಗೂ ಪ್ರಕಟವಾಗಿಲ್ಲ. ಈಗ ಮೊದಲ ಬಾರಿಗೆ ಅಚ್ಚಾಗುತ್ತಿದ್ದು, ಪ್ರಸ್ತುತ ಕೃತಿಯಲ್ಲಿ ಘನಲಿಂಗಿದೇವರ ವಚನ ಸಂಖ್ಯೆ ೬೬ ಕ್ಕೇರಿದೆ.

ಘನಲಿಂಗಿದೇವರ ವಚನಗಳನ್ನು ಸಂಪಾದಿಸುವಲ್ಲಿ ಪಂ. ಬಿ. ಶಿವಮೂರ್ತಿಶಾಸ್ತ್ರಿಗಳು (೧೯೫೦) ಮತ್ತು ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳು (೧೯೬೪) ಪ್ರಕಟಿಸಿದ ಕೃತಿಗಳನ್ನು ಆಧರಿಸಲಾಗಿದೆ. ಅಲ್ಲದೆ. ಕ.ಅ. ಕೇಂದ್ರದಲ್ಲಿನ (ಬೆಂ.ವಿ.ವಿ) ಕ್ರಮಾಂಕ ಕೆ. ೫೮೯/೭, ಬಿ. ೬೩೩ ಹಾಗೂ ಕೆ.೮೫೯/೩ರ ಓಲೆ/ಕಾಗದದ ಪ್ರತಿಗಳನ್ನು ಬಳಸಿಕೊಳ್ಳಲಾಗಿದೆ." (ಪ್ರಸ್ತಾವನೆ ಪು. ೧೬-೧೮)

ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ : ಸಂಪುಟ-೧೧ ಸಂಕೀರ್ಣ ವಚನ ಸಂಪುಟ ಆರು (ಬಸವೋತ್ತರ ಯುಗ)

-ಸಂಪಾದಕ : ಎಸ್. ಶಿವಣ್ಣ

* * *

ಘನಲಿಂಗದೇವನು ಬರೆದ ೬೫ ವಚನಗಳು ಮಾತ್ರ ಈಗ ನಮಗೆ ಉಪಲಬ್ಧವಾಗಿವೆ. ಪ್ರಾಚೀನ ತಾಳೆಯೋಲೆ ಗ್ರಂಥಗಳಲ್ಲಿ ಸಂಶೋಧಿಸಿದರೆ ಹೆಚ್ಚಿನ ಕೆಲವು ವಚನಗಳು ಸಿಗಬಹುದೆಂದು ತೋರುತ್ತದೆ. ಈ ವಚನಗಳು ವೀರಶೈವ ಸಿದ್ಧಾಂತಬೋಧಕವಾಗಿವೆ.

ಈತನ ವಚನಗಳಲ್ಲಿ ಕಾವ್ಯಮಯ ರೀತಿಯಿದೆ. ಮುಮುಕ್ಷುವಾದ ಈ ಕವಿಯು 'ಶರಣಸತಿ ಲಿಂಗಪತಿ' ನ್ಯಾಯದಂತೆ ತಾನು ಶರಣವೆಣ್ಣಾಗಿ ಪರಮೇಶ್ವರನಾದ ಚನ್ನಮಲ್ಲಿಕಾರ್ಜುನನನ್ನು ಪ್ರಾರ್ಥಿಸುವ ರೀತಿಯಿಂದ ವಚನಗಳನ್ನು ಹಾಡಿದ್ದಾನೆ. 'ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನ' ಇವನ ಅಂಕಿತದಿಂದಲೇ ಈತನ ಕವಿಹೃದಯವನ್ನು ನಾವು ಸುಲಭವಾಗಿ ಗ್ರಹಿಸಬಹುದು. ಈತನ ವಚನಗಳು ವೀರಶೈವ ಮತತತ್ತ್ವಗಳಾದ ಅಷ್ಟಾವರಣ, ಪಂಚಾಚಾರ, ಲಿಂಗಾಂಗಸಾಮರಸ್ಯಗಳನ್ನು ಬೋಧಿಸುವುಗಳಾಗಿವೆ.

ಶರಣಸತಿಯು ಲಿಂಗಪತಿಯನ್ನು ಮೋಹಿಸಿ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಮಾರ್ಗದಲ್ಲಿ ನಡೆದು ಲಿಂಗಾಂಗ ಸಾಮರಸ್ಯ ರತಿಸುಖವನ್ನು ಹೇಗೆ ಅನುಭವಿಸಬಹುದೆಂಬುದನ್ನು ಹೇಳುವುದೇ ವಚನಕಾರನ ಮುಖ್ಯೋದ್ದೇಶವೆಂದು ತೋರುತ್ತದೆ."

ಶಿವಮೂರ್ತಿಶಾಸ್ತ್ರಿಗಳ ಈ ಪರಿಷ್ಕರಣದಲ್ಲಿ ೬೫ ವಚನಗಳಿವೆ. "ಮರ್ತ್ಯದ ಬೀಜವ ಬಿತ್ತಿ", "ಎನ್ನಾತ್ಮದೊಂದು ಅರಸುತನವ" ಎಂಬ ೧, ೨ ವಚನಗಳು ಸುತ್ತೂರು ಮಠದ ಪರಿಷ್ಕರಣದಲ್ಲಿ ೬೨, ೬೩ನೆಯ ವಚನಗಳಾಗಿವೆ. ಸರ್ಕಾರದ ಸಮಗ್ರ ವಚನ ಸಂಪುಟದಲ್ಲಿ ೧, ೨ನೆಯ ವಚನಗಳಾಗಿವೆ.

ಈ ಪರಿಷ್ಕರಣ ವಚನ ಸಾಹಿತ್ಯ, ಘನಲಿಂಗದೇವರ ಬಗೆಗೆ ಪೀಠಿಕೆಯೂ ಕೊನೆಯಲ್ಲಿ ಘನಲಿಂಗಿಯ ಶಿವಶರಣರು, ಘನಲಿಂಗಿದೇವರ ಜಾಣ್ಣುಡಿಗಳು, ಶಬ್ದಕೋಶ –ಈ ವಿಷಯಗಳನ್ನು ನೀಡಲಾಗಿದೆ.

–ಸಂಪಾದಕರು ಮತ್ತು ಪ್ರಕಾಶಕರು: **ಆಸ್ಥಾನ ವಿದ್ವಾನ್ ಪಂಡಿತರತ್ನಂ ಬಿ. ಶಿವಮೂರ್ತಿಶಾಸ್ತ್ರೀ**

* * *

ಪರಮಪೂಜ್ಯ ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳವರಿಂದ ಸಂಪಾದಿತವಾದ ಘನಲಿಂಗಿದೇವರ ವಚನಗಳು ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಲ್ಲಿ ೧೯೬೪ರಲ್ಲಿ ಪ್ರಕಟವಾಗಿವೆ. ಈ ಕೃತಿಯನ್ನು ಜಗದ್ಗುರು ಶ್ರೀಪಟ್ಟದ ಶಿವರಾತ್ರೀಶ್ವರ ಮಹಾಸ್ವಾಮಿಗಳವರಿಗೆ ಸಮರ್ಪಿಸಲಾಗಿದೆ. ಮೈಸೂರಿನ ಶ್ರೀಮನ್ಮಹಾರಾಜ ಶ್ರೀಜಯಚಾಮರಾಜ ಒಡೆಯರ್ ಅವರ ಸಂದೇಶವನ್ನು ಪ್ರಕಟಿಸಲಾಗಿದೆ.

ಈ ಪರಿಷ್ಕರಣದಲ್ಲಿ ೬೩ ವಚನಗಳಿವೆ. ವಿಷಯಾನುಕ್ರಮಣಿಕೆಯಲ್ಲಿ ಅರುವತ್ತಮೂರು ವಚನಗಳಿಗೂ ಶೀರ್ಷಿಕೆಗಳನ್ನು ಕೊಡಲಾಗಿದೆ. ಸಮುಚಿತವಾದ ಪೀಠಿಕೆಯನ್ನೂ ಕೊನೆಯಲ್ಲಿ ಅರ್ಥವಿವರಣೆಯನ್ನೂ ವಚನಗಳ ಅಕಾರಾದಿಯನ್ನೂ ಕೊಡಲಾಗಿದೆ. ಪೀಠಿಕೆಯಲ್ಲಿ ಸಿದ್ಧಲಿಂಗಯತಿ ಮತ್ತು ಘನಲಿಂಗಿದೇವರನ್ನು ಕುರಿತು ಅತ್ಯಂತ ಮೌಲಿಕ ವಿಷಯಗಳನ್ನು ನಿರೂಪಿಸಲಾಗಿದೆ. ಅವುಗಳಲ್ಲಿ ಈ ಮುಂದಿನ ವಿಷಯಗಳನ್ನು ಯಥಾವತ್ತಾಗಿ ಉದ್ಧರಿಸಲಾಗಿದೆ.

"ಘನಲಿಂಗಿದೇವರು ತೋಂಟದ ಸಿದ್ಧಲಿಂಗ ಯುಗದವರಷ್ಟೇ ಅಲ್ಲ ಅವರ ನೇರ ಶಿಷ್ಯರೂ ಆಗಿದ್ದರು. ಪ್ರಾದೇಶಿಕವಾಗಿಯೂ ಅವರು ಸಿದ್ಧಲಿಂಗರಿಗೆ ಅತಿನಿಕಟವಾದವರು. ಘನಲಿಂಗಿದೇವರ ಕಾರ್ಯಕ್ಷೇತ್ರವಾದ ಸುತ್ತೂರಿಗೆ ಬಹಳ ಸಮೀಪವಾದುದು ಹರದನಹಳ್ಳಿ. ಈ ಹರದನಹಳ್ಳಿಯ ಗೋಸಲ ಚೆನ್ನಬಸವನ ಕೃಪೆಗೆ ಪಾತ್ರರಾಗಿಯೇ ಸಿದ್ಧಲಿಂಗರು ಮಹಾಮಹಿಮರಾದುದು. ತೋಂಟದ ಸಿದ್ಧಲಿಂಗರನ್ನು ಘನಲಿಂಗಿದೇವರು ಹರದನಹಳ್ಳಿಯ ಸುತ್ತುಮುತ್ತಿನಲ್ಲಿ ಕಂಡಿದ್ದರೋ ಇಲ್ಲವೋ ನಮಗೆ ಖಚಿತವಾಗಿ ಹೇಳಲು ಆಧಾರಗಳಿಲ್ಲ. ಆದರೆ ಅವರನ್ನು ತುಮಕೂರಿನಲ್ಲಿ ಕಂಡಿದ್ದರೆಂಬುದಕ್ಕೆ ಆಧಾರಗಳುಂಟು. ತುಮಕೂರಿನಲ್ಲಿ ತೋಂಟದ ಸಿದ್ಧಲಿಂಗರನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಭಕ್ತವೃಂದವು ಬೀದಿಬೀದಿಗಳಲ್ಲಿ ಮೆರೆಸಿದಾಗ ಆ ಉತ್ಸವದಲ್ಲಿ ಹಲವು ಮಹನೀಯರಲ್ಲಿ ಘನಲಿಂಗಿದೇವರೂ ಒಬ್ಬರಾಗಿದ್ದರೆಂದು ಮರಿತೋಂಟದಾರ್ಯ ವಿರಚಿತ ಸಿದ್ಧೇಶ್ವರ ಪುರಾಣದಿಂದ ತಿಳಿದುಬರುವುದು. ಅವರ ವೇಷಭೂಷಣ ಸ್ವಭಾವದ ವಿವರವಿರುವ ಒಂದು ಪದ್ಯವೂ ಅಲ್ಲಿ ಸಿಗುವುದು:

ಉರೆ ಕೃಷ್ಣಕಂಬಳವ ಪೊದೆದುತ್ತಮಾಂಗವಂ
ನೆರೆಮುಂಡಿತಂಗೆಯ್ದು ಕರತಳದ ಲಿಂಗದೊಳ್
ಬೆರಗುವಡೆದಿತರೇತರವನರಿಯದಿರ್ಪ ನಿಶ್ಚಳವಿರತನೀತನಾರೆ
ತೊರೆದು ದೇಹೋಪಾಧಿಯಂ ವರ್ಗವಾರಕ್ಕೆ
ಹೆರಸಾರ್ದು ಸುಜ್ಞಾನಮಾರ್ಗದೊಳು ನಿಂದು ಗುಣ
ಕರಿಗೊಂಡ ಘನಲಿಂಗದೇವನೇ ಕಾಣೆ ಶುಕವಾಣಿ ಕಾಳಾಹಿವೇಣಿ

(ಸಿದ್ಧೇಶ್ವರ ಪುರಾಣ ೧೫-೪೬)

ಮೇಲೆ ಹೇಳಿದ ಉತ್ಸವದ ಸಂದರ್ಭದಲ್ಲಿ ಘನಲಿಂಗಿದೇವರ ಜೊತೆಗಿದ್ದ ಮತ್ತೆ ಕೆಲವು ಮಹನೀಯರೆಂದರೆ- ಮೂರನೇ ಶೂನ್ಯಸಂಪಾದನಕಾರನಾದ ಗುಮ್ಮಳಾಪುರದ ಸಿದ್ಧಲಿಂಗ, ಶಾಂತೇಶನ ಸಿದ್ಧಲಿಂಗೇಶ್ವರ ಪುರಾಣದ ಪ್ರಕಾರ ತೋಂಟದ ಸಿದ್ಧಲಿಂಗರಿಂದ ಏಕೋತ್ತರಸ್ಥಲ ಬೋಧೆಯನ್ನು ಪಡೆದ ಭಾಗ್ಯವಂತನಾದ ಚಂದ್ರಶೇಖರ ಗುರು ಮತ್ತು

ತೋಂಟದ ಸಿದ್ಧಲಿಂಗರ ಉತ್ತರಾಧಿಕಾರಿಯೂ ವಚನಕಾರನೂ ಆದ ಶಿವಪೂಜೆಯಾರ್ಯ ಅಥವಾ ಬೋಳಬಸವದೇವ ಮುಂತಾದವರು. ಇದರಿಂದ ಘನಲಿಂಗಿದೇವರು ತೋಂಟದ ಸಿದ್ಧಲಿಂಗೇಶ್ವರರಿಗೆ ಎಷ್ಟು ನಚ್ಚುಮೆಚ್ಚಿನವರಾಗಿದ್ದರು ಮತ್ತು ಅಂದಿನ ಸಮಾಜದಲ್ಲಿ ಅವರು ಎಷ್ಟು ಪ್ರಮುಖ ಕಾರ್ಯಭಾರವನ್ನು ಹೊತ್ತ ಗೌರವಾನ್ವಿತ ವ್ಯಕ್ತಿಗಳಾಗಿದ್ದರು ಎಂಬುದೆಲ್ಲ ಇಂಗಿತವಾಗದಿರದು ಮತ್ತು ತೋಂಟದ ಸಿದ್ಧಲಿಂಗನ ಸಮಕಾಲದಲ್ಲಿ ವಚನಗಳನ್ನು ಬರೆದವರೆಂದರೆ ಘನಲಿಂಗಿದೇವರು, ಬೋಳಬಸವೇಶ್ವರ, ಸ್ವತಂತ್ರ ಸಿದ್ಧಲಿಂಗ ಮುಂತಾದ ಕೆಲವೇ ಕೆಲವರು ಆಪತ್ಕಾಲೀನ ಉತ್ತಮ ವಚನಕಾರರೆಂದರೆ ತೋಂಟದ ಸಿದ್ಧಲಿಂಗರಾದ ಮೇಲೆ ಘನಲಿಂಗದೇವರೇ. ಹೀಗಾಗಿ ಬಸವೇಶ್ವರನ ವಚನ ಸುವರ್ಣಯುಗವಾದ ಮೇಲೆ, ಸ್ವತಂತ್ರವಾಗಿ ವಚನ ಪ್ರಕಾರ ಸಾಹಿತ್ಯವನ್ನು ಸೃಷ್ಟಿಸಿ-ತೋಂಟದ ಸಿದ್ಧಲಿಂಗಯತಿಯೊಬ್ಬರನ್ನು ಮರೆತರೆ ಅದ್ವಿತೀಯ ಸ್ಥಾನ ಪಡೆದವರು ಘನಲಿಂಗಿದೇವರು. ಕಲ್ಯಾಣದ ಬಸವೇಶ್ವರಾದಿಗಳಾದ ಮೇಲೆ ಆ ವಚನ ಸತ್ಸಂಪ್ರದಾಯವನ್ನು ಮುಂದುವರಿಸಲು ಮುನ್ನೂರು ವರ್ಷಗಳಾದ ಮೇಲೆ ಮತ್ತೆ ಶ್ರಮಿಸಿ ಕೃತಾರ್ಥರಾದವರಿವರು. ಇವರು ವಚನ ಸಾಹಿತ್ಯ ದೃಷ್ಟಿಯಿಂದ ಮಾತ್ರವಲ್ಲದೆ ಅಂದಿನ ಸಮಾಜೋದ್ಧಾರ ಕಾರ್ಯದಲ್ಲಿ ನೇರವಾಗಿ ಭಾಗವಹಿಸಿದ ದುರಂಧರರೂ ಆಗಿದ್ದರು. ೧೨ನೇ ಶತಮಾನದ ಕಲ್ಯಾಣದ ಆದರ್ಶವನ್ನು ೧೫ನೇ ಶತಮಾನದಲ್ಲಿ ತೋಂಟದ ಸಿದ್ಧಲಿಂಗರಂತಹ ಯುಗಪುರುಷನು ತುಮಕೂರಿನ ಪ್ರಾಂತದಲ್ಲಿ ನಿಂತು ಪ್ರಚಾರ ಮಾಡಲು ಕಂಕಣಬದ್ಧನಾಗಿ ನಿಂತಾಗ ಅದಕ್ಕೆ ಬೆಂಬಲ ಕೊಟ್ಟು ಆ ಆದರ್ಶ ಸಂದೇಶಗಳನ್ನು ಕರ್ಣಾಟಕದ ತೀರ ದಕ್ಷಿಣದ ಕೊನೆಯಿಂದ ಮೈಸೂರು ಜಿಲ್ಲಾ ಪ್ರದೇಶದಲ್ಲಿ ಘನಲಿಂಗಿದೇವರು ನೆಲಸಿ ಆ ಕಾಲಕ್ಕೆ ಆ ಸುತ್ತುಮುತ್ತಿಗೆ ಶೈವಚಂದ್ರಿಕೆಯನ್ನು ಬೀರಿದರು.

ಅವರ ಹಲವು ವಚನಗಳು ಉತ್ತಮ ಭಾವಗೀತೆಗಳಾಗಿದ್ದು ಮಿಡಿದರೆ ಸಾಕು, ರಸವೊಸರುವ ರಸದಾಳಿ ಕಬ್ಬಿನ ಗಣೆಯಂತಿವೆ. ಅವುಗಳಲ್ಲಿ ವಿಡಂಬನೆ ಇದೆ, ಖಂಡನೆಯಿದೆ, ಧ್ಯಾನವಿದೆ, ಪ್ರಾರ್ಥನೆಯಿದೆ, ದಿವ್ಯದ ಹಂಬಲವಿದೆ, ಬೆಡಗೂ ಇದೆ. ಘನಲಿಂಗಿದೇವರ ಆವೇಶವೆಲ್ಲ ಪರೋಪದೇಶದಲ್ಲಿ ವೆಚ್ಚವಾಗದ ಆತ್ಮಪರೀಕ್ಷೆಯಲ್ಲೂ ಅಂತರಂಗ ವೀಕ್ಷಣೆಯಲ್ಲೂ ವಿನಿಯೋಗವಾಗಿದೆ. ಅವರ ವಚನಗಳಲ್ಲಿನ ಉಳಿದ ಪಾಲು ಸುಧಾರಕರನ್ನು ಸುಧಾರಿಸುವ ಸಲುವಾಗಿ ಮೀಸಲಾಗಿದೆ. ಅಂದಿನ ಸಮಾಜದ ಆಗುಹೋಗುಗಳಲ್ಲಿ ಪ್ರಧಾನ ಪಾತ್ರವನ್ನು ವಹಿಸಿದ ಮಠಮಾನ್ಯಗಳ ಮಹಂತರೆನಿಸಿಕೊಂಡವರು. ತಪ್ಪಿನಡೆಯದೆ ಒಪ್ಪವಾದ ಬಾಳು ನಡೆಸಿದರೆ- ಅದರಿಂದ ಸುಧಾರಣೆಯು ತ್ವರಿತಗೊಳ್ಳುವುದೆಂಬುದನ್ನೂ ಸಾಮಾನ್ಯರು ಮಾನ್ಯರಾಗಬೇಕಾದರೆ ಸಮಾಜದ ಪ್ರತಿಷ್ಠಿತ ವರ್ಗದವರ ಓರೆಕೋರೆಗಳನ್ನು ಪ್ರಥಮತಃ ಕಡಿದು ಕೆತ್ತಿ ಸರಿಪಡಿಸಬೇಕೆಂಬುದನ್ನೂ ಅವರು ಮನಗಂಡಿದ್ದರು. ಆದುದರಿಂದಲೇ ಘನಲಿಂಗಿದೇವರು ತಮ್ಮ ವಚನಗಳಲ್ಲಿ ಶಿಕ್ಷಕರಿಗೆ ಶಿಕ್ಷಣವನ್ನು ಬಿತ್ತರಿಸಿರುವರು. ಅಂದರೆ ಮಠಗಳ ಮಹಾಜೀವಗಳು ಸತ್ವತಃ ಶಿವರೂಪಿಗಳಾಗಬೇಕು. ಆನೆಯ ರೂಪತಾಳಿ ಹಂದಿಯಂತೆ ನುಸುಳಬಾರದೆಂದು ಅವರು ಆಗ್ರಹಪೂರ್ವಕವಾಗಿ ಅಪ್ಪಣೆ ಕೊಡಿಸಿರುವರು. ಹಾಗೆಯೇ ಮತ್ತಿತರ ಕ್ಷೇತ್ರಗಳಲ್ಲಿಯೂ ಸೂತ್ರಧಾರರಾಗಿ, ಮುಂದಾಳುಗಳೆನಿಸಿಕೊಂಡಿರುವವರೂ ಮೊದಲು ತಮ್ಮ ತಮ್ಮ ಆತ್ಮಗಳನ್ನು ಪರೋಪಕಾರಬುದ್ಧಿಯಿಂದ ಬೆಳಗಿಕೊಳ್ಳಬೇಕು- ಆಮೇಲೆ ಆ ಬೆಳಗು ಅನ್ಯರಿಗೂ ಮಾರ್ಗದರ್ಶನವಾದೀತು ಎಂಬುದೇ ಅವರ ಘನೋದ್ದೇಶವಾಗಿತ್ತು.

ವಚನಗಳನ್ನು ಬರೆದಿಡುವುದರಲ್ಲಿ ಕೆಲಸಕ್ಕೆ ಬರದ ಜನ ಬರೆದುದು ಯಾವ ಕೆಲಸಕ್ಕೂ ಬಾರದೆ ಹೋಗುವುದೆಂಬುದು ಸಾಹಿತ್ಯ ಚರಿತ್ರೆಯನ್ನು ಬಲ್ಲವರು ಬಲ್ಲರು. ಆದರೆ ಸ್ವತಃ ಆದರ್ಶಜೀವನವನ್ನು ಜೀವಿಸಿದ ನಾಡಿನ ಜೀವನಾಡಿಗಳಂತಹ ಸಜ್ಜನ ತಮ್ಮ ಜ್ವಲಂತ ನಿತ್ಯಜೀವನದ ನಡೆಯಿಂದ ತಮ್ಮ ಸಮಾಲೀನ ಪರಿಸರಣ ಪ್ರಪಂಚವನ್ನು ಹಸನುಮಾಡುವುದು ಮಹತ್ತರ ಕಾರ್ಯವಾದರೆ, ಅವರು ತಮ್ಮ ನುಡಿಯಿಂದ-ಲಿಖಿತವಾದ ನುಡಿಯಿಂದ- ಬರುವ ಮಾನವ ಜನಾಂಗದ ಹಲವಾರು ತಲೆಮಾರಿಗೆ ಸಂದೇಶವನ್ನು ಕಾಲಶಿಲೆಯ ಮೇಲೆ ಎಂದೆಂದಿಗೂ ಅಳಿಸದಂತೆ- ನಿಕ್ಷೇಪಿಸಿ ಹೋಗುವುದು ಮಹತ್ತಮವಾದುದು.

ಈ ಘನಲಿಂಗಿದೇವರ ವಚನಗಳು ಸಂಖ್ಯೆಯಲ್ಲಿ ಅರವತ್ತಮೂರು. ಬಹುಶಃ ಅವರು ಅಷ್ಟೇ ವಚನಗಳನ್ನು ಬರೆದಿರಬಹುದು- ಏಕೆಂದರೆ ನಾವು ನೋಡಿದ ಎಲ್ಲ ಪ್ರತಿಗಳಲ್ಲೂ ಅಷ್ಟೇ ವಚನಗಳು ಉಪಲಭ್ಯವಿವೆ. ಅಧಿಕ ವಚನಗಳು ಸಿಗಲಿಲ್ಲ. ಅದು ಸಹಜವೇ. ಏಕೆಂದರೆ ಘನಲಿಂಗಿದೇವರು ಪೂಜ್ಯರೂ ಪುರಾತನರೂ ಆದ ಅರುವತ್ತು ಮೂರುಜನ ಆದ್ಯರ ಸಂಖ್ಯೆಯಾದ ಅರುವತ್ತುಮೂರರಷ್ಟು ವಚನಗಳನ್ನು ಮಾತ್ರ ಬರೆದಿರಬಹುದು."

ಪ್ರಸ್ತುತ ಮುದ್ರಣವನ್ನು ನಾಲ್ಕು ಪ್ರತಿಗಳನ್ನು ಬಳಸಿಕೊಂಡು ಹೊರತಂದಿರುವುದಾಗಿ ತಿಳಿಸಲಾಗಿದೆ. ಈ ನಾಲ್ಕು ಪ್ರತಿಗಳಲ್ಲಿ ಸುತ್ತೂರು ಮಠದ ಓಲೆ ಪ್ರತಿಯ ಜೊತೆಗೆ ಮೂರು ಕಾಗದದ ಪ್ರತಿಗಳನ್ನು ಉಪಯೋಗಿಸಿಕೊಳ್ಳಲಾಗಿದೆ ಎಂದು ಹೇಳಲಾಗಿದೆ.

ಘನಲಿಂಗಿದೇವರ ವಚನಗಳನ್ನು ಶ್ರೀ ಎಂ. ಬಸವಲಿಂಗಶಾಸ್ತ್ರಿಗಳು ೧೯೦೭ರಲ್ಲಿ ಡಾ. ಫ.ಗು. ಹಳಕಟ್ಟಿಯವರು ೧೯೨೭ರಲ್ಲೂ, ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ೧೯೫೦ರಲ್ಲೂ ಉತ್ತರೋತ್ತರ ಉತ್ತಮ ರೀತಿಯಲ್ಲಿ ಪರಿಷ್ಕರಿಸಿ ಪ್ರಕಟಿಸಿದ್ದರು. ಮತ್ತೆ ಇತ್ತೀಚೆಗೆ ನಮಗೆ ಮೇಲೆ ಪ್ರಸ್ತಾಪಿಸಿದ ನಾಲ್ಕು ಪ್ರತಿಗಳು ದೊರೆತು ಅವುಗಳ ಸಹಾಯದಿಂದ ಮತ್ತಷ್ಟು ಸಂಸ್ಕರಣ ಮಾಡಿ ಉತ್ತಮವಾದ ಹಾಗೂ ಸುಂದರವಾದ ಆವೃತ್ತಿಯನ್ನು ತರಬಹುದೆಂದು ಮನವರಿಕೆ ನಮಗಾದುದರಿಂದಲೂ ಮೇಲಾಗಿ, ನಮ್ಮ ಪ್ರಾಚೀನ ಪುಣ್ಯಗುರುಗಳ ಸೇವೆಯನ್ನು ಈ ಅವರ ವಚನ ಸಂಸ್ಕರಣ ಮುಖೇನ ಮಾಡಿ ಕೃತ್ಯ ನಾನಾಗಬೇಕೆಂಬ ಸೇವಾಶ್ರದ್ಧೆ ದುರ್ಭರವಾದುದ ರಿಂದಲೂ– ಈ ಸಂಸ್ಕರಣವನ್ನು ನಿರ್ವಹಿಸಿ ಸಹೃದಯರ, ಸಾಧಕರ, ಸುಧಾರಕರ, ಸಾಹಿತ್ಯೋಪಾಸಕರ ಮಡಿಲಲ್ಲಿ ಇಟ್ಟಿರುವೆವು."

**–ಸಂಪಾದಕರು: ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳು**

* * *

ತೋಂಟದ ಸಿದ್ಧಲಿಂಗಯತಿಯ ಇನ್ನೂ ಒಬ್ಬ ಶಿಷ್ಯನೂ ತನ್ನ ಕಾಲಕ್ಕೆ ಪ್ರಸಿದ್ಧ ಪಂಡಿತನೂ ಆದ ಘನಲಿಂಗನು ವಚನಗಳನ್ನು ಬರೆದಿದ್ದಾನೆ. 'ಸುತ್ತೂರು ಸಿಂಹಾಸನದ ಶರಣುವೆಣ್ಣಯ್ಯ ನಾನು' ಎಂದು ಹೇಳಿ 'ಎನ್ನ ಗುರುವಿನ ಗುರು ಪರಮಗುರು ಪರಮಾರಾಧ್ಯ ತೋಂಟದಾರ್ಯನಿಗೆ ಗುರುಭಕ್ತಿಯಿಂದ ಎನ್ನ ಶರಣು ಮಾಡಿದರು' (೧೨) ಎಂದು ಗುರುಭಕ್ತಿಯನ್ನು ತೋರಿದ್ದಾನೆ. ಇವನಲ್ಲಿ ಉತ್ಕಟವಾದ ಆರ್ತತೆಯಿದೆ. ಪ್ರಭಾವಿಯಾದ ವಾಣಿಯಿದೆ. ಪೂರ್ವದ ಅನುಕರಣವನ್ನು ಮೀರಿದ ಸ್ವತಂತ್ರ ಕಲ್ಪನಾಶಕ್ತಿಯೂ ಇದೆ. "ಎನ್ನಾತ್ಮನದೊಂದು ಅರಸುತನದ ಅನ್ಯಾಯವ ಕೇಳಯ್ಯ ಗುರುವೆ" ಎಂಬ ಮೊದಲನೆಯ ವಚನರೂಪಕವನ್ನು ನೋಡಬೇಕು. 'ಇಂದ್ರಿಯ ವಿಕಾರವೆಂಬ ಹುಚ್ಚುನಾಯಿಗಳು ಕಚ್ಚಿಕಚ್ಚಿ ಒದರುತ್ತವೆ. ಸೇವನ್ನಬರ ಸರಸ ಉಂಟೇ ಲಿಂಗವೇ? ಅನ್ಯಸಮಯದ ಗುಮ್ಮಟನ ಕೈವಿಡಿದೆತ್ತಿಕೊಂಡು ನಿನ್ನ ಸಮಯದ ಶಿಶುವು ಬಾವಿಯಲ್ಲಿ ಬೀಳ್ದರೆ ನೋಡುತಿರ್ಪರೆ ಕರುಣಿ' (೧) 'ಕುನ್ನಿಗೆ ರನ್ನದ ಹಲ್ಲಣ ಹಾಕಿದಂತೆ ಹಂದಿಯ ತಂದು ಅಂದಣವನೇರಿಸಿದಂತೆ ಎನಗೊಲಿದ ಶಿವಲಾಂಛನವ ಕೊಟ್ಟ ಕಾರಣವೇನಯ್ಯ ಗುರುವೆ?' (೨) 'ನಿನ್ನ ನೆನೆನೆನೆದು ಎನ್ನ ಮನ ಬೀಗಿ ಬೆಳೆದು ತಳಿರಾಗಿ ಹೂಮಿಡಿ ಗೊಂಬುದಯ್ಯಾ', 'ನಿನ್ನ ಹಾಡಿ ಹಾಡಿ ಜಿಹ್ವೆ ಅಮೃತಸಾಗರದೊಳಾಡುತಿಪ್ಪುದಯ್ಯ' (೬) 'ದೇವಾ ಕಂಬಳಕ್ಕೆ ಹೋಗಿ ಕನಕದ ಕೊಡನ ಕೊಂಡಂತೆ ಮರ್ತ್ಯಲೋಕಕ್ಕೆ ಬಂದು ಮಾನವ ಜನ್ಮವ ಕಂಡೆ' (೧೫) –ಈ ಮುಂತಾದ ವಚನಗಳಲ್ಲಿ ಘನಲಿಂಗನ ಘನವಾದ ಭಾವಶಕ್ತಿಯಿದೆ. ಮೇಲಾದ ಕಲ್ಪನಾಶಕ್ತಿಯಿದೆ. ಸತಿಪತಿಭಾವ ದರ್ಶಕವಾದ ಶರಣಾವಸ್ಥೆ ಅವನ ವಚನಗಳಲ್ಲಿ ಕೆಲವು ಸಲ ಕಾಣುತ್ತದೆ. ೧೨, ೧೩, ೧೪ ಈ ವಚನಗಳಲ್ಲಿ ಅದಕ್ಕೆ ನಿದರ್ಶನಗಳಿವೆ. "ಅಯ್ಯಾ ಬಸವಾದಿ ಪ್ರಮಥರೇ ನಿಮ್ಮ ಕರುಣಪ್ರಸಾದವ ನಾನು ಆದಿ ಅನಾದಿಯಲ್ಲಿ ದಣಿಯಲುಂಡ ದೆಸೆಯಿಂದಲೆನ್ನ ತನು ಷಟ್ಸ್ಥಲವನೊಳಕೊಂಡು ಉದಯವಾಯಿತ್ತು... ಎನ್ನ ಪ್ರಾಣ ಷಟ್ಸ್ಥಲಕ್ಕೆ ಸಲೆಸಂದ ಅಕ್ಕಮಹಾದೇವಿಯರು ಹೋದ ಬಟ್ಟೆಯಲ್ಲಿ ನಡೆವುದಲ್ಲದೆ ಕಿರುಬಟ್ಟೆಯಲ್ಲಿ ನಡೆಯದು" (೪೫). ಇದರಲ್ಲಿ ಬಸವಾದಿಗಳ ವಿಷಯದಲ್ಲಿ ಅತ್ಯಂತ ಆದರವಿದೆ; ಉಪಕೃತಭಾವವಿದೆ. ಕಿರುಬಟ್ಟೆಯಲ್ಲಿ ನಡೆಯದೆ ಶರಣರು ತುಳಿದ ದೊಡ್ಡ ಹಾದಿಯಲ್ಲಿ ದಾರಿ ನಡೆಯುವ ಹಂಬಲವಿದೆ. ಆದರೆ ಘನಲಿಂಗನ ವಚನದಲ್ಲಿ ಭಾವಗೀತೆಯ ಮನೋಧರ್ಮವು ಪಾಂಡಿತ್ಯದಿಂದಲೂ ಗೂಢತೆಯಿಂದಲೂ ವ್ಯಗ್ರವಾಗಿ ಶುದ್ಧವಚನ ಪರಂಪರೆ ವಿರಳವಾಗಿ ತೋರಿದೆಯೆನ್ನಲು ಅಡ್ಡಿಯಿಲ್ಲ. "ಕಾಮಧೇನುವಿನಲ್ಲಿ ಕಲ್ಪಿಸಿದ ಸವಿ ಇಪ್ಪುದಲ್ಲದೆ ಮರ್ತ್ಯದ ಪಶುವಿನಲ್ಲಿ ಉಂಟೇ ಅಯ್ಯಾ" (೫೭) ಈ ಮುಂತಾದ ವಚನದಲ್ಲಿಯ ಭಾವಗೀತೆಯ ಸ್ವಯಂಪೂರ್ಣತೆ ಹಾಗೂ ಸಂಕ್ಷಿಪ್ತತೆ ಅನೇಕ ವಚನಗಳಲ್ಲಿ ಕಾಣುವುದಿಲ್ಲ. ಅವು ಉದ್ದಾನುದ್ದವಾಗಿ ಬೆಳೆದಿವೆ. ಉದಾಹರಣೆಗೆ ೬, ೭, ೪೩, ೪೪ ಇವನ್ನು

ನೋಡಬೇಕು. ಅವುಗಳಲ್ಲಿ ಒಂದು ರೂಪಕವು ವಿಸ್ತಾರವಾಗಿ ದಾಂಗುಡಿಯಿಟ್ಟಿರಬಹುದು. ಸಿದ್ಧಾಂತ ಇಲ್ಲದೆ ಅನುಭಾವವು ಬಿಡಿಬಿಡಿಯಾಗಿ ಬಂದಿರಬಹುದು. ೨೧ರಲ್ಲಿ ಆನೆಯನ್ನು ಕಂಡ ಕುರುಡರ ಕಥೆ ಒಂದು ವಚನವಾಗಿದೆ. ೨೯, ೩೦, ೩೧, ೩೨ ರಲ್ಲಿ ಷಟ್ಸ್ಥಲಸಿದ್ಧಾಂತವು ಪ್ರಧಾನವಾಗಿದೆ. ಇಂಥಲ್ಲಿಯೂ "ಇದನರಿಯದೆ ಜ್ಞಾನಕ್ರಿಯೆಗಳಿಂದಾಚರಿಸಿ ಲಿಂಗಾಂಗಸಂಯೋಗವಾಗದೆ, ಕೆರಹಿನಟ್ಟೆಗೆ ನಾಯಿ ತಲೆದೂಗುವಂತೆ ತಮ್ಮ ಅರುಹಿಂಗೆ ತಾವೆ ತಲೆದೂಗಿ ಅಹಂ ಬ್ರಹ್ಮವೆಂಬ ಚೌರಾಸಿ ಹೊಲೆಯರ ಎನಗೊಮ್ಮೆ ತೋರದಿರಯ್ಯ" (೩೦) ಎಂಬ ಆದೇಶಯುತವಾದ ವಾಕ್ಯಗಳಿವೆ. ಆದರೂ ಘನಲಿಂಗನ ವ್ಯಕ್ತಿತ್ವದಲ್ಲಿ ಬುದ್ಧಿಭಾವನೆಗಳ ಪ್ರತಿಭೆ ಪಾಂಡಿತ್ಯಗಳ ಸಮರಸವು ಪೂರ್ಣವಾಗಿರಲಿಲ್ಲವೆಂಬುದನ್ನು ಸೂಚಿಸುತ್ತವೆ. ಈ ಯುಗದ ಸಮರ್ಥ ವಚನಕಾರರಲ್ಲಿ ಅವನೊಬ್ಬನೆಂಬುದೂ ಅವುಗಳಿಂದ ತಿಳಿಯುತ್ತದೆ. [ಪು. ೨೯೮–೨೯೯]

(ಕನ್ನಡ ಸಾಹಿತ್ಯ ಚರಿತ್ರೆ : ರಂ.ಶ್ರೀ. ಮುಗಳಿ, ಐದನೆಯ ಮುದ್ರಣ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೧)

* * *

ಸುತ್ತೂರು ಜಗದ್ಗುರು ಶ್ರೀ ಘನಲಿಂಗಿದೇವರ ವಚನಗಳು ಸಹಸ್ಪಂದನ ವ್ಯಾಖ್ಯಾನ ಸಹಿತ : ಸಂಪಾದಕರು: ಡಾ. ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು, ವ್ಯಾಖ್ಯಾನಕಾರರು: ಡಾ. ಎಲ್. ಬಸವರಾಜು, ಪರಿಷ್ಕೃತ ಎರಡನೆಯ ಮುದ್ರಣ ೨೦೦೫ (ಸಹಸ್ಪಂದನ ವ್ಯಾಖ್ಯಾನ ಸಹಿತ)

ಈ ಪರಿಷ್ಕೃತ ಎರಡನೆಯ ಮುದ್ರಣದ ಶುಭಹಾರೈಕೆಯಲ್ಲಿ : "ಸುತ್ತೂರು ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಸುತ್ತೂರು ಜಗದ್ಗುರು ಶ್ರೀ ವೀರಸಿಂಹಾಸನ ಮಠದ ೨೩ನೆಯ ಪೀಠಾಧೀಶರಾಗಿದ್ದ ಪೂಜ್ಯ ಜಗದ್ಗುರು ಡಾ. ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು ಸಂಪಾದಿಸಿದ 'ಘನಲಿಂಗಿದೇವರ ವಚನಗಳು' ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ೧೯೬೪ರಲ್ಲಿ ಪ್ರಕಟವಾಯಿತು. ವಚನಾಸಕ್ತರ, ಸಾಹಿತ್ಯಾಭಿಮಾನಿಗಳ ವಿಶೇಷ ಗಮನಸೆಳೆಯಿತು. ಅಪೂರ್ವ ವಚನಸಂಗ್ರಹಗಳ ಸಾಲಿನಲ್ಲಿ ಈ ಕೃತಿಗೊಂದು ಮನ್ನಣೆ ದೊರಕಿತು.

ಶ್ರೀ ಘನಲಿಂಗಿದೇವರು ಸುತ್ತೂರು ಶ್ರೀಮಠದ ಹನ್ನೊಂದನೆಯ ಪೀಠಾಧಿಪತಿಗಳಾಗಿದ್ದವರು ೧೫ನೆಯ ಶತಮಾನದಲ್ಲಿ ಧಾರ್ಮಿಕ ಕ್ಷೇತ್ರದ ದೀವಿಗೆಯಾಗಿದ್ದ ಶ್ರೀ ತೋಂಟದ ಸಿದ್ಧಲಿಂಗ ಯತಿವರ್ಯರ ಸಮಕಾಲೀನರು. ಅವರ ಈ ಕೃತಿಯ ವಸ್ತು, ವಿಷಯವ್ಯಾಪ್ತಿಯನ್ನು ಪರಿಭಾವಿಸಿದಾಗ ಗ್ರಂಥರಚನೆಯ ಅಂದಿನ ಪ್ರಸ್ತುತತೆ ಎದ್ದುಕಾಣುತ್ತದೆ. ಬಸವಯುಗದ ವಚನ ಭಾವತೀವ್ರತೆಯ ಜೊತೆಗೆ ಪದಬಂಧದ ಖಚಿತತೆ ಇದೆ. ಇಲ್ಲಿರುವ ೬೩ ವಚನಗಳು ಅರವತ್ಮೂರು ಪುರಾತನರನ್ನು ನೆನಪಿಸುವಂತಿವೆ. ಸ್ವಾನುಭೂತಿಯ ಹಿನ್ನೆಲೆಯಲ್ಲಿ ರಚಿತವಾಗಿರುವ ಗರಿಮೆಯಿಂದಾಗಿ ಕೃತಿಯ ವಿಶಿಷ್ಟತೆಗೆ ಹೆಚ್ಚಿನ ಎತ್ತರ ಲಭಿಸಿದೆ.

ಉತ್ತಮ ಭಾವಗೀತೆಗಳಂತಿರುವ ಇಲ್ಲಿನ ಅನೇಕ ವಚನಗಳು ಅಂತರಂಗವೀಕ್ಷಣೆಗೆ ದಿವ್ಯತೆಯ ಬೆಳಕಿಗೆ ದಿಕ್ಸೂಚಿಯಾಗಿವೆ. ಶಿವಸ್ವರೂಪಜ್ಞಾನದ ಅನನ್ಯಪ್ರತಿಬಿಂಬವಾಗಿವೆ. ಇವುಗಳಲ್ಲಿ ಧ್ಯಾನದ ಏಕಾಂತತೆಯಿದೆ. ಪ್ರಾರ್ಥನೆಯ ಆರ್ತತೆಯಿದೆ. ಅಂತೆಯೇ ಹರಿತವಾದ ವಿಡಂಬನೆಯಿದೆ, ದುಷ್ಕಾರ್ಯದ ಖಂಡನೆಯಿದೆ. ಅರಿವಿನ ಸ್ವಯಂಪ್ರಕಾಶದಿಂದ ಬೆಳಗುವ ಈ ವಚನಗಳು ತಮ್ಮ ಅಂತಸ್ಸತ್ವದಿಂದ, ಆನುಭಾವಿಕ ನೆಲೆಯಿಂದ ಸಹಜವಾಗಿ ಜನಸಮುದಾಯದ ಒಳಿತಿಗೆ ನೆರವಾಗಿವೆ, ಬಾಳಬಟ್ಟೆಯಾಗಿವೆ. ಹೀಗೆ ಈ ಕೃತಿಗೆ ವಿಶೇಷವಾದ ಗುರು ತೇಜಸ್ಸು ಕೂಡಿಬಂದಿದೆ.

ನಲವತ್ತು ವರ್ಷಗಳ ಹಿಂದೆ ಪ್ರಕಟವಾದ ಈ ಕೃತಿ ಇದೀಗ ಡಾ. ಎಲ್. ಬಸವರಾಜು ಅವರ ಸಹಸ್ಪಂದನ ವ್ಯಾಖ್ಯಾನಸಹಿತ ಹೊರಬರುತ್ತಿರುವುದು ಅತ್ಯಂತ ಸಂತೋಷದ ಸಂಗತಿಯಾಗಿದೆ. (೨೦೦೫ರಲ್ಲಿ ಪ್ರಕಟಿತ ಪುಟ v-vi)

* * *

ಶ್ರೀ

ಘನಲಿಂಗಿದೇವರು ನಿರೂಪಿಸಿದ ಕನ್ನಡ ವೀರಶೈವ ಸಿದ್ಧಾಂತ ವಚನವು
ಮುಡುಕುತೊರೆ ಶ್ರೀ ವೀರಶೈವ ಮತಸಂವರ್ಧಿನೀ
ಸಭಾಧ್ಯಕ್ಷರಾದ ಪಿ.ಆರ್. ಕರಿಬಸವಶಾಸ್ತ್ರಿಗಳವರ ಶಿಷ್ಯನಾದ ಎಂ. ಬಸವಲಿಂಗ ಶಾಸ್ತ್ರಿಯಿಂದ ಪರಿಷ್ಕರಿಸಲ್ಪಟ್ಟು
ಮೈಸೂರು ಶ್ರೀಮತ್ಕನ್ಯಕಾಪರಮೇಶ್ವರೀ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.
ಪ್ರಥಮ ಮುದ್ರಣವು : ೧೯೦೭

**ಪ್ರಕಟನೆ:** ಮುಡುಕುತೊರೆ ಶ್ರೀ ವೀರಶೈವ ಮತಸಂವರ್ಧಿನೀ ಸಭೆಯಲ್ಲಿ ಸಭಾಧ್ಯಕ್ಷರ ಮುಂದೆ ಮೇಲ್ಕಂಡ ಸಭೆಯ ಮುಖ್ಯ ಮೆಂಬರಾದ ಮ॥ ರಾ॥ ಕೆ. ಚನ್ನಬಸಪ್ಪನವರು ಈಗ ನಮ್ಮ ವೀರಶೈವ ಮತದ ಜನಾಂಗದವರಿಗೆ ವೀರಶೈವ ಸಿದ್ಧಾಂತಾರ್ಥವನ್ನು ಬೋಧಿಸುವ ಗ್ರಂಥ ಸಂಸ್ಕೃತ ಭಾಷೆಯಲ್ಲಿರುವುದೇ ಹೊರತು ಕನ್ನಡದಲ್ಲಿ ಯಾವ ಗ್ರಂಥವಿರುವುದೋ ಗೊತ್ತಿಲ್ಲ. ಆದರೆ ಸಂಸ್ಕೃತ ಭಾಷಾಪರಿಚಯವಿಲ್ಲದ ನಮ್ಮ ಮತದ ಗ್ರಂಥವಿರುವುದೊ ಗೊತ್ತಿಲ್ಲ. ಆದರೆ ಸಂಸ್ಕೃತಭಾಷಾಪರಿಚಯವಿಲ್ಲದ ನಮ್ಮ ಮುತದ ಮಹಾಜನಂಗಳಿಗೆ ವೀರಶೈವಸಿದ್ಧಾಂತಾರ್ಥವು ತಿಳಿಯುವುದಕ್ಕೆ ಅಸಾಧ್ಯವಾಗಿರುವುದು. ಆದಕಾರಣ ನಮ್ಮ ಈ ಮಹಾಸಭೆಯಿಂದ ವೀರಶೈವ ಸಿದ್ಧಾಂತಾರ್ಥವನ್ನು ಬೋಧಿಸುವ ಒಂದು ಕನ್ನಡ ಗ್ರಂಥವು ಹೊರಡಿಸಲ್ಪಟ್ಟಿದೆ. ನಮ್ಮ ಮತದ ಆಬಾಲವೃದ್ಧರೂ ಅದನ್ನು ಓದಿಕೊಂಡು ತಮ್ಮ ತಮ್ಮ ಆಶ್ರಮಕ್ಕೆ ತಕ್ಕ ತಕ್ಕ ಧರ್ಮಗಳನ್ನು ಆಚರಿಸುವುದಕ್ಕೆ ತುಂಬ ಅನುಕೂಲವಾಗಿರುವುದೆಂದು ಪ್ರಾರ್ಥಿಸಿಕೊಂಡುದರ ಮೇಲೆ ಸಭಾಧ್ಯಕ್ಷರು ಅನುಮೋದಿಸಿ ಅಪ್ಪಣೆ ಕೊಟ್ಟ ಪ್ರಕಾರ ನಾನು ಕನ್ನಡದಲ್ಲಿ ಅನೇಕ ವಚನ ಗ್ರಂಥಗಳನ್ನು ನೋಡಿ ಎಲ್ಲಾ ಗ್ರಂಥಗಳಿಗಿಂತಲೂ ಈ ಘನಲಿಂಗಿ ವಚನವು ವೀರಶೈವ ಸಿದ್ಧಾಂತಾರ್ಥವನ್ನು ಸ್ಪಷ್ಟವಾಗಿ ಬೋಧಿಸುವುದಾದುದರಿಂದ ಇದನ್ನು ಪ್ರಿಂಟು ಮಾಡಿಸಿರುವೆನು. ಇದರ ಮುದ್ರಣಕ್ಕಾಗಿ ಆದ ದ್ರವ್ಯವನ್ನು ಮ॥ ರಾ॥ ಕೆ. ಚೆನ್ನಬಸಪ್ಪನವರು ಸಹಾಯ ಮಾಡಿರುತ್ತಾರೆ. ಪುಣ್ಯಶಾಲಿಗಳಾದ ವೀರಶೈವರು ಇವರಂತೆಯೆ ವಿದ್ಯಾವಂತರಾದವರಿಗೆ ಪ್ರೋತ್ಸಾಹ ಕೊಟ್ಟು ದ್ರವ್ಯಸಹಾಯ ಮಾಡಿದಲ್ಲಿ ಅನೇಕ ಗ್ರಂಥಗಳು ಪ್ರಚಾರವಾಗುವ ವಿಷಯದಲ್ಲಿ ಏನೂ ಸಂಶಯವಿಲ್ಲ.

ಅವಾಚ್ಯಾತ್ಮ ಸ್ವರೂಪಾಯ
ಶಿವಭಾವ ಪ್ರದಾಯಿನೇ
ನಮಸ್ಸದ್ಗುರುನಾಥಾಯ
ಷಟ್ಸ್ಥಲ ಬ್ರಹ್ಮಮೂರ್ತಯೇ

ಇಂತಪ್ಪ ಷಟ್ಸ್ಥಲಬ್ರಹ್ಮವೆನಿಸುತ ತೋಂಟದ ಸಿದ್ಧಲಿಂಗ ಪ್ರಭುವಿನ ಕರುಣಾ ಪ್ರಸಾದಮಂ ಪಡೆದು ಘನಲಿಂಗಿದೇವರು ತಮ್ಮ ಸ್ವೇಚ್ಛಾಲಿಂಗಾನುಭವದಿಂದ ಹಾಡಿದ ವಚನ.

೧. ಮರ್ತ್ಯದ ಬೀಜವನೆತ್ತಿ ೨. ಎನ್ನಾತ್ಮದೊಂದು –ಈ ವಚನಗಳಾದ ಮೇಲೆ "ಉಚ್ಚೆಯ ಬಚ್ಚಲ" ಎಂಬ ೬೩ನೆಯ ವಚನವಾದ ಮೇಲೆ "ಇಂತು ಘನಲಿಂಗಿದೇವರು ನಿರೂಪಿಸಿದ ವೀರಶೈವ ಸಿದ್ಧಾಂತವು ಸಂಪೂರ್ಣವು" ಎಂದಿದೆ.

"ಇಲ್ಲಿಯ ಉಚ್ಚೆಯ ಬಚ್ಚಲ" ಎಂಬ ವಚನವು "ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿ"ಯ–ಸಂಕೀರ್ಣ ವಚನ ಸಂಪುಟ–ಆರು, ಇದರಲ್ಲಿಯ ಘನಲಿಂಗಿದೇವರ ವಚನಗಳಲ್ಲಿ ೩೯ನೆಯ ವಚನವಾಗಿದೆ.

**ಘನಲಿಂಗಿದೇವನ ಅಮೃತವಾಣಿ**

೧. ಕಪಿ ಕಳ್ಳಕುಡಿದು, ಕಡಲದಾಂಟುವೆನೆಂದು ಲಂಘಿಸಿ ನಡುನೀರಿನಲ್ಲಿ ಬಿದ್ದು ಮೀನು ಮೊಸಳೆಗೆ ಆಹಾರವಾದಂತಾಯಿತಯ್ಯ ಎನ್ನಬಾಳು

೨. ಕುನ್ನಿಗೆ ರನ್ನದ ಹಲ್ಲಣವ ಹಾಕಿದಂತೆ; ಹಂದಿಯ ತಂದು ಅಂದಣವನೇರಿಸಿದಂತೆ, ಎನಗೊಲಿದು ಶಿವಲಾಂಛನವ ಕೊಟ್ಟ ಕಾರಣವೇನಯ್ಯ ಗುರುವೆ?

೩. ಏನೆಂಬೆನೇನೆಂಬೆನಯ್ಯ; ಮತಿಗೆಟ್ಟು ಮಾನವಲೋಕಕ್ಕೆ ಬಂದೆ; ಬಂದ ಬರವಿನಲ್ಲಿಯೆ ಭವವೆಂಬ ಭೂಪತಿ ಎನ್ನ ಸೆರೆವಿಡಿದು ಕಾಲಕಾಮರ ವಶಕ್ಕೆ ಕೊಟ್ಟನಯ್ಯ.

೪. ಅರ್ಥದ ಮೇಲಣ ಆಶೆಯುಳ್ಳನ್ನಕ್ಕರ ಮರ್ತ್ಯಲೋಕದ ಮಹಾಜಂಜಡ ಬಿಡದಯ್ಯ.

೫. ಎಲೆತಂಗಿ, ಶರಣಸತಿ ಲಿಂಗಪತಿಯಾದ ಪತಿವ್ರತಾಭಾವದ ಚಿಹ್ನೆ ನಿನ್ನ ನಡೆನುಡಿಯಲ್ಲಿ ಹೊಗರುದೋರುತ್ತಿದೆ.

೬ ಅಯ್ಯ, ಪಂಚತತ್ವಂಗಳ ಪಡೆವ ತತ್ವ ಪ್ರತ್ಯಕ್ಷವಾಗದ ಮುನ್ನ, ಪದ್ಮಜಾಂಡವಧರಿಸಿಪ್ಪ ಕಮಠ–ದಿಕ್ಕರಿಗಳಿಲ್ಲದ ಮುನ್ನ; ನಿರ್ಮಲಾಕಾಶವೇ ಸಾಕಾರವಾಗಿ ನಿರಂಜನವೆಂಬ ಪ್ರಣವವಾಯಿತ್ತಯ್ಯ

೭ ಶರಣಸತಿ ಲಿಂಗಪತಿಯೆಂದು ಬಣ್ಣಿಸಿ, ಒಪ್ಪವಿಟ್ಟು ನುಡಿದುಕೊಂಬ ಕುಟಿಲವೆಣ್ಣಲ್ಲವಯ್ಯ; ನಿನಗೆ ಮೆಚ್ಚಿ ಮರುಳಾದ ಪತಿವ್ರತೆಯೆಂಬುದಕ್ಕೆ ದೃಷ್ಟವಕೊಟ್ಟು ನುಡಿವುತಿಪ್ಪೆ ಕೇಳಯ್ಯ ಗಂಡನೇ

೮. ಮುಂದನರಿಯದ ಮತಿಗೆಟ್ಟ ಮರುಳು ಮನವೇ, ಕಾಲ ಕಾಮರ ಗೆಲುವ ಉಪಾಯವಾವುದೆಂದು ತಲೆಯೂರಿ ನೆಲನ ಬರೆವುತಿಪ್ಪೆ

೯. ಶರಣು ಶರಣಾರ್ಥಿ ಲಿಂಗವೇ; ಹೊನ್ನು ಹೆಣ್ಣು ಮಣ್ಣು ಬಿಟ್ಟಾತನೇ ವಿರಕ್ತನೆಂದು ವಿರಕ್ತದೇವರೆಂದು ಬಣ್ಣವಿಟ್ಟು ಬಣ್ಣಿಸಿ ಕರೆವರಯ್ಯ; ಆವಪರಿ ವಿರಕ್ತನಾದೆನಯ್ಯ ಗುರುವೆ? (೩೧)

೧೦. ಅಂಗದ ಮೇಲಕ್ಕೆ ಬಂದ ಆಚಾರ ಲಿಂಗದ ಹೊಲಬನರಿಯದೆ; ಕೈಲಾಸದ ಮೇಲಿಪ್ಪ; ಬಾಲಕೋಟಿ ಸೂರ್ಯ ಪ್ರಕಾಶವನುಳ್ಳ ಶಿವನನೊಲಿಸಬೇಕೆಂದು; ಬರಿದು ವಸ್ತುವ ಎರಡಿಟ್ಟು ನುಡಿವ ಮಂದಮತಿಗಳು ನೀವು ಕೇಳಿರೇ

೧೧. ಮಾಯೆಯ ಕಾಲು ಬಾಯಿಗೆ ಸಿಕ್ಕಿಕೊಂಡು ತೊತ್ತಳದುಳಿಸಿಕೊಂಬ; ಮರುಳು ಮಾನವರ ಬಗೆಯ ನೋಡಯ್ಯ ಮನವೇ

೧೨. ಲೋಕದ ನಚ್ಚಮಚ್ಚನೆ ನೀಗಿ ನಿಚ್ಚಟನಾಗಿ; ಜ್ಞಾನಕ್ರೀಗಳಿಂದಾಚರಿಸಿ ಅಂಗ ಲಿಂಗಸಂಬಂಧಿಗಳಾದ; ಶಿವಲಿಂಗ ಮೋಹಿಗಳು ನೀವು ಕೇಳಿರಯ್ಯ

೧೩. ಹೆಣ್ಣು ಹಿಡಿದವರೆಲ್ಲರೂ ಬ್ರಹ್ಮನ ಸೃಷ್ಟಿಗೊಳಗಾದರು; ಹೊನ್ನು ಹಿಡಿದವರೆಲ್ಲರೂ ವಿಷ್ಣುವಿನ ಸ್ಥಿತಿಗೊಳಗಾದರು; ಮಣ್ಣು ಹಿಡಿದವರೆಲ್ಲರೂ ರುದ್ರನ ಸಂಹಾರಕ್ಕೊಳಗಾದರು; ಹೆಣ್ಣು ಹೊನ್ನು ಮಣ್ಣ ಬಿಟ್ಟು ಲಿಂಗಾಂಗ ಸಂಯೋಗವರಿಯದೆ; ಸದಾಚಾರದಲ್ಲಿ ತಿರಿದುಂಡು; ಆತ್ಮಸುಖಿಯಾದವರೆಲ್ಲರೂ ಫಲಭೋಗಕ್ಕೊಳಗಾದರು

೧೪. ಕನ್ನವನಿಕ್ಕಿ ಚಿನ್ನವ ತಂದು ಜಂಗಮಾರ್ಚನೆಯ ಮಾಡುವದಾವ ಸದಾಚಾರ; ಹಾದರವ ಮಾಡಿ ಹಾಗವ ತಂದು ಜಂಗಮಾರ್ಚನೆಯ ಮಾಡುವದಾವ ಸದಾಚಾರ; ಗಾಣವಹಾಕಿ ಮೀನ ಹಿಡಿದು ತಂದು ಜಂಗಮಾರ್ಚನೆಯ ಮಾಡುವದಾವ ಸದಾಚಾರ?

೧೫. ಎನ್ನ ಕಾಯ ಪ್ರಸಾದವಾಯಿತ್ತು; ಎನ್ನ ಜೀವ ಪ್ರಸಾದವಾಯಿತ್ತು; ಎನ್ನ ಪ್ರಾಣ ಪ್ರಸಾದವಾಯಿತ್ತು; ಎನ್ನ ಕರಣೇಂದ್ರಿಯಂಗಳೆಲ್ಲವು ಪ್ರಸಾದವಾದುವು ನೋಡಾ; ನೀನೆನ್ನ ಕರಸ್ಥಲದಲ್ಲಿ ಪ್ರಸಾದ ರೂಪಾದಿರಾಗಿ ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನ.



# ಲಕ್ಕಣ್ಣದಂಡೇಶ ವಿರಚಿತ ಶಿವತತ್ತ್ವಚಿಂತಾಮಣಿಯಲ್ಲಿಯ ಕೆಲವು ಕಾಯಕಗಳು

ವೀರಶೈವ ಧಾರ್ಮಿಕ ಪರಿಭಾಷೆಯಲ್ಲಿ ಕಾಯಕಕ್ಕೆ ವಿಶಿಷ್ಟಾರ್ಥಗಳಿವೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ 'ಕಾಯಕ' ಶಬ್ದಕ್ಕೆ ಈ ಮುಂದಿನ ಅರ್ಥಗಳನ್ನು ಕೊಡಲಾಗಿದೆ.

**ಕಾಯಕ:** ೧. ದೇಹಕ್ಕೆ ಸಂಬಂಧಿಸಿದ, ದೈಹಿಕವಾದ. ೨. ಶರೀರ, ದೇಹ. ೩. ದೇಹಶ್ರಮದ ಕೆಲಸ, ಕಸಬು, ದುಡಿಮೆ. ೪. [ವಿದ್ಯೆ] ಕೆಲಸ ಮಾಡಿ ಅಥವಾ ಕಸಬಿನಿಂದ ಗಳಿಸಿದ್ದು, ಸಂಪಾದನೆ. ೫. [ವೀಶೈ] ಸಮರ್ಪಣಭಾವದಿಂದ ಮಾಡುವ ವೃತ್ತಿ, ಕೈಂಕರ್ಯ. ೬. (ಆಲಂ) ದುಷ್ಟವೃತ್ತಿ, ಕೆಟ್ಟಕೆಲಸ.

ಶಿವತತ್ತ್ವ ಚಿಂತಾಮಣಿಯ 'ನೂತನ ಗಣಂಗಳ ಕಥೆ' ಎಂಬ ೩೮ನೆಯ ಸಂಧಿಯಲ್ಲಿ ಸುಮಾರು ಆರುನೂರು ನೂತನ ಗಣಂಗಳ ಉಲ್ಲೇಖವಿದೆ. ಅವರಲ್ಲಿ ಕೆಲವರ ಸಂಕ್ಷಿಪ್ತ ಜೀವನ ಚರಿತ್ರೆಯೂ ಹಲವರ ಹೆಸರು ಸ್ಥಳ ಮತ್ತು ಕೈಕೊಂಡ ಕಾಯಕಗಳ ಹೆಸರೂ ಬಂದಿವೆ. ಅವುಗಳ ಒಂದು ಸ್ಥೂಲ ವಿಶ್ಲೇಷಣೆ ಮಾಡಲು ಯತ್ನಿಸಲಾಗಿದೆ.

೧. **ಅಡಕೆವಸರ ಕಾಯಕ:** ಎಸವುಂಟುಕೂರ ತಿಪ್ಪಣ್ಣ ಮಲನೂರಡಕೆವಸರ ಗಾಯಕದ ಬಸವಪ್ಪ (ಸಂಧಿ ೩೮–೭೭). ಮಲನೂರಿನ ಬಸವಪ್ಪ ಎಂಬ ಶರಣ 'ಅಡಕೆವಸರ'ದ ಕಾಯಕದಲ್ಲಿ ನಿರತನಾಗಿದ್ದ. ಅಡಕೆ + ಪಸರ = ಅಡಕೆಯ ಅಂಗಡಿಯನ್ನಿಟ್ಟುಕೊಂಡು ವ್ಯಾಪಾರದ ಕಸಬನ್ನು ಮಾಡುತ್ತಿದ್ದಂತೆ ತಿಳಿದುಬರುತ್ತದೆ.

೨. **ಆರಂಬ ಕಾಯಕ:** ಕೋರಮಜುಗಲ್ಲ ಕೇಸೂರೊಳಿಹಳೊಪ್ಪದಿಂದಾರಂಬ ಕಾಯಕವ ಮಾಡಿಸುತಲಮ್ಮಾಯಿ (೩೮–೭೯); ಆರಂಬ ಕಾಯಕದ ಧ್ಯಾನವಲ್ಲದೆ ಮಾವನೂರೊಳುಂ–ಮಾಯಿದೇವಾ (೩೮–೯೧). ಕೋರಮಜುಗಲ್ಲ ಕೇಸೂರಿನ ಅಮ್ಮಾಯಿ, ಮಾವನೂರಿನ ಮಾಯಿದೇವ ಆರಂಬಕಾಯಕ ಮಾಡಿಸುತ್ತಿದ್ದರು. ಆರಂಬ + ಕಾಯಕ = ಬೇಸಾಯ; ಒಕ್ಕಲುತನ.

೩. **ಉಪ್ಪಲಿಕ ಕಾಯಕ:** ಪಿರಿದೆನಿಸುತುಪ್ಪಲಿಕ ಕಾಯಕವ ಮಾಡುತಿಹ ಶರಣನಣ್ಣಾಭಕ್ತ (೩೮–೧೭). ರಾಜಕೊಂಡೆಯ ಅಣ್ಣಾಭಕ್ತ ಈ ಕಸಬನ್ನು ಮಾಡುತ್ತಿದ್ದ. ಉಪ್ಪಲಿಕ + ಕಾಯಕ = ೧. ಉಪ್ಪು ತಯಾರಿಸುರ ಕೆಲಸ, ೨. ಮಣ್ಣು ಅಥವಾ ಗಾರೆ ಕೆಲಸ. ಕೆಲದಿವಸವುಪ್ಪಲಿಗೆ ಕಾಯಕವನು ವೊತ್ತಿ ಮಾಡುತ್ತಿರಲು (೩೮–೧೯). ಮೇಲಿನ ಎರಡು ಪ್ರಯೋಗಗಳಲ್ಲಿ ಅಣ್ಣಾಭಕ್ತ ಉಪ್ಪನ್ನು ತಯಾರಿಸುವ ಕೆಲಸ ಮಾಡುತ್ತಿದ್ದ ಎಂಬುದು ಆತನ ಕಥೆಯಿಂದ ಸ್ಪಷ್ಟವಾಗುತ್ತದೆ.

೪. **ಎಲೆಯ ಕಾಯಕ:** ಕೋಟೆಯ ಕೆಜೆಯ ಗರುವೆ ಗಂದಿಗರ ಕಾಯಕದ ಲಕ್ಕಮ್ಮನಲ್ಲಿರುಹ ಶರಣನು ಎಲೆಯ ಕಾಮಣ್ಣತಂದೆಗಳ (೩೮–೫೫); ಪರಮಕೊಪ್ಪದ ಎಲೆಯ ಕಾಯಕದ ತಿಮ್ಮಣ್ಣ (೩೮–೭೧). ಕಲಬುರಿಗೆಯಲಿ ಎಲೆಗಾಯಕದ ಹೆಗ್ಗಿಸೆಟ್ಟಿಯವರ ಲಿಂಗಪ್ಪ (೩೮–೧೭೦); ಎಲೆ + ಕಾಯಕ = ವೀಳೆಯದೆಲೆಯನ್ನು ಮಾರುವ ಅಥವಾ ಬೆಳೆಸುವ ಕಸಬು. ಈ ವೃತ್ತಿಯನ್ನು ಕಾಮಣ್ಣ ಮತ್ತು ತಿಮ್ಮಣ್ಣ ಹೆಗ್ಗಿಶೆಟ್ಟಿಯರ ಲಿಂಗಪ್ಪ ಕೈಕೊಂಡಿದ್ದರೆಂದು ಮೇಲಿನ ಪ್ರಯೋಗಗಳಿಂದ ವ್ಯಕ್ತವಾಗುತ್ತದೆ.

೫. **ಓದಿಸುವ ಕಾಯಕ:** ಶಶಿಧರನ ಭಕ್ತನೋದಿಸುವ ಚಾಕಪ್ಪ (೩೮-೭೩); ಒದವಿಪ್ಪ ಜಿನ್ನಾಗರದೊಳೆಸೆವ ನೋದಿಸುವ ವಿದಿತಗುಣಿ ಹಿರಿಯಣ್ಣ (೩೮-೮೬). ಓದಿಸು + ಕಾಯಕ = ಓದನ್ನು ಹೇಳಿಕೊಡುವುದು, ವಿದ್ಯಾಭ್ಯಾಸ ಮಾಡಿಸುವುದು -ಈ ವೃತ್ತಿ. ಇದನ್ನು ಚಾಕಪ್ಪ ಮತ್ತು ಹಿರಿಯಣ್ಣ ಮಾಡುತ್ತಿದ್ದರು.

೬. **ಕಂಗಾಣಿಕೆಯ ಕಾಯಕ:** ಬಿನ್ನಣದಿ ಕಂಗಾಣಿಕೆಯ ಕಾಯಕದೊಳು ನೆಱೆ ಹನ್ನೆರಡು ಹೊನ್ನ ಜೀವಿಕದಿನಿರ್ಪಂ... ಬಿರುದನ್ನೆಗಳೆಯಱೆಯೂರ ಚೆಲ್ಲಪ್ಪತಂದೆ (೩೮-೯೮) ಕಂಗಾಣಿಕೆ + ಕಾಯಕ = ೧. ಕಣ್ಣಿನಿಂದ ಕಾಣುವಿಕೆ; ಪ್ರತ್ಯಕ್ಷ ಕಾಣುವಿಕೆ. ೨. ದಾರಿತೋರಿಸುವುದು; ಮಾರ್ಗದರ್ಶನ. ಚೆಲ್ಲಪ್ಪ ತಂದೆ ಮಾರ್ಗದರ್ಶನ ಮಾಡುವ ವೃತ್ತಿಯನ್ನು ಕೈಕೊಂಡಿದ್ದನೆಂದು ತಿಳಿದುಬರುತ್ತದೆ.

೭. **ಕಂಚುಗಾಱ ಕಾಯಕ:** ಸಲ್ಲಲಿತ ಕಂಚುಗಾಱರ ಕಾಯಕದ ಕೊಂಗನೆಂಬ ಸದ್ಭಕ್ತಿಯುತನು (೩೮-೯೩); ಕಂಚುಗಾಱ ಕಾಯಕದ ಸಿರಸಿಯಲೆಯ್ದೆ ನೆಲೆಯುಂಗುರದೊಳೆಸೆವ ಮಲ್ಲಪ್ಪ ತಂದೆಗಳ (೩೮-೧೬೦); ಕಂಚುಗಾಱ+ ಕಾಯಕ = ಕಂಚು, ಹಿತ್ತಾಳೆ ಮೊದಲಾದ ಲೋಹದ ಕೆಲಸ. ಕೊಂಗ ಮತ್ತು ಮಲ್ಲಪ್ಪ ಎಂಬುವರು ಈ ಕೆಲಸವನ್ನು ಮಾಡುತ್ತಿದ್ದರು.

೮. **ಕುಂಬಾಱ ಕಾಯಕ:** ಮುದದಿ ಕುಂಬಾಱ ಕಾಯಕದ ಕೂನಲಪೋಲು (೩೮-೬೮); ಕುಂಬಾಱ ಕಾಯಕದ ದೇವಪ್ಪ (೩೮-೧೬೫); ಕುಂಬಾಱ + ಕಾಯಕ = ಕುಡಿಕೆ, ಮಡಕೆ ಮೊದಲಾದ ಮಣ್ಣಿನ ಪಾತ್ರೆಗಳನ್ನು ಮಾಡುವ ಕಸಬು. ಈ ಕಸಬನ್ನು ಕೂನಲುಪೋಲು ಮತ್ತು ದೇವಪ್ಪ ಎಂಬುವರು ಕೈಕೊಂಡಿದ್ದರು.

೯. **ಕಟ್ಟಿಗೆಯ ಕಾಯಕ:** ಚಂಪಾವತಿಯೊಳಾ ಮಹಾತ್ಮನು ಕಟ್ಟಿಗೆಯ ಕಾಯಕದ ವೀರು (೩೮-೧೬೬). ಕಟ್ಟಿಗೆ+ ಕಾಯಕ = ಉರುವಲನ್ನು, ಸೌದೆಯನ್ನು ತರುವ ವೃತ್ತಿ. ಈ ವೃತ್ತಿಯನ್ನು ಮಹಾತ್ಮನಾದ ವೀರು ಕೈಕೊಂಡಿದ್ದಂತೆ ತಿಳಿದುಬರುತ್ತದೆ.

೧೦. **ಕಡಗದ ಕಾಯಕ:** ಹೊನ್ನೂರ ಕಡಗದ ಕಾಯಕವನು ತಾ ಮಾಡುತಿರ್ಪ ವಿರುಪಣ್ಣ (೩೮-೫೬). ಒದವಿದಾ ಚೂಡವಾಡಿಯಲಿ ಕಡಗದ ಕಾಯಕದ ಭಕ್ತ ಚೂಡಪ್ಪನೊಪ್ಪುವರೆ (೩೮-೭೨); ಅತಿಪಿರಿದೆನಿಪಭಕ್ತ ಹಚಿಗಂಚಿಯ ಕಡಗದ ಕಾಯಕದ ಬಸವಣ್ಣಯ್ಯನು (೩೮-೧೮೧). ಕಡಗ + ಕಾಯಕ = ಕೈಗೆ ಅಥವಾ ಕಾಲಿಗೆ ಹಾಕಿಕೊಳ್ಳುವ ಬಳೆಯನ್ನು ತಯಾರಿಸುವ ಕಾಯಕ. ಈ ಕಾಯಕವನ್ನು ವಿರುಪಣ್ಣ, ಚೂಡಪ್ಪ, ಬಸವಣ್ಣಯ್ಯ ಮಾಡುತ್ತಿದ್ದರು.

೧೧. **ಕನ್ನಡಿಯ ಕಾಯಕ:** ಕನ್ನಡಿಯ ಕಾಯಕದ ತಿಮ್ಮಣ್ಣ (೩೮-೧೧). ಕನ್ನಡಿ + ಕಾಯಕ = ದರ್ಪಣ. ಮುಕುರವನ್ನು ಮಾಡುವ ಕಸಬು? ಅಥವಾ ಕನ್ನಡಿಯನ್ನು ಹಿಡಿಯುವ ವ್ಯಕ್ತಿಯೆ? ತಿಮ್ಮಣ್ಣನೆಂಬುವನು ಇದನ್ನು ಮಾಡುತ್ತಿದ್ದರು.

೧೨. **ಕಬ್ಬುನದ ಕಾಯಕ:** ಕಬ್ಬುನದ ಕಾಯಕವನೊಪ್ಪಮಿಗೆ ಮಾಡುತಿರ್ಪ ಆನಂದಮೂರ್ತಿ ಪೋತಾಭಕ್ತ (೩೮-೧೫); ವಿನಕೊಂಡೆಯಲ್ಲಿರ್ಪ ಕಬ್ಬುನದ ಕಾಯಕದ ಘನಭಕ್ತ ವೀರಯ್ಯ (೩೮-೩೩). ಕಬ್ಬುನ + ಕಾಯಕ = ಕಬ್ಬಿಣ ಮತ್ತು ಅದರಿಂದ ಮಾಡುವ ಕುಳ ಮೊದಲಾದುವನ್ನು ತಯಾರಿಸುವ ವೃತ್ತಿ. ಪೋತಾಭಕ್ತ ಮತ್ತು ವೀರಯ್ಯ ಈ ಕಾಯಕದಲ್ಲಿ ನಿರತರಾಗಿದ್ದರು.

೧೩. **ಕರೆಯ ಕಾಯಕ:** ನಾಗರಸನಾವೂರೊಳಗೆಯೊಬ್ಬ ಕರೆಯ ಕಾಯಕದಿನಿರೆ ಓವಿಯಾತಂಗೆ ಲಿಂಗೋಪದೇಶವ ಮಾಡಿ (೩೮-೧೪೧). ಕರೆಯ + ಕಾಯಕ = ಕೂಗುವುದು, ಕರೆಯುವುದು, ಆಹ್ವಾನಿಸುವುದು -ಈ ಕೆಲಸ. ಕರೆಯುವ ಕೆಲಸ, ಕಾಯಕ.

೧೪. **ಕಾಶಿಯ ಶಿಲೆಯ ಕಾಯಕ:** ಕಸವಿಕೋಟೆಯ ಬಸವಣ ಕಡುಭಕ್ತ ಪೊಟನೂರೊಳೊಪ್ಪುವಂ ಹರುಷದೊಳ್ ಜಡಿದು ಕಾಶಿಯ ಶಿಲೆಯ ಕಾಯಕವ ಮಾಡುತಂ ತಡೆಯದಿಹನೆಸೆವ ಯೆಜ್ರಾ ಭಕ್ತತಂದೆ (೩೮-೨೬). ಕಾಶಿಯ ಶಿಲೆಯ + ಕಾಯಕ = ಕಾಶಿಯ ಕಲ್ಲುಗಳಿಂದ ವಿಗ್ರಹಗಳನ್ನು ಮಾಡುವ ಕಾಯಕವನ್ನು ಎಜ್ರಾಭಕ್ತ ಕೈಕೊಂಡಿದ್ದಂತೆ ತಿಳಿದುಬರುತ್ತದೆ.

೧೫. **ಕೋರಿಯ ಕಾಯಕ:** ಕೋರಿಯಾ ಕಾಯಕದ ಗವಜಿ ಬಸವಣ್ಣ (೩೮-೧೭೨). ಕೋರಿ < ಕೋಜಿ = ಚಿಂದಿಬಟ್ಟೆ; ಹರಕುಬಟ್ಟೆ; ಕೋರಿ = ಕೋಜಿ + ಕಾಯಕ = ಚಿಂದಿಬಟ್ಟೆಗಳನ್ನು ಆರಿಸುವ ಕಾಯಕ. ಈ ಕಾಯಕವನ್ನು ಗವಜಿ ಬಸವಣ್ಣ ಮಾಡುತ್ತಿದ್ದ ಎಂದು ಕಂಡುಬರುತ್ತದೆ.

೧೬. **ಗಂದಿಗರ ಕಾಯಕ:** ಕೋಟೆಯ ಕೆಜೆಯ ಗರುವೆ ಗಂದಿಗರ ಕಾಯಕದ ಲಕ್ಕಮ್ಮ (೩೮-೫೫); ರಾಜೇಶ್ವರಪುರದ ಗಂದಿಗರ ಪಸರಗಾಯಕದ ಸಂಗಪ್ಪ ನಾಗಪ್ಪಗಳ (೩೮-೧೫೯). ಗಂದಿಗ = ೧. ಸುಗಂಧದ್ರವ್ಯದ ವ್ಯಾಪಾರಿ, ೨. ಔಷಧ ಮೂಲಿಕೆಗಳನ್ನು ಮಾರುವವನು. ಗಂದಿಗ + ಕಾಯಕ = ೧. ಸುಗಂಧದ್ರವ್ಯಗಳನ್ನು ಮಾರುವ ವೃತ್ತಿ, ೨. ಔಷಧಿ ಮೂಲಿಕೆಗಳನ್ನು ಮಾರುವ ವೃತ್ತಿ. ಲಕ್ಕಮ್ಮ ಮತ್ತು ಸಂಗಪ್ಪ ನಾಗಪ್ಪಗಳು ಔಷಧಿ ಮೂಲಿಕೆಗಳ ಮಾರಾಟದ ಕಾಯಕವನ್ನು ಮಾಡುತ್ತಿದ್ದರೆಂದು ಭಾವಿಸಬಹುದು.

೧೭. **ಗೆಜ್ಜೆಯ ಕಾಯಕ:** ಮೆಣಸಿನ ಕಾಯಕದ ಪುಟ್ಟಣಯ್ಯನುನ್ನತನು ಗೆಜ್ಜೆಯ ತಿಪ್ಪಣಯ್ಯ (೩೮-೫೮); ಅರವೂರ ಗೆಜ್ಜೆಯಾ ಕಾಯಕದ ಮಲ್ಲಪ್ಪ (೩೮-೧೬೩). ಗೆಜ್ಜೆ + ಕಾಯಕ = ಗೆಜ್ಜೆಯನ್ನು ಮಾಡುವ ಅಥವಾ ಮಾರುವ ವೃತ್ತಿಯನ್ನು ತಿಪ್ಪಣಯ್ಯ ಮತ್ತು ಮಲ್ಲಪ್ಪ ಮಾಡುತ್ತಿದ್ದರು.

೧೮. **ಗೋಣಿಯ ಕಾಯಕ:** ಗೋಣಿಯ ಕಾಯಕದನು ಶಿವದೇವಯ್ಯನು (೩೮-೯೦). ಗೋಣಿ ಶಬ್ದಕ್ಕೆ ೧. ಸೆಣಬು, ೨. ಸೆಣಬಿನ ನೂಲಿನಿಂದ ಮಾಡಿದ ಚೀಲ, ೩. ಸೆಣಬಿನ ಬಟ್ಟೆ; ಗೋಣಿ ಪಟ್ಟೆ; ತಟ್ಟು, ೪. ಧಾನ್ಯದ ಒಂದು ಅಳತೆ ಎಂಬ ಅರ್ಥಗಳಿವೆ. ಗೋಣಿ + ಕಾಯಕ = ಸೆಣಬಿನಿಂದ ವಸ್ತುಗಳನ್ನು ಮಾಡುವ ಕಾಯಕ ಎಂದು ಇದರ ಅರ್ಥವಿರಬಹುದು.

೧೯. **ಚಿಂದಿಯ ಕಾಯಕ:** ಲಕುಮಣೇಶ್ವರದ ಚಿಂದಿಯಾ ಕಾಯಕದ ಕಸವಿದೇವ (೩೮-೧೪೯). ಚಿಂದಿ = ೧. ಹರಕುಬಟ್ಟೆ; ತುಂಡುಬಟ್ಟೆ, ೨. ತಲೆಗೆ ಕಟ್ಟಿಕೊಳ್ಳುವ ಚಿಕ್ಕವಸ್ತ್ರ, ೩. ಸೊಂಟಪಟ್ಟಿ; ನಡುಕಟ್ಟು. ಈ ಮೂರು ಅರ್ಥಗಳಲ್ಲಿ ಹರಕುಬಟ್ಟೆ, ತುಂಡುಬಟ್ಟೆ ಎಂಬುದು ಪ್ರಸಕ್ತವಾಗುತ್ತದೆ. ಚಿಂದಿ + ಕಾಯಕ = ಹರಕುಬಟ್ಟೆ ಅಥವಾ ತುಂಡುಬಟ್ಟೆಗಳನ್ನು ಆಯುವ ವೃತ್ತಿ. ಕಸವಿದೇವ ಈ ವೃತ್ತಿಯನ್ನು ಕೈಕೊಂಡಿದ್ದ ಎಂದು ಅರ್ಥೈಸಬಹುದು.

೨೦. **ತೋಟದ ಕಾಯಕ:** ತೋಟದ ಕಾಯಕದ ಚಿಮ್ಮಲಿಗೆಯವರ ನೀಲಕಂಠಯ್ಯ (೩೮-೧೧೬); ತೋಟ+ ಕಾಯಕ = ತೋಟವನ್ನು ಬೆಳೆಸುವ ವೃತ್ತಿ. ಇದನ್ನು ನೀಲಕಂಠಯ್ಯ ಎಂಬುವ ಮಾಡುತಿದ್ದನು.

೨೧. **ನುಲಿಯ ಕಾಯಕ:** ನುಲಿಯ ಕಾಯಕವ ಮಾಡುತ್ತಿರ್ದ ಕಲ್ಲಯನ ಚರಣಾಂಬುಜಕ್ಕೆ ಶರಣು (೩೮-೪೭). ನುಲಿ + ಕಾಯಕ = ನಾರಿನಿಂದ ಹುರಿಯನ್ನು ಹಗ್ಗವನ್ನು ಮಾಡುವ ಕಾಯಕ. ಮಲ್ಲಪ್ಪನೆಂಬ ಶರಣ ಒಣಗಿದ ಮರದ ನಾರನ್ನು ತಂದು ಅದನ್ನು ಹೊಸೆದು ಹುರಿಯನ್ನು ಮಾಡಿ ಆ ಹುರಿಯನ್ನು ಮಾರಿ ಬಂದ ಹಣದಿಂದ ಜಂಗಮದಾಸೋಹವನ್ನು ಮಾಡುತ್ತಿದ್ದಂತೆ ಈತನ ಕಥೆ ಸಾರುತ್ತಿದೆ.

೨೨. **ನೂಲ ಕಾಯಕ:** ನೂತಲಾಪಾಡೊಳಗೆ ಯತಿನೂಲಕಾಯಕ ಖ್ಯಾತದಿಂ ಮಾಡಿಯದಜೊಳಗೆಯಾರ್ಜಿಸಿದ ಧನವಾತುರದಿ ಜಂಗಮಕ್ಕಿಕ್ಕುವತಿನೇಮ (೩೮-೪೪); ಪಿರಿದಿಬ್ಬಳಕ್ಕಿಹಳ್ಳಿಯ ನೂಲಕಾಯಕದೊಳಿರುವ ನಾಗಣ್ಣ (೩೮-೭೧); ತಳಕಾಡೊಳತಿ ನೂಲಕಾಯಕದ ಮಂಚಣ್ಣ (೩೮-೧೧೬); ಬಗ್ಗುಂಜಿಯಲಿ ಮರುಳದೇವನು ನೂಲಕಾಯಕದ ಬೊಪ್ಪಯ್ಯ (೩೮-೧೨೧); ನಂದಲೂರೊಳು ನೂಲಕಾಯಕದ ಬಸವಣ್ಣ (೩೮-೧೩೫); ಎಳಗೆಯ

ನೂಲಕಾಯಕದ ಚಿಟ್ಟಾಭಕ್ತ (೩೮-೧೬೨) ನೂಲು ಶಬ್ದಕ್ಕೆ ೧. ಎಳೆ; ಸೂತ್ರ; ತಂತು; ದಾರ. ೨. ಒಡ್ಯಾಣ; ಡಾಬು; ಉಡೆನೂಲು; ಕಟಿಸೂತ್ರ, ೩. ಬಡಗಿಗಳು ಮರವನ್ನು ಕೊಯ್ಯುವಾಗ ಬಣ್ಣ ಬಳಿದ ದಾರದಿಂದ ಹಾಕಿಕೊಳ್ಳುವ ಗುರುತು. ೪. ಒಂದು ಅಳತೆಯ ಪ್ರಮಾಣ. ೫. ಬಟ್ಟೆ; ವಸ್ತ್ರ ೬. ನೂಲಿನ ಮೇಲೆ ಹಾಕುವ ತೆರಿಗೆ ಎಂಬ ಅರ್ಥಗಳನ್ನು ಕನ್ನಡ ನಿಘಂಟಿನಲ್ಲಿ ಕೊಟ್ಟಿದೆ. ಪ್ರಸ್ತುತ ಪ್ರಯೋಗಗಳಲ್ಲಿ ನೂಲು ಶಬ್ದಕ್ಕೆ ಬಟ್ಟೆ ವಸ್ತ್ರ ಎಂಬ ಅರ್ಥವೇ ಸಮುಚಿತವಾದುದು. ನೂಲು + ಕಾಯಕ = ಬಟ್ಟೆ ತಯಾರಿಸುವ, ನೇಯುವ ವೃತ್ತಿ. ಈ ವೃತ್ತಿಯನ್ನು ಹಲವಾರು ನೂತನ ಗಣಂಗಳು ಕೈಕೊಂಡಿದ್ದಂತೆ ಮೇಲಿನ ಪ್ರಯೋಗಗಳಿಂದ ವ್ಯಕ್ತಪಡುತ್ತದೆ.

**೨೩. ಬಡಗಿ ಕಾಯಕ:** ಕೊಂಡವೀಡೊಳಗಿರ್ಪ ಪೊಸತೆನಲ್ ಬಡಗಿಗಾಯಕವ ಮಾಡುತ್ತಿಹನು ಪರಮಭಕ್ತಿಯ ಲೀಲೆಯಿಂ ಶಶಿಧರನ ನೆನಹಿಂದನವರತ ಮುದದಿಂದಲೊಸೆದು ಜಂಗಮಕೆ ನೀಡುತ್ತಿರ್ಪ ಭಕ್ತಿಯಿಂ ರಸಪಿಂಡಿಕೂರ ಚೆನ್ನಾಭಕ್ತತಂದೆ (೩೮-೩೧). ಬಡಗಿ + ಕಾಯಕ = ಮರಗೆಲಸ ಮಾಡುವ ಕಸಬು. ಚೆನ್ನಾಭಕ್ತತಂದೆ ಈ ಕಸಬನ್ನು ಮಾಡುತ್ತಿದ್ದನು.

**೨೪. ಬಣಜಿಗ ಕಾಯಕ:** ತೆರಕಣಬೆಯೊಳಗೆ ಕಂಪರಾಯನುಮಲ್ಲಿಹ ವಿದಿತ ಬಣಜಿಗ ಕಾಯಕದ ಸೋಯಿಸೆಟ್ಟಿಯುಂ (೩೮-೮೬). ಬಣಜಿಗ + ಕಾಯಕ = ವ್ಯಾಪಾರವೃತ್ತಿ, ಕಸಬು.

**೨೫. ಬಿದಿರಿನ ಕಾಯಕ:** ಅತಿಕಬ್ಬಲೂರ ಕೇತಪ್ಪಯ್ಯ ಬಿದಿರಿಗಪ್ರತಿಮ ಬಿದಿರಿನ ಕಾಯಕದ ಭೀಮಸೆಟ್ಟಿ (೩೮-೧೬೫). ಬಿದಿರು + ಕಾಯಕ = ಬಿದಿರಿನಿಂದ ಚಾಪೆ, ತಟ್ಟಿ ಮೊದಲಾದುವನ್ನು ಮಾಡುವ ಕೆಲಸ.

**೨೬. ಬೋಗಾಜಿಕೆಯ ಕಾಯಕ:** ಕರೆವಳಿಯ ಮಂಗಲೂರೊಳಗೆ ಬೋಗಾಜಿಕೆಯಲರಿದೆನಿಪಭಕ್ತ ನಾಗಪ್ಪ (೩೮-೧೯೯). ಬೋಗಾಜಿ + ಇಕೆ = ಲೋಹದ ಕೆಲಸ. ಕಿಟ್ಟೆಲ್ ಅವರು ಇದನ್ನು ವ್ಯೋಕಾರದ ತದ್ಭವ ಎಂದಿದ್ದಾರೆ. ಪ್ರಾಚೀನ ನಿಘಂಟುಕಾರರಾದ ಹಲಾಯುಧ, ಮಂಗರಾಜ ವ್ಯೋಕಾರ, ಲೋಹಕಾರಕ ಶಬ್ದಗಳನ್ನು ಬೋಗಾದಿ ಶಬ್ದದ ಮೂಲರೂಪವೆಂದು ಸೂಚಿಸಿದ್ದಾರೆ. ಅಲ್ಲದೆ ಈ ಶಬ್ದಕ್ಕೆ ೧. a blacksmith, ೨. a coppersmith; one who makes and sells brass and copper-vessels ಎಂಬ ಅರ್ಥಗಳೂ ನಿಘಂಟಿನಲ್ಲಿವೆ. ಆದುದರಿಂದ ಬೋಗಾಜಿಕೆ + ಕಾಯಕ = ಲೋಹದಿಂದ ಪಾತ್ರೆಗಳನ್ನು ಮಾಡುವ ವೃತ್ತಿ ಎಂದು ಭಾವಿಸಬಹುದು.

**೨೭. ಮುತ್ತಿಲ ಕಾಯಕ:** ಚರಲಿಂಗಮೂರ್ತಿಗತಿ ತವರುಮನೆಯೆಂದೆನಿಸಿ ಪಿರಿದೆಸೆವಳೊಪ್ಪದಿಂ ಪೆನುಗೊಂಡೆಯೊಳಗೆ ಶುಭಚರಿತೆ ಮುತ್ತಿಲಕಾಯಕದೊಳು ಎಱಮ್ಮನುಂ (೩೮-೪೫). ಈ ಮುತ್ತಿಲ ಶಬ್ದಕ್ಕೆ ಮುತ್ತಿನ, ಮುತ್ತಲ ಎಂಬ ಪಾಠಾಂತರಗಳಿವೆ. ಮುತ್ತಿನ ಕಾಯಕಕ್ಕೆ ಮುತ್ತುಗಳನ್ನು ತಯಾರಿಸುವ ಅಥವಾ ಮಾರುವ ವೃತ್ತಿ ಎಂದು ಅರ್ಥ ಮಾಡಬಹುದು. ಮುತ್ತಿಲ, ಮುತ್ತಲ ಶಬ್ದಗಳಿಗೆ ಮುತ್ತುಗ ಎಂಬ ಮರಕ್ಕೆ ಸಂಬಂಧಿಸಿದ ಎಂದು ಅರ್ಥೈಸಬಹುದು. ಮುತ್ತುಗದ ಮರದ ಎಲೆಗಳಿಂದ ಊಟದ ಎಲೆಗಳನ್ನು ಮಾಡುವ ಕಸಬು ಇಂದಿಗೂ ಕರ್ನಾಟಕ, ಆಂಧ್ರಪ್ರದೇಶಗಳಲ್ಲಿ ರೂಢಿಯಲ್ಲಿದೆ. ಆದುದರಿಂದ ಮುತ್ತುಗದ ಎಲೆಗಳಿಂದ ಊಟದ ಎಲೆಗಳನ್ನು ಮಾಡುವ ಕಸುಬು ಎಂಬುದು ಹೆಚ್ಚು ಸಂಗತವಾಗುತ್ತದೆ. ಈ ಮುತ್ತುಗಕ್ಕೆ ಪಲಾಶ, ಕಿಂಶುಕ, ಪರ್ಣ, ವಾತಪೋಥ ಎಂಬ ಹೆಸರುಗಳಿವೆ ಎಂದು ನಾಚಿರಾಜೀಯ ಅಮರಕೋಶದ ವ್ಯಾಖ್ಯಾದಲ್ಲಿ ಹೇಳಿದ್ದಾರೆ. ನಾನಾರ್ಥ ರತ್ನಾಕರ ನಿಘಂಟಿನಲ್ಲಿ ನ್ಯಗ್ರೋಧ, ಪಲಾಶ ಎಂಬ ಹೆಸರುಗಳಿವೆ. ಈ ಎಲ್ಲ ಆಕರಗಳಿಂದ ಈ ಕಾಯಕ ಊಟದ ಎಲೆಗಳನ್ನು ಮಾಡುವುದು ಎಂಬುದು ಔಚಿತ್ಯಪೂರ್ಣವಾಗುತ್ತದೆ. ಹೆಂಗಸರೇ ಹೆಚ್ಚಾಗಿ ಈ ಕೆಲಸವನ್ನು ಮಾಡುವುದರಿಂದ ಎಱಮ್ಮ ಎಂಬ ಶರಣೆ ಈ ಕಾಯಕ ಮಾಡುತ್ತಿದ್ದಳು ಎಂಬುದು ಸಂಗತವಾಗುತ್ತದೆ.

**೨೮. ಮೆಣಸಿನ ಕಾಯಕ:** ಕನ್ನೆಲ್ಲಿಯೊಳಗೆ ವ್ರತಿಕ ಮೆಣಸಿನ ಕಾಯಕದ ಪುಟ್ಟಣಯ್ಯನು (೩೮-೫೮). ಮೆಣಸು ಶಬ್ದಕ್ಕೆ ಮೆಳಸು ಎಂಬ ರೂಪವೂ ಇದೆ. ಸಂಸ್ಕೃತದಲ್ಲಿ ಉಷಣ, ಮರೀಚಕ, ವೇಲ್ಲಜ ಎಂಬ ಪರ್ಯಾಯ

ನಾಮಗಳಿವೆ. ಮೆಣಸಿನಕಾಯಿ ಎಂಬ ಅರ್ಥವೂ ಈ ಶಬ್ದಕ್ಕಿದೆ. ಪ್ರಸ್ತುತ ಪ್ರಯೋಗದಲ್ಲಿ ಕನ್ನೆಲ್ಲಿಯ ಪುಟ್ಟಣಯ್ಯ ಮೆಣಸು ಬೆಳೆದು ಮಾರುವ ಕಾಯಕ ಕೈಕೊಂಡಿದ್ದನೆಂದು ಊಹಿಸಬಹುದಾಗಿದೆ. ಮೆಣಸು black pepper ಮೆಣಸು ಹುಳಿತಡೆ ಜೋಳದಿಂ ಕುಂದೆ ಎಂಬ ರಾಘವಾಂಕನ ಪ್ರಯೋಗವನ್ನು ಈ ಸಂದರ್ಭದಲ್ಲಿ ಜ್ಞಾಪಿಸಿಕೊಳ್ಳಬಹುದು.

೨೯. **ಮೆಂಡೆಹದ ಕಾಯಕ:** ಪಡುವನಾಡ ಕೊಟ್ಟು ಬಾವಿಯ ಮೆಂಡೆಹದ ಕಾಯಕದ ಚೌಡು (೩೮-೧೩೫); ಈ ಕಾಯಕ ಏನೆಂಬುದು ಈ ಪ್ರಯೋಗದಿಂದ ಸ್ಪಷ್ಟವಾಗುವುದಿಲ್ಲ. ಮೆಂಡು, ಮೆಂಡೆಹ ಎಂಬ ಶಬ್ದಗಳು ನಿಘಂಟುಗಳಲ್ಲಿಲ್ಲ. ಕನ್ನಡದಲ್ಲಿ ಮೆಂಡು ಎಂಬ ಧಾತುವಿದ್ದು ಅದಕ್ಕೆ ಅಗೆ, ತೋಡು ಎಂಬ ಅರ್ಥಗಳಿದ್ದಿರಬಹುದೆ? ಇದಕ್ಕೆ ಪ್ರಯೋಗಗಳು ಸಿಕ್ಕಿಲ್ಲ. ಸದ್ಯದಲ್ಲಿ ಈ ಪ್ರಯೋಗ ಬಾವಿಯ ಮೆಂಡೆಹ ಎಂದಿರುವುದರಿಂದ ಈ ಕಾಯಕ ಬಾವಿಯನ್ನು ತೋಡಿಸುವ, ಬಾವಿಯನ್ನು ಅಗೆಸುವ ಕಾಯಕವಿದ್ದಿರಬಹುದು ಎಂದು ಊಹಿಸಬಹುದು. ಈ ಕಾಯಕ ಪುಣ್ಯಪ್ರದವಾದುದರಿಂದ ಚೌಡು ಎಂಬವನು ಈ ಕಾಯಕ ಕೈಕೊಂಡಿದ್ದರೆ ಅದು ಅಸಂಭಾವ್ಯವಾಗಲಾರದು.

೩೦. **ವರಧಾನ್ಯ ಕಾಯಕ:** ಪುಲಿಯೂರ ನಾಡೊಳಗೆ ಕನಹಳ್ಳಿಯಲ್ಲಿಪ್ಪನು ಮುದದಿ ವರಧಾನ್ಯ ಕಾಯಕದ ಕುಣಿಗಿಲಕೂಲಿ (೩೮-೭೨). ಈ ಕಾಯಕ ಯಾವುದು ಎಂಬುದು ತಿಳಿದುಬರುವಂತಿಲ್ಲ. ಇದು ವರಧಾನ್ಯ + ಕಾಯಕ ಅಥವಾ ವರ + ಧಾನ್ಯಕಾಯಕ ಇರಬಹುದೆ? ವರಧಾನ್ಯ ಎಂದರೆ ಶ್ರೇಷ್ಠವಾದ ಧಾನ್ಯ ಎಂಬುದು ತಿಳಿದಿರುವ ಸಂಗತಿ. ವರ = ಕುಸುಬೆ + ಧಾನ್ಯ + ಕಾಯಕ? ಕುಸುಬೆ ಬೀಜವನ್ನು ಬೆಳೆಯುವ ಕಾಯಕ ಇದ್ದಿರಬಹುದು. ಕುಸುಬೆ ಬೀಜದಿಂದ ಎಣ್ಣೆಯನ್ನು ತಯಾರಿಸುವುದು ಬಹಳ ಕಾಲದಿಂದ ಬಳಕೆಯಲ್ಲಿದೆ. ಆದುದರಿಂದ ಇದು ಕುಸುಬೆಧಾನ್ಯವನ್ನು ತಯಾರಿಸುವ ವೃತ್ತಿ ಎಂದು ಊಹಿಸುವುದು ಸಾಧುವಲ್ಲವೆ?

೩೧. **ಸವನೂಲ ಕಾಯಕ:** ಬಾಗವಾಡಿಯೊಳೊಪ್ಪುವ ಸವನೂಲಕಾಯಕದ ದೇಪಣ್ಣ (೩೮-೧೭೨). ಸವನೂಲು+ ಕಾಯಕ = ಸವನೂಲು ಎಂದರೆ ಏನು ಎಂಬುದು ಗೊತ್ತಾಗುವುದಿಲ್ಲ. ಇದರಲ್ಲಿ ನೂಲು ಸ್ಪಷ್ಟವಾಗಿದೆ. ಸವ ಎಂಬುದು ಏನು? ಸವ ಶಬ್ದ ಸಂಸ್ಕೃತದ ಸಮ, ಶಬ, ಶ್ರವ ಇವುಗಳ ತದ್ಭವ. ಈ ಶಬ್ದಕ್ಕೆ ಎಣೆ, ಸಮಾನ, ಪಾತಳಿ, ಮಟ್ಟಸ, ಶವ, ಹೆಣ, ಶ್ರಮ, ಕಷ್ಟ ಎಂಬ ಅರ್ಥಗಳಿವೆ. ಆದರೆ ಈ ಯಾವ ಅರ್ಥಗಳನ್ನೂ ಸವನೂಲಿಗೆ ಅನ್ವಯಿಸುವುದರಿಂದ ಅರ್ಥ ಸ್ಪಷ್ಟವಾಗುವುದಿಲ್ಲ. ಶ್ರಮದಿಂದ, ಕಷ್ಟದಿಂದ ತಯಾರಿಸಿದ ನೂಲು ಎಂದು ಹೇಳಬಹುದಾದರೂ ಇದು ಅಷ್ಟೇನೂ ಸಮ್ಮತವಾದಂತೆ ತೋರುವುದಿಲ್ಲ. ನಮ್ಮಲ್ಲಿ ಪೂಜಾಕಾರ್ಯಗಳಿಗೆ ಸಪ್ಪೆ ನೂಲನ್ನೂ, ಹಸಿನೂಲನ್ನೂ ಬಳಸುವುದು ಬಹಳ ಕಾಲದಿಂದ ರೂಢಿಯಲ್ಲಿದೆ. ಈ ಸಪ್ಪೆಯನೂಲು ಸವನೂಲು* ಆಗಿರಬಹುದೆ? ಬಹುಶಃ ಇದು ಹೆಚ್ಚು ಸಮಂಜಸವೆಂದು ತೋರುತ್ತದೆ. ದೇಪಣ್ಣ ಎಂಬ ಶಿವಶರಣ ಈ ಸಪ್ಪೆಯ ನೂಲನ್ನು, ಸವನೂಲನ್ನು ಮಾಡುವ ಕಾಯಕ ಕೈಗೊಂಡಿದ್ದನೆಂದು ಭಾವಿಸಬಹುದಲ್ಲವೆ?

೩೨. **ಸೂಜಿಯ ಕಾಯಕ:** ಹೊಸದೇವರಾಯ ಪಟ್ಟಣದಲ್ಲಿ ರಂಜಿಸುವನಸಮ ಸೂಜಿಯ ಕಾಯಕವ ಮಾಳ್ಪನೊಪ್ಪದಿಂ ರಸಿಕ ಪುಟ್ಟಯ್ಯನುಂ (೩೮-೭೫); ಸಾಸಲೆಂಬೂರೊಳಿರುತಿಹನು ಶಿವಭಕ್ತ ಸೂಜಿಯ ಕಾಯಕವನೆ ಮಾಡಿ ದಾಸೋಹವನೆ ಮಾಡುತಿಹನು (೩೮-೯೯); ಅಬ್ಬಲೂರಲ್ಲಿ ಸೂಜಿಯ ಕಾಯಕದ ಭೈರಣಯ್ಯ (೩೮-೧೩೭); ನೀಲಕಂಠನ ದೇಗುಲದೊಳು ವೀರಯ್ಯ ಸತಿಲೋಲನೆನಿಸುವ ಮಾಳ್ಕೆ ದಂಪತಿ ಸಹಿತಲು ಸೂಜಿಕಾಯಕವ ಮಾಡಿಯೆ ಲೀಲೆಯಿಂ ದಾಸೋಹವಂ ಮಾಡುತಿರಲುಂ (೩೮-೧೫೦); ಸದುಭಕ್ತಿಸಂಪನ್ನ ನಿಸ್ಸೀಮ ಸೂಜಿಕಾಯಕದ ವೀರಣಯ್ಯನೆನಿಪಾ ಮಹೇಶ್ವರನು (೩೮-೧೫೩). ಈ ಕಾಯಕವನ್ನು ಬಹಳ ಜನ ಮಾಡುತ್ತಿದ್ದಂತೆ ತಿಳಿಯುತ್ತದೆ. ಸೂಜಿ + ಕಾಯಕ = ಸೂಜಿಯಿಂದ ಮಾಡುವ ಕೆಲಸ, ಎಂದರೆ ಹೊಲಿಗೆ ಮುಂತಾದುವು ಎಂದು ಭಾವಿಸಬಹುದು. ಇದನ್ನು ಸೂಜಿ + ಕಾಯಕ = ಸೂಜಿಯನ್ನು ಮಾಡುವ ಕಾಯಕ ಎಂದೂ ಅರ್ಥೈಸಬಹುದು. ಆದರೆ ಈ ಅರ್ಥಕ್ಕಿಂತ ಸೂಜಿಯಿಂದ ಮಾಡುವ ಕೆಲಸ ಎಂದು ಪರಿಭಾವಿಸುವುದು ಹೆಚ್ಚು ಸಮಂಜಸವಾಗಬಹುದು.

---

* ಈ ಅಭಿಪ್ರಾಯವನ್ನು ಮಿತ್ರರಾದ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು ತಿಳಿಸಿದ್ದಕ್ಕಾಗಿ ವಂದನೆಗಳು.

೩೩. **ಸೇನಬೋಯಿಕೆಯ ಕಾಯಕ:** ಅತ್ಯತಿಷ್ಠದ್ದಶಾಂಗುಲನೆನಿಪ ಪರಶಿವನ ಭಕ್ತನುಂ ಸೇನಬೋಯಿಕೆಯ ಕಾಯಕದೊಳತಿ ಪೊತ್ತಪ್ಪಿಯಲ್ಲಿರ್ಪನೊಪ್ಪದಿಂ ವೀರಶೈವಾಚಾರ ಭಕ್ತಿಯಿಂದ ಸತ್ಯಸಜ್ಜನ ಶುದ್ಧನಧಿಕ ಚರಲಿಂಗವುಂ ಕರ್ತನೆಂಬುನ್ನತದ ಭಾವಮಂ ತಳೆದಿರ್ಪ ನಿತ್ಯ ಚೊಕ್ಕರಿಭಕ್ತ (೩೮-೪೨). ಸೇನಬೋಯಿಕೆ + ಕಾಯಕ = ಹಳ್ಳಿಯ ಲೆಕ್ಕ ಪತ್ರಗಳನ್ನು ಬರೆಯುವ ವೃತ್ತಿ. ಈ ವೃತ್ತಿಯನ್ನು ಚೊಕ್ಕರಿಭಕ್ತ ಮಾಡುತ್ತಿದ್ದನು.

೩೪. **ಸೊಪ್ಪೆಯ ಕಾಯಕ:** ತನ್ನಂಗಡಿಗೆ ಬಂದ ಪಶುಕುಳಕೆ ಸೊಪ್ಪೆಯಂ ಕ್ರಯವೀವ ಬಸವಣ (೩೮-೧೬೮); ಪೊಗಳಲುಱೆ ಮೆಱೆದನುಂ ಸೊಪ್ಪೆಯಾಕಾಯಕದ ಬಸವಣ್ಣ ತಂದೆಗಳು (೩೮-೧೬೯). ಸೊಪ್ಪೆ = ಜೋಳದ ತೆನೆಯನ್ನು ತೆಗೆದ ಮೇಲೆ ಆದಂಟನ್ನು ಒಣಗಿಸಿಟ್ಟು ದನಗಳ ಮೇವಾಗಿಸುವುದು. ಈ ಸೊಪ್ಪೆಯನ್ನು ಮಾರುವ ಕಾಯಕವನ್ನು ಮಾಡುತ್ತಿದ್ದವನು ಬಸವಣ್ಣ. ಈತನ ಕಥೆಯಿಂದ ಈ ಎಲ್ಲ ಸಂಗತಿಗಳು ತಿಳಿದುಬರುತ್ತವೆ.

೩೫. **ಹಕ್ಕಲ ಕಾಯಕ:** ಬಿಡದೆ ಪೊಡ್ಡಿಯ ದೇಶದಲ್ಲಿ ಸಲೆ ಸೊಗಸಿನಿಂದಡರಿಪ್ಪ ಮುಖಲಿಂಗ ಮಧುಕೇಶ್ವರದೊಳಿಹಳು ಮಡದಿ ಹಕ್ಕಲ ಕಾಯಕದೊಳು ಗೌರಮ್ಮನುಂ (೩೮-೨೬). ಹಕ್ಕಲು + ಕಾಯಕ = ಬೆಳೆಯನ್ನು ಕಟಾವು ಮಾಡಿದ ಮೇಲೆ ಹೊಲದಲ್ಲಿ ಉಳಿಯುವ, ತೆನೆ, ಕಾಳು ಇವನ್ನು ಹಕ್ಕಲು ಎನ್ನುತ್ತಾರೆ. ಇವನ್ನು ಆಯ್ದುತಂದು ಜಂಗಮದಾಸೋಹ ಮಾಡುವುದು ಒಂದು ಕಾಯಕ. ಈ ಕಾಯಕವನ್ನು ಗೌರಮ್ಮ ಮಾಡುತ್ತಿದ್ದಳು.

೩೬. **ಹೊಂಗಾಯಕ:** ಮಾರೆಹಳ್ಳಿಯಲಿ ಚಾಕಣ್ಣ ದೇವಪ್ಪನಾವೂರ ಹೊಂಗಾಯಕದ ನಾಗಪ್ಪ (೩೮-೧೧೨). ಹೊಂ = ಹೊನ್ನು < ಪೊನ್ + ಕಾಯಕ. ಚಿನ್ನದ ಕೆಲಸ. ಚಿನ್ನದ ಆಭರಣ ಮೊದಲಾದುದನ್ನು ಮಾಡುವ ಕಸಬು.

೩೭. **ಹೊನ್ನಕಾಯಕ:** ಹೊನ್ನಕಾಯಕದಿ ನೆಱೆಕೊಂಡವೀಡೊಳಗಿಹನು ಪನ್ನಗಧರನಭಕ್ತ ಬಯ್ಯಣಯ್ಯ (೩೮-೩೨); ಪರಮಮೇಳಾದೇವಿಯ ಪಟ್ಟಣದೊಳಿಪ್ಪ ಹರುಷದಿಂ ಹೊನ್ನಕಾಯಕದ ಲಿಂಗಣ್ಣಯ್ಯ (೩೮-೬೭); ಮಂಚಿಯಕ್ಕನಹಳ್ಳಿಯಲ್ಲಿಪ್ಪ ಹೊನ್ನಕಾಯಕವ ಮಾಡಿ ಗುರುಲಿಂಗಜಂಗಮಪ್ರೇಮಿ ಬಸವಣ್ಣನುಂ (೩೮-೭೬); ಬಾರಕೂರಲಿ ಹೊನ್ನಕಾಯಕದ ದೇವಣ್ಣನು (೩೮-೧೧೯); ಹೊನ್ನಕಾಯಕದ ಬಸವಣ್ಣ (೩೮-೧೬೧); ಹೊನ್ನಕಾಯಕದ ಪಾಬಣ್ಣ (೩೮-೧೬೪); ಕಲ್ಯಾಣದೇಶದೊಳಗೆಸೆವುದತಿ ಬಿದಿರೆಯಲಿ ಹೊನ್ನಕಾಯಕದ ಬಸವಪ್ಪ (೩೮-೧೭೦); ಚಿನ್ನದ ಕೆಲಸ ಮಾಡುವುದರಲ್ಲಿ ಅನೇಕರು ಸಿದ್ಧಹಸ್ತರಾಗಿದ್ದರೆಂದು ಈ ಮೇಲಿನ ಪ್ರಯೋಗಗಳು ಸಾರುತ್ತಿವೆ. ಹೊನ್ನು + ಕಾಯಕ = ಚಿನ್ನದಿಂದ ಮಾಡುವ ಕೆಲಸ; ಚಿನ್ನದ ಕೆಲಸ -ಇತ್ಯಾದಿ.

ಪ್ರಸ್ತುತ ಲೇಖನದಲ್ಲಿ ಶಿವತತ್ತ್ವಚಿಂತಾಮಣಿಯಲ್ಲಿ ಉಲ್ಲೇಖವಾಗಿರುವ ಕೆಲವು ಕಾಯಕಗಳ ಅರ್ಥವನ್ನು ನಿರೂಪಿಸಲು ಪ್ರಯತ್ನಿಸಲಾಗಿದೆ. ಈ ಕಾಯಕಗಳ ವಿವರಣೆಯಾಗಲಿ ಉಲ್ಲೇಖವಾಗಲಿ ಕನ್ನಡ ನಿಘಂಟುಗಳಲ್ಲಿ ಕಂಡುಬಂದಿಲ್ಲ. ಅಲ್ಲದೆ ಈ ಕಾಯಕಗಳನ್ನು ಮಾಡುತ್ತಿದ್ದ ಅನೇಕ ನೂತನಗಣಂಗಳ ಕಥೆಗಳೂ ತಿಳಿದುಬಂದಿಲ್ಲ. ಹೀಗಾಗಿ ಪ್ರಯೋಗಾಧಾರಗಳಿಂದಲೇ ಈ ಕಾಯಕಗಳ ಅರ್ಥಗಳನ್ನು ಕಂಡುಹಿಡಿಯಬೇಕಾಗುತ್ತದೆ. ಇಲ್ಲಿಯ ಕಾಯಕಗಳಿಗೆ ಕೊಟ್ಟಿರುವ ಅರ್ಥಗಳು ಸಂಪೂರ್ಣವಾಗಿ ಸರಿಯಾಗಿವೆ ಎಂದು ಹೇಳುವ ಧೈರ್ಯ ನನಗಿಲ್ಲ. ಬಲ್ಲವರು ಈ ಕಾಯಕಗಳ ಸರಿಯಾದ ಅರ್ಥಗಳನ್ನು ತಿಳಿಸಿದಲ್ಲಿ ನಾನು ಅವನ್ನು ಕೃತಜ್ಞತೆಯಿಂದ ಸ್ವೀಕರಿಸುತ್ತೇನೆ.

ಕೆಲವು ಕಾಯಕಗಳ ಅರ್ಥಗಳನ್ನು ಕೇಳುವುದರ ಮೂಲಕ ಈ ಲೇಖನವನ್ನು ಬರೆಯಲು ಪರೋಕ್ಷವಾಗಿ ಕಾರಣಕರ್ತರಾದ ಸುಪ್ರಸಿದ್ಧ ಇತಿಹಾಸಕಾರರಾದ ಡಾ. ಜಿ.ಎಸ್. ದೀಕ್ಷಿತ್ ಅವರಿಗೆ ನಾನು ಆಭಾರಿಯಾಗಿದ್ದೇನೆ.

■

# ಷಡಕ್ಷರಿ

ಕ್ರಿಸ್ತಶಕ ಹದಿನೇಳನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಷಡಕ್ಷರಿಯು ರಾಜಶೇಖರವಿಳಾಸ, ವೃಷಭೇಂದ್ರವಿಜಯ, ಶಬರಶಂಕರವಿಳಾಸ ಎಂಬ ಕರ್ಣಾಟಕ ಚಂಪೂಗ್ರಂಥಗಳನ್ನೂ ಕವಿಕರ್ಣರಸಾಯನ, ಭಕ್ತಾಧಿಕ್ಯರತ್ನಾವಳಿ, ಶಿವಾಧಿಕ್ಯರತ್ನಾವಳಿ, ಶಿವಸ್ತವಮಂಜರಿ, ವೀರಭದ್ರೋದಾಹರಣಗದ್ಯ, ಬಸವಾಷ್ಟಕ, ನೀಲಾಂಬಿಕಾಸ್ತೋತ್ರ ಎಂಬ ಸಂಸ್ಕೃತ ಗ್ರಂಥಗಳನ್ನೂ ರಚಿಸಿದ್ದಾನೆ.

ಷಡಕ್ಷರಿಯ ಜನ್ಮಸ್ಥಳ ಮಳವಳ್ಳಿ ತಾಲ್ಲೂಕಿನಲ್ಲಿರುವ ದನುಗೂರು. ಈತನ ಗುರು ಚಿಕವೀರದೇಶಿಕ. ಈತನು ಎಳಂದೂರು ಮಠಕ್ಕೆ ಸ್ವಾಮಿಯಾಗಿ ಅಲ್ಲಿಯೇ ಸಮಾಧಿಯನ್ನು ಹೊಂದಿದಂತೆ ತಿಳಿದುಬರುತ್ತದೆ. ಷಡಕ್ಷರಿಯನ್ನು ಎಳಂದೂರಿಗೆ ಕರೆಸಿಕೊಂಡು ಅಲ್ಲಿ ಮಠವನ್ನು ಕಟ್ಟಿಸಿಕೊಟ್ಟು ಅಲ್ಲಿಯೇ ನಿಲ್ಲುವಂತೆ ಮಾಡಿದವನು ಹದಿನಾಡ ದೊರೆಯಾದ ಮುದ್ದುರಾಜನೆಂದು ಕೆಲವರು ಹೇಳುತ್ತಾರೆ. ಹೇಗಾದರೂ ಈತನು ಎಳಂದೂರು ಷಡಕ್ಷರಿಯೆಂದೇ ಪ್ರಖ್ಯಾತಿಗೊಂಡಿದ್ದಾನೆ.

ಷಡಕ್ಷರಿಯು ತನಗೆ ಕೇವಲ ಹನ್ನೊಂದನೆಯ ವರ್ಷದಲ್ಲಿಯೇ ಕವಿತಾಶಕ್ತಿಯುಂಟಾಯಿತೆಂದು ಹೇಳಿಕೊಂಡಿದ್ದಾನೆ. ತನ್ನನ್ನು 'ಉಭಯಕವಿತಾವಿಶಾರದ' ಎಂದೂ ಸಂಬೋಧಿಸಿಕೊಂಡಿದ್ದಾನೆ. ಕಾವ್ಯರಚನಾಶಕ್ತಿ ಸುಲಭಸಾಧ್ಯವಲ್ಲವೆಂಬುದನ್ನು:

ಆರಾರೇಱರ್ ಶಾಸ್ತ್ರ
ಶ್ರೀರೋಹಣಗಿರಿಯನಲ್ಲಿ ನವಕವಿತಾಚಿಂ ।
ತಾರತ್ನಂ ದೊರೆಗುಮೆ ಮಾ
ರಾರಿಯ ಕೃಪೆಯಿಲ್ಲದಂಗೆ ಧರಣೀತಳದೊಳ್ ॥

ಕಲಿಸಿದೊಡೇಂ ಬರ್ಕುಮೆ ಸ
ಲ್ಲಲಿತ ಕವಿತ್ವಂ ನಿಸರ್ಗಸುಭಗಂ ರಮಣೀ ।
ವಿಲಸಿತ ರತಿರಸರಸಿಕತೆ
ತಲೆದೋರ್ಪುದು ತಾನೆ ಕಲಿಸಲೇಂ ಬಂದಪುದೇ ॥ (ರಾಜಶೇಖರ ವಿಳಾಸ ೧–೨೯,೩೦)

ಈ ಪದ್ಯಗಳಲ್ಲಿ ಸ್ಪಷ್ಟಪಡಿಸಿದ್ದಾನೆ. ಈತನ ಕವಿತಾಶಕ್ತಿ ಪಾಂಡಿತ್ಯಗಳನ್ನು ವಿದ್ವಾಂಸರೇ ಮುಕ್ತಕಂಠದಿಂದ ಹೊಗಳಿದರೆಂಬ ಒಂದು ಐತಿಹ್ಯವು ಜನಜನಿತವಾಗಿ ಬಂದಿದೆ.

ಒಮ್ಮೆ ಜೈನಮತಸ್ಥರು ನೇಮಿಚಂದ್ರ ವಿರಚಿತ 'ಲೀಲಾವತಿ'ಯನ್ನು ಆನೆಯ ಮೇಲೆ ಅಂಬಾರಿಯಲ್ಲಿರಿಸಿಕೊಂಡು ಆನೆಯ ಹೊಟ್ಟೆಗೆ ಒಂದು ಬೆಳ್ಳಿಯ ತೊಟ್ಟಿಲನ್ನು ಕಟ್ಟಿ ಬೀದಿಯಲ್ಲಿ ಮೆರವಣಿಗೆ ಮಾಡಿಕೊಂಡು ಷಡಕ್ಷರಿಯ ಮಠದ ಮುಂದೆ ನಿಲ್ಲಿಸಿದರಂತೆ. ಶಿಷ್ಯರಿಂದ ವಿಚಾರವನ್ನು ಅರಿತ ಷಡಕ್ಷರಿಯು ಲೀಲಾವತಿಗಿಂತಲೂ ಹೆಚ್ಚು ರಸಭರಿತವಾದ ಗ್ರಂಥವಿರುವಾಗ ಇದಕ್ಕೆ ಇಷ್ಟು ಬಹುಮಾನ ಸಲ್ಲುವುದೆ ಎಂದು ಹೇಳಿ ಮೆರವಣಿಗೆಯನ್ನು ಹಿಂತಿರುಗಿಸಿದನಂತೆ. ರಾಜಶೇಖರವಿಳಾಸವನ್ನು ಒಂದು ವರ್ಷದೊಳಗಾಗಿ ರಚಿಸಿ ವಿದ್ವಾಂಸರ ಸಭೆಯಲ್ಲಿ ಮೊದಲು ಲೀಲಾವತಿಯ ಭಾಗಗಳನ್ನು ಓದಿಸಿ ತರುವಾಯ ರಾಜಶೇಖರ ವಿಳಾಸದಲ್ಲಿನ ಆಯಾ ವರ್ಣನಾಂಶಗಳನ್ನು ಓದಿ ತಾನೇ ಅರ್ಥವನ್ನು ಹೇಳಿ ಈ ಎರಡರಲ್ಲಿ ಯಾವುದು ರಸಭರಿತವಾದುದೆಂದು ಕೇಳಿದನಂತೆ. ಅದಕ್ಕೆ ವಿದ್ವಾಂಸರೆಲ್ಲರೂ ಲೀಲಾವತಿಯು

ಕನ್ನಡದಲ್ಲಿ ಪ್ರೌಢವಾದಾಗ್ಯೂ ರಾಜಶೇಖರವಿಳಾಸದಷ್ಟು ರಸಪುಷ್ಟಿಯುಳ್ಳುದಲ್ಲವೆಂದು ಹೇಳಿ ಷಡಕ್ಷರದೇವನ ಕವಿತಾ ವಿಷಯವಾಗಿ:

ಜಿಹ್ವಾಂತರ್ನಟದಂಬುಜಾಸನವಧೂಪಾದಪ್ರವಾಳ ಸ್ಫುರ ।
ನ್ಮಂಜೀರಧ್ವಯ ಮಂಜುನಾಥ ವಿಭವಶ್ರೀ ಗರ್ವಸರ್ವಂಕಷಾಃ ॥
ಜೀಯಾಸುರ್ಭವತಷಡಕ್ಷರ ವಿಭೋ ಕುಂದಾರವಿಂದಾವಳೀ ।
ಮಂದಾರದ್ರುಮಮಂಜರೀ ಮಧುಝುರೀ ಮಾಧುರ್ಯಧುರ್ಯಾಗಿರಃ ॥

ಎಂದು ಯೋಗ್ಯತಾಪತ್ರವನ್ನು ಕೊಟ್ಟರಂತೆ. ಈ ಪ್ರಸಂಗದ ಸತ್ಯಾಸತ್ಯವು ಎಂತಾದರೂ ಇರಲಿ. ಷಡಕ್ಷರಿಯು ಪ್ರತಿಭಾವಂತನೂ ಪ್ರಭಾವಶಾಲಿಯೂ ಆಗಿದ್ದನೆಂಬುದು ಮಾತ್ರ ನಿರ್ವಿವಾದ.

ರಾಜಶೇಖರ ವಿಳಾಸವು ಷಡಕ್ಷರಿಯ ಪ್ರಪ್ರಥಮ ಕಾವ್ಯವೆಂದು ತೋರುತ್ತದೆ. ಇದು ಶೃಂಗಾರರಸಭರಿತವಾಗಿದೆ. ಕವಿ ಈ ಕಾವ್ಯವನ್ನು ನವತಾರುಣ್ಯದ ಅವಧಿಯಲ್ಲಿ ಬರೆದಿರಬಹುದು. ಇದರ ಕಥಾವಸ್ತು ಸುಪ್ರಸಿದ್ಧವಾದುದು. ಪಂಚಾಕ್ಷರೀಮಂತ್ರ ಮಾಹಾತ್ಮ್ಯವನ್ನು ಸಾರುವುದೇ ಇದರ ಪರಮೋದ್ದೇಶ. ರಾಜಶೇಖರ ವಿಳಾಸದಲ್ಲಿ ಹದಿನಾಲ್ಕು ಆಶ್ವಾಸಗಳಿವೆ; ಅಷ್ಟಾದಶವರ್ಣನೆಗಳಿವೆ. ತಮಿಳಿನಲ್ಲಿ ಪಿಳ್ಳೈನೈನಾರ್ ಹೇಳಿದ್ದ ಈ ಕಥೆಯನ್ನು ಗುಬ್ಬಿಯ ಮಲ್ಲಣಾರ್ಯನು ಕನ್ನಡದಲ್ಲಿ 'ಭಾವಚಿಂತಾರತ್ನ'ವೆಂಬ ವರ್ಣಕಗ್ರಂಥವಾಗಿ ಮಾಡಿದನು. ಅದನ್ನೇ ಹರೀಶ್ವರನ ಕವಿತಾಮಾರ್ಗವನ್ನು ಅನುಸರಿಸಿ ತಾನು ವಸ್ತುಕರೂಪವಾಗಿ ರಚಿಸಿದಂತೆ ಕವಿ ಹೇಳಿಕೊಳ್ಳುತ್ತಾನೆ.

ಧರ್ಮದೇವಪುರದಲ್ಲಿ ಚೋಳಚಕ್ರವರ್ತಿಯಾದ ಸತ್ಯೇಂದ್ರನು ರಾಜ್ಯಭಾರವನ್ನು ಮಾಡುತ್ತಿದ್ದ. ಆತನ ಪತ್ನಿ ಅಮೃತವತೀದೇವಿ. ಮಂತ್ರಿ ಪತಿಮೋಹಿ. ಮಿತವಚನೆಂಬುವನು ಮಂತ್ರಿಯ ಮಗ. ರಾಜದಂಪತಿಗಳಿಗೆ ಮಕ್ಕಳಿಲ್ಲದಿರಲು ಚಿದ್ಘನಶಿವಾಚಾರ್ಯರೆಂಬ ಗುರುಗಳ ಅನುಗ್ರಹದಿಂದ ಅವರಿಗೆ ಪುತ್ರಸಂತಾನವಾಗುತ್ತದೆ. ಆತನೇ ಕಥಾನಾಯಕನಾದ ರಾಜಶೇಖರ. ಈತನೂ ಮಂತ್ರಿಸುತನಾದ ಮಿತವಚನನೂ ಅಣ್ಣತಮ್ಮಂದಿರಂತೆ ಅನ್ಯೋನ್ಯವಾಗಿ ಒಡನುಂಡು ಒಡನಾಡಿ ಒಡನೆ ಬೆಳೆಯುತ್ತಾರೆ. ಹೀಗಿರುವಲ್ಲಿ ಒಮ್ಮೆ ಸಿಂಹಳೇಂದ್ರನಿಗೂ ಸತ್ಯೇಂದ್ರನಿಗೂ ಮನಸ್ತಾಪವಾಗಲು ರಾಜಶೇಖರನು ಸಿಂಹಳೇಂದ್ರನ ಮೇಲೆ ದಂಡೆತ್ತಿ ಹೋಗಿ ಆತನನ್ನು ಸೋಲಿಸುತ್ತಾನೆ. ಆದರೆ ಸಿಂಹಳೇಂದ್ರನ ಪುತ್ರಿಯ ಅನುಪಮ ಸೌಂದರ್ಯಕ್ಕೆ ತಾನು ಸೋತುಹೋಗುತ್ತಾನೆ. ಕವಿ ಇದನ್ನು ಚಾತುರ್ಯದಿಂದ:

ಈ ಲಲನೆಯ ಸೌಂದರ್ಯಂ
ಸೋಲಿಸಿದುದು ಗಡ ಮದೀಯ ಮನವನದಾರ್ಗಂ ।
ಸೋಲದುದಂ ಶಿವಶಿವ ಶಶಿ
ಮೌಲಿಯ ಮಾಯೆಯನದಾರೋ ಮೀಱಿಲ್ ಬಲ್ಲರ್ ॥ (ರಾಜಶೇಖರ ವಿಳಾಸ ೭-೭೧)

ಈ ರೀತಿ ಹೇಳಿದ್ದಾನೆ. ರಾಜಶೇಖರನ ಮತ್ತು ಸಿಂಹಳೇಂದ್ರನ ಪುತ್ರಿ ಸರ್ವಮಂಗಳೆಯ ವಿವಾಹ ನಡೆದು ಕೆಲಕಾಲ ಅವರು ಭೋಗಭಾಗ್ಯಗಳನ್ನು ಅನುಭವಿಸುವರು. ಒಂದುದಿನ ರಾಜಶೇಖರನಿಗೆ ಪುರವೀಧೀವಿಹಾರವನ್ನು ಮಾಡಿಕೊಂಡು ಬರಬೇಕೆಂಬ ಬಯಕೆಯಾಯಿತು. ಸಿಂಧುದೇಶದಿಂದ ಕಾಣಿಕೆಯಾಗಿ ಬಂದಿದ್ದ ದಿವ್ಯಾಶ್ವಗಳನ್ನೇರಿ ರಾಜಪುತ್ರ ಮಂತ್ರಿಪುತ್ರರಿಬ್ಬರೂ ಹೊರಟರು. ವಿಹಾರವನ್ನು ಮುಗಿಸಿಕೊಂಡು ಹಿಂತಿರುಗುವಾಗ ರಾಜಶೇಖರನ ಅಶ್ವವು ತಿರಿಕೊಳವಿನಾಚಿಯೆಂಬ ಶಿವಭಕ್ತೆಯ ಮಗನನ್ನು ತುಳಿದು ಕೊಂದುಬಿಡುತ್ತದೆ. ರಾಜಶೇಖರ ವಿಳಾಸದಲ್ಲಿ ಈ ಪ್ರಸಂಗವು ಒಂದು ರಸಘಟ್ಟಿಯಂತಿದೆ. ಮಗನನ್ನು ಕಳೆದುಕೊಂಡ ತಿರಿಕೊಳವಿನಾಚಿಯ ಕರುಣಾಜನಕವಾದ ಪ್ರಲಾಪ ಎಂತಹವರ ಕಲ್ಲೆದೆಯನ್ನೂ ಕರಗಿಸುತ್ತದೆ. ಆರುಜನ ಮಕ್ಕಳನ್ನು ಕಳೆದುಕೊಂಡು ತನ್ನ ಜೀವಿತಕ್ಕೆ ಊರುಗೋಲಾಗಿದ್ದ ಮತ್ತೊಬ್ಬ ಮಗನನ್ನೂ ಕಳೆದುಕೊಂಡಾಗಿನ ಆಕೆಯ ಸ್ಥಿತಿ ಹೃದಯವಿದ್ರಾವಕವಾಗಿದೆ. ಮಗನಾದ ಶಂಕರನ ಸುಳಿವನ್ನು ಕಾಣದೆ:

ತನುಭವನೆಲ್ಲಿದನೆಲ್ಲಿದ
ನಿನಿವಾತಿನ ನೀಱನೆಲ್ಲಿದಂ ಮೆಲ್ಲಗೆಯಿಂ ।
ಪಿನ ಸೊಬಗನೆಲ್ಲಿದಂ ಚೆ
ಲ್ವಿನ ಕಣಿಯೆಲ್ಲಿದನೊ ಮನ್ಮನೋಂಬುಜಹಂಸಂ ॥ (ರಾಜಶೇಖರ ವಿಳಾಸ ೧೩-೧೦೪)

ಹೀಗೆ ಗೋಳಿಡುತ್ತ ಆತನು ಸತ್ತನೆಂಬುದನ್ನು ಕೇಳಿ:

ಹಾ ಮಗನೆ ಹಾ ಮನೋಜ್ಞನೆ
ಹಾ ಮುದ್ದುಗ ಹಾ ಮದೇಭಗತಿ ಮಂಜುಳ ಹಾ ।
ಹಾ ಮಧುರವಾಣಿ ಹಾ ಮ
ತ್ಪ್ರೇಮಾಸ್ಪದ ಹಾ ಮದೀಶವಂಶಲಲಾಮ ॥

ನೋಡುವ ಕಣ್ಣೊಡೆದುದು ಮಾ
ತಾಡಿಪ ನಾಲಿಗೆ ಮುರುಂಟಿದುದು ನಿನ್ನಂ ಮುಂ ।
ಡಾಡುವ ಕಯ್ಯುಡಿದುದು ಸಲೆ
ಪಾಡುವ ಬಾಯ್ಬೆಂದುದಣುಗ ನೀಂ ಮಡಿಯಲೊಡಂ ॥

ಆರೊಡನುಸಿರ್ವೆಂ ದುಃಖಮ
ನಾರುಂಟೆನಗಕಟ ಮಗನೆ ಮಗನೆ ಮನೋಜಾ
ಕಾರಿಯ ಕೃಪೆ ತಪ್ಪಿದ ಬಳಿ
ಕಾರಾದೊಡಮೇನೊ ನಿನ್ನನೇಂ ಕಾಣಿಪರೇ ॥

(ರಾಜಶೇಖರ ವಿಳಾಸ ೧೩-೧೦೬,೧೧೯,೧೨೦)

ಈ ರೀತಿ ಪ್ರಲಾಪಿಸುತ್ತಾಳೆ. ಕೊನೆಗೆ ಆ ಸತ್ತ ಶಿಶುವನ್ನೆತ್ತಿಕೊಂಡು ರಾಜಾಸ್ಥಾನಕ್ಕೆ ಹೋಗುತ್ತಾಳೆ. ಸಂಗತಿಯನ್ನೆಲ್ಲ ಅರಿತ ಸತ್ಯೇಂದ್ರನು ಆಕೆಯನ್ನು ಸಂತೈಸಿ ರಾಜಶೇಖರನ ಶಿರವನ್ನು ಕತ್ತರಿಸುವಂತೆ ಮಂತ್ರಿಗೆ ಆಜ್ಞಾಪಿಸುತ್ತಾನೆ. ಧರ್ಮಸಂಕಟಕ್ಕೊಳಗಾದ ಮಂತ್ರಿಯು ಆ ಕಾರ್ಯವನ್ನು ಮಾಡಲಾರದೆ ತನ್ನ ಶಿರವನ್ನೇ ಕಡಿದುಕೊಳ್ಳುವನು. ಅದನ್ನು ಕೇಳಿದ ರಾಜನು ಸಂದಾಯಿ ಎಂಬ ಭೃತ್ಯನಿಗೆ ಈ ಕೆಲಸವನ್ನು ವಹಿಸುವನು. ಸಂದಾಯಿ ರಾಜಶೇಖರನನ್ನು ವಧಾಸ್ಥಾನಕ್ಕೆ ಒಡಗೊಂಡು ಹೋಗಿ ವಧಿಸುವುದಕ್ಕೆ ಮುನ್ನ ರಾಜಶೇಖರನಿಗೆ ಪಂಚಾಕ್ಷರಿಯನ್ನು ಜಪಿಸುವಂತೆ ಹೇಳಿ ವಧಿಸುವನು. ರಾಜಶೇಖರನ ರುಂಡವು ಪಂಚಾಕ್ಷರಿಯನ್ನು ಜಪಿಸುತ್ತಿತ್ತು. ಸಂದಾಯಿ ಆ ಶಿರವನ್ನು ಆಸ್ಥಾನಕ್ಕೆ ತಂದು ರಾಜನಿಗೆ ತೋರಿಸಲು ರಾಜನು ಅದಕ್ಕೆ ಕಾರಣವನ್ನು ಕೇಳುವನು. ಆಗ ಸಂದಾಯಿಯು ತನ್ನ ಶಿರವನ್ನೇ ಕಡಿದುಕೊಳ್ಳುವನು. ಆತನ ಶಿರವೂ ಪಂಚಾಕ್ಷರಿಯನ್ನೇ ಜಪಿಸುತ್ತಿತ್ತು. ಮಂತ್ರಿ ಪತಿಮೋಹಿಯ ಶಿರವೂ, ಸತ್ತ ಬಾಲಕನ ಶಿರವೂ ಪಂಚಾಕ್ಷರಿಯನ್ನೇ ಜಪಿಸುವುದು. ಇದನ್ನೆಲ್ಲ ನೋಡುತ್ತಿದ್ದ ತಿರಿಕೊಳವಿನಾಚಿ ತನ್ನಿಂದ ಇಷ್ಟೆಲ್ಲ ಅನಾಹುತವಾಯಿತೆಂದು ತನ್ನ ಕುತ್ತಿಗೆಯನ್ನೇ ಕಡಿದುಕೊಳ್ಳುವಳು. ಆಕೆಯ ಶಿರವೂ ಪಂಚಾಕ್ಷರಿಯನ್ನೇ ಜಪಿಸುವುದು. ಸತ್ಯೇಂದ್ರ ಮಿತವಚನರೂ ತಮ್ಮ ಶಿರಗಳನ್ನು ಕತ್ತರಿಸಿಕೊಳ್ಳಲು ಅವರ ಶಿರಗಳೂ ಪಂಚಾಕ್ಷರಿಯನ್ನೇ ಜಪಿಸುವವು. ಕೊನೆಗೆ ಅಮೃತವತೀದೇವಿಯೂ ತನ್ನ ಶಿರವನ್ನು ಕಡಿದುಕೊಳ್ಳಲುದ್ಯುಕ್ತಳಾದಳು. ಆಗ ಪಾರ್ವತಿಪರಮೇಶ್ವರರು ಪ್ರತ್ಯಕ್ಷರಾಗಿ ಅಲ್ಲಿ ಸತ್ತಿದ್ದ ಎಲ್ಲರನ್ನೂ ಬದುಕಿಸಿ ಕೈಲಾಸಕ್ಕೆ ಕೊಂಡೊಯ್ಯುವರು.

ವೃಷಭೇಂದ್ರ ವಿಜಯವು ನಲವತ್ತೆರಡು ಆಶ್ವಾಸಗಳುಳ್ಳ ಒಂದು ಬೃಹತ್ಕಾವ್ಯ. ಇದರಲ್ಲಿ ಬಸವೇಶ್ವರನ ಚರಿತೆಯು ಆದ್ಯಂತವಾಗಿ ವರ್ಣಿತವಾಗಿದೆ. ಮೊದಲು ಪಾಲ್ಕುರಿಕೆ ಸೋಮನಾಥನು ತೆಲುಗಿನಲ್ಲಿ ಬಸವಪುರಾಣವನ್ನು ಬರೆದನು. ಅದನ್ನೇ ಭೀಮಕವಿ ಕನ್ನಡದಲ್ಲಿ ವರ್ಣಕ ಗ್ರಂಥವಾಗಿ ಮಾಡಿದನು. ಶಂಕರಕವಿ ಅದನ್ನು ಸಂಸ್ಕೃತಕ್ಕೆ ಪರಿವರ್ತಿಸಿದನು. ಆ ಕಥೆಯನ್ನೇ ಚಂಪೂರೂಪದಲ್ಲಿ ರಚಿಸಿದಂತೆ ಷಡಕ್ಷರಿ ಹೇಳಿಕೊಂಡಿದ್ದಾನೆ. ಬಸವೇಶ್ವರನ ಕಥೆ ಅತ್ಯಂತ ಪ್ರಸಿದ್ಧವೂ ಪ್ರಚಲಿತವೂ ಆದುದು. ಪ್ರಕೃತ ವೃಷಭೇಂದ್ರವಿಜಯವು ಒಂದು ಕಥಾಸರಿತ್ಸಾಗರ. ಇದರಲ್ಲಿ ಬರುವ ಹಲವಾರು ಶಿವಭಕ್ತರ ಕಥೆಗಳು ಮೂಲಕಥೆಗೆ ಪರಿಪೋಷಕವಾಗಿವೆ. ವೃಷಭೇಂದ್ರವಿಜಯದ ಕೋಳೂರು ಕೊಡಗೂಸಿನ ಚಿತ್ರ ಎಂತಹವರ ಮನವನ್ನಾದರೂ ಸೂರೆಗೊಳ್ಳುತ್ತದೆ.

ಕೋಳೂರಿನಲ್ಲಿ ಶಿವದೇವನೆಂಬ ಭಕ್ತನಿದ್ದನು. ಆತನು ಪ್ರತಿನಿತ್ಯವೂ ಆ ಊರಿನಲ್ಲಿದ್ದ ಕಲ್ಲಿನಾಥನಿಗೆ ಹಾಲನ್ನರ್ಪಿಸುವ ವ್ರತವನ್ನು ಕೈಗೊಂಡಿದ್ದನು. ಒಂದು ಸಲ ಶಿವದೇವನು ಪತ್ನೀಸಮೇತನಾಗಿ ಪರಸ್ಥಳಕ್ಕೆ ಹೋಗಬೇಕಾಯಿತು. ಕಲ್ಲಿನಾಥನಿಗೆ ಹಾಲನ್ನರ್ಪಿಸಿ ಬರುವ ಕೆಲಸವನ್ನು ತನ್ನ ಮುದ್ದುಮಗಳಾದ ಕೊಡಗೂಸಿಗೆ ವಹಿಸಿ ಹೋಗುವನು. ತಂದೆಯ ಆಣತಿಯಂತೆ ಕೊಡಗೂಸು ಮಜ್ಜನವನ್ನು ಮಾಡಿ ಭಸ್ಮವನ್ನಿಟ್ಟು ಹಾಲನ್ನು ಹದವಾಗಿ ಕಾಸಿ ಹೊಂಬಟ್ಟಲಲ್ಲಿ ಅದನ್ನು ಕೊಂಡು ಶಿವಾಲಯಕ್ಕೆ ಬರುವಳು. ಕಲ್ಲಿನಾಥನ ಮುಂದೆ ಆ ಹೊಂಬಟ್ಟಲನ್ನಿಟ್ಟು ಹಾಲನ್ನು ಸೇವಿಸುವಂತೆ ಹೇಳಿ

ಮರೆಯಾಗಿ ನಿಲ್ಲುವಳು. ತುಸುಹೊತ್ತಾದ ಮೇಲೆ ಬಂದು ನೋಡಿದಳು ಹಾಲು ಮೊದಲಿದ್ದಂತೆಯೇ ಇರಲು ಆ ಕೊಡಗೂಸು ಭಯದಿಂದಲೂ ಭ್ರಾಂತಿಯಿಂದಲೂ:

ಏಂ ಕಾರಣಮಿೀ ಪಾಲಂ
ನೀಂ ಕುಡಿಯದೆ ಸುಮ್ಮನಿರ್ಪೆಯಕಟಕಟೆನಗಾ ।
ಟಂಕಮನಾಗಿಪುದುಚಿತಮೆ
ಶಂಕರ ನೀ ಪೇಳ್ವುದೆಂದು ಮಗುಳ್ದಿಂತೆಂದಳ್ ॥

ಪಸಿವೇನಾಗದೋ ದೇವ ಕೇಳ್ ನಿನಗೆ ಪಾಲೇಂ ಕಾಯದೋ ಪೊತ್ತಿತೋ ।
ಬಿಸುಪಾಜಿರ್ದುದೊ ಕಮ್ಮನಾಗದೊ ಲಸತ್ತಿಂಪೇಱದೋ ಕಣ್ಗೆ ರಂ ॥
ಜಿಸದೋ ಮೇಣ್ ಪೊಗೆ ಸುತ್ತಿದತ್ತೊ ಪೆಱಱ ಕಣ್ಣೆಂಜಲಾದತ್ತೊ ಬಲ್ ।
ಬಿಸಿಯಾಗಿರ್ದುದೊ ಮಿೊಸಲೋಸರಿಸಿತೋ ಪೇಳೀಂಟದಿರ್ಪಂದಮಂ ॥

(ಬಸವರಾಜ ವಿಜಯ ೯-೧೩,೭೪)

ಹೀಗೆ ಪರಿಪರಿಯಾಗಿ ಶಿಶುಸಹಜವಾಗಿ ಕೇಳಿಕೊಳ್ಳುತ್ತಾಳೆ. ಕೊನೆಗೆ:

ಎನ್ನ ಮಾತನುಪೇಕ್ಷೆಗೆಯ್ಯದೆ ಪಾಲನೀಂಟಿದಡಯ್ಯ ಕೇಳ್ ।
ನಿನ್ನನಾಂ ಕರೆದೊಯ್ವೆನೊಪ್ಪುವ ವೀರಭದ್ರನ ತೇರ್ಗೆ ಸಂ ॥
ಪನ್ನ ಮದ್ಗುರುಪರ್ವಕೆನ್ನಯ ತಂದೆ ನಾಳೆನಗೀವ ರ ।
ತ್ನೋನ್ನತಾಭರಣಂಗಳಂ ನಿನಗೀವೆನೆನಿಂದುಕಳಾಧರಾ ॥ (ಬಸವರಾಜ ವಿಜಯ ೯-೮೦)

ಈ ರೀತಿ ಕಲ್ಲಿನಾಥನಿಗೆ ಆಶೆಯನ್ನು ತೋರುತ್ತಾಳೆ. ಇದಾವುದಕ್ಕೂ ಕಲ್ಲಿನಾಥನು ಜಗ್ಗದಿರಲು ಅತ್ತು ಗೋಳಾಡಿ ತನ್ನ ಹರಣವನ್ನೇ ಅರ್ಪಿಸಲು ಸಿದ್ಧಳಾಗುವಳು. ಆಗ ಪರಶಿವನು ಪ್ರತ್ಯಕ್ಷನಾಗಿ ಆ ಸುಧೆಯನ್ನೀಂಟಿದ ಮೇಲೆ ಕೊಡಗೂಸು ಆತನಿಗೆ:

ಜನಕಂ ಬಂದಡೆ ಪೇಳ್ದಪೆ
ನಿನಿತೆಲ್ಲಮನಯ್ಯ ಮಱೆಯದಿರ್ ಬಳಿಕೆನಗಂ ।
ನಿನಗಂ ಸಂವಾದಮದುಂ
ಟೆನುತಂ ಪೊಡಮಟ್ಟು ನಗುತೆ ಮನೆಗೆಳ್ತಂದಳ್ ॥ (ಬಸವರಾಜ ವಿಜಯ ೯-೮೪)

ಈ ರೀತಿ ಹೇಳುತ್ತಾಳೆ. ಶಿಶುಸಹಜವಾದ ಪ್ರವೃತ್ತಿಯನ್ನು ಚಿತ್ರಿಸಿರುವ ಷಡಕ್ಷರಿಯ ಪ್ರತಿಭಾಶ್ರೀಮಂತಿಕೆ ನಿಜಕ್ಕೂ ಶ್ಲಾಘ್ಯವಾದುದು.

ಶಬರಶಂಕರ ವಿಳಾಸವು ಐದು ಆಶ್ವಾಸಗಳುಳ್ಳ ಒಂದು ಚಿಕ್ಕ ಗ್ರಂಥ. ಪರಶಿವನು ಅರ್ಜುನನಿಗೆ ಪಾಶುಪತಾಸ್ತ್ರವನ್ನು ಅನುಗ್ರಹಿಸಿದ್ದು ಈ ಕಾವ್ಯದ ಕಥಾವಸ್ತು. ಇದರಲ್ಲಿ ಪರಶಿವನ ಪಂಚವಿಂಶತಿಲೀಲೆಗಳಲ್ಲಿ ಹದಿನೈದನೆಯದಾದ ಶಬರಲೀಲೆಯು ವರ್ಣಿಸಲ್ಪಟ್ಟಿದೆ. ಷಡಕ್ಷರಿಗಿಂತ ಹಿಂದೆ ಪಂಪನ ವಿಕ್ರಮಾರ್ಜುನ ವಿಜಯ, ಕುಮಾರವ್ಯಾಸನ ಭಾರತ, ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣಗಳಲ್ಲಿ ಈ ಉಪಾಖ್ಯಾನವು ಬಂದಿದೆ. ಕುಮಾರವ್ಯಾಸನ ಭಾರತವನ್ನು ಷಡಕ್ಷರಿಯು ಅನುಸರಿಸಿದಂತೆ ಕಂಡುಬರುತ್ತದೆ.

ಅರ್ಜುನನು ರಿಪುಸಂಹಾರಕ್ಕಾಗಿ ಪರಶಿವನಿಂದ ಪಾಶುಪತಾಸ್ತ್ರವನ್ನು ಪಡೆಯಲು ಇಂದ್ರಕೀಲಕ್ಕೆ ಬಂದು ಘೋರ ತಪವನ್ನಾಚರಿಸುತ್ತಾನೆ. ಆತನ ತಪಸ್ಸಿನ ಉಗ್ರತೆಯನ್ನು ತಾಳಲಾರದೆ ತಾಪಸರೆಲ್ಲ ಈಶ್ವರನಿಗೆ ಮೊರೆಯಿಡುತ್ತಾರೆ. ಶಂಕರನು ಅವರನ್ನು ಸಂತೈಸಿ ಶಬರರೂಪವನ್ನು ತಾಳಿ ಪಾರ್ವತಿಯೊಡನೆಯೂ ತನ್ನ ಗಣಸಮೂಹದೊಡನೆಯೂ ಇಂದ್ರಕೀಲಕ್ಕೆ ಬರುತ್ತಾನೆ. ಅಲ್ಲಿಯ ವನ್ಯಮೃಗಂಗಳನ್ನು ಬೇಟೆಯಾಡುತ್ತಾ ಬರುತ್ತಿರುವಾಗ ಒಂದೆಡೆ ಗಿರಿಕಂದರದಲ್ಲಿ ವಾಸಿಸುತ್ತಿದ್ದ ಮೂಕದಾನವನೆಂಬ ರಕ್ಕಸನು ಬೇಟೆಯ ಕಳವಳವನ್ನು ಕೇಳಿ ಮಹಾವರಾಹರೂಪದಿಂದ ಹೊರಕ್ಕೆ ಬಂದು ಶಬರಶಂಕರನ ಪರಿವಾರವನ್ನೆಲ್ಲ ಸೊಪ್ಪುಸದೆಮಾಡಲು ಅದನ್ನು ಕಂಡ ಈಶ್ವರನು ಆ ವರಾಹನ ಮೇಲೆ ದಿವ್ಯಬಾಣಗಳನ್ನು ಪ್ರಯೋಗಿಸುತ್ತಾನೆ. ಆ ಬಾಣಗಳ ಪೆಟ್ಟಿನಿಂದ ನೊಂದ ವರಾಹ ಅರ್ಜುನನು ತಪಸ್ಸು ಮಾಡುತ್ತಿದ್ದಲ್ಲಿಗೆ ಹೋಯಿತು. ಭೀಕರಾಕಾರವಾದ ಆ ವರಾಹನನ್ನು ಕಂಡು ಅರ್ಜುನನು ಬಾಣಪ್ರಯೋಗಮಾಡಿ ಅದನ್ನು ಉರುಳಿಸುತ್ತಾನೆ. ಆ ಹಂದಿಯನ್ನೇ ಹುಡುಕಿಕೊಂಡು ಶಬರಶಂಕರನು ಅರ್ಜುನನಲ್ಲಿಗೆ ಬರುವನು. ಅಲ್ಲಿ ಸತ್ತು ಬಿದ್ದಿದ್ದ ಹಂದಿಯನ್ನು

ತೆಗೆದುಕೊಳ್ಳುವಂತೆ ತನ್ನ ಗಣಕ್ಕೆ ಬೆಸಸಲು ಅರ್ಜುನನು ಅದು ತನ್ನ ಬಾಣದಿಂದ ಸತ್ತುದೆಂದೂ ಅದನ್ನು ಮುಟ್ಟಕೂಡದೆಂದೂ ತಿಳಿಸುತ್ತಾನೆ. ಆಗ ಅರ್ಜುನನಿಗೂ ಶಂಕರನಿಗೂ ವಾಗ್ವಾದವಾಗಿ ಇಬ್ಬರೂ ಯುದ್ಧಕ್ಕೆ ತೊಡಗುತ್ತಾರೆ. ಅರ್ಜುನನ ಎಲ್ಲ ಅಸ್ತ್ರಗಳೂ ನಿಷ್ಫಲವಾದ ಮೇಲೆ ಮುಷ್ಟಿಯುದ್ಧವನ್ನು ಮಾಡುತ್ತಾರೆ. ಅದನ್ನು ಕವಿ:

ತಳಹತ್ತಂ ದಣುವಟ್ಟಿ ಖೊಪ್ಪರಮುರೋಬಂಧಂ ಲತಾಬಂಧಮು ।
ಜ್ವಳ ಶಾಖಾಚರಬಂಧಮಾಯತಿಕೆ ಬಂಧಂ ಡೊಕ್ಕರಂ ಪಟ್ಟಿಸಂ ॥
ವಳಯಾವೇಷ್ಟನಮಾಹತಂ ಭುಜಗಬಂಧಂ ತೋರಹತ್ತಂ ಶಿರೋ ।
ವಳಯಂ ಬಾಹುತಳಂ ಚಮತ್ಕರಿಸೆ ನಾನಾ ಕೌಶಲಂದೋಱಿದರ್ ॥ (ಶಬರಶಂಕರ ವಿಳಾಸ ೪-೭೫)

ಈ ರೀತಿ ವರ್ಣಿಸಿದ್ದಾನೆ. ಈಶಾರ್ಜುನರ ಯುದ್ಧದಿಂದಾದ ಅನಾಹುತವನ್ನು:

ಪದಘಾತಕ್ಕೆ ಧರಾತಳಂ ಕುಸಿಯೆ ಕೂರ್ಮಂ ಕುರ್ಗೆ ಭೋಗೀಂದ್ರನ ।
ಗ್ಗದ ದೀರ್ಘಸ್ಫುಟಿ ಕಂಠದೊಳ್ ನೆಲಸೆ ಬಾಹುಭ್ರಾಂತಿ ಸಂಜಾತವಾ ॥
ತದ ಘಾತಕ್ಕೆ ಪಯೋಧರಂ ಕೆದಱೆ ಬಾನೊಳ್ ಜೀರ್ಣವರ್ಣಂದಲೊ ।
ಡ್ಡಿದ ವಿದ್ಯಾಧರ ಪುಷ್ಪಕಂ ಜಗುಳೆ ಯುದ್ಧಂಗೆಯ್ದರೀಶಾರ್ಜುನರ್ ॥ (ಶಬರಶಂಕರ ವಿಳಾಸ ೪-೭೮)

ಈ ಪದ್ಯದಲ್ಲಿ ವಿವರಿಸಿದ್ದಾನೆ. ಎಲ್ಲ ರೀತಿಯಿಂದಲೂ ಅರ್ಜುನನು ಪರಾಭವವನ್ನು ಹೊಂದಿದುದಕ್ಕೆ ಕಾರಣವನ್ನು:

ಶಿವಭಕ್ತಿಯಂ ತೊಱೆದೆನೋ ಶಿವನಿಂದೆಯನೆಯ್ದೆ ಕೇಳ್ದೆನೋ ।
ಶಿವನಿಜಭಕ್ತರಂ ಪಳಿದೆನೋ ಶಿವಪೂಜೆಗೆಯ್ಯದನ್ನಮಂ ॥
ಸವಿದೆನೊ ಶೈವಸುವ್ರತಮನಾಳ್ದೊಡೆವಿಟ್ಟೆನೊ ಪೂರ್ವಜನ್ಮದೊಳ್ ।
ಶಿವಶಿವ ತಾನಲ್ಲದೊಡೆ ಸಾರ್ಗುಮೆ ಸಂದೆನಗೀ ಪರಾಭವಂ ॥ (ಶಬರಶಂಕರ ವಿಳಾಸ ೪-೯೩)

ಹೀಗೆ ಯೋಚಿಸುತ್ತಾನೆ. ಕೊನೆಗೆ ತನ್ನ ಇಷ್ಟದೈವವಾದ ಪರಶಿವನನ್ನು ಪೂಜಿಸಿ ತರುವಾಯ ತನ್ನ ಪರಾಕ್ರಮವನ್ನು ತೋರಿಸುವುದಾಗಿ ಆ ಶಬರಶಂಕರನಿಗೆ ತಿಳಿಸಿ ಅಲ್ಲಿಯೇ ಮಣಲಲಿಂಗವನ್ನು ಮಾಡಿ ಪೂಜೆಮಾಡುವನು. ತಾನು ಮಣಲಲಿಂಗದ ಮೇಲೆ ಸೂಡಿದ ಪುಷ್ಪಗಳು ಆ ಶಬರಶಂಕರನ ಮಂಡೆಯಲ್ಲಿ ಕಾಣಲು, ಅದನ್ನು ಖಚಿತಪಡಿಸಿಕೊಳ್ಳಲು ಆ ಲಿಂಗವನ್ನು ಮತ್ತೊಮ್ಮೆ ಪುಷ್ಪಗಳಿಂದ ಪೂಜಿಸಲು ಅವೂ ಕೂಡ ಆ ಶಬರನ ಮಸ್ತಕದ ಮೇಲೆಯೇ ಕಾಣಿಸಿಕೊಳ್ಳಲು ಆಗ ಅರ್ಜುನನಿಗೆ ಜ್ಞಾನೋದಯವಾಗುತ್ತದೆ. ತಾನು ಮಾಡಿದ ಅಕಾಯಕಕ್ಕಾಗಿ ಪರಿಪರಿಯಾಗಿ ಪಶ್ಚಾತ್ತಾಪಗೊಳ್ಳುತ್ತಾನೆ. ಪರಶಿವನು ಆತನನ್ನು ಸಂತೈಸಿ ಪಾಶುಪತಾಸ್ತ್ರವನ್ನು ಅನುಗ್ರಹಿಸುತ್ತಾನೆ. ಪಾರ್ವತಿಯು ಅಂಜನಾಸ್ತ್ರವನ್ನು ದಯಪಾಲಿಸುವಳು. ಅರ್ಜುನ ಪಾರ್ವತೀ ಪರಮೇಶ್ವರರ ಆಶೀರ್ವಾದವನ್ನೂ ದಿವ್ಯಾಸ್ತ್ರಗಳನ್ನೂ ಪಡೆದು ಹಿಂತಿರುಗುವನು.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಷಡಕ್ಷರಿಗೆ ಒಂದು ವಿಶಿಷ್ಟ ಸ್ಥಾನವಿದೆ. ಸುಮಾರು ಹದಿಮೂರನೆಯ ಶತಮಾನದಲ್ಲಿಯೇ ನಿಂತುಹೋಗಿದ್ದ ಚಂಪೂಕಾವ್ಯ ರಚನೆಯನ್ನು ಮತ್ತೆ ಪ್ರಾಚುರ್ಯಕ್ಕೆ ತಂದ ಕೀರ್ತಿ ಷಡಕ್ಷರಿಗೆ ಸಲ್ಲತಕ್ಕದ್ದಾಗಿದೆ.

ಷಡಕ್ಷರಿ ಪ್ರತಿಭಾವಂತನಾದ ಮಹಾಕವಿ. ಈತನು ರಚಿಸಿರುವ ಮೂರು ಚಂಪೂಕಾವ್ಯಗಳು ಈತನ ಅದ್ವಿತೀಯ ಪಾಂಡಿತ್ಯಕ್ಕೆ ನಿದರ್ಶನಗಳಾಗಿವೆ. ಈತನಿಗೆ ಸಂಸ್ಕೃತ ಕನ್ನಡ ಭಾಷೆಗಳೆರಡರಲ್ಲೂ ವಿಶೇಷವಾದ ಪಾಂಡಿತ್ಯವಿದೆ. ಈತನು ಪ್ರಾಚೀನ ಕಥಾವಸ್ತುಗಳನ್ನೇ ಆರಿಸಿಕೊಂಡಿದ್ದರೂ ಅಲ್ಲಲ್ಲಿ ಮಾಡಿಕೊಂಡಿರುವ ಬದಲಾವಣೆಗಳಿಂದ ಈ ಕಾವ್ಯಗಳು ಇಂದಿಗೂ ಜೀವಂತವಾಗಿವೆ. ಷಡಕ್ಷರಿಯು ಪುರಾಣೇತಿಹಾಸಗಳನ್ನೂ ಪ್ರಾಚೀನ ಕಾವ್ಯಗಳನ್ನೂ ಆಳವಾಗಿ ವ್ಯಾಸಂಗ ಮಾಡಿದ್ದನು. ಆದುದರಿಂದಲೇ ಕನ್ನಡದಲ್ಲಾಗಲಿ ಸಂಸ್ಕೃತದಲ್ಲಾಗಲೀ ನಿರರ್ಗಳವಾಗಿ ಕಾವ್ಯವನ್ನು ರಚಿಸುವ ಸಾಮರ್ಥ್ಯವನ್ನು ಪಡೆದಿದ್ದನು. ಷಡಕ್ಷರಿ ವರ್ಣನಾಪ್ರಿಯನಾದ ಕವಿ. ಆವೊಂದು ಸೂಕ್ಷ್ಮವಸ್ತುವನ್ನೇ ಆಗಲಿ ಮನಮುಟ್ಟುವಂತೆ ವರ್ಣಿಸುವ ಪರುಷಹಸ್ತ ಷಡಕ್ಷರಿಯದು. ಈತನ ಕಂದಪದ್ಯಗಳು ಲಾಲಿತ್ಯದಿಂದಲೂ ಕೋಮಲತ್ವದಿಂದಲೂ ಕಂಗೊಳಿಸುತ್ತದೆ. ಷಡಕ್ಷರಿ ಯಾರ ಹಂಗಿಗೂ ಯಾವ ಹಂಗಿಗೂ ಒಳಗಾದವನಲ್ಲ. ತಾನು ಹೇಳಬೇಕಾದುದನ್ನೆಲ್ಲ ದಿಟ್ಟತನದಿಂದ ಹೇಳಿದ್ದಾನೆ. ವೀರಶೈವರಿಗೆ ಪರಮಪೂಜ್ಯವಾದ ಕಥಾವಸ್ತುಗಳನ್ನೇ ಆರಿಸಿಕೊಂಡು ಬೃಹತ್ತು ಮಹತ್ತುಗಳುಳ್ಳ ಕೃತಿಗಳನ್ನು ರಚಿಸಿ ಮಹೋಪಕಾರ ಮಾಡಿದ್ದಾನೆ. ಷಡಕ್ಷರಿಯು ರಚಿಸಿರುವ ಅಮರಕೃತಿಗಳಿಂದ ಆತನ ಕೀರ್ತಿ ಶಾಶ್ವತವಾಗಿ ನಿಲ್ಲತಕ್ಕದ್ದಾಗಿದೆ.

(ದಿನಾಂಕ ೧೬.೭.೧೯೬೧ ರಂದು ಬೆಂಗಳೂರು ಆಕಾಶವಾಣಿಯ ಪ್ರಸಾದವಾದ ಭಾಷಣ)

(ಕನ್ನಡನುಡಿ : ಡಿಸೆಂಬರ್ ೧೯೬೧, ಪು. ೨೪೯-೨೯೩)

# ಮಹಾಕವಿ ಷಡಕ್ಷರದೇವನ ವೃಷಭೇಂದ್ರವಿಜಯ

**ಕ**ನ್ನಡ ಸಾಹಿತ್ಯ ಚರಿತ್ರೆಯಲ್ಲಿ ಷಡಕ್ಷರದೇವನ ಹೆಸರು ಚಿರವಿನೂತನವಾಗಿದೆ. ಹದಿನೇಳನೆಯ ಶತಮಾನದಲ್ಲಿ ಬದುಕಿ ಬಾಳಿದ ಷಡಕ್ಷರಿ ತನ್ನ ಅನುಪಮ ಕೃತಿಗಳಿಂದ ಜನಮನದಲ್ಲಿ ಇಂದಿಗೂ ಜೀವಂತವಾಗಿದ್ದಾನೆ. ಕನ್ನಡ ಸಾಹಿತ್ಯದಲ್ಲಿ ಅತ್ಯಂತ ಪ್ರಮುಖ ಪ್ರಕಾರವೆನಿಸಿದ ಚಂಪೂಸಾಹಿತ್ಯ ಕಣ್ಮರೆಯಾಯಿತೇನೋ ಎಂಬ ಪರ್ವಕಾಲದಲ್ಲಿ ಷಡಕ್ಷರಿ ತನ್ನ ಅನುಪಮ ಕೃತಿಗಳಿಂದ ಚಂಪೂಸಾಹಿತ್ಯಕ್ಕೆ ಜೀವದಾನ ಮಾಡಿದ್ದಾನೆ. ಈತನ ಚಂಪೂಕೃತಿಗಳಾದ ರಾಜಶೇಖರ ವಿಲಾಸ, ವೃಷಭೇಂದ್ರ ವಿಜಯ, ಶಬರ ಶಂಕರವಿಲಾಸ ಪಂಡಿತ ಪಾಮರರ ಮೆಚ್ಚುಗೆಗೆ ಪಾತ್ರವಾಗಿವೆ. ಉಭಯಭಾಷಾವಿಶಾರದನೂ ಪ್ರಕಾಂಡ ಪಂಡಿತನೂ ಆದ ಷಡಕ್ಷರಿ ಕನ್ನಡದಲ್ಲಿ ಮೇಲಿನ ಕೃತಿಗಳನ್ನೇ ಅಲ್ಲದೆ ಸಂಸ್ಕೃತದಲ್ಲಿ ಕವಿಕರ್ಣರಸಾಯನ, ಭಕ್ತಾಧಿಕ್ಯ ರತ್ನಾವಳಿ, ಶಿವಾಧಿಕ್ಯರತ್ನಾವಳಿ, ಶಿವಸ್ತವಮಂಜರಿ, ವೀರಭದ್ರದಂಡಕ, ವೀರಭದ್ರೋದಾಹರಣ ಗದ್ಯ, ಪಾದಪೂಜಾಸ್ತೋತ್ರ, ಇಷ್ಟಲಿಂಗಾಷ್ಟಕ, ಷಡಕ್ಷರ ಮಂತ್ರಸ್ತೋತ್ರ, ಬಸವಾಷ್ಟಕ, ನೀಲಾಂಬಿಕಾ ಸ್ತೋತ್ರ ಮೊದಲಾದ ಗ್ರಂಥಗಳನ್ನು ರಚಿಸಿದ್ದಾನೆ.

ಷಡಕ್ಷರಿಯ ಇತಿವೃತ್ತಗಳೇನೂ ಆತನ ಕಾವ್ಯಗಳಿಂದ ತಿಳಿದುಬಂದಿಲ್ಲ. ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನಲ್ಲಿರುವ ದನಗೂರು ಈತನ ಜನ್ಮಸ್ಥಳ. ಆ ಊರಿನ ಮಠಕ್ಕೆ ಪಟ್ಟಾಧಿಕಾರಿಯಾಗಿದ್ದಂತೆ ತಿಳಿದುಬರುತ್ತದೆ. ಆದರೆ ಈತನ ಕಾರ್ಯಕ್ಷೇತ್ರ ಎಳಂದೂರು. ಈತನನ್ನು ಎಳಂದೂರಿಗೆ ಕರೆಸಿಕೊಂಡು ಅಲ್ಲಿ ಈತನಿಗೆ ಒಂದು ಮಠವನ್ನು ಕಟ್ಟಿಸಿಕೊಟ್ಟು ಅಲ್ಲಿಯೇ ನಿಲ್ಲುವಂತೆ ಮಾಡಿದವನು ಹದಿನಾಡ ದೊರೆಯಾದ ಮುದ್ದುರಾಜ ಎಂದು ಕೆಲವರು ಹೇಳುತ್ತಾರೆ. ಇದು ಹೇಗಾದರೂ ಇರಲಿ. ಷಡಕ್ಷರಿ ಅರಮನೆ ಗುರುಮನೆಗಳಿಂದ ಪರಿಪೂಜಿತನಾಗಿದ್ದನೆಂಬುದು ನಿರ್ವಿವಾದ.

ಷಡಕ್ಷರಿಯ ಗುರು ಚಿಕವೀರದೇಶಿಕ. ಇವರ ಕೀರ್ತಿ ದಿಗಂತವಿಶ್ರಾಂತವಾಗಿತ್ತು. ರಾಜಶೇಖರ ವಿಳಾಸ (೧–೬೫)ದ ಈ ಪದ್ಯ ಇದನ್ನು ಸ್ಪಷ್ಟಪಡಿಸುತ್ತದೆ:

ಮಣಿಯದ ಮಾನ್ಯರಿಲ್ಲ ತಲೆವಾಗದ ವಾದಿಗಳಿಲ್ಲ ಬಂದು ಸಂ
ದಣಿಸದ ಸಂತರಿಲ್ಲ ನಡೆನೋಳ್ಪಡೆ ಬಾರದ ರಾಜರಿಲ್ಲ ಕೂ
ರ್ತಣಿಸದ ಧೀರರಿಲ್ಲ ನುತಿಗೆಯ್ಯದ ಕಬ್ಬಿಗರಿಲ್ಲ ಸಾರಸ
ದ್ಗುಣಮನೆನಲ್ ಧರಾತಳದೊಳೊಪ್ಪಿದನಾ ಚಿಕವೀರದೇಶಿಕಂ ॥

ಷಡಕ್ಷರಿಗೆ ಕೇವಲ ಹನ್ನೊಂದನೆಯ ವರ್ಷದಲ್ಲಿಯೇ ಕವಿತಾಶಕ್ತಿ ಪ್ರಾಪ್ತವಾಯಿತೆಂದು:

ನೆರೆದೇಕಾದಶವರ್ಷದ
ಹರಯದೊಳಭವಪ್ರಸಾದ ಬಲದಿಂ ಕವಿಕಾ
ತರುಣಿ ಷಡಕ್ಷರಿದೇವನ
ನೆರವಿಲ್ಲದೆ ವರಯಿಸಿರ್ದಳರಿದೆನೆ ವಿಬುಧರ್ ॥ (ಶಬರಶಂಕರವಿಳಾಸ ೫–೬೦)

ಈ ಪದ್ಯದಲ್ಲಿ ಹೇಳಿಕೊಂಡಿದ್ದಾನೆ.

ಷಡಕ್ಷರಿಯ ಪಾಂಡಿತ್ಯಕ್ಕೆ ನಿಕಷವಿಟ್ಟಂತಿರುವ ಒಂದು ಪ್ರಸಂಗ ಜನಜನಿತವಾಗಿದೆ. ನೇಮಿಚಂದ್ರನ 'ಲೀಲಾವತಿ ಪ್ರಬಂಧ' ಎಂಬ ರಸಭರಿತ ಕಾವ್ಯವನ್ನು ಜೈನಮತಸ್ಥರು ಮೆರವಣಿಗೆಯಲ್ಲಿ ಷಡಕ್ಷರಿಯ ಮಠದ ಮುಂದೆ ತಂದು ನಿಲ್ಲಿಸಿದಂತೆಯೂ ಅದನ್ನು ಕೇಳಿದ ಷಡಕ್ಷರಿ ಅದಕ್ಕಿಂತ ಮಿಗಿಲಾದ ರಸಭರಿತ ಕಾವ್ಯವನ್ನು ಒಂದು ವರ್ಷದೊಳಗಾಗಿ ರಚಿಸಿ ವಿದ್ವಾಂಸರ ಸಭೆಯಲ್ಲಿ ಮೊದಲು ಲೀಲಾವತಿಯ ಭಾಗಗಳನ್ನು ಓದಿಸಿ ತರುವಾಯ ರಾಜಶೇಖರ ವಿಳಾಸದ ಅದೇ ವರ್ಣನಾಂಶದ ಭಾಗಗಳನ್ನು ಓದಿದಾಗ ಇವೆರಡನ್ನೂ ಕೇಳಿದ ವಿದ್ವಾಂಸರು ಲೀಲಾವತಿಯು ಪ್ರೌಢವಾದಾಗ್ಯೂ ರಾಜಶೇಖರ ವಿಳಾಸದಷ್ಟು ರಸಪುಷ್ಟಿಯುಳ್ಳದ್ದಲ್ಲವೆಂದು ಕೇಳಿ ಷಡಕ್ಷರದೇವನ ಕವಿತಾ ಸಾಮರ್ಥ್ಯಕ್ಕೆ:

ಜಿಹ್ವಾಂತರ್ನಟದಂಬುಜಾಸನವಧೂಪಾದಪ್ರವಾಳ ಸ್ಫುರ
ನ್ಮಂಜೀರದ್ವಯ ಮಂಜುನಾದ ವಿಭವಶ್ರೀಗರ್ವಸರ್ವಂಕಷಾಃ
ಜೀಯಾಸುರ್ಭವತಷಡಕ್ಷರವಿಭೋ ಕುಂದಾರಮಿಂದಾವಳೀ
ಮಂದಾರದ್ರುಮಮಂಜರೀ ಮದುಝುರೀ ಮಾಧುರ್ಯಧುರ್ಯಾಗಿರಃ

ಎಂಬ ಪ್ರಶಸ್ತಿಪತ್ರವನ್ನು ಕೊಟ್ಟರಂತೆ. ಈ ಪ್ರಚಲಿತ ಕಥೆಯ ನಿಜಸಂಗತಿ ಏನಾದರೂ ಇರಲಿ. ಷಡಕ್ಷರಿಯು ಪ್ರತಿಭಾವಂತನೂ ಪ್ರಭಾವಶಾಲಿಯಾಗಿದ್ದಂತೆಯೂ ಆತನ ಕೃತಿಗಳು ಆ ಕಾಲದಲ್ಲಿ ತುಂಬ ಪ್ರಚಲಿತವಾಗಿದ್ದಂತೆಯೂ ತಿಳಿದುಬರುತ್ತದೆ.

ಷಡಕ್ಷರಿ ತನ್ನ ಕೃತಿಗಳ ರಚನಾಕಾಲವನ್ನು ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ. ರಾಜಶೇಖರ ವಿಳಾಸ ಈತನ ಪ್ರಥಮ ಕಾವ್ಯ. ಈ ಕಾವ್ಯವನ್ನು ಕ್ರಿ.ಶ. ೧೬೫೪ರಲ್ಲಿ ಬರೆದು ಮುಗಿಸಿದಂತೆ ಈ ಮುಂದಿನ ಪದ್ಯದಲ್ಲಿ ಹೇಳಿಕೊಂಡಿದ್ದಾನೆ.

ಸುರಚಿರ ಶಾಲಿವಾಹನ ಶಕಾನ್ವಿತ ರತ್ನಸಮುದ್ರ ಬಾಣಭೂ
ಪರಿಗಣನಾಂಕ ಬಂಧುರ ಜಯಾಬ್ದದ ಮಾಘದ ಶುಕ್ಲಪಕ್ಷ ವಿ
ಸ್ಫುರಿತ ತೃತೀಯೆಯಲ್ಲಿ ಬುಧವಾರದೊಳೀ ಕೃತಿ ಪೂರ್ಣಮಾಯ್ತು ಶಂ
ಕರ ಶಿವಲಿಂಗದಂಘ್ರಿಕೃಪೆಯಿಂದೆ ಷಡಕ್ಷರದೇವ ನಿರ್ಮಿತಂ॥

(ರಾಜಶೇಖರ ವಿಳಾಸ ೧೪-೧೮೪)

ಇದರಂತೆ ರಾಜಶೇಖರ ವಿಳಾಸವನ್ನು ಕ್ರಿ.ಶ. ೧೬೫೪ನೆಯ ಜನವರಿ ೧೧ನೆಯ ತಾರೀಖು ಬುಧವಾರ ಮುಕ್ತಾಯ ಮಾಡಿದಂತಾಯಿತು.

ರಾಜಶೇಖರ ವಿಳಾಸ ಷಡಕ್ಷರಿಯ ಮೊಟ್ಟಮೊದಲ ಕೃತಿ. ಇದರಲ್ಲಿ ಹದಿನಾಲ್ಕು ಆಶ್ವಾಸಗಳಿವೆ. ಈ ಕಾವ್ಯದ ಕಥಾವಸ್ತು ಸುಪ್ರಸಿದ್ಧವಾದುದು. ಪಂಚಾಕ್ಷರೀಮಂತ್ರ ಮಾಹಾತ್ಮ್ಯೆಯನ್ನು ಸಾರುವುದೇ ಇದರ ಪರಮೋದ್ದೇಶ. ಷಡಕ್ಷರಿ ಬಹುಶಃ ತಾರುಣ್ಯಾವಸ್ಥೆಯಲ್ಲಿ ರಚಿಸಿರುವ ಈ ಕಾವ್ಯದಲ್ಲಿ ಸಾಂಪ್ರದಾಯಕವಾದ ಅಷ್ಟಾದಶ ವರ್ಣನೆಗಳಿವೆ. ತಮಿಳಿನಲ್ಲಿ ಪಿಳ್ಳೈನೈನಾರ್ ಹೇಳಿದ್ದ ಈ ಕಥೆಯನ್ನು ಗುಬ್ಬಿಯ ಮಲ್ಲಣಾರ್ಯನು 'ಭಾವಚಿಂತಾರತ್ನ' ಎಂಬ ವರ್ಣಕ ಗ್ರಂಥವಾಗಿ ಮಾಡಿದನು. ಹರೀಶ್ವರನ ಕವಿಕಾಮಾರ್ಗವನ್ನು ಅನುಸರಿಸಿ ವಸ್ತುಕರೂಪವಾಗಿ ತಾನು ಈ ಕೃತಿಯನ್ನು ರಚಿಸಿದಂತೆ ಹೇಳಿಕೊಂಡಿದ್ದಾನೆ. ರಾಜಶೇಖರ ವಿಳಾಸವು ಭಕ್ತಿರಸಪ್ರಧಾನವಾದ ಕಾವ್ಯವಾದರೂ ಶೃಂಗಾರರಸಭರಿತ ವಾಗಿಯೂ ವಿರಾಜಿಸುತ್ತಿರುವುದು ತಿಳಿದ ವಿಷಯವಾಗಿದೆ.

ವೃಷಭೇಂದ್ರ ವಿಜಯ ಷಡಕ್ಷರಿಯ ಎರಡನೆಯ ಕೃತಿ. ಇದು ಬಸವರಾಜ ವಿಜಯ ಎಂಬ ಹೆಸರಿನಿಂದಲೇ ಪ್ರಸಿದ್ಧವಾಗಿದೆ. ಈ ಕಾವ್ಯದ ಪ್ರತಿ ಆಶ್ವಾಸಾಂತ್ಯ ಗದ್ಯದಲ್ಲಿಯೂ ಇದು ಬಸವರಾಜ ವಿಜಯ ಎಂದೇ ಉಲ್ಲೇಖವಾಗಿದೆ. ವೃಷಭೇಂದ್ರ ವಿಜಯದಲ್ಲಿ ನಲವತ್ತೆರಡು ಆಶ್ವಾಸಗಳೂ ಮೂರು ಸಾವಿರದ ನಾಲ್ಕುನೂರ ಐವತ್ತೈದು ಪದ್ಯಗಳೂ ಇವೆ. ಇದು ಒಂದು ಬೃಹತ್ಕಾವ್ಯವೂ ಅಹುದು ಮಹತ್ಕಾವ್ಯವೂ ಅಹುದು. ಈ ಕಾವ್ಯವನ್ನು ಕ್ರಿ.ಶ. ೧೬೭೭ರಲ್ಲಿ ರಚಿಸಿದಂತೆ ಷಡಕ್ಷರಿ ಹೇಳಿಕೊಂಡಿದ್ದಾನೆ.

ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಅವತರಿಸಿದ ಜಗಜ್ಯೋತಿ ಬಸವೇಶ್ವರನ ಚರಿತ್ರೆ ಈ ಕಾವ್ಯದಲ್ಲಿ ಚಿತ್ತರಗೊಂಡಿದೆ. ಷಡಕ್ಷರಿಗಿಂತ ಪೂರ್ವದಲ್ಲಿ ಬಸವೇಶ್ವರನ ಚರಿತ್ರೆಯನ್ನು ಹಲವಾರು ಮಂದಿ ಬರೆದಿರುವುದು ತಿಳಿದ ಸಂಗತಿ. ಇವರಲ್ಲಿ ಪ್ರಪ್ರಥಮನಾದವನು ಹರಿಹರ. ಈತನ ಬಸವರಾಜದೇವರ ರಗಳೆ ಸಮಗ್ರವಾಗಿ ಲಭ್ಯವಾಗಿಲ್ಲ. ಹರಿಹರ ಬಸವೇಶ್ವರನಿಗೆ ತೀರ ಸಮೀಪ ಕಾಲದವನು. ಬಸವೇಶ್ವರನ ಇತಿವೃತ್ತಗಳು ಜನಮನದಲ್ಲಿ ಹಚ್ಚಹಸುರಾಗಿದ್ದಾಗಲೇ

ಬಸವರಾಜದೇವರ ರಗಳೆಯನ್ನು ಬರೆದವನು. ಆದರೂ ಈ ಕೃತಿ ಏಕೋ ಏನೋ ಜನಪ್ರಿಯನಾಗಲಿಲ್ಲ. ಬಸವರಾಜದೇವರ ರಗಳೆಯನ್ನು ಸಂಪಾದಿಸಿದ ಪ್ರೊ. ಟಿ.ಎಸ್. ವೆಂಕಣ್ಣಯ್ಯನವರ ಈ ಮಾತುಗಳು ಉಲ್ಲೇಖಾರ್ಹವಾಗಿವೆ: "ಹರಿಹರನು ಸೋಮನಾಥನಿಗಿಂತಲೂ ಒಂದೆರಡು ತಲೆಮೊರೆ ಹಿಂದಿನವನಾದುದರಿಂದ ಬಸವರಾಜದೇವರ ರಗಳೆ ತೆಲುಗು ಬಸವಪುರಾಣಕ್ಕಿಂತಲೂ ಹೆಚ್ಚು ಪ್ರಾಚೀನವಾದುದು. ಅಷ್ಟೇ ಅಲ್ಲ, ಬಸವಣ್ಣನವರ ಜೀವನದ ಕಾರ್ಯರಂಗಕ್ಕೆ ಹಂಪೆಯವನಾದ ಹರಿಹರನು ಗೋದಾವರಿ ಜಿಲ್ಲೆಯ ಪಾಲ್ಕುರಿಕೆಯ ಸೋಮನಾಥನಿಗಿಂತಲೂ ಹತ್ತಿರದವನು. ಆದಕಾರಣ ಹರಿಹರನು ಕೇಳಿದ ಮತ್ತು ಬರೆದಿಟ್ಟಿರುವ ಕಥೆಯೇ ಸೋಮನಾಥನದಕ್ಕಿಂತಲೂ ಹೆಚ್ಚು ವಿಶ್ವಾಸಾರ್ಹವಾಗ ಬೇಕಾದುದು ನ್ಯಾಯವಾಗಿದೆ. ಹೀಗಿದ್ದರೂ ಸೋಮನಾಥನ ತೆಲುಗು ಪುರಾಣಕ್ಕೆ ದೊರೆತ ಪುರಸ್ಕಾರ ಆ ಕಾಲದ ವೀರಶೈವರಿಂದ ಹರಿಹರನ ಕನ್ನಡದ ರಗಳೆಗೆ ದೊರೆಯಲಿಲ್ಲವೆಂದು ತೋರುತ್ತದೆ. ಭೀಮಕವಿ ಸೋಮನಾಥನ ಗ್ರಂಥವನ್ನನುಸರಿಸಿ ೧೪ನೆಯ ಶತಮಾನದಲ್ಲಿ ಬಸವಪುರಾಣವನ್ನು ಕನ್ನಡದಲ್ಲಿ ರಚಿಸಿದನು. ಆಮೇಲೆ ಆ ಗ್ರಂಥವೇ ಜನಪ್ರಿಯವಾಗಿ ಪರಿಣಮಿಸಿ ಅದಕ್ಕಿಂತ ಎಷ್ಟೋ ಹಿಂದೆ ಹುಟ್ಟಿದ್ದ ಬಸವರಾಜದೇವರ ರಗಳೆಗಳನ್ನು ಕೇಳುವವರಿಲ್ಲ ದಂತಾಯಿತು. ವೀರಶೈವ ಕವಿಗಳಲ್ಲಿ ಆದಿಕವಿಯೆಂದೂ ಅಗ್ರಗಣ್ಯನೆಂದೂ ಗೌರವ ಪಡೆದಿರುವ ಹರಿಹರನೇ ಅದನ್ನು ರಚಿಸಿದ್ದರೂ ಆ ಪುರಾಣದ ಮುಂದೆ ಈ ರಗಳೆ ನಿಲ್ಲಲಾರದೆ ಹೋಯಿತು. ಬಸವಣ್ಣನ ಚರಿತ್ರೆ ಪುರಾಣದಲ್ಲಿ ನಿರೂಪಿತವಾಗಿರುವಷ್ಟು ಉದಾತ್ತವಾಗಿ ರಗಳೆಯಲ್ಲಿ ನಿರೂಪಿತವಾಗಿಲ್ಲವೆಂಬ ಭಾವನೆಯೇ ಈ ಅನಾದರಕ್ಕೆ ಮುಖ್ಯ ಕಾರಣವೆಂದು ತೋರುತ್ತದೆ. ರಗಳೆಯಲ್ಲಿ ಬಸವಣ್ಣನೊಬ್ಬನ ಕಥೆ ಮಾತ್ರ ಇದೆ. ಹರಿಹರನು ತನ್ನ ಯಾವ ರಗಳೆಯ ಗ್ರಂಥದಲ್ಲಾಗಲಿ ಕಥಾನಾಯಕನ ಚರಿತ್ರೆಯನ್ನು ಬಿಟ್ಟು ಆ ಕಡೆ ಈ ಕಥೆ ಸುಳಿಯುವುದಿಲ್ಲ. ಪುರಾಣದಲ್ಲಾದರೋ ಬಸವಣ್ಣನ ಕಥೆಯ ಜೊತೆಗೆ ಅನೇಕ ಶಿವಭಕ್ತರ ಕಥೆಗಳು ಸೇರಿ ಅದೊಂದು ಮಹಾಪುರಾಣವಾಗಿ ಪರಿಣಮಿಸಿದೆ. ಬಸವಪುರಾಣಕ್ಕೆ ದೊರೆತ ಪ್ರಾಶಸ್ತ್ಯಕ್ಕೆ ಇದೂ ಒಂದು ಕಾರಣವಾಗಿರಬಹುದು. ಅದು ಏನೇ ಆಗಲಿ ಬಸವಪುರಾಣ ಹುಟ್ಟಿದ ಮೇಲೆ ಹರಿಹರನ ಈ ರಗಳೆಯ ಗ್ರಂಥಕ್ಕೆ ಪುರಸ್ಕಾರ ಉಳಿಯಲಿಲ್ಲ. ಮಿಕ್ಕವರ ಮಾತು ಹೋಗಲಿ ಬಸವಣ್ಣನ ಚರಿತ್ರೆಯನ್ನು ಬರೆದ ಭೀಮಕವಿ ಷಡಕ್ಷರಿ ಮೊದಲಾದವರು ಕೂಡ ಹರಿಹರನು ಬಸವರಾಜದೇವರ ರಗಳೆಯನ್ನು ಬರೆದನೆಂಬುದನ್ನು ತಮ್ಮ ಗ್ರಂಥಗಳಲ್ಲಿ ಸ್ಮರಿಸಲಿಲ್ಲ. ಹೀಗಾಗಿ ಹರಿಹರನು ಈ ರಗಳೆಯನ್ನು ಬರೆದನೆಂಬುದನ್ನೇ ಜನರು ಕಾಲಕ್ರಮದಲ್ಲಿ ಮರೆತುಬಿಟ್ಟರು. ಪರಿಸ್ಥಿತಿ ಎಲ್ಲಿಗೆ ಇಳಿದಿರುವುದೆಂದರೆ ಈ ರಗಳೆಯನ್ನು ಹರಿಹರನೇ ಬರೆದನೆಂದರೆ ಈಗ ನಂಬುವುದು ಕೂಡ ಕಷ್ಟವಾಗಿ ಹೋಗಿದೆ." (ಬಸವರಾಜದೇವರ ರಗಳೆ, ಪೀಠಿಕೆ xi-xii)

ಷಡಕ್ಷರಿಗೆ ಹರಿಹರನ ಮೇಲೆ ಅಪಾರವಾದ ಗೌರವವಿರುವುದು ವ್ಯಕ್ತವಾಗಿದೆ. ಹರಿಪರ:

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಯಕ್ಕಟಾ
ತನತನಗಿಂದ್ರ ಚಂದ್ರ ರವಿ ಕರ್ಣ ಧಧೀಚಿ ಬಲೀಂದ್ರನೆಂದು ಮೇಣ್
ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ॥ (ಪಂಪಾಶತಕ, ೮೨)

ಎಂದು ಹೇಳಿರುವುದನ್ನೇ ಷಡಕ್ಷರಿಯೂ ಅನುಸರಿಸಿದ್ದಾನೆ. ಆತನ ಉದಿತ ಮಾರ್ಗದಲ್ಲೇ ತನ್ನ ಕಾವ್ಯವನ್ನು ಬರೆದನೆಂಬುದನ್ನು:

ಧರೆಯೊಳ್ ಮೇಣ್ ಪುಟ್ಟಿ ಪುಟ್ಟುತ್ತುರುಳ್ವ ನರರಮೇಲುರ್ಬಿ ಕಬ್ಬಂಗಳಂ ಬಿ
ತ್ತರಿಸುತ್ತಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟು ಪೋದರ್
ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯಲಕ್ಷ್ಮೀ
ವರನಾದಂ ಮತ್ತವಂಗತ್ಯಧಿಕ ಶಿವಕವೀಂದ್ರಂಗದಾರ್ ಸಾಟಿಯಪ್ಪರ್
(ರಾಜಶೇಖರವಿಳಾಸ ೧-೧೯)

ರಸೆಯೊಳ್ ರಸವತ್ಕವಿತೆಯ
ನುಸುರಲ್ವಡೆದಸಮನಯನನಂ ಪೊಗಳದೆ ಮಾ
ನಿಸರಂ ಸುರರಂ ಪೊಗಳ್ವುದು
ಕಸವರಮಂ ಕಳೆದು ಕಸಮನಾಂತವೊಲಕ್ಕುಂ॥ (ರಾಜಶೇಖರವಿಳಾಸ ೧-೨೧)

ಅದಱಿಂದೆ ಮಹಿತ ಮಹಿಮಾ
ಸ್ಪದನಂ ಶಿವನಂ ತದೀಯ ಶರಣವ್ರಜಮಂ
ಪದೆದು ಮುದಮೊದವೆ ಬಲ್ಲಂ
ದದೆ ನುತಿಪೆಂ ನುತಿಸೆನುಳಿದ ಸುರರಂ ನರರಂ॥ (ರಾಜಶೇಖರವಿಳಾಸ ೧-೨೨)

ಈ ಪದ್ಯಗಳಲ್ಲಿ ಸ್ಪಷ್ಟಪಡಿಸಿದ್ದಾನೆ. ಆದರೆ ಹರಿಹರನ ಬಸವರಾಜದೇವರ ರಗಳೆಯ ಕಥಾಸರಣಿಯನ್ನು ಮಾತ್ರ ಅನುಸರಿಸಿಲ್ಲ. ಇದಕ್ಕೆ ಕಾರಣವೇನಿರಬಹುದು?

ಹರಿಹರದೇವನ ಬಸವರಾಜದೇವರ ರಗಳೆಯ ಬಸವೇಶ್ವರನ ಜೀವನ ಚರಿತ್ರೆಯನ್ನು ನಭೂತೋ ನಭವಿಷ್ಯತಿ ಎಂಬಂತೆ ನಿರೂಪಿಸಿದವನು ಪಾಲ್ಕುರಿಕೆ ಸೋಮನಾಥ. ತ್ರಿಭಾಷಾಪಂಡಿತನಾದ ಈತನು ತೆಲುಗು ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಕೃತಿರಚನೆ ಮಾಡಿದ್ದಾನೆ. ಈತನೂ ಬಸವಣ್ಣನವರ ಸಮೀಪವರ್ತಿ. ಬಸವಣ್ಣನ ಬಗೆಗೆ ಆವರೆಗೆ ಪ್ರಚಲಿತವಾದ ಎಲ್ಲ ಸಂಗತಿಗಳನ್ನೂ ಸಮಾವೇಶಗೊಳಿಸಿ ತೆಲುಗು ಬಸವಪುರಾಣವನ್ನು ಬರೆದಿದ್ದಾನೆ. ಇದೇ ಭೀಮಕವಿಗೆ ಆಧಾರ ಗ್ರಂಥವಾಯಿತು. ಸೋಮನಾಥ ತೆಲುಗಿನಲ್ಲಿ ಅನುಭವಸಾರ, ಚತುರ್ವೇದಸಾರ, ಚನ್ನಮಲ್ಲಸೀಸಗಳು, ವೃಷಾಧಿಪಶತಕ, ಬಸವೋದಾಹರಣ, ಪಂಡಿತಾರಾಧ್ಯ ಚರಿತ್ರೆ, ಬಸವಪುರಾಣ ಮೊದಲಾದ ಕೃತಿಗಳನ್ನೂ ಸಂಸ್ಕೃತದಲ್ಲಿ ಸೋಮನಾಥಭಾಷ್ಯ, ರುದ್ರಭಾಷ್ಯ, ವೃಷಭಾಷ್ಟಕ, ಪಂಚಕ, ಬಸವೋದಾಹರಣ -ಎಂಬ ಗ್ರಂಥಗಳನ್ನೂ ಕನ್ನಡದಲ್ಲಿ ಗಣಸಹಸ್ರನಾಮ, ಹರಗಣಮಾಲೆ, ಶೀಲಸಂಪಾದನೆ, ದಶವಿಧ ಪಾದೋದಕವಿವರ, ಬಸವರಗಳೆ, ಸದ್ಗುರುರಗಳೆ, ಗಂಗೋತ್ಪತ್ತಿ ರಗಳೆ ಇವೇ ಮೊದಲಾದ ಕೃತಿಗಳನ್ನು ಬರೆದಂತೆ ತಿಳಿದುಬರುತ್ತದೆ. ಪಾಲ್ಕುರಿಕೆ ಸೋಮನಾಥ ನಿಗಮಾಗಮಗಳಲ್ಲಿ ವೇದಾಂಗಗಳಲ್ಲಿ ಮಾತ್ರವಲ್ಲದೆ ಸ್ಮೃತಿ ಪುರಾಣೇತಿಹಾಸ ಸಮಸ್ತ ಶಾಸ್ತ್ರಗಳನ್ನು ಸಾಂಗೋಪಾಂಗವಾಗಿ ಅಧ್ಯಯನ ಮಾಡಿದ ವಿದ್ಯಾವಿಶಾರದ ನಾಗಿದ್ದನು. ಈತನು ಚತುರ್ವೇದ ಪಾರಂಗತನಾದರೂ ವೇದಜಡನೆನಿಸದೆ ಲೌಕಿಕಪ್ರಜ್ಞಾಧುರೀಣನಾಗಿದ್ದನು. ಪಾಲ್ಕುರಿಕೆ ಸೋಮನಾಥನ ಆಂಧ್ರಭಾಷಾನೈಪುಣ್ಯಕ್ಕೆ ಬಸವಪುರಾಣ ಪಂಡಿತಾರಾಧ್ಯ ಚರಿತ್ರೆಗಳು ಜ್ವಲಂತ ನಿದರ್ಶನಗಳಾಗಿವೆ. ಈತನು ಕಡೆದು ನಿಲ್ಲಿಸಿರುವ ಬಸವಣ್ಣನ ಜೀವನಚರಿತೆ ಬಹುಜನಾದರಣೀಯವಾಗಿದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬಸವಣ್ಣನವರ ಜೀವನ ಚರಿತ್ರೆಯನ್ನು ಪ್ರಧಾನವಾಗಿ ಚಿತ್ರಿಸಿರುವ ಕೃತಿಗಳು: ಹರಿಹರನ ಬಸವರಾಜದೇವರ ರಗಳೆ, ಪಾಲ್ಕುರಿಕೆ ಸೋಮನಾಥನ ತೆಲುಗು ಬಸವಪುರಾಣ, ಭೀಮಕವಿಯ ಬಸವಪುರಾಣ, ಸಿಂಗಿರಾಜನ ಸಿಂಗಿರಾಜ ಪುರಾಣ, ಶಂಕರಾರಾಧ್ಯನ ಸಂಸ್ಕೃತ ಬಸವಪುರಾಣ ಪ್ರಮುಖವಾದುವು. ಪ್ರಾಸಂಗಿಕವಾಗಿ ಬಸವಣ್ಣನ ಜೀವನ ಚರಿತ್ರೆಯನ್ನು ನಿರೂಪಿಸುವ ಚಾಮರಸನ ಪ್ರಭುಲಿಂಗಲೀಲೆ, ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ, ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣ, ಚೆನ್ನಪ್ಪ ಕವಿಯ ಶರಣಲೀಲಾಮೃತ ಉಲ್ಲೇಖಾರ್ಹವಾದುವು. ಪ್ರಸ್ತುತ ಷಡಕ್ಷರಿ ಬಸವರಾಜ ವಿಜಯದಲ್ಲಿ ಅನುಸರಿಸಿರುವ ಕಥಾಸರಣಿಯನ್ನು ಅವಲೋಕಿಸುವುದು ಉಚಿತವಾಗಿದೆ.

ಬಸವರಾಜ ವಿಜಯದ ಕಥಾವಸ್ತು ಸುಪ್ರಸಿದ್ಧವಾದುದು. ಅದರ ಸ್ಥೂಲಚಿತ್ರ ಇಂತಿದೆ: ಕೈಲಾಸದಲ್ಲಿ ಈಶ್ವರನ ಆಸ್ಥಾನದಲ್ಲಿದ್ದಾಗ ನಾರದನ ಪ್ರವೇಶ, "ನರಲೋಕವೊಂದರೊಳ್ ಪುರಹರಭಕ್ತಿಯು ಗುಪ್ತಮಾಗಿರ್ಪುದು" ಎಂಬ ನಾರದನ ಬಿನ್ನಹ, ಆಗ ಪರಶಿವನು ತನ್ನಲ್ಲಿ ಅಭೇದಯುಕ್ತವಾಗಿರುವ ನಂದಿಯನ್ನು ಭೂಲೋಕಕ್ಕೆ ಕಳುಹಿ ಭಕ್ತಿಜ್ಞಾನ ಶಿವಾಚಾರಗಳು ನೆಲೆಗೊಳ್ಳುವಂತೆ ಮಾಡುವುದಾಗಿ ತಿಳಿಸುವುದು; ನಂದಿಯ ಜನ್ಮವೃತ್ತಾಂತವನ್ನು ಪರಶಿವ ಪಾರ್ವತಿಗೆ ತಿಳಿಸುವುದು; ಇಂಗಳೇಶ್ವರ ಬಾಗೇವಾಡಿಯಲ್ಲಿ ಮಾದರಸ ಮಾದಲಾಂಬೆಯರು ಸಂತಾನರಹಿತರಾಗಿರುವುದು; ಅವರು ನಂದೀಶ್ವರನೋಂಪಿಯನ್ನು ಆಚರಿಸುವುದು; ನಂದೀಶನು ಮಾದಲಾಂಬಿಕೆಯ ಪುಣ್ಯೋದರವನ್ನು ಪ್ರವೇಶಿಸುವುದು; ನವಮಾಸಗಳು ತುಂಬಿದ ಮೇಲೆ ವೃಷಭರಾಜನು ಮಾದಲಾಂಬಿಕೆಯ ಮಗ್ಗುಲಲ್ಲಿ ಶಿಶುಭಾವಮಂ ತಳೆಯುವುದು; ಕಪ್ಪಡಿ ಸಂಗಮೇಶ ಬಂದು ಶಿಶುವಿನ ಮಸ್ತಕದಲ್ಲಿ ಹಸ್ತವನ್ನಿಟ್ಟು ಆಶೀರ್ವದಿಸಿ ದೀಕ್ಷೆಯನ್ನೀಯುವುದು; ಮಾದಲಾಂಬಿಕೆ, ಸಂತೋಷಭರಿತಳಾಗಿ "ಬಸವನ ನೇಮದಿಂದೊಗೆದನಪ್ಪುದಱಿಂ ಬಸವನೆಂಬ ನಾಮಕರಣಗೆಯ್ದುದು"; ಬಸವನಿಗೆ ಅಷ್ಟವರ್ಷಗಳಾದಾಗ ಉಪನಯನಕ್ಕೆ ಸಿದ್ಧತೆ ಮಾಡಿಕೊಳ್ಳುವುದು; ಬಸವಣ್ಣ ಅದನ್ನು ತಿರಸ್ಕರಿಸುವುದು; ಶಿವಧ್ಯಾನಾಸಕ್ತನಾದ ಬಸವಣ್ಣನಿಗೆ ಕಪ್ಪಡಿ ಸಂಗಮೇಶ್ವರನ ಸ್ಮರಣೆಯಾಗುವುದು; ಕೂಡಲೇ ಸಹೋದರಿ ನಾಗಲಾಂಬೆಯೊಡನೆ ಕಪ್ಪಡಿಗೆ ಹೋಗುವುದು; ಸಂಗಮನಾಥ ಬಸವಣ್ಣನನ್ನು ಅಲ್ಲೇ ಇರಿಸಿಕೊಳ್ಳುವುದು; ಮಾದಲಾಂಬೆಯ ತಮ್ಮ ಬಲದೇವಮಂತ್ರಿಗೆ

ಬಸವಣ್ಣನ ನೆನಪಾಗಿ "ಈ ಕನ್ಯೆಗೆ ತಕ್ಕವಲ್ಲಭಂ ಅವಂಗಿರದೀವೆಂ" ಎಂದು ತನ್ನ ಮಗಳಾದ ಗಂಗಾಂಬಿಕೆಯನ್ನು ಬಸವಣ್ಣನಿಗೆ ಮದುವೆ ಮಾಡುವುದು; ಸತಿಪತಿಗಳಿಬ್ಬರೂ ಕಪ್ಪಡಿಗೆ ಬಂದು ಸಂಗಮನಾಥನ ಧ್ಯಾನದಲ್ಲಿರುವುದು; ಬಲದೇವ ಮಂತ್ರಿ ಕೈಲಾಸವಾಸಿಯಾಗುವುದು; ಬಸವಣ್ಣನಿಗೆ ಮಂತ್ರಿಪದವಿ; ಬಿಜ್ಜಳನ ಓಲಗದಲ್ಲಿ ಹರಲಿಪಿ ಬೀಳುವುದು; ಯಾರೂ ಅದನ್ನು ಓದಲು ಸಾಧ್ಯವಿಲ್ಲದಾಗ ಬಸವಣ್ಣ ಅದನ್ನು ಓದುವುದು; ಅದರಿಂದ ಬಿಜ್ಜಳನಿಗೆ ಎಣೆಯಿಲ್ಲದ ಸುವರ್ಣರಾಶಿ ಪ್ರಾಪ್ತವಾಗುವುದು; ಬಸವಣ್ಣನಿಗೆ ದಂಡನಾಥ ಪದವಿ; ಶಿವಶರಣರ ಸೇವೆಯಿಂದ ಬಸವಣ್ಣ ಭಕ್ತಿಭಾಂಡಾರಿಯಾಗುವುದು; ನಾಗಲಾಂಬಿಕೆಗೆ ಚೆನ್ನಬಸವಣ್ಣ ಜನಿಸುವುದು; ಬಸವಣ್ಣ ಚೆನ್ನಬಸವಣ್ಣನಿಗೆ ದೀಕ್ಷೆ ನೀಡುವುದು; ಅಲ್ಲಮಪ್ರಭುವಿನ ಆಗಮನ; ಪ್ರಸಾದದ ಪ್ರಕರಣ; ಬಸವಣ್ಣನ ಪವಾಡಗಳು; ಇದಕ್ಕೆ ಪರಿಪೋಷಕವಾದ ಹಲವಾರು ಶಿವಶರಣರ ಕಥೆಗಳು; ಪರವಾದಿಗಳು ಬಸವಣ್ಣನಿಗೆ ತೊಡಕು ತಂದೊಡ್ಡುವುದು; ಬಿಜ್ಜಳನಿಗೆ ಚಾಡಿಹೇಳುವುದು; ಬಸವಣ್ಣನ ಬಗೆಗೆ ಬಿಜ್ಜಳನಿಗೆ ಅನಾದರ; ಜಗದೇವನೆಂಬ ಶರಣನ ಪ್ರಕರಣ; ಜಗದೇವ ಅರಿಯದೆ ಮಾಡಿದ ಅಪರಾಧಕ್ಕಾಗಿ ಕ್ಷಮೆ ಯಾಚಿಸುವುದು; ಅದಕ್ಕೆ ಬಸವಣ್ಣ "ಜಗದೇವ ಕೇಳ್ವುದೆಸೆವೀ ನಗರದೊಳೊಗೆವುದು ವಲಂ ಶಿವದ್ರೋಹಮದಂ ನೆಗಳ್ದನನಂತಕಪುರಮಂ ಪುಗಿಸಲೆ ನೀಂ ನೆಗಳ್ದ ದೋಷಕಿದು ಪರಿಹಾರಂ" ಎಂದು ಸೂಚಿಸಿದುದು; ಅದಕ್ಕೆ ಜಗದೇವನ ಸಮ್ಮತಿ; ಅಲ್ಲಯ್ಯ ಮಧುವಯ್ಯರೆಂಬ ಈಶ್ವರಭಕ್ತರ ಸಂಬಂಧ; ಬಿಜ್ಜಳನು ಆ ಭಕ್ತರ ಕಣ್ಣು ಕೀಳಿಸಿದ್ದು; ಭಕ್ತರ ಆಗ್ರಹ; ಜಗದೇವನಿಗೆ ಮಹೇಶ್ವರದ್ರೋಹಿಯನ್ನು ಸಂಹರಿಸುವಂತೆ ಆದೇಶ ನೀಡಿದುದು; ಬಸವಣ್ಣ ಕಪ್ಪಡಿಗೆ ಹೋದುದು; ಸಂಗಮದಲ್ಲಿ ಬಸವಣ್ಣನ ಐಕ್ಯ. ಈ ಅಸ್ತಿಭಾರದ ಮೇಲೆ ಷಡಕ್ಷರಿ ಬಸವರಾಜ ವಿಜಯ ಎಂಬ ಕಾವ್ಯಸೌಧವನ್ನು ನಿರ್ಮಿಸಿದ್ದಾನೆ. ತನ್ನ ಕಾವ್ಯರಚನೆಗೆ ಕಾರಣವಾವುದೆಂಬುದನ್ನು ಈ ಮುಂದಿನ ಪದ್ಯಗಳಲ್ಲಿ ವಿವರಿಸಿದ್ದಾನೆ.

ಮೊದಲೊಳ್ ಸೋಮಗುರೂತ್ತಮಂ ಸರಸವಾಕ್ಚಾತುರ್ಯದಿಂದಾಂಧ್ರದೇ
ಶದ ಭಾಷಾಕ್ರಮದಿಂ ವೃಷೇಂದ್ರಕೃತಿಯಂ ತಾಂ ಮಾಡಿದಂ ಭಕ್ತಿಯಿಂ
ದದನಾ ಭೀಮಕವೀಶ್ವರಂ ನೆಗಳ್ದನಾದಂ ವರ್ಣಕ ಪ್ರೌಢಿಯಿಂ
ದದನುದ್ಯದ್ರುಚಿ ಸಂಸ್ಕೃತೋಕ್ತಿಯೊಳೆ ಪೇಳ್ದಿಂ ಶಂಕರಾರ್ಯೋತ್ತಮಂ ॥

(ಬಸವರಾಜ ವಿಜಯ ೧-೨೮)

ಪದಪಿಂದಾದ್ಯರ್ಕಳಿಂತಿಂತತುಳ ಸರಸಶಬ್ದಾರ್ಥ ಸಂದರ್ಭದಿಂ ಕೋ
ವಿದರೆಲ್ಲರ್ ಮೆಚ್ಚೆ ಬರ್ದಿಂ ನೆಗಳ್ದ ಬಸವಪೌರಾಣಮಂ ಬೇಱೆ ಮೇಣ್ ಪೇ
ಳ್ವುದು ಹಾಸ್ಯಕ್ಕಾಸ್ಪದಂ ಬೆಳ್ತನಮನುಚಿತಮಂತಾದೊಡಂ ತದ್ಗುಣಸ್ತೋ
ಮದ ಜಾನಂ ಸಾರ್ವುದೀ ವ್ಯಾಜದಿನೆನುತಿದನಾಂ ಪೇಳಲುದ್ಯುಕ್ತನಾದೆಂ ॥

(ಬಸವರಾಜ ವಿಜಯ ೧-೨೯)

ಬಸವಾಂಘ್ರಿತ್ರಯಕೊಳ್ಪಿನಿಂ ಸಮೆದು ಮೂಱುಂ ಕಬ್ಬಮಂ ಮಾಣದ
ರ್ಪಿಸಿದರ್ ಸೋಮಕವೀಂದ್ರ ಭೀಮಕವಿಗಳ್ ಶ್ರೀಶಂಕರಾರಾಧ್ಯರಿಂ
ದೆಸೆವನ್ನಂ ನೆಗಳ್ದೊಂದು ಕಬ್ಬಮನಿದಂ ಮಿಕ್ಕಂಘ್ರಿಗಾದಂ ಸಮ
ರ್ಪಿಸಿದಂ ಸತ್ಕೃಪೆಯಿಂ ಷಡಕ್ಷರಿ ಶಿವಾಚಾರ್ಯಂ ಮಹಾಭಕ್ತಿಯಿಂ ॥

(ಬಸವರಾಜ ವಿಜಯ ೪೨-೮೬)

ಪಾಲ್ಕುರಿಕೆ ಸೋಮನಾಥ, ಭೀಮಕವಿ, ಕಂಚಿಯ ಶಂಕರಾಚಾರ್ಯರ ಪರಂಪರೆಯ ಕಾವ್ಯವನ್ನು ತಾನು ಅನುಸರಿಸಿ ಮುನ್ನಡೆಸಿದಂತೆ ಹೇಳಿಕೊಂಡಿದ್ದಾನೆ ಷಡಕ್ಷರಿ. ಆದರೂ ಷಡಕ್ಷರಿ ಅಲ್ಲಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಿಕೊಂಡಿದ್ದಾನೆ. ಅವನ್ನೆಲ್ಲ ಇಲ್ಲಿ ವಿವರಿಸುವುದು ಅನವಶ್ಯ.

ಬಸವರಾಜ ವಿಜಯ ಬಸವಣ್ಣನವರ ಜೀವನ ಚರಿತ್ರೆಯನ್ನು ಪ್ರಮುಖವಾಗಿ ಬಿತ್ತರಿಸಿದರೂ ಇದರಲ್ಲಿ ಅನೇಕ ಪವಾಡಗಳೂ ಶಿವಶರಣರ ಕಥೆಗಳೂ ಹಾಸುಹೊಕ್ಕಾಗಿ ಹೆಣೆದುಕೊಂಡಿವೆ. ಭೀಮಕವಿಯ ಬಸವಪುರಾಣ, ಶಂಕರಾರಾಧ್ಯರ ಸಂಸ್ಕೃತ ಬಸವಪುರಾಣದಲ್ಲಿಲ್ಲದ ಹಲವಾರು ಕಥೆಗಳು ಬಸವರಾಜ ವಿಜಯದಲ್ಲಿ ಸಮಾವೇಶಗೊಂಡಿವೆ. ಪವಾಡಗಳು ಮಿಥ್ಯೆಗಳಲ್ಲ. ಕಥಾನಾಯಕನ ಪಾತ್ರ ವ್ಯಕ್ತಿತ್ವವನ್ನು ವೈಭವೀಕರಿಸುವುದೇ ಈ ಪವಾಡಗಳ ಮೂಲ ಮತ್ತು ಚೂಲ.

ಅಂತೆಯೇ ಶಿವಶರಣರ ಕಥೆಗಳು ಕೂಡ ಕಥಾನಾಯಕನ ಮೂಲಕಥೆಗೆ ಪರಿಪೋಷಕವಾಗಿ ಸೇರ್ಪಗೊಂಡು ರಸೋತ್ಕರ್ಷಕ್ಕೆ ಕಾರಣವಾಗುತ್ತವೆ. ಮೂಲನದಿಗೆ ಉಪನದಿಗಳು ಸೇರಿಕೊಂಡು ಅದು ಹೆದ್ದೊರೆಯಾಗುವಂತೆ ಮಾಡುತ್ತವೆ.

ಬಸವರಾಜ ವಿಜಯ ಒಂದು ಕಥಾಸರಿತ್ಸಾಗರ. ಬಸವೇಶ್ವರನ ಕಥೆಯ ಜೊತೆಗೆ ಬರುವ ಹಲವಾರು ಶಿವಭಕ್ತರ ಕಥೆಗಳು ವೈವಿಧ್ಯಮಯವಾಗಿವೆ, ಮೂಲಕಥೆಗೆ ಪರಿಪೋಷಕವಾಗಿವೆ. ಮುಗ್ಧಭಕ್ತರ ಕಥೆಗಳು, ವೀರಭಕ್ತರ ಕಥೆಗಳು, ಆದಿಶರಣರ ಕಥೆಗಳು, ಪುರಾತನರ ಕಥೆಗಳು, ಶಿವಸಮಯ ಪ್ರತಿಷ್ಠಾಪನ ಕಥೆಗಳು, ಶಿವಭಕ್ತರ ಮಹಿಮಾ ಕಥೆಗಳು – ಮುಂತಾಗಿ ಈ ಕಥೆಗಳನ್ನು ವಿಭಜಿಸಬಹುದು. ಇಲ್ಲಿನ ಪ್ರತಿಯೊಂದು ಕಥೆಯೂ ತನ್ನದೇ ಆದ ಸೊಬಗಿನಿಂದ ಸ್ವಾರಸ್ಯದಿಂದ ಕೂಡಿದೆ. ಇವುಗಳಲ್ಲಿ ಯಾವುದನ್ನು ಉಲ್ಲೇಖಿಸುವುದು? ನನಗೆ ಅತ್ಯಂತ ಪ್ರಿಯವಾದ ಕೋಳೂರ ಕೊಡಗೂಸಿನ ಕಥೆಯನ್ನು ಷಡಕ್ಷರಿ ಚಿತ್ರಿಸಿರುವುದು ಸಹಜವಾಗಿದೆ, ಸರಳವಾಗಿದೆ; ಎಲ್ಲರ ಮನವನ್ನೂ ಸೂರೆಗೊಳ್ಳುತ್ತದೆ. ಕೋಳೂರಿನಲ್ಲಿ ಶಿವದೇವನೆಂಬ ಮಹಾಭಕ್ತನಿದ್ದನು. ಆತನು ಪ್ರತಿನಿತ್ಯವೂ ಆ ಊರಿನಲ್ಲಿದ್ದ ಕಲ್ಲಿನಾಥನಿಗೆ ಹಾಲನ್ನರ್ಪಿಸುವ ವ್ರತವನ್ನು ಕೈಗೊಂಡಿದ್ದನು. ಒಮ್ಮೆ ಶಿವದೇವ ಪತ್ನಿ ಸಮೇತನಾಗಿ ಪರಸ್ಥಳಕ್ಕೆ ಹೋಗಬೇಕಾಯಿತು. ಕಲ್ಲಿನಾಥನಿಗೆ ಹಾಲನ್ನು ಅರ್ಪಿಸುವ ಕೆಲಸವನ್ನು ತನ್ನ ಮಗಳಾದ ಕೊಡಗೂಸಿಗೆ ವಹಿಸುವನು. ತಂದೆಯ ಆಣತಿಯಂತೆ ಕೊಡಗೂಸು ಮಜ್ಜನ ಮಾಡಿ ಭಸ್ಮವನ್ನು ಧರಿಸಿಕೊಂಡು ಹಾಲನ್ನು ಹದವಾಗಿ ಕಾಸಿ ಹೊಂಬಟ್ಟಲಲ್ಲಿ ಅದನ್ನು ತೆಗೆದುಕೊಂಡು ಶಿವಾಲಯಕ್ಕೆ ಬಂದು ಕಲ್ಲಿನಾಥನ ಮುಂದೆ ಆ ಹೊಂಬಟ್ಟಲನ್ನಿಟ್ಟು ಹಾಲನ್ನು ಸೇವಿಸುವಂತೆ ಹೇಳಿ ಮರೆಯಾಗಿ ನಿಲ್ಲುವಳು. ಸ್ವಲ್ಪ ಹೊತ್ತಾದ ಮೇಲೆ ಬಂದು ನೋಡಲು ಹಾಲು ಹಾಗೇ ಇರಲು ಕೊಡಗೂಸು ಭಯಭ್ರಾಂತಿಯಿಂದ:

ಏಂ ಕಾರಣಮಿೂ ಪಾಲಂ
ನೀಂ ಕುಡಿಯದೆ ಸುಮ್ಮನಿರ್ದಪೆಯಕಟಕಟೆನಗಾ
ತಂಕಮನಾಗಿಪುದುಚಿತಮೆ
ಶಂಕರ ನೀಂ ಪೇಳ್ವುದೆಂದು ಮಗುಳ್ದಿಂತೆಂದಳ್ (ಬಸವರಾಜ ವಿಜಯಂ ೯-೭೩)

ಪಸಿವೇನಾಗದೊ ದೇವ ಕೇಳ್ ನಿನಗೆ ಪಾಲೇಂ ಕಾಯದೋ ಪೊತ್ತಿತೋ
ಬಿಸುಪಾಜಿರ್ದುದೋ ಕಮ್ಮನಾಗದೋ ಲಸತ್ತಿಂಪೇಱದೋ ಕಣ್ಗೆ ರಂ
ಜಿಸದೋ ಮೇಣ್ ಪೊಗೆ ಸುತ್ತಿದತ್ತೊ ಪೆಱಿರಿಂ ಕಣ್ಣೆಂಜಲಾಯ್ತೊ ಬಲ್
ಬಿಸಿಯಾಗಿರ್ದುದೊ ಮಿೂಸಲೋಸರಿಸಿತೋ ಪೇಳೀಂಟದಿರ್ಪಂದಮಂ
(ಬಸವರಾಜ ವಿಜಯ ೯-೭೪)

ಎಂದು ಪರಿಪರಿಯಾಗಿ ಕೇಳಿಕೊಳ್ಳುವಳು. ಇದರಿಂದಲೂ ಏನೂ ಪ್ರಯೋಜನವಾಗದಿರಲು ಕೊನೆಗೆ:

ಎನ್ನ ಮಾತನುಪೇಕ್ಷೆಗೆಯ್ಯದೆ ಪಾಲನೀಂಟಿದೊಡಯ್ಯ ಕೇಳ್
ನಿನ್ನನಾಂ ಕರೆದೊಯ್ವೆನೊಪ್ಪುವ ವೀರಭದ್ರನ ತೇರ್ಗೆ ಸಂ
ಪನ್ನ ಮದ್ದುಗ್ರುರುಪರ್ವಕೆನ್ನಯ ತಂದೆ ನಾಳೆನಗೀವ ರ
ತ್ನೋನ್ನತಾಭರಣಂಗಳಂ ನಿನಗೀವೆನಿಂದುಕಳಾಧರಾ (ಬಸವರಾಜ ವಿಜಯ ೯-೮೦)

ಈ ಆಶೆಯನ್ನು ವ್ಯಕ್ತಪಡಿಸುವಳು. ಇದಾವುದಕ್ಕೂ ಕಲ್ಲಿನಾಥನು ಓಗೊಡದಿರಲು ಪರಿಪರಿಯಾಗಿ ಅತ್ತು ಗೋಳಾಡಿ ತನ್ನ ಪ್ರಾಣವನ್ನೇ ಅರ್ಪಿಸಲು ಸಿದ್ಧಳಾಗುವಳು. ಆಗ ಪರಶಿವನು ಪ್ರತ್ಯಕ್ಷನಾಗಿ ಹಾಲನ್ನು ಕುಡಿದ ಮೇಲೆ ಕೊಡಗೂಸು ಪರಶಿವನಿಗೆ:

ಜನಕಂ ಬಂದೊಡೆ ಪೇಳ್ದಪೆ
ನಿನಿತೆಲ್ಲಮನಯ್ಯ ಮುಳಿಯದಿರ್ ಬಳಿಕೆನಗಂ
ನಿನಗಂ ಸಂವಾದಮದುಂ
ಟೆನುತುಂ ಪೊಡಮಟ್ಟು ನಗುತೆ ಮನೆಗೆಳ್ತಂದಳ್ (ಬಸವರಾಜವಿಜಯ ೯-೮೪)

ಎಂದು ಹೇಳುವಳು. ಶಿಸುಸಹಜವಾದ ಪ್ರವೃತ್ತಿಯನ್ನು ಚಿತ್ರಿಸಿರುವ ಷಡಕ್ಷರಿಯ ಪ್ರತಿಭಾಶ್ರೀಮಂತಿಕೆ ಶ್ಲಾಘ್ಯವಾದುದು. ■

## ಭಟ್ಟಾಕಳಂಕ

ಕನ್ನಡದ ಸುಪ್ರಸಿದ್ಧ ವೈಯಾಕರಣಿ. ಈತನ ಕಾಲ ಕ್ರಿ.ಶ. ೧೫೮೭ ರಿಂದ ೧೬೫೫. ಈತನ ಕೃತಿ 'ಕರ್ಣಾಟಕ ಶಬ್ದಾನುಶಾಸನ'. ಈ ಕೃತಿಯನ್ನು ಕ್ರಿ.ಶ. ೧೬೦೪ರಲ್ಲಿ ಬರೆದು ಮುಗಿಸಿದಂತೆ ಹೇಳಿಕೊಂಡಿದ್ದಾನೆ. ಭಟ್ಟಾಕಳಂಕನ ಜೀವನ ಚರಿತ್ರೆಯ ಸಂಗತಿಗಳು ಬಿಳಗಿಯ ಎರಡು ಶಾಸನಗಳಲ್ಲೂ ಸೋರದಾದಲ್ಲಿಯ ಜೈನಮಠದ ಚರಿತ್ರೆಯಲ್ಲೂ ಕಂಡುಬರುತ್ತವೆ. ಈ ದಾಖಲೆಗಳ ಪ್ರಕಾರ ಬಿಳಗಿಯ ಶ್ರೀರಂಗರಾಜು ಮತ್ತು ಆತನ ಮಗ ಘಂಟಣ್ಣ, ಸ್ವಾದಿಯ ಅರಸಪ್ಪ ನಾಯಕ ಇವರಿಗೆ ಭಟ್ಟಾಕಳಂಕ ಗುರುವಾಗಿದ್ದಂತೆ ತಿಳಿದುಬರುತ್ತದೆ.

ಭಟ್ಟಾಕಳಂಕನ ಗುರುಪರಂಪರೆ ಇಂತಿದೆ: ಕರ್ನಾಟ ಸಿಂಹಾಸನಾಧೀಶ್ವರ ಬಲ್ಲಾಳರಾಯ ಜೀವರಕ್ಷಾಪಾಲಕ ಛಾರುಕೀರ್ತಿಪಂಡಿತ. ಈತನ ಶಿಷ್ಯ ಶ್ರುತಕೀರ್ತಿ. ಈತನ ಶಿಷ್ಯ ಅಗ್ಗಳ. ಈತ ತನ್ನ ಗುರುವಿನ ಆಜ್ಞಾನುಸಾರ ಚಂದ್ರಪ್ರಭಪುರಾಣವನ್ನು ಬರೆದಿದ್ದಾನೆ. ಶ್ರುತಕೀರ್ತಿಯ ಶಿಷ್ಯ ವಿಜಯಕೀರ್ತಿ. ಇವರ ಶಿಷ್ಯ ಶ್ರುತಕೀರ್ತಿ: ಇವರ ಶಿಷ್ಯ ವಿಜಯಕೀರ್ತಿ. ಇವರ ಶಿಷ್ಯ ಅಕಳಂಕ, ಚಂದ್ರಪ್ರಭ ಅಕಳಂಕನ ಶಿಷ್ಯ ವಿಜಯ ಕೀರ್ತಿ. ಇವರ ಶಿಷ್ಯ ಅಕಳಂಕದೇವ. ಇವರ ಶಿಷ್ಯನೇ ಭಟ್ಟಾಕಳಂಕ. ಭಟ್ಟಾಕಳಂಕನು ಫಂಟೇದ್ರ ಸಂಪೂಜಿತ ಕಮಲನಾಗಿ ಪೆನುಗೊಂಡೆಯ ವೆಂಕಟಪತಿ ರಾಯನ ಆಳ್ವಿಕೆಯಲ್ಲಿ ಇದ್ದಂತೆ ತಿಳಿದುಬರುತ್ತದೆ. ದೇವಚಂದ್ರನ ರಾಜಾವಳೀಕಥೆಯಲ್ಲಿ "ಸುಧಾಪುರದೊಳ್ ಭಟ್ಟಾಕಲಂಕಸ್ವಾಮಿಗಳ್ ಶಾಕಟಾಯನ ಜೈನೇಂದ್ರ ಕಾಮಾರ ಮೊದಲಾಗೆ ನವ್ಯದ್ವಾಕರಣಮುವಂ ಅಮರ ಧನಂಜಯ ವಿಶ್ವವೈಜಯಂತಿ ರತ್ನಮಾಲೆ ಶಬ್ದಮಾಲೆ ರಭಸಕೋಶ ಮೊದಲಾದ ಪದಿನೆಂಟು ನಿಘಂಟುಗಳಂ ಕುವಲಯ ಮೊದಲಾದ ಅಲಂಕಾರಗಳಂ ರತ್ನಮಂಜೂಷ, ವೃತ್ತರತ್ನಾಕರಂ ಮೊದಲಾದ ಛಂದಸ್ಸುಗಳಂ ಭರತಾದಿ ನೀತಿಶಾಸ್ತ್ರಮಂ ಸ್ವಸಮಯ ಪರಸಮಯ ಪುರಾಣಾಗಮ ತತ್ವಂಗಳಂ ಆಯುರ್ವೇದ ಶಿಲ್ಪ ವಾಸ್ತುಶಾಸ್ತ್ರಮಂ ಫಲಭಾಗೆ ಪ್ರಶ್ನಭಾಗೆ ಜಾತಕಭಾಗೆಯುಳ್ಳ ಜ್ಯೋತಿಶ್ಶಾಸ್ತ್ರಮಂ ಅದಾವ ನಿದಾನ ಚಿಕಿತ್ಸಾರೂಪ ವೈದ್ಯಶಾಸ್ತ್ರಮಂ ಇಂತನೇಕವಾದ ಶಾಸ್ತ್ರಂಗಳಂ ಕಲ್ತು ಮಹಾವಿದ್ವಾಂಸರೆನಿಸಿ ಪ್ರಾಕೃತ ಸಂಸ್ಕೃತ ಮಾಗಧ ಶೂರಸೇನ, ಅಪಭ್ರಂಶಮೆಂಬ ಷಡ್ಭಾಷಾಕವಿಗಳಾಗಿ ಕರ್ಣಾಟಕ ವ್ಯಾಕರಣಮಂ ರಚಿಸಿ ಕೀರ್ತಿಯಂ ಪಡೆದರ್" ಎಂಬ ವಿವರಗಳಿವೆ.

ಭಟ್ಟಾಕಳಂಕ ಉದ್ದಾಮ ಪಂಡಿತನಾಗಿದ್ದಂತೆಯೂ ವಿಜಯನಗರದ ಶ್ರೀರಂಗರಾಜನ ಕಾಲದಲ್ಲಿದ್ದಂತೆಯೂ

ಶ್ರೀರಂಗರಾಜನೃಪತಿ
ಪ್ರೇರಣೆಯಿಂ ವಿಜಯಮುನಿಪನುಪದೇಶನದಿಂ
ಸಾರತ್ರಿತಯಮನಲಂ
ಕಾರತ್ರಿತಯಮುಮನೋದಿ ಜಸಮಂ ಪಡೆದಂ:

ವರಶಬ್ದಾಗಮ ತರ್ಕನಾಟಕ ಮಹಾಲಂಕಾರ ಸತ್ಸಂಹಿತಾ
ಭರತ ಜ್ಯೋತಿಷ ಮಂತ್ರ ತಂತ್ರ ವಿಧಿ ಶಿಲ್ಪನ್ಯಾಯವೇದ ಸ್ಮೃತಿ
ಸ್ಫುರದಧ್ಯಾತ್ಮ ಪುರಾಣ ವೈದ್ಯ ಗಣಿತ ಧ್ಯಾನಾದಿ ಶಾಸ್ತ್ರಾಬ್ಧಿಚಂ
ದಿರನೆಂದುರ್ವರೆ ಕೀರ್ತಿಸುವುದೀ ಭಟ್ಟಾಕಲಂಕಾರ್ಯನಂ

ಭಟ್ಟಾಕಳಂಕ ಉಭಯಭಾಷಾವಿಶಾರದನಾಗಿದ್ದನು. ಕನ್ನಡ ಸಂಸ್ಕೃತ ಭಾಷೆಗಳ ವ್ಯಾಕರಣ ನಿಯಮಗಳನ್ನು ಚೆನ್ನಾಗಿ ಬಲ್ಲವನಾಗಿದ್ದನು. ಜೈನನಾಗಿದ್ದ ಭಟ್ಟಾಕಳಂಕ ರಾಜರ ಸಭೆಗಳಲ್ಲಿ ಜೈನಮತವನ್ನು ಅನೇಕ ಬಾರಿ ಸ್ಥಾಪಿಸಿದ್ದಂತೆ:

ಯೋ ನಾನಾಮತ ತರ್ಕ ಕರ್ಕಶಮತಿರ್ವ್ಯಾಖ್ಯಾನ ಮುದ್ರಾಪಟುಃ
ಯಃ ಪ್ರಾಭಾವಯದಾರ್ಹತಂ ನಿಜಮತಂ ಭೂಭೃತ್ಸಭೇನೇಕಧಾ
ಯಃ ಕರ್ಣಾಟಕ ಸಂಸ್ಕೃತೋಭಯನಿಭಂ ಶಬ್ದಾಬ್ಧಿಮುತ್ತೀರ್ಣವಾನ್
ಸೋಯಂ ಸಾಧುಜನಪ್ರಿಯೋ ವಿಜಯತೇ ಭಟ್ಟಾಕಲಂಕೋ ಭುವಿ

ಈ ಮೇಲಿನ ಪದ್ಯದಿಂದ ವ್ಯಕ್ತಪಡುತ್ತದೆ.

ಭಟ್ಟಾಕಳಂಕನ ಕನ್ನಡ ಭಾಷಾಪ್ರೇಮ ಅನನ್ಯವಾದುದು. ಕನ್ನಡ ಭಾಷೆಗೆ ವ್ಯಾಕರಣದ ಅಗತ್ಯವಿದೆಯೆ ಎಂಬುದನ್ನು ಪ್ರಶ್ನಿಸಿ ಅದಕ್ಕೆ ಉತ್ತರವಾಗಿ ಯಾವ ಕಾರಣಕ್ಕಾಗಿ ಸಂಸ್ಕೃತ ಭಾಷೆಯನ್ನು ಆಳವಾಗಿ ಅಭ್ಯಾಸ ಮಾಡಬೇಕೋ ಅದೇ ಕಾರಣಕ್ಕಾಗಿ ಕನ್ನಡವನ್ನು ಆಳವಾಗಿ ಅಭ್ಯಾಸ ಮಾಡಬೇಕು ಎಂದಿದ್ದಾನೆ. ಇತರ ಭಾಷೆಗಳಂತೆ ಕನ್ನಡವೂ ದೇವವಾಣಿಯೇ. ಈ ಭಾಷೆಗೆ ಮಹಾವಿದ್ವಾಂಸರು ಹಿಂಧೆಯೇ ಹಲವಾರು ವ್ಯಾಕರಣಗಳನ್ನು ಬರೆದಿದ್ದಾರೆ. ಪಂಡಿತರಾದಿಯಾಗಿ ಮೆಚ್ಚಿ ತಲೆದೂಗುವಂಥ ಗ್ರಂಥಗಳು ಕನ್ನಡದಲ್ಲೂ ಇರುವುದರಿಂದ ಕನ್ನಡಕ್ಕೂ ವ್ಯಾಕರಣ ಅತ್ಯಗತ್ಯ. ಕನ್ನಡಿಗರು ಸರಸ ವಿದ್ವಾಂಸರು, ಪ್ರೌಢವಿದ್ವತ್ಕವಿಗಳು. ಇವರ ಕೃತಿಗಳು ಜನತೆಯ ಗೌರವಾದರಗಳಿಗೆ ಪಾತ್ರವಾಗಿವೆ ಎಂದು ಭಟ್ಟಾಕಳಂಕ ಹೇಳಿರುವುದು ಆತನ ಕನ್ನಡ ಭಾಷೆ ಸಾಹಿತ್ಯಗಳಲ್ಲಿನ ಅತೀವ ಪ್ರೇಮಕ್ಕೆ ನಿದರ್ಶನವಾಗಿದೆ.

# ಶಬ್ದಾನುಶಾಸನ

ಸುಪ್ರಸಿದ್ಧ ವೈಯಾಕರಣಿ ಭಟ್ಟಾಕಳಂಕನಿಂದ ರಚಿತವಾದ ಒಂದು ವ್ಯಾಕರಣ ಗ್ರಂಥ. ಶಬ್ದಾನುಶಾಸನಕ್ಕೆ "ಭಾಷಾಭೂಷಣ" ಎಂಬ ವೃತ್ತಿಯನ್ನೂ 'ಮಂಜರೀ ಮಕರಂದ' ಎಂಬ ವಾಖ್ಯಾನವನ್ನೂ ಬರೆದಂತೆ ಭಟ್ಟಾಕಳಂಕನೇ ಹೇಳಿಕೊಂಡಿದ್ದಾನೆ.

ಶಬ್ದಾನುಶಾಸನ ಕನ್ನಡ ಭಾಷೆಯನ್ನು ಕುರಿತು ಸಂಸ್ಕೃತದಲ್ಲಿ ಬರೆದಿರುವ ಎರಡನೆಯ ವ್ಯಾಕರಣ ಗ್ರಂಥ. ಇದರಲ್ಲಿ ೫೯೨ ಸೂತ್ರಗಳಿವೆ. ಇದನ್ನು ನಾಲ್ಕು ಪಾದಗಳಾಗಿ ವಿಂಗಡಿಸಲಾಗಿದೆ. ಪ್ರಥಮಪಾದದಲ್ಲಿ ೧೧೧ ಸೂತ್ರಗಳಿವೆ. ಸಂಜ್ಞಾಸೂತ್ರಗಳು ಪರಿಭಾಷಾ ಪ್ರಕರಣ, ಸ್ವರ ವ್ಯಂಜನ ಸಂಧಿಗಳು ಈ ಪಾದದಲ್ಲಿ ವಿವರಿಸಲ್ಪಟ್ಟಿವೆ. ದ್ವಿತೀಯ ಪಾದದಲ್ಲಿ ೧೧೨ ರಿಂದ ೨೯೧ ಸೂತ್ರಗಳಿವೆ. ಲಿಂಗಸಂಜ್ಞಾಪ್ರಕರಣ, ಅಲಿಂಗಗಳು, ತದ್ಭವ ಪ್ರಕರಣ, ದೇಶ್ಯಲಿಂಗ ಪ್ರಕರಣ, ಸುಪ್ ೯ ಆಶ್ರಯ, ವಿಧಿಪ್ರಕರಣಗಳೇ ಮುಂತಾದುವನ್ನು ವಿವರಿಸಲಾಗಿದೆ. ತೃತೀಯ ಪಾದದಲ್ಲಿ ೨೯೨-೪೪೦ ಸೂತ್ರಗಳಿವೆ. ಸಮಾಸಪ್ರಕರಣ, ಸಮಾಸಾಶ್ರಯ ವಿಧಿಪ್ರಕರಣ, ದ್ವಿರುಕ್ತಿಪ್ರಕರಣ, ಪ್ಲುತಪ್ರಕರಣ, ತದ್ಧಿತ ಪ್ರಕರಣಗಳಿವೆ. ಚತುರ್ಥ ಪಾದದಲ್ಲಿ ೪೪೨-೫೯೨ ಸೂತ್ರಗಳಿವೆ. ಧಾತುಪ್ರಕರಣ, ಕೃದಂತಪ್ರಕರಣಗಳು ಈ ಪಾದದಲ್ಲಿ ಬಿತ್ತರಗೊಂಡಿವೆ. ಈ ೫೯೨ ಸೂತ್ರಗಳಿಗೆ ಅನ್ಯಕವಿಗಳಿಂದ ಉದ್ಧರಿಸಿದ ಪ್ರಯೋಗಗಳು ೪೬ ಮಾತ್ರ. ಭಟ್ಟಾಕಳಂಕ ಪ್ರಮಾಣ-ವಚನಗಳನ್ನು ಹೆಚ್ಚಾಗಿ ಉದಾಹರಿಸಿದ್ದಾನೆ. ಪಾಣಿನಿ, ಕಾತಂತ್ರ, ಜೈನೇಂದ್ರ, ಶಾಕಟಾಯನ, ಸಾರಸ್ವತವ್ಯಾಕರಣ, ಕಾಶಿಕಾವೃತ್ತಿ ಪತಂಜಲಿಯ ವಾರ್ತಿಕ ಮಹಾಭಾಷ್ಯ, ಪಾಶಿಶೀಯ ಶಿಕ್ಷಾ, ಅಮೋಘವೃತ್ತಿ ಮುಂತಾದವರಿಂದ ಸಂಸ್ಕೃತ ಪ್ರಮಾಣ ವಚನಗಳನ್ನು ಉದ್ಧರಿಸಿದ್ದಾನೆ. ಕನ್ನಡ ಕಾವ್ಯ ಪ್ರಯೋಗಗಳನ್ನು ಪಂಪ, ಪೊನ್ನ, ರನ್ನ, ಗುಣವರ್ಮ, ನೇಮಿಚಂದ್ರ, ಅಗ್ಗಳ, ನಾಗವರ್ಮ, ಕೇಶಿರಾಜ, ಮಧುರ ವೃತ್ತವಿಲಾಸ, ಅಭಿನವವಾದಿವಿದ್ಯಾನಂದ, ನಯಸೇನ, ರುದ್ರಭಟ್ಟ ಮೊದಲಾದವರಿಂದ ಆರಿಸಿಕೊಂಡಿದ್ದಾನೆ.

ಶಬ್ದಾನುಶಾಸನ ಪ್ರಾಚೀನ ವ್ಯಾಕರಣ ಗ್ರಂಥಗಳಿಗಿಂತ ವಿವರವಾಗಿದೆ, ವಿಸ್ತೃತವಾಗಿದೆ, ಶಾಸ್ತ್ರೀಯವಾಗಿದೆ, ಸಮಗ್ರವಾಗಿದೆ. ಪ್ರಾಚೀನ ವೈಯಾಕರಣರ ಮಾರ್ಗರನ್ನು ಭಟ್ಟಾಕಳಂಕ ಅನುಸರಿಸಿದ್ದಾನೆ. ಆದರೆ, ಅಂಧಾನುಕರಣೆಯನ್ನು ಮಾಡಿಲ್ಲ. ಹಿಂದಿನವರ ಪ್ರಯೋಗಗಳನ್ನು ಹಲವೆಡೆ ಧಾರಾಳವಾಗಿ ಸ್ವೀಕರಿಸಿದ್ದಾನೆ. ಭಟ್ಟಾಕಳಂಕನ ವ್ಯಾಕರಣ ಪ್ರತಿಪಾದನೆ ಪ್ರಾಚೀನರಿಗಿಂತ ಹೆಚ್ಚು ವಿಸ್ತಾರವಾಗಿದೆ; ವಿವರಣಪೂರ್ಣವಾಗಿದೆ, ತರ್ಕಬದ್ಧವಾಗಿದೆ.

# ಬೊಂಬೆಯಲಕ್ಕ

ಈತನು ಹರಿಶ್ಚಂದ್ರ ಸಾಂಗತ್ಯವನ್ನು ಬರೆದಿದ್ದಾನೆ. ಕರ್ಣಾಟಕ ಕವಿಚರಿತೆಕಾರರು "ಈತನು ವೀರಶೈವ ಕವಿಯೆಂದು ತೋರುತ್ತದೆ. ಈ ಗ್ರಂಥವನ್ನು ಶಕ ೧೪೬೦ನೆಯ ವಿಳಂಬಿಯಲ್ಲಿ ಎಂದರೆ ೧೫೩೮ರಲ್ಲಿ ರಚಿಸಿದಂತೆ ಹೇಳುತ್ತಾನೆ" ಎಂದು ಹೇಳಿದ್ದಾರೆ. ಆದರೆ ಈ ಕಾಲಸೂಚಿ ಪದ್ಯ ಹರಿಶ್ಚಂದ್ರ ಸಾಂಗತ್ಯವನ್ನು ಬರೆದ ಮತ್ತೊಬ್ಬ ಕವಿ ರಾಮರಸ ವಿರೂಪಾಕ್ಷನಿಗೆ ಸಂಬಂಧಿಸಿದುದು ಎಂದು ಆಕೃತಿಯ ಸಂಪಾದಕರು ಹೇಳಿದ್ದಾರೆ. ಇದಕ್ಕೆ ಹಸ್ತಪ್ರತಿಯ ಆಧಾರವನ್ನೂ ಅವರು ಸೂಚಿಸುತ್ತಾರೆ.

ಹದಿನಾರನೆಯ ಶತಮಾನದಲ್ಲಿ ಬೊಂಬೆಯಲಕ್ಕ, ರಾಮರಸವಿರೂಪಾಕ್ಷ, ಓದುವಗಿರಿಯ, ಹಲಗ ಎಂಬ ನಾಲ್ಕು ಜನ ಹರಿಶ್ಚಂದ್ರನ ಕಥೆಯನ್ನು ಕುರಿತು ಸಾಂಗತ್ಯದಲ್ಲೇ ಕೃತಿರಚನೆ ಮಾಡಿದ್ದಾರೆ. ಇವನ್ನು ಪ್ರತಿಮಾಡಿದ ಪ್ರತಿಕಾರರು ಒಬ್ಬ ಕವಿಯ ಕಾವ್ಯದ ಪದ್ಯಗಳನ್ನು ಮತ್ತೊಬ್ಬ ಕವಿಯ ಕಾವ್ಯಕ್ಕೆ ಸೇರಿಸಿಟ್ಟಿರುವುದು ಕಂಡುಬರುತ್ತದೆ. ಇವು ನಾಲ್ಕೂ ಸಾಂಗತ್ಯ ಕೃತಿಗಳೇ ಆಗಿರುವುದರಿಂದ ಕಥಾಸಂದರ್ಭಕ್ಕನುಸಾರವಾಗಿ ಪ್ರತಿಕಾರರ ಅಲಕ್ಷ್ಯದಿಂದ ಒಬ್ಬರ ಪದ್ಯಗಳು ಮತ್ತೊಬ್ಬರ ಪದ್ಯಗಳೊಂದಿಗೆ ಬೆರೆತುಹೋಗಿರುವುದು ಅಸಂಭವವೇನಲ್ಲ. ಅಂತೆಯೇ ಬೊಂಬೆಯಲಕ್ಕನ ಕಾಲಸೂಚೀ ಪದ್ಯವು ರಾಮರಸವಿರೂಪಾಕ್ಷನ ಕೃತಿಯೊಳಗೆ ಸೇರಿಹೋಗಿರಬಹುದು. ಇದಕ್ಕೆ ಆಧಾರವೆಂಬಂತೆ ರಾಮರಸವಿರೂಪಾಕ್ಷನ ಹರಿಶ್ಚಂದ್ರಸಾಂಗತ್ಯದ ಕೆಲವು ಹಸ್ತಪ್ರತಿಗಳಲ್ಲಿ ಕಾಲಸೂಚಿ ಪದ್ಯ ಕಂಡುಬಾರದಿರುವುದು.

ಬೊಂಬೆಯಲಕ್ಕ ಹರಿಶ್ಚಂದ್ರ ಸಾಂಗತ್ಯದಲ್ಲಿ ತನ್ನ ಬಗೆಗೆ ಯಾವ ವಿಷಯವನ್ನೂ ಹೇಳಿಕೊಂಡಿಲ್ಲ. ಈತನ ಹೆಸರಿನಿಂದ ಸೂತ್ರದ ಗೊಂಬೆಗಳನ್ನು ಆಡಿಸುತ್ತಿದ್ದುದು ಈತನ ವೃತ್ತಿಯಾಗಿದ್ದಿರಬಹುದೆಂದು ಊಹಿಸಬಹುದಾಗಿದೆ. ಈತನು ಹರಿಶ್ಚಂದ್ರ ಸಾಂಗತ್ಯವನ್ನು ಬಿಟ್ಟರೆ ಮತ್ತಾವ ಕೃತಿಯನ್ನೂ ಬರೆದಂತೆ ತಿಳಿದುಬಂದಿಲ್ಲ. ಇದರಲ್ಲಿ ೫ ಸಂಧಿಗಳೂ ೫೭೦ ಪದ್ಯಗಳೂ ಇವೆ.

ಬೊಂಬೆಯಲಕ್ಕ ತನ್ನ ಕೃತಿಗೆ ಯಾವುದು ಮೂಲ ಎಂಬುದನ್ನು ಹೇಳಿಲ್ಲ. ಅಲ್ಲದೆ ಪೂರ್ವಕವಿಗಳಲ್ಲಿ ಯಾರನ್ನೂ ಸ್ಮರಿಸಿಲ್ಲ. ತನ್ನ ಕಾವ್ಯದ ಆದಿಯಲ್ಲಿ ಈಶ್ವರ ವಿರೂಪಾಕ್ಷ, ಗಣಪತಿ, ಶಾರದೆ ಇವರನ್ನು ಸ್ತುತಿಸಿದ್ದಾನೆ.

ಆದಿಯ ಕಥೆ ವೇದಶಾಸ್ತ್ರವೆಂದು ತಿಳಿವುದು
ಆದಿಯ ಪುಣ್ಯಸತ್ಕೃತಿಯ
ಮೇದಿನಿಗೊರೆದ ಬೊಂಬೆಯಲಕ್ಕ ಧರ್ಮರ
ಪಾದವೆ ಗತಿಯೆಂದು ನೆನೆದು ॥ ೧-೬ ॥

ಸತ್ಯದಿ ಗುರುವಿಘ್ನವ ಪರಿಹರಿಸಲು
ಮುಕ್ತಿಯ ಕಡೆಯಲಿ ಕಂಡು
ಉತ್ತಮರಕುಲೋದ್ಭವ ಹರಿಶ್ಚಂದ್ರನ
ಭಕ್ತಿಯ ಕಥೆಯ ಪೇಳುವೆನು ॥ ೧-೭ ॥

ಎಂದು ಕಾವ್ಯದ ಆದಿಯಲ್ಲಿ ಅತ್ಯಂತ ಭಕ್ತಿಯಿಂದ ಹೇಳಿಕೊಂಡಿದ್ದಾನೆ. ಕಾವ್ಯದ ಕಡೆಯಲ್ಲಿ–

ಸತ್ಯದ ನೆಲೆ ಮುಕ್ತಿಯ ಬೀಡು ಪುಣ್ಯದ
ಕೀರ್ತಿಯ ತಲೆವನೆಯೆನಿಸಿ
ಸತ್ಯದ ಕಥೆ ಕೇಳಿದ ಪುಣ್ಯಜನರಿಗೆ
ನಿತ್ಯವಾಗಲಿ ಸುಖವೆಂದ ॥ ೫-೪೫ ॥

ಈ ಫಲಶ್ರುತಿಯನ್ನು ಹೇಳಿದ್ದಾನೆ.

ಬೊಂಬೆಯಲಕ್ಕ ತನ್ನ ಕೃತಿಗೆ ಯಾವುದು ಮೂಲವೆಂದು ಹೇಳಿಕೊಳ್ಳದಿದ್ದರೂ ಈತನ ಕಾವ್ಯವನ್ನು ಓದಿದವರಿಗೆ ಇದು ರಾಘವಾಂಕನ ಹರಿಶ್ಚಂದ್ರ ಕಾವ್ಯವನ್ನು ಆಧರಿಸಿ ರಚಿತವಾದುದು ಎಂದು ಸ್ವಯಂವೇದ್ಯವಾಗುತ್ತದೆ. ವಾರ್ಧಕ ಷಟ್ಪದಿಯಲ್ಲಿರುವ ರಾಘವಾಂಕನ ಹರಿಶ್ಚಂದ್ರ ಕಾವ್ಯದ ಪದಗಳನ್ನೂ ಪಾದಗಳನ್ನೂ ಪದ್ಯಗಳನ್ನೂ ಯಥಾವತ್ತಾಗಿ ಬಳಸಿಕೊಂಡಿದ್ದಾನೆ. ಒಟ್ಟಿನಲ್ಲಿ ರಾಘವಾಂಕನ ವಾರ್ಧಕ ಷಟ್ಪದಿ ಕಾವ್ಯ ಬೊಂಬೆಯಲಕ್ಕನ ಸಾಂಗತ್ಯದಲ್ಲಿ ಪಡಿಮೂಡಿದೆ ಎಂದು ಹೇಳಬಹುದು.

ಬೊಂಬೆಯಲಕ್ಕನ ಕಾವ್ಯ ಅತ್ಯಂತ ಸರಳವಾಗಿಯೂ ಲಲಿತವಾಗಿಯೂ ರಚಿತವಾಗಿರುವುದರಿಂದ ಅಂದಿನ ಜನತೆಯ ಮೆಚ್ಚುಗೆಗೆ ಪಾತ್ರವಾಗಿತ್ತು ಎಂದು ಧಾರಾಳವಾಗಿ ಹೇಳಬಹುದು. ಜನಪ್ರಿಯ ಕವಿಯಾಗಿ ಬೊಂಬೆಯಲಕ್ಕ ಹರಿಶ್ಚಂದ್ರ ಸಾಂಗತ್ಯಕಾರರಲ್ಲಿ ಮೊದಲಿಗನಾಗಿ ಚಿರಸ್ಮರಣೀಯನಾಗಿದ್ದಾನೆ. ಭಕ್ತಿಮುಕ್ತಿಪ್ರದಾಯಕವಾದ ಹರಿಶ್ಚಂದ್ರನ ಕಥೆಯನ್ನು ಅತ್ಯಂತ ಭಕ್ತಿ ಮತ್ತು ಶ್ರದ್ಧೆಯಿಂದ ರಚಿಸಿ ಕೃತಕೃತ್ಯನಾಗಿದ್ದಾನೆ.

ಈತ ಪೂರ್ವಕವಿಗಳಲ್ಲಿ ಯಾರನ್ನೂ ಸ್ತುತಿಸಿಲ್ಲ : ತನ್ನ ಕಾವ್ಯಕ್ಕೆ ಯಾವುದು ಮೂಲ ಎಂಬುದನ್ನೂ ಹೇಳಿಕೊಂಡಿಲ್ಲ. ಕೃತಿಯ ಅಭ್ಯಾಸ ಮಾಡಿದವರಿಗೆ ಇದು ರಾಘವಾಂಕನ ಹರಿಶ್ಚಂದ್ರ ಕಾವ್ಯವನ್ನು ಆಧರಿಸಿ ಬರೆದುದೆಂದು ವ್ಯಕ್ತವಾಗುತ್ತದೆ. ಆ ಕಾವ್ಯದ ಅನೇಕ ಪದ್ಯಗಳನ್ನು ಈತ ತನ್ನ ಕೃತಿಯಲ್ಲಿ ಧಾರಾಳವಾಗಿ ಬಳಸಿಕೊಂಡಿದ್ದಾನೆ. ಕಾವ್ಯಶೈಲಿ ಸರಳವಾಗಿದ್ದು ಜನಸಾಮಾನ್ಯರ ಮನವನ್ನು ನೇರವಾಗಿ ಮುಟ್ಟುವಂತಿದೆ. ಕಾವ್ಯದ ಕೊನೆಯಲ್ಲಿ ತನ್ನ ಕಾವ್ಯ ಸತ್ಯದ ನೆಲೆ ಮುಕ್ತಿಯ ಬೀಡು ಪುಣ್ಯದ ಕೀರ್ತಿಯ ತಲೆವನೆ ಎಂದು ಹೇಳಿಕೊಂಡಿದ್ದಾನೆ. ಹರಿಶ್ಚಂದ್ರ ಸಾಂಗತ್ಯಕಾರರಲ್ಲಿ ಈತನಿಗೆ ಒಂದು ಮಹತ್ತ್ವದ ಸ್ಥಾನವಿದೆ.



# ಸಂಪಾದನೆಯ ಚೆನ್ನಂಜೇದೇವ

ಬಸವಾದಿ ಪ್ರಮಥರ ವಚನ ಸಂಪಾದನಕಾರರಲ್ಲಿ ಚೆನ್ನಂಜೇದೇವ ಪ್ರಮುಖನಾದವನು. ಕರ್ಣಾಟಕ ಕವಿಚರಿತೆಕಾರರು ಈತನ ಕಾಲವನ್ನು ಕ್ರಿ.ಶ. ೧೫೩೦ ಎಂದಿದ್ದಾರೆ. ಆದರೆ ಇತ್ತೀಚಿನ ಸಂಶೋಧನೆಗಳಿಂದ ಈತನ ಕಾಲವನ್ನು ಕ್ರಿ.ಶ. ೧೫೬೦ರ ತರುವಾಯ ಎಂದು ನಿರ್ಧರಿಸಲಾಗಿದೆ. ಈತನಿಗೆ ಷಟ್ಸ್ಥಲ ಚಕ್ರವರ್ತಿ ಹರತಾಳ ಚೆನ್ನಂಜೇದೇವ, ಆಚಾರ್ಯವರದ ಹರಿತಾಳನಂಜೇಶ, ಚೆನ್ನಾಚಾರ್ಯ, ಚೆನ್ನಂಜಾಚಾರ್ಯ ಮುಂತಾದ ಪರ್ಯಾಯ ನಾಮಗಳೂ ಕಂಡುಬರುತ್ತವೆ. ಹರತಾಳ ಎಂಬುದು ಚೆನ್ನಂಜೇದೇವರ ಜನ್ಮಸ್ಥಳವಿರಬಹುದು. ಚೆನ್ನಂಜೇದೇವರು ತೋಂಟದ ಸಿದ್ಧಲಿಂಗೇಶ್ವರರ ಪ್ರಶಿಷ್ಯರು, ಬೋಳಬಸವೇಶ್ವರರ ಶಿಷ್ಯರು. ಲಿಂಗಾಂಗಪ್ರಣವ ಸಂಯೋಗವೆಂಬ ಶಾಸ್ತ್ರಗ್ರಂಥಕ್ಕೆ ಕನ್ನಡ ಟೀಕನ್ನು ಬರೆದಿರುವ ಸಂಪಾದನೆಯ ಗುರುಲಿಂಗ ದೇವರ "ಶ್ರೀಮತ್ಸಚ್ಚಿದಾನಂದ ನಿತ್ಯಪರಿಪೂರ್ಣ ನಿರಂಜನ ಪರಂಜ್ಯೋತಿ ಸ್ವರೂಪರಾದ ತೋಂಟದ ಸಿದ್ಧಲಿಂಗ ಪ್ರಭುವೆಂಬಾಚಾರ್ಯರು; ಅವರ ನಿಜದರಿವಿನಾಚರಣೆಯನುಭವಿಯೆ ಬೋಳಬಸವೇಶ್ವರನು; ಅವರ ನಿಜದರಿವಿನಾಚರಣೆಯನುಭವಿಯೆ ಹರತಾಳ ಚೆನ್ನಂಜೇದೇವರು" ಎಂಬ ಈ ನಿರೂಪಣೆ ಮೇಲಿನ ಅಭಿಪ್ರಾಯವನ್ನು ಸ್ಥಿರಪಡಿಸುತ್ತದೆ. ಬಸವಣ್ಣನವರ ವಚನಗಳಿಗೆ ಟೀಕೆಯನ್ನು ಬರೆದಿರುವ ಸೋಮಶೇಖರ ಶಿವಯೋಗಿಯ "ಆದ್ಯರೆಂದರೆ ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರು... ಚೆನ್ನಂಜೆಯ ಸ್ವಾಮಿಗಳು, ಕಟ್ಟಿಗೆಹಳ್ಳಿ ಸ್ವಾಮಿಗಳು, ಮುರಿಗೇ ಸ್ವಾಮಿಗಳು ಮೊದಲಾದ ನೂತನ ಪುರಾತನರೇ ಸಾಧ್ಯಗಣಂಗಳೆನಿಸುವರು" ಈ ಹೇಳಿಕೆ ಚೆನ್ನಂಜೇದೇವರ ಅಸಮಾನ ವ್ಯಕ್ತಿತ್ವಕ್ಕೆ ನಿದರ್ಶನವಾಗಿದೆ.

ಚೆನ್ನಂಜೇದೇವರು ಆಚರಣೆಯ ವಚನ, ಸಂಬಂಧದ ವಚನ, ಮಿಶ್ರಸ್ತೋತ್ರದ ವಚನ, ಬಸವಸ್ತೋತ್ರದ ವಚನ ಇವುಗಳನ್ನು ಸಂಪಾದಿಸಿದ್ದಾರೆ ಎಂದು ಕರ್ಣಾಟಕ ಕವಿಚರಿತೆಕಾರರು ಹೇಳಿದ್ದಾರೆ. ಆದರೆ ಚೆನ್ನಂಜೇದೇವರು ಬಸವಸ್ತೋತ್ರದ ಷಟ್ಪದಿ ಮತ್ತು ಶಂಕರದೇವರ ಕಂದ ಎಂಬ ಕೃತಿಗಳನ್ನೂ ಸಂಪಾದಿಸಿರುವುದಕ್ಕೆ ಹಸ್ತಪ್ರತಿಗಳಲ್ಲಿ ಸ್ಪಷ್ಟವಾದ ಆಧಾರಗಳು ಕಂಡುಬರುತ್ತವೆ.

ಆಚರಣೆಯ ವಚನಗಳು ಸಂಬಂಧದ ವಚನಗಳು ವೀರಶೈವ ತಾತ್ವಿಕ ಸಿದ್ಧಾಂತಕ್ಕೆ ಒಳಪಟ್ಟವುಗಳಾಗಿವೆ. ಆಚರಣೆಯ ವಚನಗಳು ಒಟ್ಟು ೧೪೦. ಸಂಬಂಧದ ವಚನಗಳು ಒಟ್ಟು ೧೨೧. ಕೆಲವು ಹಸ್ತಪ್ರತಿಗಳಲ್ಲಿ ಇವನ್ನು ಆಚರಣೆಯ ಸಂಬಂಧದ ವಚನಗಳು ಎಂದೇ ಹೇಳಿರುವುದು ಕಂಡುಬರುತ್ತದೆ. ಅಲ್ಲದೆ ಇವುಗಳನ್ನು ೫೨ ಸ್ಥಲಗಳಿಗೆ ಅಳವಡಿಸಿರುವುದು ಹಸ್ತಪ್ರತಿಗಳಲ್ಲಿ ಉಲ್ಲೇಖವಾಗಿದೆ. ಮಿಶ್ರಸ್ತೋತ್ರವಚನಗಳಲ್ಲಿ ಹಲವಾರು ಶಿವಶರಣರ ಸ್ತುತಿರೂಪವಾದ ೧೧೮ ವಚನಗಳು ಸಮಾವೇಶಗೊಂಡಿವೆ. ಶಿವಶರಣರ ಪರಸ್ಪರ ಪ್ರಶಂಸೆಯ ವಚನಗಳನ್ನು ಇದರಲ್ಲಿ ಸಂಗ್ರಹಿಸಲಾಗಿದೆ. ಇದು ಶರಣರ ಸ್ತುತಿವಚನ ಸಂಕಲನ "ಮಿಶ್ರಸ್ತೋತ್ರ" ಎಂದರೆ ಒಂದರಿಂದಧಿಕವಾದ ಸಂಖ್ಯೆಯ ದೇವತೆಗಳನ್ನು ಮಹಾನುಭಾವಿಗಳನ್ನು ಸುತಿಸುವ ಮತ್ತು ಒಬ್ಬರ ಗುಣಾಧಿಕ್ಯವನ್ನು ಮತ್ತೊಬ್ಬರು ಎತ್ತಿ ಪರಸ್ಪರವಾಗಿ ಪ್ರಶಂಸಿಸುವ ಒಂದು ಬಗೆಯ ವಿಧಾನಕ್ಕೆ ಸಾಮಾನ್ಯವಾಗಿ ಮಿಶ್ರಸ್ತೋತ್ರವೆಂದು ಕರೆಯಬಹುದು ಎಂದು ಅದರ ಸಂಪಾದಕರಾದ ಪ್ರಭುಸ್ವಾಮಿಗಳು ಹೇಳಿದ್ದಾರೆ. ಇದಕ್ಕೆ ದೃಷ್ಟಾಂತವಾಗಿ ಒಂದು ವಚನವನ್ನು ನೋಡಬಹುದು:

ಎನ್ನ ಮನ ಬಸವಣ್ಣ ಎನ್ನ ವಾಕ್ಕು ಚೆನ್ನಬಸವಣ್ಣ
ಎನ್ನ ಕಾಯವೆ ಪ್ರಭುದೇವರು ನೋಡಾ

ಇಂತೀ ಮೂವರ ಪಾದವನು ತ್ರಿಕರಣಶುದ್ಧದಿಂದಾನು ನಂಬಿ
ನಮೋ ನಮೋ ಎನುತಿರ್ದೆನು ಕಾಣಾ ಕಲಿದೇವರದೇವಾ.

ಬಸವಸ್ತೋತ್ರದ ವಚನಗಳಲ್ಲಿ ಬಸವಣ್ಣನವರ ವ್ಯಕ್ತಿತ್ವವನ್ನು ಚಿತ್ರಿಸುವ ಬೇರೆ ಬೇರೆ ಶರಣರ ವಚನಗಳು ಸಂಕಲಿತವಾಗಿವೆ. ೧೯೬೫ರಲ್ಲಿ ಎಸ್.ಎಂ. ಹುಣಶ್ಯಾಳ ಮತ್ತು ಸಿ.ಎಚ್. ಅನ್ನದಾನಯ್ಯ ಅವರಿಂದ ಪ್ರಕಟವಾದ "ಬಸವಸ್ತೋತ್ರದ ವಚನ"ದಲ್ಲಿ ೧೨೩ ವಚನಗಳಿವೆ. ಡಾ. ಎಂ.ಎಂ. ಕಲಬುರ್ಗಿಯವರು ೧೯೭೬ರಲ್ಲಿ ಪ್ರಕಟಿಸಿರುವ ಬಸವಸ್ತೋತ್ರದ ವಚನಗಳಲ್ಲಿ ೧೪೨ ವಚನಗಳಿವೆ. ಉದಾಹರಣೆಗಾಗಿ ಒಂದು ವಚನವನ್ನು ನೋಡಬಹುದು:

ಲಿಂಗಜಂಗಮ ಜಂಗಮಲಿಂಗವೆಂಬುದನಾರು ಬಲ್ಲರು ಬಸವಣ್ಣನಲ್ಲದೆ
ಲಿಂಗಕ್ಕೆ ಆಧಾರವಿಲ್ಲವೆಂದು ಮರ್ತ್ಯಲೋಕಕ್ಕೆ ಬಂದು ಅವತರಿಸಿದನಯ್ಯ ಬಸವಣ್ಣನು
ಲಿಂಗಮುಖ ಜಂಗಮವೆಂದರಿದು ತನ್ನನರ್ತಿಸಿ ಇದಿರತಪ್ಪಿಸಿ ಇರಬಲ್ಲನಯ್ಯ ಬಸವಣ್ಣನು
ಲಿಂಗಮುಖವೆಲ್ಲ ನಷ್ಟವಾಗಿ ಭೃತ್ಯಾಚಾರವೆ ತನುವಾಗಿರಬಲ್ಲನಯ್ಯ ಬಸವಣ್ಣನು
ಪ್ರಾಣನ ಕಳೆಯರಿತು ಜಂಗಮನೇ ಪ್ರಾಣವಾಗಿರಬಲ್ಲನಯ್ಯ ಬಸವಣ್ಣನು
ಬಸವಪ್ರಿಯ ಕೂಡಲ ಚೆನ್ನಸಂಗಯ್ಯನಲ್ಲಿ
ಆಚಾರವೇ ಪ್ರಾಣವಾಗಿಪ್ಪ ಸಂಗನ ಬಸವಣ್ಣನೆ
ನಿಮಗೆ ಭಕ್ತನಯ್ಯ ಪ್ರಭುವೇ.

ಸಂಪಾದನೆಯ ಚೆನ್ನಂಜೇದೇವ ಈ ನಾಲ್ಕೂ ಪ್ರಕಾರದ ವಚನ ಸಂಕಲನಗಳಲ್ಲಿ ಅನುಸರಿಸಿರುವ ಸ್ಥಲಕಟ್ಟಿನ ವಿಭಾಗ ಮತ್ತಾರಲ್ಲೂ ಕಂಡುಬರುವುದಿಲ್ಲ. ಈ ಕ್ರಮ ವಿಶಿಷ್ಟವಾಗಿದೆ, ವಿನೂತನವಾಗಿದೆ. ಹನ್ನೆರಡನೆಯ ಶತಮಾನದ ವಚನಕಾರರಿಂದ ಹಿಡಿದು ಹದಿನಾರನೆಯ ಶತಮಾನದ ವಚನಕಾರರ ಶ್ರೇಷ್ಠವಚನಗಳನ್ನು ತನ್ನದೇ ಆದ ಸ್ಥಲಾನುಕ್ರಮದಲ್ಲಿ ಅಳವಡಿಸಿ ಒಂದು ನೂತನ ವರ್ಗೀಕರಣ ವಿಧಾನವನ್ನು ಪ್ರಾರಂಭಿಸಿದ್ದಾನೆ.

ಬಸವಸ್ತೋತ್ರ ಷಟ್ಪದಿಯಲ್ಲಿ ಬಸವಸ್ತುತಿ ರೂಪವಾದ ೧೧೧ ಭಾಮಿನಿ ಮತ್ತು ವಾರ್ಧಕ ಷಟ್ಪದಿಗಳಿವೆ. ಅದರ ಒಂದು ಪದ್ಯ ಇಂತಿದೆ:

ಬಸವ ಶರಣೆನೆ ಪಾಪವಳಿವುದು
ಬಸವ ಶರಣೆನೆ ತಾಪವಾರಿಗು
ಬಸವ ಶರಣೆನೆ ಪರಮಪಾವನಭೂತಿ ಸಂಧಿಸುಗು
ಬಸವ ಶರಣೆನೆ ಭಕ್ತಿದೊರಕುಗು
ಬಸವ ಶರಣೆನೆ ಸಾರ್ಗು ಸುಸ್ಥಿತಿ
ಬಸವ ಶರಣೆನೆ ವಚನರಚನಾಸಿದ್ಧಿ ವರ್ತಿಸುಗು ।

ಸಂಪಾದನೆಯ ಚೆನ್ನಂಜೇದೇವರು ಸೇರಿಸಿದ "ಶಂಕರದೇವವಕಂದ"ದಲ್ಲಿ ೧೧೭ ಕಂದ ಪದ್ಯಗಳಿವೆ. ಇವು ಶಿವಸ್ತುತಿಗೆ ಮೀಸಲಾದುವು. ಇದರ ಒಂದು ಪದ್ಯ ಇಂತಿದೆ:

ಶಿವನೇ ಭವನೇ ಕರುಣಾ
ರ್ಣವನೇ ಶಶಿಧರನೆ ಹರನೆ ಗಿರಿಜಾವರನೇ
ನವೆವುತ್ತಿದೇನೆ ಭವರೋ
ಗವ ನಿಲಿಸಯ್ಯಾ ಪ್ರಸನ್ನಶಂಕರಲಿಂಗಾ ॥

ಸಂಪಾದನೆಯ ಚೆನ್ನಂಜೇದೇವನನ್ನು ಷಟ್ಸ್ಥಲ ಚಕ್ರವರ್ತಿ ಎಂದು ತರುವಾಯದವರು ಸಂಬೋಧಿಸಿರುವುದನ್ನು ಗಮನಿಸಿದರೆ ಈತನಿಗೆ ವೀರಶೈವ ಧರ್ಮದ ಬಗೆಗೆ ಇದ್ದ ಅಪಾರ ಜ್ಞಾನದ ಅರಿವು ವೇದ್ಯವಾಗುತ್ತದೆ. ವಚನಗಳನ್ನು ಈತನು ವಿಂಗಡಿಸಿರುವ ನೂತನ ವಿಧಾನ ಅವಕ್ಕೆ ಆತನು ನಾಮಕರಣ ಮಾಡಿರುವ ವಿಶಿಷ್ಟ ಸ್ಥಲಾನುಕ್ರಮಣಿಕೆ, ಹಲವಾರು ವಚನಕಾರರ ಶ್ರೇಷ್ಠವಚನಗಳನ್ನು ಸಂಕಲಿಸಿ ಸಂದರ್ಭೋಚಿತವಾಗಿ ಕೋದಿರುವ ವಿಧಾನ ಈ ಎಲ್ಲ ಕಾರಣಗಳಿಂದ ಸಂಪಾದನಕಾರರಲ್ಲಿ ಚೆನ್ನಂಜೇದೇವನ ಹೆಸರು ಚಿರಸ್ಮರಣೀಯವಾಗಿದೆ.

# ಲಿಂಗಮಂತ್ರಿ

**ಈ**ತನು "ಕಬ್ಬಿಗರ ಕೈಪಿಡಿ" ಎಂಬ ನಿಘಂಟನ್ನು ಬರೆದಿದ್ದಾನೆ. ಇದು ಒಂದು ಹಳಗನ್ನಡ ನಿಘಂಟು. ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿರುವ ಈ ನಿಘಂಟಿನಲ್ಲಿ ೧೦೦ ಪದ್ಯಗಳಿವೆ. ಈತನು ವೀರಶೈವಕವಿ. ಈತನ ತಂದೆ ವಿರೂಪಾಕ್ಷ. ಈತನ ಕಾಲ ಕ್ರಿ.ಶ. ೧೫೩೦ ಎಂದು ಕರ್ಣಾಟಕ ಕವಿಚರಿತೆಕಾರರು ಹೇಳಿದ್ದಾರೆ. ಈ ನಿಘಂಟಿನ ಪ್ರಾರಂಭದಲ್ಲಿ:

ಶಿವಚರಣಯುಗ ಸಮಾಕಲಿತಾಂತರಂಗ ಶಿವ
ಕವಿನಿಕರ ಪಾದಪಂಕೇಜಾತಭೃಂಗ ಸ
ದ್ವಿವಿಧ ಮೃದುಶಬ್ದಸಾಹಿತ್ಯಪೀಯೂಷಾಬ್ಧಿಲಲಿತಲಹರೀತರಂಗ
ಅವಿರಳಾನಂದಯೋಗಿವ್ರಾತಸಂಗ ದು
ಷ್ಕವಿನಿಚಯ ಹೃದಯಾಂಧಕಾರಧೂರ ಪತಂಗ
ನವಮದನರೂಪ ವಿರುಪೆಯಲಿಂಗ ಪೇಟಿನೆಲ್ ಬಲ್ಲರಿದನಾಂ ಪೇಟ್ಟೆನು ॥ ೨ ॥

ಹೀಗೆ ಹೇಳಿಕೊಂಡಿದ್ದಾನೆ. ವಿದ್ವಾಂಸರು ಈ ನಿಘಂಟನ್ನು ಬರೆ ಎಂದು ಹೇಳಲು ತಾನು ಇದನ್ನು ಬರೆದುದಾಗಿ ತಿಳಿಸಿದ್ದಾನೆ. ಲಿಂಗಮಂತ್ರಿ ಸರಸಸಂಗೀತ ನಿಪುಣನೆಂದೂ ಬಹುಲಿಪಿಜ್ಞನೆಂದೂ, ರಾಯಭೂವರನ ಪ್ರಧಾನಿಯಾಗಿದ್ದನೆಂದೂ ಈ ಮುಂದಿನ ಪದ್ಯದಲ್ಲಿ ತಿಳಿಸಿದ್ದಾನೆ.

ಧುರಧೀರ ನುಗ್ಗೆಹಳ್ಳಿಯ ರಾಯ ಭೂವರನ
ಪರಮಪ್ರಧಾನ ಸುಕಲಾಪ್ರವೀಣಂ ಕೀರ್ತಿ
ಭರಿತದಿಗ್ವಳಯಂ ವಿರೂಪಾಕ್ಷ ಪಾದಾರವಿಂದ ಮಕರಂದ ಭೃಂಗಂ ।
ಸರಸ ಸಂಗೀತ ನಿಪುಣಂ ಬಹುಲಿಪಿಜ್ಞ ಭೂ
ಸುರವರ ವಿರೂಪಾಕ್ಷಸುತ ಲಿಂಗಮಂತ್ರಿಪಂ
ವಿರಚಿಸಿದ ಕಬ್ಬಿಗರ ಕೈಪಿಡಿಯನಂಗೀಕರಿಪುದಖಿಲ ಸುಜನರ್ಕಳು ॥ ೧೦೦ ॥

'ಕಬ್ಬಿಗರ ಕೈಪಿಡಿ' ಷಟ್ಪದಿಯಲ್ಲಿ ರಚಿತವಾಗಿರುವ ನಿಘಂಟುಗಳಲ್ಲಿ ಬಹುಶಃ ಮೊದಲನೆಯದಾಗಿದೆ. ಈ ನಿಘಂಟಿನ ಸ್ವರೂಪವನ್ನೂ ಇದರ ರಚನೆಗೆ ಕಾರಣವನ್ನೂ ಈ ನಿಘಂಟಿನ ನಾಮಧೇಯವನ್ನೂ ಈ ಮುಂದಿನ ಪದ್ಯದಲ್ಲಿ ವಿವರಿಸಿದ್ದಾನೆ.

ಮಿಸುಪಗೂಢಪ್ರಯೋಗದೊಳ್ಪಂ ರಸಮ
ನೊಸರ್ವಚ್ಚಗನ್ನಡದ ಚೆಲ್ವುಮಂ ತದ್ಭವದ
ಬೆಸುಗೆಯಂ ದೇಶೀಯಕಮರ್ದ ಸೊಂಪಂ ತೊಳಪ ತತ್ಸಮದ ಬಿನ್ನಣವನು
ಉಸುರೆಂದು ಕೋವಿದರ್ ಬೆಸಸಲಾನಿದಕೆ ಶೋ
ಭಿಸುವ ಕಬ್ಬಿಗರಕೈಪಿಡಿಯೆಂದು ಪೆಸರನಿ
ತ್ತೊಸೆದು ಪೇಟ್ದಪೆನು ಲಾಲಿಸುವುದಾವಾಗಳುಂ ರಸಿಕಜನರಚ್ತೆಯಿಂದ ॥ ೩ ॥

ಈ ನಿಘಂಟಿನಲ್ಲಿ ಹಳಗನ್ನಡ ಶಬ್ದಗಳಿಗೆ ಅರ್ಥಗಳನ್ನು ಕೊಡಲಾಗಿದೆ. ಇದರಲ್ಲಿ ಶಬ್ದಮಣಿದರ್ಪಣ, ಶಬ್ದಸಾರ ಮೊದಲಾದ ಪ್ರಾಚೀನ ನಿಘಂಟುಗಳಲ್ಲಿನ ಶಬ್ದಗಳೆಲ್ಲವೂ ಸೇರ್ಪಡೆಯಾಗಿವೆ.

ಕಬ್ಬಿಗರ ಕೈಪಿಡಿ ಆಕಾಲಕ್ಕೆ ತುಂಬ ಪ್ರಸಿದ್ಧವಾದ ನಿಘಂಟಾಗಿತ್ತು. ಇದಕ್ಕೆ ನಿದರ್ಶನವೆಂಬಂತೆ ಹತ್ತೊಂಬತ್ತನೆಯ ಶತಮಾನದಲ್ಲಿದ್ದ ಹೆಸರಘಟ್ಟದ ಹೊನ್ನಪ್ಪ ಕಬ್ಬಿಗರ ಕೈಪಿಡಿಗೆ 'ಚಕೋರ ಚಂದ್ರಿಕೆ' ಎಂಬ ಹೆಸರಿನಲ್ಲಿ ಒಂದು ಟೀಕನ್ನು ಬರೆದಿದ್ದಾನೆ. ಕಬ್ಬಿಗರ ಕೈಪಿಡಿಯಲ್ಲಿ ಹಳಗನ್ನಡ ಶಬ್ದಗಳಿಗೆ ಅರ್ಥಗಳನ್ನು ನಿರೂಪಿಸಿರುವ ವಿಧಾನಕ್ಕೆ ದೃಷ್ಟಾಂತವಾಗಿ ಒಂದು ಪದ್ಯವನ್ನು ನೋಡಬಹುದು.

ಜಗದೊಳಟಿವೆಣ್ಣೆನಲ್ ತಾನಲ್ಪತರುಣಿ ಬಿ
ತ್ತಿಗವೆಣ್ಣೆನಲ್ ಪ್ರೌಢೆ ಪಚ್ಚೆವೆಣ್ಣುಂ ಬಂಜೆ
ಮಿಗೆ ಚೆಲ್ಲಗಾರ್ತಿಯೆನೆ ಸರಸವತಿ ನೆಱೆ ಹುರುಡಿಪಾ ಸತಿಯೆ ಹೂಜೆಗಾರ್ತಿ
ಬಗೆಯೆ ಸಬ್ಬವಗಾರ್ತಿಯೆನೆ ಮೇಳದಾಕೆ ಪ
ಚ್ಚುಗೆಗಾರ್ತಿಯೆಂದಡೇಕಾಂತದವಳಿನ್ನು ಚೆ
ಲ್ವೊಗೆದ ಮಲ್ಲಳಿಗಾರ್ತಿಯೆನೆ ಸುತ್ತಿಬರ್ಪಾಕೆಯೆಂದು ಪೇೞ್ವರ್ ಸುಗುಣರು ॥ ೨೭ ॥

ಈ ಪದ್ಯಕ್ಕೆ ಹೆಸರುಘಟ್ಟದ ಹೊನ್ನಪ್ಪ ಬರೆದಿರುವ ಟೀಕು ಇಂತಿದೆ:

ಜಗದೊಳು-ಪ್ರಪಂಚದಲ್ಲಿ, ಅಟಿವೆಣ್ಣಿನಲ್-ಅಳಿವೆಣ್ಣೆನಲಾಗಿ, ತಾನು-ಈ ಹೆಸರುವುಳ್ಳವಳು. ಅಲ್ಪತರುಣಿ, ಅಲ್ಪ-ಸ್ವಲ್ಪವಾದ, ತರುಣಿ-ಸ್ತ್ರೀಯೂ (ಕುತ್ಸಿತಳೂ), ಬಿತ್ತಿಗವೆಣ್ಣಿನಲ್-ಬಿತ್ತಿಗವೆಣ್ಣೆನಲಾಗಿ, ಪ್ರೌಢೆ-ವಿವೇಕಿಗಾಗುವದು (ಜಾಣೆಯು), ಪಚ್ಚೆವೆಣ್ಣು-ಪಚ್ಚೆವೆಣ್ಣೆಂಬವಳು, ಬಂಜೆ-ಮಕ್ಕಳನ್ನು ಹೆರದವಳು, ಮಿಗೆ-ಚೆನ್ನಾಗಿ, ಚಲ್ಲೆಗಾರ್ತಿಯೆನೆ-ಚಲ್ಲೆಗಾರ್ತಿಯೆನಲಾಗಿ, ಸರಸವತಿ-ಸರಸಗಾತಿಯೂ (ವಿನೋದಗಾತಿಯೂ), ನೆಱೆ-ಕ್ರಮವಾಗಿಯೇ, ಹುರುಡಿಪಾಸತಿಯೆ-ಹುರುಡುಮಾಡುವಂಥಾ ಸ್ತ್ರೀಯಳೇ, ಹೂಜೆಗಾರ್ತಿ-ಹೂಜೆಗಾತಿಯೆಂದಾಗುವದು, ಬಗೆಯೆ-ಯೋಚಿಸಲು, ಸಬ್ಬವಗಾರ್ತಿಯೆನೆ-ಸಬ್ಬವಗಾರ್ತಿ ಯೆನಲಾಗಿ, ಏಕಾಂತದವಳು-ರಹಸ್ಯಸ್ಥಾನಕ್ಕೆ ಯೋಗ್ಯಳು, ಇನ್ನು-ಮತ್ತೆ, ಚೆಲ್ವೊಗೆದ-ಸೊಗಸಾದ, ಮಲ್ಲಳಿಗಾರ್ತಿಯೆನೆ-ಮಲ್ಲಳಿಗಾರ್ತಿಯೆನಲಾಗಿ, ಸುತ್ತಿಬರ್ಪಾಕೆ-ತಿರುಗುವವಳು, ಸುತ್ತು-ವೇಷ್ಟನೇ ಇತಿಧಾತುಃ ಎಂದು-ಎಂಬುದಾಗಿ, ಸುಗುಣರು-ತಿಳಿದಂಥಾ ವಿದ್ವಾಂಸರು, ಪೇೞ್ವರು-ಹೇಳುವರು ॥ ೨೭ ॥

ಹಳಗನ್ನಡ ನಿಘಂಟುಗಳ ಸಾಲಿನಲ್ಲಿ ಲಿಂಗಮಂತ್ರಿಯು 'ಕಬ್ಬಿಗರ ಕೈಪಿಡಿ'ಗೆ ಒಂದು ಮಹತ್ವದ ಸ್ಥಾನವಿದೆ ಎಂದು ಹೇಳಬಹುದಾಗಿದೆ.

■

# ಬಸವಪ್ಪಶಾಸ್ತ್ರಿಗಳ ಬದುಕು-ಬರಹ

ಹತ್ತೊಂಬತ್ತನೆಯ ಶತಮಾನ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅತ್ಯಂತ ಪ್ರಮುಖವಾದುದು. ಸಂಸ್ಕೃತದ ಪುರಾಣ ಇತಿಹಾಸ ಕಾವ್ಯ ನಾಟಕಾದಿ ಗ್ರಂಥಗಳು ವಿಶೇಷವಾಗಿ ಕನ್ನಡಕ್ಕೆ ಪರಿವರ್ತನೆಗೊಂಡದ್ದು ಈ ಶತಮಾನದಲ್ಲಿ. ಸುಮಾರು ಐವತ್ತಕ್ಕೂ ಮಿಗಿಲಾದ ಕೃತಿಗಳನ್ನು ರಚಿಸಿದ ಮುಮ್ಮಡಿ ಕೃಷ್ಣರಾಜ (ಕ್ರಿ.ಶ. ೧೭೯೪-೧೮೬೮) ಈ ಶತಮಾನದ ಕೇಂದ್ರಬಿಂದು. ಅಭಿನವ ಭೋಜರಾಜನೆಂದು ಕೀರ್ತಿವೆತ್ತಿದ್ದ ಇವರ ಆಸ್ಥಾನ ಕವಿಗಳಿಂದಲೂ ಪಂಡಿತರಿಂದಲೂ ವಿದ್ವಾಂಸರಿಂದಲೂ ಸಂಗೀತಗಾರರಿಂದಲೂ ಕಲಾವಿದರಿಂದಲೂ ವಿಜೃಂಭಿತವಾಗಿತ್ತು. ಇವರೆಲ್ಲರಿಗೂ ಮುಮ್ಮಡಿ ಕೃಷ್ಣರಾಜರು ಕಾಮಧೇನುವೂ ಕಲ್ಪವೃಕ್ಷವೂ ಆಗಿದ್ದರು. ದಾತೃತ್ವ ವಿದ್ವತ್ಪಕ್ಷಪಾತ ಎಂಬ ಗುಣಗಳಿಗೆ ತವರುಮನೆಯಾಗಿದ್ದರು. ವಿದ್ವತ್ಪ್ರಭುವಾಗಿ ವಿದ್ವಾಂಸರಿಗೆ ಪೋಷಕರಾಗಿದ್ದರು. ಧರ್ಮೈಕಪರಾಯಣರೂ ಆಗಿದ್ದರು. ಇವರ ಆಶ್ರಯದಲ್ಲಿ ಮುದ್ರಾಮಂಜೂಷವನ್ನು ಬರೆದ ಕೆಂಪುನಾರಾಯಣ (೧೮೨೩) ತಾರಾಶಶಾಂಕ ಎಂಬ ಯಕ್ಷಗಾನವನ್ನು ಬರೆದ ಸುಬ್ರಹ್ಮಣ್ಯ (೧೮೩೦) ಕೃಷ್ಣರಾಜ ಡೋಳೋತ್ಸವ ಚರಿತೆಯನ್ನು ಬರೆದ ಸೋಬಾನೆ ರಂಗನಾಥ (೧೮೩೦) ಕೃಷ್ಣರಾಜ ವರ್ಷವರ್ಧಂತೀಶತಕವನ್ನು ಬರೆದ ಶ್ರೀನಿವಾಸ (೧೮೩೦) ಕೃಷ್ಣರಾಜೇಂದ್ರ ವಿಲಾಸವನ್ನು ಬರೆದ ಮದ್ದಗಿರಿ ನಂಜಪ್ಪ (೧೮೪೦), ಕೃಷ್ಣರಾಜ ಪಟ್ಟಾಭಿಷೇಕ ವರ್ಣನೆ, ಕೃಷ್ಣರಾಜ ಭೋಗಾವಳಿ, ಕೃಷ್ಣರಾಜ ಶೃಂಗಾರಶತಕ, ಕೃಷ್ಣರಾಜೇಂದ್ರ ವೃತ್ತ ರತ್ನಾವಳೀ ಟೀಕೆ, ಕೃಷ್ಣೇಂದ್ರ ಗೀತೆ – ಮೊದಲಾದ ಅನೇಕ ಕೃತಿಗಳನ್ನು ಬರೆದಿರುವ ದೇವಲಾಪುರದ ನಂಜುಂಡ ಕವಿ (೧೮೪೧) ಸುಮಾರು ಐವತ್ತಕ್ಕೂ ಹೆಚ್ಚು ಕೃತಿಗಳನ್ನು ಬರೆದಿರುವ ಅಳಿಯಲಿಂಗರಾಜ ಅರಸರು (೧೮೨೩-೧೮೭೪) ಬಾಳಿ ಬೆಳಗಿದ್ದಾರೆ. ಅಳಿಯಲಿಂಗರಾಜ ಅರಸರು ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಉದ್ದಾಮ ಪಂಡಿತರು. ಸಂಗೀತ ಕಲೆಯಲ್ಲಿ ನಿಪುಣರು. ಚಂಪು, ಸಾಂಗತ್ಯ, ಷಟ್ಪದಿ, ಯಕ್ಷಗಾನ, ಶತಕ, ಹಾಡು, ಲಾವಣಿ –ಇವೇ ಮೊದಲಾದ ಪ್ರಕಾರಗಳಲ್ಲಿ ಕೃತಿರಚನೆಗೈದು ತನ್ನ ಸರ್ವತೋಮುಖವಾದ ಕವಿತಾಶಕ್ತಿಯನ್ನು ಪ್ರದರ್ಶಿಸಿದ್ದಾರೆ. 'ಉಭಯ ಕವಿತಾವಿಶಾರದ' ಎಂಬ ಬಿರುದಿಗೆ ಪಾತ್ರನಾಗಿದ್ದ ಈತ ಬಸವಪ್ಪ ಶಾಸ್ತ್ರಿಗಳಿಗೆ ರಕ್ಷಾಗುರುವೂ ಶಿಕ್ಷಾಗುರುವೂ ಆಗಿದ್ದರೆಂಬುದು ಅತ್ಯಂತ ಪ್ರಮುಖವಾದ ವಿಷಯವಾಗಿದೆ.

ಬಸವಪ್ಪ ಶಾಸ್ತ್ರಿಗಳ ಪೂರ್ವಜರು ಬೆಂಗಳೂರು ಜಿಲ್ಲೆಯ ಮಾಗಡಿ ತಾಲ್ಲೂಕು ನಾರಸಂದ್ರ ಗ್ರಾಮದವರು. ಇವರ ಪಿತಾಮಹರಾದ ವೇದಮೂರ್ತಿ ಮುರುಡುಬಸವಸ್ವಾಮಿಗಳು ನಾರಸಂದ್ರದ ರುದ್ರಾಕ್ಷಿ ಮಠಾಧ್ಯಕ್ಷರಾಗಿದ್ದರು. ಇವರು ವೇದಾಗಮ ಶಾಸ್ತ್ರಗಳಲ್ಲಿ ಪಾರಂಗತರಾಗಿದ್ದರು. ಇವರ ಪುತ್ರರು ಮಹಾದೇವಶಾಸ್ತ್ರಿಗಳು. ಇವರು ತಮ್ಮ ತಂದೆಯವರಿಂದಲೇ ವಿದ್ಯಾಭ್ಯಾಸವನ್ನು ಪಡೆದು ವೇದಾಧ್ಯಯನ ಪಾರಂಗತರಾದರು. ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಆಳವಾದ ಪಾಂಡಿತ್ಯವನ್ನು ಪಡೆದುಕೊಂಡರು. ಒಮ್ಮೆ ಮುಮ್ಮಡಿ ಕೃಷ್ಣರಾಜ ಒಡೆಯರು ರುದ್ರಾಕ್ಷಿ ಮಠಕ್ಕೆ ದಯಮಾಡಿಸಿದ್ದಾಗ ಮಹಾದೇವ ಶಾಸ್ತ್ರಿಗಳು ಮಹಾಸ್ವಾಮಿಗಳನ್ನು ವೇದೋಕ್ತವಾಗಿ ಆಶೀರ್ವದಿಸಿದರು. ಅದರಿಂದ ಪ್ರಭಾವಿತರಾಗಿ ಶಾಸ್ತ್ರಿಗಳ ಅಪಾರವಿದ್ವತ್ತನ್ನು ಅರಿತ ಕೃಷ್ಣರಾಜಒಡೆಯರು ಮೈಸೂರಿಗೆ ಬಂದು ಅರಮನೆ ಪುರೋಹಿತರಾಗಿರಬೇಕೆಂದು ಶಾಸ್ತ್ರಿಗಳನ್ನು ಕೇಳಿಕೊಂಡರು. ಮಹಾಸ್ವಾಮಿಗಳ ಕೋರಿಕೆಯ ಮೇರೆಗೆ ಮಹಾದೇವ ಶಾಸ್ತ್ರಿಗಳು ಮೈಸೂರಿನಲ್ಲಿ ಬಂದು ನೆಲಸಿದರು. ಇವರನ್ನು ಮುಮ್ಮಡಿ ಕೃಷ್ಣರಾಜರು ಸಮ್ಮುಖಪುರೋಹಿತರನ್ನಾಗಿ ನೇಮಿಸಿಕೊಂಡರು. ಇವರೊಂದಿಗೆ ವೇದಾಂತಾನುಭವ

ಮಾಡುತ್ತಿದ್ದರು. ಆಸ್ಥಾನದ ಎಲ್ಲ ವಿದ್ವಾಂಸರೂ ಮಹಾದೇವ ಶಾಸ್ತ್ರಿಗಳನ್ನು ಗೌರವಾದರಗಳಿಂದ ಕಾಣುತ್ತಿದ್ದರು. 'ಪುರೋಹಿತ ಸ್ವಾಮಿ' ಎಂಬ ಉಪನಾಮ ಶಾಸ್ತ್ರಿಗಳಿಗೆ ಪ್ರಾಪ್ತವಾಯಿತು.

ಮಹಾದೇವ ಶಾಸ್ತ್ರಿಗಳ ಧರ್ಮಪತ್ನಿ ಬಸವಮ್ಮ. ಸಾಧ್ವಿ ಶಿರೋಮಣಿಯಾದ ಈಕೆ ಪತಿಭಕ್ತಿ ಪರಾಯಣಳಾಗಿ ಅವರಿಂದಲೇ ವಿದ್ಯಾಭ್ಯಾಸವನ್ನು ಕಲಿತು ಶರಣರ ವಚನಗಳು, ಗದುಗಿನ ಭಾರತ, ರಾಜಶೇಖರ ವಿಳಾಸ, ಜೈಮಿನಿ ಭಾರತವೇ ಮೊದಲಾದ ಪ್ರಾಚೀನ ಕಾವ್ಯಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದಳಂತೆ. ಸಂಗೀತದಲ್ಲಿ ಅಭಿರುಚಿ ಹೊಂದಿದ್ದ ಈಕೆ ವೀಣಾವಾದನವನ್ನು ಕಲಿತಿದ್ದಳಂತೆ. ಈಕೆಯ ಕಾವ್ಯವಾಚನ ವೀಣಾವಾದನಗಳನ್ನು ಕೇಳುವುದಕ್ಕೆ ಸುತ್ತುಮುತ್ತಲಿನ ಹೆಂಗಸರೆಲ್ಲ ಬಂದು ಸೇರುತ್ತಿದ್ದರಂತೆ. ಒಟ್ಟಿನಲ್ಲಿ ಈ ದಂಪತಿಗಳು ಎಲ್ಲರ ಪ್ರೀತಿವಿಶ್ವಾಸ ಗೌರವಗಳಿಗೆ ಪಾತ್ರರಾಗಿದ್ದರು. ಆದರೆ ಈ ದಂಪತಿಗಳಿಗೆ ಮಕ್ಕಳಿಲ್ಲದ ಚಿಂತೆ ಕಾಡುತ್ತಿತ್ತು. ಮಹಾದೇವ ಶಾಸ್ತ್ರಿಗಳಿಗೆ ಐವತ್ತು ವರ್ಷಗಳ ಮೇಲಾಗಿತ್ತು. ಬಸವಮ್ಮನಿಗೆ ಮಕ್ಕಳ ಮೇಲೆ ತುಂಬಾ ಅಕ್ಕರೆ. ಪುತ್ರಸಂತಾನಕ್ಕಾಗಿ ಅನೇಕ ದೇವರುಗಳಿಗೆ ಹರಕೆಹೊತ್ತಿದ್ದರು. ಬಸವ ಜಯಂತಿಯ ಪುಣ್ಯದಿನದಂದು ಚಾಮುಂಡಿಬೆಟ್ಟದ ದೊಡ್ಡಬಸವೇಶ್ವರನಿಗೆ ಭಕ್ತಿಪುರಸ್ಸರವಾಗಿ ಪೂಜೋಪಚಾರಗಳನ್ನು ಸಲ್ಲಿಸಿ ದಾನಧರ್ಮಗಳನ್ನು ಮಾಡಿದರು. ಅವರ ಬಯಕೆ ಈಡೇರಿತು. ಅವರು ಕಂಡ ಕನಸು ನನಸಾಯಿತು.

ಶುಭಕೃತ್ ವರ್ಷ (ಕ್ರಿ.ಶ. ೧೮೪೩)ದಲ್ಲಿ ಮಹಾದೇವ ಶಾಸ್ತ್ರಿಗಳ ಅಪರವಯಸ್ಸಿನಲ್ಲಿ ಪುತ್ರೋತ್ಸವವಾಯಿತು. ಬಸವಣ್ಣನ ವರಪ್ರಸಾದದಿಂದ ಹುಟ್ಟಿದ ಮಗುವಿಗೆ "ಬಸವಪ್ಪ" ಎಂದೇ ನಾಮಕರಣ ಮಾಡಿದರು. ಮಗುವಿನ ಬಾಲಲೀಲೆಗಳನ್ನು ನೋಡಿ ಸಂತೋಷಪಡುತ್ತಿದ್ದರು.

ಮಹಾದೇವ ಶಾಸ್ತ್ರಿಗಳು ಅರಮನೆಗೆ ಹೋಗುತ್ತಿದ್ದಾಗ ಮಗನನ್ನೂ ಜೊತೆಗೆ ಕರೆದುಕೊಂಡು ಹೋಗುತ್ತಿದ್ದರು. ಅಲ್ಲಿ ನಡೆಯುತ್ತಿದ್ದ ಪೂಜಾಮಹೋತ್ಸವವನ್ನು ಬಾಲಕ ಬಸವಪ್ಪಶಾಸ್ತ್ರಿ ಮಂತ್ರಮುಗ್ಧನಾಗಿ ನೋಡುತ್ತಿದ್ದನು. ಆಸ್ಥಾನದ ಎಲ್ಲರ ಗಮನವನ್ನು ತನ್ನತ್ತ ಕೇಂದ್ರೀಕರಿಸಿಕೊಂಡನು. ಶಿವಪೂಜಾ ಕಾಲದಲ್ಲಿ ಹಾಡುತ್ತಿದ್ದ ಸಿರಿನಂಜುಂಡಶತಕವನ್ನು ಆಸಕ್ತಿಯಿಂದ ಕೇಳುತ್ತಿದ್ದ ಬಸವಪ್ಪ ತಾನೂ ಅದನ್ನು ಹಾಡಲು ಕಲಿತುಕೊಂಡರು. ಈ ಬಾಲಕನ ಸ್ಮರಣಶಕ್ತಿಯನ್ನೂ ಪ್ರತಿಭೆಯನ್ನೂ ಮಹಾರಾಜರು ಮೆಚ್ಚಿಕೊಂಡರು.

ಬಾಲ್ಯದಲ್ಲಿ ತುಂಟನಾಗಿದ್ದ ಬಸವಪ್ಪ ತಂದೆ ಮಾಡುತ್ತಿದ್ದ ಶಿವಪೂಜೆಯನ್ನು ವೇದಾಧ್ಯಯನವನ್ನೂ ತಾನೂ ಅನುಕರಿಸುತ್ತಿದ್ದನು. ತಾಯಿ ಹಾಡುತ್ತಿದ್ದ ಕಾವ್ಯಗಳನ್ನು ತಾನೂ ಹಾಡಲು ಕಲಿತುಕೊಂಡನು. ತಂದೆತಾಯಿಯರ ಸಂಸ್ಕಾರವನ್ನು ಗರ್ಭೀಕರಿಸಿಕೊಂಡನು. ಬಸವಪ್ಪ ಐದುವರ್ಷದವನಾಗುವ ವೇಳೆಗೆ ಮಹಾದೇವ ಶಾಸ್ತ್ರಿಗಳು ಕೈಲಾಸವಾಸಿಗಳಾದರು. ದಿಕ್ಕುಗಾಣದಾದ ಬಸವಮ್ಮ ಮಗನ ಯೋಗಕ್ಷೇಮವನ್ನು ನೋಡಿಕೊಳ್ಳುವುದರ ಜೊತೆಗೆ ವಿದ್ಯಾಭ್ಯಾಸವನ್ನೂ ಮಾಡಿಸುತ್ತಿದ್ದಳು. ಕೆಲವು ವರ್ಷಗಳಾದ ಮೇಲೆ ಅನಾರೋಗ್ಯದಿಂದ ಬಸವಮ್ಮನೂ ತೀರಿಕೊಂಡಳು. ಬಸವಪ್ಪ ಅನಾಥನಾದ, ತಬ್ಬಲಿಯಾದ. ಆಗ ಆತನಿಗೆ ಕೇವಲ ಹತ್ತು ವರ್ಷಗಳಾಗಿದ್ದುವು.

ನಿರ್ಗತಿಕನಾದ ಬಸವಪ್ಪ ಗೊತ್ತುಗುರಿಯಿಲ್ಲದೆ ಅಲೆದಾಡುತ್ತ ಸಿಕ್ಕಿದ್ದನ್ನು ತಿಂದುಕೊಂಡು ತಂದೆಯಿಂದ ಕಲಿತುಕೊಂಡ ಹಾಡುಗಳನ್ನು ಹಾಡುತ್ತ ಎಲ್ಲೆಂದರಲ್ಲಿ ಮೈಮರೆತುಬಿಡುತ್ತಿದ್ದನು. ಚಾಮುಂಡಿಬೆಟ್ಟ ಆತನಿಗೆ ಆಶ್ರಯಧಾಮವೆನಿಸಿತು. ಹೀಗಿರುವಲ್ಲಿ ಒಮ್ಮೆ ಅರಮನೆಯ ಅಂಬಾವಿಲಾಸ ತೊಟ್ಟಿಯ ಮೆಟ್ಟಲಿನ ಮೇಲೆ ಕುಳಿತು ಸಿರಿನಂಜುಂಡ ಶತಕ ಪದ್ಯಗಳನ್ನು ಪರವಶನಾಗಿ ಸುಶ್ರಾವ್ಯವಾಗಿ ಹಾಡುತ್ತಿದ್ದನು. ಇದನ್ನು ಕೇಳುತ್ತಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರು ಆತನ ರಾಗಾಲಾಪನೆಗೆ ಮಾರುಹೋಗಿ ಆ ಬಾಲಕ ಮಹಾದೇವ ಶಾಸ್ತ್ರಿಗಳ ಮಗನೆಂದು ಗುರುತಿಸಿ ಬಸವಪ್ಪನ ಎಲ್ಲ ಮೇಲ್ವಿಚಾರಣೆಗೂ ವ್ಯವಸ್ಥೆ ಮಾಡಿದರು. ಆತನನ್ನು ತಮ್ಮ ಪೂಜಾಗೃಹಕ್ಕೆ ಸೇರಿಸಿಕೊಂಡರು.

ಒಮ್ಮೆ ನವರಾತ್ರಿಯಂದು ಏರ್ಪಡಿಸಿದ್ದ ಸಭೆಯಲ್ಲಿ ಬಾಲಕ ಬಸವಪ್ಪ ಅರಸರ ಅಪೇಕ್ಷೆಯಂತೆ ಸ್ತೋತ್ರಪಠನ ಮಾಡಿದ. ಅದನ್ನು ಕೇಳಿದ ಸಭಾಸದರೆಲ್ಲ ಬೆಚ್ಚಿ ಬೆರಗಾದರು. ಸಭೆಯಲ್ಲಿದ್ದ ಅಳಿಯ ಲಿಂಗರಾಜರು ಈ ಬಾಲಕನ ಅಸಾಧಾರಣ ಪ್ರತಿಭೆಗೂ ಮಧುರಕಂಠಶ್ರೀಗೂ ಮಾರುಹೋದರು. ಮಹಾರಾಜರ ಅಪೇಕ್ಷೆಯಂತೆ ಬಸವಪ್ಪನ ವಿದ್ಯಾಭ್ಯಾಸದ

ಸಂಪೂರ್ಣ ಜವಾಬ್ದಾರಿಯನ್ನು ತಾವೇ ವಹಿಸಿಕೊಂಡರು. ಗರಳಪುರಿಶಾಸ್ತ್ರೀ, ಬಿ. ಮಲ್ಲಪ್ಪ ಮೊದಲಾದ ಶ್ರೇಷ್ಠವಿದ್ವಾಂಸರಿಂದ ವಿದ್ಯಾಭ್ಯಾಸ ಮಾಡಿಸಿದರು. ಸಂಗೀತ ಶಾಸ್ತ್ರಾಧ್ಯಯನಕ್ಕೂ ವ್ಯವಸ್ಥೆ ಮಾಡಿದರು. ಬಸವಪ್ಪ ಈ ಗುರುಗಳ ಸಾನ್ನಿಧ್ಯದಿಂದ ರಘುವಂಶ, ಕುಮಾರಸಂಭವ, ಮೇಘದೂತ ಮೊದಲಾದ ಕಾವ್ಯಗಳನ್ನು ಕಂಠಪಾಠಮಾಡಿಕೊಂಡನು. ತರ್ಕ, ವ್ಯಾಕರಣ, ಅಲಂಕಾರಶಾಸ್ತ್ರಗಳಲ್ಲಿ ಪರಿಣತಿಯನ್ನು ಪಡೆದನು. ಕರ್ಣಾಟಕ ಸಂಸ್ಕೃತ ಭಾಷೆಗಳೆರಡರಲ್ಲೂ ಅಮೋಘ ಪಾಂಡಿತ್ಯವನ್ನು ಗಳಿಸಿದನು.

ಹದಿನೆಂಟನೆಯ ವಯಸ್ಸಿನಲ್ಲಿ ಬಸವಪ್ಪ ಶಾಸ್ತ್ರಿಗಳು 'ಕೃಷ್ಣರಾಜಾಭ್ಯುದಯ' ಎಂಬ ಚಂಪೂಗ್ರಂಥವನ್ನು ಬರೆದು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಅರ್ಪಿಸಿದರು. ಸಂಸ್ಕೃತದಲ್ಲಿ 'ಬಿಲ್ವವೃಕ್ಷ ಪೂಜಾವಿಧಿ' ಎಂಬ ಕೃತಿಯನ್ನು ಬರೆದರು. ತಮ್ಮ ತಂದೆಯವರಿಂದ ಬಳುವಳಿಯಾಗಿ ಬಂದ ಅರಮನೆಯ ಪೌರೋಹಿತ್ಯ ತಮಗೆ ಪ್ರಾಪ್ತವಾಯಿತು. ಬಸವಪ್ಪ ಶಾಸ್ತ್ರಿಗಳು 'ಪುರೋಹಿತಸ್ವಾಮಿ' ಆದರು. ಅವರಿಗೆ ದಿವಾನ್ ರಂಗಾಚಾರ್ಯ ಅಂಬಿಗಲ್ ನರಸಿಂಹ ಅಯ್ಯಂಗಾರ್, ವ್ಯಾಕರಣದ ಮಲ್ಲಪ್ಪ, ಯಜಮಾನ್ ವೀರಸಂಗಪ್ಪ, ಸಾಹುಕಾರ ನೀಲಿಗಿರಿ ಪಾಪಣ್ಣ ಮೊದಲಾದ ಪ್ರಮುಖರ ಪ್ರೋತ್ಸಾಹ ದೊರೆಯಿತು. ಆಸ್ಥಾನಕವಿ ಎಂಬ ಬಿರುದಿಗೂ ಪಾತ್ರರಾದರು.

ಮುಮ್ಮಡಿ ಕೃಷ್ಣರಾಜ ಒಡೆಯರ್ ೧೮೬೮ನೆಯ ಮಾರ್ಚಿ ೨೭ ರಂದು ದೈವಾಧೀನರಾದರು. ಅವರ ದತ್ತುಪುತ್ರರಿಂದ ಏಳುವರ್ಷದ ಚಾಮರಾಜ ಒಡೆಯರಿಗೆ ೧೮೬೮ನೆಯ ಸೆಪ್ಟೆಂಬರ್ ೩ ರಂದು ಪಟ್ಟಾಭಿಷೇಕವಾಯಿತು. ಚಾಮರಾಜರು ಪ್ರಾಪ್ತವಯಸ್ಕರಾಗುವವರೆಗೂ ರಂಗಾಚಾರ್ಯರೇ ರಾಜ್ಯಭಾರದ ಮೇಲ್ವಿಚಾರಣೆಯನ್ನು ಹೊತ್ತು ಚಾಮರಾಜರ ವಿದ್ಯಾಭ್ಯಾಸ ಯೋಗಕ್ಷೇಮಗಳನ್ನು ನೋಡಿಕೊಳ್ಳುತ್ತಿದ್ದರು. ಈ ಕಾರ್ಯದಲ್ಲಿ ಬಸವಪ್ಪಶಾಸ್ತ್ರಿಗಳೂ ಪ್ರಮುಖ ಪಾತ್ರವಹಿಸಿ ರಂಗಾಚಾರ್ಯರಿಗೆ ಒತ್ತಾಸೆಯಾಗಿ ನಿಂತರು. ಚಾಮರಾಜರಿಗೆ ವಿದ್ಯಾಗುರುಗಳಾಗಿ ರಾಜಗುರು ಎನಿಸಿಕೊಂಡರು.

ಚಾಮರಾಜಒಡೆಯರ್ ೧೮ನೆಯ ವಯಸ್ಸಿನಲ್ಲಿ ರಾಜ್ಯಾಧಿಕಾರವನ್ನು ವಹಿಸಿಕೊಂಡರು. ರಂಗಾಚಾರ್ಯರು ದಿವಾನರಾದರು. ಬಸವಪ್ಪಶಾಸ್ತ್ರಿಗಳು ಮಹಾರಾಜರ ಸಲಹಾಮಂಡಲಿಯ ಪ್ರಮುಖ ಸದಸ್ಯರಾದರು. ಬಸವಪ್ಪಶಾಸ್ತ್ರಿಗಳ ಪ್ರತಿಭೆ ಸಂಪೂರ್ಣವಾಗಿ ಬೆಳಕುಕಂಡು ಅವರು ಅಪಾರ ಖ್ಯಾತಿಯನ್ನು ಗಳಿಸಿದ್ದು ಚಾಮರಾಜ ಒಡೆಯರ ಆಸ್ಥಾನದಲ್ಲಿ.

ಬಸವಪ್ಪಶಾಸ್ತ್ರಿಗಳ ಸಾಂಸಾರಿಕ ಜೀವನದ ಸಂಗತಿಗಳು ಅಸ್ಪಷ್ಟವಾಗಿವೆ. ಈವರೆಗೆ ತಿಳಿದುಬಂದಿರುವ ಸಂಗತಿಗಳು ಇಂತಿವೆ: ಬಸವಪ್ಪಶಾಸ್ತ್ರಿಗಳಿಗೆ ಇಬ್ಬರು ಹೆಂಡತಿಯರಂತೆ. ಮೊದಲನೆಯವರ ಹೆಸರು ತಿಳಿದುಬಂದಿಲ್ಲ. ಇವರು ಬೀರೂರು ಮಠಕ್ಕೆ ಸೇರಿದವರಂತೆ. ಇವರಿಗೆ ಮಕ್ಕಳಾಗದಿದ್ದುದರಿಂದ ಬಸವಪ್ಪ ಶಾಸ್ತ್ರಿಗಳ ಕೋಳೂರಿನ ಚೆನ್ನಮ್ಮ ಎಂಬುವರನ್ನು ಮದುವೆಯಾದರಂತೆ. ಕಾಲಾಂತರದಲ್ಲಿ ಇಬ್ಬರು ಪತ್ನಿಯರಿಗೂ ಸಂತಾನಪ್ರಾಪ್ತಿಯಾಗುವುದು. ಹಿರಿಯ ಹೆಂಡತಿಗೆ ಮಹಾದೇವಸ್ವಾಮಿ ಎಂಬ ಮಗನೂ ಸಾವಿತ್ರಿ ಎಂಬ ಮಗಳೂ ಜನಿಸಿದರು. ಆದರೆ ೧೨ನೆಯ ವಯಸ್ಸಿನಲ್ಲಿ ಮಹದೇವಸ್ವಾಮಿಯೂ ೮ನೆಯ ವಯಸ್ಸಿನಲ್ಲಿ ಸಾವಿತ್ರಿಯೂ ತೀರಿಕೊಂಡರು. ಮಗಳ ನೆನಪಿಗಾಗಿ ಸಾವಿತ್ರೀ ಚರಿತ್ರೆಯನ್ನು ಬರೆದರಂತೆ. ಕಿರಿಯ ಹೆಂಡತಿ ಚೆನ್ನಮ್ಮನವರಿಗೆ ಬಸಮ್ಮ ಮತ್ತು ಮಹದೇವಶಾಸ್ತ್ರಿ ಎಂಬ ಇಬ್ಬರು ಮಕ್ಕಳು. ಬಸಮ್ಮನನ್ನು ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕು ಕೇರಳಾಪುರದ ಕುಳ್ಳಯ್ಯನವರಿಗೆ ಕೊಟ್ಟು ವಿವಾಹವಾಗಿತ್ತು. ಬಸವಪ್ಪ ಶಾಸ್ತ್ರಿಗಳ ಮರಣಾನಂತರ ಮಹದೇವಶಾಸ್ತ್ರಿ ತಾಯಿಯೊಂದಿಗೆ ಅಕ್ಕನ ಮನೆಯಲ್ಲಿ ಉಳಿದುಕೊಂಡರಂತೆ. ಮಹದೇವ ಶಾಸ್ತ್ರಿಗಳೂ ಚಾಮರಾಜರ ಆಸ್ಥಾನವಿದ್ವಾಂಸರಾಗಿದ್ದರು.

ಬಸವಪ್ಪಶಾಸ್ತ್ರಿಗಳು ಉತ್ತಮ ಗಮಕಿಗಳಾಗಿದ್ದರು. ಕಾವ್ಯವಾಚನ ಅವರಿಗೆ ಕರಗತವಾಗಿತ್ತು. ಅವರ ಕಂಠಶ್ರೀಗೆ ಮುಮ್ಮಡಿ ಕೃಷ್ಣರಾಜರು ಮಾರುಹೋಗಿದ್ದರು. ಗಮಕಕಲೆಯಲ್ಲಿ ಅಪೂರ್ವಸಾಧನೆ ಸಿದ್ಧಿಯನ್ನು ಗಳಿಸಿದ್ದರು. ಗದುಗಿನ ಭಾರತ, ರಾಜಶೇಖರವಿಳಾಸವೇ ಮೊದಲಾದ ಕಾವ್ಯಗಳನ್ನು ಭಾವಪೂರ್ಣವಾಗಿ ಹಾಡುತ್ತಿದ್ದ ಬಸವಪ್ಪಶಾಸ್ತ್ರಿಗಳ ಕಂಠಶ್ರೀಗೆ ಅನೇಕರು ಮರುಳಾಗಿದ್ದರು. ಸಾಹುಕಾರ್ ಪಾಪಣ್ಣನವರು ಬಸವಪ್ಪಶಾಸ್ತ್ರಿಗಳ ಕಾವ್ಯವಾಚನವನ್ನು ವಾರಕ್ಕೊಮ್ಮೆ ತಪ್ಪದೆ ಏರ್ಪಡಿಸುತ್ತಿದ್ದುದು ಇದಕ್ಕೆ ನಿದರ್ಶನವಾಗಿದೆ. ಈ ಬಗೆಗೆ ಅನೇಕ ಕಥೆಗಳು ಜನಜನಿತವಾಗಿವೆ. ಶ್ರೀ ಆರ್. ತಾತಾ ಅವರು ಹೇಳಿರುವ ಈ ಪದ್ಯ ಉಲ್ಲೇಖಾರ್ಹವಾಗಿದೆ:

ಬಿರಿವನ್ನಂ ನುಚ್ಚುನೂರಪ್ಪಿನಮೆರ್ದೆ ಬೆಳಗಲ್ ಬೆಳ್ಪಸಂ ಚಂದ್ರಿಕಾವಿ
ಸ್ತರಮಂ ತನ್ನೊಂದು ನಲ್ಗಬ್ಬದ ಗುಣಮೆ ಕರಂ ಮೌರ್ವಿಯಾಗಲ್ ಮನಂಗೊ
ಳ್ವರಸಕ್ಕಿಂಬಾದ ಪದ್ಯಂಗಳನೆರವಿಯರಲ್ಬಿಲ್ಲನಾಂತಣ್ಮೆ ಟಂಕಾ
ರರವಂದೀವುತ್ತಿರಲ್ಕಾ ಬಸವಕವಿ ವಚೋಧಾರಮೇಂ ಕರ್ಣಪೂರಂ ॥

ಬಸವಪ್ಪಶಾಸ್ತ್ರಿಗಳು ಆಶುಕವಿಗಳಾಗಿದ್ದರು. ಅವರ ಈ ಕಲೆಗೆ ಮಾರುಹೋದವರಲ್ಲಿ ನೀಲಗಿರಿ ಪಾಪಣ್ಣನವರು ಮೊದಲಿಗರು. ಪಾಪಣ್ಣನವರು ಮತ್ತು ಬಸವಪ್ಪಶಾಸ್ತ್ರಿಗಳವರ ಸ್ನೇಹ ಅಭೂತಪೂರ್ವವಾದುದು. ಶಾಸ್ತ್ರಿಗಳವರಿಗೆ ಅಪಾರವಾದ ದ್ರವ್ಯಸಹಾಯ ಮಾಡಿದ ಅಭಿಮಾನಿಗಳು ಪಾಪಣ್ಣನವರು. ಅಷ್ಟೇ ಪ್ರೀತ್ಯಾದರಗಳನ್ನು ಬಸವಪ್ಪ ಶಾಸ್ತ್ರಿಗಳು ಪಾಪಣ್ಣನವರ ಬಗೆಗೆ ಇರಿಸಿಕೊಂಡಿದ್ದರು. ತಂಜಾವೂರಿನ ಗಾಯಕಿಯೊಬ್ಬಳು ನರ್ತನಕ್ಕೆ ಬಂದಿದ್ದಾಗ ಆಕೆಯ ನೃತ್ಯಕ್ಕೆ ಹೊಂದುವ ಹಾಗೆ ಹಾಡುವ ಗಮಕಿ ಲಭ್ಯವಿಲ್ಲದಿದ್ದಾಗ ಚಾಮರಾಜಒಡೆಯರು ಬಸವಪ್ಪಶಾಸ್ತ್ರಿಗಳನ್ನು ಪ್ರಯಾಸದಿಂದ ಕರಸಿ ರಾಜಸಭೆಯ ಗೌರವವನ್ನು ಉಳಿಸಿಕೊಂಡರು. ತಂಜಾವೂರಿನ ನರ್ತಕಿ ಬಸವಪ್ಪಶಾಸ್ತ್ರಿಗಳ ಪ್ರತಿಭೆಗೆ ಮೆಚ್ಚಿ ಚಿನ್ನದ ನಶ್ಯದ ಡಬ್ಬಿಯನ್ನೂ ತಂಬೂರಿಯನ್ನೂ ನೀಡಿದಳಂತೆ.

ನಾಟಕ ಸಾಹಿತ್ಯಕ್ಕೆ ಮತ್ತು ನಾಟಕ ರಂಗಕ್ಕೆ ಬಸವಪ್ಪಶಾಸ್ತ್ರಿಗಳು ಸಲ್ಲಿಸಿರುವ ಸೇವೆ ಚಿರಕಾಲ ನಿಲ್ಲುವಂತಹುದು. ಅವರಿಗೆ ಲೋಕೋತ್ತರವಾದ ಕೀರ್ತಿಗೌರವಗಳೇ ಅಲ್ಲದೆ 'ಅಭಿನವ ಕಾಳಿದಾಸ' ಎಂಬ ಬಿರುದನ್ನು ಗಳಿಸಿಕೊಟ್ಟದ್ದು ಶಾಕುಂತಲ ನಾಟಕ. ಚಾಮರಾಜ ಒಡೆಯರ ಅಪೇಕ್ಷೆಯಂತೆ "ಚಾಮರಾಜೇಂದ್ರ ನಾಟಕ ಸಭೆ"ಯನ್ನು ಸ್ಥಾಪಿಸಿದರು. ಸಂಸ್ಕೃತದಿಂದ ಶಾಕುಂತಲ, ಉತ್ತರರಾಮಚರಿತೆ, ಚಂಡಕೌಶಿಕ, ರತ್ನಾವಳೀ, ವಿಕ್ರಮೋರ್ವಶೀಯ ಮೊದಲಾದ ನಾಟಕಗಳನ್ನು ಅನುವಾದಿಸಿ ಅವರನ್ನು ರಂಗದ ಮೇಲೆ ಪ್ರದರ್ಶಿಸಿದರು. ಹಾಗೆಯೇ ಷೇಕ್ಸ್‌ಪಿಯರನ ಒಥೆಲೋ ನಾಟಕವನ್ನು ಶೂರಸೇನಚರಿತೆಯಾಗಿ ಅನುವಾದಿಸಿ ಅದನ್ನೂ ರಂಗಪ್ರದರ್ಶನಕ್ಕೆ ಅಳವಡಿಸಿದರು. ಸಂಸ್ಕೃತ ಕನ್ನಡ ಭಾಷೆಗಳೆರಡರಲ್ಲೂ ಅಪಾರವಾದ ಪಾಂಡಿತ್ಯವನ್ನು ಗಳಿಸಿದ್ದ ಬಸವಪ್ಪಶಾಸ್ತ್ರಿಗಳು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಿಸಿದ ನಾಟಕಗಳು ಅತ್ಯುಚ್ಚಮಟ್ಟದವು ಎಂದು ಎಲ್ಲರಿಂದಲೂ ಪ್ರಶಂಸಿಸಲ್ಪಟ್ಟವು. ಅವರ ಶಾಕುಂತಲನಾಟಕವು ರಂಗದ ಮೇಲೆ ಪ್ರದರ್ಶನಗೊಂಡು ಅಪಾರ ಜನಮೆಚ್ಚುಗೆಯನ್ನು ತಂದುಕೊಟ್ಟಿತು. ವಿದ್ವಜ್ಜನ ಶಾಕುಂತಲ ನಾಟಕವನ್ನು ಕೊಂಡಾಡಿದರು. ಅವರಲ್ಲಿ ದಿವಾನ್ ರಂಗಾಚಾರ್ಯರೂ ಒಬ್ಬರು. ಅವರು ಬಸವಪ್ಪ ಶಾಸ್ತ್ರಿಗಳಿಗೆ 'ಅಭಿನವ ಕಾಳಿದಾಸ' ಎಂಬ ಬಿರುದನ್ನಿತ್ತು ಗೌರವಿಸಿದರು ಎಂಬುದನ್ನು ಪಿ.ಆರ್. ಕರಿಬಸವಶಾಸ್ತ್ರಿಗಳು:

ಕರ್ಣಾನಂದಮದಾಗಲ್
ಕರ್ಣಾಟಕಕಾಳಿದಾಸನೆಂಬೀ ಬಿರುದಂ
ತೂರ್ಣದಿನಿತ್ತಂ ವಿದ್ವ
ತ್ಪೂರ್ಣ ಸಭಾಮಂಡಲಿಯೊಳಗಾ ಮಂತ್ರೀಶಂ

ಈ ಪದ್ಯದಲ್ಲಿ ಉಲ್ಲೇಖಿಸಿದ್ದಾರೆ.

ಬಸವಪ್ಪ ಶಾಸ್ತ್ರಿಗಳ ಬದುಕು ವೈವಿಧ್ಯಪೂರ್ಣವಾದುದು. ಜೀವನದಲ್ಲಿ ಸುಖದುಃಖಗಳೆರಡನ್ನೂ ಕಂಡುಂಡವರು. ರಸಿಕರಾಗಿದ್ದ ಶಾಸ್ತ್ರಿಗಳು ಅಪಾರ ಅಭಿಮಾನಿಗಳನ್ನು ಹೊಂದಿದ್ದರು. ಅವರ ವಿದ್ವತ್ತಿಗೆ ಮಾರುಹೋದವರು ಅನೇಕರು. ಎಲ್ಲೆಂದರಲ್ಲಿ ಸಮಯೋಚಿತವಾಗಿ ಪದ್ಯಗಳನ್ನು ರಚಿಸುವ ಸಾಮರ್ಥ್ಯ ಶಾಸ್ತ್ರಿಗಳವರದು. ಸಜ್ಜನರ ಗುಣಸ್ವಭಾವಗಳನ್ನು:

ಸಿರಿಯೊಳ್ ಸೈರಣೆ ಕಷ್ಟದೊ
ಳುರುಧೈರ್ಯಂ ಜಸದೊಳಾಸೆ ಶಾಸ್ತ್ರದೊಳೊಲವುಂ
ಧುರದೊಳ್ ಶೌರ್ಯಂ ಸಭೆಯೊಳ್
ಪಿರಿದಹ ವಾಕ್ಪಟುತೆ ಸಜ್ಜನರ್ಗಿವು ನೈಜಂ

ಈ ರೀತಿ ನೀತಿಶತಕದಲ್ಲಿ ವಿವರಿಸಿದ್ದಾರೆ.

ಬಸವಪ್ಪಶಾಸ್ತ್ರಿಗಳು ರಾಜಾಶ್ರಯದಿಂದ ಪ್ರಭಾವಿತರಾದರೂ ಅವರ ಮನಸ್ಸು ಸಹೃದಯದರತ್ತ ಇತ್ತು ಎಂಬುದು ಅವರ:

ಅರಸರ್ಕುಡುವಾ ಕಾರ್ತ
ಸ್ವರ ಕಂಕಣಮಿರ್ಕೆ ಸರಸರಾಸ್ವಾದಿಸಿ ಕಾ
ವ್ಯರಸವ ಸೂಸುವ ಸುಖಭಾ
ಸ್ವರಾಶ್ರುಕಂಕಣಮೆ ಕವಿಗೆ ಕಂಕಣಮಲ್ತೇ

ಈ ಪದ್ಯದಿಂದ ವ್ಯಕ್ತವಾಗುತ್ತದೆ.

ಬಸವಪ್ಪಶಾಸ್ತ್ರಿಗಳು ಬಹುಕಾಲ ಬದುಕಲಿಲ್ಲ. ಅಕಾಲಮರಣಕ್ಕೆ ಈಡಾದುದು ಎಲ್ಲರಿಗೂ ತಿಳಿದ ವಿಷಯ. ವಾಯುವಿಹಾರಕ್ಕಾಗಿ ಸಾಹುಕಾರ ಪಾಪಣ್ಣನವರ ಜೊತೆಯಲ್ಲಿ ಹೋದವರು ಕುದುರೆ ಬೆಚ್ಚಿಬಿದ್ದುದರ ಪರಿಣಾಮ ಅವರು ಕುಳಿತಿದ್ದ ಗಾಡಿ ಅಪಘಾತಕ್ಕೆ ಒಳಗಾಗಿ ಒಂದೆರಡು ದಿನಗಳಲ್ಲೇ ಅವರು ತಮ್ಮ ೪೮ನೆಯ ವಯಸ್ಸಿನಲ್ಲಿ ಕೊನೆಯ ಉಸಿರನ್ನೆಳೆದರು. ಅವರ ಮರಣವಾರ್ತೆಯನ್ನು ಕೇಳಿ ಶೋಕಿಸಿದವರು ಅನೇಕ ಮಂದಿ:

ಬಸವಪ್ಪಶಾಸ್ತ್ರಿಯಳಿಯಲ್
ವ್ಯಸನಮದೆಳ್ಳನಿತುಮೆನ್ನ ಮನದೊಳಗಿಲ್ಲಂ
ರಸಕವಿತಾಂಗನೆ ಹಿಮದೊಳ್
ಬಸವಳಿದಬ್ಜಿನಿವೊಲಾದಳೆಂಬುದೆ ದುಗುಡಂ (ನಂಜನಗೂಡು ಸುಬ್ಬಾಶಾಸ್ತ್ರಿ)
ಕನ್ನಡಗಬ್ಬದ ಹಬ್ಬಮ
ದಿನ್ನೆಲ್ಲಿ ಮನೋಜ್ಞಮೆನಿಪ ಪುಸ್ತಕಪಠನಂ
ಇನ್ನೆಲ್ಲಿ ಸುಕವಿತಾಂಗನೆ
ಯುನ್ನಮಾದುತ್ತಮಾಂಗಕಾದುದು ನಮನಂ
ಶೋಕಿಪುದೇನಿದ ತೆರೆ ಪರ
ಲೋಕಕೆ ಬಸವಪ್ಪಶಾಸ್ತ್ರಿ ಪೋದುದಕೀಗಳ್
ಲೋಕೋತ್ತರ ಕವಿಯೆಂದು ವಿ
ವೇಕಿಗಳಿಂ ಶ್ಲಾಘ್ಯನಾದನಾತನೆ ಧನ್ಯಂ ॥ (ಪಿ.ಆರ್. ಕರಿಬಸವಶಾಸ್ತ್ರಿ)

ಬಸವಪ್ಪನವರ ಸಮಾಧಿಯನ್ನು ಮೈಸೂರು ನೀಲಗಿರಿ ರಸ್ತೆಯಲ್ಲಿ ಮಾಡಲಾಯಿತು.

ಬಸವಪ್ಪಶಾಸ್ತ್ರಿಗಳ ವ್ಯಕ್ತಿತ್ವ ವಿಶಿಷ್ಟಪೂರ್ಣವಾದುದು. ಅವರು ಸಹೃದಯರೂ ಸರಸಿಗಳೂ ಉದಾರಿಗಳೂ ಆಗಿದ್ದರು. ಅವರಲ್ಲಿ ಆತ್ಮಾಭಿಮಾನ ವಿಶೇಷವಾಗಿತ್ತು. ಅರಮನೆಯ ಎಲ್ಲ ವರ್ಗದ ವಿದ್ವಾಂಸರೊಡನೆಯೂ ಮಿಳಿತವಾಗಿದ್ದರು. ಜಾತಿಮತಭೇದಗಳಿಲ್ಲದೆ ಎಲ್ಲರೂ ಬಸವಪ್ಪಶಾಸ್ತ್ರಿಗಳನ್ನು ಗೌರವಿಸಿದ್ದಾರೆ, ಆತ್ಮೀಯತೆಯಿಂದ ಕಂಡುಕೊಂಡಿದ್ದಾರೆ. ಅತಿಯಾದ ಸಂಸ್ಕೃತ ವ್ಯಾಮೋಹದಿಂದ ಕನ್ನಡ ಕಾವ್ಯರಚನೆಯನ್ನು ಟೀಕಿಸಿದವರಿಗೆ ಅವರು ಕೊಟ್ಟ ಉತ್ತರವಿದು:

ಸಕ್ಕದಮೇಂ ಕನ್ನಡಮೇ
ನೊಕ್ಕಣಿಸಿದ ವಿಷಯಮೊಂದೆಗಡ ತಾಮದರಿಂ
ತಕ್ಕರ್ ಕೇಳ್ದಾವಂದಿಪ
ರಕ್ಕೆ ಗುಣಪ್ರವಣಮತಿಯಿನೀ ಕೃತಿಯಂ ॥

ಕನ್ನಡ ಸಂಸ್ಕೃತಗಳ ಉಚಿತಮಿಶ್ರಣ ಹಿತಮಿತವಾಗಿರುತ್ತದೆ ಎಂಬುದನ್ನು,

ಸಕ್ಕದಮಂ ಕನ್ನಡಮಂ
ಸಕ್ಕಸಮಂ ತಿಳಿದ ವಿಬುಧರ್ಗರಿಯಲ್
ಸಕ್ಕರೆವೆರಸಿದ ಸವಿವಾ
ಲಕ್ಕುಂ ಸಕ್ಕದವೆ ಬೆರೆದ ಕನ್ನಡಗಬ್ಬಂ

ಈ ರೀತಿ ಹೇಳಿದ್ದಾರೆ.

ಬಸವಪ್ಪಶಾಸ್ತ್ರಿಗಳ ಪ್ರತಿಭಾಶಕ್ತಿ ಎಷ್ಟು ಪ್ರಖರವಾಗಿತ್ತೋ ಅವನ ಪಚನಶಕ್ತಿಯೂ ಅಷ್ಟೇ ಪ್ರಖರವಾಗಿತ್ತಂತೆ. ಒಮ್ಮೆಗೇ ೨೫ ಜೊತೆ ಒಬ್ಬಟ್ಟು ತಿಂದು ಜೀರ್ಣಿಸಿಕೊಳ್ಳುತ್ತಿದ್ದರಂತೆ. ಇದು ಎಂತಾದರೂ ಇರಲಿ. ಹತ್ತೊಂಬತ್ತನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ನಿರಂತರವಾಗಿ ತೊಳಗಿ ಬೆಳಗುತ್ತಿರುವ ಅಮೋಘರತ್ನ ಬಸವಪ್ಪ ಶಾಸ್ತ್ರಿಗಳು.

ಬಸವಪ್ಪಶಾಸ್ತ್ರಿಗಳು ಸುಮಾರು ಇಪ್ಪತ್ತೆಂಟು ಕೃತಿಗಳನ್ನು ಕನ್ನಡ ಸಂಸ್ಕೃತದಲ್ಲಿ ಬರೆದಂತೆ ತಿಳಿದುಬರುತ್ತದೆ.

**ಕನ್ನಡದ ಉಪಲಬ್ಧ ಕೃತಿಗಳು:**

(೧) ಸಾವಿತ್ರೀ ಚರಿತ್ರೆ (ಭಾಮಿನಿ ಷಟ್ಪದಿ) (೨) ದಮಯಂತೀ ಸ್ವಯಂವರ (ಚಂಪೂ) (೩) ಶಂಕರ ಶತಕ (ಅಪೂರ್ಣ) (೪) ರೇಣುಕ ವಿಜಯ (ಚಂಪೂ, ಅಪೂರ್ಣ) (೫) ನೀತಿಸಾರ ಸಂಗ್ರಹ (ಕಂದ ಪದ್ಯಗಳು)

**ಸಂಸ್ಕೃತದಲ್ಲಿ ಬರೆದ ಕೃತಿಗಳು:**

(೧) ಶಿವಾಷ್ಟಕಂ (೨) ತ್ರಿಷಷ್ಟಿಪುರಾತನ ಗಣಸ್ತವ (೩) ಅಂಬಾಷೋಡಶಮಂಜರೀ (೪) ಶಿವಭಕ್ತಿ ಸುಧಾ ತರಂಗಿಣೀ (೫) ಆರ್ಯಾಶತಕಂ.

**ಸಂಸ್ಕೃತ ಇಂಗ್ಲಿಷ್ ಅನುವಾದಿತ ಕೃತಿಗಳು:**

(೧) ಕರ್ನಾಟಕ ಶಾಕುಂತಲ ನಾಟಕ (೨) ಉತ್ತರರಾಮ ಚರಿತೆ (೩) ಚಂಡಕೌಶಿಕ (ಇದರ ಪಂಚಮಾಂಕವನ್ನು ದೇವಶಿಖಾಮಣಿ ಅಳಸಿಂಗಾಚಾರ್ಯ ಎಂ.ಜಿ. ನಂಜುಂಡಾರಾಧ್ಯ ಬರೆದಿದ್ದಾರೆ.) (೪) ವಿಕ್ರಮೋರ್ವಶೀಯ (ಈ ನಾಟಕದ ಪಂಚಮಾಂಕ ಎಂ.ಜಿ. ನಂಜುಂಡಾರಾಧ್ಯ) (೫) ರತ್ನಾವಳೀ ನಾಟಿಕೆ (೬) ಶೂರಸೇನ ಚರಿತೆ (೭) ಕನ್ನಡ ಭರ್ತೃಹರಿ ಶತಕತ್ರಯ (ಶತಕ, ವೃತ್ತ)

**ಅನುಪಲಬ್ಧ ಕನ್ನಡ ಕೃತಿಗಳು:**

(೧) ಹರ್ಷಚರಿತೆ (೨) ಕೃಷ್ಣರಾಜಾಭ್ಯುದಯ (೩) ಬಾಲಿಕಾಗಾತ ಮುಕ್ತಾಕಲಾಪ (೪) ಮಾಲತೀಮಾಧವ (ಅನುವಾದಿತ ನಾಟಕ)

**ಅನುಪಲಬ್ಧ ಸಂಸ್ಕೃತ ಕೃತಿಗಳು:**

(೧) ಬಿಲ್ವವೃಕ್ಷ ಪೂಜಾವಿಧಿ (೨) ದಕ್ಷಿಣಾಮೂರ್ತ್ಯಷ್ಟಕ (೩) ಅಷ್ಟಮೂರ್ತಿತನಯಾಷ್ಟಕ (೪) ಬಸವೇಶಾಷ್ಟಕ (೫) ಶಂಕರೀನಕ್ಷತ್ರಮಾಲಾ (೬) ಸದಾಶಿವಾಷ್ಟಕ (೭) ಸರಸ್ವತೀ ದಂಡಕ – ಶಾರದಾದಂಡಕ.

**ಆಕರ ಗ್ರಂಥಗಳು**


೧. ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳ ಸಮಗ್ರ ಕೃತಿಗಳು : ಸಂ. ಎಂ.ಜಿ. ನಂಜುಂಡಾರಾಧ್ಯ, (ಪ್ರಬೋಧ ಪುಸ್ತಕಮಾಲೆ, ಬಸವೇಶ್ವರ ರಸ್ತೆ, ಮೈಸೂರು, ೧೯೭೭)

೨. ಅಭಿನವಕಾಳಿದಾಸ ಬಸವಪ್ಪಶಾಸ್ತ್ರೀ : ಎಂ.ಜಿ. ನಂಜುಂಡಾರಾಧ್ಯ, (ಕಾವ್ಯಕಲಾಸಂಘ, ಜಿ.ವಿ. ಛತ್ರ, ಚಿಕ್ಕಪೇಟೆ, ಬೆಂಗಳೂರು ಸಿಟಿ, ೧೯೪೫)

೩. ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು : ಎಂ.ಜಿ. ನಂಜುಂಡಾರಾಧ್ಯ, (ಐಬಿಎಚ್, ಬೆಂಗಳೂರು, ೧೯೭೩)

೪. ಅಭಿನವ ಕಾಳಿದಾಸ : ಆರ್.ಸಿ. ಹಿರೇಮಠ, (ಸಾಹಿತ್ಯ ಸಂತುಷ್ಟಿ, ಪುಟ ೧೦, ೧೯೫೧)

೫. ಅಭಿನವ ಕಾಳಿದಾಸ ಅಪೂರ್ವ ಶಿವಪ್ರೇಮ : ಗಂಗಾಧರ ಶಿವಾಚಾರ್ಯ, (ಶರಣ ಸಾಹಿತ್ಯ ೧೪-೧೧)

೬. ಅಭಿವನ ಕಾಳಿದಾಸ ಬಸವಪ್ಪ ಶಾಸ್ತ್ರಿಗಳ ಜೀವನ ಚರಿತ್ರೆ : ಬಿ. ಶಿವಮೂರ್ತಿಶಾಸ್ತ್ರಿ, (ಶಿವಾನುಭವ ೪-೧೧; ಕನ್ನಡ ನುಡಿ ೧-೧೭; ಶರಣ ಸಾಹಿತ್ಯ ೨-೩)

೭. ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು : (ಎಂ.ಆರ್. ರಾಮಸ್ವಾಮಿ, ಎಸ್. ಶಂಕರಪ್ಪ, ಎನ್. ಬಸವಾರಾಧ್ಯ (ಜ್ಞಾನಸುಧಾ ೨-೧,೨)

೮. ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು : ಪಿ. ರಾಮಕೃಷ್ಣಭಟ್ಟ, (ಸಿದ್ಧಗಂಗಾ ಜಾತ್ರಾ ವಿಶೇಷಾಂಕ, ಪು. ೭೫, ೧೯೭೦)

೯. ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿ : ಸಿ.ಪಿ.ಕೆ. (ಶರಣ ಸಾಹಿತ್ಯ ೨೧-೬)

೧೦. ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು : ಬಿ. ಶಿವಮೂರ್ತಿಶಾಸ್ತ್ರಿ, (ವೀರಶೈವ ಮಹಾಪುರುಷರು ಭಾಗ-೧, ಪು.೧೯೬ (ಶರಣ ಸಾಹಿತ್ಯ ೨೫-೫)

೧೧. ಆಧುನಿಕ ನಾಟಕರಂಗದಲ್ಲಿ ಅಭಿನವ ಕಾಳಿದಾಸ : ಎಂ.ಎಸ್. ನಾಗರಾಜ (ಜ್ಞಾನಸುಧಾ ೨-೧,೨)

೧೨. ಕನ್ನಡ ಕಾಳಿದಾಸ : ಮೈಸೂರಿನ ಮಹನೀಯರು, ಭಾಗ-೧, ಪುಟ ೪೮

೧೩. ಕನ್ನಡ ನಾಟಕ ಪಿತಾಮಹ ಬಸವಪ್ಪ ಶಾಸ್ತ್ರಿಗಳು : ಎಂ.ಜಿ. ನಂಜುಂಡಾರಾಧ್ಯ, (ಕನ್ನಡ ರಂಗಭೂಮಿ ಶತಮಾನೋತ್ಸವ ಸ್ಮಾರಕ ಗ್ರಂಥ, ಪು. ೧೧೩, ೧೯೪೮)

೧೪. ಕನ್ನಡ ರಂಗಭೂಮಿಗೆ ಕೈ॥ ಬಸವಪ್ಪ ಶಾಸ್ತ್ರಿಗಳ ಸೇವೆ : ಬಿ. ಶಿವಮೂರ್ತಿ ಶಾಸ್ತ್ರಿ (ಶರಣ ಸಾಹಿತ್ಯ ೨೩-೫,೬)

೧೫. ಕನ್ನಡ ಸಾಹಿತ್ಯ ಚರಿತ್ರೆ : ರಂ.ಶ್ರೀ. ಮುಗಳಿ, (ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೮)

೧೬. ಕರ್ನಾಟಕ ಶಾಕುಂತಲನಾಟಕ : ಎಸ್.ಎಸ್. ಬಸುಪಟ್ಟದ, (ಜಯಂತಿ ೧೫-೨)

೧೭. ಕರ್ಣಾಟಕ ಶಾಕುಂತಲನಾಟಕ : ಬಿ. ಶಿವಮೂರ್ತಿಶಾಸ್ತ್ರಿ, (ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ, ಪು. ೧೧೨, ೧೯೭೪)

೧೮. ಚಂಡಕೌಶಿಕ ನಾಟಕದಲ್ಲಿ ಶೃಂಗಾರರಸ ನಿರೂಪಣೆ : ಎಸ್. ರಾಮಚಂದ್ರರಾವ್ (ಶರಣ ಸಾಹಿತ್ಯ ೨-೧,೨)

೧೯. ದಮಯಂತೀಸ್ವಯಂವರ ವಿಮರ್ಶೆ : ಕಡಬದ ನಂಜುಂಡಶಾಸ್ತ್ರಿ, (ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೫-೪)

೨೦. ಬಸವಪ್ಪಶಾಸ್ತ್ರಿ : (ಕರ್ಣಾಟಕ ಕವಿಚರಿತೆ, ತೃತೀಯ ಸಂಪುಟ ಪುಟ ೨೧೭, ಆರ್. ನರಸಿಂಹಾಚಾರ್, ಬೆಂಗಳೂರು, ೧೯೨೯)

೨೧. ಬಸವಪ್ಪಶಾಸ್ತ್ರಿ : ತ.ಸು. ಶಾಮರಾಯ, (ಕನ್ನಡ ನಾಟಕ, ಪು. ೧೦೨, ೧೯೬೨)

೨೨. ಬಸವಪ್ಪಶಾಸ್ತ್ರಿಗಳ ಜೀವನ ಮತ್ತು ಸಾಹಿತ್ಯ : ಹೆಚ್.ಪಿ. ಕೆಂಪಯ್ಯ, (ಹೂಬುಟ್ಟಿ, ಪು. ೩೩, ೧೯೧೩)

೨೩. ಬಸವಪ್ಪಶಾಸ್ತ್ರಿಗಳ ದಮಯಂತೀ ಸ್ವಯಂವರ : ಕೆ.ಆರ್. ಲಕ್ಷ್ಮೀಕಾಂತಯ್ಯ, (ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೩೨-೩,೪, ೧೯೪೫)

೨೪. ಬಸವಪ್ಪ ಶಾಸ್ತ್ರಿಗಳು : ಡಿವಿಜಿ, (ಸಾಹಿತ್ಯೋಪಾಸಕರು ೩, ಪು. ೩೨, ೧೯೭೦)

೨೫. ಬಸವಪ್ಪ ಶಾಸ್ತ್ರಿಗಳು : ವೀರಶೈವ ಪುಣ್ಯಪುರುಷರ ಮಾಲೆ, (ವೀರಶೈವ ಅಧ್ಯಯನ ಸಂಸ್ಥೆ, ಡಂಬಳ-ಗದಗ)

೨೬. ಬಸವಪ್ಪ ಶಾಸ್ತ್ರಿಯವರ ಜೀವನ ಚರಿತ್ರೆ : ನಾ. ಗೋಪಾಲರಾವ್, (ಜ್ಞಾನಸುಧಾ ೨-೧,೨)

೨೭. ವೀರಶೈವ ಸಾಹಿತ್ಯ ಮತ್ತು ಇತಿಹಾಸ (ಭಾಗ-೨) : ಬಿ. ಶಿವಮೂರ್ತಿಶಾಸ್ತ್ರಿ, ಬೆಂಗಳೂರು, ೧೯೬೯

೨೮. ಶಾಕುಂತಲದ ಭ್ರಮರ : ಮ. ಮಲ್ಲಪ್ಪ, ಜೀವನ ೨೯-೮

೨೯. ಸಾವಿತ್ರೀ ಚರಿತ್ರೆ : ಬಿ. ಶಿವಮೂರ್ತಿಶಾಸ್ತ್ರಿ, (ಶರಣ ಸಾಹಿತ್ಯ, ೧೯೩೪)

೩೦. ಸಿದ್ಧಗಂಗಾಶ್ರೀ : ಸಂ. ಚನ್ನಪ್ಪ ಎರೇಸೀಮೆ, ಟಿ.ಆರ್. ಮಹಾದೇವಯ್ಯ, (ಸಿದ್ಧಗಂಗೆ, ೧೯೮೧)

೩೧. ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ : ವೆಂಕಟೇಶ ಸಾಂಗಲಿ, (ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೬೦)

೩೨. ಹೊಸಗನ್ನಡದ ಅರುಣೋದಯ : ಶ್ರೀನಿವಾಸ ಹಾವನೂರ, (ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೪)

## ಬಸವಪ್ಪಶಾಸ್ತ್ರಿಗಳು

ಕನ್ನಡಕ್ಕಾಗಿ ದುಡಿದು ಕೀರ್ತಿಶೇಷರಾದವರಲ್ಲಿ ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು ಅಗ್ರಗಣ್ಯರಷ್ಟೇ ಅಲ್ಲದೆ ಆಚಾರ್ಯರೂ ಎನಿಸಿಕೊಂಡಿದ್ದಾರೆ. ಕನ್ನಡ ಸಾಹಿತ್ಯ ಕ್ಷೇತ್ರದ ಹಲವಾರು ಪ್ರಕಾರಗಳಲ್ಲಿ ಕೃತಿರಚನೆಗೈದು ಅಜರಾಮರವಾದ ಕೀರ್ತಿಯನ್ನು ಸಂಪಾದಿಸಿದ್ದಾರೆ. ಹತ್ತೊಂಬತ್ತನೆಯ ಶತಮಾನದಲ್ಲಿ ಬಾಳಿಬೆಳಗಿದ ಶಾಸ್ತ್ರಿಗಳು ಕಳೆದ ಎರಡು ಶತಮಾನಗಳಿಂದ ನಿಶ್ಚೇಷ್ಟಿತವಾಗಿದ್ದ ಕನ್ನಡ ಸಾಹಿತ್ಯಕ್ಕೆ ಒಂದು ನವಚೇತನವನ್ನು ತಂದುಕೊಟ್ಟಿದ್ದಾರೆ. ಮಹಾಕವಿ ಷಡಕ್ಷರಿಯ ತರುವಾಯ ಹಳಗನ್ನಡದಲ್ಲಿ ಕೃತಿಕರಚನೆಗೈದವರಲ್ಲಿ ಬಸವಪ್ಪಶಾಸ್ತ್ರಿಗಳು ಅದ್ವಿತೀಯರು, ಅಜೇಯರು.

ಬಸವಪ್ಪಶಾಸ್ತ್ರಿಗಳು ಪಂಡಿತ ಮನೆತನಕ್ಕೆ ಸೇರಿದವರು. ಇವರ ತಾತಂದಿರು ಬೆಂಗಳೂರು ಜಿಲ್ಲೆ ನಾರು ಸಂದ್ರದ ರುದಾಕ್ಷಿ ಮಠಾಧ್ಯಕ್ಷರಾದ ಮುರುಡಬಸವ ಸ್ವಾಮಿಗಳು. ಈ ಬಸವಸ್ವಾಮಿಗಳ ಪುತ್ರರು ಮಹದೇವ ಶಾಸ್ತ್ರಿಗಳು. ಇವರ ತನೂಭವರೇ ಬಸವಪ್ಪಶಾಸ್ತ್ರಿಗಳು. ಇವರು ಕ್ರಿ.ಶ. ೧೮೪೩ರಲ್ಲಿ ಜನ್ಮತಾಳಿದರು.

ಮೈಸೂರಿನ ಅಂದಿನ ಮಹಾರಾಜರಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಒಮ್ಮೆ ರುದ್ರಾಕ್ಷಿ ಮಠಕ್ಕೆ ದಯಮಾಡಿಸಿದ್ದಾಗ ಮಹದೇವಶಾಸ್ತ್ರಿಗಳ ಅಪಾರವಾದ ಪಾಂಡಿತ್ಯವನ್ನು ಮನಗಂಡು ಅವರನ್ನು ತಮ್ಮ ಆಸ್ಥಾನಕ್ಕೆ ಬರಮಾಡಿಕೊಂಡರು. ಆಮೇಲೆ ಅವರನ್ನು ಆಸ್ಥಾನ ವಿದ್ವಾಂಸರನ್ನಾಗಿಯೂ ರಾಜಪುರೋಹಿತರನ್ನಾಗಿಯೂ ನೇಮಿಸಿಕೊಂಡರು.

ಬಸವಪ್ಪಶಾಸ್ತ್ರಿಗಳವರಿಗೆ ಬಾಲ್ಯದಲ್ಲಿಯೇ ಪಿತೃವಿಯೋಗವಾಯಿತು. ಆದರೆ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಅನುಗ್ರಹದಿಂದ ರಾಜಾಶ್ರಯ ದೊರೆಯಿತು. ಶಾಸ್ತ್ರಿಗಳವರ ಆರೈಕೆಗೂ ವಿದ್ಯಾಭ್ಯಾಸಕ್ಕೂ ತಕ್ಕ ವ್ಯವಸ್ಥೆ ಮಾಡಲಾಯಿತು. ಅಳಿಯ ಲಿಂಗರಾಜ ಅರಸರು ಈ ವಿಷಯದಲ್ಲಿ ವಿಶೇಷ ಆಸಕ್ತಿಯನ್ನು ವಹಿಸಿ ಶಾಸ್ತ್ರಿಗಳ ವಿದ್ಯಾಭ್ಯಾಸಕ್ಕೆ ಎಲ್ಲ ಏರ್ಪಾಟುಗಳನ್ನೂ ಮಾಡಿದರು. ಸುಪ್ರಸಿದ್ಧ ವಿದ್ವಾಂಸರೂ ಆಸ್ಥಾನ ಕವಿಗಳೂ ಆಗಿದ್ದ ಗರಳಪುರಿಶಾಸ್ತ್ರಿಗಳು ಅವರ ಗುರುಗಳಾಗಿದ್ದರು.

ಅಸಾಧಾರಣ ಪ್ರತಿಭಾವಂತರಾಗಿದ್ದ ಬಸವಪ್ಪಶಾಸ್ತ್ರಿಗಳು ಕನ್ನಡ ಸಂಸ್ಕೃತ ಭಾಷೆಗಳೆರಡರಲ್ಲೂ ಅದ್ವಿತೀಯವಾದ ಪಾಂಡಿತ್ಯವನ್ನು ಗಳಿಸಿದರು. ಸಂಗೀತಾದಿ ಲಲಿತಕಲೆಗಳಲ್ಲಿಯೂ ವೇದವೇದಾಂತಾದಿ ದರ್ಶನಗಳಲ್ಲಿಯೂ ಪರಿಣತಿಯನ್ನು ಪಡೆದರು. ಹದಿನೆಂಟನೆಯ ವರ್ಷಕ್ಕಾಗಲೇ ಬಸವಪ್ಪಶಾಸ್ತ್ರಿಗಳಿಗೆ ಕವಿತಾಶಕ್ತಿ ಪ್ರಾಪ್ತವಾಗಿದ್ದಂತೆ ಅವರ "ಕೃಷ್ಣರಾಜಾಭ್ಯುದಯಂ" ಸಾರುತ್ತಿದೆ.

ಪದಿನೆಂಟು ವಯಸ್ಸಿನೊಳೊದ
ವಿದ ಕವಿತಾಶಕ್ತಿಯಿಂದೆ ಬುಧನಿವಹಕ್ಕಂ
ಮುದಮೊಗೆಯೆ ಕೃಷ್ಣರಾಜಾ
ಭ್ಯುದಯಮೆನಿಪ್ಪೊಂದು ಕೃತಿಯನಿರದಾಗಿಸಿದಂ ॥

ಮುಮ್ಮಡಿ ಕೃಷ್ಣರಾಜಒಡೆಯರ್ ಅವರಿಗೆ ಬಸವಪ್ಪಶಾಸ್ತ್ರಿಗಳು ತುಂಬ ಅಚ್ಚುಮೆಚ್ಚಿನವರಾಗಿದ್ದರು. ಪ್ರಭುಗಳ ಆಶಯದಂತೆ ಅವರು ಸಂಸ್ಕೃತದಲ್ಲಿ "ಬಿಲ್ವವೃಕ್ಷ ಪೂಜಾವಿಧಿ"ಯನ್ನು ರಚಿಸಿದಂತೆ ಹೇಳಿಕೊಂಡಿದ್ದಾರೆ. ತಮ್ಮ ತಂದೆಯವರಂತೆಯೇ ಬಸವಪ್ಪಶಾಸ್ತ್ರಿಗಳು ಆಸ್ಥಾನಕವಿಗಳೂ ರಾಜಪುರೋಹಿತರೂ ಆಗಿ ಪ್ರಖ್ಯಾತರಾಗಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ತರುವಾಯ ಶ್ರೀ ಜಯಚಾಮರಾಜ ಒಡೆಯರ್ ಅವರಿಗೆ ಬಸವಪ್ಪಶಾಸ್ತ್ರಿಗಳು ಕೆಲಕಾಲ ವಿದ್ಯಾಗುರುಗಳಾಗಿದ್ದಂತೆಯೂ ತಿಳಿದುಬರುತ್ತದೆ.

ಬಸವಪ್ಪಶಾಸ್ತ್ರಿಗಳ ಪ್ರತಿಭೆ ಬಹುಮುಖವಾದುದು. ಉಭಯಭಾಷಾಪಂಡಿತರಾದ ಇವರು ಸ್ವತಂತ್ರ ಕೃತಿಗಳನ್ನೇ ಅಲ್ಲದೆ ಸಂಸ್ಕೃತ ಇಂಗ್ಲಿಷ್ ಸಾಹಿತ್ಯದ ಶ್ರೇಷ್ಠ ನಾಟಕಗಳನ್ನು ಕನ್ನಡಕ್ಕೆ ಮೊಟ್ಟಮೊದಲು ಅನುವಾದಿಸಿದ ಕೀರ್ತಿಗೂ ಭಾಜನರಾಗಿದ್ದಾರೆ. ಬಸವಪ್ಪಶಾಸ್ತ್ರಿಗಳ ಹೆಸರಿನಲ್ಲಿ ಇಂದು ಇಪ್ಪತ್ತೆಂಟು ಕೃತಿಗಳು ಕಂಡುಬರುತ್ತವೆ. ಕಾಳಿದಾಸ ಮಹಾಕವಿಯ ಅಭಿಜ್ಞಾನ ಶಾಕುಂತಲ, ವಿಕ್ರಮೋರ್ವಶೀಯ; ಭವಭೂತಿಯ ಉತ್ತರರಾಮಚರಿತೆ; ಶ್ರೀಹರ್ಷನ ರತ್ನಾವಳೀ; ಕ್ಷೇಮೇಶ್ವರನ ಚಂಡಕೌಶಿಕ –ಇವು ಪ್ರಮುಖವಾದುವು. ಸಂಸ್ಕೃತದಿಂದ ನೇರವಾಗಿ ಅನುವಾದಗೊಂಡವು. ಷೇಕ್ಸ್‌ಪಿಯರ್ ಮಹಾಕವಿಯ ಒಥೆಲೋ ಎಂಬ ನಾಟಕವನ್ನು 'ಶೂರಸೇನಚರಿತೆ' ಎಂಬ ಹೆಸರಿನಿಂದ ಭಾಷಾಂತರಿಸಿದ್ದಾರೆ. ಭರ್ತೃಹರಿಯ ನೀತಿಶತಕ, ಶೃಂಗಾರಶತಕ, ವೈರಾಗ್ಯಶತಕಗಳನ್ನು ಕಂದವೃತ್ತಗಳಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಅವರ ಸ್ವತಂತ್ರ ಕೃತಿಗಳು ದಮಯಂತೀ ಸ್ವಯಂವರ, ರೇಣುಕವಿಜಯ, ಕೃಷ್ಣರಾಜಾಭ್ಯುದಯ ಮತ್ತು ಸಾವಿತ್ರೀ ಚರಿತೆ. ಇವುಗಳಲ್ಲಿ ಮೊದಲ ಮೂರುಕಾವ್ಯಗಳು ಚಂಪುವಿನಲ್ಲೂ ಕೊನೆಯದು ಭಾಮಿನೀ ಷಟ್ಪದಿಯಲ್ಲೂ ರಚಿತವಾಗಿವೆ. ಶಂಕರ ಶತಕ, ನೀತಿಸಾರ ಸಂಗ್ರಹ, ಮುಕ್ತಕಗಳು ಇವನ್ನು ಕೂಡ ಶಾಸ್ತ್ರಿಗಳು ಕನ್ನಡದಲ್ಲೇ ಬರೆದಿದ್ದಾರೆ. ಇನ್ನು ಸಂಸ್ಕೃತದಲ್ಲಿ ಬಿಲ್ವವೃಕ್ಷ ಪೂಜಾವಿಧಿ; ಅಷ್ಟಮೂರ್ತಿತನಯಾಷ್ಟಕಂ, ಬಸವೇಶಾಷ್ಟಕಂ, ಶಾಂಕರೀನಕ್ಷತ್ರಮಾಲಾ, ಸದಾಶಿವಾಷ್ಟಕಂ, ತ್ರಿಷಷ್ಟಿ ಪುರಾತನಸ್ತವಂ, ಶಿವಭಕ್ತಿಸುಧಾತರಂಗಿಣೀ, ಆರ್ಯಾಶತಕಂ, ಅಂಬಾಷೋಡಶಮಂಜರೀ, ಸರಸ್ವತೀ ದಂಡಕಂ ಮೊದಲಾದ ಕೃತಿಗಳನ್ನು ಬರೆದಿದ್ದಾರೆ.

ಬಸವಪ್ಪಶಾಸ್ತ್ರಿಗಳಿಗೆ ದಿಗಂತ ವಿಶ್ರಾಂತವಾದ ಕೀರ್ತಿಯನ್ನು ತಂದುಕೊಟ್ಟಿರುವುದು ಅವರ ಶಾಕುಂತಲ ನಾಟಕ. ಇದು ಕನ್ನಡದ ಶ್ರೇಷ್ಠಅನುವಾದವೂ ಹೌದು. ಪ್ರಥಮಅನುವಾದವೂ ಹೌದು. ಈ ಶೃಂಗಾರಭರಿತ ನಾಟಕವನ್ನು ವಿದ್ವತ್ಸಭೆಯ ಮುಂದೆ ಶಾಸ್ತ್ರಿಗಳೇ ಸ್ವತಃ ವಾಚನಮಾಡಿದ ಪ್ರಕರಣ ಇಂತಿದೆ.

ಶೃಂಗಾರಕ್ಕಾಗರಂ ತಾನೆನಿಸಿ ಮೆರೆವ ಶಾಕುಂತಳಾಭಿಖ್ಯಮಾದು
ತ್ತುಂಗಾಲಂಕಾರಮಂ ನಾಟಕಮನೆ ಲಸದುದ್ದಾಮ ಸಾಹಿತ್ಯಮಂ ಮೇಣ್
ಸಂಗೀತ ಪ್ರೌಢಿಯುಂ ಸಂಗಳಿಸೆ ರಚಿಸಿ ಕರ್ಣಾಟಕವಾಗ್ಧಾಟಿಯಿಂದಂ
ರಂಗಾರ್ಯಾಖ್ಯ ಮಂತ್ರಿಪ್ರವರ ಸಭೆಯೊಳೊಲ್ದೋದಿದಂ ಜಾಣ್ಮೆಯಿಂದಂ

ಕರ್ಣಾನಂದಮದಾಗಲ್
ಕರ್ಣಾಟಕ ಕಾಳಿದಾಸನೆಂಬೀ ಬಿರುದಂ
ತೂರ್ಣದಿನಿತ್ತಂ ವಿದ್ವ
ತ್ಪೂರ್ಣ ಸಭಾಮಂಡಲಿಯೊಳಗಾ ಮಂತ್ರೀಶಂ ॥

ಅಂದಿನ ವಿದ್ವತ್ಸಭೆಯಲ್ಲಿ ನೀಡಿದ 'ಅಭಿನವ ಕಾಳಿದಾಸ' ಎಂಬ ಬಿರುದು ಅಂದಿನಿಂದ ಅವರ ಹೆಸರಿನೊಂದಿಗೇ ಸೇರಿಹೋಯಿತು. ಇಷ್ಟೊಂದು ಕೊಂಡಾಟಕ್ಕೆ ಪಾತ್ರವಾಗಿರುವ ಶಾಸ್ತ್ರಿಗಳ ಭಾಷಾಪಾಂಡಿತ್ಯಕ್ಕೆ ನಿದರ್ಶನವಾಗಿರುವ ಈ ಶಾಕುಂತಲನಾಟಕದ ಒಂದೆರಡು ಪದ್ಯಗಳನ್ನು ಆಸ್ವಾದಿಸಬಹುದು:

ಗಂಡನ ಮನೆಗೆ ಹೊರಡಲು ಸಿದ್ಧವಾಗಿದ್ದ ಶಕುಂತಲೆಗೆ ಅನುಮತಿಯನ್ನು ನೀಡುವಂತೆ ಕಣ್ವರು ಆಶ್ರಮದ ಗಿಡಮರ ಬಳ್ಳಿಗಳನ್ನು ಸಂಬೋಧಿಸಿದ್ದು:

ಜಲವನದಾವಳೀಂಟಳೆರೆದಲ್ಲದೆ ನಿಮ್ಮಯ ಪಾತೆಗಂಬುವಂ
ತಳಿರ್ಗಳ ಕೊಯ್ಯಳಾವಲೊಲವಿಂ ಮಿಗೆ ಸಿಂಗರದಾಸೆಯುಳ್ಳೊಡಂ
ಅಲರ್ಗಳ ತಾಳೆ ನೀವು ಮೊದಲುತ್ಸವವಾಂತಪಳಾವಳಾ ಶಕುಂ
ತಳೆ ಪತಿಪದ್ಮಕೈದಿದಪಳಾಕೆಗನುಜ್ಞೆಯನೀವುದೆಲ್ಲರುಂ

ಗಂಡನ ಮನೆಯನ್ನು ಸೇರಿಕೊಂಡ ಮೇಲೆ ಅಲ್ಲಿ ಯಾರು ಯಾರೊಡನೆ ಯಾವ ಯಾವ ರೀತಿ ನಡೆದು ಕೊಳ್ಳಬೇಕೆಂಬುದರ ಬಗೆಗೆ ಕಣ್ವರು ಆಕೆಗೆ ಹೇಳಿದ ಬುದ್ಧಿವಾದ ಇದು:

ಪಿರಿಯರ ಸೇವೆಗೆಯ್ ಸವತಿಯರ್ಕಳೊಳಿಷ್ಟವಯಸ್ಯೆಯಂದದಿಂ
ದಿರು ಪತಿಯೊರ್ಮೆ ಹೇವಗೊಳಿಸಲ್ ಮುಳಿಸಿಂ ಪ್ರತಿಕೂಲೆಯಾಗದಿರ್
ಪರಿಜನವಂ ಕರಂ ಸಲಹು ಭಾಗ್ಯದೆ ಬಾಗಿರು ಪೆಣ್ಗಳಿಂತಿರಲ್
ಗರತಿಯರಪ್ಪರಿಂತಿರದರನ್ವಯಕಾಧಿಯನುಂಟುಮಾಳ್ವರೌ ॥

ಬಸವಪ್ಪಶಾಸ್ತ್ರಿಗಳ ಅಪಾರವಾದ ಪಾಂಡಿತ್ಯವನ್ನು ಅವರ ಹಿರಿಯ ಸಮಕಾಲೀನ ವಿದ್ವಾಂಸರೂ ತರುವಾಯದವರೂ ಮುಕ್ತಕಂಠದಿಂದ ಸ್ಮರಿಸಿದ್ದಾರೆ. ಆದರೆ ಬಸವಪ್ಪಶಾಸ್ತ್ರಿಗಳು ಮಾತ್ರ ನಮ್ಮ ನಯವಿನಯವನ್ನೂ ನಮ್ರತೆಯನ್ನೂ ಮೆರೆದಿದ್ದಾರೆ:

ರಸಿಕರ್ಕಳೊಪ್ಪುವನ್ನಂ
ರಸಾಭಿನಯಕೌಶಲಂಗಳೊಳ್ಳಿದುವೆನುತಾ
ನುಸಿರೆ ವಲಮೋದಿದ ಮಾ
ನಿಸರ್ಗಂ ತಮ್ಮೊಳಗೆ ತಮಗೆ ನಂಬುಗೆಯಿಲ್ಲಂ ॥

ಪರವರಿನರಿವುದು ಲವಂ
ಪಲವುದಿನಂ ಪಲವು ಬಗೆಗಳಿಂದಂ ಮನುಜರ್
ಪಲವುಂ ಕಲ್ಪದೆ ಮಸುಳದ
ವಿಲಸದ್ಯಶಮಾಂತು ಬಾಳ್ವೊಡವನೀತಲದೊಳ್ ॥

ಕನ್ನಡ ಕಾವ್ಯರಚನೆಯಲ್ಲಿ ಸಂಸ್ಕೃತ ಕನ್ನಡ ಪದಗಳ ಮಿಶ್ರಣದ ಬಗೆಗೆ ಬಸವಪ್ಪಶಾಸ್ತ್ರಿಗಳು ತಳೆದ ನಿಲುವು ಇದು:

ಸಕ್ಕದಮಂ ಕನ್ನಡಮಂ
ಸಕ್ಕಸಮಂ ತಿಳಿದ ಸರಸವಿಬುಧರ್ಗರಿಯಲ್
ಸಕ್ಕರೆವೆರಸಿದ ಚಿನಿವಾ
ಲಕ್ಕುಂ ಸಕ್ಕದಮೆ ಬೆರೆದ ಕನ್ನಡ ಕಬ್ಬಂ ॥

ತನ್ನ ಕೃತಿ ಒಂದು ತೆರನ ಹೊಸಕಾವ್ಯವೆಂದು ಯಾರೂ ಅನಾದರದಿಂದ ಅದನ್ನು ನೋಡಬಾರದೆಂದೂ ಅಂಥವರಿಗೋಸ್ಕರ ತಾನು ಕೃತಿಯನ್ನು ರಚಿಸಲಿಲ್ಲವೆಂದೂ ಬಸವಪ್ಪಶಾಸ್ತ್ರಿಗಳು ಸ್ಪಷ್ಟಪಡಿಸಿದ್ದಾರೆ.

ರಸಮಂ ಗುಣಮಂ ನೋಡದೆ
ಪೊಸಗಬ್ಬಮಿದೆಂದನಾದರಿಪ ಮೂರ್ಖರ್ಗಾ
ನೆಸಗಿದವನಲ್ತು ಕೃತಿಯಂ
ರಸಜ್ಞರಾದರಿಸೆ ಪೇಳ್ದ ಕೃತಿ ಕೃತಕೃತ್ಯಂ ॥

ಬಸವಪ್ಪಶಾಸ್ತ್ರಿಗಳು ಆಸ್ಥಾನ ಕವಿಗಳಾಗಿದ್ದು ರಾಜಾಶ್ರಯವನ್ನು ಪಡೆದಿದ್ದರೂ ಸ್ವತಂತ್ರ ಪ್ರವೃತ್ತಿಯವರಾಗಿದ್ದರು. ಆಸ್ಥಾನದಲ್ಲಿ ಅವರಿಗೆ ಚಿನ್ನದ ಕಂಕಣವನ್ನು ತೊಡಿಸಿ, ಕಿಲ್ಲತ್ತುಗಳನ್ನು ಕೊಟ್ಟು ಸನ್ಮಾನಮಾಡಿದ್ದರೂ ಅವರ ಒಲುಮೆ ನಿಲುಮೆಗಳು ಇದ್ದದ್ದು ಸಹೃದಯರತ್ತ ಎಂಬುದಕ್ಕೆ ಈ ಪದ್ಯ ನಿದರ್ಶನವಾಗಿದೆ.

ಅರಸರ್ ಕುಡುವಾ ಕಾರ್ತ
ಸ್ವರ ಕಂಕಣಮಿರ್ಕೆ ಸರಸರಾಸ್ವಾದಿಸಿ ಕಾ
ವ್ಯರಸವ ಸೂಸುವ ಸುಖಭಾ
ಸ್ವರಾಶ್ರುಕಂಕಣಮೆ ಕವಿಗೆ ಕಂಕಣಮಲ್ತೇ ॥

ಕನ್ನಡ ರಂಗಭೂಮಿಗೆ ಬಸವಪ್ಪಶಾಸ್ತ್ರಿಗಳ ಕೊಡುಗೆ ಅನ್ಯಾದೃಶವಾದುದು. ಹದಿನೆಂಟನೆಯ ಶತಮಾನದವರೆಗೂ ಕನ್ನಡದಲ್ಲಿ ನಾಟಕಗಳೇ ಇಲ್ಲದಿದ್ದಾಗ ಶಾಸ್ತ್ರಿಗಳು ಸಂಸ್ಕೃತ ಮತ್ತು ಇಂಗ್ಲಿಷ್‌ನಿಂದ ಅನುವಾದಿಸಿದ ನಾಟಕಗಳು ಬಹುಜನಪ್ರಿಯವಾದುವು. ರಂಗದ ಮೇಲೆ ಅವು ಅಭಿನಯಿಸಲ್ಪಟ್ಟವು. "ಶ್ರೀಜಯಚಾಮರಾಜೇಂದ್ರ ಕರ್ಣಾಟಕ ನಾಟಕ ಸಭೆ" ಜನ್ಮತಾಳುವುದಕ್ಕೆ ಬಹುಮಟ್ಟಿಗೆ ಬಸವಪ್ಪಶಾಸ್ತ್ರಿಗಳೇ ಕಾರಣಕರ್ತರು. ರಂಗಭೂಮಿಗೆ ಅಳವಡುವಂತೆ ಸೂಕ್ತ ಮಾರ್ಪಾಟುಗಳೊಡನೆ ರೂಪುಗೊಂಡ ಅವರ ನಾಟಕಗಳು ಅಂದಿನ ಮಂದಿ ಮತ್ತು ಮನೀಷಿಗಳ ಮನವನ್ನು ಸೂರೆಗೊಂಡುವು. ಬಸವಪ್ಪಶಾಸ್ತ್ರಿಗಳು "ಕರ್ಣಾಟಕ ನಾಟಕ ಪಿತಾಮಹ" ಎಂಬ ಬಿರುದಿಗೂ ಪಾತ್ರರಾದರು.

ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳು ಮರ್ತ್ಯದ ಮಣಿಹವನ್ನು ಮುಗಿಸಿದ್ದು ಒಂದು ಸೋಜಿಗವೇ ಸರಿ. ಮಹಾತ್ಮರ ಮರಣ ಅನಿರೀಕ್ಷಿತವೂ ಆಕಸ್ಮಿಕವೂ ಎಂಬುದಕ್ಕೆ ಬಸವಪ್ಪಶಾಸ್ತ್ರಿಗಳೇ ನಿದರ್ಶನವಾಗಿದ್ದಾರೆ. ಮಿತ್ರರೊಡನೆ ವಾಯುವಿಹಾರಕ್ಕಾಗಿ ಕುದುರೆಬಂಡಿಯಲ್ಲಿ ಹೊರಟ ಶಾಸ್ತ್ರಿಗಳು ಮುಗ್ಧ ಮೂಕಪ್ರಾಣಿಯ ಅಚಾತುರ್ಯಕ್ಕೊಳಗಾಗಿ ದುರ್ಮರಣಕ್ಕೀಡಾದರು. ಕ್ರಿ.ಶ. ೧೮೯೧ರಲ್ಲಿ ಶಿವಸಾಯುಜ್ಯವನ್ನು ಸೇರಿದ ಬಸವಪ್ಪಶಾಸ್ತ್ರಿಗಳು ಬದುಕಿದ್ದುದು ಕೇವಲ ೪೮ ವರ್ಷಗಳು.

ಹತ್ತೊಂಬತ್ತನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯಕ್ಕೆ ಒಂದು ನವಚೇತನವನ್ನು ಉಂಟುಮಾಡಿದ ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು ಶ್ರೇಷ್ಠಕವಿಗಳು, ದ್ರಷ್ಟಾರರು, ಉಭಯಭಾಷಾವಿಶಾರದರು. ವ್ಯಾಕರಣ, ವೇದಾಂತ, ಮೀಮಾಂಸೆ ಮೊದಲಾದ ಶಾಸ್ತ್ರಗಳಲ್ಲಿಯೂ ಪರಿಣತರು. ಸಂಗೀತಾದಿ ಸರಸಕಲೆಗಳಲ್ಲಿ ನಿಷ್ಣಾತರು. ನಾಟಕ ರಚನೆಗೆ ಒಂದು ಭದ್ರವಾದ ಬುನಾದಿಯನ್ನು ಹಾಕಿದ ಕೀರ್ತಿ ಶ್ರೀಯುತರಿಗೆ ಸಲ್ಲುತ್ತದೆ. ಒಟ್ಟಿನಲ್ಲಿ ಕವಿಗಳಾಗಿ, ಅನುವಾದಕರಾಗಿ, ಸ್ವತಂತ್ರ ಕೃತಿರಚನಕಾರರಾಗಿ ಬಸವಪ್ಪಶಾಸ್ತ್ರಿಗಳು ಕನ್ನಡಕ್ಕೆ ಸಲ್ಲಿಸಿರುವ ಸೇವೆ ಬಹುಕಾಲ ನಿಲ್ಲುವಂತಹುದು. ಷಡಕ್ಷರಿಯ ತರುವಾಯ ಮೂಲೆಗುಂಪಾಗಿದ್ದ ಚಂಪೂಕೃತಿಗಳ ಪುನರುಜ್ಜೀವನ ಕಾರ್ಯ ಇವರಿಂದ ನಡೆಯಿತೆನ್ನಬಹುದು. ಕನ್ನಡಕ್ಕಾಗಿ ದುಡಿದು ಕೀರ್ತಿಶೇಷರಾದವರಲ್ಲಿ ಬಸವಪ್ಪಶಾಸ್ತ್ರಿಗಳ ಹೆಸರು ನಿರಂತರವಾಗಿ ಪ್ರಜ್ವಲಿಸುತ್ತದೆ ಎಂದು ಧಾರಾಳವಾಗಿ ಹೇಳಬಹುದು.

ಬಸವಪ್ಪಶಾಸ್ತ್ರಿಗಳ ಪಾಂಡಿತ್ಯ ಸರಸ ಸಜ್ಜನಿಕೆಗಳನ್ನು ಮನವಾರೆ ಕೊಂಡಾಡಿದವರು ಹಲವಾರು ಮಂದಿ. ಅವರ ಗುಣಗಾನ ಮಾಡಿ ಬಾಷ್ಪಾಂಜಲಿಯನ್ನು ಸಲ್ಲಿಸಿರುವವರೂ ಎಷ್ಟೋ ಮಂದಿ. ಈ ಕೆಲವು ವಿದ್ವಾಂಸರು ನುಡಿದಿರುವ ಅಣಿಮುತ್ತುಗಳನ್ನು ಉಲ್ಲೇಖಿಸುವುದು ಸಮಯೋಚಿತವಾದುದು.

ಬಸವಪ್ಪಶಾಸ್ತ್ರಿಯಳಿಯಲ್
ವ್ಯಸನಮದೆಳ್ಳನಿತುಮೆನ್ನ ಮನದೊಳಗಿಲ್ಲಂ
ರಸಕವಿತಾಂಗನೆ ಹಿಮದೊಳ್
ಬಸವಳಿದಬ್ಜಿನಿವೊಲಾದಳೆಂಬುದೆ ದುಗುಡಂ

ಎಂದು ಒಬ್ಬ ಕವಿ ಅಶ್ರುತರ್ಪಣವನ್ನು ಕೊಟ್ಟಿದ್ದಾರೆ.

ದಿವಂಗತ ಡಾ. ಡಿ.ವಿ. ಗುಂಡಪ್ಪನವರು: "ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಷಡಕ್ಷರಿಯ ಯುಗದಿಂದ ಷೇಕ್ಸ್‌ಪಿಯರ್‌ನನ್ನೋದಿರುವವರ ಯುಗಕ್ಕೆ ಸೇತುವೆಪ್ರಾಯರಾಗಿರುವ ಕವಿಗಳಲ್ಲಿ ಬಸವಪ್ಪಶಾಸ್ತ್ರಿಗಳು ಅತ್ಯಂತ ಪ್ರಸಿದ್ಧರು. ಚಂಪೂಸಂಪ್ರದಾಯದ ಶೈಲಿ ಅವರಿಗೆ ವಿಧೇಯವಾಗಿತ್ತು. ಆಧುನಿಕ ಲೋಕಕಲಾಭಿರುಚಿಯೂ ಅವರ ಸಹಾನುಭೂತಿಯನ್ನು

ಪಡೆದುಕೊಂಡಿತ್ತು. ಅವರ "ಶಾಕುಂತಲ", "ದಮಯಂತೀ ಸ್ವಯಂವರ"ಗಳು ವಿದ್ವದ್ರಸಿಕರಿಗೆ ಪ್ರಿಯವಾಗಿರುವಂತೆ ಅವರ "ಸಾವಿತ್ರೀಚರಿತ್ರೆ" ಸರ್ವಜನಾದೃತವಾಗಿದೆ. ಹೀಗೆ ಒಂದು ಕಡೆ ಓಜಸ್ಸು ಗಾಂಭೀರ್ಯಗಳಿಂದಲೂ ಇನ್ನೊಂದು ಕಡೆ ಲಾಲಿತ್ಯ ಪ್ರಸಾದಗಳಿಂದಲೂ ಮನೋರಂಜಕವಾಗಿರುವ ಸಾಹಿತ್ಯವನ್ನು ಅವರು ನಿರ್ಮಿಸಿದರು" ಎಂದಿದ್ದಾರೆ.

ಶ್ರೀಮಾನ್ ಎಸ್.ಜಿ. ಶಾಸ್ತ್ರಿ ಅವರು: "ನಮ್ಮ ತಾತಂದಿರಾದ ಗರಳಪುರಿಶಾಸ್ತ್ರಿಗಳಲ್ಲಿ ಬಸವಪ್ಪಶಾಸ್ತ್ರಿಗಳು ಅಳಿಯ ಲಿಂಗರಾಜರೊಂದಿಗೆ ವಿದ್ಯಾಭ್ಯಾಸ ಮಾಡಿದವರು. ನಮ್ಮ ತಂದೆ ಕವಿತಿಲಕ ಅಯ್ಯಾಶಾಸ್ತ್ರಿಗಳು ಬಸವಪ್ಪಶಾಸ್ತ್ರಿಗಳು ಸಹಪಾಠಿಗಳು. ಅವರು ಗರಳಪುರಿಶಾಸ್ತ್ರಿಗಳ ಅಪ್ಪಣೆಯಂತೆ ಬಸವಪ್ಪಶಾಸ್ತ್ರಿಗಳಲ್ಲಿ ಕನ್ನಡ ಕಲಿತು ಕವಿತ್ವಕ್ಕೆ ಆರಂಭ ಮಾಡಿದರು. ಕನಿಷ್ಠಪಕ್ಷ ಹತ್ತುಸಾವಿರ ಶ್ಲೋಕಗಳನ್ನಾದರೂ ಕಂಠಪಾಠ ಮಾಡದ ಹೊರತು ಕವಿತ್ವಕ್ಕೆ ಕೈಹಾಕಬಾರದೆಂದು ಗರಳಪುರಿಶಾಸ್ತ್ರಿಗಳು ಮಗನಿಗೆ ಬುದ್ಧಿವಾದ ಹೇಳಿ ಬಸವಪ್ಪಶಾಸ್ತ್ರಿಗಳನ್ನು ಉದಾಹರಣೆಯಾಗಿ ತೋರುತ್ತಿದ್ದರು."

ಬಸವಪ್ಪ ಶಾಸ್ತ್ರಿಗಳ ಶೂರಸೇನ ಚರಿತ್ರೆ(ಒಥೆಲೊ)ಯನ್ನು ಭಾಷಾಂತರಿಸಿದಾಗ ೧೯೦೩ರಲ್ಲಿ "ಗ್ರಾಜುಯೇಟ್ಸ್ ಅಸೋಸಿಯೇಷನ್ನಿ"ನಲ್ಲಿ ಅದನ್ನು ಅಭಿನಯಿಸಿದರು. ಆಗ ಷೇಕ್ಸ್‌ಪಿಯರನೇ ಕನ್ನಡ ಕವಿಯಾಗಿ ಬಂದು ಬರೆದಿದ್ದರೂ ಬಸವಪ್ಪಶಾಸ್ತ್ರಿಗಳಿಗಿಂತಲೂ ಹೆಚ್ಚಾಗಿ ಬರೆಯಲಾಗುತ್ತಿರಲಿಲ್ಲ" ಎಂದು ನಾಟಕ ನೋಡಿದ ವಿದ್ವಾಂಸರು ಮುಕ್ತಕಂಠದಿಂದ ಅಭಿಪ್ರಾಯಪಟ್ಟರು.

ಪ್ರೊ. ಎಸ್. ರಾಮಚಂದ್ರರಾಯರು: "ಬಸವಪ್ಪ ಶಾಸ್ತ್ರಿಗಳ ಭಾಷಾಂತರ ಶಕ್ತಿಯನ್ನು ಕಾಣಬೇಕಾದರೆ ಅವರು ರಚಿಸಿರುವ ಶೃಂಗಾರಕ್ಕಾಗರಂ ತಾನೆನಿಸಿ ಮೆರೆವ ಶಾಕುಂತಲ ನಾಟಕದ ಭಾಷಾಂತರವನ್ನು ಪರಿಶೀಲಿಸಬೇಕು. ಈ ಭಾಷಾಂತರವು ಅವರ ಭಾಷಾಂತರ ಶಕ್ತಿಗೆ ಒರೆಗಲ್ಲು. ಏಕೆಂದರೆ ಕಾಳಿದಾಸನು ಪರಿವರ್ತನೆಗೆ ಸುಲಭನಲ್ಲ. ಅನುಕರಣಾತೀತವಾದ ಆತನ ಶೈಲಿ ಪರಿವರ್ತನಕಾರನ ಮೃತ್ಯು. ಕಾಳಿದಾಸನ ಶಕ್ತಿಯನ್ನು ಹೊಗಳಲು ಎಲ್ಲರಿಗೂ ಆನಂದ. ಆದರೆ ಆತನ ಕಾವ್ಯಗಳನ್ನು ಭಾಷಾಂತರಿಸತೊಡಗಿದವರು ನಿರಾಶರಾಗುತ್ತಾರೆ. ಇಂತಹ ಕಷ್ಟಕರವಾದ ಕಾರ್ಯವನ್ನೂ ಶಾಸ್ತ್ರಿಗಳು ವಿದ್ವಜ್ಜನರು ಮೆಚ್ಚುವಂತೆ ಮಾಡಿದ್ದಾರೆ. ಕಾಳಿದಾಸನ ಶಾಕುಂತಲವು ಪ್ರಪಂಚದ ಎಲ್ಲ ಭಾಷೆಗಳಿಗೂ ಪರಿವರ್ತಿತವಾಗಿದೆ. ಆದರೆ ಎಲ್ಲ ಪರಿವರ್ತನೆಗಳಿಗಿಂತಲೂ ಶಾಸ್ತ್ರಿಗಳವರದೇ ಉತ್ತಮವೆಂದು ಧೈರ್ಯವಾಗಿ ಹೇಳಬಹುದು."

ಈ ಎಲ್ಲ ಹೇಳಿಕೆಗಳೂ ಯಥಾರ್ಥವೆಂಬುದನ್ನು ಬಸವಪ್ಪಶಾಸ್ತ್ರಿಗಳು ಕೃತಿಗಳನ್ನು ಪರಿಶೀಲಿಸಿದರೆ ಸ್ವಯಂವೇದ್ಯವಾಗುತ್ತದೆ.



# ಪಿ.ಆರ್. ಕರಿಬಸವಶಾಸ್ತ್ರಿಗಳು

ವೀರಶೈವ ಧರ್ಮ ಸಾಹಿತ್ಯ ಸಂಸ್ಕೃತಿಗಳ ಸಂವರ್ಧನೆಗಾಗಿ ತಮ್ಮ ಜೀವನವನ್ನು ಮುಡುಪಿಟ್ಟವರಲ್ಲಿ ಪಿ.ಆರ್. ಕರಿಬಸವಶಾಸ್ತ್ರಿಗಳು ಅಗ್ರಗಣ್ಯರು. ವೀರಶೈವ ಸಮಾಜದ ಸಂಘಟನೆಗಾಗಿ ಈ ಸಮಾಜಕ್ಕೆ ಆದ ಅನ್ಯಾಯಗಳನ್ನು ಪ್ರತಿಭಟಿಸುವಲ್ಲಿ ಶಾಸ್ತ್ರಿಗಳು ಪ್ರಮುಖವಾದ ಪಾತ್ರವನ್ನು ನಿರ್ವಹಿಸಿದ್ದಾರೆ. ಪ್ರಕಾಂಡ ಪಂಡಿತರೂ ಉಭಯಭಾಷಾ ವಿದ್ವಾಂಸರೂ ಆದ ಶಾಸ್ತ್ರಿಗಳು ಅನೇಕ ಗ್ರಂಥಗಳನ್ನು ಸಂಸ್ಕೃತ ಮತ್ತು ಕನ್ನಡದಲ್ಲಿ ರಚಿಸಿದ್ದಾರೆ. ಪ್ರಾಚೀನ ಕೃತಿಗಳನ್ನು ಸಂಪಾದಿಸಿದ್ದಾರೆ, ಪರಿಷ್ಕರಿಸಿದ್ದಾರೆ, ಟೀಕೆ-ಟಿಪ್ಪಣಿಗಳನ್ನು ಬರೆದಿದ್ದಾರೆ. ಪಿ.ಆರ್. ಕರಿಬಸವಶಾಸ್ತ್ರಿಗಳ ಸಮಗ್ರಜೀವನದ ಒಂದು ಸ್ಥೂಲಪರಿಚಯವನ್ನು ಮಾಡಿಕೊಡಲು ಪ್ರಯತ್ನಿಸಲಾಗಿದೆ.

ಮೈಸೂರಿನ ಸುಪ್ರಸಿದ್ಧ ಆಯುರ್ವೇದ ಪಂಡಿತರಾಗಿದ್ದ ರುದ್ರಪ್ಪನವರು ಶಾಸ್ತ್ರಿಗಳವರ ತಂದೆ. ಶ್ರೀಮತಿ ನಂಜಮ್ಮ ಇವರ ತಾಯಿ. ಈ ದಂಪತಿಗಳಿಗೆ ನಾಲ್ವರು ಗಂಡುಮಕ್ಕಳು, ಇಬ್ಬರು ಹೆಣ್ಣುಮಕ್ಕಳು. ಮೊದಲನೆಯ ಮಗ ವೀರಪ್ಪಶಾಸ್ತ್ರಿ ಆಯುರ್ವೇದ ಪಂಡಿತರು. ಎರಡನೆಯವರೇ ಕರಿಬಸವಶಾಸ್ತ್ರಿಗಳು, ಖ್ಯಾತ ಸಂಸ್ಕೃತ ಕನ್ನಡ ವಿದ್ವಾಂಸರು. ಮೂರನೆಯವರು ಚೆನ್ನಬಸವಶಾಸ್ತ್ರಿ ಉಪಾಧ್ಯಾಯರು. ನಾಲ್ಕನೆಯವರು ನಂಜುಂಡಶಾಸ್ತ್ರಿಗಳು, ಶ್ರೇಷ್ಠಗಮಕಿಗಳು. ಹಂಸಕ್ಕ ಮತ್ತು ಶಾಂತಕ್ಕ ಹೆಣ್ಣುಮಕ್ಕಳು.

ರುದ್ರಪ್ಪನವರ ಎರಡನೆಯ ಮಕ್ಕಳಾದ ಕರಿಬಸವಶಾಸ್ತ್ರಿಗಳು ಶಾಲಿವಾಹನ ಶಕ ೧೭೭೦ರ ಕೀಲಕ ಸಂವತ್ಸರದಲ್ಲಿ ಎಂದರೆ ಕ್ರಿ.ಶ. ೧೮೪೮ರಲ್ಲಿ ಜನಿಸಿದರು. ಶಾಸ್ತ್ರಿಗಳ ಪ್ರಾಥಮಿಕ ವಿದ್ಯಾಭ್ಯಾಸವಾದ ಮೇಲೆ ಮೈಸೂರಿನಲ್ಲಿದ್ದ ಬೆಟ್ಟದಪುರದ ಬಸವಲಿಂಗದೇವರು. ಪಂಡಿತ ಜೀರಿಗೆ ಬಸವಲಿಂಗಪ್ಪನವರಲ್ಲಿ ಸಂಸ್ಕೃತ ಕನ್ನಡ ವ್ಯಾಸಂಗ ಮಾಡಿದರು. ಆಮೇಲೆ ಬಾಚಳ್ಳಿ ಶ್ರೀಕಂಠಶಾಸ್ತ್ರಿಗಳಲ್ಲಿ ಶಿಷ್ಯರಾಗಿ ಸಂಸ್ಕೃತ ನಾಟಕ, ಕಾವ್ಯಗಳನ್ನು ಅಭ್ಯಾಸ ಮಾಡಿದರು. ತಾವೇ ಸ್ವಂತವಾಗಿ ವೇದಾಂತ ವೀರಶೈವ ಸಿದ್ಧಾಂತಗಳನ್ನು ವ್ಯಾಸಂಗ ಮಾಡಿದರು. ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳವರಿಂದಲೂ ವಿದ್ಯೆ ಕಲಿತರೆಂಬ ಪ್ರತೀತಿ ಇದೆ. ಇದು ಹೇಗಾದರೂ ಇರಲಿ. ಬಾಲ್ಯದಲ್ಲಿಯೇ ಅಪಾರ ಪಾಂಡಿತ್ಯವನ್ನು ಮೈಗೂಡಿಸಿಕೊಂಡರೆಂಬುದಂತೂ ಸತ್ಯಸಂಗತಿ.

ಹತ್ತೊಂಬತ್ತನೆಯ ಶತಮಾನದಲ್ಲಿ ಕ್ರೈಸ್ತಧರ್ಮಪ್ರಸಾರಕ್ಕಾಗಿ ಭರತಖಂಡಕ್ಕೆ ಆಗಮಿಸಿದ ವಿದೇಶಿ ವಿದ್ವಾಂಸರು ದೇಶೀಯ ಭಾಷೆಗಳಿಗೆ ಮಹತ್ತರವಾದ ಸೇವೆಯನ್ನು ಸಲ್ಲಿಸಿರುವುದು ಇತಿಹಾಸ ಪ್ರಸಿದ್ಧವಾದುದು. ಕರ್ಣಾಟಕಕ್ಕೆ ಆಗಮಿಸಿದ ಈ ಕ್ರೈಸ್ತಪಾದ್ರಿಗಳು ಮೈಸೂರಿನಲ್ಲಿ ವೆಸ್ಲಿಯನ್‌ಮಿಷನ್ ಹೈಸ್ಕೂಲನ್ನು ಪ್ರಾರಂಭಿಸಿದರು. ಈ ಸಂಸ್ಥೆಯವರು ಕರಿಬಸವಶಾಸ್ತ್ರಿಗಳನ್ನು ಪ್ರಪ್ರಥಮ ಕನ್ನಡಪಂಡಿತರನ್ನಾಗಿ ನೇಮಿಸಿಕೊಂಡರು. ಸುಮಾರು ಹದಿನೈದುವರ್ಷಗಳ ಕಾಲ ಆ ಸಂಸ್ಥೆಯಲ್ಲಿ ಸೇವೆಯನ್ನು ಸಲ್ಲಿಸಿದ ಶಾಸ್ತ್ರಿಗಳು ಆಮೇಲೆ ಎರಡುವರ್ಷಗಳಕಾಲ ಭಾಷೋಜ್ಜೀವಿನಿ ಸಭೆಯ ಮುಖ್ಯೋಪಾಧ್ಯಾಯರಾಗಿಯೂ ಇದ್ದರು.

ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಮೈಸೂರಿನ ಮಹಾರಾಜರಾಗಿದ್ದರು. ೧೮೩೩ರಲ್ಲಿ ಪ್ರಾರಂಭವಾದ "ರಾಜಾಸ್ಕೂಲ್" ಈ ರಾಜರ ಆಶ್ರಯದಿಂದ ಮಹಾರಾಜ ಕಾಲೇಜಾಗಿ ರೂಪುಗೊಂಡಿತು. ವ್ಯಾಕರಣದ ಬಿ. ಮಲ್ಲಪ್ಪ

ನವರನ್ನು ಸೀನಿಯರ್ ಕನ್ನಡ ಪಂಡಿತರನ್ನಾಗಿ ನೇಮಿಸಿದರು. ಇವರು ನಿವೃತ್ತರಾದ ಮೇಲೆ ೧೮೭೯ರಲ್ಲಿ ಕರಿಬಸವ ಶಾಸ್ತ್ರಿಗಳು ಆ ಹುದ್ದೆಗೆ ನೇಮಕಗೊಂಡರು. ಸುಮಾರು ಇಪ್ಪತ್ತೇಳು ವರ್ಷಗಳ ಕಾಲ ಅಸಂಖ್ಯಾತ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿದ್ದಾರೆ. ಶಾಸ್ತ್ರಿಗಳ ದೀರ್ಘಕಾಲದ ಸೇವೆಯನ್ನು ಪರಿಗಣಿಸಿ ಮೈಸೂರು ಮಹಾರಾಜರವರ ಕಾಲೇಜಿನ ಕರ್ಣಾಟಕ ಸಂಘದವರು ೪.೩.೧೯೨೯ರಲ್ಲಿ ಭಕ್ತಿಪೂರ್ವಕವಾಗಿ ಒಂದು ಬಿನ್ನಹ ಪತ್ರಿಕೆಯನ್ನು ಸಮರ್ಪಿಸಿದ್ದಾರೆ.

ಕರಿಬಸವಶಾಸ್ತ್ರಿಗಳು ಅಧ್ಯಾಪಕ ವೃತ್ತಿಯಲ್ಲಿದ್ದರೂ ಸಾಮಾಜಿಕ, ಸಾರ್ವಜನಿಕ, ಸಾಹಿತ್ಯಕ ಕಾರ್ಯಗಳಿಗೇ ತಮ್ಮ ಉಳಿದೆಲ್ಲ ಸಮಯವನ್ನೂ ವಿನಿಯೋಗಿಸಿದ್ದಾರೆ. ಮೈಸೂರಿನ ಭಾಷೋಜ್ಜೀವಿನಿ ಸಂಸ್ಕೃತ ಪಾಠಶಾಲೆಯ ಸಂಸ್ಥಾಪಕರಲ್ಲಿ ಒಬ್ಬರಾಗಿದ್ದಾರೆ. ಮುಡುಕುತೊರೆಯಲ್ಲಿ "ವೀರಶೈವಮತ ಸಂವರ್ಧಿನೀ ಸಭೆ"ಯನ್ನು ಸ್ಥಾಪಿಸಿ ಅಂತ್ಯಕಾಲದವರೆಗೂ ಅದರ ಅಧ್ಯಕ್ಷರಾಗಿದ್ದರು. ವೀರಶೈವಧರ್ಮ ಹಾಗೂ ಸಾಹಿತ್ಯ ಪ್ರಚಾರಕ್ಕಾಗಿ 'ಶಂಕರವಿಲಾಸ' ಎಂಬ ಮುದ್ರಣಾಲಯವನ್ನು ಸ್ಥಾಪನೆ ಮಾಡಿದ್ದಾರೆ. 'ವೀರಶೈವಮತ ಪ್ರಕಾಶಿಕೆ' ಎಂಬ ಮಾಸಪತ್ರಿಕೆಯನ್ನು ಪ್ರಾರಂಭಿಸಿ ಅನೇಕ ಪ್ರಾಚೀನ ಕೃತಿಗಳನ್ನು ಈ ಪತ್ರಿಕೆಯ ಮೂಲಕ ಪ್ರಕಟಿಸಿದ್ದಾರೆ.

ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತಗಳಲ್ಲಿ ಪ್ರವೀಣರು. ಅಲಂಕಾರ, ವ್ಯಾಕರಣ, ತರ್ಕ ಮುಂತಾದ ಶಾಸ್ತ್ರಗಳಲ್ಲಿ ಪಾರಂಗತರು. ಷಡ್ದರ್ಶನಗಳು, ಸ್ಮೃತಿಗಳು, ಆಗಮಗಳು, ವೇದಗಳು, ಉಪನಿಷತ್ತುಗಳು, ಭಾರತ, ಭಾಗವತ, ರಾಮಾಯಣ -ಇವೇ ಮೊದಲಾದವುಗಳ ಬಗೆಗೆ ಆಳವಾದ ತಿಳಿವಳಿಕೆ ಇದ್ದವರು. ಒಟ್ಟಿನಲ್ಲಿ ಪ್ರಾಚೀನ ಭಾರತೀಯ ಶಾಸ್ತ್ರಪುರಾಣಗಳ ಬಗೆಗೆ ಸ್ಪಷ್ಟವಾದ ಪರಿಕಲ್ಪನೆ ಇದ್ದವರು. ಇವೆಲ್ಲವುಗಳಿಂದ ಕರಿಬಸವಶಾಸ್ತ್ರಿಗಳು ಪ್ರಕಾಂಡ ಪಂಡಿತರೆನಿಸಿಕೊಂಡಿದ್ದಾರೆ.

ಶಾಸ್ತ್ರಿಗಳಿಗೆ ಲಭ್ಯವಾದ ಪ್ರಶಸ್ತಿಗಳು ಹಲವಾರು. ಮೈಸೂರು ಅರಮನೆಯಿಂದ 'ಆಸ್ಥಾನ ಮಹಾವಿದ್ವಾನ್' ಗೌರವ ಪಡೆದ ವೀರಶೈವರಲ್ಲಿ ಮೊದಲಿಗರು ಎಂಬ ಕೀರ್ತಿಗೆ ಭಾಜನರಾಗಿದ್ದಾರೆ. ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ೧೯೧೮ನೆಯ ವರ್ಷದ ದರಬಾರಿನಲ್ಲಿ 'ಕರ್ಣಾಟಕ ಭಾಷಾಕರ' ಎಂಬ ಪ್ರಶಸ್ತಿಯನ್ನೂ ನವರತ್ನಕಂಕಣ ಶಾಲುಜೋಡಿಯನ್ನೂ ಕೊಟ್ಟು ಗೌರವಿಸಿದ್ದಾರೆ. ಶಾಸ್ತ್ರಿಗಳ ಪಾಂಡಿತ್ಯವನ್ನು ಅರಿತ ಸೊಲ್ಲಾಪುರದ ವಾರದ ಮಲ್ಲಪ್ಪನವರು ಶಾಸ್ತ್ರಿಗಳನ್ನು ಬರಮಾಡಿಕೊಂಡು ವೀರಶೈವಧರ್ಮದ ಬಗೆಗೆ ಅವರಿಗಿದ್ದ ಅಪಾರ ಪಾಂಡಿತ್ಯಕ್ಕೆ ಮಾರುಹೋಗಿ ವಿಪುಲಧನ ಶಾಲುಜೋಡಿಯನ್ನಿತ್ತು ಸನ್ಮಾನಿಸಿದ್ದಾರೆ. ಚಿತ್ರದುರ್ಗ ಬೃಹನ್ಮಠದ ಜಗದ್ಗುರುಗಳಾದ ಜಯದೇವ ಸ್ವಾಮಿಗಳು ಶಾಸ್ತ್ರಿಗಳನ್ನು ತಮ್ಮಲ್ಲಿಗೆ ಕರೆಸಿಕೊಂಡು ಸೂಕ್ತವಾಗಿ ಸತ್ಕರಿಸಿ ಆಶೀರ್ವದಿಸಿದ್ದಾರೆ.

ಕರಿಬಸವಶಾಸ್ತ್ರಿಗಳು ಶುದ್ಧವೈದಿಕರಾದರೂ ಅವರ ಲೌಕಿಕಪ್ರಜ್ಞೆ ಅಸಾಧಾರಣವಾದುದು. ಯಜಮಾನ್ ವೀರಸಂಗಪ್ಪನವರು ಪ್ರಾರಂಭಿಸಿದ ಮೈಸೂರು ಸ್ಟಾರ್‌ಪತ್ರಿಕೆ ವೀರಶೈವ ಸಮಾಜಕ್ಕೆ ಮಹೋನ್ನತ ಸೇವೆಯನ್ನು ಸಲ್ಲಿಸಿರುವುದನ್ನು ಸುವರ್ಣಾಕ್ಷರಗಳಲ್ಲಿ ದಾಖಲಿಸಬೇಕಾಗಿದೆ. ಸುಮಾರು ೫೮ ವರ್ಷಗಳ ಕಾಲ ಈ ಪತ್ರಿಕೆ ವೀರಶೈವಧರ್ಮ ನಾಡುನುಡಿಗಳಿಗೆ ಅಮೋಘಸೇವೆ ಸಲ್ಲಿಸಿದೆ. ಈ ಪತ್ರಿಕೆಯ ಸಂಪಾದಕರು ಯಜಮಾನ್ ವೀರಸಂಗಪ್ಪನವರಾದರೂ ವೀರಶೈವಧರ್ಮ ಸಾಹಿತ್ಯ, ಆಚಾರ ವಿಚಾರಗಳ ಬಗೆಗೆ ಲೇಖನಗಳನ್ನು ಬರೆಯುತ್ತಿದ್ದವರು ಕರಿಬಸವಶಾಸ್ತ್ರಿಗಳು. ೧೮೮೧ರ ಸೆನ್ಸಸ್ ರಿಪೋರ್ಟಿನಲ್ಲಿ ವೀರಶೈವರನ್ನು ಶೂದ್ರವರ್ಗಕ್ಕೆ ಸೇರಿಸಲಾಗಿತ್ತು. ಈ ವರದಿಯನ್ನು ಬಲವಾಗಿ ಖಂಡಿಸಿ ವೀರಶೈವಧರ್ಮದ ವಿಸ್ತಾರವಾದ ಪರಿಚಯವನ್ನು ಮಾಡಿಕೊಡಲಾಯಿತು. ಮೈಸೂರು ಸ್ಟಾರ್‌ಪತ್ರಿಕೆಯಲ್ಲಿ ಅನೇಕರು ಮಾಡಿದ ಆರೋಪ ಪ್ರತ್ಯಾರೋಪಗಳನ್ನು ಪ್ರಕಟಿಸಲಾಯಿತು. ಸುಮಾರು ಎರಡು ವರ್ಷಗಳಕಾಲ ನಡೆದ ಈ ವಾದವಿವಾದಗಳನ್ನೆಲ್ಲ ಪುಸ್ತಕರೂಪದಲ್ಲಿ ಪ್ರಕಟಿಸಲಾಗಿದೆ. ಈ ಪ್ರಸಂಗದಲ್ಲಿ ಕರಿಬಸವಶಾಸ್ತ್ರಿಗಳ ಪಾತ್ರ ಪ್ರಧಾನವಾಗಿತ್ತು.

'ವೀರಶೈವಮತ ಪ್ರಕಾಶಿಕೆ' ಎಂಬ ಪತ್ರಿಕೆಯನ್ನು ಶಾಸ್ತ್ರಿಗಳು ಪ್ರಾರಂಭಿಸಿದರು. ಅವರ ಸಂಪಾದಕತ್ವದಲ್ಲಿ ೧೮೯೧ರಲ್ಲಿ ಪ್ರಥಮ ಸಂಚಿಕೆ ಪ್ರಕಟವಾಯಿತು. ಈ ಪತ್ರಿಕೆಯಲ್ಲಿ ಪ್ರಾಚೀನ ಕಾವ್ಯಗಳು ಭಾಗ ಭಾಗವಾಗಿ ಪ್ರಕಟವಾಗುತ್ತಿದ್ದುದೇ ಅಲ್ಲದೆ ವೀರಶೈವ ಧಾರ್ಮಿಕ ಸಾಮಾಜಿಕ ಸಾಂಸ್ಕೃತಿಕ ವಿಷಯಗಳು ಪ್ರಕಟವಾಗುತ್ತಿದ್ದವು. ಈ ಪತ್ರಿಕೆ ಮಾಡಿರುವ

ಕಾರ್ಯ ನ ಭೂತೋ ನ ಭವಿಷ್ಯತಿ ಎನ್ನುವಂತಿದೆ. ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳು ಶಿವಾಧೀನರಾದ ಸಂದರ್ಭದ ಒಕ್ಕಣೆ ಇಂತಿದೆ: "ಈಗ್ಯೆ ಮೂರು ತಿಂಗಳ ಕೆಳಗೆ ಜೀವಿಸುತ್ತಿದ್ದ ಬಸವಪ್ಪಶಾಸ್ತ್ರಿಗಳು ಸಂಸ್ಕೃತ ಕರ್ಣಾಟ ಭಾಷೆಗಳೆರಡರೊಳಗೂ ಪಾಂಡಿತ್ಯವುಳ್ಳವರಾಗಿ ಪ್ರಾಚೀನ ಲಾಕ್ಷಣಿಕ ಕವಿಗಳಿಗೆ ಸಮಾನವಾಗಿ, ಶಾಕುಂತಲ ಮೊದಲಾದ ಗ್ರಂಥಗಳನ್ನು ಕನ್ನಡ ಭಾಷೆಯಿಂದ ರಚಿಸಿ, ಕರ್ಣಾಟ ಕಾಳಿದಾಸನೆಂಬ ಬಿರುದನ್ನು ಪಡೆದಿದ್ದರು ಮತ್ತು ಮಹಾರಾಜರ ಆಸ್ಥಾನ ಕವಿಗಳೆನಿಸಿ ಅನೇಕ ಸಂದರ್ಭಗಳಲ್ಲಿ ವಿದ್ವತ್ಸಭೆಯಲ್ಲಿ ಬಹುಮಾನವನ್ನೂ ಗೌರವವನ್ನೂ ಪಡೆದು ಪ್ರಸಿದ್ಧರಾಗಿದ್ದರು. ಇವರಿಗೆ ಸಮಾನವಾದ ಯೋಗ್ಯತೆಯುಳ್ಳವರು ಈ ಇಂಡಿಯಾ ದೇಶದೊಳಗೆ ನಿಶ್ಚಯವಾಗಿ ಯಾರೂ ಇಲ್ಲ. ಇವರ ಶಕ್ತಿಯೂ ಕವಿತಾಧೋರಣೆಯೂ ವಾಚಾಮಗೋಚರವಾದದ್ದು. ರಾಜಸಭೆಯಲ್ಲಿ ಇವರಿಗಿದ್ದ ಮಾನವು ಮೈಸೂರು ದೇಶದಲ್ಲಿರುವ ಲಕ್ಷಾಧಿಕಾರಿಗಳಾದ ಧನಿಕರಿಗಾದರೂ ಇರುವುದೇ? ಉತ್ತಮಕುಲದಲ್ಲಿ ಹುಟ್ಟಿ ಸೂಕ್ಷ್ಮಮತಿಗಳಾಗಿದ್ದರೂ ವಿದ್ಯಾಭ್ಯಾಸವಂ ಮಾಡದೆ ಕುಕ್ಷಿಂಭರಿಗಳಾಗಿ ಕಾಲಹರಣವನ್ನು ಮಾಡುವ ಕೋಟಿ ಮಂದಿಗಳಿದ್ದರೇನು? ಬಸವಪ್ಪಶಾಸ್ತ್ರಿಯಂಥಾವನಲ್ಲದೆ ಕುಲಶಿರೋಮಣಿ. ವೀರಶೈವ ಮತಸ್ಥರಲ್ಲಿ ಎಷ್ಟೋ ಮಂದಿ ಹಣವಂತರಿದ್ದಾಗ್ಯೂ ಅವರ ಹೆಸರನ್ನು ಒಬ್ಬರು ಕಂಡರೆ ಒಬ್ಬರು ಕಾಣರು. ಬಸವಪ್ಪಶಾಸ್ತ್ರಿಗಳಾದರೋ ಈ ಮೈಸೂರು ದೇಶದಲ್ಲಿ ಮಾತ್ರವಲ್ಲದೆ ಅನ್ಯದೇಶದಲ್ಲಿಯೂ ಪ್ರಸಿದ್ಧರಾಗಿದ್ದರು. ಇದೆಲ್ಲಾ ವಿದ್ಯಾಮಹಿಮೆಯೇ ಹೊರತು ಇನ್ನೇನಾದರೂ ಉಂಟೆ? ಈ ಸಂಸ್ಥಾನದಲ್ಲಿ ಅವರೊಬ್ಬರಿದ್ದುದರಿಂದ ಅನೇಕ ಕವಿಗಳೂ ವಿದ್ವಾಂಸರೂ ಇದ್ದಾರೆಂಬ ಪ್ರತೀತಿಯುಂಟಾಗಿತ್ತು. ಅದರಿಂದ ವೀರಶೈವಮತಕ್ಕೆ ಎಷ್ಟೋ ಗೌರವವಿತ್ತು. ಅಂಥವರ ಸಾನ್ನಿಧ್ಯವು ಇಷ್ಟು ಶೀಘ್ರವಾಗಿ ತಪ್ಪಿಹೋದದ್ದು ವೀರಶೈವಮತದ ದೌರ್ಭಾಗ್ಯವೆಂತಲೇ ಎಣಿಸಬೇಕು."

ಮುಡುಕುತೊರೆಯಲ್ಲಿ ೧೯೧೦ಳರಲ್ಲಿ ಸ್ಥಾಪಿತವಾದ "ಶ್ರೀ ವೀರಶೈವಮತ ಸಂವರ್ಧಿನೀ ಸಭಾ" ವೀರಶೈವಧರ್ಮ ಸಾಹಿತ್ಯ ಸಂಸ್ಕೃತಿಗಳ ಪ್ರಸಾರಕ್ಕೆ ಅವಿಸ್ಮರಣೀಯವಾದ ಸೇವೆಯನ್ನು ಸಲ್ಲಿಸಿದೆ. ಕರಿಬಸವಶಾಸ್ತ್ರಿಗಳು ಈ ಸಭೆಯ ಆಜೀವಾಧ್ಯಕ್ಷರು. ಪ್ರತಿವರ್ಷವೂ ನಡೆಯುತ್ತಿದ್ದ ಸಭೆಯ ಕಾರ್ಯಕಲಾಪಗಳ ಮಂಟಪಕ್ಕೆ ಅಂದು ಸಮಾಜದಲ್ಲಿ ಪ್ರಮುಖರಾದವರ ಹೆಸರನ್ನೇ ಇಡುವ ಸಂಪ್ರದಾಯವನ್ನು ಶಾಸ್ತ್ರಿಗಳು ಪ್ರಾರಂಭಿಸಿದರು. ೧೯೧೬ರಲ್ಲಿ ನಡೆದ ಸಭೆಯ ಮಂಟಪಕ್ಕೆ ಮಧುವನಹಳ್ಳಿ ಮಣೇಗಾರ್ ಗುರುನಂಜಪ್ಪನವರ ಹೆಸರನ್ನು ಇಡಲಾಗಿತ್ತು. ಎರಡು ದಿನಗಳು ನಡೆದ ಅಧಿವೇಶನದ ಎರಡನೆಯ ದಿನ ವಿದ್ವಾಂಸರಿಂದ ಧಾರ್ಮಿಕ ಉಪನ್ಯಾಸಗಳು ನಡೆದು ಬಹುಮಾನಗಳನ್ನೂ ನೀಡಿರುವುದು ಉಲ್ಲೇಖನೀಯವಾದುದು. ಕನ್ನಡದಲ್ಲಿ ರಚಿತವಾಗಿದ್ದ ಶ್ರೀ ರೇಣುಕಾಚಾರ್ಯರ ಚರಿತ್ರೆಯನ್ನು ವೇ॥ ಶ್ರೀಕಂಠಶಾಸ್ತ್ರಿಗಳು ಸಂಸ್ಕೃತ ಭಾಷೆಯಲ್ಲಿ ಚಂಪುವಿನಲ್ಲಿ ಬರೆದಿರುವುದನ್ನು ಪ್ರಶಂಸಿಸಿ ಅವರಿಗೆ ೨೫ ರೂ.ಗಳ ಬಹುಮಾನ ಕೊಡಲಾಯಿತು. ವೇ॥ ಶಿರಸಿ ಗುರುಶಾಂತಶಾಸ್ತ್ರಿಗಳು ವರ್ಣಾಶ್ರಮದಾವಶ್ಯಕತೆಯ ವಿಷಯವಾಗಿ ಬರೆದಿದ್ದ ಉಪನ್ಯಾಸಕ್ಕೆ ೧೫ ರೂ.ಗಳನ್ನು ನೀಡಲಾಯಿತು. ದಶಕರ್ಮವೇ ಮೊದಲಾದ ವಿಧಿಗಳನ್ನು ಚೆನ್ನಾಗಿ ವ್ಯಾಸಂಗ ಮಾಡಿಕೊಂಡು ಬಂದಿದ್ದ ತ್ಯಾಮಗೊಂಡ್ಲು ವೇ॥ ಸಿದ್ಧಲಿಂಗ ಶಾಸ್ತ್ರಿಗಳ ಪೌರೋಹಿತ್ಯದಲ್ಲಿನ ಯೋಗ್ಯತೆಯನ್ನು ಪರಿಗಣಿಸಿ ಎಂಟು ರೂ.ಗಳು ಬಹುಮಾನವನ್ನು ಯೋಗ್ಯತಾಪತ್ರವನ್ನೂ ಕೊಟ್ಟಿದ್ದಾರೆ. ಅಲ್ಲದೆ ಪಂಚಾಚಾರ್ಯರ ಮೂರ್ತಿಗಳನ್ನೂ ಅವರು ಉದ್ಭವಿಸಿದ ಲಿಂಗಗಳನ್ನೂ ಪ್ರತಿಷ್ಠಾಪಿಸುವುದಕ್ಕಾಗಿ ಸಭಾಧ್ಯಕ್ಷರಾದ ಕರಿಬಸವಶಾಸ್ತ್ರಿಗಳು ಐದುನೂರು ರೂಪಾಯಿಗಳನ್ನು ದಾನಮಾಡಿದ್ದಾರೆ. ಇದು ಶಾಸ್ತ್ರಿಗಳ ಧರ್ಮಶ್ರದ್ಧೆಗೆ ಜೀವಂತನಿದರ್ಶನವಾಗಿದೆ. ವೀರಶೈವ ಸಂವರ್ಧಿನಿ ಸಭೆಯ ಹದಿನೈದನೆಯ ವರ್ಷದ ಅಧಿವೇಶನದಲ್ಲಿ ಶಾಸ್ತ್ರಿಗಳು ಮಾಡಿದ ಭಾಷಣದಲ್ಲಿ ಈ ಸಭೆಯ ಧ್ಯೇಯೋದ್ದೇಶಗಳೇ ಮೊದಲಾದ ಬಹುಮುಖ್ಯವಾದ ಸಂಗತಿಗಳನ್ನು ನಿರೂಪಿಸಿದ್ದಾರೆ. "ಯೂರೋಪ್, ಅಮೆರಿಕ, ಆಸ್ಟ್ರೇಲಿಯ ಎಂಬ ಮೂರು ಖಂಡಗಳೊಳಗೆ ಕ್ರೈಸ್ತಮತವೂ ಆಫ್ರಿಕಾ ಖಂಡದಲ್ಲಿ, ಮಹಮದೀಯ ಮತವೂ ಇಂಡಿಯಾ ದೇಶದೊಳಗೆ ಹಿಂದೂ ಮತ್ತು ಜೈನಮತಗಳು, ಏಷ್ಯಾಖಂಡದೊಳಗೆ ಬರ್ಮಾ, ಚೈನಾ, ಜಪಾನ್ ಎಂಬ ದೇಶಗಳಲ್ಲಿ ಬೌದ್ಧಮತವೂ ಪ್ರಚಾರದಲ್ಲಿರುವುದೂ ಕ್ರೈಸ್ತರಿಗೆ ಬೈಬಲ್ ಮಹಮದೀಯರಿಗೆ ಖುರಾನ್, ಬೌದ್ಧರಿಗೆ ತ್ರಿಪಿಟಕಾದಿಗಳೂ ಜೈನರಿಗೆ ಜಿನಾಗಮವೂ ಹಿಂದೂಗಳಿಗೆ ಶ್ರುತಿ, ಸ್ಮೃತಿ, ಆಗಮ, ಪುರಾಣ, ಉಪನಿಷತ್ತು, ಇತಿಹಾಸ, ವೇದಾಂಗಗಳೂ, ಷಡ್ದರ್ಶನಗಳೂ ಪ್ರಮಾಣವಾಗಿರುವುವು" ವೀರಶೈವಮತವು ಶೈವಮತದ ಭೇದವೇ ಆಗಿರುವುದರಿಂದ ಆರ್ಯಮತ ಶಾಖೆಯಾಯಿತು. ವೀರಶೈವಧರ್ಮಕ್ಕೆ

ಲಿಂಗಧಾರಣವೇ ಮುಖ್ಯಧರ್ಮವು. ಭಸ್ಮರುದ್ರಾಕ್ಷಧಾರಣಾದಿಗಳೇ ಸಾಮಾನ್ಯಧರ್ಮವು. ಪೂರ್ವದಲ್ಲಿ ರೇಣುಕಾದಿ ಚತುರಾಚಾರ್ಯರು ಶಿವಾಜ್ಞೆಯಿಂ ಭೂಲೋಕದಲ್ಲಿ ಲಿಂಗಮುಖದಿಂದವತರಿಸಿ ಅಲ್ಲಲ್ಲಿ ಸಂಚರಿಸುತ್ತ ಪರಿಪಕ್ವಾಂತಃಕರಣರಾಗಿದ್ದವರಿಗೆಲ್ಲ ದೀಕ್ಷಾಪೂರ್ವಕ ಲಿಂಗಧಾರಣ ಮಾಡಿ ಲಿಂಗಾಂಗ ಸಾಮರಸ್ಯವನ್ನರುಹಿ ವೀರಶೈವ ಮತವಂ ಸ್ಥಾಪಿಸಿದರು. ಕೃಷಿ, ವಾಣಿಜ್ಯ, ಗುರುತ್ವ, ಐಶ್ವರ್ಯ, ಅಧಿಕಾರ ಮುಂತಾದುವು ಸಂಖ್ಯೆಯುಳ್ಳವರಾಗಿಯೂ ವೀರಶೈವಮತಕ್ಕೆ ಅಸಾಧಾರಣ ಪೂಜ್ಯತೆಯೂ ಏಳಿಗೆಯೂ ಇಲ್ಲವಾಯಿತು.

ಈ ಅಂಶವನ್ನು ಕುರಿತು ಕೆಲವರು ವಿವೇಕಶಾಲಿಗಳು ವರ್ಣಾಶ್ರಮಧರ್ಮಗಳೊಡನೆ ಮತಧರ್ಮಗಳನ್ನು ಸುಧಾರಿಸಬೇಕೆಂದಾಲೋಚಿಸಿ ಪ್ರಸಿದ್ಧವಾದ ಮುಡುಕುತೊರೆ ಕ್ಷೇತ್ರದಲ್ಲಿ ಪ್ರತಿವರ್ಷ ಜಾತ್ರೆಯ ಕಾಲದಲ್ಲಿ ವೀರಶೈವಮತ ಸಂವರ್ಧಿನಿಯೆಂಬ ಹೆಸರಿನಿಂದ ಒಂದು ಸಭೆಯಂ ಸ್ಥಾಪಿಸಿ ನನ್ನನ್ನು ಆಜೀವಾಧ್ಯಕ್ಷನನ್ನಾಗಿ ಮಾಡಿದರು. ಇಲ್ಲಿಗೆ ೧೪ ವರ್ಷಗಳು ಕಳೆದವು. ಇದು ೧೫ನೆಯ ವರ್ಷವು. ಸ್ಥಾಪಿಸಿದಾರಭ್ಯ ಪ್ರತಿವರ್ಷವೂ ತಕ್ಕಮಟ್ಟಿಗೆ ಅಭಿವೃದ್ಧಿಯಲ್ಲಿಯೇ ಬಂದಾಗ್ಯೂ ಲಿಂಗಧಾರಿಗಳಲ್ಲಿ ಕೆಲವರು ಹೊರಗೆ ಮಾತ್ರ ಆಸಕ್ತಿಯುಳ್ಳವರಂತೆ ನಟಿಸುತ್ತಾ ಒಳಗೆ ಅಭಿಮಾನವಿಲ್ಲದವ ರಾಗಿದ್ದಾರೆ. ಕೆಲವರು ಈ ಸಭೆಯು ಮತಕ್ಕೆ ಪ್ರಯೋಜನಕರವೆಂದು ತಿಳಿದಾಗ್ಯೂ ಲೋಭದಿಂದ ಉದಾಸೀನಭಾವ ದಿಂದಿದ್ದಾರೆ. ಇನ್ನು ಕೆಲವರು ಕಣ್ಣುಳ್ಳವರ ಸಂಗಡ ಗೊಂಬೆಯಾಟಕ್ಕೆ ಹೋಗುವ ಕುರುಡರಂತಿದ್ದಾರೆ. ಕೆಲವರು ಈ ಸಭೆಯೇತಕ್ಕೆ? ವರ್ಷಕ್ಕೊಂದು ಬಾರಿ ಯಾವ ಕೆಲಸವಿದ್ದರೂ ಬಿಟ್ಟು ಸಭೆಗೆ ಹೋಗಬೇಕಲ್ಲಾ! ಇದೆಲ್ಲಿಯ ಕಾಟ ಎಂದಿಗೆ ತಣ್ಣಗಾದೀತೋ ಎಂದು ಹಾರೈಸುತ್ತಾರೆ. ಕೆಲವರು ಮಾತ್ರ ಹಿಡಿದ ಕೆಲಸವಂ ಬಿಟ್ಟರೆ ಅಪಮಾನವಾದೀತೆಂದು ಅಭಿಮಾನಕ್ಕೆ ಒದ್ದಾಡುತ್ತಾರೆ. ಹೀಗೆಲ್ಲ ಕೊನೆಯ ಪಕ್ಷ ಮೈಸೂರು ದೇಶದಲ್ಲಿರತಕ್ಕ ವೀರಶೈವ ಸಂಪ್ರದಾಯಕರಾದ ಪ್ರಮುಖ ಗುರುವಂಶೀಯರೂ ಪ್ರಸಿದ್ಧ ಶಿಷ್ಯವಂಶೀಯರೆಲ್ಲಾ ಸೇರಿ ಸ್ವಮತಾಭಿಮಾನದಿಂದಾಗಲಿ ಮತಾಂಧರ ಮೇಲಣ ಹುರುಡಿನಿಂದಾಗಲಿ, ವಿದ್ಯೆ, ಬುದ್ಧಿ, ಆಚಾರ, ಸಿದ್ಧಾಂತ ಮುಂತಾದವುಗಳ ಸುಧಾರಣೆಯಿಂದ ನಮ್ಮ ಮತಕ್ಕೆ ಗೌರವಂ ತರಬೇಕೆಂಬ ಉದಾರಾಭಿಮಾನವುಳ್ಳವರಾಗಿ ಈ ವೈದಿಕ ಸಭಾಕಾರ್ಯವಂ ಸ್ವಕಾರ್ಯಕ್ಕಂಗವಾಗಿಟ್ಟು ನಡೆಸುತ್ತಾ ಬಂದರೆ ಇನ್ನು ಕೆಲವು ವರ್ಷಗಳೊಳಗಾಗಿ ಉದ್ದಿಷ್ಟ ಫಲವು ಸಿದ್ಧಿಸದಿರಲಾರದು."

ವೀರಶೈವಮತ ಸಂವರ್ಧಿನೀಸಭೆ ಕೈಕೊಂಡ ಮತ್ತೊಂದು ಮಹತ್ವದ ಕಾರ್ಯವೆಂದರೆ ಈ ಧರ್ಮಬೋಧೆಯ ಉಪನ್ಯಾಸಗಳನ್ನು ಏರ್ಪಡಿಸಿದ್ದು, ಇದಕ್ಕಾಗಿ ವೇದಮೂರ್ತಿಗಳಾದ ಶಿರಸಿ ಗುರುಶಾಂತಶಾಸ್ತ್ರಿಗಳು, ಸಿದ್ಧಲಿಂಗಶಾಸ್ತ್ರಿಗಳು, ಚೆನ್ನವೀರಾರ್ಯರು, ಹುಚ್ಚಪ್ಪಶಾಸ್ತ್ರಿಗಳು, ಬಿ. ಮಹಾದೇವಶಾಸ್ತ್ರಿಗಳು, ಚಂದ್ರಶೇಖರದೇವರು, ಮೊದಲಾದವರನ್ನು ನೇಮಿಸಿದರು. ಇವರು ಮೂರುತಿಂಗಳು ಗ್ರಾಮಾಂತರ ಪ್ರದೇಶಗಳಲ್ಲಿ ಸಂಚರಿಸಿ ಉಪನ್ಯಾಸಗಳನ್ನು ನೀಡಬೇಕೆಂದು ತೀರ್ಮಾನಿಸಿದ್ದಾರೆ. ಅಲ್ಲದೆ ಶಿರಸಿ ಗುರುಶಾಂತಶಾಸ್ತ್ರಿಗಳು ನ್ಯಾಯಶಾಸ್ತ್ರ ವೇದಾಂತಶಾಸ್ತ್ರಗಳನ್ನು ಅಭ್ಯಾಸ ಮಾಡುತ್ತಿರುವುದರಿಂದ ಅವರಿಗೆ ಒಂದು ವರ್ಷದವರೆಗೆ ಮಾಹೆಯಾನ ಆರುರೂಪಾಯಿಗಳು ಸ್ಕಾಲರ್‌ಷಿಪ್ ಕೊಡುವಂತೆಯೂ ನಿರ್ಧಾರ ಮಾಡಿದ್ದಾರೆ.

ಈ ಸಭೆಯ ಆಶ್ರಯದಲ್ಲಿ ವಿದ್ವಾಂಸರು ನೀಡಿದ ಉಪನ್ಯಾಸಗಳನ್ನು ಪುಸ್ತಕರೂಪದಲ್ಲಿ ತರಬೇಕೆಂದು ನಿರ್ಧರಿಸಿ ಎರಡು ಸಂಪುಟಗಳನ್ನು ಹೊರತಂದಿದ್ದಾರೆ. ಅವುಗಳಲ್ಲಿ ಸಮಾವೇಶಗೊಂಡಿರುವ ವಿಷಯಗಳು ಮಹತ್ವಪೂರಿತವಾದುವು. ಸಭೆಯ ಮುಖ್ಯೋದ್ದೇಶ, ಮೈಸೂರಿನ ಸೆನ್ಸರ್ ರಿಪೋರ್ಟ್ ಭಾಷಾಂತರ, ಎತ್ನಾಗ್ರಫಿ ವಿಷಯ, ಸಾಂಖ್ಯಾದಿ ಸರ್ವಮತ ಸ್ವರೂಪ, ವೀರಶೈವಮತದ ಕರ್ತವ್ಯಾಂಶಗಳು, ಆ ಪ್ರಶ್ನೆಗಳು ಮತ್ತು ಅವುಗಳ ಉತ್ತರವು. ರಾವಸಾಹೇಬ್ ವಾರದ ಮಲ್ಲಪ್ಪ, ಶಿರಸಂಗಿ ದೇಸಾಯಿ ಇವರ ಸ್ಮರಣೀಯ ಚರಿತ್ರೆ, ಷಟ್ಸ್ಥಲ ವಿಷಯ, ಸಮಾಜೋನ್ನತೆ, ವೀರಶೈವಮತ ಪ್ರಚಾರ, ಲಿಂಗಧಾರಣ, ವೀರಶೈವಮತ ವಿಷಯ, ಗುರುತ್ವಕ್ಕೆ ವಿದ್ಯಾವಶ್ಯಕತೆ, ಶಿವದೀಕ್ಷೆ, ಗುರುಲಿಂಗ ವಿಷಯ, ಆಸ್ತಿಕತೆ, ಮಠಾಧಿಕಾರ, ಶಿವಭಕ್ತಿ, ಆಗಮಪ್ರಾಮಾಣ್ಯ, ವೀರಶೈವಮತಾಭಿವೃದ್ಧಿಯ ಸಹಾಯಧನ, ಪಂಚಕಸೂತಕ ವಿಚಾರ, ವಿರಕ್ತಾಶ್ರಮ ಲಕ್ಷಣ, ವೀರಶೈವಮತದ ಸಪ್ತಸೋಪಾನ, ವರ್ಣಾಶ್ರಮ ವಿಚಾರ, ಶಿವಾರಾಧ್ಯ ಮತಕ್ಕೂ ಶಿವಾಚಾರ್ಯ

ಮತಕ್ಕೂ ಇರುವ ಭೇದ, ವೀರಶೈವ ಮತಕ್ಕುಂಟಾದ ನ್ಯೂನತೆಗಳು, ಕ್ರಿಯಾಜ್ಞಾನ ಸ್ವರೂಪವು, ನವವಿಧಭಕ್ತಿಸ್ವರೂಪವು, ರೇಣುಕಾಚಾರ್ಯರ ಸಂಕ್ಷಿಪ್ತ ಚರಿತ್ರೆ, ಲಿಂಗಧಾರಣೆಯು ವೇದೋಕ್ತವಾದುದು, ಪಾದೋದಕ ವಿಚಾರ, ಆಸ್ತಿಕ್ಯ ಮತ್ತು ಭಕ್ತಿ, ರುದ್ರಪಶುಪತಿ ಕಥೆ, ಪ್ರೌಢಭಕ್ತಿಗೂ ಮೂಢಭಕ್ತಿಗೂ ಇರುವ ತಾರತಮ್ಯ, ವೀರಶೈವಮತವು ಪ್ರೌಢಭಕ್ತಿಗೆ ಸೇರಿದ್ದು, ಬ್ರಹ್ಮಾದ್ವೈತಕ್ಕೂ ಶಿವಾದ್ವೈತಕ್ಕೂ ಇರುವ ಭೇದ ಇನ್ನುಳಿದ ಲೇಖನಗಳನ್ನು ಪುಸ್ತಕ ರೂಪದಲ್ಲಿ ತರುವ ಕಾರ್ಯ ಅತ್ಯಗತ್ಯ.

ಕರಿಬಸವಶಾಸ್ತ್ರಿಗಳ ಶಿಷ್ಯವರ್ಗ ಅಪಾರವಾದುದು. ದೇಶೀಯ ವಿದೇಶೀಯ ವಿದ್ವಾಂಸರು ಇವರ ಶಿಷ್ಯವರ್ಗದಲ್ಲಿ ಸೇರಿದ್ದಾರೆ. ಅವರಲ್ಲಿ ಆಸ್ಥಾನವಿದ್ವಾನ್ ಎನ್.ಆರ್. ಕರಿಬಸವಶಾಸ್ತ್ರಿಗಳು, ಆಸ್ಥಾನವಿದ್ವಾನ್ ಸಿದ್ಧಲಿಂಗ ಶಾಸ್ತ್ರಿಗಳು, ಆಸ್ಥಾನವಿದ್ವಾನ್ ಮಹಾದೇವ ಶಾಸ್ತ್ರಿಗಳು, ಆಸ್ಥಾನವಿದ್ವಾನ್ ಪಂಡಿತರತ್ನಂ ಶಿರಸಿ ಗುರುಶಾಂತ ಶಾಸ್ತ್ರಿಗಳು, ಆಸ್ಥಾನವಿದ್ವಾನ್ ಚಂದ್ರಶೇಖರ ಶಾಸ್ತ್ರಿಗಳು, ಸಿಂಗಿರಾಜ ಪುರಾಣದ ಬಸವಲಿಂಗ ಶಾಸ್ತ್ರಿಗಳು, ಶಿ.ಶಿ. ಬಸವಲಿಂಗ ಶಾಸ್ತ್ರಿಗಳು, ಸುತ್ತೂರು ಶಾಂತವೀರ ಶಾಸ್ತ್ರಿಗಳು, ತಿಪಟೂರು ವಿರೂಪಾಕ್ಷ ಶಾಸ್ತ್ರಿಗಳು, ರಾಜಕವಿಭೂಷಣ ಲಿಂಗರಾಜ ಅರಸರು, ವೀರಪ್ಪಾಜಿ ಅರಸರು, ವೀರನಗೆರೆ ಚಂದ್ರಶೇಖರ ಶಾಸ್ತ್ರಿಗಳು, ಕೆ. ವರದಾಚಾರ್ಯರು, ಪಂಡಿತ ವೀರರಾಘವಾಚಾರ್ಯರು, ಸಂಪಿಗೆ ಸಿದ್ಧಲಿಂಗಶಾಸ್ತ್ರಿಗಳು, ಆಸ್ಥಾನವಿದ್ವಾನ್ ಪಂಡಿತರತ್ನಂ ಬಿ. ಶಿವಮೂರ್ತಿಶಾಸ್ತ್ರಿಗಳು ಮುಂತಾದವರು.

ಶಾಸ್ತ್ರಿಗಳಲ್ಲಿ ಕನ್ನಡ ಸಂಸ್ಕೃತ ಕಲಿತ ಕ್ರೈಸ್ತಪಾದ್ರಿಗಳಲ್ಲಿ ರೆ॥ ಫ್ರೀಮಾಡ್, ರೆ॥ ಹಾಕಿನ್, ರೆ॥ ಹೆಗ್, ರೆ॥ ಕಾಸ್ಟಿಕ್, ರೆ॥ ಗಲಿಫರ್ಚ್, ರೆ॥ ರಿಡಿರ್ಟ್, ರೆ॥ ಥಾಂಸನ್, ಗಲಿಫರ್ಡ್ –ಪ್ರಮುಖರು. ವೆಸ್ಲಿಯನ್ ಮಿಷನ್ನಿನ ಪಾದ್ರಿಗಳಾದ ಥಾಂಸನ್ ಅವರು ನಿಜಗುಣ ಶಿವಯೋಗಿಗಳ ಅನುಭವಸಾರವನ್ನು ವ್ಯಾಸಂಗಮಾಡುತ್ತಿದ್ದಾಗ ಅದರಲ್ಲಿನ ಮುದ್ರಿತ ದೋಷಗಳನ್ನು ಗಮನಿಸಿ ಆ ಕಾವ್ಯವನ್ನು ಪರಿಷ್ಕರಿಸಿ ಅದಕ್ಕೆ ಒಂದು ಟಿಪ್ಪಣಿಯನ್ನು ಬರೆದು ಕೊಡುವಂತೆ ಶಾಸ್ತ್ರಿಗಳಲ್ಲಿ ಪ್ರಾರ್ಥಿಸಿಕೊಂಡರು. ಅವರು ಪರಿಷ್ಕಾರವಾಗಿ ಬರೆದುಕೊಟ್ಟ ಮೇಲೆ ವೆಸ್ಲಿ ಮುದ್ರಣಾಲಯದಲ್ಲಿ ಅದನ್ನು ಅಚ್ಚು ಮಾಡಿಸಿದ್ದಾರೆ. ಅದನ್ನು ಶಾಸ್ತ್ರಿಗಳು ಈ ರೀತಿ ಹೇಳಿಕೊಂಡಿದ್ದಾರೆ.

ವರಮತಿ ತಾಮ್ಸನ್ನಾಮಕ
ನುರುಸುಗುಣಂ ಕ್ರೈಸ್ತಬೋಧಕಂ ಪ್ರೇರಿಸೆ ತಾಂ
ಕರಿವೃಷಭಶಾಸ್ತ್ರಿ ನಲವಿಂ
ವಿರಚಿಸಿದಂ ಟಿಪ್ಪಣವನೆ ಪೊಸಕನ್ನಡದಿಂ ॥

ಕರಿಬಸವಶಾಸ್ತ್ರಿಗಳು ಶಿಷ್ಯವಾತ್ಸಲ್ಯ ಪ್ರಪೂರ್ಣರು. ತಮ್ಮಲ್ಲಿ ಸುಮಾರು ಆರುವರ್ಷಗಳ ಕಾಲ ಕನ್ನಡ ಸಂಸ್ಕೃತ ವ್ಯಾಸಂಗ ಮಾಡಿದ ಬಿ. ಶಿವಮೂರ್ತಿಶಾಸ್ತ್ರಿಗಳ ಐದುಗ್ರಂಥಕ್ಕೆ ಮೌಲಿಕವಾದ ಒಂದು ಉಪೋದ್ಘಾತವನ್ನು ಬರೆದು ತಮ್ಮ ಶಿಷ್ಯವಾತ್ಸಲ್ಯವನ್ನು ಪ್ರಕಟಿಸಿದ್ದಾರೆ.

ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ವಿಲಾಸವೆಂಬೀ ಗ್ರಂಥವನ್ನು ನಾನು ಆದ್ಯಂತವಾಗಿ ಓದಿ ನೋಡಿದೆನು. ಇದನ್ನು ಸರಿಪಡಿಸಿಕೊಡಬೇಕೆಂದು ಅಪೇಕ್ಷಿಸಿದ ಗ್ರಂಥಕರ್ತರ ಇಚ್ಛೆಯಂತೆ ತಿದ್ದಿಕೊಟ್ಟಿರುವೆನು. ಇದಲ್ಲದೆ ಈ ಕಾವ್ಯದ ವಿಷಯದಲ್ಲಿ ನನ್ನ ಅಭಿಪ್ರಾಯವನ್ನೂ ಬರೆದಿರುವೆನು.

ಈ ಕಾವ್ಯವು ಚಂಪೂರೂಪವಾಗಿದೆ. ನಾಲ್ಕು ಭಾಗಗಳಾಗಿ ಭಾಗಿಸಲ್ಪಟ್ಟು ಪ್ರತಿಭಾಗಕ್ಕೂ ತರಂಗವೆಂಬ ಹೆಸರನ್ನು ಕೊಟ್ಟಿದೆ. ಪ್ರಥಮ ತರಂಗದಲ್ಲಿ ಭರತಖಂಡದ ಮತ್ತು ಕರ್ಣಾಟಕದ ವರ್ಣನೆಯಿದೆ. ದ್ವಿತೀಯ ತರಂಗದಲ್ಲಿ ಯದುವಂಶದ ರಾಜರ ಚರಿತ್ರೆಯನ್ನು ಯದುಮಹಾರಾಜರಿಂದ ಹಿಡಿದು ಆಳುವ ಮಹಾಪ್ರಭುಗಳವರೆಗೆ ಸಂಗ್ರಹವಾಗಿ ನಿರೂಪಿಸಲ್ಪಟ್ಟಿದೆ. ತೃತೀಯ ರಂಗದಲ್ಲಿ ಶ್ರೀಮನ್ಮಹಾರಾಜರವರ ಗುಣಗಳೂ ಸದಾಚಾರ ಸನ್ಮಾರ್ಗಗಳೂ ಹೇಳಲ್ಪಟ್ಟಿವೆ. ಚತುರ್ಥ ತರಂಗದಲ್ಲಿ ಶ್ರೀಮನ್ಮಹಾರಾಜರವರ ಕಾಲದಲ್ಲಾದ ದೇಶಾಭಿವೃದ್ಧಿ ಕಾರ್ಯಗಳು ವರ್ಣಿತವಾಗಿವೆ. ಒಟ್ಟಿನಲ್ಲಿ ಇದೊಂದು ನವೀನವೂ ಅವಲೋಕನೀಯವೂ ಆದ ಖಂಡಕಾವ್ಯವಾಗಿದೆ.

ಈ ಕವಿಯು ಕರ್ಣಾಟಕ ಸಾಹಿತ್ಯಪ್ರಪಂಚದಲ್ಲಿ ಹೊಸಬನಂತೆ ಕಾಣಿಸಿದರೂ ಕವಿತಾವೈಖರಿ ಮಾತ್ರ ಸಂಸ್ಕಾರಜನ್ಯವಾದುದೆಂದು ಕಾಣುತ್ತದೆ. ಶೈಲಿಯು ಸರಳವಾಗಿಯೂ ಗಂಭೀರವಾಗಿಯೂ ಸ್ವಭಾವಜನ್ಯವಾಗಿಯೂ ಇದೆ. ಅನೇಕ ಸಂದರ್ಭಗಳಲ್ಲಿ ರಸಭಾವಗಳು ಚೆನ್ನಾಗಿ ಪ್ರತಿಪಾದಿಸಲ್ಪಟ್ಟು ಚಿತ್ತಾಹ್ಲಾದಕವಾಗಿವೆ. ವರ್ಣನೆಯು ನವೀನವಾಗಿದೆ. ಯುಕ್ತಿಗಳು ಹೊಸರೀತಿಯಿಂದ ಕೂಡಿವೆ. ಉಪಮಾನಾದ್ಯಲಂಕಾರಗಳು ಮಿತವರಿತು ಬಂದಿವೆ. ಗ್ರಂಥವು ಬಹು ಗಂಭೀರವಾಗಿಯೂ ರಸವತ್ತಾಗಿಯೂ ಇದೆ.

ಈ ಗ್ರಂಥಕರ್ತೃವಾದ ವೇ॥ ಬಿ. ಶಿವಮೂರ್ತಿಶಾಸ್ತ್ರಿಗಳೆಂಬುವರು ನನ್ನ ವಿದ್ಯಾರ್ಥಿಗಳಲ್ಲಿ ಮುಖ್ಯರು. ಇವರು ಸರ್ಕಾರದ ಪಾಠಶಾಲೆಗಳಲ್ಲಿಯೇ ಅಲ್ಲದೆ ನನ್ನಲ್ಲಿಯೂ ಸ್ವತಂತ್ರವಾಗಿ ಕೆಲವು ವರ್ಷ ವಿದ್ಯಾಭ್ಯಾಸ ಮಾಡಿದವರು. ಇವರು ಕೆಲವು ಕಾಲ ಉಪಾಧ್ಯಾಯ ವೃತ್ತಿಯಲ್ಲಿದ್ದು ಸುಮಾರು ಈಗ್ಯೆ ನಾಲ್ಕು ವರ್ಷಗಳ ಆ ವೃತ್ತಿಯನ್ನು ತ್ಯಜಿಸಿ ಕೀರ್ತನ, ಪುರಾಣಶ್ರವಣ, ಭಾಷಣಾದಿಗಳ ಮೂಲಕ ಧರ್ಮಬೋಧೆ ಮಾಡುತ್ತ ದೇಶಸೇವೆ ಮಾಡುತ್ತಿರುವರು. ಇವರು ಒಳ್ಳೆಯ ವಾಗ್ಮಿಗಳೂ ಲೇಖಕರೂ ಆಗಿರುವುದರಿಂದ ನಾಲ್ಕು ವರ್ಷಗಳಲ್ಲಿಯೇ ಕರ್ಣಾಟಕದ ಕೀರ್ತನಕಾರರಲ್ಲಿ ಹೆಸರನ್ನು ಪಡೆದ ಗಣ್ಯರಾಗಿರುವರು. ಇದಲ್ಲದೆ ಅನೇಕ ಸಂಘಗಳಿಂದಲೂ ದೊಡ್ಡ ಮನುಷ್ಯರಿಂದಲೂ ಬಂಗಾರದ ಪದಕಗಳನ್ನೂ ಪಡೆದು ಲೋಕಪ್ರೇಮವನ್ನು ಸಂಪಾದಿಸಿರುವರು.

ಮಹಾವಿದ್ವಾಂಸರಾದ ಶ್ರೀಮದ್ರಂಭಾಪುರೀ ಸಂಸ್ಥಾನದ ಶ್ರೀ ಜಗದ್ಗುರು ಶಿವಾನಂದ ರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಈ ಗ್ರಂಥಕರ್ತೃಗಳ ಕೀರ್ತನ ಸಾಮರ್ಥ್ಯವನ್ನು ವಿಲಕ್ಷಣ ಕವಿತಾಶಕ್ತಿಯನ್ನೂ ಪರಾಂಬರಿಸಿ ಆ ಪ್ರಭವ ಸಂವತ್ಸರದ ವಿಜಯದಶಮಿಯ ಪುಣ್ಯದಿನ ಆನವಟ್ಟಿಯಲ್ಲಿ ನೆರೆದಿದ್ದ ಮಹಾಸಭೆಯಲ್ಲಿ ವೀರಸಿಂಹಾಸನಾರೋಹಣ ಮಾಡಿದ್ದ ಸಮುಹೂರ್ತದಲ್ಲಿ ಬಂಗಾರದ ಪದಕದೊಂದಿಗೆ 'ಕೀರ್ತನ ಕೇಸರಿ', 'ಕವಿರತ್ನ' ಎಂಬ ಘನವಾದ ಪ್ರಶಸ್ತಿಗಳನ್ನು ಆಶೀರ್ವಾದಪೂರ್ವಕ ಅನುಗ್ರಹಿಸಿದ್ದಾರೆ.

ಸ್ವಲ್ಪ ಕಾಲದೊಳಗಾಗಿ ಸರ್ವತೋಮುಖವಾದ ಅಭಿವೃದ್ಧಿಯನ್ನು ಪಡೆದು ನಾನಾಮುಖದಿಂದ ದೇಶಸೇವೆ ಮಾಡುತ್ತಿರುವ ವೇ॥ ಬಿ. ಶಿವಮೂರ್ತಿಶಾಸ್ತ್ರಿಗಳಿಗೆ ಸರ್ವಜ್ಞನೂ ಸರ್ವಶಕ್ತನೂ ಆದ ಪರಮೇಶ್ವರನು ಇತೋಪ್ಯತಿಶಯವಾದ ಸಾಮರ್ಥ್ಯವನ್ನು ದಯಪಾಲಿಸಿ ನಾಲ್ವಡಿ ಕೃಷ್ಣರಾಜ ವಿಲಾಸದಂತಹ ಹಲವು ಗ್ರಂಥಗಳನ್ನು ಬರೆಯುವ ಶಕ್ತಿಯನ್ನಿತ್ತು ಕಾಪಾಡಲೆಂದು ಪ್ರಾರ್ಥಿಸುತ್ತೇವೆ.

ಕರಿಬಸವಶಾಸ್ತ್ರಿಗಳ ಕೀರ್ತಿ ಅಜರಾಮರವಾಗಿ ಉಳಿದಿರುವುದು ಅವರು ಕನ್ನಡ ಸಂಸ್ಕೃತ ಭಾಷೆಗಳಲ್ಲಿ ರಚಿಸಿರುವ, ಸಂಪಾದಿಸಿರುವ, ಪರಿಷ್ಕರಿಸುವ ಕೃತಿರಾಶಿಯಿದ ಎಂಬುದು ನಿರ್ವಿವಾದವಾದುದು. ಇಂದು ಅವರ ಹೆಸರಿನಲ್ಲಿ ಸುಮಾರು ನಲವತ್ತೊಂದು ಕೃತಿಗಳು ಕಂಡುಬರುತ್ತವೆ. ಇವೆಲ್ಲವನ್ನೂ ಪರಿಚಯಿಸುವುದು ಸದ್ಯದಲ್ಲಿ ಸಾಧ್ಯವೂ ಇಲ್ಲ, ಸಾಧುವೂ ಅಲ್ಲ. ಕೇವಲ ಆಕೃತಿಗಳ ನಾಮನಿರ್ದೇಶನವನ್ನು ಮಾತ್ರ ಮಾಡಬಹುದಾಗಿದೆ. ಸಂಸ್ಕೃತ ಗ್ರಂಥಗಳು, ಕ್ರಿಯಾಸಾರ, ಸಿದ್ಧಾಂತ ಶಿಖಾಮಣಿ, ದೀಕ್ಷಾವಿಧಿ, ಮಾಚಿದೇವ ಮನೋವಿಲಾಸ, ಲಿಂಗಧಾರಣ ಚಂದ್ರಿಕೆ, ಅನುಭವಸೂತ್ರ, ವಿವಾಹವಿಧಿ, ಭಕ್ತಾಧಿಕ್ಯರತ್ನಾವಳಿ, ದಶಗ್ರಂಥಿ, ವ್ಯಾಸೋಕ್ತ ಬಸವಪುರಾಣ, ಶಿವಾದ್ವೈತಮಂಜರಿ, ವೀರಶೈವ ಪ್ರದೀಪಿಕಾ, ತ್ರಿಕಾಂಡ ಅಮರಕೋಶ, ಶಬ್ದರೂಪಾವಳಿ, ಶಿವಪೂಜಾವಿಧಿ, ಸಂಕ್ಷಿಪ್ತ ಶಿವಪೂಜಾವಿಧಿ, ಗಣಸಹಸ್ರ ನಾಮಾವಳೀಸ್ತೋತ್ರ, ಕಂಚಿ ಶಂಕರಾರಾಧ್ಯ ಬಸವೇಶ ವಿಜಯಂ, ಟೀಕಾ ಭಗವದ್ಗೀತೆ, ಗೀತಾ ಪಂಚರತ್ನಂ, ಶ್ರೀರುದ್ರ ನಮಕ ಚಮಕ, ನರಕಯಾತನಾ ರಹಸ್ಯ.

**ಕನ್ನಡ ಗ್ರಂಥಗಳು:** ಸಟೀಕಾ ಜೈಮಿನಿ ಭಾರತ, ಜೈಮಿನಿ ಭಾರತ, ರಾಜಶೇಖರ ವಿಲಾಸ, ಶಬರಶಂಕರ ವಿಲಾಸ, ವೃಷಭೇಂದ್ರ ವಿಜಯ, ಸಿದ್ಧೇಶ್ವರ ಪುರಾಣ, ಪ್ರಹ್ಲಾದ ಚರಿತ್ರೆ, ನಳಚರಿತ್ರೆ, ಶಿವಭಕ್ತಿಸಾರ, ಕನ್ನಡ ಮಹಾಭಾರತ, ಕನ್ನಡ ಬಾಲಬೋಧೆ, ಪಂಪರಾಮಾಯಣ, ಅನುಭವಸಾರಟೀಕು.

ಸಂಸ್ಕೃತದಲ್ಲಿ ವೀರಶೈವೋತ್ಕರ್ಷಪ್ರದೀಪಿಕಾ, ಜ್ಯೋತಿಷ್ಯ ಸರ್ವವಿಷಯಾಮೃತ ಎಂಬ ಸ್ವತಂತ್ರ ಕೃತಿಗಳನ್ನೂ ಕನ್ನಡದಲ್ಲಿ ನಯಶತಕ, ಕಂಚಿಯ ಶಂಕರಾರಾಧ್ಯರ ಬಸವೇಶ ವಿಜಯದ ಕನ್ನಾಡನುವಾದವನ್ನೂ ಬರೆದಿದ್ದಾರೆ.

ಕರಿಬಸವಶಾಸ್ತ್ರಿಗಳ ಸ್ವತಂತ್ರಕೃತಿಯಾದ ನಯಶತಕ ನೀತಿಭರಿತವಾದುದು. ಇದು ಕನ್ನಡ ಶತಕಸಾಹಿತ್ಯಕ್ಕೆ ನೀಡಿದ ಅಪೂರ್ವಕಾಣಿಕೆಯಾಗಿದೆ. ಇದರಲ್ಲಿ ೧೨೬ ಕಂದ ಪದ್ಯಗಳೂ ೬ ವೃತ್ತಗಳೂ ಇವೆ. ನಾಲ್ವಡಿ ಕೃಷ್ಣರಾಜ ಒಡೆಯರ ಸೋದರರಾದ ಕಂಠೀರವನರಸರಾಜ ಒಡೆಯರ್ ಬಹದ್ದೂರ್ ಅವರ ವಿವಾಹ ಮಹೋತ್ಸವದ ಜ್ಞಾಪಕಾರ್ಥವಾಗಿ ರಚಿತವಾದುದು. ಅದನ್ನು ಶಾಸ್ತ್ರಿಗಳೇ,

> ಯುವರಾಜವಿವಾಹ ಮಹೋ
> ತ್ಸವ ದಿವಸ ಜ್ಞಾಪನಾರ್ಥಮಿ ನಯಶತಕಂ
> ಕವಿ ಕರಿಬಸವನಿನಾದುದು
> ರವಿಶಶಿತಾರಕೆಗಳಿರ್ಪವರೆಗಂ ಮೆರೆಗೆ

ಹೀಗೆ ಹೇಳಿಕೊಂಡಿದ್ದಾರೆ. ಇದರಿಂದ ಒಂದೆರಡು ಪದ್ಯಗಳನ್ನು ನೋಡೋಣ:

ನೀತಿಯ ಆವಶ್ಯಕತೆಯೇನು, ಅದನ್ನು ಏಕೆ ತಿಳಿದುಕೊಳ್ಳಬೇಕು ಎಂಬುದನ್ನು ಹೀಗೆ ವಿವರಿಸಿದ್ದಾರೆ.

> ನೀತಿಯನರಿತನನೆಲ್ಲರ್
> ಪ್ರೀತಿಸುಗುಂ ಖ್ಯಾತಿವಡೆವನವನಿಯೊಳವನೆ
> ಸಾತಿಶಯ ಸುಖಮನೈದುವ
> ನೋತು ವಲಂ ನೀತಿಯನರಿಯವೇಳ್ಕು ಮನುಜಂ

ಮತ್ತೆ ಕೆಲವು ಪದ್ಯಗಳನ್ನು ನೋಡಿ:

> ಬಿಜ್ಜೆಯಿಲ್ಲದ ಮನುಜಂ
> ಪಜ್ಜಳಿಸಂ ಕುಲದೆ ರೂಪದೆ ಯೌವನದಿಂ
> ಸಜ್ಜಾಗಿರ್ದೊಡಮೇಂ ಕರ
> ಮುಜ್ಜಳಿಸದ ಮುತ್ತುಗಂ ಸುಗಂಧವಿಹೀನಂ

> ಮಾನಪ್ರಾಣಂಗಳೊಳಾ
> ಮಾನಮೇ ವರಮೆಂತುಮೆನಲ್ಕನಿತ್ಯಂ ಪ್ರಾಣಂ
> ಮಾನಂ ಶಾಶ್ವತಮದರಿಂದೆ
> ಮಾನವನಾ ಮಾನವನೆ ವಲಂ ರಕ್ಷಿಪುದೈ

ಕರಿಬಸವಶಾಸ್ತ್ರಿಗಳು ಪ್ರಾಚೀನಕೃತಿಗಳನ್ನು ಹಸ್ತಪ್ರತಿಗಳ ಆಧಾರದಿಂದ ಶಾಸ್ತ್ರೀಯವಾಗಿ ಸಂಪಾದಿಸಿದ್ದಾರೆ. ಇದು ಆಧುನಿಕ ಗ್ರಂಥಸಂಪಾದನಾ ವಿಧಿವಿಧಾನಗಳಿಗೆ ಅನುಗುಣವಾಗಿದೆ ಎಂಬುದನ್ನು ನಾವು ಮನಗಾಣಬೇಕು. ಶಾಸ್ತ್ರಿಗಳ ಬಳಿ ಪ್ರಾಚೀನ ಹಸ್ತಪ್ರತಿಗಳ ಭಂಡಾರವೇ ಇದ್ದುದಾಗಿ ತಿಳಿದುಬಂದಿದೆ. ಶಾಸ್ತ್ರಿಗಳು ಎಡೆಯೂರು ಸಿದ್ಧಲಿಂಗೇಶ್ವರನ ಭಕ್ತರಾದುದರಿಂದ ವಿರಕ್ತ ತೋಂಟದಾರ್ಯನ ಸಿದ್ಧೇಶ್ವರ ಪುರಾಣವನ್ನು ಶಾಸ್ತ್ರೀಯವಾಗಿ ಸಂಪಾದಿಸಿರುವುದು ಅವರ ಅಪಾರಭಕ್ತಿಯ ದ್ಯೋತಕವಾಗಿದೆ.

ಆಸ್ಥಾನಮಹಾವಿದ್ವಾನ್, ಕರ್ಣಾಟಭಾಷಾರತ್ನ ಪಿ.ಆರ್. ಕರಿಬಸವಶಾಸ್ತ್ರಿಗಳು ಹುಟ್ಟಿದ್ದು ೧೮೬೮ರಲ್ಲಿ. ಶಿವಸಾಯುಜ್ಯವನ್ನೈದಿದ್ದು ೧೯೩೭ರಲ್ಲಿ. ಸುಮಾರು ಎಂಬತ್ತು ಮೂರು ವರ್ಷಗಳ ಕಾಲ ಜೀವಿಸಿದ್ದ ಶಾಸ್ತ್ರಿಗಳು ವೀರಶೈವಧರ್ಮ ಸಾಹಿತ್ಯ ಸಂಸ್ಕೃತಿಗಳಿಗೆ ಎಣೆತೊಣೆಯಿಲ್ಲದ ಸೇವೆಯನ್ನು ಸಲ್ಲಿಸಿ ಅಮರರಾಗಿದ್ದಾರೆ. ಈ ಧರ್ಮದ ಪುನರುದ್ಧಾರಕ್ಕೆ ಪುನರುತ್ಥಾನಕ್ಕೆ ಭದ್ರವಾದ ಬುನಾದಿಯನ್ನು ಹಾಕಿದ್ದಾರೆ. ಇಡೀ ಜೀವಮಾನವನ್ನೆಲ್ಲ ಈ ಧರ್ಮ ಕಾರ್ಯಗಳಿಗೇ ಸವೆಸಿದ ಪಿ.ಆರ್. ಕರಿಬಸವಶಾಸ್ತ್ರಿಗಳು ಪ್ರಾತಃಸ್ಮರಣೀಯರಾಗಿದ್ದಾರೆ, ಧ್ರುವತಾರೆಯಂತಿದ್ದಾರೆ.

■

# ಕನ್ನಡ ಜಾನಪದ ಶಬ್ದಕೋಶ

**ಕ**ನ್ನಡ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದರೆ ಜಾನಪದ ಸಾಹಿತ್ಯದ ಉಗಮ ಎಂದಾಯಿತು ಎಂಬುದಕ್ಕೆ ನಿರ್ದಿಷ್ಟ ಉಲ್ಲೇಖಗಳೆಲ್ಲಿಯೂ ಕಂಡುಬರುವುದಿಲ್ಲ. 'ಜನಪದ' ಎಂಬ ಶಬ್ದದಿಂದ ಈ ಸಾಹಿತ್ಯ ಜನರ ಬಾಯಿಂದಲೇ ಉಳಿದುಕೊಂಡು ಬಂದಿರುವ ಪ್ರಕಾರವೆಂದು ತಿಳಿಯಬಹುದಾಗಿದೆ. ಕರ್ಣಾಕರ್ಣಿಕೆಯಾಗಿ ಪ್ರಚಲಿತವಾಗಿರುವ ಈ ಜನಪದ ಹಾಡುಗಳನ್ನು ರಚಿಸಿದವರು ಯಾರು ಅದರ ನಿಬಂಧನೆಗಳೇನು ಎಂಬ ವಿವರಗಳಾವುವೂ ತಿಳಿದುಬಂದಿಲ್ಲ. ಈ ಹಾಡುಗಳು ವಿಶೇಷವಾಗಿ ತ್ರಿಪದಿ ಚೌಪದಿಗಳಲ್ಲಿ ರಚಿತವಾಗಿರುವುದರಿಂದ ಇವಕ್ಕೆ ಸಾಕಷ್ಟು ಪ್ರಾಚೀನತೆಯಿದೆ ಎಂದು ಊಹಿಸಬಹುದು. ಹೀಗಿದ್ದರೂ ಈ ಸಾಹಿತ್ಯ ಪ್ರಕಾರಕ್ಕೆ ವಿದ್ವನ್ಮುದ್ರೆ ಏಕೆ ಬೀಳಲಿಲ್ಲವೆಂಬುದು ಸಂಶೋಧನಾರ್ಹವಾಗಿದೆ.

ಜನತೆ ತಾವು ಅನುಭವಿಸಿದ ಕಷ್ಟಸುಖಗಳನ್ನು ನೋವು-ನಲಿವುಗಳನ್ನು ಸಮಾಜದಲ್ಲಿ ಕಂಡುಬಂದ ಲೋಷದೋಷಗಳನ್ನು ಕುಂದುಕೊರತೆಗಳನ್ನು ರೀತಿನೀತಿಗಳನ್ನು ಆಧರಿಸಿ ಈ ಹಾಡುಗಳನ್ನು ಹಾಡಿರಬೇಕು. ಈ ಹಾಡುಗಳು ಜನಜೀವನವನ್ನು ಪ್ರತಿಬಿಂಬಿಸುವಂತಿರುವುದರಿಂದ ಇವಕ್ಕೆ ಅತಿಯಾದ ಮಾನ್ಯತೆ ಜನತೆಯಲ್ಲೇ ಕಂಡುಬಂದಿರಬೇಕು. ಈ ಜನಪದ ಹಾಡುಗಳನ್ನು ವ್ಯುತ್ಪನ್ನರೂ ಅವ್ಯುತ್ಪನ್ನರೂ ಸ್ತ್ರೀಯರೂ ಪುರುಷರೂ ಹಾಡಿದ್ದಾರೆ.

ಕರ್ನಾಟಕದ ಜನಪದ ಸಾಹಿತ್ಯ ವೈವಿಧ್ಯಪೂರ್ಣವಾಗಿದೆ. ಒಂದೊಂದು ಭಾಗದಲ್ಲಿ ಒಂದೊಂದು ರೀತಿಯ ಹಾಡುಗಳು ಪ್ರಚಲಿತವಾಗಿವೆ. ಗಂಡಸರ ಹಾಡುಗಳು, ಹೆಂಗಸರ ಹಾಡುಗಳು, ಗಂಡಸರೂ ಹೆಂಗಸರೂ ಕೂಡಿ ಹಾಡುವ ಹಾಡುಗಳು ಎಂದು ಇವನ್ನು ವಿಭಾಗಿಸಬಹುದು. ಈ ಹಾಡುಗಳು ಸಂದರ್ಭಕ್ಕೆ ಅನುಸಾರವಾಗಿ ಹಾಡಿದವು.

ಯಾವುದೇ ಭಾಷೆಯ ಅಭಿವ್ಯಕ್ತಿಸಾಮರ್ಥ್ಯವನ್ನು ಅಳೆಯಬೇಕಾದರೆ ಆ ಭಾಷೆಯ ಶಬ್ದಸಂಪತ್ತಿಯನ್ನು ಪರಿಶೀಲಿಸಬೇಕು. ಹಾಗೆಯೇ ಒಂದು ಭಾಷೆಯ ಶಬ್ದಸಂಪತ್ತಿಯನ್ನು ಎರಡು ವಿಭಾಗ ಮಾಡಬಹುದು. ಒಂದು ಪಂಡಿತರು ವಿದ್ವಾಂಸರು ಬಳಸುವ ಭಾಷೆ; ಮತ್ತೊಂದು ಜನಸಾಮಾನ್ಯರು ಅಂದರೆ ಅಷ್ಟಾಗಿ ವಿದ್ಯಾವಂತರಲ್ಲದವರು ಬಳಸುವ ಭಾಷೆ. ಇದನ್ನು ಗ್ರಾಮ್ಯಭಾಷೆ ಎನ್ನಬಹುದು. ವಿದ್ವಾಂಸರಿಗೆ ತಮ್ಮ ಭಾಷೆಯ ಜೊತೆಗೆ ಇತರ ಭಾಷೆಗಳ ಸಂಪರ್ಕವೂ ಇರುವುದರಿಂದ ಅನ್ಯಭಾಷೆಗಳ ಶಬ್ದಸಂಪತ್ತಿಯನ್ನೂ ತಮ್ಮ ಭಾಷೆಯಲ್ಲಿ ಬಳಸುತ್ತಾರೆ. ಜನಸಾಮಾನ್ಯರಾದರೋ ತಮ್ಮ ಭಾಷೆಯಲ್ಲಿರುವ ಶಬ್ದಗಳನ್ನೇ ಉಪಯೋಗಿಸುತ್ತಾರೆ.

ಒಂದು ಭಾಷೆಯ ಶ್ರೀಮಂತಿಕೆಯನ್ನು ಅಳೆಯಬೇಕಾದರೆ ಆ ಭಾಷೆಯ ಶಬ್ದಸಂಪತ್ತಿಯನ್ನು ಅವಲೋಕಿಸುವುದು ಅನಿವಾರ್ಯ. ಹಾಗೆಯೇ ಆ ಭಾಷೆಯ ಮೂಲ ಶಬ್ದಕೋಶವನ್ನು ಅದರ ಆಂತರಿಕ ಸತ್ವವನ್ನು ಅರಿಯಬೇಕಾದರೆ ಆಯಾ ಭಾಷೆಯ ಜನಪದ ಸಾಹಿತ್ಯವನ್ನೂ ಅದರ ಸ್ವರೂಪವನ್ನೂ ಗಮನಿಸಬೇಕು. ಜನಪದ ಸಾಹಿತ್ಯ ಜನಜೀವನದ ಎಲ್ಲ ಅಂಗಗಳನ್ನೂ ಒಳಕೊಂಡಿರುವ ಸಾಹಿತ್ಯ ಪ್ರಕಾರವೆಂಬುದು ನಿರ್ವಿವಾದ ಅಂಶ.

ಪ್ರಸ್ತುತ ಜನಪದ ಸಾಹಿತ್ಯದ ಪದಕೋಶವನ್ನು ಅರಿಯಬೇಕಾದರೆ ಅದನ್ನು ಮುಖ್ಯವಾಗಿ ಸಾಮಾಜಿಕ, ಧಾರ್ಮಿಕ, ಐತಿಹಾಸಿಕ, ಪೌರಾಣಿಕ ಇವುಗಳಿಗೆ ಸಂಬಂಧಿಸಿದ ಹಾಡುಗಳನ್ನು ನೋಡಬೇಕು. ಅವು: ಬಂಡಿಯ ಪದ, ಕೋಲಾಟದ ಪದ, ಮಾರಿಯ ಪದ, ಚೋಮನ ಪದ, ಬೀಸುವ ಕಲ್ಲುಪದ, ಸುವ್ವಿಯ ಪದ, ಹಚ್ಚೆಯ ಪದ, ಒಸಗೆಯ ಪದ,

ಸೋಬಾನೆಯ ಪದ, ತಿಂಗಳು ಮಾವನಪದ, ಹೋಳಿಯ ಹಾಡು, ಲಾವಣಿಯ ಹಾಡು, ದೋಣಿಯ ಹಾಡು, ದುಂದುಭಿ ಹಾಡು, ಗೊಂದಲಿಗರ ಹಾಡು, ಗೌರಿ ಹಾಡು, ಸೀಗೆಯ ಹಾಡು, ಕಂಬಿಯ ಹಾಡು, ಶಿವಶರಣರ ಹಾಡುಗಳು, ಎಲ್ಲಮ್ಮನ ಹಾಡುಗಳು, ರಾಮಾಯಣ ಮಹಾಭಾರತದ ಹಾಡುಗಳು ಇತ್ಯಾದಿ. ಈ ಎಲ್ಲ ಹಾಡುಗಳಲ್ಲಿ ಜನತೆಯ ದೈನಂದಿನ ಜೀವನದಲ್ಲಿ ಬಳಸುತ್ತಿದ್ದ ಮೂಲಸಂಪತ್ತಿಯನ್ನು ಮುಂದೆ ಹಾಡುಗಳಿಂದಲೇ ಎತ್ತಿತೋರಿಸಿದೆ.

ಜಾನಪದ ಶಬ್ದಕೋಶದ ಆಳ-ಅಗಲಗಳನ್ನು ಕಂಡುಹಿಡಿಯಲು ನಿದರ್ಶನಾರ್ಥವಾಗಿ ಕೆಲವು ಪ್ರಸಂಗಗಳನ್ನು ನೋಡಬಹುದು. ಸಂಪ್ರದಾಯವೆನ್ನುವುದು ಜನಾಂಗದಲ್ಲಿ ಜೀವಂತ ನದಿಯಂತೆ ಓತಪ್ರೋತವಾಗಿ ಪ್ರವಹಿಸುತ್ತದೆ. ಅದು ವಿಶೇಷವಾಗಿ ಹಬ್ಬಹುಣ್ಣಿಮೆಗಳಲ್ಲಿ ಜಾತ್ರೆ ಪರಿಷೆಗಳಲ್ಲಿ ಮೈದೋರುತ್ತದೆ.

ಬಸವಣ್ಣ ಜಾತ್ರೇಲಿ ಏನೇನು ಪನಿವಾರ
ನೆನೆಯಕ್ಕಿ ನೆನೆಗಡಲೆ ಪನಿವಾರ ॥
ಆಡುತ್ತಿದ್ದ ಮಳಲಗೌರಿ । ಜಾಡೀಸಿ ನೆಲಕೆ ಒದ್ದು
ಓಡಿಬಂದಳು ತನ್ನ ಅರಮನಿಗೆ
ಕರಿಯಾನೆಗೊಂಗಾಡಿ ಮುರಿದು ಗದ್ದಿಗೆ ಮಾಡಿ
ಇರಿವೆ ಕಾಲೋಟು ಹಸೆ ಬರೆದು
ಇಳ್ಳೇವ ಶಾಸ್ತ್ರಾವ ಮಾಡ್ಯಾರೆ- ಅವರಿನ್ನು
ಅಂದಲ ಅವ್ವ ಏರುತಾರೆ ॥

ಯಾವುದಾದರೂ ಕಾರ್ಯವನ್ನು ಪ್ರಾರಂಭಿಸುವ ಮೊದಲು ಇಷ್ಟದೈವವನ್ನು ಪ್ರಾರ್ಥಿಸುವುದು ಸಂಪ್ರದಾಯವಷ್ಟೆ.

ಹೇ ನನ್ನ ಕುಲದೇವತೆ ಹೇ ನನ್ನ ಮನದೇವತೆ
ಏನೆಂದು ವರವ ಕೊಡುತೀಯ
ಅಂದಾರೆ ಬಗೆದಾಳು ಎಡಗಡೆ ಪರಸಾದವ
ನಾ ಹೋದ ಕಾರ್ಯವು ಜಯವುಂಟಾದ್ರೆ
ದಾನದ ಕುರಿಕೋಣ ಕಡಿಸುವೆ ಕರಿಯಮ್ಮ ತಾಯಿ
ಬಲಗಡೆ ಕೊಳ್ಳುಕೊಂಡು ನಮಗೆ
"ವಾನವಾನದ ಮೇಲೆ ಗರುಡಾನ ವಾಹನ"
ಹನುಮನ ಪೂಜೆಗೆ ಏನೇನು ಐಭೋಗ
ಚಿನ್ನದ ಕುವಾಲಿ ಹನುಮಯ್ಯ ಬೇಡಿದರೆ
ಬೇಡಿದ ವರವ ಕೊಡುತಾನೆ

ಈ ಹಾಡುಗಳಲ್ಲಿ ಜನರ ಧಾರ್ಮಿಕನಂಬಿಕೆ ಪೂಜೆಪುನಸ್ಕಾರಗಳನ್ನು ವರ್ಣಿಸುವಲ್ಲಿ ಬಳಸಿರುವ ಪನಿವಾರ, ಮಳಲಗೌರಿ, ಗೊಂಗಾಡಿ, ಗದ್ದಿಗೆ, ಇರುವೆ ಕಾಲೋಟು ಹಸೆ, ಇಳ್ಳೇವ ಶಾಸ್ತ್ರ, ಅಂದಲ, ದಾನದ ಕುರಿಕೋಣ, ಕೊಪ್ಪ, ವಾನ, ಐಭೋಗ, ಚಿನ್ನದ ಕುವಾಲಿ ಮುಂತಾದ ಶಬ್ದಗಳನ್ನು ನೋಡಬಹುದು.

ಹಳ್ಳಿಗರ ಮುಖ್ಯ ಕಸುಬು ವ್ಯವಸಾಯ. ಅದಕ್ಕೆ ಪೋಷಕವಾಗಿ ಕುಂಬಾರ, ಅಗಸ, ಕಮ್ಮಾರ, ಇವರೇ ಮೊದಲಾದವರು ಸಹಕರಿಸುತ್ತಾರೆ. ಅಂತೆಯೇ ಭೂಮಿಯನ್ನು ತಾಯಿಯಾಗಿ ಭಾವಿಸಿದ ಜನರನ್ನು ನಾವು ಕಾಣುತ್ತೇವೆ.

ಒಳ್ಳೋಳು ಭೂಮಮ್ಮ ಎಳ್ಳು ಉಡಿಗೆನುಟ್ಟು
ಅಳ್ಳೊಲದಾಗೆ ಅಡ್ಡ ಸುಳಿದಾಳೆ ಭೂಮಿತಾಯಿ
ಸಲವಳಿಯನಾಸಿ ಶರಣೆಂದೆ
ಹಸುಮಗಳು ಭೂಮಮ್ಮ ಹೆಣ್ಣು ಉಡಿಗೆನುಟ್ಟು
ಹಸುರೊಲದಾಗೆ ಅಡ್ಡ ಸುಳಿದಾಳೆ ಭೂಮಿತಾಯಿ
ಪಟ್ಟವಳಿಯನಾಸಿ ಶರಣೆಂದೆ

ಹೀಗೆ ಭೂಮಿತಾಯಿಗೆ ಸಲವಳಿಯನ್ನು ಹಾಸಿ ಪಟ್ಟವಳಿಯನ್ನು ಹಾಸಿ ಶರಣೆನ್ನುವ ಮೊದಲು ಬೇಸಾಯವನ್ನು ಮಾಡಿರಬೇಕು. ಅವಳ ಪೋಷಣೆ ನಡೆದಿರಬೇಕು ಮತ್ತು ಗೊಬ್ಬರ ಹಾಕಿ ಬಿತ್ತಬೇಕು. ಹಾಗೆ ಬಿತ್ತುವ ಚಿತ್ರ ಹೀಗಿದೆ:

ಬಿತ್ತಾವು ಕೂರೀಗೆ
ಹೊಡುವ ಕೂರೀಗೆ ಮುಂದೆ ಬೀಜದೆಡೆಗೆ ಹಿಂದೆ
ಓಣಿ ಮಾದಿಗದ ಮಿಣಿಹಿಂದೆ ಮಗಮುಂದೆ
ದೂರಲ ಮಾನ್ಯವಕೆ ನಡೆದಾರೆ
ಕೂರಿಗೆ ಹೆಸರು ಕುಂಕುದಾರಮ್ಮ
ಎತ್ತಿನ ಹೆಸರು ಎಳೆನಾಗ
ಅಣ್ಣನ ಪಟ್ಟಗಣ್ಣಿ ಹೆಸರು ಪರಧಾನಿ

ಹೀಗೆ ಪದಧಾನಿಯಾದ ಅಣ್ಣ ಬಿತ್ತಿದ ಹೊಲದಲ್ಲಿ 'ಮಳೆರಾಯ ನಾಟ್ಯವನಾಡುತ್ತಾನೆ, ಉತ್ತುಬಿತ್ತಿ ಮೊಳಕೆಯೊಡೆದು ಹಸುರಾದ ಹೊಲಕ್ಕಿಂತ ಉತ್ತಮವಾದ ರಂಗಸಜ್ಜಿಕೆ ಮಳೆರಾಯನ ನಾಂಟಕ್ಕೆ ಇನ್ನೆಲ್ಲಿ ತಾನೆ ದೊರೆತೀತು?' ಹೀಗೆಯೇ ಇಲ್ಲಿ ಬರುವ ಒಂದು ಸ್ತ್ರೀಯ ಚಿತ್ರವನ್ನು ನೋಡಿ:

ಅರಿಷಣ ಕಂಬಿಸೀರೆ ಸರಪಣಿದಾರದ ವೋಲೆ
ಅರಸರ ಮಗಳು ಹುಚ್ಚಮ್ಮ ಅವಳೀಗ
ಪುರುಷಣೆ ಇದಿರಾಗಿ ಬರುತಾಳೆ

ಈ ಹಾಡುಗಳಲ್ಲಿನ ಸಲವಳಿ, ಪಟ್ಟಿವಳಿ, ಹಸುಮಗಳು, ಎಳ್ಳುಉಡಿಗೆ, ಹಸುಉಡಿಗೆ, ಕಂಬಿಸೀರೆ ಮೊದಲಾದ ದೇಶ್ಯಶಬ್ದಗಳನ್ನು ಪದಪುಂಜಗಳನ್ನು ಕಾಣಬಹುದು.

ಆರು ಕಟ್ಟಿಕೊಂಡು ಗಂಡ ಹೊಲಕ್ಕೆ ಹೋದಾಗ ಹಿಟ್ಟನ್ನು ತೆಗೆದುಕೊಂಡು ಹೋಗುವ ಮೊದಲು ಹಿಟ್ಟಿಗೆ ಬೇಕಾಗುವ ಮೊಸರನ್ನು ಕಡೆಯುವುದು ದೈನಂದಿನ ಕಾರ್ಯ.

ಮೊಸರು ಕಡೆಯೋವಾಗ ಹೊಸಮುತ್ತು ಗಲಿರೆಂದೋ
ಬಚ್ಚಾನೀ ಕಂಬ ಬಳುಕೀದೋ ರಂಗಯ್ಯ
ಮುಂದೆ ಇತ್ತು ದೊಣ್ಣೆ ನಿಮದೊಂದು
ಬೋರೆಂಬೋ ಹಾಲಿಗೆ ಸಣ್ಣಮಂತಿನ ಕೋಲು
ವಜ್ಜದ ಮಾಣಿಕದ ಗುದಿದೊಣ್ಣೆ ತಕ್ಕೊಂಡು
ತೊಳಸಮ್ಮ ಮೊಸರ ಕಡೆಬಾರೇ

ಈ ಹಾಡುಗಳಲ್ಲಿನ ಬಚ್ಚಾನೀಕಂಬ, ಬಳುಕು, ಬೋರೆಂಬೋ ಹಾಲು, ಮಂತು, ವಜ್ಜರ, ಗುದಿದೊಣ್ಣೆ ಶಬ್ದಗಳು ವಿಶಿಷ್ಟವಾದುವು.

ಗ್ರಾಮಸ್ಥರ ಉಡಿಗೆ ತೊಡಿಗೆ ಲಾಂಛನ ಇತ್ಯಾದಿಗಳನ್ನು ಕುರಿತ ಹಾಡುಗಳು:

ಕರಿಯ ಕುಪ್ಪಸ ಸೀರೆ ಉಟ್ಟುಕೊಂಡು
ಕಣ್ಣಿಗೆ ಕಪ್ಪು ತಂದೆ
ಕರಿಯ ಸೀರೆಯ ತಂದೆ-ನಿನ್ನ ಮೆಚ್ಚಿ ನಾ ಬಂದೇ
"ಹಾರುಗಾಸೆ ಹಾಕುತಾನೆ ಗೀರುಗಂಧ ಧರಿಸುತಾನೆ"

ಕುಸ್ತಿ:
ಗರಡಿಯ ಮನೆಯಲ್ಲಿ ಗರಡಿಸಾದ್ಯೆ ಕಲಿತಾರು
ಗುಂಡಾಗಿ ಅಗಳುವರು ಬೆಂಡಾಗಿ ತೇಲುವರು
ಕುದ್ರೆಸವಾರಿಯ ಜಲ್ದೀಯ ಕಲಿತಾರು
ಹಿರಿಯಮಗ ಜರ್ಜಪ್ಪಮಲ್ಲ ವಿದ್ಯಕಲಿತಾನು
ಅರವತ್ತೇಳೇ ಜನವ ಹಿಂಕಣ್ಣ ಹೊಡೆದಾನು
ಮೂವತ್ತೇಳೇ ಜನವ ಮುಂಕಣ್ಣ ಹೊಡೆದಾನು.

ಯುದ್ಧ:
ಮಾಯಾಕೊಂಡದಾಗೆ ಮಾಗುಡಿ ಬಯಲೀಗೆ
ರಣಭೂಮಿಗೆ ಆನೆ ನಡಸಿದರು

ಸಿತ್ತಿಮಳೆ ಸುರಿದಂಗೆ ಹತ್ತಿಬಂದವು ಬಾಣ
ಸೂರಿದಿಗನ ರವೆಯ ಕಾಣದೆ ॥

ಬಾಣಬತ್ತಳಿಕೆಲ್ಲಾ ಕೈಬಿಟ್ಟು ಹೋದಾಗ
ತಗಳ್ಳೋ ಸುಂಕಕತ್ತೀಯಂ
ಕತ್ತೀಲಿ ಕಡಿಯಮ್ಮ ಬಾಕಿಲ್ಲಿ ತಿವಿಯಮ್ಮ
ಕತ್ತೀಕಟಾರೆಲ್ಲಾ ಕೈಬಿಟ್ಟು ಹೋದಾಗ
ಮಿಟ್ಟೀಲಿ ಹೊಡಿಯೋ ಸಂಕೆಂದ ॥

ಊಟ:
ಮೈಸೂರು ಹೆಣ್ಣಿಗೆ ಮಂಚಸುಪ್ಪತ್ತಿಗೆ
ಮಂಚದ ಕೆಳಗೆ ಎಳನೀರು ಇಂಬೆಹಣ್ಣು
ಮಂತ್ರಿ ತಮ್ಮನ್ನ ಮಡದೀಗ ॥
ಈರುಳ್ಳಿ ಬೆಳ್ಳುಳ್ಳಿ ರಾಯಪುಡಿ ಸಕ್ಕರೆ
ಸಾಲು ಮೂಲಂಗಿ ಸಪ್ಪಸಿಗೆ ಅಡಿಗೆ ಮಾಡಿ
ನನ್‌ರಾಯ ತಮ್ಮಯ್ಗೆ ಹಗಲೂಟ

ಕೋಲಾಟ:
ಕುಣಿಯೋನ ಕುಣಿತಕ್ಕೆ ಬಡಿಯೋನ ಬಡಿತಕ್ಕೆ
ದೋಣು ಬಡಿಯೋನ ಗಡಿಗಡಿಗೆ ಮಟ್ಟೆಮಾರಿ
ತಾನೊಂದು ಕುಣಿತ ಕುಣಿದಳೆ
ಮೆಲ್ಲಗೆ ಕುಣಿಯಯ್ಯ ಚೆಲ್ಲಿಕಾಲೀರಯ್ಯ
ಚೆಲ್ಲೇವು ಬಾಗಿ ನಡುಬಾಗಿ ಕುಣಿದರೆ
ನಾವು ಚಲ್ಲಿಗೆ ಮುತ್ತು ಬಿಡಿಸ್ಸೇವು ॥

ವಿವಿಧ ಪ್ರಸಂಗಗಳಿಗೆ ಸಂಬಂಧಿಸಿದ ಮೇಲಿನ ಹಾಡುಗಳಲ್ಲಿ ದಪ್ಪಕ್ಷರಗಳಿಂದ ಗುರುತು ಮಾಡಿರುವ ಶಬ್ದಗಳನ್ನು ಪರಿಶೀಲಿಸಿದರೆ ಮೂಲಶಬ್ದಕೋಶದ ಅರಿವಾಗುತ್ತದೆ. ಜಾನಪದ ಸಾಹಿತ್ಯದಲ್ಲಿ ಪ್ರಣಯದ ಎಲ್ಲ ಮುಖಗಳನ್ನೂ ಕಾಣಬಹುದು. ಇವುಗಳಲ್ಲಿ ಗ್ರಾಂಥಿಕ ವರ್ಣನೆಯ ಸಂಪ್ರದಾಯದ ಅಬದ್ಧತೆ ತಲೆದೋರಿಲ್ಲ.

"ಗುಡಾನ ಭಾಗ್ಯೇವ ಘನಭಾಗ್ಯ"
"ಬಾಳಗೆಟ್ಟವರಿಗೆಣ್ಣ ಕೊಡಬೇಡ"
"ಕಗ್ಗಲ್ಲ ಕಣಿವೇಲೆ ಇಬ್ಬರು ಬರುವಾಗ"
"ತಟ್ಟಿದರೇ ನಾಗೋದೇ ಎಲೆನಾರಿ"
"ಸಣ್ಣಕಾಲುಂಗುರ ಚಪ್ಪಾಳೆ ಮಾಡಿ"
"ಕರೆದಾಳ್ ಗೆಣೆಯನ್ನ"

ಇವೇ ಅಲ್ಲದೆ ಮುತ್ತಿನಹಸೆ, ರಾಜಣದಹಸೆ, ಉಗುರೆಣ್ಣೆ, ಗೊಂಡೆ, ಗಗ್ಗರ, ಗುಡ್ಡ, ಕುಲಾವಿ, ತುರಾಯಿ, ಸಕಲಾತಿ, ಮುಮ್ಮೇಳ, ಹಿಮ್ಮೇಳ, ಏಕತಾರಿ, ದಮ್ಮಡಿ, ಕಂಸಾಳೆ, ಢುಮಕಿ, ತಾಳ, ಹದಬೆಟ್ಟ, ಮೈದುಂಬು, ಮುಗುವಳಿ ಮುಂತಾದ ಅಪೂರ್ವ ಶಬ್ದಸಂಪತ್ತಿ ಈ ಹಾಡುಗಳಲ್ಲಿ ತುಂಬಿದೆ.

ಭಾರತೀಯ ಸಂಸ್ಕೃತಿ ಈ ಜಾನಪದ ಗೀತೆಗಳಲ್ಲಿ ಪ್ರತಿಬಿಂಬಿಸುತ್ತದೆ. ಒಂದು ಹಾಡಿನಲ್ಲಿಯೇ ಇಡೀ ಚಿತ್ರವೇ ಕಣ್ಣಿಗೆ ಕಟ್ಟಿದಂತಾಗುತ್ತದೆ. ಹಿಂದನಿಂದ ಇಂದಿನವರೆಗೆ ಪರಂಪರಾಗತವಾಗಿ ಉಳಿದುಕೊಂಡು ಬಂದಿರುವ ಸಾಂಸಾರಿಕ ಚಿತ್ರಣಕ್ಕೆ ಸಂಬಂಧಿಸಿದ ಕೆಲವು ಹಾಡುಗಳನ್ನು ನೋಡೋಣ. ಹೆಣ್ಣುಮಕ್ಕಳ ಮೇಲೆ ತಂದೆ ತಾಯಿಗಿರುವ ಮಮತೆ, ಅವರನ್ನು ಗಂಡನ ಮನೆಗೆ ಕಳಿಸುವಾಗ ಹೇಳುವ ಬುದ್ಧಿವಾದ:

ಒಂಬತ್ತು ತಿಂಗಳು ನಿನ್ನ ತುಂಬಿಕೊಂಡು ತಿರುಗೇನ
ಹಂಬಲಿಸಿ ನಿನ್ನ ಹಡದೇವ ಚಿತ್ತಾರದ
ಗೊಂಬಿ ನಿನಗೊಪ್ಪಿಸಿ ಕೊಡಲ್ಯಾಂಗ ಅತ್ತಿಯ
ಮನಿಯ್ಯಾಗ ಮುತ್ತಾಗಿ ಇರಬೇಕ

ಹೊತ್ತಾಗಿ ನೀಡಿದರೆ ಉಣಬೇಕ ತವರವರ
ಉತ್ತಮರ ಹೆಸರು ತರಬೇಕ

ತೌರುಮನೆಯನ್ನು ಬಿಟ್ಟು ಗಂಡನ ಮನೆಗೆ ಹೊರಟಾಗಿನ ಹಾಡು:

ತೊಟ್ಟಿಲ ಹೊತ್ಕೊಂಡು ತೌರುಬಣ್ಣ ಉಟ್ಕೊಂಡು
ಅಪ್ಪ ಕೊಟ್ಟೆಮ್ಮೆ ಹೊಡಕೊಂಡು ತಂಗೆಮ್ಮ
ತಿಟ್ಟತ್ತಿ ತಿರುಗಿ ನೋಡ್ಯಾಳ

ಗರತಿಗೆ ಗಂಡನ ಮನೆಯೇ ಸ್ವರ್ಗ, ಬಡತನ ಸಿರಿತನ ಮುಖ್ಯವಲ್ಲ.

ಗಂಜೀಯ ಕುಡಿದರು ಗಂಡನ ಮನಿ ಲೇಸು
ಅಂದನದ ಮ್ಯಾಲ ಚವುರವ ಸಾರಿದರ
ಹಂಗೀನ ತವರ ಮನಿ ಸಾಕ

ಕೊನೆಯದಾಗಿ ಮಕ್ಕಳನ್ನು ಕುರಿತ ಹಾಡುಗಳು–

ಅತ್ತು ಕಾಡುವವನಲ್ಲ ಮತ್ತೆ ಬೇಡುವನಲ್ಲ
ಎತ್ತಿಕೊಳ್ಳೆಂಬ ಹಟವಿಲ್ಲ ನಿನ್ನಂಥ
ಮಕ್ಕಳಿರೆಲಮ್ಮ ಮನಿತುಂಬ
ಅಳುವ ಕಂದನ ತುಟಿಯು ಪವಳದಾ ಕುಡಿಹಾಂಗ
ಕುಡುಹುಬ್ಬು ಬೇವಿನೆಸಳ್ಹಾಂಗೆ ಕಣ್ಣೋಟ
ಶಿವನ ಕೈಯಲಗು ಹೊಳೆದ್ಹಾಂಗೆ
ಅತ್ತರೆ ಅಳಲವ್ವ ಈ ಕೂಸು ನಿನಗಿರಲಿ,
ಕೆಟ್ಟರೆ ಕೆಡಲಿ ಮನಿಕೆಲಸ ಕಂದನಂಥ
ಮಕ್ಕಳಿರಲವ್ವ ಮನಿತುಂಬ

ಈ ಮೇಲೆ ಉದ್ಧರಿಸಿರುವ ಹಾಡುಗಳಲ್ಲಿ ನಾವು ಕಾಣುವುದು ಹಳ್ಳಿಗರ ಅನುಭವವನ್ನು ನೇರವಾಗಿ ಮನವನ್ನು ಮುಟ್ಟುವಂತೆ ತಿಳಿಸುವ ಶಬ್ದಜಾಲವನ್ನು. ಇವುಗಳಲ್ಲಿನ ಭಾಷೆ ಎಷ್ಟು ಸರಳವೋ ಲಲಿತವೋ ಅಷ್ಟೇ ಅರ್ಥಗರ್ಭಿತವಾಗಿವೆ, ಪ್ರಭಾವಪೂರ್ಣವಾಗಿವೆ, ವೈವಿಧ್ಯಮಯವಾಗಿವೆ. ಈ ಹಾಡುಗಳಲ್ಲಿ ಮಾನಸಿಕವಾಗಿ ಕಂಡುಬರುವ ಎಲ್ಲ ಭಾವನೆಗಳನ್ನೂ ಅಭಿವ್ಯಕ್ತಗೊಳಿಸಬಹುದು.

ಜನಪದ ಸಾಹಿತ್ಯದಲ್ಲಿನ ವಿಶಿಷ್ಟ ಶಬ್ದಗಳು ಕೆಲವನ್ನು ಪರಿಶೀಲಿಸೋಣ. ಸಬುದ, ಸದು, ತಿರುಶೂಲ, ಬೆನವ, ಅಯ್ವಳಿ, ಸುಬಿಗೇ ಕಾಳಿಂಗ, ಇನಿಯಂಕ, ಬೆಳ್ಳಿದೇವ, ಬೆಂಡಿನ್ ಬಾಚಣಿಗೆ, ಸರಮುತ್ತಿನ ಕಡೆಗೋಲು, ಅರುಗೋಲು, ಕೋವೆ, ಕಾಗಿನ ಸೀರೆ, ತೌರುಬಣ್ಣ, ಊರಚಂಗಿ, ಗದರಸಿ, ಚೆಲ್ಲು, ಹರಡಿ, ಕೆಂದಿ, ತೊಗೆ –ಇತ್ಯಾದಿ. ಈ ಅಪೂರ್ವ ಶಬ್ದಗಳು ಕನ್ನಡ ಭಾಷೆಯ ಶ್ರೀಮಂತಿಕೆಯನ್ನು ಸಾರುವಂತಿದೆ.

ಕನ್ನಡ ಭಾಷೆ ಸಂಪದ್ಭರಿತವಾದ ಭಾಷೆ. ಇದರಲ್ಲಿರುವ ಅಪ್ರಕಟಿತ ಜಾನಪದ ಗೀತೆಗಳೆಲ್ಲಾ ಪ್ರಕಟವಾಗಬೇಕು. ಆ ಹಾಡುಗಳಲ್ಲಿನ ಶಬ್ದಸಂಪತ್ತಿ ಉಳಿದುಕೊಳ್ಳಬೇಕು, ಚಲಾವಣೆಗೆ ಬರಬೇಕು. ಇಲ್ಲದಿದ್ದಲ್ಲಿ ಗ್ರಂಥಸ್ಥವಲ್ಲದ ಈ ಹಾಡುಗಳಲ್ಲಿನ ಮೂಲಶಬ್ದಗಳು ಕ್ರಮೇಣ ಕಣ್ಮರೆಯಾಗಿ ಹೋಗುತ್ತವೆ. ಈ ಮಹತ್ಕಾರ್ಯವನ್ನು ನಾಡಿನ ವಿದ್ವಾಂಸರು ಕೈಕೊಂಡು ಕನ್ನಡ ಜಾನಪದ ಹಾಡುಗಳನ್ನೆಲ್ಲಾ ಒತ್ತಟ್ಟಿಗೆ ಸಂಗ್ರಹಿಸಿ ಆ ಹಾಡುಗಳಲ್ಲಿನ ಶಬ್ದಗಳನ್ನೆಲ್ಲಾ ಆಯ್ದು ಅರ್ಥೈಸುವ ಕಾಲ ಸನ್ನಿಹಿತವಾಗಲಿ.

ಜೀವನವೆಲ್ಲ ಬೇವುಬೆಲ್ಲ ಬಲ್ಲವರೆಲ್ಲ ನಂಬಿದರಲ್ಲ
ಕಷ್ಟಸುಖ ಸಿಹಿಕಹಿ ಸಮವೆಲ್ಲ
ಕಷ್ಟಸುಖ ಸಿಹಿಕಹಿ ಸಮವೆಲ್ಲ । ಬೆಟ್ಟದೊಡೆಯ
ಮಲ್ಲಯ್ಯ ದಯವಿದೆ ಭಯವಿಲ್ಲ.

■

# ಕನ್ನಡ ಸಾಹಿತ್ಯಕ್ಕೆ ಪಾಶ್ಚಾತ್ಯರ ಕೊಡುಗೆ : ಹೆನ್ರಿಹೇಗ್, ಹರ್ಮನ್ ಮೋಗ್ಲಿಂಗ್

ಕನ್ನಡ ಸಾಹಿತ್ಯದ ಅರುಣೋದಯ ಕಾಲದಲ್ಲಿ ಕರ್ನಾಟಕಕ್ಕೆ ಆಗಮಿಸಿದ ವಿದೇಶೀವಿದ್ವಾಂಸರು ಸಲ್ಲಿಸಿದ ಸೇವೆ ಅನುಪಮವಾದುದು. ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಮುಖವಾಗಿ ಕ್ರೈಸ್ತಮತ ಪ್ರಚಾರಕ್ಕಾಗಿ ಭಾರತಕ್ಕೆ ಬಂದ ಕ್ರೈಸ್ತ ಮಿಷನರಿಗಳು ದಕ್ಷಿಣಭಾರತದಲ್ಲಿ ಅದರಲ್ಲೂ ವಿಶೇಷವಾಗಿ ಕರ್ನಾಟಕದಲ್ಲಿ ಮಹತ್ತರ ಕಾರ್ಯಗಳನ್ನು ಮಾಡಿದ್ದಾರೆ. ಈ ಮಿಷನರಿಗಳೆಲ್ಲ ಮೇಧಾವಿಗಳೂ ವಿಶ್ವವಿದ್ಯಾನಿಲಯಗಳ ಪದವೀಧರರೂ ಆಗಿದ್ದವರು. ಅವರು ಯಾವ ಲೌಕಿಕ ಲಾಭಲೋಭಗಳಿಗೆ ಒಳಗಾಗದೆ ಕೇವಲ ಸ್ವಧರ್ಮನಿಷ್ಠೆಯಿಂದ ಪ್ರೇರಿತರಾಗಿ ಕ್ರೈಸ್ತಧರ್ಮ ಸೇವಾದೀಕ್ಷೆಯನ್ನು ಕೈಗೊಂಡು ಅವಿರತವಾಗಿ ದುಡಿದಿದ್ದಾರೆ. ಅವರ ಈ ಕಾರ್ಯ ಒಂದು ನಿಶ್ಚಿತಕ್ರಮದಲ್ಲಿ ನಡೆದಿರುವುದನ್ನು ನಾವು ನಿಚ್ಚಳವಾಗಿ ಗುರುತಿಸಬಹುದಾಗಿದೆ. ಯಾವ ಪ್ರಾಂತಕ್ಕೆ ನಿಯೋಜಿತರಾಗಿ ಹೋಗುವರೋ ಆ ಪ್ರಾಂತ್ಯವನ್ನೆಲ್ಲ ಸಮಗ್ರವಾಗಿ ಸುತ್ತಾಡಿ ಪ್ರಮುಖವಾದ ಸ್ಥಳಗಳಲ್ಲಿ ತಮ್ಮ ಸೇವಾಕಾರ್ಯಕ್ಷೇತ್ರಗಳನ್ನು ಸ್ಥಾಪಿಸಿ ಕಾರ್ಯೋನ್ಮುಖರಾಗುತ್ತಿದ್ದರು. ಮೊದಲು ಆ ಪ್ರಾಂತೀಯ ಭಾಷೆಗಳನ್ನು ಬಲ್ಲ ವಿದ್ವಾಂಸರಿಂದ ಕಲಿತು ಆ ಭಾಷೆಗಳಿಗೆ ಅಗತ್ಯವಾದ ಶಾಲಾಪಠ್ಯಪುಸ್ತಕಗಳನ್ನು ನಿಘಂಟು, ವ್ಯಾಕರಣ ಗ್ರಂಥಗಳನ್ನು ಸಿದ್ಧಪಡಿಸುತ್ತಿದ್ದರು. ತಮ್ಮ ಮುಖ್ಯಕಾರ್ಯಕ್ಕೆ ಅನುಕೂಲವಾಗುವಂತೆ ಬೈಬಲನ್ನೂ ಕ್ರಿಸ್ತನ ಸುವಾರ್ತೆಗಳನ್ನೂ ಆಯಾ ಭಾಷೆಗಳಲ್ಲಿ ಅನುವಾದಮಾಡಿ ಮುದ್ರಿಸಿ ಜನರಿಗೆ ಹಂಚುತ್ತಿದ್ದರು. ಈ ಕಾರ್ಯಕ್ಕೆ ಅಗತ್ಯವಾದ ಮುದ್ರಣಾಲಯವನ್ನು ಪ್ರಪ್ರಥಮ ಬಾರಿಗೆ ಸ್ಥಾಪಿಸಿದ ಕೀರ್ತಿಗೂ ಈ ಕ್ರೈಸ್ತ ಮಿಷನರಿಗಳು ಭಾಜನರಾಗಿದ್ದಾರೆ. ಜೊತೆಗೆ ಶಾಲೆಗಳನ್ನು ತೆರೆಯುವುದಕ್ಕೂ ಕಾರಣಕರ್ತರಾಗಿದ್ದಾರೆ. ಇವುಗಳ ಜೊತೆಗೇ ತಮ್ಮ ಧರ್ಮಪ್ರಸಾರ ಕಾರ್ಯವನ್ನು ಎಡೆಬಿಡದೆ ಸಾಧಿಸಿದ್ದಾರೆ. ಇದರಿಂದ ಅವರ ಕರ್ತವ್ಯನಿಷ್ಠೆ, ಧರ್ಮಶ್ರದ್ಧೆ, ಸಾಹಿತ್ಯ ಪ್ರಸಾರಕಾರ್ಯ ಎದ್ದುಕಾಣುವಂತಹುದಾಗಿದೆ.

ಧರ್ಮಪ್ರಸಾರವೇ ತಮ್ಮ ಪರಮೋದ್ದೇಶವಾಗಿದ್ದ ಈ ಮಿಷನರಿಗಳು ಈ ನಾಡಿನ ಭಾಷಾಸಂಪತ್ತನ್ನೂ ಸಾಹಿತ್ಯ ಸಂಸ್ಕೃತಿಗಳನ್ನೂ ಕಂಡುಕೊಂಡು ಅವಕ್ಕೆ ಮಾರುಹೋಗಿ ತಮ್ಮ ಜೀವಮಾನವನ್ನೆಲ್ಲ ಅವುಗಳ ಪುನರುಜ್ಜೀವನಕ್ಕಾಗಿಯೇ ಮುಡುಪಾಗಿಟ್ಟಿದ್ದಾರೆ. ಧರ್ಮಪ್ರಸಾರಕ್ಕೆ ಭಾಷಾಮಾಧ್ಯಮ ಅಪರಿಹಾರ್ಯ ಎಂಬುದನ್ನು ಮನಗಂಡಿದ್ದ ಈ ಕ್ರೈಸ್ತ ಮಿಷನರಿಗಳು ಆಯಾ ದೇಶೀಯ ಭಾಷೆಗಳನ್ನು ಆಳವಾಗಿ ಅಭ್ಯಸಿಸಿ ಆಯಾ ಭಾಷೆಗಳಲ್ಲಿ ಪಾಂಡಿತ್ಯವನ್ನು ಗಳಿಸಿಕೊಂಡು ಅನೇಕ ಮೌಲಿಕ ಕೃತಿಗಳನ್ನು ರಚಿಸಿದ್ದಾರೆ. ಕರ್ನಾಟಕಕ್ಕೆ ಕ್ರೈಸ್ತಮತ ಪ್ರಸಾರಕ್ಕೆ ಬಂದಿದ್ದವರಲ್ಲಿ ಕೆಥೊಲಿಕರು ಮತ್ತು ಪ್ರೊಟೆಸ್ಟೆಂಟರು ಈ ಎರಡೂ ಪಂಗಡಗಳಿಗೆ ಸೇರಿದವರಾಗಿದ್ದಾರೆ. ಇವರೆಲ್ಲರೂ ಜೆಸುಯಿಟ್ ಸೊಸೈಟಿ, ಲಂಡನ್ ಮಿಷನ್, ವೆಸ್ಲಿಯನ್ ಮೆಥಾಡಿಸ್ಟ್ ಮಿಷನ್, ಬಾಸೆಲ್ ಮಿಷನಿಗೆ ಸೇರಿದವರಾಗಿದ್ದರು. ಆ ಸಂಸ್ಥೆಗಳಲ್ಲಿ ಕ್ರೈಸ್ತ ಮತಪ್ರಸಾರದ ತರಬೇತಿಯನ್ನು ಪಡೆದು ಬಂದವರು ಎಂಬುದನ್ನು ಗಮನಿಸಬೇಕಾಗಿದೆ. ಸಾಹಿತ್ಯ, ಸಂಸ್ಕೃತಿ, ಕಲೆ, ಶಾಸನ, ನಿಘಂಟು, ವ್ಯಾಕರಣ, ಛಂದಸ್ಸು, ಭಾಷಾಂತರ, ಪಠ್ಯಪುಸ್ತಕ ಇವೇ ಮೊದಲಾದ ಪ್ರಕಾರಗಳಲ್ಲಿ ದುಡಿದ ರೆ. ಎಫ್. ಕಿಟೆಲ್, ವಿಲಿಯಂ ರೀವ್, ಸ್ಯಾಂಡರ್ ಸನ್, ವಿಲಿಯಂ ಕ್ಯಾರಿ, ಲೂಯಿಸ್ ರೈಸ್, ಫ್ಲೀಟ್, ಗ್ಯಾರೆಟ್, ಬುಚರ್, ಝುಗ್ಲರ್.

ಕಾಲ್ಡ್‌ವೆಲ್ ಇವರೇ ಮೊದಲಾದವರು ಪ್ರಮುಖರು. ಈ ಮಾಲಿಕೆಯಲ್ಲಿ ಯಥಾರ್ಥಸೇವೆಯನ್ನು ಸಲ್ಲಿಸಿರುವ ಹೆನ್ರಿಹೇಗ್ ಮತ್ತು ಹರ್ಮನ್ ಮೋಗ್ಲಿಂಗ್ ಅವರ ಒಂದು ಸ್ಥೂಲ ಪರಿಚಯವನ್ನು ಈಗ ಮಾಡಿಕೊಳ್ಳೋಣ.

## ಹೆನ್ರಿಹೇಗ್

ಹತ್ತೊಂಬತ್ತನೆಯ ಶತಮಾನದ ಕಡೆಯ ಭಾಗದಲ್ಲಿ ಕರ್ನಾಟಕಕ್ಕೆ ಬಂದ ವೆಸ್ಲಿಯನ್ ಮಿಷನರಿ ಹೆನ್ರಿಹೇಗ್ ಅನೇಕ ಮಹತ್ವದ ಕಾರ್ಯಗಳನ್ನು ಮಾಡಿದ್ದಾನೆ. ಈತನು ಮೈಸೂರಿನಲ್ಲಿ ನೆಲಸಿ ಮುದ್ರಣ, ಪತ್ರಿಕೋದ್ಯಮ, ಕನ್ನಡ ಬೈಬಲ್ ನವೀಕರಣ ಮೊದಲಾದ ಕಾರ್ಯಗಳನ್ನು ಮಾಡಿದ್ದಾನೆ. ಜೊತೆಗೆ ೧೮೪೮ರ ಸುಮಾರಿಗೆ ವೆಸ್ಲಿಯನ್ ಪ್ರೆಸ್ ಸ್ಥಾಪಿಸಿದನು. ಅದು ಇಂದಿಗೂ ಹೆಸರುವಾಸಿಯಾಗಿದೆ. ಈತ 'ವೃತ್ತಾಂತ ಪತ್ರಿಕೆ' ಎಂಬ ಹೆಸರಿನ ಪತ್ರಿಕೆಯನ್ನು ಪ್ರಾರಂಭಿಸಿದನು. ಈ ವೃತ್ತಾಂತ ಪತ್ರಿಕೆಯು ವೆಸ್ಲಿಯನ್ ಮಿಷನ್ ಸಂಸ್ಥೆಯ ಪ್ರಕಟನೆಯಾಗಿದ್ದರೂ ಅದು ಅಂದಿನ ಜನತೆಯ ಪತ್ರಿಕೆಯಾಗಿತ್ತು. ಅದರಲ್ಲಿ ಸಾರ್ವಜನಿಕ ಅಹವಾಲುಗಳು, ವಿದೇಶೀ ಸುದ್ದಿಗಳು, ಪೇಟೆಯ ಧಾರಣೆಗಳು ಇವೇ ಅಲ್ಲದೆ ಕ್ರೈಸ್ತಸುದ್ದಿಗಳಿಗೂ ಅವಕಾಶ ಕೊಡಲಾಗಿತ್ತು. ವಿವಿಧ ವಿಷಯಗಳಿಂದ ಕೂಡಿದ್ದ ಈ ಪತ್ರಿಕೆ ಜನಾದರಣೆಯನ್ನು ಪಡೆದು ಅನೇಕ ವರ್ಷಗಳಕಾಲ ಜೀವಂತವಾಗಿತ್ತು. ಈ ಬಗೆಯ ಪತ್ರಿಕಾಧೋರಣೆಯನ್ನು ನಿರೂಪಿಸಿದವನು ಹೆನ್ರಿಹೇಗ್.

ಈತನು ಬರೆದ "ವೆಸ್ಲಿ ಸಭೆಯ ಸಂಸ್ಕಾರಗಳು", "ವೆಸ್ಲಿ ಅಯ್ಯನವರ ಚರಿತ್ರೆ" ಈ ಕೃತಿಗಳು ವೆಸ್ಲಿಯನ್ ಮತಕ್ಕೆ ಸಂಬಂಧಿಸಿದವುಗಳಾಗಿವೆ. "ಕ್ರೈಸ್ತ ಜೀವನ್ಮುಕ್ತಿ ವಿವೇಕ", "ಯಾಕೋಬನ ಪತ್ರಿಕೆ" ಇವು ಹೊಸ ಒಡಂಬಡಿಕೆಯ, ರೋಮ್ ಮತ್ತು ಯಾಕೋಬ ಪ್ರಕರಣಗಳ ಮೇಲಿನ ವ್ಯಾಖ್ಯಾನಗಳು. ಹೆನ್ರಿಹೇಗ್ ಕನ್ನಡ ಬೈಬಲಿನ ಪರಿಷ್ಕರಣದ ಸಂಯುಕ್ತ ಸಮಿತಿಯ ಅಧ್ಯಕ್ಷನಾಗಿದ್ದು ನವನಿರ್ಧಾರದ ತಿದ್ದಿದ ಆವೃತ್ತಿಯನ್ನು ಹೊರತಂದಿದ್ದಾನೆ. ಹೊಸ ಒಡಂಬಡಿಕೆಯ ಲ್ಯೂಕ್ ಮತ್ತು ಮಾರ್ಕ್ ಇವರ ಸುವಾರ್ತೆಗಳನ್ನು ಝುಗ್ಲರ್‌ನೊಂದಿಗೆ ಸೇರಿ ಅನುವಾದಿಸಿದ್ದಾರೆ. ಹಲವಾರು ಮತೀಯ ಪುಸ್ತಕಗಳನ್ನೂ ಹೇಗ್ ಹೊರತಂದಿದ್ದಾನೆ. ಈತನ ಮತ್ತೊಂದು ಮಹತ್ವದ ಕಾರ್ಯ "ಪೀಸ್ ಪೇಪರ್ಸ್ ಆನ್ ಇಂಡಿಯನ್ ರಿಫಾರ್ಮಸ್" ಎಂಬ ಮಾಲಿಕೆಯನ್ನು ಪ್ರಾರಂಭಿಸಿದ್ದು. ಪ್ರಚಲಿತ ವಿಷಯಗಳ ಮೇಲೆ ಬರೆದ ಉಪಯುಕ್ತವಾದ ಸುಮಾರು ಐವತ್ತು ಕಿರುಹೊತ್ತಗೆಗಳು ಈ ಮಾಲಿಕೆಯಲ್ಲಿ ಪ್ರಕಟವಾಗಿವೆ.

ಬೈಬಲ್ ಅಧ್ಯಯನಕ್ಕೆ ಹೆನ್ರಿಹೇಗ್ ವಿಶೇಷ ಆದ್ಯತೆಯನ್ನು ಕೊಟ್ಟಿದ್ದಾನೆ. ಯಾಕೋಬನ ಪತ್ರಿಕೆಯಲ್ಲಿ ಹೇಗ್ ಬೈಬಲಿಗೆ ಅನುಬಂಧವಾಗಿ ಭಗವದ್ಗೀತೆಯ ಸಮಾನಶ್ಲೋಕಗಳನ್ನು ಕೊಟ್ಟಿದ್ದಾನೆ. ಈ ಕೃತಿಯ ಹಸ್ತಪ್ರತಿಯನ್ನು ಪಿ. ಕರಿಬಸವಶಾಸ್ತ್ರಿಗಳಿಗೆ ಕೊಟ್ಟು ಭಾಷೆಯ ದೃಷ್ಟಿಯಿಂದ ಅದನ್ನು ತಿದ್ದಿಸಿಕೊಂಡಿದ್ದಾನೆ. ಜನತೆಯ ದೃಷ್ಟಿಯಲ್ಲಿ ಈ ಕೃತಿ ಮಾನ್ಯವಾಗಬೇಕೆಂಬ ಪ್ರಜ್ಞೆ ಕ್ರೈಸ್ತ ಮಿಷನರಿಗಳಲ್ಲಿ ಜಾಗೃತವಾಗಿತ್ತು ಎಂಬುದಕ್ಕೆ ಹೆನ್ರಿಹೇಗ್ ಅವರ ಈ ಕಾರ್ಯ ನಿದರ್ಶನವಾಗಿದೆ.

## ಹರ್ಮನ್ ಮೋಗ್ಲಿಂಗ್

ಕರ್ನಾಟಕಕ್ಕೆ ಬಂದ ಕ್ರೈಸ್ತಮಿಷನರಿಗಳಲ್ಲಿ ಜರ್ಮನಿಯ ಹರ್ಮನ್ ಮೋಗ್ಲಿಂಗ್ ಅತ್ಯಂತ ಪ್ರತಿಭಾವಂತ. ಕರ್ನಾಟಕದಲ್ಲಿ ಈತನು ಶಿಕ್ಷಣ, ಸಂಸ್ಕೃತಿ, ಸಾಹಿತ್ಯ, ಪತ್ರಿಕೋದ್ಯಮ, ಇತಿಹಾಸ ಇವುಗಳಿಗೆ ಸಲ್ಲಿಸಿದ ಸೇವೆ ಚಿರಕಾಲ ನೆನೆಯುವಂತಹುದು. ಕುಶಾಗ್ರಮತಿಯಾಗಿದ್ದ ಮೋಗ್ಲಿಂಗ್ ಬಹುಭಾಷಾ ಪಂಡಿತ. ಇಂಗ್ಲಿಷ್, ಕನ್ನಡ, ತಮಿಳು, ತುಳು, ಸಂಸ್ಕೃತ, ಪರ್ಷಿಯನ್ ಭಾಷೆಗಳನ್ನು ಬಲ್ಲವನಾಗಿದ್ದ. ಕೆಲವು ಭಾಷೆಗಳಲ್ಲಿ ಬಲ್ಲಿದನಾಗಿದ್ದ. ಆತನಿಗೆ ಒದಗಿಬಂದ ಸನ್ನಿವೇಶ ಇದಕ್ಕೆ ತುಂಬ ಸಹಕಾರಿಯಾಯಿತು. ಬಾಲ್ಯದಲ್ಲಿಯೇ ತಾಯಿಯನ್ನು ಕಳೆದುಕೊಂಡರೂ ಆಕೆಯು ಕಲಿಸಿಕೊಟ್ಟಿದ್ದ ಪ್ರಾರ್ಥನೆಗಳು ಅವನಲ್ಲಿ ಮನೆಮಾಡಿಕೊಂಡಿದ್ದವು. ಜೊತೆಗೆ ತಂದೆ ಪಾದ್ರಿಯಾಗಿದ್ದುದೂ ಆತನ ಧರ್ಮಪ್ರಸಾರ ಕಾರ್ಯಕ್ಕೆ ಇಂಬುಕೊಟ್ಟಿತು. ವಿದ್ಯಾರ್ಥಿದೆಸೆಯಲ್ಲೇ ಶಾಲೆಯಲ್ಲಿ ಗುರುಗಳು ಹೇಳಿಕೊಟ್ಟ ಒಂದು ಪದ್ಯಭಾಗವನ್ನು ಲ್ಯಾಟಿನ್ ಭಾಷೆಗೆ ಪರಿವರ್ತಿಸಲು

ಹೇಳಿದೊಡನೆಯೇ ಅದನ್ನು ಪರಿವರ್ತಿಸಿ ತನ್ನ ಪ್ರತಿಭೆಯನ್ನು ಪ್ರದರ್ಶಿಸಿದ್ದಾನೆ. ತೀಬಿಂಜೆನ್ ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಪದವಿಯನ್ನು ಪಡೆದ ಮೋಗ್ಲಿಂಗ್ ಬಾಸೆಲ್ ಮಿಷನ್ನಿಗೆ ಹೋಗಿ ಧರ್ಮಪ್ರಸಾರಕನಾಗುವ ಅಭಿಲಾಷೆಯನ್ನು ವ್ಯಕ್ತಪಡಿಸಿ, ಆ ಕಾರ್ಯಕ್ಕೆ ನಿಯೋಜಿತನಾಗಿ ಕ್ರಿ.ಶ.೧೮೩೬ರಲ್ಲಿ ಮಂಗಳೂರಿಗೆ ಬಂದನು. ಮಾರನೆಯ ವರ್ಷವೇ ಧಾರವಾಡ ಹುಬ್ಬಳ್ಳಿಗಳಲ್ಲಿ ಧರ್ಮಪ್ರಸಾರ ಕಾರ್ಯಕ್ಕೆ ನೇಮಕಗೊಂಡು ಹೋದನು. ತನ್ನ ಸ್ನೇಹಿತನಾದ ಹೆಬಿಕ್ ಕೊಟ್ಟ ವಿವರಣೆಯನ್ನು ಆಧರಿಸಿ "ಹಾರ್ಟ್‌ಬುಕ್" ಎಂಬ ಶಿರೋನಾಮೆಯ "ಹೃದಯ ದರ್ಪಣ" ಎಂಬ ಕೃತಿಯನ್ನು ರಚಿಸಿದನು. ಇದು ಇತರ ಭಾಷೆಗಳಿಗೂ ಅನುವಾದಗೊಂಡದ್ದು ಇದರ ವೈಶಿಷ್ಟ್ಯವಾಗಿದೆ.

ಮೋಗ್ಲಿಂಗ್ ೧೮೩೮ರಲ್ಲಿ ಮತ್ತೆ ಮಂಗಳೂರಿಗೆ ಬಂದು ದೈವಜ್ಞಾನ ಶಾಲೆಯಲ್ಲಿ ಅಧ್ಯಾಪನದಲ್ಲಿ ತೊಡಗಿ ಕೊಂಡನು. ಮೋಗ್ಲಿಂಗ್‌ನ ಧರ್ಮಪ್ರಸಾರ ಕಾರ್ಯ ವಿಚಾರಧಾರೆಯಿಂದ ಪ್ರಭಾವಿತರಾದ ಕೆಲವರು ಕ್ರೈಸ್ತಧರ್ಮಕ್ಕೆ ಮತಾಂತರಗೊಂಡದ್ದು ಒಂದು ಮಹತ್ವದ ಸಂಗತಿಯಾಗಿದೆ. ಅವರಲ್ಲಿ ಆನಂದರಾಯ ಕೌಂಡಿಣ್ಯ ಎಂಬ ಬ್ರಾಹ್ಮಣ ೧೮೪೨ರಲ್ಲಿ ಕ್ರೈಸ್ತಧರ್ಮಕ್ಕೆ ಮತಾಂತರಗೊಂಡನು. ಈ ಮತಾಂತರದ ಕಥೆಯನ್ನು "ಈರಾರು ಪತ್ರಿಕೆ" ಎಂಬ ಕಿರುಕೃತಿಯಲ್ಲಿ ದಾಖಲಿಸಲಾಗಿದೆ. ಮೋಗ್ಲಿಂಗನು ನೈಗಲ್ ಎಂಬುವನೊಡಗೂಡಿ ಕೆಲವು ಕ್ರೈಸ್ತಗೀತೆಗಳನ್ನು ರಚಿಸಿದ್ದಾನೆ. ಅಲ್ಲದೆ "ಪಿಲ್‌ಗ್ರಿಮ್ಸ್ ಪ್ರೋಗ್ರೆಸ್" ಎಂಬ ಗ್ರಂಥವನ್ನು "ಯಾತ್ರಿಕನ ಸಂಚಾರ" ಎಂಬ ಹೆಸರಿನಿಂದ ಕನ್ನಡಕ್ಕೆ ಅನುವಾದಿಸಿದ್ದಾನೆ. "ಚಿಕ್ಕವನಾದ ಹೆನ್ರಿಯೂ ಅವನ ಬೋಯಿಯೂ", "ದೇವವಾಕ್ಯ ವ್ಯಾಖ್ಯಾನ", "ಬಾಸೆಲ್ ಮಿಷನ್ನಿನ ಸಭಾಕ್ರಮ" ಎಂಬ ಕೃತಿಗಳನ್ನೂ ಮೋಗ್ಲಿಂಗನು ರಚಿಸಿದ್ದಾನೆ. ಧರ್ಮಪ್ರಸಾರಕ್ಕೆ ಸಂಬಂಧಿಸಿದಂತೆ ಈತನು ರಚಿಸಿರುವ "ಜಾತಿ ವಿಚಾರಣೆ", "ದೇವ ವಿಚಾರಣೆ" ಎಂಬ ಪುಸ್ತಕಗಳು ಹೊಸಗನ್ನಡದ ಆದ್ಯಪ್ರಬಂಧಗಳು ಎಂಬ ಖ್ಯಾತಿಯನ್ನು ಪಡೆದಿವೆ.

ಮೋಗ್ಲಿಂಗ್ ಕನ್ನಡವನ್ನು ರೆವರೆಂಡ್ ರೀವ್ ಅವರ ನಿಘಂಟು, ಕೃಷ್ಣಮಾಚಾರಿಯ ವ್ಯಾಕರಣ ಕೃತಿಗಳ ವ್ಯಾಸಂಗದಿಂದಲೇ ಕಲಿತು ಪ್ರಭುತ್ವವನ್ನು ಸಂಪಾದಿಸಿಕೊಂಡದ್ದು ಆತನ ಅಸಾಧಾರಣ ಪ್ರತಿಭೆಗೆ ಸಾಕ್ಷಿಯಾಗಿದೆ. ಕನ್ನಡದಲ್ಲಿನ ಶ್ರೇಷ್ಠಸಾಹಿತ್ಯವನ್ನೆಲ್ಲ ಜರ್ಮನ್ ಭಾಷೆಗೆ ಭಾಷಾಂತರಿಸಿ ತನ್ನ ಕನ್ನಡ ಪ್ರೇಮವನ್ನು ಸಾರಿ ತೋರಿಸಿದ್ದಾನೆ. ಅಷ್ಟೇ ಅಲ್ಲದೆ "ಬಿಬ್ಲಿಯಾಥಿಕಾ ಕರ್ನಾಟಿಕಾ" ಎಂಬ ಮಾಲಿಕೆಯನ್ನು ಪ್ರಾರಂಭಿಸಿ ಕನ್ನಡದ ಉತ್ತಮ ಪ್ರಾಚೀನ ಕಾವ್ಯಗಳಾದ ಜೈಮಿನಿಭಾರತ, ತೊರವೆ ರಾಮಾಯಣ, ದಾಸರ ಪದಗಳು, ಕುಮಾರವ್ಯಾಸ ಭಾರತ, ಬಸವ ಪುರಾಣ, ಚೆನ್ನಬಸವ ಪುರಾಣ, ಹರಿಭಕ್ತಿಸಾರ –ಇವೇ ಮೊದಲಾದ ಕೃತಿಗಳನ್ನು ಪ್ರಕಟಿಸಿದ ಶ್ರೇಯಸ್ಸು ಮೋಗ್ಲಿಂಗನಿಗೆ ಸಲ್ಲತಕ್ಕದ್ದಾಗಿದೆ. ದಾಸಸಾಹಿತ್ಯದ ಮೇಲೆ ಅಪಾರ ಆಸಕ್ತಿ ಹೊಂದಿದ್ದ ಮೋಗ್ಲಿಂಗ್ ಕನಕದಾಸರ ಮತ್ತು ಪುರಂದರದಾಸರ ಕೀರ್ತನೆಗಳನ್ನು ಜರ್ಮನ್ ಭಾಷೆಗೆ ಪದ್ಯರೂಪದಲ್ಲಿಯೇ ಅನುವಾದಿಸಿ ಪೀಠಿಕೆಯೊಡನೆ ಜರ್ಮನಿಯ ಜಡ್‌ಡಿಎಂಜಿ ಪತ್ರಿಕೆಯಲ್ಲಿ ಪ್ರಕಟಿಸಿದ್ದಾನೆ. ಕನ್ನಡ ಸಾಹಿತ್ಯದ ಹಿರಿಮೆಯನ್ನು ಸಾರಿ ತೋರುವುದರಲ್ಲಿ ಸಫಲನಾಗಿದ್ದಾನೆ.

ಸುಮಾರು ಎಂಟು ವರ್ಷಗಳು ಕೊಡಗಿನಲ್ಲಿ ನೆಲೆನಿಂತ ಮೋಗ್ಲಿಂಗ್ ಕೊಡಗಿನ ಜನಜೀವನ, ಪುರಾಣೇತಿಹಾಸ, ಹಬ್ಬ ಉತ್ಸವಾದಿಗಳು, ಹುತ್ತರಿಹಾಡು –ಇದೇ ಮೊದಲಾದ ಸಂಗತಿಗಳನ್ನು ಪರಿಚಯಿಸುವ ಲೇಖನ ಮಾಲೆಯನ್ನು ಪ್ರಾರಂಭಿಸಿ, ಇಂಗ್ಲೀಷಿನಲ್ಲಿ ಅವನ್ನು ಪ್ರಕಟಿಸಿದನು. ಕಾಲಾಂತರದಲ್ಲಿ ಈ ಲೇಖನಗಳು "ಕೂರ್ಗ್ ಮೆಮೊರೀಸ್" ಎಂದು ಪುಸ್ತಕರೂಪದಲ್ಲಿ ಹೊರಬಂದುವು. ಕೊಡಗಿನ ವೀರರಾಜೇಂದ್ರನ "ರಾಜೇಂದ್ರನಾಮೆಯ" ಕನ್ನಡ ಮತ್ತು ಇಂಗ್ಲೀಷ್ ಅನುವಾದಗಳನ್ನು ಪರಿಷ್ಕರಿಸಿ ಪ್ರಕಟಿಸಿದನು. ಕೊಡಗಿನ ಇತಿಹಾಸ ನಿರೂಪಣೆಯ ಕಾರ್ಯದಲ್ಲಿ ಮೋಗ್ಲಿಂಗನದು ಪ್ರಧಾನ ಪಾತ್ರವಾಗಿತ್ತು.

ಕರ್ನಾಟಕದಲ್ಲಿ ಸುಮಾರು ಇಪ್ಪತ್ತೈದು ವರ್ಷಗಳ ನಿರಂತರ ಸಂಚಾರದ ಕಾಲದಲ್ಲಿ ತಾನು ಕಂಡು ಕೇಳಿದ ಕನ್ನಡ ಗಾದೆಗಳನ್ನು ಸಂಗ್ರಹಿಸಿದ್ದು ಮೋಗ್ಲಿಂಗನ ಮತ್ತೊಂದು ಮಹತ್ವದ ಸಾಧನೆಯಾಗಿದೆ. ಸುಮಾರು ಮೂರು ಸಾವಿರದ

ಐನೂರಕ್ಕೂ ಮಿಗಿಲಾದ ಈ ಗಾದೆಗಳನ್ನು "ಕನ್ನಡ ಗಾದೆಗಳು" ಎಂಬ ಹೆಸರಿನಿಂದ ಪ್ರಕಟಿಸಿ ಕನ್ನಡ ಜಾನಪದ ಸಾಹಿತ್ಯಕ್ಕೆ ಮಿಗಿಲಾದ ಸೇವೆಯನ್ನು ಸಲ್ಲಿಸಿದ್ದಾನೆ. ಇದೇ ರೀತಿ ತನ್ನ ಸಂಚಾರದ ಸಮಯದಲ್ಲಿ ತುಳು ಪಾಡ್ದನಗಳನ್ನು ಸಂಗ್ರಹಿಸಿದನು. ಅಂತೆಯೇ ತಾನು ಸಂಗ್ರಹಿಸಿದ್ದ ಕೊಡವ ಮತ್ತು ತುಳು ಜನಪದ ಗೀತೆಗಳನ್ನು ಇಂಗ್ಲೀಷ್ ಮತ್ತು ಜರ್ಮನ್ ಭಾಷೆಗಳಿಗೆ ಅನುವಾದಿಸಿದ್ದಾರೆ. ತುಳುಭಾಷೆಯಲ್ಲಿ ಪ್ರಸಿದ್ಧವಾಗಿ ಪ್ರಚಲಿತವಿರುವ "ಕೋಟಿ ಚನ್ನಯ" ಹಾಡನ್ನು ಸಂಗ್ರಹಿಸಿ ಅದನ್ನು ಕನ್ನಡದಲ್ಲಿ ಬರೆದು ಪ್ರಚಾರ ಮಾಡಿದನು.

ಕನ್ನಡ ಪತ್ರಿಕಾಪ್ರಪಂಚಕ್ಕೆ ಮೋಗ್ಲಿಂಗನ ಕೊಡುಗೆ ಅಪಾರವಾದುದು. ಈತನೇ ಕನ್ನಡ ಪತ್ರಿಕಾಪ್ರಪಂಚಕ್ಕೆ ಮೊದಲಿಗನೆಂಬ ಕೀರ್ತಿಗೂ ಭಾಜನನಾಗಿದ್ದಾನೆ. "ಮಂಗಳೂರು ಸಮಾಚಾರ ಪತ್ರಿಕೆ", "ಕನ್ನಡ ಸುವಾರ್ತಿಕ" ಎಂಬ ಪತ್ರಿಕೆಗಳನ್ನು ಪ್ರಾರಂಭಿಸಿದನು. ಮೈಸೂರಿನಿಂದ ಬರುತ್ತಿದ್ದ "ಕರ್ನಾಟಕ ವಾಗ್ವಿಧಾಯಿನಿ" ಉಡುಪಿಯಿಂದ ಬರುತ್ತಿದ್ದ "ಕ್ರೈಸ್ತ ಸಭಾಪತ್ರ" ಈ ಪತ್ರಿಕೆಗಳ ಪ್ರಕಟನ ಕಾರ್ಯದಲ್ಲೂ ಮೋಗ್ಲಿಂಗನ ಪಾತ್ರ ಪ್ರಧಾನವಾಗಿತ್ತು.

ಕರ್ನಾಟಕಕ್ಕೆ ಧರ್ಮಪ್ರಸಾರಕ್ಕೆ ಆಗಮಿಸಿದ್ದ ವಿದೇಶೀ ವಿದ್ವಾಂಸರ ಶ್ರೇಣಿಯಲ್ಲಿ ಜರ್ಮನಿಯ ಡಾ. ಹರ್ಮನ್ ಮೋಗ್ಲಿಂಗ್‌ನಿಗೆ ವಿಶಿಷ್ಟ ಸ್ಥಾನವಿದೆ. ಕರ್ನಾಟಕದಲ್ಲಿ ಶಾಲೆಗಳನ್ನು ತೆರೆದು ಅವುಗಳ ಸಂರಕ್ಷಣೆಗಾಗಿ ಅತೀವ ಆಸಕ್ತಿಯನ್ನು ತೋರಿದ ಮೋಗ್ಲಿಂಗ್ ಕನ್ನಡ ಸಾಹಿತ್ಯ ಸಂಸ್ಕೃತಿಗಳ ಸರ್ವತೋಮುಖವಾದ ಅಭಿವೃದ್ಧಿಗೆ ಬಹುವಾಗಿ ಶ್ರಮಿಸಿದ ನಿಸ್ವಾರ್ಥ ಸಂತನೆನಿಸಿದ್ದಾನೆ. ಪತ್ರಿಕಾಕ್ಷೇತ್ರದ ಪಿತಾಮಹನಾಗಿ, ಕನ್ನಡ ಲಿಪಿಯ ಸುಧಾರಕನಾಗಿ, ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಒಂದು ನವಮನ್ವಂತರವನ್ನು ಸ್ಥಾಪಿಸಿದ ಡಾ. ಹರ್ಮನ್ ಮೋಗ್ಲಿಂಗ್ ಸಾಹಿತ್ಯ ಚರಿತ್ರೆಯಲ್ಲಿ ಚಿರಂತನವಾಗಿ ಉಳಿದಿದ್ದಾನೆ.

■

# ಕನ್ನಡ ಸಾಹಿತ್ಯಕ್ಕೆ ಪಾಶ್ಚಾತ್ಯರ ಕೊಡುಗೆ : ಜಾನ್‌ಹ್ಯಾಂಡ್ಸ್ ಮತ್ತು ಜಾನ್‌ರೀಡ್

ಹತ್ತೊಂಬತ್ತನೆಯ ಶತಮಾನದಲ್ಲಿ ಧರ್ಮಪ್ರಸಾರಕ್ಕಾಗಿ ಕರ್ನಾಟಕಕ್ಕೆ ಆಗಮಿಸಿದ ಕ್ರೈಸ್ತಮಿಷನರಿಗಳು ಕನ್ನಡಕ್ಕೆ ಬಹುಮುಖವಾದ ಸೇವೆಯನ್ನು ಸಲ್ಲಿಸಿದ್ದಾರೆ. ಧರ್ಮಪ್ರಸಾರಕಾರ್ಯಕ್ಕಾಗಿಯೇ ನಿಯೋಜಿತರಾಗಿ ಬಂದ ಈ ಕ್ರೈಸ್ತ ಮಿಷನರಿಗಳು ಈ ನಾಡಿನ ಭಾಷಾಸಂಪತ್ತನ್ನೂ ಸಾಹಿತ್ಯ, ಸಂಸ್ಕೃತಿಗಳನ್ನೂ ಕಂಡು ಅವಕ್ಕೆ ಮಾರುಹೋಗಿ ತಮ್ಮ ಜೀವಮಾನವನ್ನೆಲ್ಲ ಅವುಗಳ ಪುನರುಜ್ಜೀವನಕ್ಕಾಗಿಯೇ ಸವೆಸಿದ್ದಾರೆ. ಧರ್ಮಪ್ರಸಾರಕಾರ್ಯ ಸಮರ್ಪಕವಾಗಿ ನಡೆಯಬೇಕಾದರೆ ಆಯಾ ದೇಶಭಾಷೆಗಳನ್ನು ಕಲಿಯಬೇಕೆಂಬ ಗುಟ್ಟನ್ನು ಅರಿತಿದ್ದ ಈ ವಿದೇಶೀ ವಿದ್ವಾಂಸರು ಆ ಭಾಷೆಗಳನ್ನು ಕ್ರಮಬದ್ಧವಾಗಿ ಅಭ್ಯಾಸ ಮಾಡಿ ಆ ಭಾಷೆಗಳಲ್ಲಿ ಅಪರಿಮಿತವಾದ ಪಾಂಡಿತ್ಯವನ್ನು ಪಡೆದುಕೊಂಡಿದ್ದಾರೆ. ದೇಶೀಯ ಪಂಡಿತರ ನೆರವಿನಿಂದ, ತಮ್ಮ ನಿರಂತರ ಪರಿಶ್ರಮದಿಂದ ಆಯಾ ಭಾಷೆಗಳ ಸಾಹಿತ್ಯವನ್ನು ಸಂಪದ್ಭರಿತವನ್ನಾಗಿ ಮಾಡಿ ಚಿರಸ್ಮರಣೀಯರಾಗಿದ್ದಾರೆ. ಧರ್ಮಪ್ರಸಾರಕಾರ್ಯಕ್ಕೆ ಭಾಷಾಮಾಧ್ಯಮ ಅಗತ್ಯ ಅನಿವಾರ್ಯ ಎಂಬುದನ್ನು ಮನಗಂಡಿದ್ದ ಈ ಕ್ರೈಸ್ತಮಿಷನರಿಗಳು ದೇಶೀಯ ಭಾಷೆಗಳನ್ನು ಆಳವಾಗಿ ಅಭ್ಯಾಸ ಮಾಡಿ ಆ ಭಾಷೆಗಳಲ್ಲಿ ಪಾಂಡಿತ್ಯವನ್ನೂ ಪರಿಣತಿಯನ್ನೂ ಗಳಿಸಿಕೊಂಡು ಅನೇಕ ಕೃತಿಗಳನ್ನೂ ಬರೆದಿದ್ದಾರೆ. ಸಾಹಿತ್ಯ, ಸಂಸ್ಕೃತಿ, ಕಲೆ, ಶಾಸನ, ನಿಘಂಟು, ವ್ಯಾಕರಣ, ಛಂದಸ್ಸು ಇವೇ ಮೊದಲಾದ ಪ್ರಕಾರಗಳಲ್ಲಿ ವಿಶೇಷವಾಗಿ ದುಡಿದಿದ್ದಾರೆ. ಒಟ್ಟಿನಲ್ಲಿ ದಾಕ್ಷಿಣಾತ್ಯ ಭಾಷೆ ಸಾಹಿತ್ಯಗಳ ಅಭಿವೃದ್ಧಿಗಾಗಿ ಶಾಶ್ವತವಾಗಿ ನಿಲ್ಲುವಂತಹ ಕಾರ್ಯಗಳನ್ನು ಮಾಡಿದ್ದಾರೆ.

ಕರ್ನಾಟಕಕ್ಕೆ ಧರ್ಮಪ್ರಸಾರಕ್ಕೆ ಬಂದ ವಿದೇಶೀ ವಿದ್ವಾಂಸರಲ್ಲಿ ಡಾ. ಜಾನ್ ಹ್ಯಾಂಡ್ಸ್, ಜಾನ್‌ರೀಡ್, ವಿಲಿಯಂ ಕ್ಯಾರಿ, ಲೂಯಿಸ್‌ರೈಸ್, ಇ.ಪಿ. ರೈಸ್, ರೆ. ಎಫ್. ಕಿಟಲ್, ವಿಲಿಯಂ ರೀವ್, ಸ್ಯಾಂಡರ್‌ಸನ್, ಫ್ಲೀಟ್, ಗ್ಯಾರೆಟ್, ಬುಚರ್, ಝುಗ್ಲರ್, ಕಾಲ್ಡ್‌ವೆಲ್ ಇವರೇ ಮೊದಲಾದವರು ಪ್ರಮುಖರು.

ಧರ್ಮಪ್ರಸಾರವೇ ತಮ್ಮ ಪ್ರಮುಖೋದ್ದೇಶವಾಗಿದ್ದ ಈ ಕ್ರೈಸ್ತಮಿಷನರಿಗಳು ತಮ್ಮ ಧರ್ಮಗ್ರಂಥವಾದ ಬೈಬಲನ್ನೂ ಕ್ರಿಸ್ತನ ಸುವಾರ್ತೆಗಳನ್ನೂ ಆಯಾ ದೇಶೀಯ ಭಾಷೆಗಳಿಗೆ ಅನುವಾದ ಮಾಡಿದ್ದಾರೆ. ಇವುಗಳ ಪ್ರಸಾರಕಾರ್ಯಕ್ಕಾಗಿ ದೇಶೀಯ ಭಾಷೆಗಳಿಗೆ ನಿಘಂಟುಗಳನ್ನೂ, ವ್ಯಾಕರಣಗ್ರಂಥಗಳನ್ನೂ ಸಿದ್ಧಪಡಿಸಿದ್ದಾರೆ. ಇದರಿಂದ ಅವರ ಧರ್ಮಪ್ರಸಾರಕಾರ್ಯ ಸುಗಮವಾಯಿತು, ಸುಲಭವಾಯಿತು.

ಹೊಸಗನ್ನಡ ಸಾಹಿತ್ಯದ ಅರುಣೋದಯವಾದುದು ಈ ವಿದೇಶೀ ವಿದ್ವಾಂಸರಿಂದ ಎಂದು ಭಾವಿಸಬಹುದಾಗಿದೆ. ಮೂರುಘಟ್ಟಗಳಲ್ಲಿ ಈ ಅರುಣೋದಯ ಕಾಲವನ್ನು ಗುರುತಿಸಲಾಗಿದೆ. ಕ್ರಿ.ಶ.ಸು. ೧೮೧೦ ರಿಂದ ೧೮೫೦ರವರೆಗೆ ನಸುಕಿನ ಕಾಲವೆಂದೂ ೧೮೫೦ ರಿಂದ ೧೮೮೦ ರವರೆಗೆ ಮುಂಬೆಳಗಿನ ಕಾಲವೆಂದೂ ೧೮೮೧ ರಿಂದ ೧೯೨೫ ರವರೆಗೆ ಹೊಂಬೆಳಗಿನ ಕಾಲವೆಂದೂ ಪರಿಗಣಿಸಲಾಗಿದೆ. ಈ ಅರುಣೋದಯ ಕಾಲದ ಸಾಹಿತ್ಯವನ್ನು ಅನುಕರಣ, ಪರಿಷ್ಕರಣ, ಸ್ವತಂತ್ರನಿರ್ಮಾಣ ಎಂದೂ ವಿಭಜಿಸಲಾಗಿದೆ. ಈ ಅವಧಿಯಲ್ಲಿ ಕರ್ನಾಟಕಕ್ಕೆ ಬಂದ ಕ್ರೈಸ್ತ ಮಿಷನರಿಗಳು ಅಸಂಖ್ಯಾತ ಮಂದಿ. ಅವರಲ್ಲಿ ಆದ್ಯರೂ ಪ್ರಮುಖರೂ ಆದ ಜಾನ್‌ಹ್ಯಾಂಡ್ಸ್ ಮತ್ತು ಜಾನ್‌ರೀಡ್ ಅವರ ಕನ್ನಡ ಸಾಹಿತ್ಯದ ಕೊಡುಗೆಯನ್ನು ಸ್ಥೂಲವಾಗಿ ಪರಿಚಯಿಸಲು ಪ್ರಯತ್ನಿಸಲಾಗಿದೆ.

## ಡಾ. ಜಾನ್‌ಹ್ಯಾಂಡ್ಸ್

ಡಾ. ಜಾನ್‌ಹ್ಯಾಂಡ್ಸ್ ಲಂಡನ್ ಮಿಷನ್ ಸಂಸ್ಥೆಗೆ ಸೇರಿದವನು. ಈತನು ಬಳ್ಳಾರಿ ಮತಪ್ರಚಾರ ಕೇಂದ್ರದ ಮುಖ್ಯಸ್ಥನಾಗಿ ನೇಮಕಗೊಂಡು ೧೮೧೦ರಲ್ಲಿ ಬಳ್ಳಾರಿಯಲ್ಲಿ ಮಿಷನ್ ಕೇಂದ್ರವನ್ನು ಸ್ಥಾಪಿಸಿದನು. ಈತನು ದಕ್ಷ ಮತಪ್ರಚಾರಕನಷ್ಟೇ ಅಲ್ಲದೆ ವೈದ್ಯಕೀಯ ವಿದ್ಯೆಯಲ್ಲಿಯೂ ಪ್ರವೀಣನೆನಿಸಿಕೊಂಡಿದ್ದನು. ಸ್ವಮತ ಪ್ರಸಾರಕಾರ್ಯದಲ್ಲಿ ನಿರತನಾಗಿದ್ದನು. ಈತ ಬಳ್ಳಾರಿಗೆ ಬಂದ ಕೂಡಲೇ ಕನ್ನಡವನ್ನು ಕಲಿಯಲಾರಂಭಿಸಿದನು. ತಕ್ಕಮಟ್ಟಿಗೆ ಕನ್ನಡವನ್ನು ಕಲಿತ ಕೂಡಲೇ ಕನ್ನಡ ವ್ಯಾಕರಣ ನಿಘಂಟುಗಳನ್ನು ಸಿದ್ಧಪಡಿಸಿದನು. ಬೈಬಲ್ಲಿನ ಅನುವಾದವನ್ನೂ ಮಾಡಿ ಮುಗಿಸಿದನು. ಅಂತೆಯೇ ಕೆಲವು ಸುವಾರ್ತೆಗಳನ್ನೂ ಪ್ರಶ್ನೋತ್ತರ ರೂಪವಾದ ಮತಪುಸ್ತಕಗಳ ಅನುವಾದವನ್ನೂ ಪೂರೈಸಿದನು. ಮುದ್ರಣ ಸೌಲಭ್ಯವಿಲ್ಲದಿದ್ದ ಆ ಕಾಲದಲ್ಲಿ ಈ ಧರ್ಮಗ್ರಂಥಗಳನ್ನು ಜನತೆಗೆ ತಲುಪಿಸುವುದು ಕಷ್ಟಸಾಧ್ಯವಾಗಿತ್ತು. ಅದಕ್ಕಾಗಿ ಹ್ಯಾಂಡ್ಸ್ ಒಬ್ಬ ಶಾಲಾ ಉಪಾಧ್ಯಾಯರನ್ನು ಈ ಪ್ರತಿಮಾಡುವ ಕೆಲಸಕ್ಕಾಗಿ ನೇಮಿಸಿಕೊಂಡು ಆ ಗ್ರಂಥಗಳನ್ನು ಪ್ರತಿಮಾಡಿಸಿ ಜನತೆಗೆ ಹಂಚುತ್ತಿದ್ದನು. ಪ್ರಚಾರಾರ್ಥವಾಗಿ ಸಹಸ್ರಾರು ಪ್ರತಿಗಳು ಬೇಕಾದಾಗ ಈ ಕೃತಿಗಳ ಮುದ್ರಣಕ್ಕಾಗಿ ಒಂದು ಮುದ್ರಣಾಲಯವನ್ನು ಸ್ಥಾಪಿಸಲು ನೆರವನ್ನೂ ಅನುಮತಿಯನ್ನೂ ಈಸ್ಟ್ ಇಂಡಿಯಾ ಕಂಪನಿಯವರನ್ನು ಕೇಳಿಕೊಂಡನು. ಆದರೆ ಇದು ಸಾಧ್ಯವಾಗಲಿಲ್ಲ. ಆಗ ಹ್ಯಾಂಡ್ಸ್ ಕಲ್ಕತ್ತೆಯಲ್ಲಿದ್ದ ಬೈಬಲ್ ಸೊಸೈಟಿಯವರನ್ನು ಆರ್ಥಿಕ ನೆರವು ನೀಡುವಂತೆ ಪ್ರಾರ್ಥಿಸಿಕೊಂಡನು. ಆ ಸೊಸೈಟಿಯವರು ಹ್ಯಾಂಡ್ಸ್‌ನಿಗೆ ಒಂದು ಸಾವಿರ ರೂಪಾಯಿಗಳನ್ನು ನೀಡಿ ಮದರಾಸಿನಲ್ಲಿ ಆ ಗ್ರಂಥಗಳನ್ನು ಮುದ್ರಿಸಿಕೊಳ್ಳುವಂತೆ ಸೂಚಿಸಿದರು. ಆಗ ಮದರಾಸಿನಲ್ಲಿದ್ದ ಕಮರ್ಷಿಯಲ್ ಪ್ರೆಸ್‌ನಲ್ಲಿ ಹೊಸಒಡಂಬಡಿಕೆಯ ಪೂರ್ವಾರ್ಧವನ್ನು ೧೮೨೦ರಲ್ಲಿ ಹ್ಯಾಂಡ್ಸ್ ಮುದ್ರಿಸಿ ಹೊರತಂದನು. ಇದು ಕನ್ನಡ ಭಾಷೆ ಮತ್ತು ಲಿಪಿಯಲ್ಲಿರುವ ಪ್ರಥಮ ಮುದ್ರಿತಗ್ರಂಥವಾಯಿತು.

ಹ್ಯಾಂಡ್ಸ್‌ನ ಧರ್ಮಗ್ರಂಥಗಳ ಅನುವಾದ ಕಾರ್ಯ ನಿರಂತರವಾಗಿ ಮುಂದುವರಿಯಿತು. ಆತ ತನ್ನ ಸಂಗಡಿಗರೊಂದಿಗೆ "ನೆನಹುಗಳು", "ಏಸುಕ್ರಿಸ್ತನ ಅವತಾರ", "ಪರಿಶುದ್ಧಿಯ ಮಾರ್ಗವಿವರಣೆ" ಈ ಅನುವಾದ ಕೃತಿಗಳನ್ನು ಸಿದ್ಧಪಡಿಸಿದನು. ಬಳ್ಳಾರಿಯಲ್ಲಿ ಬೈಬಲ್ ಸಂಘವನ್ನು ಸ್ಥಾಪಿಸಿ ಪುಸ್ತಕಗಳ ಪ್ರಕಟನೆಗೆ ಮಾರ್ಗ ಕಂಡುಕೊಂಡನು. ಹೊಸಒಡಂಬಡಿಕೆಯ ಹಳೆಯ ಒಡಂಬಡಿಕೆ ಗ್ರಂಥಗಳನ್ನು ಅನುವಾದಿಸಿದ್ದೇ ಅಲ್ಲದೆ, ಕನ್ನಡದಲ್ಲಿ ಬೈಬಲನ್ನು ಸಮಗ್ರವಾಗಿ ಮೊದಲಬಾರಿಗೆ ಹೊರತಂದ ಕೀರ್ತಿಗೆ ಹ್ಯಾಂಡ್ಸ್ ಭಾಜನನಾದನು. ಲಂಡನ್ನಿನಿಂದ ಬಂದಿದ್ದ ಅನೇಕ ಮಿಷನರಿಗಳಿಗೆಲ್ಲ ಹ್ಯಾಂಡ್ಸ್‌ನೇ ಮುಖ್ಯಸ್ಥನಾಗಿದ್ದನು. ಈತನು ಅತ್ಯಂತ ನಿಷ್ಠಾವಂತ ಪ್ರಾಮಾಣಿಕ ಮತಪ್ರಸಾರಕನಾಗಿ ಸೇವೆ ಸಲ್ಲಿಸಿದ್ದಾನೆ. ಕರ್ನಾಟಕದಲ್ಲಿ ಈ ಕಾರ್ಯಕ್ಕೆ ಭದ್ರಬುನಾದಿಯನ್ನು ಹಾಕಿದವನು ಹ್ಯಾಂಡ್ಸ್. ಅಲ್ಲದೆ ಪ್ರಪ್ರಥಮವಾಗಿ ಕರ್ನಾಟಕದಲ್ಲಿ ಮುದ್ರಣವ್ಯವಸ್ಥೆ ಮಾಡಿದವನೂ ಈತನೇ ಎನ್ನುವುದು ಹೆಮ್ಮೆಯ ವಿಷಯವಾಗಿದೆ.

ಮೊದಲ ಪ್ರಾಟೆಸ್ಟೆಂಟ್ ಮಿಷನರಿಯಾದ ಹ್ಯಾಂಡ್ಸ್ ಬಳ್ಳಾರಿಗೆ ಬಂದ ಮಾರನೆಯ ವರ್ಷವೇ ಪ್ರಾಥಮಿಕ ಶಾಲೆಯೊಂದನ್ನು ಸ್ಥಾಪಿಸಿದನು. ಮಿಷನರಿಗಳು ಶಿಕ್ಷಣಕ್ಕೆ ಕೊಡುತ್ತಿದ್ದ ಮಹತ್ವಕ್ಕೆ ಇದು ನಿದರ್ಶನವಾಗಿದೆ. ಹ್ಯಾಂಡ್ಸ್‌ನಿಗೆ ಕನ್ನಡ ನಾಡು ನುಡಿಗಳ ಮೇಲೆ ಅಪಾರವಾದ ಅಭಿಮಾನವಿತ್ತು. ಆತನು ತನ್ನ ಇಲ್ಲಿನ ಕಾರ್ಯದಿಂದ ನಿವೃತ್ತನಾಗಿ ಲಂಡನ್ನಿಗೆ ಹಿಂತಿರುಗಿದ ಮೇಲೂ ಕರ್ನಾಟಕದ ಮೇಲಿನ ವ್ಯಾಮೋಹದಿಂದ ಮತ್ತೊಮ್ಮೆ ಇಲ್ಲಿಗೆ ಮತಪ್ರಚಾರಕನಾಗಿ ಬರಬೇಕೆಂಬ ಇಂಗಿತವನ್ನು ಅಲ್ಲಿಯ ವರಿಷ್ಠ ಮಂಡಲಿಗೆ ತಿಳಿಸಿದನು. ಅದರಂತೆ ವರಿಷ್ಠ ಮಂಡಲಿ ಮತ್ತೊಂದು ಕಾರ್ಯಕ್ಕೆ ಆತನನ್ನು ಕರ್ನಾಟಕಕ್ಕೆ ಕಳಿಸಿಕೊಟ್ಟರು. ಇಲ್ಲಿನ ಕಾರ್ಯವನ್ನು ಮುಗಿಸಿ ಸ್ವದೇಶಕ್ಕೆ ಹಿಂತಿರುಗಿದ ಹ್ಯಾಂಡ್ಸ್ ಸ್ವಲ್ಪ ಕಾಲಾನಂತರ ತೀರಿಕೊಂಡನು. ಹ್ಯಾಂಡ್ಸ್ ತನ್ನ ಕಾರ್ಯಶ್ರದ್ಧೆ, ಸಹನಗುಣ, ಮತಪ್ರಚಾರ ಕಾರ್ಯದಲ್ಲಿನ ನಿಷ್ಠೆ, ಕನ್ನಡ ಮುದ್ರಣ ಕಾರ್ಯಗಳಿಂದ ಚಿರಸ್ಥಾಯಿಯಾಗಿದ್ದಾನೆ.

## ಜಾನ್‌ರೀಡ್

ಡಾ. ಜಾನ್‌ಹ್ಯಾಂಡ್ಸ್‌ನ ತರುವಾಯ ಕರ್ನಾಟಕಕ್ಕೆ ಬಂದ ಕ್ರೈಸ್ತ ಮಿಷನರಿಗಳಲ್ಲಿ ಜಾನ್‌ರೀಡ್ ಪ್ರಮುಖನೆನಿಸಿದ್ದಾನೆ. ಅಸಾಧಾರಣ ಪ್ರತಿಭಾವಂತನಾದ ರೀಡ್ ಇಂಗ್ಲೆಂಡಿನಲ್ಲಿದ್ದಾಗಲೇ ಹ್ಯಾಂಡ್ಸ್‌ನ ಮುಖಾಂತರ ಕೇವಲ ಐದುವಾರಗಳಲ್ಲಿಯೇ

ಕನ್ನಡವನ್ನು ಕಲಿತಂತೆ ತಿಳಿದುಬರುತ್ತದೆ. ಧರ್ಮಪ್ರಸಾರಕ್ಕಾಗಿ ನಿಯೋಜಿತನಾಗಿ ಬಳ್ಳಾರಿಗೆ ಬಂದು ನೆಲೆನಿಂತ ರೀಡ್ ವ್ಯಾಕರಣ ಮತ್ತು ನಿಘಂಟಿನಲ್ಲಿ ಅಪಾರವಾದ ಆಸಕ್ತಿಯನ್ನು ಹೊಂದಿದ್ದನು. ಬೈಬಲನ್ನು ಆಳವಾಗಿ ಅಭ್ಯಾಸ ಮಾಡಿದ್ದ ರೀಡ್ ಅದರ ಪರಿಷ್ಕರಣ ಮತ್ತು ಅನುವಾದ ಕಾರ್ಯವನ್ನು ಅತ್ಯಂತ ನಿಷ್ಠೆಯಿಂದ ಮಾಡಿದ್ದಾನೆ. ಇದರಿಂದ ತನಗೆ ವಿಶೇಷವಾದ ನೆರವು ದೊರೆಯಿತೆಂದು ಹ್ಯಾಂಡ್ಸ್ ಮುಕ್ತಮನಸ್ಸಿನಿಂದ ರೀಡ್‌ನನ್ನು ಸ್ಮರಿಸಿದ್ದಾನೆ. ಧರ್ಮಗ್ರಂಥಗಳ ಅನುವಾದ ಕಾರ್ಯದಲ್ಲಿ ರೀಡ್ ಅತ್ಯಂತ ಶ್ರದ್ಧಾಸಕ್ತಿಗಳನ್ನು ಹೊಂದಿದ್ದನೆಂಬುದಕ್ಕೆ ನಿದರ್ಶನವಾದರೆ ಆತನು ಅನುವಾದ ಮಾಡಿದ ಬೈಬಲಿನ ಮೂಲಅರ್ಥವು ಸಮರ್ಪಕವಾಗಿ ಕನ್ನಡದಲ್ಲಿ ಬಂದಿದೆಯೇ ಇಲ್ಲವೇ ಎಂಬುದನ್ನು ಬಲ್ಲವರಿಗೆ ತೋರಿಸಿ ಆಮೇಲೆ ಮುದ್ರಣಕ್ಕೆ ಕೊಡುತ್ತಿದ್ದನು.

ರೀಡ್ ತ್ರಿಭಾಷಾ ಪಂಡಿತನಾಗಿದ್ದನು. "ಇಂಗ್ಲೀಷ್ ಭಾಷೆಯನ್ನು ಕಲಿಯುವುದಕ್ಕೆ ಸಹಾಯವು" ಎಂಬುದು ರೀಡ್‌ನ ವಿಶಿಷ್ಟ ಕೃತಿ. ಇದರಲ್ಲಿ ವಾಚನ, ವ್ಯಾಕರಣ, ಗಣಿತ, ಜ್ಯೋತಿಷ ಮತ್ತು ಭೂಗೋಲ ಮುಂತಾದ ವಿಷಯಗಳ ಮೇಲಿನ ನಾಲ್ಕುಪಾಠಗಳಿವೆ. ಕನ್ನಡಿಗರು ಕನ್ನಡ ವಿದ್ಯಾರ್ಥಿಗಳು ಇಂಗ್ಲೀಷ್ ಕಲಿಯುವುದಕ್ಕೆ ಸಹಾಯಕವಾಗಲೆಂದು ಈ ಕೃತಿ ಇದ್ದುದಾದರೆ ಇಂಗ್ಲೀಷ್ ಅಧಿಕಾರಿಗಳು ಇತರರು ಕನ್ನಡವನ್ನು ಕಲಿಯುವುದಕ್ಕೆ ನೆರವಾಗಲು ಹಲವು ಪುಸ್ತಕಗಳು ರಚಿತವಾಗಿವೆ. "ಇಂಗ್ಲೀಷ್ ಭಾಷೆಯನ್ನು ಕಲಿಯುವುದಕ್ಕೆ ಸಹಾಯವು" ಗ್ರಂಥವನ್ನು ರೀಡ್ ಕನ್ನಡ, ತೆಲುಗು ಎರಡು ಭಾಷೆಗಳಲ್ಲೂ ಬರೆದಿದ್ದಾನೆ. "ಇಂಗ್ಲೀಷ್ ದೊರೆಗಳ ಸಂಗಡ ಸಂಪರ್ಕವಿರುವವರಿಗೆ ತಮ್ಮ ಬುದ್ಧಿ ವೃದ್ಧಿಯಾಗುವುದಕ್ಕೋಸ್ಕರ ಇಂಗ್ಲೀಷ್ ವಿದ್ಯೆಗಳನ್ನೂ, ಶಾಸ್ತ್ರಗಳನ್ನೂ ಕಲಿಯುವುದಕ್ಕೆ ಇಚ್ಛೈಸುವವರಿಗೂ" ಬಹು ಪ್ರಯೋಜನವಾಗಿರುವುದೆಂಬ ಕಾರಣದಿಂದ ತಾನು ಈ ಪುಸ್ತಕವನ್ನು ರಚಿಸಿದುದಾಗಿ ಹೇಳಿಕೊಂಡಿದ್ದಾನೆ. ಮುಂಡಿ ಎಂಬ ಕ್ರೈಸ್ತಮಿಷನರಿಯ ಪ್ರಸಿದ್ಧ ಮತಪುಸ್ತಕ "ಎವಿಡೆನ್ಸ್ ಆಫ್ ದಿ ಕ್ರಿಶ್ಚಿಯನ್ ರೆವೆಲೇಷನ್" ಎಂಬುದನ್ನು ಕನ್ನಡ ತೆಲುಗು ಎರಡೂ ಭಾಷೆಗಳಿಗೆ ಅನುವಾದಿಸಿದ್ದಾನೆ. ರೀಡ್ ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಿಂದ ಕ್ರೈಸ್ತ ಮತಗ್ರಂಥಗಳನ್ನು ತೆಲುಗಿಗೂ, ತಮಿಳಿನಲ್ಲಿ ಬರೆದಿದ್ದ ಬೈಬಲನ್ನು ಕನ್ನಡಕ್ಕೂ ಭಾಷಾಂತರಿಸಿದ್ದಾನೆ. ಕ್ರೈಸ್ತರಿಗೆ ತಮ್ಮ ದೇವಮಂದಿರಗಳಲ್ಲಿ ಹಾಡಲು ಸೂಕ್ತವಾದ 'ಸಾಂಗ್ ಆಫ್ ಸಾಲೋಮನ್', 'ಮೈನರ್ ಪ್ರಾಫೆಟ್ಸ್' ಮೊದಲಾದ ಪ್ರಾರ್ಥನಾ ಗೀತಗಳನ್ನು ಬರೆದಿದ್ದಾನೆ, ಅನುವಾದ ಮಾಡಿದ್ದಾನೆ.

ಜಾನ್‌ರೀಡ್ ತನ್ನ ಜೀವಮಾನವನ್ನೆಲ್ಲ ವಿಶೇಷವಾಗಿ ಧರ್ಮಗ್ರಂಥಗಳ ಅನುವಾದ ಮುದ್ರಣ ಕಾರ್ಯಗಳಿಗೇ ಮೀಸಲಾಗಿರಿಸಿದ್ದನು. ಆತನು ರಚಿಸಿದ ಭೂಗೋಲ ವಿಷಯಕವಾದ ಪಠ್ಯಪುಸ್ತಕವೂ ಹಲವು ಮತಪುಸ್ತಕಗಳೂ ಹಸ್ತಪ್ರತಿಗಳಾಗಿಯೇ ಉಳಿದುಕೊಂಡಿದ್ದಂತೆ ತಿಳಿದುಬರುತ್ತದೆ. ರೀಡ್‌ಗೆ ತಾನು ಕೈಕೊಂಡಿದ್ದ ಅನುವಾದ ಪರಿಷ್ಕರಣದ ಮುದ್ರಣ ಕಾರ್ಯಗಳು ಅತ್ಯಂತ ಮಹತ್ವದವುಗಳೆನಿಸಿದ್ದು ಮತ್ತಾವ ಕಾರ್ಯಗಳಿಗೂ ಹೋಗಬಾರದೆಂಬ ನಿಲುವನ್ನು ತಾಳಿದ್ದಂತೆ ತಿಳಿದುಬರುತ್ತದೆ. ಸದಾ ಕಾರ್ಯಪ್ರವೃತ್ತನಾಗಿದ್ದ ರೀಡ್ ಅತಿಯಾದ ಶ್ರಮದಿಂದ ಬಳಲಿ ಕೇವಲ ಮೂವತ್ತೈದನೆಯ ವರ್ಷದಲ್ಲಿಯೇ ತೀರಿಕೊಂಡನು.

ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಧಾನವಾಗಿ ಧರ್ಮಪ್ರಸಾರಕ್ಕೆ ಕರ್ನಾಟಕಕ್ಕೆ ಆಗಮಿಸಿದ ಆದ್ಯ ಮತಪ್ರಸಾರಕನಾದ ಡಾ. ಜಾನ್ ಹ್ಯಾಂಡ್ಸ್ ಮತ್ತು ಜಾನ್ ರೀಡ್ ತಮ್ಮ ಅನುಪಮಸೇವೆಯಿಂದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಿರಂತನವಾಗಿ ಉಳಿಯತಕ್ಕವರಾಗಿದ್ದಾರೆ. ಕನ್ನಡಕ್ಕೆ ಅವರು ಸಲ್ಲಿಸಿದ ಸೇವೆ ಸಾರ್ಥಕವಾಗಿದೆ, ಶಾಶ್ವತವಾಗಿದೆ.

ಸ್ವಾತಿಯಾ ಮಳೆಬಿದ್ದು ಜಾತಿಯಾ ಮುತ್ತಾದಂತೆ ಯಾವುದೋ ನಾಡಿನಲ್ಲಿ ಹುಟ್ಟಿ ಮತ್ತಾವುದೋ ನಾಡಿಗೆ ಬಂದು ಆ ನಾಡಿನ ಭಾಷೆಯನ್ನು ಓನಾಮದಿಂದ ಕಲಿತು ಸಾಹಿತ್ಯವನ್ನೆಲ್ಲ ಕರಗತಮಾಡಿಕೊಂಡು ಪ್ರಾಚೀನ ಗ್ರಂಥಗಳನ್ನೂ ಶಾಸನಗಳನ್ನೂ ಶಾಸ್ತ್ರೀಯವಾಗಿ ಸಂಪಾದಿಸಿ ನಿತ್ಯೋಪಯೋಗಿಯಾದ ನಿಘಂಟುಗಳನ್ನು ಅಪಾರ ಪರಿಶ್ರಮದಿಂದ ಸಿದ್ಧಪಡಿಸಿ ಕಣ್ಮರೆಯಾದ ಕ್ರೈಸ್ತಮಿಷನರಿಗಳು ಪ್ರಾತಃಸ್ಮರಣೀಯರಾಗಿದ್ದಾರೆ. ಕನ್ನಡಕ್ಕಾಗಿಯೇ ಹುಟ್ಟಿ ಕನ್ನಡಕ್ಕಾಗಿಯೇ ದುಡಿದು ಕನ್ನಡಕ್ಕಾಗಿಯೇ ಮಡಿದ ಈ ವಿದೇಶೀ ವಿದ್ವಾಂಸರ ಜೀವನ ಸಾರ್ಥಕವಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಇವರ ಹೆಸರು ಅಜರಾಮರವಾಗಿ ಉಳಿಯುವಂತಹುದಾಗಿದೆ.

■

# ದೇವಚಂದ್ರ

**ಈ**ತನು ರಾಮಕಥಾವತಾರ, ರಾಜಾವಳೀ ಕಥೆ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಅಲ್ಲದೆ ರಾಜಾವಳೀ ಕಥೆಯಲ್ಲಿ "ಪೂಜ್ಯಪಾದ ಚರಿತೆ, ಸುಮೇರು ಶತಕ ಯಕ್ಷಗಾನ, ರಾಮಕಥಾವತಾರ, ಭಕ್ತಿಸಾರ ಶತಕತ್ರಯ, ಶಾಸ್ತ್ರಸಾರ ಲಘುವೃತ್ತಿ, ಪ್ರವಚನ ಸಿದ್ಧಾಂತ, ದ್ರವ್ಯಸಂಗ್ರಹ, ದ್ವಾದಶಾನುಪ್ರೇಕ್ಷೆ ಕಥೆ ಸಹಿತ, ಧ್ಯಾನಸಾಮ್ರಾಜ್ಯ, ಅಧ್ಯಾತ್ಮ ವಿಚಾರಾದಿಯಂ ಕರ್ಣಾಟಕ ಸಂಸ್ಕೃತ ಬಾಲನುಡಿಯಿಂ ವಿರಚಿಸಿದೆಂ" ಎಂದು ಹೇಳುವುದರಿಂದ ಈ ಗ್ರಂಥಗಳನ್ನು ಈತನು ಬರೆದಿರುವಂತೆ ತಿಳಿಯುತ್ತದೆ. ಇವುಗಳಲ್ಲಿ ಮೊದಲು ಹೇಳಿರುವ ನಾಲ್ಕು ಗ್ರಂಥಗಳೂ ಉಳಿದುವುಗಳಲ್ಲಿ ಒಂದೆರಡು ಕನ್ನಡದಲ್ಲಿರುವಂತೆ ತೋರುತ್ತದೆ. ಇವನು ಜೈನಕವಿ. ಇವನ ಸ್ಥಳ ಕನಕಗಿರಿ (ಮಲೆಯೂರು). ಈ ಊರಿನ ಪಾರ್ಶ್ವನಾಥನೇ ಇವನ ಕುಲದೈವ. ಈತನ ವಿಷಯವಾಗಿ ರಾಜಾವಳೀ ಕಥೆಯಿಂದ ಈಯಂಶಗಳು ತಿಳಿಯುತ್ತವೆ. ಈತನ ತಾತ ದೇವಚಂದ್ರ. ತಂದೆ ದೇವಯ್ಯ. ತಾಯಿ ಕುಸುಮಾಜಮ್ಮ. ಅಣ್ಣಂದಿರು ಚಂದಪಾರ್ಯ, ಪದ್ಮರಾಜರು. ಈ ಪದ್ಮರಾಜ ಅನೇಕ ಗ್ರಂಥಗಳನ್ನು ಬರೆದಿರುವಂತೆ ಹೇಳಿದೆ. ಈ ಕವಿ ೧೭೭೦ರಲ್ಲಿ ಹುಟ್ಟಿದನು. ೧೪ನೆಯ ವರ್ಷದಿಂದ ಕರಣಿಕಾಗ್ರಗಣ್ಯನೆನಿಸಿ ಕವನವನ್ನು ಮಾಡಲಾರಂಭಿಸಿದನು. ಅವನ ಪ್ರಥಮ ಗ್ರಂಥವಾದ ಪೂಜ್ಯಪಾದಚರಿತ್ರೆ ೧೭೯೨ರಲ್ಲಿ ರಚಿತವಾಯಿತು. ರಾಮಕಥಾವತಾರವನ್ನು ೧೭೯೭ರಲ್ಲಿ ಆರುತಿಂಗಳೊಳಗೆ ಮಾಡಿದನು. ೧೮೦೪ರಲ್ಲಿ ಸೀಮೆಪೈಮಾಸಿಯಂ ಮಾಡಲು ಮಕಂಜಿ ಸರದಾರಂ ಲಕ್ಷ್ಮಣರಾಯಂವೆರಸು ಕನಕಗಿರಿಗೆ ಬಂದು ಕವಿಯನ್ನು ಸ್ಥಳಪುರಾಣಮುಂಟೆ ಎಂದು ಕೇಳಲು ಆತನು ತಾನು ಮಾಡಿದ ಪೂಜ್ಯಪಾದ ಚರಿತೆಯನ್ನು ಓದಿ ಹೇಳಿದಾಗ ಅವನನ್ನು ಬಿಡದೆ ಕಮರಹಳ್ಳಿಯಲ್ಲಿ ಒಡ್ಡಿದ್ದ ಗೂಡಾರದ ಬಳಿಗೆ ಕರೆದುಕೊಂಡು ಹೋಗಿ ಪೂರ್ವದ ಕೆಲವು ಪ್ರಪಂಚಗಳನ್ನು ಮೂರುರಾತ್ರಿ ಚೆನ್ನಾಗಿ ಲಾಲಿಸಿ ಕಳಿಲೆ ಮಹಿಸೂರು, ಪಟ್ಟಣ ಇಲಿವಾಲ ನಾಗವಾಲದವರೆಗೆ ಎರಡು ತಿಂಗಳ ಪರ್ಯಂತ ಬಿಡದೆ ದಿನಒಂದಕ್ಕೆ ಗ್ರಾಸಕ್ಕೆ ಒಂದು ಹಣಮಂ ಕೊಡುತ್ತ ರಾತ್ರಿಕಾಲದೊಳು ಪೂರ್ವದ ಪ್ರಪಂಚಗಳು ಜಾತಿಭೇದಗಳು ಮೊದಲಾದ ವಿವರಗಳೆಲ್ಲಮಂ ಕೇಳುತ್ತ ರಾಜ್ಯಸೀಮೆಗಳನಳೆದು ವಿಂಗಡಿಸುತ್ತ ಗ್ರಾಮಾದಿ ಗ್ರಾಮಂಗಳಿಂ ನಕ್ಷೆಯಂ ಬರೆಯಿಸಿ ಜಾತಿಕೋಮುವಾರು ಕುಳ, ಮನೆ, ಜನ ಜೀವದನ ಮೊದಲಾದುವಂ ಜಮಾಬಂದಿ ಮುಂತಾದುವಂ ಬರೆಯಿಸಿಕೊಂಡು ಆತನನ್ನು ಬಿಡದೆ ಬರಿ ಗಾಳಿಗೊಯ್ಯಬೇಕೆಂದಿರಲು ಅವನು ಬಹುವಿಧವಾಗಿ ಹೇಳಿಕೊಂಡುದರಿಂದಲೂ ಅವನ ಧರ್ಮೋಪಾಧ್ಯಾಯರು ಬಂದುದರಿಂದಲೂ ಪೂಜ್ಯಪಾದ ಚರಿತೆಯನ್ನು ತೆಗೆದುಕೊಂಡು ಅವನು ಹೇಳಿದ ಪೂರ್ವದ ವೃತ್ತಾಂತಗಳಂ ಕಾಗದದ ವಹಿಯೊಳು ಬರೆಯಿಸಿಕೊಂಡು ಈ ಕರ್ಣಾಟ ದೇಶದೊಳು ನಡೆದ ಪ್ರಪಂಚಗಳನ್ನೆಲ್ಲ ಕ್ರೋಡೀಕರಿಸಿ ಬರೆದು ನಾವಿದ್ದಲ್ಲಿಗೆ ತೆಗೆದುಕೊಂಡು ತಿಂಗಳೊಳಗೆ ಬಂದರೆ ಭಾರಿ ಸಂಬಳವನ್ನು ಮಾಡಿಸಿಕೊಡುತ್ತೇವೆಂದು ಹೇಳಿ ಲಕ್ಷ್ಮಣರಾಯನ ಮೂಲಕ ೨೫ ಕುಂಪಣಿ ರೂಪಾಯಿಯನ್ನು ಕೊಡಿಸಿ ಅಪ್ಪಣೆ ಕೊಡಿಸಿ ಕಳುಹಿಸಿಕೊಟ್ಟನು. ಅಂದು ಮೊದಲಾಗಿ ಕವಿ ಈ ಕಥಾಸಂಗ್ರಹವನ್ನು ಮಾಡುತ್ತಿದ್ದು ಸರದಾರಂ ಬಹುದೂರಂ ಪೋದುದರಿಂದ ಒಪ್ಪಿಸುವುದಕ್ಕಿಲ್ಲವಾಯಿತು.

ಈ ರಾಜಾವಳೀ ಕಥೆಯನ್ನು ಮೈಸೂರು ದೊರೆ ಮುಮ್ಮಡಿ ಕೃಷ್ಣರಾಜ ಒಡೆಯರ ಆಶ್ರಿತನಾದ ವೈದ್ಯಸೂರಿ ಪಂಡಿತನ ಪ್ರೋತ್ಸಾಹದಿಂದ ವ್ಯೋಮತುರ್ಯಶೈಲ ಶಶಿಸಂಖ್ಯಾತವಾದ ಶಕವರ್ಷದಲ್ಲಿ (೧೭೬೦) ಎಂದರೆ ೧೮೩೮ರಲ್ಲಿ

ಬರೆದನು. ಇವನಿಂದ ರಚಿತವಾದ ಗ್ರಂಥಗಳನ್ನು ಅನುಷ್ಟುಪ್ ಛಂದದೊಳ್ ಗಣಿಸಿದರೆ ೨೫೦೦೦ ಗ್ರಂಥವಾಗುತ್ತದೆ. ರಾಜಾವಳಿ ಕಥೆಯನ್ನು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಒಪ್ಪಿಸಲು ಮೂರು ನಾಲ್ಕು ವರ್ಷದಿಂದ ಕೂಡಿಬರಲಿಲ್ಲ. ೧೮೪೧ರಲ್ಲಿ ಚಾಮರಾಜ ಮಹಿಷಿ ದೇವೀರಾಂಬೆ ಈ ರಾಜಾವಳೀ ಕಥೆಯ ಸಾರಮೆಲ್ಲಂ ಮೊದಲಿಂ ಕಡೆವರಂ ಚೆನ್ನಾಗಿ ಲಾಲಿಸಿ ಸಂತೋಷಿಸಿ ಕವಿಗೆ ಅತಿಶಯಮಾದ ವಸ್ತ್ರತಾಂಬೂಲಾದಿಗಳನ್ನಿತ್ತು ಮನ್ನಿಸಿ ಮಹೀಶೂರರಾಜರ ಪರಂಪರೆಯಂ ಸಂಗ್ರಹಿಸಿ ಬರೆದೊಪ್ಪಿಸುವುದೆಂದು ಆಜ್ಞಾಪಿಸಲು ಕವಿ ಹಾಗೆಯೇ ಬರೆದು ಒಪ್ಪಿಸಿದನು.

**ರಾಜಾವಳೀ ಕಥೆ**

ಇದು ಪ್ರಾಯಿಕವಾಗಿ ಗದ್ಯರೂಪದಲ್ಲಿದೆ: ಅಲ್ಲಲ್ಲಿ ಕೆಲವು ಶ್ಲೋಕಗಳೂ ಪದ್ಯಗಳೂ ದೊರೆಯುತ್ತವೆ. ಅಧಿಕಾರ ೧೧. ಇದರಲ್ಲಿ ಜೈನಮತಕ್ಕೆ ಸಂಬಂಧಿಸಿದ ಹಲವು ಇತಿಹಾಸಗಳೂ ಅನೇಕ ರಾಜರ ಚರಿತ್ರೆಗಳೂ ಕೆಲವರು ಕವಿಗಳ ವಿಷಯಗಳೂ ಹೇಳಿವೆ. ಹೀಗೆ ಅನೇಕ ವಿಷಯಗಳನ್ನು ಒಳಕೊಂಡಿರುವುದರಿಂದ ಈ ಗ್ರಂಥವು ಬಹಳ ಉಪಕಾರಕ ವಾಗಿದೆ. ಜೈನಕವಿಗಳ ಚರಿತ್ರವನ್ನು ಬರೆಯುವಾಗ ಕೆಲವು ಕಡೆ ಈ ಗ್ರಂಥದಿಂದ ನಮ್ಮ ಕವಿಚರಿತ್ರೆಯಲ್ಲಿ ಕೆಲವು ಅಂಶಗಳನ್ನು ಅನುವಾದ ಮಾಡಿದ್ದೇವೆ. ಮೈಸೂರು ರಾಜರ ವಂಶಾವಳಿಯೂ ಈ ಗ್ರಂಥದಲ್ಲಿ ಸಂಗ್ರಹವಾಗಿ ಹೇಳಿದೆ. ಈ ಗ್ರಂಥದ ಭಾಷೆಯ ವಿಷಯವಾಗಿ ಕವಿ ಹೀಗೆ ಬರೆದಿದ್ದಾನೆ.

ಹಳಗನ್ನಡ ಬೆಳುಗನ್ನಡ
ವೊಳುಗನ್ನಡ ಮಿಶ್ರಗನ್ನಡಂ ಕಬ್ಬದೊಳಂ
ತಿಳಿದೆಲ್ಲ ಮಿಶ್ರಮಾಗಿಯು
ಮಿಳೆಗರಿದಂದದೊಳೆ ಪೇಳ್ದೆಂ ರಾಜಾವಳಿಯಂ ॥

ಹಳಗನ್ನಡ ಬೆಳುಗನ್ನಡ
ವೊಳುಗನ್ನಡವಚ್ಚಗನ್ನಡಂ ಪೊಸತೆಂಬುದು
ತೆಳುಗನ್ನಡ ಮಿಶ್ರದಿನಿದ
ನಿಳೆಯೊಳ್ ಸತ್ಪುರುಷರೋದಿ ಕೇಳ್ವುದು ಸತತಂ ॥

**ರಾಮಕಥಾವತಾರ**

ಇದು ಚಂಪೂರೂಪವಾಗಿದೆ. ಆಶ್ವಾಸ ೧೬ ಗ್ರಂಥ ಸಂಖ್ಯೆ ೬೮೦೦. ಇದರಲ್ಲಿ ನಾಗಚಂದ್ರನ ರಾಮಚಂದ್ರ ಚರಿತ ಪುರಾಣದೊಳಗೆ ಹೇಳಿರುವ ಕಥೆಯೇ ಸ್ವಲ್ಪ ವಿಸ್ತಾರವಾಗಿ ವರ್ಣಿತವಾಗಿದೆ. ಈ ಗ್ರಂಥದಿಂದ ಅನೇಕ ಪದ್ಯಗಳೂ ಅನುವಾದ ಮಾಡಲ್ಪಟ್ಟಿವೆ.

**ಕನ್ನಡ ಸಾಹಿತ್ಯ ಚರಿತ್ರೆ : ರಂ.ಶ್ರೀ. ಮುಗಳಿ**

'ಚೂಡಾಮಣಿ' ಎಂಬ ಹೆಸರಿನ ತತ್ತ್ವಾರ್ಥ ಮಹಾಶಾಸ್ತ್ರ ವ್ಯಾಖ್ಯಾನರೂಪವಾದ (೬೬೦೦೦ ಗ್ರಂಥವುಳ್ಳದು ಇಲ್ಲಿ ಗ್ರಂಥ ಎಂದರೆ ೩೨ ಅಕ್ಷರಗಳ ಎಣಿಕೆಯುಳ್ಳ ಒಂದು ಮೊತ್ತ) ಗ್ರಂಥವು ದೊರೆಯುತ್ತಿರುವುದರಿಂದ ಕನ್ನಡ ಭಾಷೆ ಶಾಸ್ತ್ರಕ್ಕೆ ಅನುಪಯೋಗಿನಿ ಅಲ್ಲವೆಂದು ವ್ಯಾಕರಣಕಾರನಾದ ಭಟ್ಟಾಕಳಂಕ (೧೬೦೪) ಹೇಳಿದ್ದಾನೆ. ದೇವಚಂದ್ರನ ರಾಜಾವಳೀಕಥೆ (೧೮೩೮)ಯಲ್ಲಿ ೮೪೦೦೦ ಗ್ರಂಥಸಂಖ್ಯೆಯುಳ್ಳ ಚೂಡಾಮಣಿ ವ್ಯಾಖ್ಯಾನವನ್ನು ತುಂಬಲೂರಾಚಾರ್ಯನು ಕನ್ನಡದಲ್ಲಿ ಮಾಡಿದನೆಂದು ಹೇಳಿದೆ. (ಪು. ೨೫)

ಸಮಂತಭದ್ರನು ಬಯಲುಸೀಮೆಯ ಉಕ್ಕಲಿಯಲ್ಲಿ ಹುಟ್ಟಿ ಮನಗೂಳು (ಮಣುವಕಹಳ್ಳಿ)ಯಲ್ಲಿ ತಪಸ್ಸು ಮಾಡಿದನೆಂದು ೧೯ನೆಯ ಶತಮಾನದಲ್ಲಿ ಹುಟ್ಟಿದ ದೇವಚಂದ್ರನ 'ರಾಜಾವಳಿ ಕಥೆ'ಯಲ್ಲಿ ಹೇಳಿದೆ. ಪ್ರಭಾಚಂದ್ರನ

ಆರಾಧನಾ ಕಥಾಕೋಶದಲ್ಲಿ ಅವನು ಕಾಂಚೀ ನಿವಾಸಿಯೆಂದಿದೆ. ದೇವಚಂದ್ರನ ಆಧಾರಗಳು ಪ್ರಾಚೀನವೂ ನಂಬತಕ್ಕವೂ ಎಂದಾದರೆ ಮಾತ್ರ ಸಮಂತಭದ್ರನು ಖಂಡಿತವಾಗಿ ಕನ್ನಡಿಗನೆಂದು ಹೇಳಬಹುದು. (ಪು. ೨೭-೨೮)

ನಾಗಚಂದ್ರನ ಸಮಕಾಲೀನರಾದವರಲ್ಲಿ ಕಂತಿಯೆಂಬ ಕವಯತ್ರಿಯ ಹೆಸರು ಬರುತ್ತದೆ. ೧೬ನೆಯ ಶತಮಾನದ ಬಾಹುಬಲಿ ತನ್ನ ನಾಗಕುಮಾರ ಚರಿತೆಯಲ್ಲಿ ಅಭಿನವ ವಾಗ್ದೇವಿಯಾದ ಈ ಕಂತಿಯನ್ನು ನೆನೆದಿದ್ದಾನೆ. ದೇವಚಂದ್ರನು ತನ್ನ ರಾಜಾವಳೀ ಕಥೆಯಲ್ಲಿ (೧೮೩೮) ಇವಳ ಚರಿತ್ರೆಯನ್ನು ಹೇಳಿದ್ದಾನೆ. ಅದರಲ್ಲಿ ದೋರರಾಯನ ಆಸ್ಥಾನದ ಕನ್ನಡ ಸಂಸ್ಕೃತ ಮಹಾಕವಿಗಧಿಪಂ ಪಂಪಕವಿಯಂ ಕಳುಹಲ್ ಆತಂ ಬಂದು ವಿದ್ಯೆಯಿಂ ಸಾವಿರ ಪ್ರಶ್ನೆಯಂ ಕೇಳಲ್ ಉತ್ತರಮಂ ಕುಡಲ್ ಆಕೆಯಂ ರಾಜಸಭೆಗೆಯ್ದಿಸೆ ವಿದ್ವತ್ಸಮೂಹದೊಳ್ ಅಧಿಕಕವೀಶ್ವರಿಯಾದಳ್ ಎಂಬ ಕೆಲವು ಪದ್ಯಗಳು ದೊರೆತಿವೆ. ಇದನ್ನು ಸಮರ್ಥಿಸುವಂತೆ ಕಂತಿಹಂಪನ ಸಮಸ್ಯೆಗಳು ಎಂಬ ಕೆಲವು ಪದ್ಯಗಳು ದೊರೆತಿವೆ. ನಾಗಚಂದ್ರನು ತನ್ನ ಗ್ರಂಥಗಳಲ್ಲಿ ಇವಳ ವಿಷಯ ಹೇಳಿಲ್ಲ. ೧೬ನೆಯ ಶತಮಾನದವರೆಗೂ ಯಾರೂ ಹೇಳಿಲ್ಲ. ಬಾಹುಬಲಿ, ದೇವಚಂದ್ರ ಹಾಗೂ ಸಮಸ್ಯಾಪದ್ಯಗಳು ಇವು ಮೂರು ನಂಬಿಕೆಗೆ ಅನರ್ಹವಾದ ಕಾರಣ ಕಂತಿಯೆಂಬ ಕಬ್ಬಿಗಿತಿ ಇದ್ದಳೆಂಬುದಕ್ಕೆ ದೋಷರಹಿತವಾದ ಬೇರೆ ಆಧಾರವಿಲ್ಲದೆ ನಂಬುವುದಕ್ಕಾಗದು ಎಂದು ಶ್ರೀ ವೆಂಕಟಸುಬ್ಬಯ್ಯನವರು ಅಭಿಪ್ರಾಯಸಿದ್ದಾರೆ. (ಪು. ೧೨೨)

ದೇವಚಂದ್ರನು ಹೇಳುವಂತೆ ಅವನು ಭೈರಸ ಒಡೆಯರ ಸಭೆಯಲ್ಲಿ ಶೃಂಗಾರ ಕವಿಯಾಗಿ ಅರಸುಗುವರಿಯಲ್ಲಿ ನೇಹ ಮಾಡಿದ್ದು, ಯೋಗಬಲದಿಂದ ಅರಮನೆಯ ಅಟ್ಟವೇರಿದ್ದು, ಅರಸರು ಹಿಡಿಯುವ ಯತ್ನಮಾಡಲು ಓಡಿಹೋಗಿ ಅಣುವ್ರತದೀಕ್ಷೆ ಕೈಕೊಂಡಿದ್ದು, ಭರತೇಶವೈಭವ ಬರೆದು ಜೈನಶಾಸ್ತ್ರವಿರೋಧವಿರುವುದೆಂಬ ಕಾರಣದಿಂದ ಪುರಸ್ಕಾರ ಹೊಂದದೆ ಆತ್ಮಜ್ಞಾನಿಗೆ ಜಾತಿಕುಲ ಯಾವುದಾದೊಡಂ ಸಮವೆಂದು ಲಿಂಗಧಾರಣೆ ಮಾಡಿ ವೀರಶೈವಶಾಸ್ತ್ರ ಓದಿದ್ದು, ಮತ್ತೆ ಕೋಪ ಶಾಂತವಾದ ಮೇಲೆ ಜೈನಮತಕ್ಕೆ ಮರಳಿಬಂದದ್ದು. ಈ ಚರಿತ್ರೆಯಲ್ಲಿ ಸತ್ಯಾಂಶವಿದ್ದಂತೆ ಕಾಣುತ್ತದೆ. ವಿವರಗಳು ಏನೇ ಇರಲಿ, ಅವನು ಶೃಂಗಾರಪ್ರಿಯನೂ ಸ್ವತಂತ್ರಪ್ರಜ್ಞೆಯುಳ್ಳವನೂ ಆಗಿದ್ದನೆಂದೂ ಅವನ ಜೀವನವು ವಿಚಿತ್ರ ಘಟನೆಗಳಿಂದ ಕೂಡಿ ಅದ್ಭುತ ರಮ್ಯವಾಗಿತ್ತೆಂದೂ ತಿಳಿಯಲು ಆಸ್ಪದವಿದೆ. (ಪು. ೩೮೧-೩೮೨)

೧೮ನೆಯ ಶತಮಾನದ ಉತ್ತರಾರ್ಧ ಮತ್ತು ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ಮೈಸೂರು ದೊರೆಗಳ ಆಶ್ರಯದಲ್ಲಿದ್ದು ಇವನು ಚರಿತ್ರಕರ ಕವಿಯಾದನು. ಇವನ ರಾಮಕಥಾವತಾರ ಎಂಬ ಚಂಪೂಗ್ರಂಥವು ನಾಗಚಂದ್ರನ ರಾಮಚಂದ್ರ ಚರಿತ ಪುರಾಣದಲ್ಲಿ ಹೇಳಿರುವ ಜೈನರಾಮಾಯಣ ಕಥೆಯನ್ನು ವಿಸ್ತರಿಸಿ ಹೇಳಿದೆ. ರಾಜಾವಳೀ ಕಥೆ ಚಾರಿತ್ರಿಕ ದೃಷ್ಟಿಯಿಂದ ಹೆಚ್ಚು ಮಹತ್ವದ್ದಾಗಿದೆ. ಪ್ರಾಯಿಕವಾಗಿ ಗದ್ಯರೂಪದಲ್ಲಿದ್ದ ಇದರಲ್ಲಿ ಜೈನಮತಕ್ಕೆ ಸಂಬಂಧಿಸಿದ ಹಲವು ಇತಿಹಾಸಗಳೂ ರಾಜರ ಮತ್ತು ಕವಿಗಳ ಚರಿತ್ರೆ ಮುಂತಾದ ವಿಷಯಗಳೂ ಹೇಳಲಾಗಿದೆ. ಕಾಲ್ಪನಿಕ ಅಂಶಗಳಿಂದ ಮಿಶ್ರವಾಗಿರುವ ಕಾರಣ ಚಾರಿತ್ರಿಕಾಂಶಗಳನ್ನು ಇದರಿಂದ ಶೋಧಿಸಿ ತೆಗೆಯಬೇಕಾಗಿದೆ. (ಪು.೩೫೭)

(೧) ರಾಜಾರಳಿ ಕಥೆ, ರಾಜಾವಳೀ ಕಥಾಸಾರ, ರಾಜಾವಳೀ ಕಥಾವತಾರ : ಗ್ರಂಥದಲ್ಲಿ ಕೆಲವು ಕಡೆ 'ರಾಜಾವಳೀ ಕಥೆ' ಎಂದು ಬಳಸಿದ್ದಾನೆ. ಆಶ್ವಾಸಗಳ ಅಂತ್ಯದಲ್ಲಿ ರಾಜಾವಳೀ ಕಥಾಸಾರ ಎಂಬ ಹೆಸರನ್ನೇ ಬಳಸಿದ್ದಾನೆ. ಆದ್ದರಿಂದ ಇದೇ ಹೆಸರನ್ನೇ ಕೊಡಲಾಗಿದೆ.

(೨) ರಾಜಾವಳಿ ಕಥೆಗೆ ಯಾವ ಆಕರವನ್ನು ಹೇಳಿಲ್ಲ. ಆದರೆ ಅನೇಕ ಸಂಸ್ಕೃತ ಪ್ರಾಕೃತ ಕನ್ನಡ ಗ್ರಂಥಗಳ ನೆರವನ್ನು ಪಡೆದಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಅಲ್ಲದೆ ಐತಿಹಾಸಿಕ ಕೃತಿಗಳನ್ನು, ಸ್ಥಳಪುರಾಣಗಳನ್ನು ಜಾನಪದ ಕಥೆಗಳನ್ನೂ ಬಳಸಿಕೊಳ್ಳಲಾಗಿದೆ.

(೩) ಬಿಜ್ಜಳನಲ್ಲಿ ಕೋಶಾಧಿಕಾರಿಯಾಗಿದ್ದ ಬಸವಣ್ಣ ಅವನ ಭಂಡಾರವನ್ನೆಲ್ಲಾ ಬರಿದು ಮಾಡಿದನೆಂದೂ ಬಿಜ್ಜಳ ಬಸವಣ್ಣನನ್ನು ಶಿಕ್ಷೆಗೆ ಒಳಪಡಿಸಿದಾಗ ಭಂಡಾರದ ಹಣವನ್ನು ತುಂಬಿಕೊಡುವುದಾಗಿ ಹೇಳಿದಾಗ ಅಲ್ಲಿರುವವರೆಗೆ

ಒಂದು ದೊಡ್ಡ ಕಲ್ಲುಬಂಡೆಯನ್ನು ಹೊತ್ತುಕೊಂಡಿರುವಂತೆ ಆದೇಶಿಸಿದಾಗ ಬಸವಣ್ಣನ ಭಕ್ತರು ಬಂದು ಅದನ್ನು ಹೊತ್ತುಕೊಂಡಿದ್ದನು.

(೪) ಪಾರ್ಶ್ವಭಟ್ಟಾರಕ ಗಣಧರಸ್ವಾಮಿಗಳಿಗೆ ಗಣಾಧರನಾಗಲು ಬಯಸಿದಾಗ ಅದು ಈಡೇರದಿರಲು ಕೋಪಗೊಂಡು, ತನ್ನ ೫೦೦ ಶಿಷ್ಯರೊಂದಿಗೆ ನವೀನಮತವನ್ನು ಸ್ಥಾಪಿಸಲು ಮುಂದಾಗಿ ವಿದ್ಯಾಬಲದಿಂದ ಪೈಗಂಬರ ಮಹಮದರನ್ನು ವಶಮಾಡಿಕೊಂಡು ಮತಸ್ಥಾಪನೆ ಮಾಡಿದ. ಈತನ ಶಿಷ್ಯ ಮಲ್ಲಿಭಟ್ಟ ಮುಲ್ಲಾಶಾಸ್ತ್ರವನ್ನು ರಚಿಸಿದ.

(೫) ಜೈನರಿಗೆ ವೈಷ್ಣವರು ವರ್ಷಕ್ಕೆ ಇಂತಿಷ್ಟು ಹಣ ಕೊಡಬೇಕೆಂದು ಬೆಳುಗುಳದ ಭಂಡಾರಿಯ ಬಸದಿಯ ಬಲಗಡೆ ಸ್ಥಾಪಿತವಾಗಿರುವ ಶಾಸನದಲ್ಲಿದೆ.

ಇದರಲ್ಲಿ ೧೧ ಅಧಿಕಾರಗಳಿವೆ ಎಂದು ಕವಿಚರಿತಕಾರರು ಹೇಳಿದ್ದಾರೆ. ದೇವಚಂದ್ರನು "ಮೊದಲಿಂ ಕಡೆವರಂ ಹನ್ನೊಂದು ಅಧ್ಯಾಯಮುಳ್ಳ ಈ ರಾಜಾವಳಿ ಕಥೆಯಂ ಚೆನ್ನಾಗಿ ಪರಾಂಬರಿಸಿ ಯದುಕುಲಾಗ್ರಗಣ್ಯರಪ್ಪ ಈ ಮಹಿಸೂರ ರಾಜಪರಮೇಶ್ವರಾದಿಗಳ ಪರಂಪರೆಯಂ ಆಮೂಲಾಗ್ರವಾಗಿ ಎಡೆಬಿಡದೆ ಸಹಜವಾಗಿ ಬರೆದು ಒಪ್ಪಿಸುವುದೆಂದು ನಿರೂಪಮಾದುದರಿಂ ಈ ಹನ್ನೆರಡು ಅಧಿಕಾರದೊಳು ಈ ಮಹಿಶೂರ ಮಹಾರಾಜಾಧಿರಾಜರುಗಳ ವಂಶಾವಳಿ ಗುಣಾವಳಿ ಬಿರುದಾವಳಿಗಳ ಯಥಾಸ್ಥಿತಿಯಾಗಿ ಬರೆದೊಪ್ಪಿಸಿದೆನು" ಎಂದಿದ್ದಾರೆ. ಮೊದಲು ೧೧ ಅಧಿಕಾರಗಳನ್ನು ರಚಿಸಿದವನು ರಾಣಿಯ ಅಪ್ಪಣೆಯಂತೆ ಹನ್ನೆರಡನೆಯದನ್ನು ಬರೆದನು. ಆದರೆ ೧೩ನೆಯ ಅಧಿಕಾರದ ರಚನೆಗೆ ಯಾವ ಕಾರಣವನ್ನೂ ಕೊಡುವುದಿಲ್ಲ. ಆದರೆ ರಾಜಾವಳಿ ಕಥಾಸಾರದಲ್ಲಿರುವ ಕೆಲವು ಅಂಶಗಳನ್ನು ಒಟ್ಟುಗೂಡಿಸಿ ಜಾತಿನಿರ್ಣಯವೆಂಬ ಈ ಅಧಿಕಾರವನ್ನು ಈ ಅಧಿಕಾರದ ಮೊದಲಲ್ಲಿ ಹೇಳಿಕೊಂಡಿದ್ದಾನೆ.



# ವೀರಶೈವ ಪ್ರಾಚೀನ ಕಥಾಸಂಗ್ರಹ ಸಾಹಿತ್ಯ

**ಕ**ಥಾಸಂಗ್ರಹ ಸಾಹಿತ್ಯ ಪ್ರಾಚೀನ ಕಾಲದಿಂದಲೂ ನಮ್ಮ ದೇಶದಲ್ಲಿ ಕಂಡುಬರುತ್ತದೆ. ಇದು ಎಲ್ಲ ಧರ್ಮಗಳಲ್ಲೂ ಎಲ್ಲ ಕಾಲದಲ್ಲೂ ಎಲ್ಲ ದೇಶಗಳಲ್ಲೂ ಹಾಸುಹೊಕ್ಕಾಗಿ ಹೆಣೆದುಕೊಂಡಿದೆ. ಈ ಕಥಾಸಂಗ್ರಹ ಸಾಹಿತ್ಯದ ಉದ್ದೇಶ ವಿವಿಧ ರೂಪದ್ದಾಗಿದೆ. ಅನ್ಯಮತವಿಡಂಬನೆಯನ್ನು ಸಮರ್ಥವಾಗಿ ಈ ಮಾಧ್ಯಮದ ಮೂಲಕ ಮಾಡಿರುವುದನ್ನು ನಾವು ಕಾಣುತ್ತೇವೆ. ಇದರ ಬಹುಮುಖ್ಯವಾದ ಉದ್ದೇಶ ಧರ್ಮಪ್ರತಿಪಾದನೆ. ದೈವಸಾಕ್ಷಾತ್ಕಾರಕ್ಕಾಗಿ ಜೀವ ಅನುಭವಿಸುವ ಹಲವಾರು ಅವಸ್ಥೆಗಳನ್ನು ಕಥೆಗಳ ಮೂಲಕ ಪರಿಣಾಮಕಾರಿಯಾಗಿ ನಿರೂಪಿಸಲಾಗಿದೆ. ಈ ದೃಷ್ಟಿಯಿಂದ ಪ್ರಾಚೀನ ಕಥಾಸಂಗ್ರಹ ಸಾಹಿತ್ಯವೆಂಬ ಪ್ರಕಾರ ಪ್ರಮುಖವಾದುದು.

ಪ್ರಸ್ತುತ ಕನ್ನಡ ಸಾಹಿತ್ಯಕ್ಕೆ ಮಾತ್ರ ಸೀಮಿತಗೊಳಿಸಿ, ಈ ವೀರಶೈವ ಸಾಹಿತ್ಯ ಕಥಾಸಂಗ್ರಹ ಸಾಹಿತ್ಯ ಬೆಳೆದುಬಂದಿರುವ ವಿಧಾನವನ್ನು ಇಲ್ಲಿ ನಿರೂಪಿಸಲು ಪ್ರಯತ್ನಿಸಲಾಗಿದೆ. ಈ ಪ್ರಯತ್ನ ಸಮಗ್ರವಾದುದೆಂದಾಗಲೀ, ಪರಿಪೂರ್ಣವಾದುದೆಂದಾಗಲೀ ಭಾವಿಸುವುದಕ್ಕೆ ಎಡೆಯಿಲ್ಲ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವೀರಶೈವ ಕಥಾಸಂಗ್ರಹ ಸಾಹಿತ್ಯ ಕಂಡುಬರುವುದು ಹರಿಹರನಿಂದಲೇ ಎಂದು ಹೇಳಬಹುದು. ಹರಿಹರನಿಗಿಂತ ಹಿಂದೆ ಕರ್ನಾಟಕದಲ್ಲಿ ನಡೆದ ವಚನಸಾಹಿತ್ಯ ಕ್ರಾಂತಿ ಒಂದು ರೀತಿಯಲ್ಲಿ ಹರಿಹರನಿಗೆ ಪ್ರೇರಣೆಯನ್ನು ನೀಡಿತು. ಜಗಜ್ಯೋತಿ ಬಸವೇಶ್ವರರ ನೇತೃತ್ವದಲ್ಲಿ ಕಲ್ಯಾಣದಲ್ಲಿ ಕಂಗೊಳಿಸಿದ ಅಸಂಖ್ಯಾತ ಶಿವಶರಣರು ಭಕ್ತಿಯ ಮೂಲಕ ಮುಕ್ತಿಯನ್ನೂ ಕಂಡುಕೊಂಡರು. ವಚನಗಳನ್ನು ರಚಿಸಿ ಅಮರರಾದರು. ಈ ವಚನಕಾರರಲ್ಲಿ ಅನೇಕರನ್ನು ಕುರಿತ ಕಥಾಸಾಹಿತ್ಯ ಉತ್ತರೋತ್ತರ ರಚಿತವಾಯಿತು.

ವೀರಶೈವ ಪ್ರಾಚೀನ ಕಥಾಸಂಗ್ರಹವನ್ನು ಎರಡು ದೃಷ್ಟಿಯಿಂದ ವಿಭಜಿಸ ಬಹುದಾಗಿದೆ. ಪ್ರತಿಯೊಬ್ಬ ಶರಣನ ಕಥೆಯನ್ನೂ ಪ್ರತ್ಯೇಕವಾಗಿ ಸ್ವತಂತ್ರ ಕೃತಿಯಾಗಿ ರಚಿತವಾದುದು ಮೊದಲನೆಯ ತೆರ. ಮೂಲಕಾವ್ಯದಲ್ಲಿ ಮುಖ್ಯಕಥೆಗೆ ಪರಿಪೋಷಕವಾಗಿ ಶರಣರ ಕಥೆಗಳನ್ನು ಇಡಿಯಾಗಿಯೋ ಬಿಡಿಯಾಗಿಯೋ ನಿರೂಪಿಸಿರುವುದು ಮತ್ತೊಂದು ತೆರ. ಶರಣರ ಕಥೆಗಳನ್ನು ಸ್ವತಂತ್ರವಾಗಿ ರಚಿಸಿದವರು ಕೆಲವರಾದರೆ, ಬಿಡಿಬಿಡಿಯಾಗಿ ನಿರೂಪಿಸಿದವರು ಹಲವಾರು ಮಂದಿ. ಎಲ್ಲ ವೀರಶೈವ ಕಾವ್ಯ ಪುರಾಣಗಳಲ್ಲಿಯೂ ಸರ್ವೇಸಾಮಾನ್ಯವಾಗಿ ಶಿವಶರಣರ ಕಥೆಗಳು ಒಂದಲ್ಲ ಒಂದು ದೃಷ್ಟಿಯಿಂದ ಹೆಣೆದುಕೊಂಡೇ ಇರುತ್ತವೆ. ಇವೆಲ್ಲವನ್ನೂ ಸಮಗ್ರವಾಗಿ ಪಟ್ಟಿಮಾಡಿ ತೋರಿಸುವುದು ಸದ್ಯದಲ್ಲಿ ದುಸ್ತರವಾದರೂ ಈ ಕಥಾಸಂಗ್ರಹ ನಿರಂತರವಾಗಿ ಪ್ರಾಚೀನ ವೀರಶೈವ ಸಾಹಿತ್ಯದಲ್ಲಿ ಕಂಡುಬರುತ್ತದೆ ಎಂಬುದನ್ನು ಲಕ್ಷ್ಯದಲ್ಲಿಟ್ಟುಕೊಳ್ಳುವುದು ಅನಿವಾರ್ಯ.

ಕನ್ನಡ ಸಾಹಿತ್ಯದ ಕ್ರಾಂತಿಕಾರಕ ಕವಿ ಎನಿಸಿಕೊಂಡಿರುವ ಹರಿಹರ ರಗಳೆ ಎಂಬ ಛಂದಃಪ್ರಕಾರದಲ್ಲಿ ಅಸಂಖ್ಯಾತ ರಗಳೆಗಳನ್ನು ಬರೆದಿದ್ದಾನೆ. ಇವೆಲ್ಲ ಒಬ್ಬೊಬ್ಬ ಶಿವಶರಣನ ಸಾಧನೆ ಸಿದ್ಧಿಗಳನ್ನು ನಿರೂಪಿಸುವಂತಹವು. ತಮಿಳುನಾಡಿನ ಅರುವತ್ತು ಮೂವರು ಪುರಾತನರನ್ನು ಕುರಿತ ರಗಳೆಗಳನ್ನೂ ಬರೆದಿರುವುದಷ್ಟೇ ಅಲ್ಲದೆ, ಕರ್ನಾಟಕದ ವಚನಕಾರರನ್ನೂ ಶಿವಶರಣರನ್ನೂ ಕಥಾವಸ್ತುವನ್ನಾಗಿಸಿಕೊಂಡು ರಗಳೆಗಳನ್ನು ಬರೆದಿದ್ದಾನೆ. ಹರಿಹರನು ಬರೆದಿರುವ ರಗಳೆಗಳ ಸಂಖ್ಯೆ

ಎಷ್ಟೆಂಬುದು ನಿರ್ಧರವಾಗದಿದ್ದರೂ ಆತನು ಅನೇಕ ಶಿವಶರಣರನ್ನು ಕುರಿತು ರಗಳೆಗಳನ್ನು ಬರೆದಿರುವುದು ನಿರ್ವಿವಾದ ವಾದುದು. ವೀರಶೈವ ಪ್ರಾಚೀನ ಕಥಾಸಂಗ್ರಹ ಮಾಲಿಕೆಗೆ ಹರಿಹರನೇ ಆದ್ಯಪ್ರವರ್ತಕನೆನ್ನಬಹುದು. ಈತನ ತರುವಾಯ ಬಂದ ಅನೇಕರು ಈ ಸಾಹಿತ್ಯ ಪ್ರಕಾರವನ್ನು ಬೆಳೆಸಿಕೊಂಡು ಹೋಗಿದ್ದಾರೆ.

ಹರಿಹರನ ಸೋದರಳಿಯನ್ನೂ ಶಿಷ್ಯೋತ್ತಮನೂ ಆದ ರಾಘವಾಂಕನ ಸಿದ್ಧರಾಮ ಚಾರಿತ್ರ, ಸೋಮನಾಥ ಚಾರಿತ್ರಗಳಲ್ಲಿ ಕೆಲವು ಶಿವಶರಣರ ಕಥೆಗಳು ಸಾಂದರ್ಭಿಕವಾಗಿ ಎಡೆಪಡೆದುಕೊಂಡಿವೆ.

ರಾಘವಾಂಕನಾದ ಮೇಲೆ ಬಂದ ಭೀಮಕವಿ ಭಾಮಿನೀ ಷಟ್ಪದಿಯಲ್ಲಿ ಬಸವಪುರಾಣವನ್ನು ರಚಿಸಿದ್ದಾನೆ. ಇದು ಪಾಲ್ಕುರಿಕೆ ಸೋಮನಾಥನ ತೆಲುಗುಬಸವಪುರಾಣದ ಕನ್ನಡ ಅನುವಾದವಾದರೂ ಹಲವಾರು ದೃಷ್ಟಿಯಿಂದ ಪ್ರಮುಖವಾದುದು. ಇದರಲ್ಲಿ ಶೈವ ಮತ್ತು ವೀರಶೈವ ಶರಣರು ಮಹೋನ್ನತ ಉದ್ದೇಶಗಳಿಗಾಗಿ ಬಾಳಿಬದುಕಿದುದರ ನಿದರ್ಶನಗಳನ್ನು ಕಾಣುತ್ತೇವೆ. ಈ ಪುರಾಣದಲ್ಲಿ ಬರುವ ಪ್ರತಿಯೊಂದು ಕಥೆಯೂ ನ್ಯಾಯ ನೀತಿ ಧರ್ಮ ಅಹಿಂಸೆಗಳ ಪ್ರತಿಪಾದನೆಯನ್ನು ಮಾಡಿ ಉನ್ನತ ಆದರ್ಶಗಳನ್ನು ಬೋಧಿಸುತ್ತದೆ. ಈ ದೃಷ್ಟಿಯಿಂದ ಬಸವಪುರಾಣವನ್ನು ಶರಣರ ಜೀವನ ಚರಿತ್ರೆಯ ತವನಿಧಿ ಎಂದು ಹೇಳಬಹುದು. ಶರಣರ ಸಂಸ್ಕೃತಿ ವಿಚಾರ ಸ್ವಾತಂತ್ರ್ಯ ಈ ಶರಣ ಧರ್ಮದ ಹಿರಿಮೆ ಗರಿಮೆ ಮಹಿಮೆಗಳನ್ನು ಅರಿತುಕೊಳ್ಳುವುದಕ್ಕೆ ಬಸವಪುರಾಣ ಒಂದು ಮೇಲ್ಪಂಕ್ತಿಯಾಗಿದೆ.

ಈ ಕಾವ್ಯಕ್ಕೆ ಬಸವಪುರಾಣವೆಂಬ ಹೆಸರಿದ್ದರೂ, ವಾಸ್ತವವಾಗಿ ಇದು ಒಂದು ವೀರಶೈವ ಪುರಾಣ. ಅನೇಕ ವೀರಶೈವ ಪ್ರಮುಖರ ಉಲ್ಲೇಖಗಳು ಸಮಯೋಚಿತವಾಗಿ ಮೂಡಿಬಂದಿವೆ. ಶರಣ-ಶರಣೆಯರಿಗೆ ಸಂಬಂಧಿಸಿದ ಎಲ್ಲ ಮಾಹಿತಿಗಳೂ ಇದರಲ್ಲಿ ನಿರೂಪಿತವಾಗಿವೆ. ಭೀಮಕವಿಯೇ ಈ ಮುಂದಿನ ಪದ್ಯಗಳಲ್ಲಿ ಎಲ್ಲ ಅಂಶಗಳನ್ನೂ ಸ್ಪಷ್ಟಪಡಿಸಿದ್ದಾನೆ:

ನೂತನ ಪುರಾತನ ಶಿವಗಳ
ಪ್ರೀತಿಗಳು ಶಿವಧರ್ಮವರ್ಮವಿ
ನೀತಿಗಳು ಶಿವತತ್ವವೇತ್ತರ ವಿಧಿಗಳು ಜ್ಞಾನ
ಜ್ಯೋತಿಗಳು ಸಕಳಾಗಮೋಕ್ತವಿ
ಭೂತಿಗಳು ನಾನಾ ಭುವನದಿ
ಖ್ಯಾತಿಗಳು..............
ಓತುಮಾಡುವ ಲಿಂಗವಂತರ
ಭಾತಿಗಳ ಶಿವಭಕ್ತಿಬೀಜಕೆ
ಪಾತ್ರಗಳು ಪರಮಾರ್ಥ ನಿಜಪ್ರಯೋಗಪ್ರಸೂತಿಗಳು
ಆದಿಲಿಂಗ ರಹಸ್ಯ ಸಿದ್ಧಾಂ
ತಾದಿ ವೇದ ಪುರಾಣ ಸಮ್ಮತ
ವಾದ ಬಸವ ಪುರಾತನರ ಗೀತಾರ್ಥಮಾತೃಕದೆ
ಕೋದ ಮಣಿಗಣಸೂತ್ರದಂತಿರೆ
ಆದಿಗಣ ಚರಿತಂಗಳೊಳು ಸಂ
ವೇದಿಸಲು ಬಸವನ ಚರಿತೆಯಂ ಬಣ್ಣಿಸುವೆನೊಸೆದು (೧-೨೩)

ವೀರಶೈವ ಕವಿಗಳು ಮಹಾಭಾರತ ಇಲ್ಲವೆ ರಾಮಾಯಣ ಕಥೆಗಳನ್ನೂ ಹೇಳುವ ಗೊಡವೆಗೆ ಹೋಗದೆ ಶಿವಶರಣರ ಚರಿತ್ರೆಗಳಲ್ಲೇ ಕಂಡುಬರುವ ಹೋರಾಟದ ಬದುಕನ್ನೇ ಬೇರೊಂದು ರೀತಿಯ ಮಹಾಭಾರತವೆಂದು ಹೇಳಿ ವಿರಚಿಸಿದ್ದಾನೆ. ಉದಾಹರಣೆಗೆ ಬಸವಪುರಾಣದ ಈ ಕೆಳಗಿನ ಪದ್ಯವನ್ನು ಅವಲೋಕಿಸಬಹುದು:

ಆದಿರುದ್ರಗಣಾದಿಪರ್ವಂ
ವಾದಿಗಳು ಹೃಚ್ಛಲ್ಯಪರ್ವಂ

ಮೋದಭಕ್ತಿಗೆ ಬಸವ ಸಿಂಹಾಸನ ಸಭಾಪರ್ವ
ವೇದವಿದರುದ್ಯೋಗಪರ್ವಂ
ವೇದಿಸುವರಿಗೆ ಶಾಂತಿಪರ್ವಂ
ಮೇದಿನಿಯೊಳಖಿಳಾಗಮಜ್ಞರ ಕರ್ಣಪರ್ವವಿದು (೧-೫-೨)

ಬಸವಪುರಾಣ ವೀರಶೈವ ಪ್ರಾಚೀನ ಕಥಾಸಂಗ್ರಹಕ್ಕೆ ಒಂದು ಪ್ರಮುಖ ಆಕರವಾಗಿದೆ.

ಲಕ್ಕಣದಂಡೇಶನ ಶಿವತತ್ತ್ವಚಿಂತಾಮಣಿ ಶಿವಶರಣರ ಕಥಾರ್ಣವವೆನಿಸಿಕೊಂಡಿದೆ. ಇದರಲ್ಲಿ ನೂರಾರು ಶಿವಶರಣರ ಚರಿತ್ರೆಗಳು ಬಿತ್ತರಗೊಂಡಿವೆ. ಲಕ್ಕಣದಂಡೇಶ ತನಗಿಂತಲೂ ಮೊದಲು ಯಾವ ಕನ್ನಡ ವೀರಶೈವ ಕವಿಯೂ ತಿಳಿಸದ ಕನ್ನಡ ಪ್ರಪಂಚಕ್ಕೇ ನೂತನ ವಿಷಯಗಳಾದ ಭುವನಕೋಶ, ನೂತನ ಗಣಂಗಳ ಚರಿತ್ರೆ, ಶಿವಾದ್ವೈತ ಸಿದ್ಧಾಂತ -ಇವೇ ಮೊದಲಾದ ಸಂಗತಿಗಳನ್ನೂ ಹೇಳಿದ್ದಾನೆ. ಈತನು ಹೇಳಿರುವ ನೂತನ ಗಣಂಗಳಲ್ಲಿ ಶರಣರು ಕವಿಗಳು ರಾಜರು ಯತಿಗಳೂ ಕಂಡುಬರುತ್ತಾರೆ. ಈ ಹಲವಾರು ಶರಣರ ಗ್ರಾಮ ಕಾಯಕ ಅವರ ಭಕ್ತಿಯ ವೈಶಿಷ್ಟ್ಯಗಳ ಬಗೆಗೆ ಹೇಳಲಾಗಿದೆ. ಕಲ್ಯಾಣಪಟ್ಟಣ ಮತ್ತು ಅಲ್ಲಿಯ ಶರಣರನ್ನು ಕುರಿತು ಲಕ್ಕಣದಂಡೇಶ ಹೇಳಿರುವುದು ಉಲ್ಲೇಖಾರ್ಹವಾಗಿದೆ:

ಕಲ್ಯಾಣಪುರವಿಳಾತಳಕೆ ಶುಭಕಲ್ಯಾಣ
ಕಲ್ಯಾಣಪುರ ಮನುಜಮಂಗಳದ ಕಲ್ಯಾಣ
ಕಲ್ಯಾಣ ಪಾಪೌಘರದನಿಬಿದುವಿದಳನದ ಪಂಚಾಸ್ಯ ಕಲ್ಯಾಣವು
ಕಲ್ಯಾಣ ಭಕ್ತಿಸತಿಯ ವಿವಾಹಕಲ್ಯಾಣ
ಕಲ್ಯಾಣಪರಮ ಕೈವಲ್ಯಪದ ಕಲ್ಯಾಣ
ಕಲ್ಯಾಣದೋಳ್ ಬಸವನಂತಿರ್ಪ ಭಕ್ತರ ಸುಚರಣಾಂಬುಜಕ್ಕೆ ಶರಣು (೩೮-೧೫೮)

ನೀಲಕಂಠಾಚಾರ್ಯನ ಆರಾಧ್ಯ ಚಾರಿತ್ರ ಪ್ರಾಚೀನ ಕಥಾಸಂಗ್ರಹ ಸಾಹಿತ್ಯದ ದೃಷ್ಟಿಯಿಂದ ಒಂದು ಬಹುಮುಖ್ಯವಾದ ಕೃತಿಯಾಗಿದೆ. ಐದು ಕಾಂಡಗಳೂ, ಮೂರು ಸಾವಿರಕ್ಕಿಂತಲೂ ಹೆಚ್ಚಾದ ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿರುವ ಈ ಬೃಹದ್ಗ್ರಂಥದಲ್ಲಿ ಹಲವಾರು ಶಿವಶರಣ-ಶಿವಶರಣೆಯರ ಕಥೆಗಳನ್ನು ಹೃದಯಂಗಮವಾಗಿ ಬಿತ್ತರಿಸಲಾಗಿದೆ.

ಕುಮಾರ ಚೆನ್ನಬಸವನ ಪುರಾತನರ ಚರಿತೆಯಲ್ಲಿ ಬಸವಪುರಾಣದಲ್ಲಿ ಸಂಗ್ರಹವಾಗಿ ಸೂಚಿಸಿರುವ ಪುರಾತನ ಚರಿತ್ರೆಯನ್ನು ಉಪಕಥೆಗಳೊಂದಿಗೆ ವಿಸ್ತರಿಸಿ ಹೇಳಲಾಗಿದೆ.

ವೀರಶೈವ ಪ್ರಾಚೀನ ಕಥಾಸಂಗ್ರಹ ಸಾಹಿತ್ಯಕ್ಕೆ ಗುಬ್ಬಿಯ ಮಲ್ಲಣ್ಣನ ಕೊಡುಗೆ ಮಹತ್ತರವಾದುದು. ಈತನ ವೀರಶೈವಾಮೃತ ಮಹಾಪುರಾಣ ವಾರ್ಧಕ ಷಟ್ಪದಿಯಲ್ಲಿ ಎಂಟುಕಾಂಡ, ನೂರಮೂವತ್ತಾರು ಸಂಧಿ, ಏಳು ಸಾವಿರದ ತೊಂಬತ್ತೊಂಬತ್ತು ಪದ್ಯಗಳಲ್ಲಿ ರಚಿತವಾಗಿರುವ ಒಂದು ಬೃಹತ್ಕಾವ್ಯ. ಇದರಲ್ಲಿ ವೀರಶೈವ ಸಿದ್ಧಾಂತ ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿರುವುದೇ ಅಲ್ಲದೆ, ವೇದಾಗಮ ಪುರಾಣೇತಿಹಾಸ ಸ್ಮೃತಿಗಳಿಂದ ಅನೇಕ ಸಾಕ್ಷಿಗಳು ಉದ್ಧರಿಸಲ್ಪಟ್ಟಿವೆ. ಶಿವನ ಪಂಚವಿಂಶತಿಲೀಲೆಗಳೂ ಪುರಾತನ ನೂತನ ಶರಣರ ಕಥೆಗಳೇ ಮುಂತಾದ ಅನೇಕ ವಿಷಯಗಳೂ ಉಕ್ತವಾಗಿವೆ. ಆದುದರಿಂದ, ವೀರಶೈವಾಮೃತ ಮಹಾಪುರಾಣ ಬಹುವಿಷಯಗರ್ಭಿತವಾದ ಒಂದು ವೀರಶೈವ ಕೋಶದಂತಿದೆ. ಇದನ್ನೇ ಈ ಪದ್ಯ ಸಾರುತ್ತಿದೆ:

ಪರಶಿವ ಕ್ರೀಡಾವಿನೋದ ಕಥೆಯೆಂಬ ಸಾ
ಗರದೊಳಗೆ ತಾನೆನ್ನ ಶಕ್ತಿಯನುಸಾರದಿಂ
ಪರಿಕಿಸಲ್ ಕೆಲಕೆಲವನರ್ಘ್ಯರತ್ನಂಗಳಂ ಪೋಲ್ವ ಪ್ರಮಾಣಗಳನೆ
ವಿರಚಿಸಲ್ ತೆಗೆದು ಕೇಳ್ವರಿಗೆ ಭೂಷಣವೆನಿಸು
ತಿರೆ ವೀರಶೈವಾಮೃತಾಖ್ಯದಿಂ ಪೇಳ್ವೆಂ... (೧-೧-೨೦)

ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣ ಈ ಮಾಲಿಕೆಯಲ್ಲಿ ಮತ್ತೊಂದು ಗಮನಾರ್ಹ ಕೃತಿ. ಇದರಲ್ಲಿ ಪರಮೇಶ್ವರನ ಪಂಚವಿಂಶತಿ ಲೀಲೆಗಳ ಜೊತೆಗೆ ವೀರಶೈವ ಮತತತ್ತ್ವ, ಷಟ್ಸ್ಥಲಜ್ಞಾನ, ಅರುವತ್ತುಮೂರು ಪುರಾತನರು,

ತೇರಸರು, ಷೋಡಶರು, ಏಳುನೂರ ಎಪ್ಪತ್ತು ಅಮರಗಣಂಗಳು, ನೂರೊಂದು ವಿರಕ್ತರು -ಇವೆಲ್ಲವುಗಳ ಸಂಕ್ಷಿಪ್ತ ಇತಿಹಾಸ ನಿರೂಪಿತವಾಗಿದೆ. ಬಿಜ್ಜಳ, ಆನೆಯಗೊಂದಿ ಅರಸರು, ವಿಜಯನಗರದ ರಾಜರು -ಇವರ ಬಗ್ಗೆಯೂ ವೀರಶೈವ ಕವಿಗಳ ಬಗ್ಗೆಯೂ ಬಹಳಷ್ಟು ಐತಿಹಾಸಿಕ ಸಂಗತಿಗಳೂ ದೊರೆಯುತ್ತವೆ.

ಹದಿನಾರನೆಯ ಶತಮಾನದ ಆದಿಭಾಗದಲ್ಲಿದ್ದ ಸುರಂಗಕವಿ "ಮನುಜಸ್ತುತಿಯಂ ಬಿಟ್ಟು ಸುರಂಗಕವಿ ನಾಲಗೆಯಂ ಗಿರಿಶಂಗೆ ಮಾರಿದಂ" ಎಂದು ಹೇಳಿಕೊಂಡಿದ್ದಾನೆ. ಈತನ ತ್ರಿಷಷ್ಠಿಪುರಾತನರ ಚರಿತ್ರೆ ಎಂಬ ಚಂಪೂಕಾವ್ಯದಲ್ಲಿ ಅರುವತ್ತು ಮೂವರು ಶಿವಭಕ್ತರ ಚರಿತ್ರೆ ವರ್ಣಿತವಾಗಿದೆ.

ಪ್ರಾಚೀನ ವೀರಶೈವ ಕಥಾಸಂಗ್ರಹ ಸಾಹಿತ್ಯಕ್ಕೆ ಮಾತೃಸ್ವರೂಪವಾದುದೂ ಅತ್ಯಂತ ಮಹತ್ವಪೂರಿತವಾದುದೂ ಕಿಕ್ಕೇರಿಯಾರಾಧ್ಯ ನಂಜುಂಡನ ಭೈರವೇಶ್ವರ ಕಾವ್ಯ. ಇದು ಶಿವಶರಣರ ಕಥಾರತ್ನಕೋಶ. ಈ ಕಾವ್ಯವನ್ನು ಆಧರಿಸಿ ಉತ್ತರದೇಶದ ಬಸವಲಿಂಗನು ಬಸವೇಶ್ವರ ಪುರಾಣದ ಕಥಾಸಾಗರ, ಭೈರವೇಶ್ವರ ಕಾವ್ಯದ ಕಥಾಸಾಗರ, ಉಚಿತ ಕಥೆಗಳನ್ನೂ, ಶಾಂತಲಿಂಗದೇಶಿಕನು ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರವನ್ನೂ ಸಿದ್ಧಲಿಂಗ ಶಿವಯೋಗಿ ಭೈರವೇಶ್ವರ ಪುರಾಣವನ್ನೂ ರಚಿಸಿದ್ದಾರೆ. ಈ ಗ್ರಂಥದ ವಿಷಯವಾಗಿ ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರದಲ್ಲಿ ಈ ರೀತಿ ಹೇಳಲಾಗಿದೆ:

"ಬಸವಾದಿಗಳು ೭೭೭ ಪುರಾತನರಾಗಿ ಮರ್ತ್ಯಕ್ಕವತರಿಸಿ ವೀರಶೈವಾಚಾರದಿಂದ ಅಷ್ಟಾವರಣ ಮೊದಲಾದ ಶಿವಾಚಾರವನುದ್ಧರಿಸಿ ಮರ್ತ್ಯದಲ್ಲಿ ನಿತ್ಯಾನಂದ ನಿಜಲಿಂಗೈಕ್ಯರಾಗಿರುತ್ತುಂ ಮರ್ತ್ಯಲೋಕದ ಮಣಿಹವಂ ಪೂರೈಸಿ ಕೈಲಾಸಕ್ಕೈದಿದರ್. ಬಳಿಕ ಖಿಲವಾದ ವೀರಶೈವಾಚಾರವನುದ್ಧರಿಸಲು ಶಿವನು ಕಾಲಸಂಹಾರನೆಂಬ ಗಣೇಶ್ವರನನು ಆಂಧ್ರದೇಶದಲ್ಲಿ ಮೋಪೂರೆಂಬ ಪಟ್ಟಣದ ಅರಸು ಸಂಗಮರಾಜ ಹೆಂಡತಿ ಹೈಮಾವತಿ ಇವರಿಗೆ ಭೈರವರಾಜನೆಂಬ ಮಗನಾಗಿ ಹುಟ್ಟುವಂತೆ ನೇಮಿಸಿದನು. ಭೈರವರಾಜನು ಪ್ರಹುಡಾಚಾರ್ಯನೆಂಬ ಪೌರಾಣಿಕನಲ್ಲಿ ಪೂರ್ವಕಥೆಗಳನ್ನು ಕೇಳುತ್ತ ಶಿವಭಕ್ತಿ ನಿಷ್ಠಾಪರರಾಗಿರಲೆಂದು ಕೇಳಲು- ಮನುಮುನಿಯಕ್ಷರಾಕ್ಷಸರುಂ ಅರುವತ್ತುಮೂರು ಪುರಾತನರುಂ ಶೈವದಲ್ಲಿ ಮುಕ್ತಿಯಂ ಪಡೆದರ್, ದಶಗಣ, ತೇರಸಗಣ, ಷೋಡಶಗಣ, ಪ್ರಮಥಗಣ, ರುದ್ರಗಣ, ಅಮರಗಣ, ಭಕ್ತಗಣ ಮೊದಲಾದ ೭೭೭ ಪುರಾತನರುಂ ನೂತನ ಪುರಾತನರುಂ ೧೦೧ ವಿರಕ್ತರುಂ ವೀರಶೈವದಲ್ಲಿ ಶಿವನ ಕೃಪಾ ಪ್ರಸನ್ನತ್ವಮಂ ಪಡೆದರ್ -ಎಂದುದಂ ಕೇಳ್ದು ಗಂಡಹೆಂಡಿರು ಭಕ್ತಿಯುಕ್ತರಾಗಿರಲು ಶಿವನು ಸ್ವಪ್ನದಲ್ಲಿ ಬಂದು ನೀನು ಹೆಂಡತಿಯೊಡನೆ ಮಲ್ಲಿಪಟ್ಟಣಕ್ಕೆ ಹೋಗಿ ಅಲ್ಲಿ ಗುರುಕರುಣಮಂ ಪಡೆದು ಸಾಸಲಿಗೆ ಪೋಗಿ ಜಂಗಮಾರ್ಚನೆಯ ಮಾಡು; ನಿನಗೆ ನಿತ್ಯಾನಂದಸುಖವನೀವೆನು ಎನ್ನ ಪೆಸರು ಸಾಸಲ ಸೋಮೇಶ್ವರ" ಎಂದನು. (ಕರ್ಣಾಟಕ ಕವಿಚರಿತೆ II, ಪು. ೨೧೬)

ಭೈರವೇಶ್ವರ ಕಾವ್ಯದಲ್ಲಿ:

ಭಕ್ತಿಯ ತಾಣ ಸನ್ಮುಕ್ತಿಯ ಸದನ ವಿ
ರಕ್ತಿಯ ಸೀಮೆ ಮೋಹನದ
ಸೂಕ್ತಿಯ ಸಿರಿ ಸರಸೋಕ್ತಿಯ ನೆಲೆಯಾಗಿ
ವ್ಯಕ್ತವಾಗಿರ್ಪುದೀ ಕಾವ್ಯ

ಎಂದು ಕವಿ ಹೇಳಿಕೊಂಡಿರುವುದು ಸಾರ್ಥಕವಾಗಿದೆ.

ಕ್ರಿ.ಶ. ಸು. ೧೬೦೦ರಲ್ಲಿದ್ದಿರಬಹುದಾದ ಸಿದ್ಧಲಿಂಗ ಶಿವಯೋಗಿ ಭೈರವೇಶ್ವರ ಪುರಾಣವೆಂಬ ಚಂಪೂಕಾವ್ಯವನ್ನು ಬರೆದಿದ್ದಾನೆ. ಇದಕ್ಕೆ ರಾಜೇಂದ್ರವಿಜಯ ಪುರಾಣವೆಂಬ ಪರ್ಯಾಯನಾಮವೂ ಉಂಟು. ಇದು ಕಿಕ್ಕೇರಿಯ ನಂಜುಂಡನ ಕೃತಿಯನ್ನು ಆಧರಿಸಿ ಹುಟ್ಟಿಕೊಂಡಿದ್ದಿರಬೇಕು. ಇದು ಭೈರವರಾಜನೇ ಮೊದಲಾದ ಅನೇಕ ಶಿವಭಕ್ತರ ಕಥೆಗಳನ್ನು ಒಳಗೊಂಡಿದೆ.

ವೀರಶೈವ ಕಥಾಸಂಗ್ರಹ ಸಾಹಿತ್ಯಕ್ಕೆ ಅದೃಶ್ಯಕವಿಯ ಪ್ರೌಢರಾಯನ ಕಾವ್ಯ ಒಂದು ಮಹತ್ತರ ಕೊಡುಗೆಯಾಗಿದೆ. ಪ್ರೌಢರಾಯನಿಗೆ ಜಕ್ಕಣಾರ್ಯ ಹೇಳಿದ ಬಸವೇಶ್ವರನೇ ಮೊದಲಾದ ಶಿವಶರಣರ ಕಥೆಗಳು ಬಿತ್ತರಗೊಂಡಿವೆ. ಕಾವ್ಯದ ಪ್ರಾರಂಭದಲ್ಲಿ:

ಶಾರದೆಯೆ ನಿನ್ನ ಕರುಣಾರಸವ ಜಿಹ್ವೆಯೊಳು
ಪೂರೈಸಿ ಶರಣರುನ್ನತಿ ಕಾವ್ಯಕಥೆಗೂಣೆ
ಬಾರದೊಲು ಮಾಡುವದು ಬಡಮತಿಗೆ ವರವಿತ್ತು ಬ್ರಹ್ಮನಾ ರಾಣಿ ವಾಣಿ;
ಭೂರಮಣ ಪ್ರೌಢಂಗೆ ಜಕ್ಕಣಾರ್ಯರು ಕಥಾ
ಸಾರಮಂ ಪೇಳ್ದುದಂ ವಾರ್ಧಿಕ ಷಟ್ಪದಿಯ
ದಾರದಿಂ ದಿವ್ಯಮಣಿಯನು ಪೋಣಿಸಂತೆ ಗುರುವಂಘ್ರಿಬಲದಿಂದುಸುರ್ವೆನು (೧-೨೪)

ಹೀಗೆ ಹೇಳಲಾಗಿದೆ. ಈ ಕಾವ್ಯದಲ್ಲಿ ೭೯ ಶಿವಶರಣ ಶರಣೆಯರ ಕಥೆಗಳಿವೆ. ಈ ಶರಣರ ಕಥಾಮೃತವನ್ನು ಕೇಳಿದರೆ "ದೇಶದಲ್ಲಿ ಸಂತಸದಿ ಮಳೆ ಬೆಳೆಗಳಾಗಿ ಸುರಭಿಯು ಕರೆದು ಚಿಂತಾರಹಿತರಾಗಿ ನಿತ್ಯೋತ್ಸವದೊಳಗತ್ಯಂತ ದ್ರವ್ಯವ ಗಳಿಸಿ ಸುಖದಿ ಬಾಳುವರು" ಎಂಬುದು ಕವಿಯ ದೃಢವಾದ ನಂಬಿಕೆಯಾಗಿದೆ.

ಉತ್ತರದೇಶದ ಬಸವಲಿಂಗ ವೀರಶೈವ ಪ್ರಾಚೀನ ಕಥಾಸಂಗ್ರಹ ಸಾಹಿತ್ಯಕ್ಕೆ ವಿಶಿಷ್ಟವಾದ ಕೃತಿಗಳನ್ನು ಒದಗಿಸಿ ಚಿರಸ್ಮರಣೀಯನಾಗಿದ್ದಾನೆ. ಈತನು ಬಸವೇಶ್ವರ ಪುರಾಣದ ಕಥಾಸಾಗರ, ಭೈರವೇಶ್ವರ ಕಾವ್ಯದ ಕಥಾಸಾಗರ, ಉಚಿತ ಕಥೆಗಳನ್ನೂ ಬರೆದಿದ್ದಾನೆ. ಗದ್ಯದಲ್ಲಿ ರಚಿತವಾಗಿರುವ ಈ ಕೃತಿಗಳು ಅತ್ಯಂತ ಮನೋಹರವಾಗಿವೆ. ಬಸವೇಶ್ವರ ಪುರಾಣ ಕಥಾಸಾಗರದಲ್ಲಿ ೪೬೪ ಕಥೆಗಳೂ, ಭೈರವೇಶ್ವರ ಕಾವ್ಯ ಕಥಾಸಾಗರದಲ್ಲಿ ೩೧೭ ಕಥೆಗಳೂ, ಉಚಿತ ಕಥೆಗಳಲ್ಲಿ ೭೪ ಕಥೆಗಳೂ ಇವೆ. ಈ ಕಥೆಗಳು ಹದಿನೆಂಟು ಪುರಾಣ, ಭಾರತ ರಾಮಾಯಣದ ಕಥೆಗಳು ಮತ್ತು ವೀರಶೈವಾಮೃತ ಪುರಾಣ, ಆರಾಧ್ಯ ಚಾರಿತ್ರ, ಗಣಾಡಂಬರ, ಸಿಂಗಿರಾಜಯ್ಯ ಕೃತಿ, ಶಿವತತ್ತ್ವ ಚಿಂತಾಮಣಿ, ಹರೀಶ್ವರ ದೇವರು ಮಾಡಿದ ರಗಳೆ, ಸಿದ್ಧರಾಮೇಶ್ವರ ಚಾರಿತ್ರ, ಶೂನ್ಯಸಂಪಾದನೆ ಮೊದಲಾದವರಲ್ಲಿದ್ದ ಕಥೆಗಳನ್ನೆ ಸಂಗ್ರಹಿಸಿದೆವಲ್ಲದೆ ಕಲ್ಪನೆಯ ಕಥೆಗಳ ಹೇಳಲಿಲ್ಲ ಎಂದು ಕವಿ ತನ್ನ ಆಕರ ಗ್ರಂಥಗಳನ್ನೂ ಹೆಸರಿಸಿದ್ದಾನೆ. ಹಲವಾರು ಮೂಲಗಳಿಂದ ಸಂಗ್ರಹಿಸಿರುವ ಈ ಕಥೆಗಳು ಅನೇಕ ದೃಷ್ಟಿಗಳಿಂದ ಮಹತ್ವಪೂರಿತವಾಗಿವೆ; ಈತನ ಕೃತಿಗಳು ವಿಶ್ವಕೋಶದಂತಿವೆ.

ಹದಿನೇಳನೆಯ ಶತಮಾನದ ಸಿದ್ಧನಂಜೇಶ. ಗುರುರಾಜ ಚಾರಿತ್ರ ರಾಘವಾಂಕ ಚಾರಿತ್ರಗಳಲ್ಲಿ ಅಸಂಖ್ಯಾತ ಶಿವಶರಣರ ಚರಿತ್ರೆಗಳನ್ನೂ ನಿರೂಪಿಸಿದ್ದಾನೆ. ಶಿವಪಥದಲ್ಲಿ ನಡೆದು ಶಿವಪದವನ್ನು ಪಡೆದು ಮಾನವಜನ್ಮವನ್ನು ಸಾರ್ಥಕ ಮಾಡಿಕೊಂಡ ಪುರಾತನ ನೂತನ ಭಕ್ತರ ಕಥೆಗಳನ್ನು ಮನಂಬುಗುವಂತೆ ಹೇಳಿದ್ದಾನೆ. ಗುರುರಾಜ ಚಾರಿತ್ರದ ಪೀಠಿಕೆಯಲ್ಲಿ "ನೂರುಗಂಟಲೆ ಕತೆಗಳನ್ನೊಳಗೊಂಡಿರುವ ಗುರುರಾಜಚಾರಿತ್ರ ಒಂದು ಸಣ್ಣ ಶಿವಕಥಾಸರಿತ್ಸಾಗರ ದಂತಿದೆ. ರೇವಣಸಿದ್ಧ, ಮರುಳಸಿದ್ಧ, ಮಲ್ಲಿಕಾರ್ಜುನ ಪಂಡಿತಾರಾಧ್ಯ, ಏಕೋರಾಮಿತಂದೆ, ಪಂಚವಣ್ಣಿಗೆಯ ಸಿದ್ಧಮಲ್ಲೇಶ, ಬಸವಣ್ಣ, ಪಾಲ್ಕುರಿಕೆ ಸೋಮನಾಥ, ಹರಿಹರ, ರಾಘವಾಂಕ, ಕೆರೆಯ ಪದ್ಮರಸ, ಚಾಮರಸ, ಕೊಟ್ಟೂರು ಬಸವೇಶ್ವರ ತೋಂಟದ ಸಿದ್ಧಲಿಂಗ, ಬಯಲ ಪ್ರಭುಸ್ವಾಮಿ ಇಂತಿವೇ ಮೊದಲಾದ ಕತೆಗಳನ್ನೋದಿದರೆ, ಕವಿಯ ಕತೆಗಾರಿಕೆ ಮೇಲುಮಟ್ಟದ್ದೆನಿಸುತ್ತದೆ."

ಹರಿಹರ ರಾಘವಾಂಕ, ಕೆರೆಯ ಪದ್ಮರಸ, ಪಾಲ್ಕುರಿಕೆ ಸೋಮೇಶ್ವರ, ಚಾಮರಸ, ಕುಮಾರವ್ಯಾಸ, ಲಕ್ಕಣ್ಣ ದಂಡೇಶ, ಕಲ್ಲಮಠದ ಪ್ರಭುದೇವರು, ತೋಂಟದ ಸಿದ್ಧಲಿಂಗ -ಇಂತಿವರೇ ಮೊದಲಾದ ಅನೇಕ ಕವಿಗಳ ವಚನಕಾರರ ತಿರುನೀಲಕಂಠ ಮೊದಲಾದ ಪುರಾತನ ಭಕ್ತರ, ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರು ಮೊದಲಾದ ೧೨ನೆಯ ಶತಮಾನದ ಅಸಂಖ್ಯಾತ ಶಿವಶರಣರ ೧೫ನೆಯ ಶತಮಾನದಲ್ಲಿದ್ದ ವಿರಕ್ತರ ಆಮೇಲೆ ವೀರಶೈವದ ಸಂಪ್ರದಾಯವನ್ನು ಉಳಿಸಿ ಬೆಳೆಸಿದ ವರ್ತಮಾನದ ನೂತನ ಪುರಾತನರ ಚರಿತ್ರೆಗಳನ್ನು ಒಳಗೊಂಡಿರುವ ಗುರುರಾಜ ಚಾರಿತ್ರದ ಐತಿಹಾಸಿಕ ಮಹತ್ವ ಅಷ್ಟಿಷ್ಟಲ್ಲ. ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರದಂತೆ ವೀರಶೈವರ ಸಾಹಿತ್ಯ ಸಂಪ್ರದಾಯಕ್ಕೆ ಧರ್ಮಪರಂಪರೆಯನ್ನು ತಿಳಿಸುವಲ್ಲಿ ಗುರುರಾಜಚಾರಿತ್ರ ಒಳ್ಳೆಯ ಸಹಕಾರಿಯಾಗುತ್ತದೆ. ಲಕ್ಕಣ್ಣ ದಂಡೇಶನ ಶಿವತತ್ತ್ವ ಚಿಂತಾಮಣಿ ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣ, ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣ ಇವೇ ಮೊದಲಾದ ಗ್ರಂಥಗಳಲ್ಲಿ ಪುರಾತನ ನೂತನ ಶರಣ ಸಂಪ್ರದಾಯದ ಇತಿಹಾಸ ತಿಳಿಯುತ್ತದೆ. ಅದೇ ಸಂಪ್ರದಾಯದ

ಪ್ರವಾಹ ಮುಂದೆ ತನ್ನ ಕಾಲದವರೆಗೆ ಅವಿಚ್ಛಿನ್ನವಾಗಿ ಹರಿದುದನ್ನು ಸಿದ್ಧನಂಜೇಶ ಹೇಳುವುದರಿಂದ ಐತಿಹಾಸಿಕ ದೃಷ್ಟಿಯಿಂದ ಹೆಚ್ಚಿನ ಪ್ರಾಶಸ್ತ್ಯ ಗುರುರಾಜಚಾರಿತ್ರಕ್ಕಿದೆಯೆಂದು ಹೇಳಬೇಕು" ಎಂದಿದ್ದಾರೆ (ಪೀಠಿಕೆ, ಪು.೧೫-೧೮) ಗುರುರಾಜ ಚಾರಿತ್ರದಲ್ಲಿ ಈ ರೀತಿ ಹೇಳಿಕೊಂಡಿದ್ದಾನೆ ಕವಿ:

ನೂತನ ಪುರಾತನರ ಸತ್ಕಥೆಗಳಂ ವಾರಿ
ಜಾತ ಲೋಚನೆ ಚನ್ನವೀರಾಂಬೆಗಂ ಪೇಳ್ದಂ
ನಾ ತಪೋನಿಧಿ ಸಿದ್ಧನಂಜೇಶ ಗುರುಮೂರ್ತಿಚಿತ್ಕಳಾಸುಪ್ರಪೂರ್ತಿ (೧-ಸೂಚನೆ)

....ಲಕ್ಕಣಾಮಾತ್ಯ ಶಿವತತ್ವಚಿಂತಾಮಣಿಯೊಳು
ಅವಿರಳದ ನೂತನ ಪುರಾತನರ ಕಥೆಗಳಂ
ಭುವಿಯ ಸಜ್ಜನರಂ ಶರಣರಹುದೆನಲು ಪೇಳ್ದನಘೆ
ವಿವಿಧ ಕಥೆಗಳೊಳಾಣಿರತ್ನವಾಯ್ವಂತಾಯ್ತು ನಿನಗೊರೆವೆ (೧೦-೫)

ವಿನುತ ಶಿವತತ್ವಚಿಂತಾಮಣಿಯೊಳೊರೆದ ನೂ
ತನ ಪುರಾತನರ ಕಥೆಯುಗಳಿಯದಂದರಿ ಪೇಳ್ದ
ನನಘು ಗುರುಸಿದ್ಧನಂಜೇಶನು (೨೧-ಸೂಚನೆ)

ವೀರಶೈವಾಮೃತ ಪುರಾಣದೊಳಗೊರೆದ ವಿ
ಸ್ತಾರ ನೂತನ ಪುರಾತನರ ಸತ್ಕಥೆಗಳಂ
ಕಾರುಣ್ಯದಿಂದೊರೆದನಾ ಸಿದ್ಧನಂಜೇಶ (೧೨-ಸೂಚನೆ)

ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ ಈ ಮಾಲಿಕೆಯ ಒಂದು ಉದ್ಧೃಕೃತಿ. ಈ ಗದ್ಯಕೃತಿಯಲ್ಲಿ ೮೧ ಕಥೆಗಳಿವೆ. ಇದು ಭೈರವೇಶ್ವರ ಕಾವ್ಯಕ್ಕೆ ವಿವರಣ ರೂಪವಾಗಿದೆ. ಜೊತೆಗೆ ಇದು ಅನೇಕ ವೀರಶೈವಕವಿಗಳ ಮತ್ತು ಕೃತಿಗಳ ವಿವರಗಳನ್ನು ಒಳಕೊಂಡಿರುವುದರಿಂದ ತುಂಬ ಪ್ರಯೋಜನಕಾರಿಯಾಗಿದೆ. ಭೈರವೇಶ್ವರ ಕಾವ್ಯ ಒಂದು ವೀರಶೈವ ಕಥಾರ್ಣವ ಇದರ ಕರ್ತೃವಾದ ಶಾಂತಲಿಂಗ ದೇಶಿಕನು ಬಹುಶ್ರುತ. ಕಥಾನಿರೂಪಣಾ ಚಾತುರ್ಯವನ್ನು ಕರಗತ ಮಾಡಿಕೊಂಡವನು. ಈ ಕಾವ್ಯದ ಅಂತ್ಯದಲ್ಲಿ ಕವಿ ಹೇಳಿರುವ ಮಾತುಗಳೇ ಇದಕ್ಕೆ ಸಾಕ್ಷಿಯಾಗಿದೆ.

**ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ**

ನಿಃಕಲ ಪರಶಿವನ ಕರುಣಾಮೃತಸಿಂಧುವೆ ಒಂದು ರೂಪಾದ ನಂದೀಶ್ವರನ ಚಿದಂಶವೇ ಧರೆಗೆಯ್ತಂದು ಭಕ್ತಿಜ್ಞಾನವೈರಾಗ್ಯವೆ ರೂಪುವೆತ್ತ ಷಟ್ಸ್ಥಲಾಚಾರ್ಯ ವಿರಕ್ತ ನಮಃಶಿವಾಯದೇವರೆಂಬ ಸದ್ಗುರುಮೂರ್ತಿಯಲ್ಲಿ ಅವರ ಮಹಾನುಭವ ವಾಕ್ಯಪ್ರಸನ್ನಪ್ರಸಾದಾಮೃತಮಂ ಸ್ವೀಕರಿಸಿ ತೃಪ್ತನಾದ ಶಾಂತಲಿಂಗದೇಶಿಕನು, ಸಕಲ ವೀರಮಾಹೇಶ್ವರರುಗಳ ನಿರೂಪದಿಂದ ಭೈರವದೇವನ ಕಾವ್ಯದಲ್ಲಿ ಸೂಚನೆಯಾಗಿರ್ದ ಕಥೆಗಳನು ವಿಶಾಲವಾಗಿ ಬರೆದು ಸಂಗ್ರಹಿಸೆಂದು ನಿರೂಪಿಸಿ ಅವರ ಮಹಾನುಭಾವ ನಿರೂಪವಿಡಿದು ಮೂಲದರಿಷ್ಟವಾದ ಕಥೆಗಳಿಗೆ ದೃಷ್ಟವಾದ ಉಪಕಥೆಗಳನು ಸಂಗ್ರಹಿಸುವುದಕ್ಕೆ ಸಕಲ ವೇದಾಗಮ ಪುರಾಣ ಇತಿಹಾಸಗಳಲ್ಲಿ ಹದಿನೆಂಟು ಶೃಂಗಾರ ನವರಸಾರ್ಥ ಲಕ್ಷಣಶುದ್ಧವಾಗಿ ಪೇಳುವ ಛಂದಸ್ಸು ಧಾತು ಭರತ ನಾನಾರ್ಥ ಕವಿಕಂಠಾಭರಣ ದಶನಿಘಂಟು ಕರೋಕ್ತಿಗಳಲ್ಲಿ ತರ್ಕವರದ ಭಟ್ಟಿ ಚಿಂತಾಮಣಿ ಶಬ್ದಮಣಿಸೂತ್ರ ವ್ಯಾಕರಣದಿಂದ ಲಕ್ಷಣಶುದ್ಧವಾಗಿ ಪೇಳಲು ಪಟ್ಟವೀರ ಮಾಹೇಶ್ವರರಾಚಾರ ಸಂಗ್ರಹ ಸೋಮನಾಥನ ಭಾಷ್ಯ ವಿವೇಕಚಿಂತಾಮಣಿ ವೀರಶೈವ ಸುಧಾರ್ಣವ ಗಣಭಾಷ್ಯರತ್ನಮಾಲೆ ಮೊದಲಾದವು ಸಂಸ್ಕೃತ ಕನ್ನಡ ಅರೆಭಾಷೆ ಆಂಧ್ರಭಾಷೆ ದ್ರಾವಿಡ ಭಾಷೆ ಪ್ರಾಕೃತ ಇಂತೀ ಭಾಷೆಗಳಿಂದ ಸಂಗ್ರಹಿಸಿದ ಪ್ರಕರಣಗಳಲ್ಲಿ ವೇಳುತ್ತಿರ್ದ ಕಥೆಗಳನು ಭಾರತ ಮಹಾಭಾರತ ರಾಮಾಯಣ ಮಹಾಭಾಷ್ಯ ಪಂಚಕಾವ್ಯ ಪಂಚತಂತ್ರ ಬತ್ತೀಶಪುತ್ಥಳಿ ವೇತಾಳನ ಕಥೆಗಳಲ್ಲಿಯೂ ಸೂಪ ಶಿಲ್ಪ ಕಕೋಕ ವೈದ್ಯ ಮಂತ್ರ ಗಾರುಡ ಯಂತ್ರ ಶಕುನಶಾಸ್ತ್ರ ಕೂಡುದರುಶನ ಶಾಸ್ತ್ರ ಹದಿನೆಂದು ಮತತಂತ್ರ ಹತ್ತೊಂಬತ್ತು ಧರ್ಮಶಾಸ್ತ್ರ ಎಂಟು ವೇದ ಹದಿನೆಂಟು ಪುರಾಣ, ಇಪ್ಪತ್ತೆಂಟು ಆಗಮ, ಮೂವತ್ತೆರಡುಪನಿಷತ್ತುಗಳಲ್ಲಿ ಹೇಳುವ ಕಥೆಗಳನೊಳಕೊಂಡು ಒಪ್ಪುತಿರ್ಪ ಬಸವೇಶ್ವರ ಪುರಾಣ ಗಿರಿಜೆಯ ಕಲ್ಯಾಣ

ವೀರಶೈವಾಮೃತ ಪುರಾಣ ಆರಾಧ್ಯಚಾರಿತ್ರ ನನ್ನಯ್ಯನ ಕಾವ್ಯ ಬಸವಚಾರಿತ್ರ ಸಿಂಗಿರಾಜನ ಕೃತಿ ಮೊದಲಾದ ಸಮಸ್ತ ಸಾಂಗತ್ಯ ಚಾರಿತ್ರದ ಕಥೆಗಳಿಗೆ ಮಾತೃಸ್ಥಾನವಾಗಿಪ್ಪುದು. ಬಸವಾದಿ ಪುರಾತನರು ನಿರೂಪಿಸಿದ ಶೂನ್ಯಸಂಪಾದನೆ ಮೊದಲಾದ ವಚನಾಮೃತ ಸಾಗರದಲ್ಲಿ ಪೇಳುತಿರ್ದ ಕಂದ ವೃತ್ತ ಗ್ರಂಥ ಶ್ರುತಿ ಸ್ಮೃತಿ ಪದ ಪದ್ಯ ವಚನ ರಗಳೆ ಪಟ್ಪದ ತ್ರಿಪದಿ, ಚೌಪದ, ದ್ವಿಪದ ದಂಡಕ ಅಷ್ಟಕ ವಿಷಮಪದ ಪ್ರಬಂಧ ಉದ್ದಂಡಷಟ್ಪದ ಪಂಚರತ್ನ ಸ್ವರಪದ ತಾರಾವಳಿಗಳು ಮೊದಲಾದವರಲ್ಲಿ ಹೇಳಲ್ಪಟ್ಟ ಕಥೆಗಳಂ ನೋಡಿ ಪುರಾತನರ ವಚನದ ಮೇಲೆ ಸಂಧಿವಿಡಿದು ಕಾವ್ಯದ ಕಥೆ ಸಂಗ್ರಹಕ್ಕೆ ಬೇಕಾದವಂ ತೆಗೆದುಕೊಂಡು ಸಂಗ್ರಹಿಸಿದೆನು. ಇದು ಶರಣಸತಿಯ ರತಿಸಂಯೋಗಕ್ಕೆ ಪತಿ ಶಿವಲಿಂಗವೆಂಬ ಅಪ್ರತಿಮ ಕಂದರ್ಪನೆಸೆವ ಚತುರ ನೂತನ ಬಾಣವಿದುವಾಗಿ ಸಂದ ಶಕವರುಷ ಶಾಲಿವಾಹನ ಶಕ ೧೫೪೪ನೆಯ ಪರಿಧಾವಿ ಸಂವತ್ಸರದ ಮಾರ್ಗಶಿರ ಮಾಸ ಶುದ್ಧ ೧೦ ಉತ್ತರ ಭಾದ್ರಪದ ನಕ್ಷತ್ರ ಶನಿವಾರದಲ್ಲಿ ಸಂಗ್ರಹಿಸಿ ಬರದು ಸಂಪೂರ್ಣವಾಯಿತು.

ಇದನು ಬರದೋದಿ ಪಠಿಸಿ ಲಾಲಿಸಿ ರಚಿಸಿರುವ ಮಹಾನುಭಾವಿಗಳಾದ ಸಕಲ ಸದ್ಭಕ್ತ ವೀರಮಾಹೇಶ್ವರರುಗಳ ಶ್ರೀಪಾದಕಮಲ ಯುಗಳಕ್ಕೆ ಕಾವ್ಯದ ಕಥಾಮಣಿ ಸೂತ್ರರತ್ನಾಕರವೆಂಬ ಪುಷ್ಪವಂ ಸಮರ್ಪಿಸಿ ನಮಿಸುತ್ತಂ ಜಯ ಜಯ ಜಯತು ಶುಭಮಂಗಳವೆಂದು ಕೊಂಡಾಡಿ ಪಾಡಿ ಕೀರ್ತಿಸಿ ಲಿಂಗಾಂಗ ಸಮರಸಾನಂದದೊಳೋಲಾಡುತ್ತಂ ದಶಗಳ ತೇರಸಗಣ, ಶೋಡಶಗಣ ಅರುವತ್ತುಮೂರು ಪುರಾತನರು ಏಳುನೂರೆಪ್ಪತ್ತು ಅಮರಗಣಂಗಳು ವೃಷಭಯೋಗಾಚಾರ್ಯರು ರುದ್ರಗಣ ಪ್ರಮಥಗಣ ಅಮರುಗಣ ಭಕ್ತಮಹಾಗಣ ಅಸಂಖ್ಯಾತ ಮಹಾಪ್ರಮಥರು, ನೂತನ ಪುರಾತನರು ನೂರೊಂದು ವಿರಕ್ತರು ಮೊದಲಾದ ಆದ್ಯರು ವೇದ್ಯರು ಸಾಧ್ಯರು ಗಣಂಗಳಿಗೆ ನಮಿಸುತ್ತಂ ತ್ರೈಭುವನ ಪಾವನವಾಗಿ ಚರಿಸುವ ಸದ್ಭಕ್ತ ವೀರಮಾಹೇಶ್ವರರುಗಳ ಶ್ರೀಪಾದ ಕಮಲಕ್ಕೆ ನಮೋ ನಮೋ.

ನಿರಂಜನ ವಂಶರತ್ನಾಕರದಲ್ಲಿ ಅಲ್ಲಮಪ್ರಭು ಚನ್ನಬಸವ, ಸಿದ್ಧರಾಮೇಶ್ವರ, ಅನಾದಿಗಣನಾಥ, ಆದಿಗಣೇಶ್ವರ, ನಿರ್ಮಾಯಗಣೇಶ್ವರ, ನಿರಂಜನ ಸ್ವಾಮಿಗಳು, ಜ್ಞಾನಾನಂದ ಸ್ವಾಮಿಗಳು, ಆತ್ಮಗಣವರ, ಆಧ್ಯಾತ್ಮಗಣನಾಥ, ರುದ್ರಮುನಿಸ್ವಾಮಿಗಳು, ಬಸವಪ್ರಭುಸ್ವಾಮಿಗಳು, ಆದಿಲಿಂಗಸ್ವಾಮಿಗಳು, ಚನ್ನವೀರಸ್ವಾಮಿಗಳು, ಗೋಸಲಸಿದ್ಧೇಶ್ವರ ಸ್ವಾಮಿಗಳು, ಶಂಕರಾಚಾರ್ಯಸ್ವಾಮಿಗಳು, ದಿವ್ಯಲಿಂಗೇಶ್ವರಸ್ವಾಮಿಗಳು, ಚನ್ನಬಸವರಾಜೇಂದ್ರರು, ತೋಂಟದ ಸಿದ್ಧಲಿಂಗ, ನಿರಕ್ಷರ ಬೋಳಬಸವೇಶ್ವರ, ಸಿದ್ಧವೀರಸ್ವಾಮಿಗಳು, ಗುರುಸಿದ್ಧದೇಶಿಕೇಂದ್ರ ಸ್ವಾಮಿಗಳು, ಗಗನದಾರ್ಯ, ಸಿದ್ಧವೀರಸ್ವಾಮಿಗಳು, ನೊಡಸಿದ್ಧಲಿಂಗ ದೇಶಿಕೇಂದ್ರ –ಇವರ ಕಥೆಗಳನ್ನು ಹೇಳಿದೆ.

ಬಸವೇಶ್ವರ ಷಟ್‌ಸ್ಥಲ ವಚನದ ಕಥಾಸಾರದಲ್ಲಿ ಬಸವೇಶ್ವರ ವಚನಗಳಲ್ಲಿ ಉಲ್ಲೇಖವಾಗಿರುವ ಶಿವಶರಣರ ಮತ್ತು ಪೌರಾಣಿಕ ಪುರುಷರ ಚರಿತ್ರೆಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ವೀರಶೈವ ಪ್ರಾಚೀನ ಕಥಾಸಂಗ್ರಹ ಸಾಹಿತ್ಯ ವಿಶಿಷ್ಟವಾಗಿದೆ; ವೈವಿಧ್ಯಮಯವಾಗಿದೆ. ಕೇವಲ ಕಥೆಗಳನ್ನು ನಿರೂಪಿಸಲು ಹುಟ್ಟಿಕೊಂಡವು. ಕೆಲವು ಕೃತಿಗಳಾದರೆ ಬಿಡಿಯಾಗಿಯೋ ಇಡಿಯಾಗಿಯೋ ಈ ಕಥೆಗಳನ್ನು ವಿವರಿಸಿರುವವು ಹಲವು. ಈ ವೀರಶೈವ ಕೃತಿಗಳ ಒಂದು ಪಟ್ಟಿಯನ್ನು ಅನುಬಂಧದಲ್ಲಿ ಕೊಡಲಾಗಿದೆ. ಈ ಕಥಾಸಾಹಿತ್ಯವನ್ನು ಅವಲೋಕಿಸಲು ಇಚ್ಛಿಸುವವರಿಗೆ ಈ ಕೃತಿಗಳು ದಾರಿದೀಪಗಳಂತಿವೆ. ವೀರಶೈವ ಪ್ರಾಚೀನ ಕಥಾಸಂಗ್ರಹ ಸಾಹಿತ್ಯ ಹಲವಾರು ದೃಷ್ಟಿಗಳಿಂದ ಒಂದು ಪ್ರಮುಖ ಸಾಹಿತ್ಯ ಪ್ರಕಾರವಾಗಿದೆ.

## ಆಕರ ಗ್ರಂಥಗಳು

೧. ಅರುವತ್ತು ಮೂರು ಮಂದಿ ಪುರಾತನರ ಸ್ತೋತ್ರ : ನಿಜಗುಣ ಶಿವಯೋಗಿ, ಸು. ೧೫೦೦, ಸಿದ್ಧವಿಲಾಸ ಪ್ರೆಸ್, ಬೆಂಗಳೂರು, ೧೯೫೫

೨. ಅರುವತ್ತು ಮೂವರು ಪುರಾತನರ ಸಾಂಗತ್ಯ : ಶಿವಯೋಗಿ, ಸೋಮೇಶ, ೧೭೫೦

೩. ಅರುವತ್ತು ಮೂವರು ಪ್ರಮಥ ಗಣಾಧೀಶ್ವರರ ತ್ರಿವಿಧಿ : ಕಳಲೆ ನಂಜರಾಜ, ಸು. ೧೭೪೦

೪. ಆರಾಧ್ಯಚಾರಿತ್ರ : ನೀಲಕಂಠಾಚಾರ್ಯ, ಸು. ೧೪೮೫ ಸಂ. ಎನ್. ಬಸವಾರಾಧ್ಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೦

೫. ಎಲ್ಲಾ ಪುರಾತನರ ಪುರಾಣ : ಭದ್ರಸುತವೀರ

೬. ಗುರುಭಕ್ತಾಂಡಾರಿ ಚರಿತೆ : ಸೆಮ್ಮಿಸೆಟ್ಟಿ, ಸು. ೧೬೫೦, ಸಂ. ಎನ್. ಬಸವಾರಾಧ್ಯ, ಪ್ರಾಚ್ಯಕಾವ್ಯ ಪ್ರಕಾಶನ ಮಂದಿರ, ಬೆಂಗಳೂರು, ೧೯೬೯

೭. ಗುರುರಾಜಚಾರಿತ್ರ : ಸಿದ್ಧನಂಜೇಶ, ಸು. ೧೬೫೦, ಸಂ. ಸಂ.ಶಿ. ಭೂಸನೂರಮಠ, ಶ್ರೀ ಬಾಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ, ಧಾರವಾಡ, ೧೯೫೦

೮. ತ್ರಿಷಷ್ಠಿ ಪುರಾತನ ಚಾರಿತ್ರಂ : ಸುರಂಗ ಸು. ೧೫೦೦, ಸಂ. ಡಾ. ಆರ್.ಸಿ. ಹಿರೇಮಠ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೬೬

೯. ನಿರಂಜನ ವಂಶರತ್ನಾಕರ : ಸಂ. ಫ.ಗು. ಹಳಕಟ್ಟಿ, ಶಿವಾನುಭವ ಗ್ರಂಥಮಾಲೆ, ಬಿಜಾಪುರ, ೧೯೩೨

೧೦. ಪುರಾತನರ ಚರಿತೆ : ಕುಮಾರ ಚೆನ್ನಬಸವ, ಸು. ೧೫೫೦, ಸಂ. ವೈ.ಸಿ. ಭಾನುಮತಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೬

೧೧. ಪ್ರೌಢರಾಯನ ಕಾವ್ಯ : ಅದೃಶ್ಯಕವಿ, ಸು. ೧೫೮೦, ಸಂ. ಸಂ.ಶಿ. ಭೂಸನೂರುಮಠ, ಶ್ರೀಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ, ಧಾರವಾಡ, ೧೯೫೭

೧೨. ಬಸವಪುರಾಣ : ಭೀಮಕವಿ, ಸು. ೧೩೬೯, ಸಂ. ಡಾ. ಆರ್.ಸಿ. ಹಿರೇಮಠ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, ೧೯೫೮

೧೩. ಬಸವೇಶ್ವರ ಪುರಾಣದ ಕಥಾಸಾಗರ : ಉತ್ತರದೇಶದ ಬಸವಲಿಂಗ, ಸು. ೧೬೦೦, ಸಂ. ಎಸ್. ಉಮಾಪತಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು

೧೪. ಬಸವೇಶ್ವರ ಷಟ್‌ಸ್ಥಲ ವಚನದ ಕಥಾಸಾರ : ಸು. ೧೭೦೦, ಸಂ. ಫ.ಗು. ಹಳಕಟ್ಟಿ, ಶಿವಾನುಭವ ಗ್ರಂಥಮಾಲಾ, ವಿಜಾಪುರ, ೧೯೩೪

೧೫. ಭೈರವೇಶ್ವರ ಕಾವ್ಯ : ಕಿಕ್ಕೇರಿಯಾರಾಧ್ಯ ನಂಜುಂಡ, ಸು. ೧೫೫೦, ಸಂ. ಶ್ರೀ ಶಿವಬಸವ ಸ್ವಾಮಿಗಳು, ಶಿವಶರಣ ವಾಙ್ಮಯ ಪ್ರಕಾಶ ಕಾರ್ಯಾಲಯ, ಮೈಸೂರು, ೧೯೫೪

೧೬. ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ : ಶಾಂತಲಿಂಗದೇಶಿಕ, ಸು. ೧೬೭೨, ಸಂ. ಡಾ. ಆರ್.ಸಿ. ಹಿರೇಮಠ, ಡಾ.ಎಂ.ಎಸ್. ಸುಂಕಾಪುರ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೬೮

೧೭. ಭೈರವೇಶ್ವರ ಪುರಾಣ : ಸಿದ್ಧಲಿಂಗ ಶಿವಯೋಗಿ, ಸು. ೧೬೦೦

೧೮. ರಾಘವಾಂಕ ಚಾರಿತ್ರ : ಸಿದ್ಧನಂಜೇಶ, ಸು. ೧೬೫೦, ಸಂ. ಸ.ಸ. ಮಾಳವಾಡ, ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ, ಧಾರವಾಡ, ೧೯೫೪

೧೯. ವೀರಶೈವಾಮೃತ ಮಹಾಪುರಾಣ : ಗುಬ್ಬಿಯ ಮಲ್ಲಣಾರ್ಯ, ಸು. ೧೫೩೦, ಸಂ. ಶಿವಪ್ಪಶಾಸ್ತ್ರಿ, ಟೌನ್ ಮುದ್ರಾಕ್ಷರ ಶಾಲಾ, ಬೆಂಗಳೂರು, ೧೯೦೭

೨೦. ಸಿಂಗಿರಾಜಪುರಾಣ : ಸಿಂಗಿರಾಜ, ಸು. ೧೫೦೦, ಸಂ. ಎಚ್. ದೇವೀರಪ್ಪ : ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು, ೧೯೫೦

೨೧. ಶಿವತತ್ತ್ವ ಚಿಂತಾಮಣಿ : ಲಕ್ಕಣದಂಡೇಶ, ಸು. ೧೪೨೮, ಸಂ. ಎಸ್. ಬಸಪ್ಪ, ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು, ೧೯೬೦

೨೨. ಸಾಸಲ ಭೈರವೇಂದ್ರ ಚರಿತೆ : ಕುಮಾರ ಚೆನ್ನಬಸವ, ಸು. ೧೫೫೦

೨೩. ಹರಿಹರನ ರಗಳೆಗಳು : ಹರಿಹರ, ಸು. ೧೨೦೦, ಸಂ. ಫ.ಗು. ಹಳಕಟ್ಟಿ, ಎಚ್. ದೇವೀರಪ್ಪ

# ವೀರಶೈವ ಮಾರ್ಗಸಾಹಿತ್ಯ

**ಕ**ನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಾರ್ಗ ಮತ್ತು ದೇಸಿ ಎರಡು ಪ್ರಮುಖ ಕಾವ್ಯರಚನಾವಿಧಾನಗಳು. ಸಾಹಿತ್ಯದ ಪರಿಭಾಷೆಯ ಮೇರೆಗೆ ಸಂಸ್ಕೃತ ಭಾಷೆಯ ಶಬ್ದಗಳನ್ನು ಬಳಸಿ ರಚಿಸುವ ಪ್ರಾಚೀನ ಲಕ್ಷಣಬದ್ಧವಾದ ಕಾವ್ಯರಚನಾಕ್ರಮವೇ ಮಾರ್ಗ. ಪರಭಾಷೆಯ ಅನುಕರಣವಿಲ್ಲದೆ ಅಚ್ಚಗನ್ನಡ ಶಬ್ದಗಳನ್ನು ಮನೋಹರವಾಗಿ ಬಳಸುವ ಶುದ್ಧಗನ್ನಡಶೈಲಿಯೇ ದೇಸಿ.

ಮಾರ್ಗಸಾಹಿತ್ಯ ಅತ್ಯಂತ ಪ್ರಾಚೀನವಾದುದು. ಇದಕ್ಕೆ ಚಂಪೂ ಎಂಬ ಪರ್ಯಾಯನಾಮವಿದೆ. ಗದ್ಯಪದ್ಯಗಳೆರಡೂ ಇರತಕ್ಕ ಮಿಶ್ರಕಾವ್ಯವು ಚಂಪೂ ಎನಿಸುತ್ತದೆ. "ಬೆರಸಿ ಬರೆ ಗದ್ಯಪದ್ಯಮವೆರಡುಂ ಕೃತಿ ಚಂಪುವೆಂಬ ಪೆಸರಂ ಪಡೆಗುಂ" (ಕಾವ್ಯಾವ, ೯೫೦) ಎಂದು ಕಾವ್ಯಾವಲೋಕನದಲ್ಲಿ ಹೇಳಿದೆ.

ಚಂಪುವಿನ ಉಗಮ ವಿಕಾಸಗಳ ಬಗೆಗೆ ವಿದ್ವಾಂಸರಲ್ಲಿ ಸಾಕಷ್ಟು ಜಿಜ್ಞಾಸೆ ನಡೆದಿದೆ. ಇದು ಸಂಸ್ಕೃತದಿಂದ ಬಂದದ್ದೇ ಅಥವಾ ದೇಸೀಯವೇ ಎಂಬ ಬಗೆಗೂ ಚರ್ಚೆಯಾಗಿದೆ. ಸದ್ಯದಲ್ಲಿ ಅದು ಅಪ್ರಸ್ತುತ.

ಕನ್ನಡ ಸಾಹಿತ್ಯದಲ್ಲಿ ವೀರಶೈವ ಚಂಪೂಕೃತಿಗಳ ಬೆಳಸು ಅಷ್ಟೇನೂ ಹುಲುಸಾಗಿಲ್ಲವೆಂದೇ ಹೇಳಬೇಕಾಗಿದೆ. ಬಹುಮಟ್ಟಿನ ಎಲ್ಲ ವೀರಶೈವ ಚಂಪೂಕೃತಿಗಳ ಒಂದು ಸ್ಥೂಲವಿವೇಚನೆಯನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ಹಲವಾರು ವೀರಶೈವ ಚಂಪೂಕೃತಿಗಳು ಬೆಳಕನ್ನೇ ಕಂಡಿಲ್ಲ. ಈಗಾಗಲೇ ಬೆಳಕು ಕಂಡಿರುವ ಕೃತಿಗಳಲ್ಲಿ ಕೆಲವು ಅಲಭ್ಯವಾಗಿವೆ. ಎಲ್ಲ ವೀರಶೈವ ಚಂಪೂಕೃತಿಗಳು ಲಭ್ಯವಾಗುವಂತೆ ಮಾಡುವುದು ಸಮಾಜದ ಕರ್ತವ್ಯವಾಗಿದೆ. ಇಲ್ಲಿ ಸಮಾವೇಶ ಗೊಂಡಿರುವ ಮಾನ್ಯ ಮಠಾಧಿಪತಿಗಳೂ, ಸಮಾಜಬಾಂಧವರೂ ಈ ದಿಸೆಯಲ್ಲಿ ಕಾರ್ಯೋನ್ಮುಖರಾಗಬೇಕೆಂದು ಕಳಕಳಿಯಿಂದ ಕೇಳಿಕೊಳ್ಳುತ್ತೇನೆ.

ಇಂದು ನನ್ನ ವಿವೇಚನೆಗೆ ಒಳಪಟ್ಟಿರುವ ಚಂಪೂಕೃತಿಗಳು ಒಟ್ಟು ಹತ್ತೊಂಬತ್ತು. ಈ ಎಲ್ಲ ಕೃತಿಗಳ ಸಮೀಕ್ಷೆಯನ್ನು ಸೀಮಿತ ಅವಧಿಯಲ್ಲಿ ಮಾಡುವುದು ಅಸಾಧ್ಯ; ಅಸಂಭವ. ಆದುದರಿಂದ ಈ ಎಲ್ಲ ಕೃತಿಗಳ ಒಂದು ಸ್ಥೂಲಪರಿಚಯವನ್ನು ಮಾಡಿಕೊಡುವುದಕ್ಕೆ ಪ್ರಯತ್ನಿಸಲಾಗಿದೆ.

**ಗಿರಿಜಾಕಲ್ಯಾಣ:** ವೀರಶೈವ ಚಂಪೂಕಾವ್ಯಗಳ ಆದ್ಯಪ್ರವರ್ತಕರೂ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕ್ರಾಂತಿಕಾರಿಗಳೂ ಎನಿಸಿದ ಹಂಪೆಯ ಹರೀಶ್ವರರಿಂದ ರಚಿತವಾದುದು. ಇವರ ತರುವಾಯದ ವೀರಶೈವ ಕವಿಗಳೆಲ್ಲರೂ ಇವರನ್ನು ಸ್ಮರಿಸಿಯೇ ಮುಂದುವರಿದಿದ್ದಾರೆ. ಒಂದು ಹೊಸಮಾರ್ಗವನ್ನು ಸಂಪ್ರದಾಯವನ್ನೂ ಪ್ರಾರಂಭಿಸಿದ ಶ್ರೇಯಸ್ಸು ಹರಿಹರನಿಗೆ ಸಲ್ಲುತ್ತದೆ.

ಹರಿಹರ ಹಂಪೆಯ ವಿರೂಪಾಕ್ಷನ ಪರಮಭಕ್ತ. ಅನ್ಯದೈವಸ್ತುತಿ ಮಾಡುವುದಿಲ್ಲವೆಂಬುದು ಆತನ ದೃಢನಿರ್ಧಾರ. ಇದನ್ನೇ ಈ ಪದ್ಯದಲ್ಲಿ ಸ್ಪಷ್ಟಪಡಿಸಿದ್ದಾನೆ:

ಪೊಗಳೆಂ ಮಿಕ್ಕಿನ ಚಕ್ರಪಾಣಿ ಸರಸಿಜೋದ್ಭೂತ ಸಂಕ್ರಂದನಾ
ದಿಗಳಂ ತಾನೆನೆ ಮರ್ತ್ಯ ಕೀಟಕರಮಾತಂತಿರ್ಕೆ ಮತ್ತಾವನಂ
ಬಗೆದಾರೆಂ ಬಿಡದಾ ಹರಂಗೆ ಶಶಿಭೂಷಣಂಗೀಶ್ವರಂಗೆಯ್ದೆನಾ
ಲಗೆಯಂ ಮಾಜಿದೆನೊಲ್ದು ಹಂಪೆಯ ವಿರೂಪಾಕ್ಷಂಗದೇನೆಂದಪೆಂ (ಪಂಪಾಶತಕ, ೮೧)

ಮಾನವರ ಸ್ತುತಿಗಾಗಿ ಕಾವ್ಯವನ್ನು ರಚಿಸಿ ಕೆಡಬಾರದು ಎಂಬುದನ್ನು ಮುಂದಿನ ಪದ್ಯದಲ್ಲಿ ನಿರೂಪಿಸಿದ್ದಾನೆ.

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆಯಕ್ಕಟಾ
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದು ಮೇಣ್
ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ (ಪಂಪಾಶತಕ, ೮೨)

ಹರಿಹರನ ಕೃತಿಗಳಲ್ಲಿ ಆತನ ಇತಿವೃತ್ತಗಳೇನೂ ತಿಳಿದುಬರುವುದಿಲ್ಲ. ಆದರೆ ಪದ್ಮಣಾಂಕನ 'ಪದ್ಮರಾಜ ಪುರಾಣ' ಸಿದ್ಧನಂಜೇಶನ 'ಗುರುರಾಜಚಾರಿತ್ರ'ದಲ್ಲಿ ನಿರೂಪಿತವಾದ ಸಂಗತಿಗಳು ಇಂತಿವೆ: ಹರಿಹರನ ತಂದೆ ಮಹದೇವ, ತಾಯಿ ಶರ್ವಾಣಿ. ರುದ್ರಾಣಿ ಹರಿಹರನ ಅಕ್ಕ. ರಾಘವಾಂಕ ರುದ್ರಾಣಿಯ ಮಗ, ಹರಿಹರನ ಸೋದರಳಿಯ. ಹರಿಹರ ಗುರುಪರಂಪರೆಯನ್ನು ವಿಶೇಷವಾಗಿ ಹೇಳಿಕೊಂಡಿದ್ದಾನೆ. ಹಂಪೆಯ ಶಂಕರದೇವ, ಅವರ ಶಿಷ್ಯ ಮಾದಿರಾಜ. ಅವರ ಶಿಷ್ಯ ಮಾಯಿದೇವ, ಅವರ ಶಿಷ್ಯ ಹರಿಹರ. ಈತನು ಅತ್ಯಂತ ಮಹಿಮಾನ್ವಿತರೂ ಶಾಸ್ತ್ರಾಗಮಕೋವಿದರೂ ಶೈವಾಗಮಸಿದ್ಧರೂ ಆದ ಗುರುಪರಂಪರೆಗೆ ಸೇರಿದ್ದರಿಂದಲೇ ಅವರ ಅಂಶಗಳನ್ನೆಲ್ಲಾ ತನ್ನಲ್ಲಿ ಗರ್ಭೀಕರಿಸಿಕೊಂಡು ಸಾರಸ್ವತಕೃತಿಗಳನ್ನು ರಚಿಸಿದ್ದಾನೆ. ಹರಿಹರನ ಕಾಲ ಹದಿಮೂರನೆಯ ಶತಮಾನದ ಆದಿಭಾಗವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಅನೇಕ ಪ್ರಾಚೀನ ಸಂಪ್ರದಾಯಗಳನ್ನು ಕಿತ್ತೊಗೆದ ಹರಿಹರ ಱಟಕುಳದ ವಿಷಯಲ್ಲಿಯೂ ತನ್ನ ದಿಟ್ಟನಿಲವನ್ನು ಈ ರೀತಿ ಪ್ರದರ್ಶಿಸಿದ್ದಾನೆ.

ನೋಡುವೊಡೊಂದಕ್ಕರಮದು
ಮಾಡುವೊಡುಚ್ಚರಣೆಗರಿದು ಮೂಱುಂತೆಱನಂ
ಕೂಡೆ ಕವಿತತಿ ವಿಚಾರಿಸ
ಬೇಡದಿಱಿಂ ಱಟಕುಳಕ್ಕಳಂಗಳನಿದಱೊಳ್ (ಗಿರಿಜಾಕಲ್ಯಾಣ, ೧-೩೨)

ಹರಿಹರ ಗಿರಿಜಾಕಲ್ಯಾಣ, ಪಂಪಾಶತಕ, ರಕ್ಷಾಶತಕ, ಶಿವಶರಣರ ರಗಳೆಗಳು, ಮುಡಿಗೆಯ ಅಷ್ಟಕ ಈ ಕೃತಿಗಳನ್ನು ಬರೆದಿದ್ದಾನೆ.

ಪ್ರಸ್ತುತ ಗಿರಿಜಾಕಲ್ಯಾಣ ಹರಿಹರನ ಏಕೈಕ ಚಂಪೂಕೃತಿ. ಇದರಲ್ಲಿ ಹತ್ತು ಆಶ್ವಾಸಗಳಿವೆ. ಇದರ ಕಥಾವಸ್ತು ಲೋಕಪ್ರಸಿದ್ಧವಾದುದು. ಶಿವನಿಗೂ ಪಾರ್ವತಿಗೂ ನಡೆದ ವಿವಾಹವು ಇದರಲ್ಲಿ ವರ್ಣಿತವಾಗಿದೆ. ಗಿರಿಜಾಕಲ್ಯಾಣದ ಕಥಾಗರ್ಭದಲ್ಲಿ ಹರಿಹರನೇ ಈ ರೀತಿ ನಿರೂಪಿಸಿದ್ದಾನೆ:

"ಶೂಲಧರಂ ಶೈಲರಾಜನಲ್ಲಿಗೆ ವಂದು ಪಾರ್ವತಿಯಂ
ಮಹೋತ್ಸಾಹದಿಂ ವಿವಾಹಮಾಗಿ ಕೈಲಾಸಕ್ಕೆ ನಡೆತಂದು
ಸುಖದೊಳಿರ್ದು ಪುಟ್ಟಿದ ಷಡಾನನಂ ತಾರಕಾಸುರನಂ
ತೀರ್ಚಿಸಿ ಸಕಲಲೋಕಕ್ಕೆ ಸಂತಸಮನೊಡರ್ಚೆ ಕಂತು
ಮದಮರ್ದನಂ ವಿರೂಪಾಕ್ಷ ಸುಖಸಂಕಥಾವಿನೋದದಿಂದ
ಸಕಲಭಕ್ತರ್ಗೆ ಪಱಮಂ ಕರುಣಿಸುತ್ತಿರ್ದನೆಂಬ ಗಿರಿಜಾ
ಕಲ್ಯಾಣ ಕಥಾಕಾವ್ಯಮಂ ಹಂಪೆಯ ಮಾದರಸರ ದೇವರ
ಕಾರುಣ್ಯದ ಶಿಶುವಪ್ಪ ಹಂಪೆಯ ಹರಿಹರಂ ಬಿನ್ನಪಂಗೆಯ್ದಂ"

ಹರಿಹರ ತನ್ನ ಕಾವ್ಯದ ಉತ್ಕೃಷ್ಟತೆಯನ್ನು:

ಸುರತರುವಿನಂತೆ ಸುಜನರ
ಸಿರಿಯಂತೆ ಸರೋಜದಂತೆ ಸುಧೆಯಂತೆ ಸುಧಾ
ಕರಕಿರಣದಂತೆ ಹಂಪೆಯ
ಹರಿದೇವನ ಕಾವ್ಯಮಖಿಲಸೇವ್ಯಂ ನವ್ಯಂ. (ಗಿರಿಕ, ೧–೧೭)

ಕಂದಂಗಳಮೃತಲತಿಕಾ
ಕಂದಂಗಳನೂನವಾಕ್ಯಫಲವಿಲಸನ್ಮಾ
ಕಂದಂಗಳ್ ತನಿರಸದು
ಕ್ಕಂದಂಗಳ್ ಸೊಗಸಿಯಿಸಿರ್ಪುವೀ ನುತಕೃತಿಯೊಳ್ (ಗಿರಿಕ, ೧–೧೨)

ಪರಮಶಿವಭಕ್ತನೂ, ಶೈವಸಾರೋದ್ಧಾರಕನೂ ಆದ ಹರಿಹರನ ಹಸೆರು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಿರಂತನವಾಗಿ ಉಳಿಯತಕ್ಕುದಾಗಿದೆ. ಸಮಕಾಲೀನರನ್ನು ಕುರಿತ ಕೃತಿಗಳು, ಜೀವನ ಚರಿತ್ರೆಯನ್ನು ಕುರಿತ ಕೃತಿಗಳು ಹರಿಹರನ ವಿಶಿಷ್ಟ ಕೊಡುಗೆ ಎಂದು ಭಾವಿಸಬಹುದಾಗಿದೆ. ಷಡಕ್ಷರಿ ತನ್ನ ರಾಜಶೇಖರವಿಳಾಸದಲ್ಲಿ:

ಧರೆಯೊಳ್ ಮೇಣ್ ಪುಟ್ಟಿ ಪುಟ್ಟುತ್ತುರುಳ್ವ ನರರ ಮೇಲುರ್ಬಿ ಕಬ್ಬಂಗಳಂ ಬಿ
ತ್ತರಿಸುತ್ತುಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟುಪೋದರ್
ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯಲಕ್ಷ್ಮೀ
ವರನಾದಂ ಮತ್ತವಂಗತ್ಯಧಿಕ ಶಿವಕರೀಂದ್ರಂಗದಾರ್ ಸಾಟಿಯಪ್ಪರ್ (ರಾಜಶೇ, ೧–೧೯)

ಎಂದು ಹೇಳಿರುವುದು ಯಥಾರ್ಥವಾದುದು.

ಕನ್ನಡ ಸಾಹಿತ್ಯದ ಸೀಮಾಪುರುಷ ಹರಿಹರ.

* * *

**ಉದ್ಭಟಕಾವ್ಯ:** ಈ ಕಾವ್ಯದ ಕರ್ತೃ ಸೋಮರಾಜ. ಈತನು ರಾಜವಂಶಕ್ಕೆ ಸೇರಿದವನು. ಈತನ ಪ್ರಪಿತಾಮಹ ಚಂದ್ರವಂಶೋತ್ಪನ್ನನಾದ ತಿರುಮಲರಾಜ; ಪಿತಾಮಹ ರಾಯಣರಾಜ; ತಂದೆ ಇಂದುಶೇಖರರಾಜ. ಇವರು ಎಲ್ಲಿ ರಾಜ್ಯವಾಳುತ್ತಿದ್ದರು ಎಂಬುದು ತಿಳಿದುಬಂದಿಲ್ಲ. ವೀರಶೈವ ಮತಾವಲಂಬಿಗಳಾದ ಚೌಟರಾಜರ ಪರಂಪರೆಗೆ ಸೇರಿದವರಿರಬಹುದು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಪರಮಜ್ಞಾನಿ ಸೋಮರಾಜ, ವರವಾಣಿ ಸೋಮಭೂಮಿಶ್ವರ ಎಂದು ತನ್ನನ್ನು ವಿಶೇಷಿಸಿಕೊಂಡಿದ್ದಾನೆ. ಪೂರ್ವಕವಿಗಳಲ್ಲಿ ಹರಿಹರ, ಕೆರೆಯ ಪದ್ಮರಸ, ಪಾಲ್ಕುರಿಕೆ ಸೋಮನಾಥ ಮೊದಲಾದವರನ್ನು ಸ್ಮರಿಸಿದ್ದಾನೆ. ಅಲ್ಲಮಪ್ರಭುವನ್ನು ವಿಶೇಷವಾಗಿ ಸ್ತುತಿಸಿದ್ದಾನೆ.

"ಗುರುವಲ್ಲಮಾಂಕನಾಮಸ್ಮರಣಮನೊಂದೊಂದು ನೆವದೊಳಭಿನುತಿಗೈವೆಂ (೧–೨೯)
ಸುವಿಲಾಸಂಬಡೆದೊಪ್ಪುವಲ್ಲಮನೆ ಬೆಚ್ಚಿರ್ಕೆನ್ನ ಚಿತ್ತಾಬ್ಜದೊಳ್ (೧–೧೦)
ಅಲ್ಲಮಾಂಕವೆಸರಂ ತಳೆದುಜ್ವಲಿಪಾರ್ಯರಾಟ್ಸುಧಾರುಕ್ಜಯತೇಜನಂಘ್ರಿ
ಕಮಲಂಗಳನಾಂ ನೆಱೆಪೊತ್ತು ಪೇಳ್ದಪೆಂ" (೧–೧೧)

ಉದ್ಭಟಕಾವ್ಯಕ್ಕೆ ಶೃಂಗಾರರಸವೆಂಬ ಪರ್ಯಾಯನಾಮವಿದೆ. ಈ ಪರ್ಯಾಯನಾಮವನ್ನೇ ಕವಿ ತನ್ನ ಕಾವ್ಯದುದ್ದಕ್ಕೂ ಬಳಸಿದ್ದಾನೆ.

ಪ್ರತಿಆಶ್ವಾಸಾಂತ್ಯಗದ್ಯದಲ್ಲಿಯೂ "ಇದು ಸಮಸ್ತಸುರಕದಂಬಕವಿಜೃಂಭಿತ ಮಕುಟತಟಘಟಿತನವರತ್ನಪುಂಜ ಸಂಜಾತಪಿಂಜರಿತಮಂಜುಳಮಯೂಖಮಂಜರೀರಂಜಿತ ಶ್ರೀಗುರುವಿರೂಪಾಕ್ಷಪಾವನಪಾದನಖೋಚ್ಚಳಿತಪ್ರಭಾ ನಿಸ್ತಂದ್ರರುಂದ್ರಸಾಂದ್ರ ಚಂದ್ರಿಕಾಪಟಲಪಟುಲಂಪಟಚಕೋರಾಯಮಾಣ ಶ್ರೀಸೋಮರಾಜೇಂದ್ರ ವಿರಚಿತಮಪ್ಪ ಶೃಂಗಾರಸಾರಮಹಾಪ್ರಬಂಧದೊಳ್"

ಈ ರೀತಿ ಹೇಳಿಕೊಂಡಿದ್ದಾನೆ. ಇದರಲ್ಲಿ ಹನ್ನೆರಡು ಆಶ್ವಾಸಗಳಿವೆ. ಈ ಕಾವ್ಯವನ್ನು ಶಕ ೧೧೪೪ನೆಯ ಚಿತ್ರಭಾನುಸಂವತ್ಸರದಲ್ಲಿ ಎಂದರೆ ಕ್ರಿ.ಶ. ೧೨೨೨ರಲ್ಲಿ ರಚಿಸಿದಂತೆ ತಿಳಿಸಿದ್ದಾನೆ.

ಶೃಂಗಾರಸಾರದಲ್ಲಿ ಕುಮಾರಪಾಲ ಘೂರ್ಜರನ ಚರಿತ್ರೆ ನಿರೂಪಿತವಾಗಿದೆ. ಈ ಕುಮಾರಪಾಲನಿಗೆ ಉದ್ಭಟ ಎಂಬ ಹೆಸರೂ ಇರುವುದರಿಂದ ಇದಕ್ಕೆ ಉದ್ಭಟಕಾವ್ಯವೆಂಬ ಹೆಸರೂ ರೂಢಿಯಲ್ಲಿದೆ. ಸೋಮರಾಜನಿಗಿಂತ ಮೊದಲು ಹರಿಹರ ಉದ್ಭಟದೇವನ ರಗಳೆಯನ್ನು ಬರೆದಿದ್ದಾನೆ. ಸೋಮರಾಜನಾದ ಮೇಲೆ ಬಂದ ಬಸವಾಂಕ ಉದ್ಭಟದೇವ ಚರಿತೆಯನ್ನು ಬರೆದಿದ್ದಾನೆ. ಹರಿಹರ, ಬಸವಾಂಕರ ಕಾವ್ಯಗಳಲ್ಲಿನ ಕಥೆ ಒಂದೇ ತೆರನಾಗಿದೆ. ಆದರೆ ಸೋಮರಾಜ ಕೆಲವು ಹೊಸಪ್ರಕರಣಗಳನ್ನು ತನ್ನ ಕಾವ್ಯದಲ್ಲಿ ಸೇರಿಸಿದ್ದಾನೆ. (ಅವು ಇಂತಿವೆ: ಶುಕಸಂಭಾಷಣ, ಚಿದಂಗಚರಿತ್ರೆ, ನಿಘರ್ಜಾಸುರಸಂಹಾರ)

ಸೋಮರಾಜನ ಕಾವ್ಯಬಂಧವು ಲಲಿತವಾಗಿದೆ. ಸಂಸ್ಕೃತಭೂಯಿಷ್ಠವಾಗಿದೆ. ಅಪೂರ್ವ ಕನ್ನಡನುಡಿಗಳು ಕಂಡುಬರುತ್ತವೆ.

ಕೃತಿನಾಮವನ್ನು ತನ್ನ ಕವಿತಾಮಸಾಮರ್ಥ್ಯವನ್ನು ಈ ಮುಂದಿನ ಪದ್ಯಗಳಲ್ಲಿ ವರ್ಣಿಸಿದ್ದಾನೆ.

ಶೃಂಗಾರಸಾರಮೆಂದೀ
ಮಂಗಳಕೃತಿನಾಮಮಿೊಕೃತಿಗೆ ವಲ್ಲಭನು
ತುಂಗ ವಿರೂಪಾಕ್ಷಂ ಸುಧೆ
ಯಂ ಗೆಲಲೀಕೃತಿಯನುಸುರಿದಂ ಸೋಮನೃಪಂ (೧-೧೩)

ಪಂಪಾನಗರೀಶ್ವರನೀ
ಪೆಂಪಮರ್ದಿನಿಗಬ್ಬಕಾಣ್ಮನೀ ಸತ್ಕೃತಿಯನ
ಲಂಪಿಂದಂ ವಿರಚಿಸಿದನಾ
ತಂ ಪರಮಜ್ಞಾನಿ ಸೋಮನೆನೆ ಮೆಚ್ಚದರಾರ್ (೧-೧೫)

ಹರಿಹರ "ಮನುಜರ ಮೇಲೆ ಸಾವವರ ಮೇಲೆ" ಕೃತಿ ರಚಿಸಿ ಕೆಟ್ಟರು -ಎಂಬ ಧೋರಣೆಯನ್ನು ಸೋಮರಾಜನೂ ಅಂಗೀಕರಿಸಿರುವುದನ್ನು ಈ ಮುಂದಿನ ಪದ್ಯಗಳಲ್ಲಿ ನೋಡಬಹುದು.

ಕವಿತಾಪ್ರೌಢಿ ತನಗೆ ಸಂ
ಭವಿಸೆ ಶಿವಸ್ತವದೆ ಮುಕ್ತಿವಡೆಯದಜಸ್ರಂ
ಭವಿಜನಮಂ ಕೀರ್ತಿಸುವಾ
ಕವಿತೆಯೆ ದುಷ್ಕರ್ಮವಲ್ತೆ ವಸುಧಾತಳದೊಳ್ (೧-೨೭)

ಅದನಱಿದೊಲವಿಂದಂ ಲೋ
ಕದ ಜನರಂ ಪೊಗಳ್ದು ಪಾತಕಂಬಡೆಯದೆ ಸ
ನ್ಮುದದಿಂದೆಳೆವೆಱೆದಲೆಯನ
ಪದವಂ ಕೀರ್ತಿಸುವೆನುತ್ತಮರ್ ಮೆಚ್ಚುವಿನಂ (೧-೨೮)

ವೀರಶೈವ ಚಂಪೂಕೃತಿಗಳಲ್ಲಿ ಸೋಮರಾಜನ ಉದ್ಭಟಕಾವ್ಯ ರಸಭರಿತವಾದ ಒಂದು ಸತ್ಕಾವ್ಯವೆಂದು ಧಾರಾಳವಾಗಿ ಹೇಳಬಹುದು.

ಸೋಮರಾಜವಿರಚಿತಂ : ಉದ್ಭಟಕಾವ್ಯಂ, ಸಂಪಾದಕರು: ಆರ್. ಶ್ಯಾಮಶಾಸ್ತ್ರಿ, ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆ, ಮೈಸೂರು, ೧೯೨೧

* * *

ಪಂಪಾಸ್ಥಾನ ವರ್ಣನಂ: ಕ್ರಿ.ಶ. ಸು. ೧೪೩೦ರಲ್ಲಿದ್ದ ಚಂದ್ರಕವಿಯಿಂದ ರಚಿತವಾದುದು. ಇದಕ್ಕೆ ವಿರೂಪಾಕ್ಷಾಸ್ಥಾನ ವರ್ಣನೆ ಎಂಬ ಹೆಸರೂ ಕಂಡುಬರುತ್ತದೆ. ಈತನು ಪ್ರೌಢದೇವರಾಯನ ಆಸ್ಥಾನ ಕವಿಗಳಲ್ಲಿ ಒಬ್ಬನಾಗಿದ್ದನು. ಪ್ರೌಢದೇವರಾಯನ ಮಹಾಪ್ರಧಾನ ಗುರುರಾಯ

ಬಾ ವಚಸ್ಸುಧಾಸಾಗರ ಚಂದ್ರಶೇಖರ ಕವೀಶ್ವರಂ ನೀಂ ನೆಗಟ್ದಿಪ್ಪ
ಭಾಷೆಗಳ್ಗಾಗರಮಾದೆ ಕನ್ನಡದ ಬಿನ್ನಣಮಂ ನೆಱೆ ತೋಱವೇಳ್ಪು
ದಿಂಪಾಗಿರೆ ಹಂಪೆಯಾಳ್ದನೆಸೆವೋಲಗಮಂ ರಚಿಸು

ಎಂದು ಹೇಳಲು ತಾನು,

"ಹಂಪೆಯಾಳ್ದನೆಸೆವೋಲಗಮಂ ಪೊಸತಾಗಿ ಬಣ್ಣಿಪೆಂ"

ಎಂದು ತಿಳಿಸಿದ್ದಾನೆ.

"ಪಂಪಾಸ್ಥಾನ ವರ್ಣನಂ" ಒಂದು ಕಿರುಕೃತಿ. ಇದರಲ್ಲಿ ೩೬ ವಚನಭಾಗಗಳೂ ೫೯ ಕಂದ ವೃತ್ತಾದಿಗಳೂ ಇವೆ. ಹಂಪೆಯ ವಿರೂಪಾಕ್ಷನ ಆಸ್ಥಾನವನ್ನು ವರ್ಣಿಸಲಾಗಿದೆ. ಅಷ್ಟಾದಶವರ್ಣನೆಗಳಲ್ಲಿ ಸಾಧ್ಯವಾದಷ್ಟನ್ನು ಕವಿ ಚಿತ್ರಿಸಿದ್ದಾನೆ. ಈ ಕವಿಯ ಕಾವ್ಯಬಂಧ ಪ್ರೌಢವಾಗಿದೆ, ಮನೋಹರವಾಗಿದೆ. ತನ್ನ ಕಾವ್ಯದ ಉತ್ಕೃಷ್ಟತೆಯನ್ನು

ಅಲರ್ಗಣೆಯಿಂದಿಮ್ಮಡಿ ತಂ
ಬೆಲರಿಂ ಮೂವಡಿ ಬಸಂತದಿಂ ನಾಲ್ವಡಿ ಕಾ
ದಲರಿಂದೈವಡಿ ಮೋಹಿಪು
ದೆಲೆ ಚಂದ್ರಕವೀಂದ್ರ ನಿನ್ನ ಕನ್ನಡಕಬ್ಬಂ ॥ ೧೨ ॥

ನುಡಿ ಕಡು ನುಣ್ಪನಾಳೆ ಪದಬಂಧಮಗುಂದಲೆಯಾಗೆ ಭಾವವು
ಗ್ಗಡದ ಪೊಡರ್ಪನಪ್ಪೆ ರಸವುಕ್ಕುವ ಕಾಳ್ಪುರಮಾಗೆ ದೇಸಿ ದ
ಟ್ಟಡಿಯಡೆ ಜಾಣ್ಮೆ ಪೊಣ್ಮೆ ಸಭೆ ಸೈವೆಱಗಿಂ ತಲೆದೂಗೆ ಕಬ್ಬಮಂ
ಗಡಣಿಸಿ ಹಂಪೆಯಾಳ್ದನೆಸೆವೋಲಗಮಂ ಪೊಸತಾಗಿ ಬಣ್ಣಿಪೆಂ ॥ ೧೪ ॥

ಹೀಗೆ ಹೇಳಿಕೊಂಡಿದ್ದಾನೆ. ತನ್ನ ಪ್ರತಿಭೆಯನ್ನು ಪ್ರತಿಷ್ಠೆಯನ್ನೂ ಈ ಮುಂದಿನ ಪದ್ಯದಲ್ಲಿ ಸಾರಿದ್ದಾನೆ.

ಇಂದಿನ ಸತ್ಕವಿಪ್ರತತಿಗಿನ್ನಿವನಗ್ಗಳನೆಂದೆವೆಂದೆವಾ
ಸಂದೆಗಮೇಕೆ ನೋಡೆ ಪಳಕಬ್ಬಿಗರೊಳ್ ಪಡಿಯಿಟ್ಟೊಡಲ್ಲಿಯುಂ
ಕುಂದಿನಿತಿಲ್ಲದಂತೆ ಪೆಸರ್ವೆತ್ತವನೊರ್ವನೆ ಚಂದ್ರಶೇಖರಂ
ಸಂದು ಮಹಾಕವೀಂದ್ರನೆನುತಂ ಧರೆ ಬಣ್ಣಿಸೆ ಪೇಳ್ದೆನಿಂತಿದಂ ॥ ೯೬ ॥

ಹಂಪೆಯ ಹರಿಹರ ಕವಿಯ ಪ್ರಭಾವ ಈತನ ಮೇಲೆ ಸಾಕಷ್ಟಾಗಿದೆ. ಹರಿಹರನ ಗಿರಿಜಾಕಲ್ಯಾಣದ ಒಂದೆರಡು ಪದ್ಯಗಳನ್ನೂ ಪದ್ಯಭಾಗಗಳನ್ನೂ ಉದ್ಧರಿಸಿದ್ದಾನೆ. ಉದಾ: ಪೊಗೆದುದು ಪೊತ್ತಿದತ್ತು... (೫೩) (ಗಿರಿಜಾಕಲ್ಯಾಣ, ೮-೪೭)

ಈತನಿಗೆ ಸಂಗೀತ ನೃತ್ಯ ಕಲೆಗಳಲ್ಲಿ ವಿಶೇಷ ಆಸಕ್ತಿಯೂ ಪರಿಣತಿಯೂ ಇದ್ದಂತೆ ಈ ಕಾವ್ಯದಿಂದ ವಿದಿತವಾಗುತ್ತದೆ.

ಚಂದ್ರಕವಿ ತಾನು ಅಷ್ಟಭಾಷೆಗಳಲ್ಲಿ ಪ್ರವೀಣನಾಗಿದ್ದಂತೆ ಹೇಳಿಕೊಂಡಿದ್ದಾನೆ. ಆದರೆ ಈ ಅಷ್ಟಭಾಷೆಗಳು ಯಾವುವು ಎಂಬುದು ತಿಳಿದುಬಂದಿಲ್ಲ. ತನ್ನ ಕಾವ್ಯರಚನೆಗೆ ಕಾರಕನೂ ಪ್ರೇರಕನೂ ಆದ ಗುರುರಾಯ ಮಹಾಪ್ರಧಾನನನ್ನು ಮನದುಂಬಿ ಹೊಗಳಿದ್ದಾನೆ:

ಕಡಲುಡೆಯಾದ ಧಾರಿಣಿಯೊಳೊರ್ವನೆ ಬಲ್ಲನೊರ್ವನೇ ದಿಟಂ
ಕೊಡುವವನೊರ್ವನೇ ಪರಹಿತ ಪ್ರತಿಪಾಲಕನೊರ್ವನೇ ಜಸಂ
ಬಡೆದವನೊರ್ವನೇ ಸಕಲಸದ್ಗುಣಸಾಗರನೆಂಬ ಮೈಮೆ ಕ
ನ್ನುಡಿಸಿರೆ ಮತ್ತದೇವೊಗಳ್ವೆನಾಂ ಗುರುರಾಯ ಮಹಾಪ್ರಧಾನನಂ ॥ ೯೫ ॥

ಕೃತಿ ಚಿಕ್ಕದಾದರೂ ವರ್ಣನೆಯ ಸೊಬಗಿನಿಂದ 'ಪಂಪಾಸ್ಥಾನ ವರ್ಣನೆ'ಗೆ ಅಧಿಕ ಮಹತ್ವ ಪ್ರಾಪ್ತವಾಗಿದೆ.

ಪಂಪಾಸ್ಥಾನ ವರ್ಣನಂ : ಸಂ. ನ. ಕೃಷ್ಣಜೋಯಿಸ್, ಪ್ರಕಾಶಕರು: ಶರಣ ಸಾಹಿತ್ಯ ಗ್ರಂಥಮಾಲೆ, ಬೆಂಗಳೂರು, ೧೯೫೫

* * *

**ತ್ರಿಷಷ್ಠಿ ಪುರಾತನರ ಚರಿತ್ರೆ:** ಈ ಕಾವ್ಯದ ಕರ್ತೃ ಸುರಂಗಕವಿ. ಈತನ ಕಾಲ ಕ್ರಿ.ಶ. ಸು. ೧೫೦೦. ಈತನ ತಂದೆ ಸಂಗಮವಿಭು, ತಾಯಿ ಮಹದೇವಿ. ಪುಲಿಗೆರೆಯ ಸೋಮನಾಥನ ಅಂಕಿತದಲ್ಲಿ ತನ್ನ ಕೃತಿಯನ್ನು ಬರೆದಿದ್ದಾನೆ. ಈತನಿಗೆ ಕರ್ಣಾಟಕ ಕವಿಚಕ್ರವರ್ತಿ ಎಂಬ ಬಿರುದಿದ್ದಂತೆ ಆಶ್ವಾಸಾಂತ್ಯ ಗದ್ಯದಿಂದ ತಿಳಿದುಬರುತ್ತದೆ.

"ಇದು ಸಕಲಸುರನಿಕರ ಮುಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತ
ಪಾದಪಂಕಜ ಶ್ರೀಮತ್ಪುಲಿಗೆಱೆಯ ಪುರಾಧಿಪ ಶ್ರೀಸೋಮನಾಥ
ಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಠಿ-
ಪುರಾತನರ ಚಾರಿತ್ರದೊಳ್"

ತ್ರಿಷಷ್ಠಿ ಪುರಾತನರ ಚರಿತ್ರೆ ೬೩ ಆಶ್ವಾಸಗಳುಳ್ಳ ಒಂದು ಬೃಹದ್ಗ್ರಂಥ. ಈ ೬೩ ಆಶ್ವಾಸಗಳಲ್ಲಿ ೬೩ ಶಿವಭಕ್ತರ ಚರಿತೆ ವರ್ಣಿತವಾಗಿದೆ. ಉಪಮನ್ಯುಮುನಿ ಕಣಾದನಿಗೆ ಹೇಳಿದ ಈ ಚರಿತವನ್ನು ಲೈಂಗ್ಯಪುರಾಣದಲ್ಲಿದ್ದಂತೆ ತಾನು ಬರೆದುದಾಗಿ:

ಪದೆದೊದವಿರೆ ಲೈಂಗ್ಯಪುರಾ
ಣದೊಳಿರ್ದಂತಭವನಿತ್ತ ವರಮತಿಯಿಂ ಭೂ
ವಿದಿತಪುರಾತನಚರಿತೆಯ
ನುದಿತೋತ್ಸವದಿಂ ಸುರಂಗವರದಂ ಪೇಳ್ದಂ ॥ ೧-೪೪ ॥

ಹೇಳಿಕೊಂಡಿದ್ದಾನೆ. ತಮಿಳುನಾಡಿನ ಈ ಅರುವತ್ತುಮೂರು ಪುರಾತನರನ್ನು ಕುರಿತು ಹರಿಹರ ರಗಳೆಗಳನ್ನು ಬರೆದಿರುವುದು ಸರ್ವವಿದಿತವಾದುದು. ಸುರಂಗ ಈ ಶಿವಭಕ್ತರನ್ನು ಕುರಿತು ೬೩ ಆಶ್ವಾಸಗಳ ಚಂಪೂಕಾವ್ಯವನ್ನು ಹರಿಹರನ ಮಾರ್ಗದಲ್ಲೇ ಬರೆದಿದ್ದಾನೆ. ಹರಿಹರನಂತೆ ಈತನೂ ತನ್ನ ನಾಲಿಗೆಯನ್ನು ಗಿರೀಶಂಗೆ ಮಾರಿದಂತೆ:

ನೆಗಳ್ದ ಸುಪರ್ಣಶೈಲಮಿರೆ ಪುಲ್ಗಿರಿಯಂ ಹರಿಚಂದನದ್ರುಮಂ
ಸೊಗಸಿರೆ ಶಾಲ್ಮಲೀವಿಟಪಿಯಂ ಮೃಗರಾಜಮಿರಲ್ ವರಾಹಮಂ
ಪೊಗಳುವುದಲ್ಲೆನುತ್ತೆ ಮನುಜಸ್ತುತಿಯಂ ನೆಱೆಬಿಟ್ಟು ಲೀಲೆಯಿಂ
ಜಗವಱಿಯಲ್ ಸುರಂಗಕವಿ ನಾಲಗೆಯಂ ಗಿರಿಶಂಗೆ ಮಾಱಿದಂ ॥ ೧-೨೪)

ಈ ಪದ್ಯದಲ್ಲಿ ಸ್ಪಷ್ಟಪಡಿಸಿದ್ದಾನೆ. ತನ್ನ ಕಾವ್ಯದ ಆದಿಯಲ್ಲಿ ಬಸವ, ಚೆನ್ನಬಸವ, ಪ್ರಭುದೇವರನ್ನೂ ಸಂಸ್ಕೃತ ಕವಿಗಳಾದ ಭಲ್ಲಟ, ಬಾಣ, ಭವಭೂತಿ, ಬಿಲ್ಹಣ, ಭಾರವಿ, ಮಯೂರ, ಮಲ್ಹಣ, ಮಾಘ, ದಂಡಿ, ಕಾಳಿದಾಸ ಇವರೇ ಮೊದಲಾದವರನ್ನು ಅತ್ಯಂತ ಭಕ್ತಿಯಿಂದ ಸ್ಮರಿಸಿದ್ದಾನೆ.

ಸುರಂಗಕವಿ ತನ್ನ ಕಾವ್ಯದಲ್ಲಿ ೧೮ ಕಾವ್ಯಾಂಗಗಳನ್ನು ವರ್ಣಿಸಿರುವಂತೆ ಹೇಳಿಕೊಂಡಿದ್ದಾನೆ. ತನ್ನ ಕವಿತಾಚಾತುರ್ಯವನ್ನು ಈ ಪದ್ಯಗಳಲ್ಲಿ ವಿವರಿಸಿದ್ದಾನೆ:

ವರ್ಣಕ ವಸ್ತುಕ ಕವಿಜನ
ಕರ್ಣಾಭರಣಂ ಶಿವೈಕಸಮುದಯಪೀಯೂ
ಷಾರ್ಣವಚಂದ್ರನೆನಿಪ್ಪಂ
ಕರ್ಣಾಟಕ ಕವೀಂದ್ರನಮಮ ಸುಕವಿಸುರಂಗಂ (೧-೩೫)

ಧರಣೀಶರ್ ಮೆಚ್ಚೆ ನಾನಾ ಚತುರಕಲೆಗಳಂ ತೋಱೆ ವಿಭ್ರಾಜಿಪಂ ಸ
ದ್ಗುರುಪಾದಾಂಭೋಜಭೃಂಗಂ ನವರಸಕವಿತಾನರ್ತಕೀನೃತ್ಯರಂಗಂ
ಸರಸವ್ರತಾಂತರಂಗಂ ವಿಬುಧವಿನುತ ನಿಶ್ಶೇಷವಿದ್ಯಾಪ್ರಸಂಗಂ
ಭರತಾಂಗಂ ಶೈವತುಂಗಂ ಪ್ರತಿಭಟ ಕವಿವೇಶ್ಯಾಭುಜಂಗಂ ಸುರಂಗಂ (೧-೩೬)

ಸುರಂಗ ಕವಿಯ ಬಂಧ ಲಲಿತವಾಗಿದೆ, ಮನೋಹರವಾಗಿದೆ. ಪರಮಶಿವಭಕ್ತನಾದ ಸುರಂಗಕವಿ ತನ್ನ ಕಾವ್ಯದ ಉತ್ಕೃಷ್ಟತೆಯನ್ನು ಈ ಮುಂದಿನ ಪದ್ಯಗಳಲ್ಲಿ ವರ್ಣಿಸಿದ್ದಾನೆ.

ಶಿವಪದ ಭಕ್ತಿಯ ತಾಯ್ವನೆ
ನವರಸದೆಡೆ ಲಕ್ಷ್ಯಲಕ್ಷಣಂಗಳ ನೆಲೆಯಾ
ಯ್ತವನಿಗೆ ಸುರಂಗಕವಿಯು
ತ್ಸವದಿಂದಂ ಪೇಳ್ದ ಕಾವ್ಯಸಾರೋದ್ಧಾರಂ ॥ ೧-೩೮)

ಕಂದಂಗಳ್ ವಾಗ್ವನಿತೆಯ
ಕಂದಂಗಳ್ ಸಭ್ಯನವ್ಯಕಾವ್ಯಲಸನ್ಮಾ
ಕಂದಂಗಳ್ ನವರಸದು
ಕ್ಕಂದಂಗಳೆನಲ್ಕೆ ಕವಿಸುರಂಗಂ ಪೇಳ್ದಂ ॥ ೧-೪೧ ॥

ಸುರಂಗಕವಿಯ ತ್ರಿಷಷ್ಠಿ ಪುರಾತನರ ಚರಿತ್ರೆ ಮಹತ್ತಿನಿಂದಲೂ, ಬೃಹತ್ತಿನಿಂದಲೂ ಕನ್ನಡ ಚಂಪೂಕಾವ್ಯಗಳಲ್ಲಿ ಗಣನೀಯವಾಗಿದೆ.

ತ್ರಿಷಷ್ಠಿ ಪುರಾತನ ಚಾರಿತ್ರ : ಸಂ. ಆರ್.ಸಿ. ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೬

* * *

**ಚನ್ನವೀರ:** ಕ್ರಿ.ಶ. ೧೫೦೦- ಇವನು 'ಷಟ್ಸ್ಥಲ ವಲ್ಲಭ' ಎಂಬ ಕಾವ್ಯವನ್ನು ಬರೆದಿದ್ದಾನೆ. ಇವನನ್ನು ಚನ್ನವೀರ ಜಂಗಮದೇವ ಎಂದೂ ಕರೆಯುತ್ತಾರೆ.

ಷಟ್ಸ್ಥಲವಲ್ಲಭ ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸುವ ಕಾವ್ಯ. ಚಂಪೂಶೈಲಿಯಲ್ಲಿದೆ.

ಕಂಡು ಶಿವಭಕ್ತರ್ ಭೂ
ಮಂಡಲಕಿದು ಚೋದ್ಯರೆಂದು ಕೊಂಡಾಡುತಿರೆ
ಕುಂಡ ವಿಕುಂಡಲ ಶರಣರ
ಖಂಡೇಂದುವಂ ಧರಿಸಿದವನ ಜಾನಿಸುತಿರ್ದಂ

ನಾನಾ ದಿಕ್ಕಿನ ಭಕ್ತರ್
ನಾನಾ ಪಕ್ವಾನ್ನ ಫಳಾದಿಗಳಂ ತಂದ
ನೂನ ಸದ್ಭಕ್ತಿಯಿಂದಂ
ಜ್ಞಾನಿಯ ನೆರೆ ಪೂಜೆಮಾಡಿ ಪೊಗಳುತ್ತಿರ್ದದ್

ಕರ್ನಾಟಕ ಕವಿಚರಿತೆ-೩, ಅನುಬಂಧ. ಪುಟ ೪-೫

* * *

೧. **ಚೂಡಾಸ್ಥಾನ, ೨. ವೈಭೋಗರಾಜಾಸ್ಥಾನ:** ಈ ಎರಡು ಚಂಪೂ ಶತಕಗಳನ್ನು ರಚಿಸಿದವನು ಪ್ರಭುಗ. ಈತನ ಕಾಲ ಕ್ರಿ.ಶ. ಸುಮಾರು ೧೫೨೦. ಈತನು ಗುಮ್ಮಳಾಪುರದ ಶಾಂತೇಶನ ದೌಹಿತ್ರ; ಚಿಕ್ಕಾರ್ಯನ ಮಗ.

ಚೂಡಾಸ್ಥಾನದಲ್ಲಿ ೧೦೧ ಪದ್ಯಗಳಿವೆ: ಚೂಡೆಯ ಲಿಂಗ, ಶೌಂಡನಾಥ ಎಂದು ಕರೆಯಲ್ಪಡುವ ಈಶ್ವರನ ಆಸ್ಥಾನದ ವರ್ಣನೆಯನ್ನು ಇದರಲ್ಲಿ ಮಾಡಿದೆ. ಇದರ ಉತ್ಕೃಷ್ಟತೆಯ ಪದ್ಯ.

ಪುರುಳ ತವರ್ಮನೆ ಸೊಗಸಿನ
ಕರು ಸಕ್ಕದಗನ್ನಡಂಗಳಿಕ್ಕಿನಿಗಡಲೊ
ಗ್ಗರ ತೊಂಡುನುಡಿಯ ತಾಣಂ
ಸರಸತಿಯರ ನೆಲೆಯಿದಾಯ್ತು ಚೆಲ್ವಿನಂ ಕಬ್ಬಂ

ವೈಭೋಗ ರಾಜಾಸ್ಥಾನದಲ್ಲಿಯೂ ೧೦೧ ಪದ್ಯಗಳಿವೆ. ವೈಭೋಗರಾಜ ಎಂದು ಕರೆಯಲ್ಪಡುವ ಈಶ್ವರನ ಆಸ್ಥಾನ ವರ್ಣನೆ ಇದರಲ್ಲಿದೆ. ವೈಭೋಗರಾಜಾಸ್ಥಾನದಲ್ಲಿ: "ಮೊಲೆಗೊಯ್ದು ಪವಿತ್ರನಾರಿಗಾ ಕಂತುಹರಾಜ್ಞೆಯಿಂ ಮೊಲೆಯನಿತ್ತ" ವಿರಕ್ತ ಶಿರೋಮಣಿ ಶಾಂತನ ಮಕ್ಕಳು ಚೆನ್ನಬಸವ ಗಣಪಾರ್ಯರನ್ನೂ, ಕವೀಶ್ವರ ಪ್ರಸರಮಾ ಎಂಬಂತೆ ಸತ್ಯೇಂದ್ರನಾಕೃತಿಯಂ ಪೇಟ್ದು ನಿರಂತರಂ ಶಿವಕಥಾಸಂದೋಹಸೌಖ್ಯಂಗಳಂ ಕ್ಷಿತಿಯೊಳ್ ಬೋಧಿಸಿ ಎಸೆವ. ಮಲ್ಲಣಾರ್ಯನನ್ನೂ ಹೇಳಿ, ಇಂತಪ್ಪ ರಸಿಕ ಕವೀಶ್ವರರ್ ಪ್ರಭುಕವೀಶ್ವರನೇ ಬಾರೆಂದು ಮನ್ನಿಸಿ ಚಿಕ್ಕವಯಸ್ಸಿನಲ್ಲಿಯೇ ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಪ್ರಾವೀಣ್ಯವು ನಿನಗೆ ಉಂಟಾಗಿದೆ. ಹಿಂದೆ ಗುರುರಾಯನ ಆಜ್ಞೆಯಿಂದ ಚಂದ್ರಕವಿ ವಿರೂಪಾಕ್ಷಾಸ್ಥಾನವನ್ನು ರಚಿಸಿದಂತೆ ನೀನು ನಾನಾಲಂಕಾರ ಚಿತ್ರಭಾವರಸಗಳಿಂದ ವೈಭೋಗರಾಜಾಸ್ಥಾನವನ್ನು ರಚಿಸಬೇಕೆಂದು ಹೇಳಲು ಆ ಗ್ರಂಥವನ್ನು ರಚಿಸಿದಂತೆ ಹೇಳುತ್ತಾನೆ.

ಈ ಗ್ರಂಥದ ಗಣಪತಿಯ ಸ್ತುತಿ:

ಮುಂಬನಿಸೋರ್ಕನುಂಬ ಮಚಿದುಂಬಿಯ ಬಂಬಲಿನುಣ್ಮುವಿಂಚರಂ
ತುಂಬಿರೆ ಗರ್ಭಭೋಗಿ ಸಿರಿವೆತ್ತೆ ಫಣಾಮಣಿರೋಚಿ ದೇಹಮಂ
ತಾಂ ಬಳಸೊಪ್ಪೆ ರಕ್ತಪಟಮಂ ತಳೆದಂತಿರೆ ರಾಜಿಸಿರ್ಪ ಹೇ
ರಂಬನುಮೇಶಸೂನು ಮಿಗೆ ಮಾಡುಗೆ ಮತ್ಕೃತಿಗೊಲ್ದವಿಘ್ನಮಂ ॥

* * *

**ವೀರಭದ್ರ ವಿಜಯ:** ಕ್ರಿ.ಶ. ಸು. ೧೫೩೦ರಲ್ಲಿದ್ದ ವೀರಭದ್ರರಾಜನಿಂದ ರಚಿತವಾದ ಚಂಪೂಕಾವ್ಯ. ರಾಜವಂಶಕ್ಕೆ ಸೇರಿದ ಈತ ತನ್ನ ವಂಶಾವಳಿಯನ್ನು ಹೀಗೆ ಹೇಳಿಕೊಂಡಿದ್ದಾನೆ:

ಶ್ರೀಕಂಠವಂಶವಾರಿಧಿಕಾಬ್ಜನಾದ ಚಿಕ್ಕವಿರೂಪಾಕ್ಷ; ಈತನ ಮಗ ಕಾಮನೃಪ, ಈತನ ಹೆಂಡತಿ ವೀರಾಂಬೆ; ಈಕೆಯ ಪುಣ್ಯೋದರ ಕಮಲಾಕರದಲ್ಲೊಗೆದ ರಾಜಹಂಸನೂ ಪುಣ್ಯಶ್ಲೋಕನೂ ಶಿವಭಕ್ತಿಯುಕ್ತನೂ ಆದವನು ವಿರೂಪಾಕ್ಷನೃಪ, ಈತನ ಮಗನೇ ವೀರಭದ್ರರಾಜ. ಈತನ ತಂದೆ ವಿರುಪರಾಜ 'ತ್ರಿಭುವನ ತಿಲಕ' ಎಂಬ ಸಾಂಗತ್ಯ ಗ್ರಂಥವನ್ನು ಬರೆದಿದ್ದಾನೆ. ರಾಜವಂಶಕ್ಕೆ ಸೇರಿದ ಈತನಾಗಲಿ ಈತನ ಪೂರ್ವಜರಾಗಲಿ ಎಲ್ಲಿ ರಾಜ್ಯಭಾರ ಮಾಡುತ್ತಿದ್ದರೆಂಬ ವಿವರಗಳು ತಿಳಿದುಬಂದಿಲ್ಲ.

ವೀರಭದ್ರರಾಜ, ವೀರಭದ್ರ ವಿಜಯವನ್ನೇ ಅಲ್ಲದೆ ಪಾರ್ವತೀವಲ್ಲಭ ಶತಕ, ಉಮಾಮಹೇಶ್ವರ ಶತಕ, ಪ್ರಾಣನಾಥ ಶತಕ, ಶ್ರೀಕಂಠಸೋಮೇಶ್ವರ ಶತಕ, ಕಂದಶತಕ –ಎಂಬ ಪಂಚಶತಕಗಳನ್ನು ಬರೆದಿದ್ದಾನೆ.

ವೀರಭದ್ರ ವಿಜಯದಲ್ಲಿ ಹನ್ನೆರಡು ಆಶ್ವಾಸಗಳಿವೆ. ಗ್ರಂಥಾರಂಭದಲ್ಲಿ ಪಾರ್ವತೀ ಪರಮೇಶ್ವರರನ್ನು ಸ್ತುತಿಸಿದ್ದಾನೆ. ವೀರೇಶ, ನಂದೀಶ, ಭೃಂಗೀಶ, ವಿಘ್ನೇಶ್ವರ, ಷಣ್ಮುಖರನ್ನು ಬಲಗೊಂಡಿದ್ದಾನೆ. ಬಾಣ, ಹರೀಶ್ವರ, ಮಯೂರ, ಕಾಳಿದಾಸ, ಹಲಾಯುಧ, ಭೋಜ, ಮಲ್ಹಣ, ಕೇಶಿರಾಜ, ಉದ್ಭಟ –ಇವರನ್ನು ನಮಿಸಿದ್ದಾನೆ.

ವೀರಭದ್ರ ವಿಜಯದಲ್ಲಿ ವೀರೇಶನ ಚರಿತೆ ನಿರೂಪಿತವಾಗಿದೆ. ಈ ಕಾವ್ಯದಲ್ಲಿ ವರ್ಣನಾಭಾಗ ಪ್ರಧಾನವಾಗಿದೆ. ಹರಿಹರನಂತೆ ಈತನೂ ಶಿವನಲ್ಲದೆ ಅನ್ಯದೈವಸ್ತುತಿಮಾಡುವುದಿಲ್ಲ ಎಂದು ಸ್ಪಷ್ಟವಾಗಿ ಈ ಪದ್ಯದಲ್ಲಿ ಹೇಳಿದ್ದಾನೆ:

ಮನಸಿಜಮಾನಭಂಜನ ಪದಾಂಬುಜವಲ್ಲದೆ ಮಿಕ್ಕ ದೇವರಂ
ನೆನೆದಱಿಯಂ ಸಮಂತು ಪರಕಾಮಿನಿಯರ್ಕಳ ಸಂಗಮಂ ವಲಂ
ಕನಸಿನೊಳಾದೊಡಂ ಮಱೆದು ಕಂಡಱಿಯಂ ವಿರುಪೇಂದ್ರಸೂನುವೆಂ
ದೆನಿಸುವ ವೀರಭದ್ರನೆಸುತುರ್ವರೆಯೆಯ್ದೆ ಪೊಗಳ್ವುದಾತನಂ (೧-೩೯)

ತನ್ನ ಕಾವ್ಯದ ಉತ್ಕೃಷ್ಟತೆಯನ್ನೂ ಮೇಲ್ಮೆಯನ್ನೂ ಮುಂದಿನ ಪದ್ಯಗಳಲ್ಲಿ ತಿಳಿಯಪಡಿಸಿದ್ದಾನೆ.

ಇದು ಲಕ್ಕಣದಾಡುಂಬೊಲ
ನಿದು ಸಕ್ಕದದೇಳ್ಗೆ ಗಾಡಿ ನೆಲಸಿದ ನಾಡಿಂ
ತಿದು ದೇಶೀಯದ ಬೀಡೆನಿ
ಪುದು ನವರಸಭರಿತ ನವ್ಯಕಾವ್ಯಂ ದಿವ್ಯಂ (೧-೩೩)

ಇದು ಕವಿಗಳ ಕರ್ಣಾಮೃತ
ಮಿದು ರಸಿಕರಸಾಯನಂ ಬಳಿಕ್ಕಗಲ್ದೋಪ
ರ್ಗಿದು ಜವಳಿಗೊಳಿಪ ಮಂತ್ರದ
ಸದನಂ ತಾನೆನಿಸುತಿರ್ಪುದೀ ಸತ್ಕಾವ್ಯಂ (೧-೩೩)

ವೀರಭದ್ರ ವಿಜಯಂ : ಸಂ. ಡಿ. ಶ್ರೀನಿವಾಸಾಚಾರ್, ಎಂ.ಎಸ್. ಬಸವಲಿಂಗಯ್ಯ, ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆ, ಮೈಸೂರು, ೧೯೩೦

* * *

**ರಾಮನಾಥವಿಲಾಸ:** ಇದು ಅಪ್ರಕಟಿತ ಕೃತಿ. ಇದರ ಕರ್ತೃ ಸದಾಶಿವಯೋಗಿ. ಈತನ ಕಾಲ ಕ್ರಿ.ಶ. ೧೫೫೪. ಶಕವರ್ಷ ೧೪೫೫ನೆಯ ಆನಂದಸಂವತ್ಸರದಲ್ಲಿ ಎಂದರೆ ಕ್ರಿ.ಶ. ೧೫೫೪ರಲ್ಲಿ ಕೃತಿಯನ್ನು ರಚಿಸಿದಂತೆ ಕವಿಯೇ ಹೇಳಿಕೊಂಡಿದ್ದಾನೆ. ಈತನ ಪ್ರಪಿತಾಮಹ ಸೋಮಣಾರ್ಯ, ಪಿತಾಮಹ ಗಂಗಾಧರ, ತಂದೆ ಸಾಮವೇದಿ. ಕವಿಯೇ ಇದನ್ನು ಸ್ಪಷ್ಟಪಡಿಸಿದ್ದಾನೆ.

ವರಶೃಂಗಾರದ ಸೋಮಣಾರ್ಯತನುಜಂ ಗಂಗಾಧರಂ ತತ್ಸುತಂ
ಶರಣಾಗ್ರೇಶ್ವರ ಸಾಮವೇದಿ ಗುರುವಾದೀ ಮತ್ತನುಜೋತ್ತಮಂ
ಹರಪೂಜಾನಿರತಂ ಸದಾಶಿವಲಸನ್ನಾಮಂ ಮಹಾಕಾವ್ಯ ನಿ
ಸ್ತರಣ ಪ್ರೌಢನಶೇಷ ಸದ್ಗುಣಧಿಯೆಂಬೆಲ್ಲರ್ ಮೊಗಳ್ದರ್ ಬುಧರ್

ರಾಮನಾಥವಿಲಾಸದಲ್ಲಿ ೧೬ ಉಲ್ಲಾಸಗಳಿವೆ. ಇದರ ಗ್ರಂಥ ಸಂಖ್ಯೆ ೪೩೦೦. ಈ ಕಾವ್ಯದ ಕೆಲವೆಡೆ ಷಟ್ಪದಿಗಳೂ ಬಳಕೆಯಾಗಿವೆ. ಇದಕ್ಕೆ ರಾಮನಾಥ ಗುರುಚರಿತೆ ಎಂಬ ಹೆಸರೂ ಇದೆ. ಈ ಕಾವ್ಯದ ಆದಿಯಲ್ಲಿ:

"ಸಮಸ್ತವಿಷಯವಿಶ್ರುತವಿನೂತನಾಗಣ್ಯಪುಣ್ಯಪ್ರದೇಶ
ಮಾದ ಹೊಯ್ಸಳರಾಜ್ಯದೊಳೊಪ್ಪುತ್ತಿರ್ಪ ಮುದ್ರಾಪುರದೊಳ್
ತತ್ಪುರವಾಸಿಯಾದ ಸಕಲಬ್ರಹ್ಮಾಂಡಪರಿಪೂರ್ಣಚತುರ್ದಶ
ಭುವನಾಧೀಶ್ವರಶ್ರೀರಾಮೇಶ್ವರಲಿಂಗಮೂರ್ತಿಯೆಂ
ವೀರಶೈವದೀಕ್ಷೆಯಂ ಪಡೆದುದಂ ಪುಸಿಯೆಂದು ತಿಳಿದು
ಶಂಕೆಯ ಮಾಡಿದ ಶೈವರ್ಗೆಯಾ ರಾಮೇಶ್ವರಲಿಂಗಮಂ
ಸಾಕ್ಷಿಯಿಂ ನುಡಿಯಿಸಿ ಮೆಱೆದು ಭೂಲೋಕದೊಳಾ
ವೀರಶೈವಮತಮೆ ವೇದಾಗಮಶಾಸ್ತ್ರಪುರಾಣಂಗಳೊ-

ಉತ್ತರವೆಂಬುದಂ ಪ್ರಾಚುರ್ಯಂಗೈದ ರಾಮನಾಥಾಚಾರ್ಯರ
ಚಾರಿತ್ರಮಂ ಪೇಳ್ವೀ ರಾಮನಾಥವಿಲಾಸವೆಂಬ ಪೆಸರನುಳ್ಳ
ಮಹಾವಸ್ತುಕಪ್ರಬಂಧ"

ಎಂದು ಕಾವ್ಯವಸ್ತುವನ್ನು ತಿಳಿಸಲಾಗಿದೆ. ಅದಾದ ಮೇಲೆ ಕವಿ ರಾಮಣಾಚಾರ್ಯನನ್ನು ಪಂಡಿತಾರಾಧ್ಯರನ್ನೂ ಸ್ತುತಿಸಿದ್ದಾನೆ. ಅಲ್ಲದೆ ರಾಮಣಾಚಾರ್ಯವಂಶೋದ್ಭವನಾದ ಪ್ರಭುದೇಶಿಕರನ್ನು ಹೊಗಳಿದ್ದಾನೆ. ತನ್ನ ಕಾವ್ಯದ ಉತ್ಕೃಷ್ಟತೆಯನ್ನು:

ನವರಸಭಾವಂ ನವರೀತಿಗಳ್ ಗುಣಗಳಂ ಗಾಂಭೀರ್ಯ ಸಾರಾರ್ಥಗೌ
ರವ ಮಾಧುರ್ಯ ಪದಪ್ರಯೋಗ ಫಣಿತಿ ವ್ಯಂಗಂ ಕಲಾಪ್ರೌಢಿಮಾ
ರ್ದವ ತತ್ಸಂಧಿ ಸಮಾಸಚಿತ್ರ ರಚನಾಸೌಕರ್ಯ ಸಂದರ್ಭ ಸೌ
ಷ್ಠವಚಾತುರ್ಯಚಮತ್ಕೃತಿಪ್ರಥಿತಮಿೂ ಮತ್ಕಾವ್ಯಮುದ್ಯದ್ದೃಶಂ ॥

ಎಂದು ಹೇಳಿಕೊಂಡಿದ್ದಾನೆ. ಈತನ ಕಾವ್ಯಬಂಧ ಪ್ರೌಢವಾಗಿದೆ. ಎಲ್ಲಾ ಉಲ್ಲಾಸಾಂತ್ಯ ಗದ್ಯಭಾಗಗಳಿಂದ ಕವಿಕುಲ ಸಾರ್ವಭೌಮ, ಸರ್ವಜ್ಞ ಎಂಬ ಬಿರುದುಗಳಿದ್ದಂತೆ ವ್ಯಕ್ತವಾಗುತ್ತದೆ:

"ಇದು ಶ್ರೀಮದಖಿಲಭುವನಭವನಾಂತರ್ಗತಾನಂತವಿಮಲತರ
ವಿಚಿತ್ರವಿದ್ರತ್ಕವಿಕುಲಸಾರ್ವಭೌಮಸರ್ವಜ್ಞಸದಾಶಿವ-
ಯೋಗೀಶ್ವರವಿರಚಿತಮಾದ ರಾಮನಾಥವಿಲಾಸಮೆಂಬ
ಮಹಾಪ್ರಬಂಧದೊಳ್"

ಕೆಎ ೪೩೨/೧ : ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ : ಏಳನೆಯ ಸಂಪುಟ, ಪು. ೫೬೮, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೦

**ಕರ್ನಾಟಕ ಕವಿಚರಿತೆ:** ಭಾಗ-೨, ಪು. ೨೨೨-೨೨೪, ಆರ್. ನರಸಿಂಹಾಚಾರ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೩

* * *

**ರಾಜೇಂದ್ರ ವಿಜಯ:** ಈ ಕಾವ್ಯದ ಕರ್ತೃ ಮುರಿಗೆ ದೇಶಿಕೇಂದ್ರ. ಈತನ ಕಾಲ ಕ್ರಿ.ಶ. ಸು. ೧೫೬೦. ಮುರಿಗೆ ದೇಶಿಕೇಂದ್ರರು ಬಿಜಾಪುರ ಜಿಲ್ಲೆಯ ಮುರಿಗೆ ಮಠಕ್ಕೆ ಪೀಠಾಧಿಕಾರಿಯಾಗಿದ್ದರೆಂದು ತಿಳಿದುಬರುತ್ತದೆ.

ರಾಜೇಂದ್ರ ವಿಜಯದಲ್ಲಿ ೯ ಪ್ರಕರಣಗಳೂ ೭೫೩ ಪದ್ಯಗಳೂ ಇವೆ. ಈ ಕೃತಿಗೆ ಹಮ್ಮಿರಕಾವ್ಯ, ಮನುರಾಜನ ಕಾವ್ಯ ಎಂಬ ಪರ್ಯಾಯನಾಮಗಳೂ ಕಂಡುಬರುತ್ತವೆ. ಈ ಕಾವ್ಯದಲ್ಲಿ ಮಲಪ್ರಹಾರಿ ನದಿಯ ತೀರದಲ್ಲಿರುವ ಹಮ್ಮೀರಪುರ ಅಥವಾ ಪಟ್ಟಶಿಲಾಪುರ ಎಂಬ ನಗರದ ರಾಜನಾದ ತ್ರೈಲೋಕ್ಯಚೂಡಾಮಣಿಯ ಮಗ ಹಮ್ಮೀರನ ಚರಿತ್ರೆ ನಿರೂಪಿತವಾಗಿದೆ. ಈ ಹಮ್ಮೀರನಿಗೆ ರಾಜೇಂದ್ರ, ಮನುರಾಜ, ಅನಿಮಿಷೇಂದ್ರ ಎಂಬ ಹೆಸರುಗಳೂ ಇವೆ. ಚೆನ್ನಬಸವಣ್ಣನು ಶರಣರಿಗೂ ಪ್ರಭುದೇವರು ಗೊಗ್ಗಯ್ಯ, ಸಿದ್ಧರಾಮ, ಬಸವಣ್ಣನವರಿಗೂ ಹೇಳಿದ ಕಥೆಯನ್ನು ಕಾವ್ಯರೂಪವಾಗಿ ಬರೆದಂತೆ.

"ಅಂತು ಗೊಗ್ಗಯ್ಯಂಗೆ ಸಿದ್ಧರಾಮಯ್ಯಂಗಂ ಬಸವರಾಜದೇವರ್ಗಂ
ನಿರಂಜನ ಪ್ರಭುಸ್ವಾಮಿ ನಿರೂಪಿಸಿದ ಅನಿಮಿಷದೇವರ
ಚರಿತ್ರವಂ ಕಾವ್ಯಮಾಗೆ ಪೇಳ್ದೆಂ"

ಎಂದು ಹೇಳಿಕೊಂಡಿದ್ದಾನೆ. ತನ್ನ ಕಾವ್ಯದ ಬಗೆಗೆ ಹೀಗೆ ಉಸುರಿದ್ದಾನೆ.

ಕೃತಿಯಂ ಪರಶಿವಭಕ್ತಿಗೆ
ರತಿಯಂ ರಾಜೇಂದ್ರ ವೀರಚಿದ್ಘನ ಚರಿತೋ
ನ್ನತಿಯಂ ಶಿವಮಹಿಮೆಯ ಸಂ
ಗತಿಯಂ ಶಿವಶರಣರೊಲ್ದು ಕೆಯ್ಕೊಳ್ವುದಿದಂ ॥ ೧-೨೩ ॥

ವ್ಯಸನಾಶನಕಾಂಕ್ಷೆಗೆ ತಾಂ
ಪುಸಿಯಂ ಗಂಟಿಕ್ಕಿ ನೀಚದೈವಂಗಳ ಮೇ
ಲೆಸಗುವ ಡಂಬಕವಿದ್ಯೆಯ
ರಸವಲ್ತಿದು ನಿತ್ಯಸತ್ಯ ತತ್ತ್ವವಿಚಾರಂ ॥ ೧-೨೪ ॥

ಮುರಿಗೆ ದೇಶಿಕೇಂದ್ರರು ಪ್ರಕಾಂಡ ಪಂಡಿತರು. ಉಭಯಭಾಷಾವಿಶಾರದರು. ಈ ಕಾವ್ಯ ಕಬ್ಬಿಣದ ಕಡಲೆಯಂತಿದೆ. ಸಂಸ್ಕೃತಭೂಯಿಷ್ಠವಾಗಿದೆ. ಈ ಕಾವ್ಯವನ್ನು ಅರ್ಥಮಾಡಿಕೊಳ್ಳಲು ಕನ್ನಡ ಸಂಸ್ಕೃತ ಭಾಷೆಗಳೆರಡರಲ್ಲೂ ಸಾಕಷ್ಟು ಪರಿಶ್ರಮ ಪಡೆದಿರಬೇಕಾಗುತ್ತದೆ. ಮುರಿಗೆ ದೇಶಿಕೇಂದ್ರರು ಲೀಲಾಜಾಲವಾಗಿ ಕೃತಿಯನ್ನು ರಚಿಸಿಕೊಂಡು ಹೋಗಿದ್ದಾರೆ. ಅವರ ಅಪಾರ ಪಾಂಡಿತ್ಯವಾಹಿನಿಯಲ್ಲಿ ಹಲವಾರೆಡೆ ಪ್ರಾಸಸ್ಥಾನಗಳು ಕೊಚ್ಚಿಕೊಂಡು ಹೋಗಿವೆ:

ಪ್ರತಿ ಪ್ರಕರಣದ ಅಂತ್ಯದಲ್ಲಿ ಬರುವ ಗದ್ಯ ಇದು:

"ಇದು ಮಧುಭಂಜನಾರ್ಜುನೋದರ ಪುರಂದರ ಪುರೋಗಮ
ನಾನಾ ಸುರೋರಗನಿಕರನವೀನಸುರುಚಿರಪ್ರಚುರಾನರ್ಘ್ಯ
ಮಣಿಗಣಖಚಿತರಚನೋತ್ತುಂಗಶೃಂಗಾರಸಾರಕೋಟಿ
ಕೋಟೀರಸ್ಫಾರರುಚಿಕದಂಬಪ್ರತಿಬಿಂಬಿತವಿಮಳವಿಳಸಿತ
ನಖಮುಕುರರಾಜಿರಾಜಿತಸ್ಫುರಣಚರಣಾರವಿಂದ
ಚಂದ್ರಶೇಖರ ಪರಮಶಿವಶರಣ ರಾಜೇಂದ್ರ ಹಮ್ಮಿರ
ವಿಕ್ರಮಾತುಳ ಪ್ರಬಂಧದೊಳ್"

**ಹಮ್ಮಿರ ಕಾವ್ಯ (ರಾಜೇಂದ್ರ ವಿಜಯ):** ಸಂ. ಎಂ.ಎಸ್. ಸುಂಕಾಪುರ, ಪ್ರಕಾಶಕರು: ಸುಕುಮಾರ ಕಾರ್ಯಾಲಯ, ಶಿವಯೋಗ ಮಂದಿರ, ಬದಾಮಿ ತಾಲ್ಲೂಕು, ೧೯೫೭

* * *

**ಭೈರವೇಶ್ವರ ಪುರಾಣ:** ಸಿದ್ಧಲಿಂಗ ಶಿವಯೋಗಿ ವಿರಚಿತವಾದುದು. ಇದು ಅಪ್ರಕಟಿತ; ಸಮಗ್ರಕೃತಿ ಉಪಲಬ್ಧವಿಲ್ಲ. ಈತನ ಕಾಲ ಕ್ರಿ.ಶ. ಸು. ೧೬೦೦. ಈತನಿಗಿಂತ ಹಿಂದೆ ಇದ್ದ ನಂಜಯ್ಯನು ವರ್ಣಕವಾಗಿ ರಚಿಸಿದ್ದ ಕೃತಿಯನ್ನು ತಾನು ವಸ್ತುಕವಾಗಿ ರಚಿಸಿದಂತೆ ಹೇಳಿಕೊಂಡಿದ್ದಾನೆ.

ಪೂರ್ವಕವಿಗಳಲ್ಲಿ ಹರಿಹರ, ರಾಘವಾಂಕ, ಶಂಕರ, ಮಾಯಿದೇವ, ಮಯೂರ, ಬಾಣ, ಮಲಯರಾಜ, ಭೀಮಕವಿ ಮೊದಲಾದವರನ್ನು ಸ್ಮರಿಸಿದ್ದಾನೆ. ಹರಿಹರನಂತೆ ಈತನೂ ನರರನ್ನೂ ಸುರರನ್ನೂ ಸ್ತುತಿಸುವುದಿಲ್ಲ ಎಂದು ಸಾರಿದ್ದಾನೆ.

ಗಣಂಗಳೇಳೇಳ್ಗೆಯಂ.......
ರಸನೆ ದಣಿವಂತೆ ಕೀರ್ತಿಸಿ
ಯೊಸೆದವರ ಕೃಪಾಬ್ಧಿಯಲ್ಲಿ ಮುಳುಗುವೆವಲ್ಲದೆ
ಪಶುನರರ ಸುರರ ಕೀರ್ತಿಸಿ
ವಸವಲ್ಲದ ನಿರಯದಲ್ಲಿ ಮುಳುಗಲ್ಕಾರೆಂ ॥

ಭೈರವೇಶ್ವರಪುರಾಣಕ್ಕೆ ರಾಜೇಂದ್ರವಿಜಯಪುರಾಣ ಎಂಬ ಪರ್ಯಾಯನಾಮವೂ ಇದೆ. ಇದರ ಗ್ರಂಥಪ್ರಮಾಣ ಎಷ್ಟೆಂಬುದು ತಿಳಿಯದು. ಉಪಲಬ್ಧ ಹಸ್ತಪ್ರತಿಯಲ್ಲಿ ೨೧ನೆಯ ಆಶ್ವಾಸದ ಸ್ವಲ್ಪ ಭಾಗದವರೆಗಿದೆ.

ಆಶ್ವಾಸಾಂತ್ಯ ಗದ್ಯ:

"ಇದು ವಿಧುಪಂಕಜೋದ್ಭವ ಸುರೇಶ್ವರ ಮುಖ್ಯ ಸುರನರೋರಗ
ಶೃಂಗಾರಾತಿಶಯಾನೇಕ ಮಕುಟತಟಘಟಿತ ನಿತ್ಯನಿರ್ಮಳ
ನಿರ್ವಿಕಲ್ಪ ಸತ್ಯಸ್ವಯಂ ಪ್ರಕಾಶಾದ್ವಿತೀಯ ಪರಮೇಷ್ಠಿಲಿಂಗ
ಚರಣಾರವಿಂದ ದ್ವಂದ್ವ ಶಿರಶ್ಶೇಖರ ಸಮ್ಯಜ್ಞಾನ ಸಂಪನ್ನ
ಸಿದ್ಧಲಿಂಗಶಿವಯೋಗಿ ವಿರಚಿತ ಶ್ರೀಮದ್ರಾಜೇಂದ್ರವಿಜಯ
ಮಹಾಪುರಾಣದೊಳ್"

ಭೈರವೇಶ್ವರಪುರಾಣದಲ್ಲಿ ಭೈರವರಾಜನೆಂಬ ಶಿವಭಕ್ತನ ಕಥೆ ನಿರೂಪಿತವಾಗಿದೆ.

ಈ ಕಾವ್ಯದಲ್ಲಿನ ಜೈನವೀರಶೈವಸಂವಾದದ ಕೆಲವು ಪದ್ಯಗಳು ಸ್ವಾರಸ್ಯವಾಗಿವೆ:

ಜರೆವುದು ಮತಮೇ ದೈವವ
ಧರೆಗೀ ಜಿನನಿಂದಲಧಿಕದೈವಗಳೊಳವೇ
ಹರನಾದೊಡೆ ಸಂಸಾರಿಯೆ
ಅರುಹಂ ಸಂಸಾರರಹಿತನಿವಗವ ಸರಿಯೇ ॥

ಎನೆ ಕೋಪ ಕೊನರೆ ಕೇಳೆಲೊ
ಜಿನ ಪೆಣ್ಣಿಳಿದನಿತಕಾಯ್ತೆ ದೇವತ್ವಂ ಭೀ
ಷ್ಮನು ಹನುಮರುಳಿಯರೇ ವಧು
ವನು ಶಿವಗವರೆಣೆಯೇ ಮರುಳೆ ತಿಳಿಯದೆ ನುಡಿವೈ ॥

ಗೆಲ್ಲಂ ನಮಗೆಲ್ಲಂ ಜಿನ
ನಲ್ಲದೆ ಶಿವನಿಲ್ಲವೆಂದು ವಾದಿಸೆ ಜೈನರ್
ಕಲ್ಲಯನೆಂಬಾ ಶರಣಂ
ಹಲ್ಲಂ ಮುರಿವಲ್ಲಿ ಬಿನ್ನವೆಲ್ಲಿರ್ದನೊ ಪೇಳ್ ॥

* * *

**ಶಿವಲಿಂಗಚಾರಿತ್ರ:** ಕ್ರಿ.ಶ. ಸುಮಾರು ೧೬೫೦ ರಲ್ಲಿದ್ದ ಶಾಂತವೀರ ದೇಶಿಕನಿಂದ ರಚಿತವಾದುದು. ಈತನು ಶಿವಲಿಂಗಚಾರಿತ್ರವನ್ನೇ ಅಲ್ಲದೆ ಶಿವಗಣಚಾರಿತ್ರ, ಸೌಂದರೇಶ್ವರನ ಯಕ್ಷಗಾನ, ಶಿವಮಹತ್ವ, ಸಾರಶಿಖಾಮಣಿ ಸಂಗ್ರಹ ಶತಕ, ಗಿರಿಜಾದೇವಿಯ ಸಂಕೀರ್ತನ ಎಂಬ ಕೃತಿಗಳನ್ನು ಬರೆದಿದ್ದಾನೆ. ಈತನ ಸ್ಥಳ ಕೆಣೆಯನೂರು. ಈತನಿಗೆ ಪರಕವಿ ಗಜೇಂದ್ರಕಂಠೀರವ, ಶಿವಕವಿಭೃತ್ಯ ಎಂಬ ವಿಶೇಷಣಗಳಿವೆ. ಈತನ ವಂಶಪರಂಪರೆ: ಶಿವಲಿಂಗಾರ್ಯನ ಮಗ ವೀರೇಶಾರ್ಯ, ಈತನ ಮಗ ಚೆನ್ನವೀರೇಶ್ವರ, ಈತನ ಮಗನೇ ಶಾಂತವೀರದೇಶಿಕ. ಈತನ ತಂದೆಗೆ "ಸರಸಕವಿಕರ್ನಾಟಚಕ್ರೇಶ್ವರ" ಎಂಬ ಬಿರುದಿರುವುದರಿಂದ ಈತನೂ ಕೃತಿರಚನೆ ಮಾಡಿರಬಹುದೆಂದು ಊಹಿಸಬಹುದು.

ಅಲ್ಲದೇ ಈ ಚೆನ್ನಾರ್ಯ ಚಾಮರಾಜೇಂದ್ರನ ಸಭೆಯಲ್ಲಿ ರಾಮದೀಕ್ಷಿತನನ್ನು ವಾದದಲ್ಲಿ ಜಯಿಸಿದಂತೆ:

ಚಾಮರಾಜೇಂದ್ರನ ಸಭೆಯೊಳು ತರ್ಕಿಸುವ
ರಾಮದೀಕ್ಷಿತನ ಭಂಜಿಸಿದ
ಶ್ರೀಮದ್ವೀರಣಾರ್ಯ ತನುಜಗುಣ
ಧಾಮ ಚೆನ್ನಾರ್ಯ

ಈ ಪದ್ಯದಿಂದ ತಿಳಿದುಬರುತ್ತದೆ.

ಶಾಂತವೀರದೇಶಿಕ

"ಆನಂದಾಗಮ ವೇದ ಶಂಕರ ಪುರಾಣಾರ್ಥಜ್ಞ ಸತ್ಕೋವಿದಂ,
ನಾನಾ ಕಾವ್ಯ ವಿಚಾರಪೂರ ಕವಿತಾ ಕರ್ಣಾಟಚಕ್ರೇಶ್ವರಂ"

ಎಂದು ತನ್ನನ್ನು ವಿಶ್ಲೇಷಿಸಿಕೊಂಡಿದ್ದಾನೆ.

ಶಿವಲಿಂಗಚಾರಿತ್ರ ೩ ಆಶ್ವಾಸಗಳೂ ೧೨೪ ಪದ್ಯಗಳೂ ಉಳ್ಳ ಒಂದು ಸಣ್ಣಗ್ರಂಥ. ಇದರಲ್ಲಿ ಪಂಡಿತಾರಾಧ್ಯ ವಂಶೋದ್ಭವನಾದ ಶಿವಲಿಂಗಾರ್ಯನ ಚರಿತ್ರೆ ನಿರೂಪಿತವಾಗಿದೆ. ಈ ಕಾವ್ಯದಲ್ಲಿನ ಹೇಮಾಚಲ ವರ್ಣನೆಯ ಒಂದು ಪದ್ಯ ಇದು:

ವಸುಧಾಕಾಮಿನಿ ವಸ್ತುವಂ ಗಳಿಸಿ ತಂದೀಶಾರ್ಪಣಕ್ಕೆಂದು ಸಂ
ತಸದಿಂದೊಟ್ಟಿದ ರಾಸಿಯೋ ಧರೆಗಿದೇ ಸನ್ಮಧ್ಯವೆಂದಬ್ಜಜಂ
ಪೊಸಮಾಣಿಕ್ಯದ ಕಂಭಮಂ ನಿಲಿಸಿದೋಲ್ ಹೇಮಾಚಲಂ ಕಣ್ಗೆ ಬೆ
ಕ್ಕಸ ಪುಟ್ಟಲ್ಕೊಲವಾಂತುವೊಪ್ಪಿಹುದದಂ ಸಂಕೀರ್ತಿಸಲ್ ಶಕ್ಯಮೆ.

* * *

**ನನ್ನಯ್ಯಗಳ ಚಾರಿತ್ರ:** ಕ್ರಿಶ. ಸು. ೧೬೫೦ರಲ್ಲಿದ್ದ ಕವಿ ಮಾದಣ್ಣನಿಂದ ರಚಿತವಾದುದು. ಈತನ ತಂದೆ ಅಲ್ಲಪ, ತಾಯಿ ಮಲ್ಲಿಯಕ್ಕ, ಗುರು ರಾಮನಾಥ. ಈತನ ಸ್ಥಳ ವಾಮತಿರಪುರ.

ನನ್ನಯ್ಯಗಳ ಚಾರಿತ್ರದಲ್ಲಿ ೫ ಸಂಧಿಗಳಿವೆ. ಬಸವಣ್ಣನ ಸಮಕಾಲೀನನಾದ ನನ್ನಯ್ಯ ಎಂಬ ಶಿವಭಕ್ತನ ಚರಿತ್ರೆ ಇದರಲ್ಲಿ ನಿರೂಪಿತವಾಗಿದೆ. ಒಡ್ಡಿಯ ದೇಶದ ಕರ್ಣಿಕಾಪುರ ವಾಸಿಯಾದ ನನ್ನಯ್ಯನು ತನ್ನ ಗುರುವಾದ ಸುಜ್ಞಾನಿಯ ತಲೆ ಹೋಯಿತೆಂದು ಭ್ರಮಿಸಿ ತನ್ನ ತಲೆಯನ್ನು ಕತ್ತರಿಸಿಕೊಳ್ಳುವುದಕ್ಕೆ ಪ್ರಯತ್ನಿಸಿದಾಗ ಇವನ ಗುರುಭಕ್ತಿಗೆ ಮೆಚ್ಚಿ ಶಿವನು ಇವನನ್ನು ಕೈಲಾಸಕ್ಕೊಯ್ದನು.

ಕಾವ್ಯದ ಆದಿಯಲ್ಲಿ ಮುದ್ರಾಪುರದ ಪ್ರಸನ್ನ ರಾಮೇಶ್ವರ, ಪಾರ್ವತಿ, ಗಣಪತಿ, ಸುಬ್ರಹ್ಮಣ್ಯ, ಸರಸ್ವತಿ ಇವರುಗಳನ್ನು ಸ್ತುತಿಸಿದ್ದಾನೆ. ತರುವಾಯ ಬಸವಣ್ಣನೇ ಮೊದಲಾದ ಪುರಾತನರನ್ನು ಸ್ತುತಿಸಿದ್ದಾನೆ.

ಗ್ರಂಥದ ವಿಷಯವಾಗಿ ಹೀಗೆ ಹೇಳಿದ್ದಾನೆ:

ಗುರುಚರಣಭಕ್ತಿ ಸುಸ್ಥಿರ
ಸಿರಿಯಿದು ಗುರುಭಕ್ತಿವನಧಿವರ್ಧನ ರಜನೀ
ಕರವಿದು ದುರ್ಗತಿತಮ ಭಾ
ಸ್ಕರನಿದು ನಿರಯಾದ್ರಿ ಕುಲಿಶಧರನೀಚರಿತಂ ॥

ಕೊಳನಂ ಹಂಪೆಯ ನೈದಿಲ
ನಳಿನವ ಶುಕಪಿಕಮಯೂರತತಿಯಂ ಮಂದಾ
ನಿಲನಂ ನೆಲನಂ ವರ್ಣಿಪ
ಗಲಭೆಯ ಕೃತಿಯಲ್ಲಮಿಾಶಶರಣಚರಿತ್ರಂ ॥

* * *

**ರಾಜಶೇಖರ ವಿಳಾಸ : ಬಸವರಾಜವಿಜಯ : ಶಬರಶಂಕರ ವಿಳಾಸ :** ಈ ಮೂರೂ ಚಂಪೂಕೃತಿಗಳ ಕರ್ತೃ ಷಡಕ್ಷರಿ. ಈತನು ಈ ಕನ್ನಡ ಕೃತಿಗಳನ್ನೇ ಅಲ್ಲದೆ; ಕವಿಕರ್ಣರಸಾಯನ, ಭಕ್ತಾಧಿಕ್ಯರತ್ನಾವಳಿ, ಶಿವಾಧಿಕ್ಯರತ್ನಾವಳಿ, ಶಿವಸ್ತವಮಂಜರಿ, ವೀರಭದ್ರದಂಡಕ, ವೀರಭದ್ರೋದಾಹರಣ ಗದ್ಯ, ಪಾದಪೂಜಾಸ್ತೋತ್ರ, ಶಿರಮಾನಸಸ್ತೋತ್ರ,

ಇಷ್ಟಲಿಂಗಾಷ್ಟಕ, ಷಡಕ್ಷರಮಂತ್ರ ಸ್ತೋತ್ರ, ಬಸವಾಷ್ಟಕ, ನೀಲಾಂಬಿಕಾ ಸ್ತೋತ್ರ ಮೊದಲಾದ ಸಂಸ್ಕೃತ ಕೃತಿಗಳನ್ನೂ ರಚಿಸಿದ್ದಾನೆ. ಈತನ ಜನ್ಮಸ್ಥಳ ಮಳವಳ್ಳಿ ತಾಲ್ಲೂಕಿನ ದನುಗೂರು. ಈತನ ಗುರುಪರಂಪರೆ; ರೇವಣಸಿದ್ಧನ ಮಗ ರುದ್ರಮುನಿ, ಈತನ ಮಗ ಉದ್ದಾನ; ಈತನ ಶಿಷ್ಯ ಅನ್ನದಾನೀಶ, ಶಿಷ್ಯ ರೇವಣಸಿದ್ಧ. ಈತ ದನುಗೂರು ಮಠದ ಸ್ವಾಮಿ. ಈತನ ಶಿಷ್ಯ ಚಿಕವೀರದೇಶಿಕ, ಈತನ ಶಿಷ್ಯ ಷಡಕ್ಷರಿ. ಈತನು ಯಳಂದೂರುಮಠಕ್ಕೆ ಸ್ವಾಮಿಯಾಗಿ ಅಲ್ಲಿಯೇ ಸಮಾಧಿಸ್ಥನಾದ. ಹದಿನಾಡ ದೊರೆಯಾದ ಮುದ್ದುರಾಜನು ತನ್ನ ಹೆಂಡತಿಯ ತವರುಮನೆಯ ಗುರುವಾಗಿದ್ದ ಈ ಷಡಕ್ಷರದೇವನನ್ನು ಕರೆಸಿ ಹೆಂಡತಿಯ ತವರೂರಾದ ಯಳಂದೂರಿನಲ್ಲಿ ಮಠವನ್ನು ಕಟ್ಟಿಸಿಕೊಟ್ಟು ಅಲ್ಲಿಯೇ ಇರಿಸಿದಂತೆ ಕೆಲವರು ಅಭಿಪ್ರಾಯಪಡುತ್ತಾರೆ.

ರಾಜಶೇಖರ ವಿಲಾಸವನ್ನು ಕ್ರಿಸ. ೧೬೫೫ರಲ್ಲಿಯೂ ಬಸವರಾಜ ವಿಜಯವನ್ನು ಕ್ರಿಶ. ೧೬೭೭ರಲ್ಲಿಯೂ ರಚಿಸಿದಂತೆ ಆ ಕಾವ್ಯಗಳಿಂದಲೇ ತಿಳಿದುಬರುತ್ತದೆ. ಹರಿಹರನ ಪ್ರಭಾವ ಈತನ ಮೇಲೆ ವಿಶೇಷವಾಗಿದೆ.

"ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ" ಕಾವ್ಯವನ್ನು ರಚಿಸಿ ಕೆಡಬಾರದೆಂದು- ಹರಿಹರ ಹೇಳಿದ್ದನ್ನೇ ಈತನೂ ಪ್ರತಿಪಾದಿಸಿದ್ದಾನೆ.

ಧರೆಯೊಳ್ ಮೇಣ್ ಪುಟ್ಟಿ ಪುಟ್ಟುತ್ತುರುಳ್ವ ನರರ ಮೇಲುರ್ಬಿ ಕಬ್ಬಂಗಳಂ ಬಿ
ತ್ತರಿಸುತ್ತಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟುಪೋದರ್
ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯಲಕ್ಷ್ಮೀ
ವರನಾದಂ ಮತ್ತವಂಗಧಿಕ ಶಿವಕವೀಂದ್ರಂಗದಾರ್ ಸಾಟಿಯಪ್ಪರ್
(ರಾಜಶೇಖರ ವಿಳಾಸ ೧-೧೯)

ರಸೆಯೊಳ್ ರಸವತ್ಕವಿತೆಯ
ನುಸಿರಲ್ಪಡೆದಸಮನಯನನಂ ಪೊಗಳದೆ ಮಾ
ನಿಸರಂ ಸುರರಂ ಪೊಗಳ್ವುದು
ಕಸವರಮಂ ಕಳೆದು ಕಸಮನಾಂತವೊಲಕ್ಕುಂ

ಅದಱಿಂದೆ ಮಹಿತ ಮಹಿಮಾ
ಸ್ಪದನಂ ಶಿವನಂ ತದೀಯ ಶರಣವ್ರಜಮಂ
ಪದೆದು ಮುದಮೊದವೆ ಬಲ್ಲಂ
ದದೆ ನುತಿಪೆಂ ನುತಿಸೆನುಳಿದ ಸುರರಂ ನರರಂ (ರಾಜಶೇಖರ ವಿಳಾಸ, ೧-೨೧,೨೨)

ಕವಿತಾಶಕ್ತಿ ತನಗೆ ಹನ್ನೊಂದನೆಯ ವರ್ಷದಲ್ಲೇ ಆಯಿತು ಎಂಬುದನ್ನೂ ಇದು ಸುಲಭ ಸಾಧ್ಯವಲ್ಲ ಎಂಬುದನ್ನೂ ಈ ಪದ್ಯಗಳಲ್ಲಿ ಸ್ಪಷ್ಟಪಡಿಸಿದ್ದಾನೆ.

ನೆರೆದೇಕಾದಶವರ್ಷದ
ಹರೆಯದೊಳಭವಪ್ರಸಾದಬಲದಿಂ ಕವಿತಾ
ತರುಣಿ ಷಡಕ್ಷರದೇವನ
ನೆರವಿಲ್ಲದ ವರಿಯಿಸಿರ್ದಳರಿದೆನೆ ವಿಬುಧರ್ (ಶಬರಶಂಕರ ವಿಳಾಸ, ೫-೬೦)

ಆರಾರೇಱರ್ ಶಾಸ್ತ್ರ
ಶ್ರೀರೋಹಣಗಿರಿಯನಲ್ಲಿ ನವಕವಿತಾ ಚಿಂ
ತಾರತ್ನಂ ದೊರೆಗುಮೆ ಮಾ
ರಾರಿಯ ಕೃಪೆಯಿಲ್ಲದಂಗೆ ಧರಣೀತಳದೊಳ್ (ರಾಜಶೇಖರವಿಳಾಸ, ೧-೨೮)

ರಾಜಶೇಖರ ವಿಳಾಸದಲ್ಲಿ ೧೪ ಆಶ್ವಾಸಗಳಿವೆ. ಸತ್ಯೇಂದ್ರಚೋಳನ ಮಗನಾದ ರಾಜಶೇಖರನ ವೀಧೀವಿಹಾರದಲ್ಲಿ ತಿರುಕೊಳವಿನಾಚಿಯ ಮಗ ಸಾಯಲು ರಾಜನು ಮಗನಿಗೆ ಮರಣದಂಡನೆಯನ್ನು ವಿಧಿಸಿ ತಾನೂ ಮೃತಿಹೊಂದುವನು;

ಮಂತ್ರಿ ಮೊದಲಾದವರೂ ಮೃತಿಸುವರು. ಶಿವನು ಪ್ರಸನ್ನನಾಗಿ ಎಲ್ಲರಿಗೂ ಮುಕ್ತಿಯನ್ನೀಯುವನು ಎಂಬುದೇ ಇದರ ಕಥಾಸಾರ. ಪಂಚಾಕ್ಷರೀಮಂತ್ರಮಹಾತ್ಮ್ಯವನ್ನು ಸಾರುವುದೇ ಇದರ ಪರಮೋದ್ದೇಶ. ತಮಿಳಿನಲ್ಲಿ ಪಿಳ್ಳೈನೈನಾರ್ ಹೇಳಿದ್ದ ಈ ಕಥೆಯನ್ನು ಮಲ್ಲಣಾರ್ಯ ಕನ್ನಡದಲ್ಲಿ ಭಾವಚಿಂತಾರತ್ನವೆಂಬ ವರ್ಣಕಗ್ರಂಥ ಮಾಡಿದ. ಅದನ್ನು ತಾನು ವಸ್ತುಕರೂಪವಾಗಿ ರಚಿಸಿ ಒಂದು ವರ್ಷದಲ್ಲಿ ಮುಗಿಸಿದಂತೆ ಷಡಕ್ಷರಿ ಹೇಳಿಕೊಂಡಿದ್ದಾನೆ. ಮಗನು ಸತ್ತ ಸಂಗತಿಯನ್ನು ಕೇಳಿದ ತಿರುಕೊಳವಿನಾಚಿಯ ಪ್ರಲಾಪ ಓದುಗರ ಮನವನ್ನು ಕಲಕುವಂತಿದೆ:

ನೋಡುವ ಕಣ್ಣೊಡೆದುದು ಮಾ
ತಾಡಿಪ ನಾಲಿಗೆ ಮುರುಂಟಿದುದು ನಿನ್ನಂ ಮುಂ
ಡಾಡುವ ಕಯ್ಯುಡಿದುದು ಸಲೆ
ಪಾಡುವ ಬಾಯ್ ಬೆಂದುದಣುಗ ನೀಂ ಮಡಿಯಲೊಡಂ

ಆರೊಡನುಸಿರ್ವೆಂ ದುಃಖಮ
ನಾರುಂಟೆನಗಕಟ ಮಗನೆ ಮಗನೆ ಮನೋಜಾ
ತಾರಿಯ ಕೃಪೆ ತಪ್ಪಿದ ಬಳಿ
ಕಾರಾದೊಡಮೇನುಂ ನಿನ್ನನೇಂ ಕಾಣಿಪರೇ(ರಾಜಶೇಖರವಿಳಾಸ, ೧೩-೧೧೯,೧೨೦)

ವೃಷಭೇಂದ್ರ ವಿಜಯ ೪೨ ಆಶ್ವಾಸಗಳುಳ್ಳ ಒಂದು ಬೃಹತ್ಕಾವ್ಯ. ಇದಕ್ಕೆ ಬಸವರಾಜವಿಜಯ ಎಂಬ ಪರ್ಯಾಯ ನಾಮವೂ ಇದೆ. ಇದರಲ್ಲಿ ಬಸವೇಶ್ವರನ ಚರಿತ್ರೆ ಆದ್ಯಂತವಾಗಿ ವರ್ಣಿತವಾಗಿದೆ. ಪಾಲ್ಕುರಿಕೆ ಸೋಮನಾಥ ತೆಲುಗಿನಲ್ಲಿ ಬಸವಪುರಾಣವನ್ನು ಬರೆದನು. ಅದನ್ನು ಭೀಮಕವಿ ಕನ್ನಡದಲ್ಲಿ ವರ್ಣಕಗ್ರಂಥವಾಗಿ ಮಾಡಿದನು. ಶಂಕರಕವಿ ಅದನ್ನು ಸಂಸ್ಕೃತಕ್ಕೆ ಪರಿವರ್ತಿಸಿದನು. ಈ ಕಥೆಯನ್ನೇ ತಾನು ವಸ್ತುಕವಾಗಿ ರಚಿಸಿದಂತೆ ಷಡಕ್ಷರಿ ಹೇಳಿಕೊಂಡಿದ್ದಾನೆ. ವೃಷಭೇಂದ್ರವಿಜಯ ಒಂದು ಕಥಾಸರಿತ್ಸಾಗರ. ಬಸವೇಶ್ವರನ ಕಥೆಯ ಜೊತೆಗೆ ಬರುವ ಹಲವಾರು ಶಿವಭಕ್ತರ ಕಥೆಗಳು ಮೂಲಕಥೆಗೆ ಪರಿಪೋಷಕವಾಗಿವೆ. ಈ ಕಾವ್ಯದಲ್ಲಿನ ಕೋಳೂರು ಕೊಡಗೂಸಿನ ಚಿತ್ರ ಎಂತಹವರ ಮನಸ್ಸನ್ನಾದರೂ ಸೂರೆಗೊಳ್ಳುತ್ತದೆ.

ಕಲ್ಲಿನಾಥನಿಗೆ ಹಾಲನ್ನರ್ಪಿಸುವ ವ್ರತವನ್ನು ಕೈಕೊಂಡಿದ್ದ ಶಿವದೇವ ಒಮ್ಮೆ ಈ ಕಾಯಕವನ್ನು ತನ್ನ ಮಗಳಾದ ಕೊಡಗೂಸಿಗೆ ವಹಿಸಿದನು. ಮುಗ್ಧಬಾಲಕಿ ಹಾಲನ್ನು ಶಿವನಿಗರ್ಪಿಸಿ ಶಿವನು ಅದನ್ನು ಕುಡಿಯದಿದ್ದಾಗ ಮಾಡುವ ಪ್ರಶ್ನೆಗಳಿವು:

ಏಂ ಕಾರಣಮೀ ಪಾಲಂ
ನೀಂ ಕುಡಿಯದೆ ಸುಮ್ಮನಿರ್ಪೆಯಕಟಕಟೆನಗಾ
ತಂಕಮನಾಗಿಪುದುಚಿಮೆ
ಶಂಕರ ನೀಂ ಪೇಳ್ವುದೆಂದು ಮಗುಳ್ದಿಂತೆಂದಳ್ ॥

ಪಸಿವೇನಾಗದೊ ದೇವಕೇಳ್ ನಿನಗೆ ಪಾಲೇಂ ಕಾಯದೋ ಪೊತ್ತಿತೋ
ಬಿಸುಪಾಜಿರ್ದುದೋ ಕಮ್ಮನಾಗದೋ ತನ್ನಿತ್ತಿಂಪೇಜಿದೋ ಕಣ್ಗೆರಂ
ಜಿಸದೋ ಮೇಣ್ ಪೊಗೆಸುತ್ತಿದತ್ತೊ ಪೆಜಿರಿಂ ಕಣ್ಣೆಂಜಲಾದತ್ತೊಂಬ
ಲ್ಬಿಸಿಯಾಗಿರ್ದುದೊ ಮಿಸಲೋಸರಿಸಿತೋ ಪೇಳೀಂಟದಿರ್ಪಂದಮಂ
(ಬಸವರಾಜವಿಜಯ, ೯-೭೩,೭೪)

ಶಬರಶಂಕರವಿಳಾಸ ಐದುಆಶ್ವಾಸಗಳುಳ್ಳ ಒಂದು ಕಿರುಕೃತಿ. ಪರಶಿವನು ಅರ್ಜುನನಿಗೆ ಪಾಶುಪತಾಸ್ತ್ರವನ್ನು ಅನುಗ್ರಹಿಸಿದ್ದು ಈ ಕಾವ್ಯದ ಕಥಾವಸ್ತು. ಪರಶಿವನ ಪಂಚವಿಂಶತಿಲೀಲೆಗಳಲ್ಲಿ ಹದಿನೈದನೆಯದಾದ ಶಬರಲೀಲೆಯು

ಇದರಲ್ಲಿ ವರ್ಣಿತವಾಗಿದೆ. ಈಶ್ವರನಿಂದ ಎಲ್ಲ ರೀತಿಯಿಂದಲೂ ಪರಾಭವಹೊಂದಿದ ಅರ್ಜುನನು ಇದಕ್ಕೆ ಕಾರಣವೇನಿರಬಹುದು ಎಂಬುದನ್ನು ಈ ರೀತಿ ಊಹಿಸಿದ್ದಾನೆ:

ಶಿವಪದಭಕ್ತಿಯಂ ತೊಱೆದೆನೋ ಶಿವನಿಂದೆಯನೆಯ್ದೆ ಕೇಳ್ದೆನೋ
ಶಿವನಿಜಭಕ್ತರಂ ಪಳಿದೆನೋ ಶಿವಪೂಜೆಗೆಯ್ಯದನ್ನಮಂ
ಸವಿದೆನೋ ಶೈವಸುವ್ರತಮನಾಳ್ದೊಡೆವಿಟ್ಟೆನೋ ಪೂರ್ವಜನ್ಮದೊಳ್
ಶಿವ ಶಿವ ತಾನಲ್ಲದೊಡೆ ಸಾರ್ಗುಮೆ ಸಂದೆನಗೀ ಪರಾಭವಂ ॥

(ಶಬರಶಂಕರವಿಳಾಸ, ೪-೯೩)

ಷಡಕ್ಷರಿ ಪ್ರತಿಭಾವಂತನಾದ ಮಹಾಕವಿ. ಕನ್ನಡದಲ್ಲಿ ಆತನು ರಚಿಸಿರುವ ಮೂರು ಚಂಪೂಕಾವ್ಯಗಳು ಆತನ ಅದ್ವಿತೀಯ ಪಾಂಡಿತ್ಯಕ್ಕೆ ನಿದರ್ಶನಗಳಾಗಿವೆ. ಉಭಯಭಾಷಾವಿಶಾರದನಾದ ಈತ ಕನ್ನಡದಲ್ಲಾಗಲಿ ಸಂಸ್ಕೃತದಲ್ಲಾಗಲಿ ನಿರರ್ಗಳವಾಗಿ ಕಾವ್ಯವನ್ನು ರಚಿಸುವ ಸಾಮರ್ಥ್ಯವನ್ನು ಪಡೆದಿದ್ದನು. ವೀರಶೈವರಿಗೆ ಪರಮಪೂಜ್ಯವಾದ ಕಥಾವಸ್ತುಗಳನ್ನೇ ಆಧರಿಸಿ ಬೃಹತ್ತು ಮಹತ್ತುಗಳುಳ್ಳ ಕೃತಿಗಳನ್ನು ರಚಿಸಿ ಕನ್ನಡಸಾಹಿತ್ಯ ಚರಿತ್ರೆಯಲ್ಲಿ ಅಮರನಾಗಿದ್ದಾನೆ.

* * *

**ಹಾಲಾಸ್ಯ ಪುರಾಣಂ** : ಹಾಲಾಸ್ಯ ಪುರಾಣದ ಕರ್ತೃ ಇಮ್ಮಡಿ ಮುರಿಗಾಗುರುಸಿದ್ಧ. ಕ್ರಿ.ಶ. ೧೭೨೦ರಲ್ಲಿ ಈ ಪುರಾಣವನ್ನು ರಚಿಸಿದಂತೆ ಹೇಳಿಕೊಂಡಿದ್ದಾನೆ. ಈತನು ಶೂನ್ಯಸಿಂಹಾಸನದ ಪರಂಪರೆಗೆ ಸೇರಿದವನು. ಹಾಲಾಸ್ಯ ಪುರಾಣದಲ್ಲಿ ಮಧುರೆಯ ಸುಂದರೇಶ್ವರರ ಚತುಷಷ್ಟಿಲೀಲೆಗಳು ವರ್ಣಿತವಾಗಿವೆ. ಇದರಲ್ಲಿ ೪ ಕಾಂಡಗಳೂ ೬೬ ಆಶ್ವಾಸಗಳೂ ೩೭೩೭ ಪದ್ಯಗಳೂ ಕೆಲವು ತ್ರಿಪದಿಗಳೂ ರಗಳೆಗಳೂ ಇವೆ. ಗುರುಸಿದ್ಧ ಕನ್ನಡ ಸಂಸ್ಕೃತ ಭಾಷೆಗಳೆರಡರಲ್ಲೂ ಘನವಿದ್ವಾಂಸನಾಗಿದ್ದನೆಂಬುದಕ್ಕೆ ಆತನ ಕಾವ್ಯಗಳೇ ಸ್ಪಷ್ಟ ನಿದರ್ಶನವಾಗಿವೆ. ಹಾಲಾಸ್ಯಪುರಾಣ ಒಂದು ವಿಶಿಷ್ಟವಾದ ಕೃತಿ. ಇದರಲ್ಲಿ ಬಳಸಿರುವಷ್ಟು ವಿವಿಧ ಜಾತಿಯ ವೃತ್ತಗಳು ಕನ್ನಡದ ಮತ್ತಾವ ಕೃತಿಯಲ್ಲೂ ಕಂಡುಬರುವುದಿಲ್ಲ.

ಈ ಎಲ್ಲ ದೃಷ್ಟಿಗಳಿಂದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಇಮ್ಮಡಿ ಮುರಿಗಾಗುರುಸಿದ್ಧ ಚಿರಸ್ಮರಣೀಯ ವ್ಯಕ್ತಿಯಾಗಿದ್ದಾನೆ.

**ಹಾಲಾಸ್ಯ ಪುರಾಣಂ:** ಸಂ. ಜಿ.ಜಿ. ಮಂಜುನಾಥನ್, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೫

* * *

**ಭಿಕ್ಷುಕ ಮಹೇಶವಿಲಾಸ:** ಕುಮಾರವಿಭು ಇದರ ಕರ್ತೃ. ಈತನು ಕುಮಾರೇಶ್ವರ ಪುರಾಣವೇ ಮೊದಲಾದ ಕೆಲವು ಗ್ರಂಥಗಳನ್ನು ರಚಿಸಿರುವುದಾಗಿ ಹೇಳುತ್ತಾರೆ. ಆದರೆ ಅವು ಯಾವುವೂ ದೊರೆತಿಲ್ಲ. ಕುಮಾರವಿಭು ಧಾರವಾಡ ಜಿಲ್ಲೆಯ ಹಾನಗಲ್ಲ ವಿರಕ್ತಮಠದ ಸ್ವಾಮಿಯಾಗಿದ್ದನು. ಕೃತಿರಚನಾಕಾಲವನ್ನು ಕವಿಯೇ ಹೇಳಿದ್ದಾನೆ. ಶಕ ೧೭೪೪ನೆಯ ಚಿತ್ರಭಾನುಸಂವತ್ಸರದಲ್ಲಿ ಎಂದರೆ ಕ್ರಿ.ಶ. ೧೮೨೧ರಲ್ಲಿ ಈ ಕೃತಿ ರಚಿತವಾಗಿದೆ. ಪೂರ್ವಕವಿಗಳಲ್ಲಿ ತೋಂಟದ ಸಿದ್ಧಲಿಂಗ, ಷಡಕ್ಷರದೇವಾದಿಗಳನ್ನು ಸ್ತುತಿಸಿದ್ದಾನೆ.

ಭಿಕ್ಷುಕ ಮಹೇಶವಿಲಾಸದಲ್ಲಿ ಮೂರು ಪ್ರಕರಣಗಳಿವೆ. ಶಿವನು ದ್ವಾರಾವತಿಗೆ ಹೋಗಿ ಭಿಕ್ಷಾಟನ ಮಾಡಿದ ಕಥೆ ಇದರಲ್ಲಿ ನಿರೂಪಿತವಾಗಿದೆ. ಕ್ರಿ.ಶ. ಸು. ೧೫೫೦ರಲ್ಲಿದ್ದ ಗುರು-ಲಿಂಗವಿಭು ವರ್ಧಕದಲ್ಲಿ ಬರೆದಿದ್ದ ಭಿಕ್ಷಾಟನ ಚರಿತೆಯನ್ನು ಗುರುಸಿದ್ಧದೇಶಿಕನ ಅಪ್ಪಣೆಯ ಮೇರೆಗೆ ತಾನು ವಸ್ತುಕದಲ್ಲಿ ಬರೆದಿರುವುದಾಗಿ ಹೇಳಿಕೊಂಡಿದ್ದಾನೆ.

ಗ್ರಂಥದ ಆದಿಯಲ್ಲಿ ಶಿವ, ಪಾರ್ವತಿ, ಗಣೇಶ, ಷಣ್ಮುಖ, ವೀರಭದ್ರ, ಬಸವ, ಚೆನ್ನಬಸವ ಮೊದಲಾದವರನ್ನು ಸ್ತುತಿಸಿದ್ದಾನೆ. ಈ ಕಾವ್ಯದ ಉತ್ಕೃಷ್ಟತೆಯ ಬಗೆಗೆ ಒಂದೆರಡು ಪದ್ಯಗಳನ್ನು ನೋಡಬಹುದು.

ಸುರಗಿರಿಯಂತೆ ಸದ್ವಿಬುಧಸೇವಿತಮಂಬುಜದಂತೆ ಶ್ರೀಗುಣಂ
ಸರಸಿಜಮಿತ್ರನಂತೆ ಘನಮಾರ್ಗಸುಶೋಭಿ ಸಮುದ್ರದಂತೆ ವೋಲ್
ಸರಸಮುದಾರ ಭಾಮಿನಿಯರೋಳಿಯವೊಲ್ ಮಿಗೆ ಭಾವಜಾತಿಬಂ
ಧುರಮೆನಿಕುಂ ಕುಮಾರವಿಭು ನಿರ್ಮಿತಮಿ ಕೃತಿ ಸರ್ವಲೋಕದೊಳ್

"ಒಗೆದಂಧಕಾರಮೆಂಬಾ
ಜಗುನೆಯ ಮಧ್ಯದೊಳೆ ಬೆಳೆದು ಬೆಳ್ವೆಳಗಿಂ ತಾಂ
ಸೊಗಯಿಪ ಬೆಳ್ದಾವವೆಯೆನೆ
ಮಿಗೆ ಮೆರೆದುದು ಚಂದ್ರಮಂಡಲಂ ಬಾನೆಡೆಯೊಳ್"

* * *

**ಕರ್ಣಾಟಕ ಕವಿಚರಿತೆ:** ತೃತೀಯ ಸಂಪುಟ, ಪು. ೧೭೯-೧೮೦

**ದಮಯಂತಿ ಸ್ವಯಂವರ: ರೇಣುಕ ವಿಜಯ: (ಅಸಮಗ್ರ):** ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳಿಂದ ರಚಿತವಾದುವು. ಇವರು ಚಾಮರಾಜ ಒಡೆಯರ ಆಸ್ಥಾನ ಕವಿಗಳಾಗಿದ್ದರು. ಇವರು ಉಭಯಭಾಷಾವಿದ್ವಾಂಸರು. ಗಮಕಕಲೆ ಇವರಿಗೆ ಕರಗತವಾಗಿತ್ತು. ಇಂತಹ ಪ್ರತಿಭಾವಂತರೂ ಉಜ್ವಲವಾಗ್ಮಿಗಳೂ ಶ್ರೇಷ್ಠಗಮಕಿಗಳೂ ಆಗಿದ್ದ ಬಸವಪ್ಪಶಾಸ್ತ್ರಿಗಳು ಕನ್ನಡ ಸಂಸ್ಕೃತ ಭಾಷೆಗಳೆರಡರಲ್ಲೂ ಕೃತಿರಚನೆ ಮಾಡಿರುವುದಲ್ಲದೆ ಇಂಗ್ಲಿಷಿನ ಒಂದು ನಾಟಕವನ್ನು ಭಾಷಾಂತರಿಸಿದ್ದಾರೆ. ಇವರು ಸುಮಾರು ಇಪ್ಪತ್ತೆಂಟು ಕೃತಿಗಳನ್ನು ಬರೆದಂತೆ ತಿಳಿದುಬರುತ್ತದೆ.

ಕನ್ನಡದಲ್ಲಿ: ಸಾವಿತ್ರೀಚರಿತ್ರೆ, ದಮಯಂತೀಸ್ವಯಂವರ, ಶಂಕರಶತಕ, ರೇಣುಕವಿಜಯ, ನೀತಿಸಾರ ಸಂಗ್ರಹ ಎಂಬ ಕೃತಿಗಳನ್ನೂ ಸಂಸ್ಕೃತದಲ್ಲಿ ಶಿವಾಷ್ಟಕಂ, ತ್ರಿಷಷ್ಟಿ ಪುರಾತನಗಣಸ್ತವ, ಅಂಬಾಷೋಡಶಮಂಜರೀ, ಶಿವಭಕ್ತಿಸುಧಾ ತರಂಗಿಣೀ, ಆರ್ಯಾಶತಕಂ ಎಂಬ ಕೃತಿಗಳನ್ನೂ ಬರೆದಿದ್ದಾನೆ. ಸಂಸ್ಕೃತ ಅನುವಾದಿತ ಕೃತಿಗಳು: ಕರ್ನಾಟಕ ಶಾಕುಂತಲ ನಾಟಕ, ಉತ್ತರರಾಮ ಚರಿತೆ, ಚಂಡಕೌಶಿಕ (ಅಸಮಗ್ರ), ವಿಕ್ರಮೋರ್ವಶೀಯ (ಅಸಮಗ್ರ), ರತ್ನಾವಳೀ ನಾಟಿಕೆ, ಶೂರಸೇನಚರಿತೆ, ಕನ್ನಡ ಭರ್ತೃಹರಿ ಶತಕತ್ರಯ: ಇಂಗ್ಲಿಷಿನಿಂದ ಶೂರಸೇನ ಚರಿತೆ (ಷೇಕ್ಸ್‌ಪಿಯರನ ಒಥೆಲೋ ನಾಟಕದ ಅನುವಾದ) ಅನುಪಲಬ್ಧ ಕೃತಿಗಳು: ಹರ್ಷಚರಿತೆ, ಕೃಷ್ಣರಾಜಾಭ್ಯುದಯ, ಬಾಲಿಕಾಗೀತಮುಕ್ತಾಕಲಾಪ, ಮಾಲತೀಮಾಧವ, ಬಿಲ್ವವೃಕ್ಷಪೂಜಾವಿಧಿ, ದಕ್ಷಿಣಾಮೂರ್ತ್ಯಷ್ಟಕ, ಅಷ್ಟಮೂರ್ತಿತನಯಾಷ್ಟಕ, ಬಸವೇಶ್ವರಾಷ್ಟಕ, ಶಂಕರೀ ನಕ್ಷತ್ರ ಮಾಲಾ, ಸದಾಶಿವಾಷ್ಟಕ, ಸರಸ್ವತೀದಂಡಕ.

ಬಸವಪ್ಪಶಾಸ್ತ್ರಿಗಳು ರಾಜಾಶ್ರಯದಿಂದ ಪ್ರಭಾವಿತರಾದರೂ ಅವರ ಮನಸ್ಸು ಮಾತ್ರ ಸಹೃದಯಪರ ಎಂಬುದು ಅವರ:

ಅರಸರ್‌ಕುಡುವಾ ಕಾರ್ತ
ಸ್ವರಕಂಕಣಮಿರ್ಕೆ ಸರಸರಾಸ್ವಾದಿಸಿ ಕಾ
ವ್ಯರಸವ ಸೂಸುವ ಸುಖಭಾ
ಸ್ವರಾಶ್ರುಕಂಕಣಮೆ ಕವಿಗೆ ಕಂಕಣಮಲ್ತೇ

ಈ ಪದ್ಯದಿಂದ ವ್ಯಕ್ತವಾಗುತ್ತದೆ. ಅತಿಯಾದ ಸಂಸ್ಕೃತವ್ಯಾಮೋಹದಿಂದ ಕನ್ನಡ ಕಾವ್ಯರಚನೆಯನ್ನು ಟೀಕಿಸಿದವರಿಗೆ ಅವರು ಕೊಟ್ಟ ಉತ್ತರ:

ಸಕ್ಕದಮೇಂ ಕನ್ನಡಮೇ
ನೊಕ್ಕಣಿಸಿದ ವಿಷಯಮೊಂದೆ ಗಡ ತಾಮದರಿಂ
ತಕ್ಕರ್ ಕೇಳ್ದಾನಂದಿಪ
ರಕ್ಕೆ ಗುಣಪ್ರಣವಮತಿಯಿನೀ ಕೃತಿಯಂ ॥

ಕನ್ನಡ ಸಂಸ್ಕೃತಗಳ ಉಚಿತಮಿಶ್ರಣ ಹಿತವಾದುದು. ಅದನ್ನು:

ಸಕ್ಕದಮಂ ಕನ್ನಡಮಂ
ಸಕ್ಕಸಮಂ ತಿಳಿದ ವಿಬುಧರ್ಗರಿಯಲ್
ಸಕ್ಕರೆವೆರಸಿದ ಸವಿವಾ
ಲಕ್ಕುಂ ಸಕ್ಕದವೆ ಬೆರೆದ ಕನ್ನಡಗಬ್ಬಂ ॥

ಹೀಗೆ ತಿಳಿಸಿದ್ದಾರೆ.

ದಮಯಂತೀಸ್ವಯಂವರದಲ್ಲಿ ನಾಲ್ಕು ಆಶ್ವಾಸಗಳಿವೆ. ಮಹಾಭಾರತಾಂತರ್ಗತ ನಳಚರಿತ್ರೆಯನ್ನು ಆಧರಿಸಿ ಈ ಕೃತಿಯನ್ನು ಬರೆದಂತೆ ಕವಿ ಹೇಳಿದ್ದಾನೆ.

ಈ ಕೃತಿಯ ಬಗೆಗೆ:

ನೆಲದೊಳ್ ಅದಾವನ ಕೀರ್ತಿಸೆ
ಕಲಿದೋಷಂ ಪೊರ್ದದಿರ್ಕುಂ ಆ ಸತ್ಯಗುಣೋ
ಜ್ವಲ ಪುಣ್ಯಕೀರ್ತಿ ನಳನೃಪ
ತಿಲಕನ ಕತೆವೇಳೆ ಕೇಳ್ದು ಮೆಚ್ಚದರೊಳರೇ ॥

ಹೀಗೆ ಹೇಳಿದ್ದಾನೆ.

ರೇಣುಕವಿಜಯ ಅಸಮಗ್ರ ಚಂಪೂಕೃತಿ. ಇದರಲ್ಲಿ ೧೫೪ ಪದ್ಯಗಳಿವೆ. ರೇಣುಕಾಚಾರ್ಯರ ಕಥೆ ಇದರಲ್ಲಿ ನಿರೂಪಿತವಾಗಿದೆ. ಇದರಲ್ಲಿನ ಒಂದು ಪದ್ಯ:

ಶಿವಕೃತಿಯಲ್ಲದನ್ಯಕೃತಿಯೆಂಬುದ ಗೈಯದ ಬಲ್ಮೆ ಮೇಣ್ ಶಿವಾ
ಧವ ಚರಣಾಂಬುಜೈಕಶರಣರ್ಕಳನಲ್ಲದೆ ಮಿಕ್ಕ ದೇವಮಾ
ನವರ ಕಡಂಗಿ ಕೀರ್ತಿಸದ ಪೆರ್ಮೆ ವಲಂ ನೆಲಗೊಂಡು ಶಾಶ್ವತಂ
ಶಿವಪದಮಾಂತ ಸತ್ಕವಿಗಳಂ ಪೊಗಳುವೆಂ ಪರಮಾನುರಾಗದಿಂ ॥

ಈವರೆಗೆ ವಿವೇಚಿಸಿದ ಚಂಪೂಕೃತಿಗಳಲ್ಲದೆ ಮೈಸೂರಿನ ಗೌರೀಶಂಕರ ಮಹಾಸ್ವಾಮಿಗಳವರು ಅಕ್ಕಮಹಾದೇವಿ ಚಂಪೂಕಾವ್ಯವನ್ನು ಬರೆದಿದ್ದಾರೆ. ಕೃತಿಯ ಅಲಭ್ಯತೆಯಿಂದ ಅದನ್ನು ವಿವೇಚಿಸಲಾಗಲಿಲ್ಲ. ನನ್ನ ಪರಿಶೀಲನೆಗೆ ಸಿಕ್ಕದ ಕೆಲವು ವೀರಶೈವ ಚಂಪೂಕೃತಿಗಳೂ ಇರುವುದು ಸಂಭವನೀಯ. ಈ ಸಂಬಂಧವಾಗಿ ಒಂದು ಸಮಗ್ರ ಸಂಶೋಧನೆ ನಡೆಯುವುದು ಅತ್ಯಗತ್ಯವೆಂದು ನಾನು ಭಾವಿಸಿದ್ದೇನೆ.



# ಕನ್ನಡದಲ್ಲಿ ವೀರಶೈವ ಸಾಹಿತ್ಯ

**ಭ**ರತಖಂಡದಲ್ಲಿ ವೀರಶೈವಧರ್ಮ ಅತ್ಯಂತ ಪ್ರಾಚೀನವಾದುದು. ಈ ವೀರಶೈವ ಸಿದ್ಧಾಂತವು ಈಶ್ವರನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಎಂಬ ಐದು ಮುಖಗಳಿಂದ ಉದ್ಭವವಾದುದು ಎಂಬ ಪ್ರತೀತಿಯುಳ್ಳ ರೇಣುಕ, ದಾರುಕ, ಘಂಟಾಕರ್ಣ, ಧೇನುಕರ್ಣ ಮತ್ತು ವಿಶ್ವಕರ್ಣರಿಂದ ಪ್ರಾರಂಭವಾಯಿತು. ಇವರೇ ಕಲಿಯುಗದಲ್ಲಿ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ, ವಿಶ್ವೇಶ್ವರರೆಂಬ ರೂಪದಲ್ಲಿ ಅವತರಿಸಿ ಸಿದ್ಧಾಂತ ಪ್ರಚಾರಮಾಡಿದರೆಂದು ಸಂಪ್ರದಾಯಸ್ಥರ ಅಭಿಪ್ರಾಯವಾಗಿದೆ. ಈ ಪಂಚಾಚಾರ್ಯರ ಅವತಾರದ ವಿಷಯವು ಸ್ವಾಯಂಭುವಾಗಮದಲ್ಲಿ ಉಕ್ತವಾಗಿದೆ. ಇವರು ಭರತಖಂಡದ ಐದು ಪ್ರಸಿದ್ಧ ಕ್ಷೇತ್ರಗಳಾದ ಕೇದಾರ, ಶ್ರೀಶೈಲ, ಉಜ್ಜಯಿನಿ, ರಂಭಾಪುರಿ ಮತ್ತು ಕಾಶಿಯಲ್ಲಿ ಮಠಗಳನ್ನು ಸ್ಥಾಪಿಸಿ ಸಿದ್ಧಾಂತ ಪ್ರಚಾರ ಮಾಡಿದರೆಂದು ಪ್ರತೀತಿಯಿದೆ.

ವೀರಶೈವ ಸಿದ್ಧಾಂತವು ಶೈವಾಗಮಗಳ ಆಧಾರದ ಮೇಲೆ ಬೆಳೆದುಬಂದಿದೆ. ಈ ಆಗಮಗಳು ವೇದದ ಸಾರವನ್ನೇ ಪ್ರಚಾರಮಾಡುತ್ತವೆ ಎಂಬ ನಂಬಿಕೆ ಇದೆ. ವೀರಶೈವ ಸಿದ್ಧಾಂತಕ್ಕೆ ಶಕ್ತಿವಿಶಿಷ್ಟಾದ್ವೈತವೆಂದೂ ಹೆಸರಿದೆ.

ವೀರಶೈವ ಧರ್ಮದಲ್ಲಿ ಪೀಠ, ಮಠ, ಸಂಸ್ಥಾನ ಶಬ್ದಗಳಿಗೆ ವಿಶೇಷಾರ್ಥಗಳಿವೆ. ಇವುಗಳಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಕೊಟ್ಟಿರುವ ಅರ್ಥಗಳನ್ನು ಯಥಾವತ್ತಾಗಿ ಕೊಟ್ಟಿದೆ.

**ಪೀಠ (ನಾ)** ೧. (ಕುಳಿತುಕೊಳ್ಳಲು ಮಾಡಿದ) ಮಣೆ, ಆಸನ.

೨. ದೇವರ ಪ್ರತಿಮೆಗಳನ್ನು ಇಡುವ ವೇದಿಕೆ

೩. ದೇವರ ಮುಂದೆ ನೈವೇದ್ಯ, ಬಲಿ ಮೊದಲಾದವುಗಳನ್ನು ಇಡುವ ವರ್ತುಲಾಕಾರದ ವೇದಿಕೆ.

೪. ತಳಪಾಯ; ಬುನಾದಿ; ಅಡಿಪಾಯ.

೫. ಗುರುಗಳು ಸ್ವಾಮಿಗಳು ಅರಸರು ಮೊದಲಾದವರ ಗದ್ದುಗೆ, – ಅಧಿಕಾರ ಸ್ಥಾನ.

೬ ವಿದ್ಯಾಕೇಂದ್ರ; ವಿದ್ಯಾಕ್ಷೇತ್ರ

೭ ವಿಶೇಷ ಅಧ್ಯಯನಕ್ಕಾಗಿ ಗೊತ್ತುಮಾಡಿರುವ ಒಂದು ಅಧಿಕಾರ, ಪ್ರಾಧ್ಯಾಪಕಸ್ಥಾನ.

[ಸಂಪುಟ ೬, ಪುಟ ೫೬೪೩]

**ಮಠ (ನಾ)** ೧. ಸಂನ್ಯಾಸಿಗಳು ವಾಸಿಸುವ ಕುಟೀರ; ಸಂನ್ಯಾಸಿಗಳ ವಾಸಸ್ಥಾನ; ಆಶ್ರಮ.

೨. ಧಾರ್ಮಿಕ ಬೋಧನೆ, ಪ್ರಸಾರ ಹಾಗೂ ವಿದ್ಯೆಯ ಬೋಧನೆ ಪ್ರಸಾರಗಳನ್ನು ನಡೆಸುವ ಆಧ್ಯಾತ್ಮಿಕ ಸಂಸ್ಥೆ ಅಥವಾ ವಿದ್ಯಾಕೇಂದ್ರ; ವಿದ್ಯೆ, ಜ್ಞಾನ, ಮತ ಧರ್ಮಗಳ ಪ್ರಸಾರ ಕಾರ್ಯವನ್ನು ನಡೆಸುವ ಸ್ಥಾನ; ಸಂಸ್ಥಾನ.

೩. ಮಹಾವ್ಯಕ್ತಿಗಳು ದೇಹ ತ್ಯಜಿಸಿದ ಮೇಲೆ ಅವರ ಯಾವುದಾದರೂ ಕುರುಹನ್ನು ಪೂಜಿಸುವ ಸ್ಥಳ.

೪. (ಯಾತ್ರಾರ್ಥಿಗಳಿಗೆ, ಸಾಧುಸಂತರಿಗೆ ನಿರಂತರವಾಗಿ ಅನ್ನದಾನ ನಡೆಸುವ ದೇವಸ್ಥಾನ ಅಥವಾ ಮಠಕ್ಕೆ ಸೇರಿದ) ಭೋಜನ ಶಾಲೆ; ಅನ್ನಛತ್ರ

೫. ಗುಡಿ; ದೇವಾಲಯ

೬. ನಿವಾಸ; ವಾಸಸ್ಥಾನ

೭. (ಮುಖ್ಯವಾಗಿ ಬ್ರಾಹ್ಮಣಬಾಲಕರಿಗಾಗಿ ಮೀಸಲಾಗಿರುತ್ತಿದ್ದ) ಪಾಠಶಾಲೆ; ಶಿಕ್ಷಣಶಾಲೆ.

೮. (ಧರ್ಮಪ್ರಸಾರ ಮತ್ತು ಸಾರ್ವಜನಿಕ ಸೇವೆ ನಡೆಸುವ) ಕ್ರೈಸ್ತಮತೀಯರ ಧಾರ್ಮಿಕ ಸಂಸ್ಥೆ; ಕ್ರೈಸ್ತ ಮಿಷನರಿ ಸಂಸ್ಥೆ

೯. ವ್ಯಕ್ತಿ ಸಂಸ್ಥೆ ಹೆಸರಿನ ಕೊನೆಯಲ್ಲಿ ಸೇರುವ (ಸ್ವಸ್ಥಳ ಅಥವಾ ಮನೆತನಕ್ಕೆ ಸಂಬಂಧಪಟ್ಟ) ಶಬ್ದ; ಜಮಖಂಡಿ ಮಠ.

**ಸಂಸ್ಥಾನ (ನಾ)** ೧. ಸಾಹಚರ್ಯ; ಒಡನಾಟ

೨. ಮೊತ್ತ; ಸಮೂಹ

೩. ಆಕಾರ; ಆಕೃತಿ

೪. ಮೂಲರೂಪ

೫. ಪಟ್ಟಣದ ನಡುವೆ ಅಥವಾ ಅದರ ಸುತ್ತಮುತ್ತಲಿರುವ ಬಯಲುಪ್ರದೇಶ.

೬. ಸಾಮೀಪ್ಯ, ಹತ್ತಿರ, ಸಾನ್ನಿಧ್ಯ

೭. ಅಕ್ಕಪಕ್ಕ; ನೆರೆ

೮. ನಾಲ್ಕು ರಸ್ತೆಗಳು ಕೂಡುವ ಸ್ಥಳ; ಚೌಕ

೯. ನೆಲೆ; ವಾಸಸ್ಥಳ

೧೦. ರಾಜ್ಯ; ಪ್ರಾಂತ್ಯ

೧೧. ಮುಖ್ಯನಗರ; ರಾಜಧಾನಿ

೧೨. ಮಠ

೧೩. ರಾಜ್ಯವನ್ನು ಆಳುವ ವ್ಯವಸ್ಥೆ; ಸರಕಾರ

೧೪. ಇರವು; ಸ್ಥಿತಿ

೧೫. ರಚನೆ; ನಿರ್ಮಾಣ; ವಿನ್ಯಾಸ

೧೬. ಸಾವು; ಮರಣ

೧೭. (ಜೈನ) ನಾಮಕರ್ಮಗಳಲ್ಲಿ ಒಂದು; ಶರೀರದ ಆಕೃತಿಯನ್ನು ನಿಶ್ಚಯಿಸುವುದು.

**ಪಂಚಾಚಾರ್ಯರ ಉಲ್ಲೇಖದ ವಚನಗಳು**

ಕೃತಯುಗದಲ್ಲಿ ಕೇತಾರವೆಂಬ ಮೂಲಸ್ಥಾನ
ತ್ರೇತಾಯುಗದಲ್ಲಿ ವಾರಣಾಸಿಯೆಂಬ ಮೂಲಸ್ಥಾನ
ದ್ವಾಪರದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ
ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ
ಈ ನಾಲ್ಕು ಮೂಲಸ್ಥಾನ ನಾನಾಸ್ಥಾನಂಗಳು ಮುಟ್ಟದೆ
ಜಂಗಮವೆ ಲಿಂಗವೆಂದು ನಂಬಿದೆ ಕೂಡಲಸಂಗಮದೇವಾ.

(ಬಸವಣ್ಣನವರ ಷಟ್ಸ್ಥಲದ ವಚನಗಳು, ಪುಟ ೧೫೫, ವ. ೩೯೪,
ಸಂ. ಡಾ. ಆರ್.ಸಿ. ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ)

**ಆದಯ್ಯನ ವಚನ** : ಸಂಕೀರ್ಣ ವಚನ ಸಂಪುಟ : ಒಂದು, ಪುಟ ೩೨೭, ವಚನ ೨೭೬-೧೦೩೫

ಬಸವಣ್ಣನೆನ್ನಲಿಂಗ ಮಡಿವಾಳನೆನ್ನ ಮನ
ಪ್ರಭುವೆನ್ನ ಪ್ರಾಣ ಚನ್ನಬಸವನೆನ್ನ ಕರಸ್ಥಲದ ಲಿಂಗ
ಘಟ್ಟಿವಾಳನೆನ್ನ ಭಾವ ಸೊಡ್ಡಳಬಾಚರಸರೆನ್ನ ಅರಿವು
ಮಹದೇವಿಯಕ್ಕನೆನ್ನ ಜ್ಞಾನ ಮುಕ್ತಾಯಕ್ಕನೆನ್ನ ಅಕ್ಕರು
ಸತ್ಯಕ್ಕನೆನ್ನ ಯುಕ್ತಿ ನಿಂಬಿಯಕ್ಕನೆನ್ನ ನಿಶ್ಚಯ
ಅಲ್ಲಾಳಿಯಕ್ಕನೆನ್ನ ಸಮತೆ ಅನುಮಿಷನೆನ್ನ ನಿಶ್ಚಲ
ನಿಜಗುಣನೆನ್ನ ಕ್ಷಮೆ ರೇವಣಸಿದ್ಧಯ್ಯದೇವರೆನ್ನ ನೇತ್ರ
ಸಿದ್ಧರಾಮತಂದೆಗಳೆನ್ನ ನೇತ್ರದ ದೃಕ್ಕು
ಮರುಳಸಿದ್ಧಯ್ಯದೇವರೆನ್ನು ಶ್ರೋತ್ರ
ಪಂಡಿತಾರಾಧ್ಯರೆನ್ನ ಜಿಹ್ವೆ ಏಕೋರಾಮಯ್ಯಗಳೆನ್ನ ನಾಸಿಕ
ಅಸಂಖ್ಯಾತರೆನ್ನ ಅವಯವಂಗಳು ಪುರಾತನರೆನ್ನ ಪುಣ್ಯದ ಪುಂಜ
ಏಳುನೂರೆಪ್ಪತ್ತು ಅಮರಗಣಂಗಳೆನ್ನ ಗತಿಮತಿ ಚೈತನ್ಯ
ಸೌರಾಷ್ಟ್ರಸೋಮೇಶ್ವರಾ ಆ ನಿಮ್ಮ ಶರಣರ ಪಡಿದೊತ್ತಯ್ಯಾ.

**ಮೆರೆಮಿಂಡಯ್ಯನ ವಚನ** : ಸಂಕೀರ್ಣ ವಚನ ಸಂಪುಟ : ಮೂರು : ಪುಟ ೪೬೬-೪೬೭, ವಚನ ೨೭, : ೧೩೧೩

ಎನ್ನ ಘ್ರಾಣ ಶುದ್ಧವಾಯಿತ್ತಯ್ಯಾ ಏಕೋರಾಮಿ ತಂದೆಗಳ ಧರ್ಮದಿಂದ
ಎನ್ನ ಜಿಹ್ವೆ ಶುದ್ಧವಾಯಿತ್ತಯ್ಯಾ ಪಂಡಿತಾರಾಧ್ಯರ ಧರ್ಮದಿಂದ
ಎನ್ನ ನೇತ್ರ ಶುದ್ಧವಾಯಿತ್ತಯ್ಯಾ ರೇವಣಸಿದ್ಧೇಶ್ವರದೇವರ ಧರ್ಮದಿಂದ
ಎನ್ನ ತ್ವಕ್ಕು ಶುದ್ಧವಾಯಿತ್ತಯ್ಯಾ ಸಿದ್ಧರಾಮೇಶ್ವರದೇವರ ಧರ್ಮದಿಂದ
ಎನ್ನ ಶ್ರೋತ್ರ ಶುದ್ಧವಾಯಿತ್ತಯ್ಯಾ ಮರುಳಸಿದ್ಧೇಶ್ವರದೇವರ ಧರ್ಮದಿಂದ
ಎನ್ನ ಹೃದಯ ಶುದ್ಧವಾಯಿತ್ತಯ್ಯಾ ಸಕಳೇಶಮಾದಿರಾಜಯ್ಯಗಳ ಧರ್ಮದಿಂದ
ಎನ್ನ ಅಂತರಂಗ ಶುದ್ಧವಾಯಿತ್ತಯ್ಯಾ ತೆಲುಗುಜೊಮ್ಮಯ್ಯಗಳ ಧರ್ಮದಿಂದ
ಎನ್ನ ಬಹಿರಂಗ ಶುದ್ಧವಾಯಿತ್ತಯ್ಯಾ ಕೇಶಿರಾಜಯ್ಯಗಳ ಧರ್ಮದಿಂದ
ಎನ್ನ ಸರ್ವಾಂಗ ಶುದ್ಧವಾಯಿತ್ತಯ್ಯಾ ಬಸವಣ್ಣ ಪ್ರಭು ವೀರ ಮಡಿವಾಳಯ್ಯಗಳ ಧರ್ಮದಿಂದ
ಐಘಟದೂರ ರಾಮೇಶ್ವರಾ
ನಿಮ್ಮ ಶರಣರ ಧರ್ಮದಿಂದ ನಾನು ಶುದ್ಧನಾದೆನಯ್ಯಾ.

ಬಸವಣ್ಣ, ಆದಯ್ಯ, ಮೆರೆಮಿಂಡಯ್ಯ ಮೊದಲಾದ ವಚನಕಾರರು ಪಂಚಾಚಾರ್ಯರನ್ನು ಸ್ತುತಿಸಿರುವುದರಿಂದ ವೀರಶೈವ ಧರ್ಮದ ಪ್ರಾಚೀನತೆ ಮತ್ತು ಪ್ರಾಚಾರ್ಯತೆಗಳು ಸುಸ್ಪಷ್ಟವಾಗುತ್ತವೆ.

ಇತಿಹಾಸದ ಪ್ರಮಾಣಭೂತವಾದ ಪುನರ್‌ನಿರ್ಮಾಣಕ್ಕೆ ಇರುವ ಅತಿಪ್ರಮುಖವಾದ ಆಧಾರಗಳೆಂದರೆ ಶಾಸನಗಳು. ಶಾಸನಗಳು ವೈವಿಧ್ಯಪೂರ್ಣವಾಗಿವೆ. ದೇವಸ್ಥಾನದ ದತ್ತಿಗಳಿಗೆ ಸಂಬಂಧಿಸಿದ ಶಾಸನಗಳು; ವಿದ್ಯಾದಾನಕ್ಕೆ ಸಂಬಂಧಿಸಿದ ಶಾಸನಗಳು, ವೀರಗಲ್ಲು ಮಾಸ್ತಿಗಲ್ಲು ನಿಶಿಧಿಗಲ್ಲುಗಳಿಗೆ ಸಂಬಂಧಿಸಿದ ಶಾಸನಗಳು, ಧರ್ಮಗುರುಗಳಿಗೆ ಕೊಟ್ಟ ಶಾಸನಗಳು, ವಿಶಿಷ್ಟ ಜನರಿಗೆ ಕೊಟ್ಟ ಶಾಸನಗಳು, ಮೂರ್ತಿಗಳಿಗೆ ಸಂಬಂಧಿಸಿದ ಶಾಸನಗಳು ಇತ್ಯಾದಿ.

ಪ್ರಸ್ತುತ ಪಂಚಾಚಾರ್ಯರಿಗೆ ಸಂಬಂಧಿಸಿದಂತೆ ಹಲವಾರು ಶಾಸನಗಳು ಲಭ್ಯವಾಗಿವೆ. ಕಾಶಿಪೀಠಕ್ಕೆ ಸಂಬಂಧಿಸಿದ ಶಾಸನಗಳಲ್ಲಿ ಕ್ರಿ.ಶ. ೫೭೪ರ ಶಾಸನವೇ ಅತ್ಯಂತ ಪ್ರಾಚೀನವಾದುದು. ಉಳಿದ ಆಚಾರ್ಯರಿಗೆ ಸಂಬಂಧಿಸಿದ ಶಾಸನಗಳೂ ಪ್ರಕಟವಾಗಿವೆ. ಈ ಎಲ್ಲ ಶಾಸನಗಳೂ ವೀರಶೈವಧರ್ಮ, ಸಂಸ್ಕೃತಿಗಳ ಸಂವರ್ಧನೆಗಾಗಿ ನೀಡಿದವು.

ಪ್ರಸ್ತುತ ವೀರಶೈವ ಧರ್ಮಕ್ಕೆ ಕನ್ನಡ ಸಾಹಿತ್ಯದ ಕೊಡುಗೆ ಏನು ಎಂಬುದನ್ನು ಸ್ಥೂಲವಾಗಿ ಪರಿಚಯಿಸಲು ಪ್ರಯತ್ನಿಸಲಾಗಿದೆ. ಕನ್ನಡದ ವಚನ ಸಾಹಿತ್ಯ, ಚಂಪೂ ಸಾಹಿತ್ಯ, ಷಟ್ಪದಿ ಸಾಹಿತ್ಯ, ಸಾಂಗತ್ಯ ಸಾಹಿತ್ಯ, ಶತಕ ಸಾಹಿತ್ಯ, ರಗಳೆ ಸಾಹಿತ್ಯ, ಜಾನಪದ, ಯಕ್ಷಗಾನ ಸಾಹಿತ್ಯ, ಶಾಸನ ಸಾಹಿತ್ಯ –ಇವೇ ಮೊದಲಾದ ಸಾಹಿತ್ಯ ಪ್ರಕಾರಗಳು. ಕನ್ನಡ ಸಾಹಿತ್ಯ ವೀರಶೈವಧರ್ಮಕ್ಕೆ ನೀಡಿರುವ ಕೊಡುಗೆ ಅಪರಿಮಿತವಾದದ್ದು, ಅನಂತವಾದದ್ದು, ಅನನ್ಯವಾದದ್ದು. ಈವರೆಗೆ ನಡೆದ ವಿಚಾರಗೋಷ್ಠಿಗಳಲ್ಲಿ ಈ ಎಲ್ಲ ಪ್ರಕಾರಗಳಿಗೆ ಸಂಬಂಧಿಸಿದ ಸಮಗ್ರ ಮಾಹಿತಿಯನ್ನು ಸಾಧಾರವಾಗಿ ಸಾರವತ್ತಾಗಿ ವಿದ್ವಾಂಸರು ನಿರೂಪಿಸಿದ್ದಾರೆ. ನನ್ನದು ಏನಿದ್ದರೂ ಈ ವಿದ್ವಾಂಸರ ಅಭಿಪ್ರಾಯಗಳನ್ನು ಅನುಮೋದಿಸುವುದು, ಪುಷ್ಟೀಕರಿಸುವುದು ಮಾತ್ರ

ಶಾಸನ ಸಾಹಿತ್ಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ಈಗಾಗಲೇ ಹೇಳಿದ್ದೇನೆ. ಪ್ರಸ್ತುತ ವಚನ ಸಾಹಿತ್ಯಕ್ಕೆ ಸಂಬಂಧಿಸಿದ ಸಂಗತಿಗಳು. ಕನ್ನಡದ ಅತಿಮುಖ್ಯವಾದ ಸಾರವತ್ತಾದ ಪ್ರಕಾರ ವಚನಸಾಹಿತ್ಯ. ಇದರ ಹರಹು ವ್ಯಾಪ್ತಿ ಅತ್ಯಂತ ವಿಸ್ತಾರವಾದುದು. ಸಿದ್ಧರಾಮೇಶ್ವರ ತನ್ನ ಈ ವಚನದಲ್ಲಿ ಈ ವಿಷಯವನ್ನು ಸ್ಪಷ್ಟಪಡಿಸಿದ್ದಾನೆ.

ಅಲ್ಲಯ್ಯಗಳ ವಚನ ಎರಡೆಂಬತ್ತು ಕೋಟಿ
ಅಪ್ಪಯ್ಯಗಳ ವಚನ ನಾಲ್ಕುಲಕ್ಷದ ಮೂವತ್ತಾರುಸಾಸಿರ
ಎಮ್ಮಯ್ಯಗಳ ವಚನ ವಚನಕ್ಕೊಂದು
ನೀಲಮ್ಮನ ವಚನ ಲಕ್ಷದಹನ್ನೊಂದುಸಾಸಿರ
ಗಂಗಾಂಬಿಕೆಯ ವಚನ ಲಕ್ಷದಎಂಟುಸಾಸಿರ
ಎಮ್ಮಕ್ಕ ನಾಗಾಯಿಯ ವಚನ ಮೂರುಲಕ್ಷದ ತೊಂಬತ್ತಾರುಸಾಸಿರ
ಮಡಿವಾಳಣ್ಣನ ವಚನ ಮೂರುಕೋಟಿ ಮುನ್ನೂರು
ಹಡಪದಪ್ಪಯ್ಯಗಳ ವಚನ ಹನ್ನೊಂದುಸಾಸಿರ
ಮರುಳಸಿದ್ಧನ ವಚನ ಅರುವತ್ತೆಂಟುಸಾಸಿರ
ಇಂತಪ್ಪ ವಚನದ ರಚನೆಯ ಬಿಟ್ಟು
ಹುಡಿಮಣ್ಣ ಹೊಯ್ಯದೆ ಮಾಬನೆ
ಕುತ್ಸಿತ ಕಾವ್ಯಾಲಂಕಾರ ನೋಡುವರ ನೋಡಿ
ಮಹಾದೇವ ಕಪಿಲಸಿದ್ಧಮಲ್ಲಿಕಾರ್ಜುನ.

(ಸಿದ್ಧರಾಮೇಶ್ವರ ವಚನಗಳು, ೧೯೫೨:
ಸಮಗ್ರ ವಚನಸಾಹಿತ್ಯ ಜನಪ್ರಿಯ ಆವೃತ್ತಿ, ಸಂಪುಟ ೪)

ವಚನ ಸಾಹಿತ್ಯದ ಪ್ರಥಮ ಮತ್ತು ದ್ವಿತೀಯ ಘಟ್ಟಗಳಲ್ಲಿ ಅವತರಿಸಿದ ನೂರಾರು ವಚನಕಾರ ವಚನಕಾರ್ತಿಯರು ಸಹಸ್ರಾರು ವಚನಗಳನ್ನು ತಮ್ಮ ಇಷ್ಟದೈವದ ಅಂಕಿತದಲ್ಲಿ ಬರೆದು ತಮ್ಮ ಶಿವಪಾರಮ್ಯವನ್ನು ಮೆರೆದಿದ್ದಾರೆ. ಇದು ಕನ್ನಡ ಸಾಹಿತ್ಯದ ವೀರಶೈವ ಧರ್ಮದ ಹೆಗ್ಗಳಿಕೆಯಾಗಿದೆ. ಈ ವಚನ ಸಿಂಧುವಿನಲ್ಲಿ ಸಾರ್ವತ್ರಿಕ, ಸಾರ್ವಕಾಲಿಕ, ಸಾರ್ವದೇಶಿಕ ಮೌಲ್ಯಗಳನ್ನು ನಿರೂಪಿಸಿರುವ ಕೆಲವು ಬಿಂದುಗಳನ್ನು ಅವಲೋಕಿಸಬಹುದಾಗಿದೆ.

ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ
ಮುನಿಯಬೇಡ ಅನ್ಯರಿಗೆ ಅಸಹ್ಯಪಡಬೇಡ
ತನ್ನ ಬಣ್ಣಿಸಬೇಡ ಇದಿರ ಹಳಿಯಲುಬೇಡ
ಇದೇ ಅಂತರಂಗಶುದ್ಧಿ ಇದೇ ಬಹಿರಂಗಶುದ್ಧಿ
ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ ॥ ೨೩೫ ॥

ದಯವಿಲ್ಲದ ಧರ್ಮವದೇವುದಯ್ಯಾ
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ
ದಯವೇ ಧರ್ಮದ ಮೂಲವಯ್ಯಾ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ ॥ ೨೪೭ ॥

(ಬಸವಣ್ಣನವರ ವಚನಗಳು : ಶಿ.ಶಿ. ಬಸವನಾಳ)

ಆಸೆಗೆ ಸತ್ತುದು ಕೋಟಿ, ಆಮಿಷಕ್ಕೆ ಸತ್ತುದು ಕೋಟಿ
ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ
ಗೊಹೇಶ್ವರಾ ನಿಮಗಾಗಿ ಸತ್ತವರನಾರನೂ ಕಾಣೆ ॥ ೫೭ ॥

(ವಚನ ಸಾಹಿತ್ಯ ಸಂಗ್ರಹ, ಪು.೪೩, ವ.೫೭)

ಆಸೆಯೆಂಬುದು ಅರಸಿಂಗಲ್ಲದೆ
ಶಿವಭಕ್ತರಿಗುಂಟೆ ಅಯ್ಯಾ
ರೋಷವೆಂಬುದು ಯಮದೂತರಿಗಲ್ಲದೆ
ಅಜಾತರಿಗುಂಟೆ ಅಯ್ಯಾ
ಈಸಕ್ಕಿಯಾಸೆ ನಿಮಗೇಕೆ ಈಶ್ವರನೊಪ್ಪ
ಮಾರಯ್ಯಪ್ರಿಯ ಅಮರೇಶ್ವರಲಿಂಗಕ್ಕೆ ದೂರ ಮಾರಯ್ಯ

(ವಚನ ಸಾಹಿತ್ಯ ಸಂಗ್ರಹ, ಪುಟ ೨೪೭, ವ.೧೩)

ಇಳೆ ನಿಮ್ಮ ದಾನ ಬೆಳೆ ನಿಮ್ಮ ದಾನ
ಸುಳಿದು ಬೀಸುವ ವಾಯು ನಿಮ್ಮ ದಾನ
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ ರಾಮನಾಥಾ.

(ವಚನ ಸಾಹಿತ್ಯ ಸಂಗ್ರಹ, ಪುಟ ೧೦೮, ವ.೪೧)

ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಂಗಳಿಗಂಜಿದಡೆಂತಯ್ಯ
ಸಮುದ್ರದ ತಡಿಯಲ್ಲಿ ಮನೆಯ ಮಾಡಿ
ನೊರೆತೆರೆಗಳಿಗಂಜಿದಡೆಂತಯ್ಯ
ಸಂತೆಯೊಳಗೊಂದು ಮನೆಯ ಮಾಡಿ
ಶಬ್ದಕ್ಕೆ ನಾಚಿದಡೆಂತಯ್ಯಾ
ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯಾ
ಲೋಕದಲ್ಲಿ ಹುಟ್ಟಿರ್ದ ಬಳಿಕ ಸ್ತುತಿನಿಂದೆಗಳು ಬಂದಡೆ
ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

(ವಚನ ಸಾಹಿತ್ಯ ಸಂಗ್ರಹ, ಪುಟ ೪೫೭, ವ.೧೦೨)

ವಚನಕಾರರ ತರುವಾಯ ಹನ್ನೆರಡನೆಯ ಶತಮಾನದಲ್ಲಿ ಹಲವಾರು ಪ್ರಮುಖ ವೀರಶೈವ ಕವಿಗಳು ಕಂಡುಬರುತ್ತಾರೆ. ಅವರಲ್ಲಿ ಹರಿಹರ, ರಾಘವಾಂಕ, ಕೆರೆಯ ಪದ್ಮರಸ, ಕುಮಾರ ಪದ್ಮರಸ ಮೊದಲಾದವರು ವಿವಿಧ ಛಂದೋಪ್ರಕಾರಗಳಲ್ಲಿ ಕೃತಿರಚನೆ ಮಾಡಿದ್ದಾರೆ. ಪಂಪಾವಿರೂಪಾಕ್ಷನ ಪರಮಭಕ್ತನಾದ ಹರಿಹರ:

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಯಕ್ಕಟಾ
ತನ ತನಗಿಂದ್ರ ಚಂದ್ರರವಿಕರ್ಣದಧೀಚಿ ಬಲೀಂದ್ರನೆಂದು ತಾ
ನನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ

ಶಿವಭಕ್ತರನ್ನುಳಿದು ಬೇರೆಯವರ ಮೇಲೆ ಕೃತಿರಚನೆಯನ್ನು ಮಾಡುವುದಿಲ್ಲ ಎಂದು ಪ್ರತಿಜ್ಞೆಮಾಡಿದ್ದಾನೆ. ಆತನ ಇತಿವೃತ್ತಗಳು ಇಂತಿವೆ:

ಈತನು ಗಿರಿಜಾಕಲ್ಯಾಣ, ಪಂಪಾಶತಕ, ರಕ್ಷಾಶತಕ, ಶಿವಶರಣರ ರಗಳೆಗಳು, ಮುಡಿಗೆಯ ಅಷ್ಟಕ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಗಿರಿಜಾಕಲ್ಯಾಣ ಚಂಪೂರೂಪವಾಗಿದೆ. ಹತ್ತುಆಶ್ವಾಸಗಳುಳ್ಳ ಈ ಕಾವ್ಯದಲ್ಲಿ ಶಿವನಿಗೂ ಪಾರ್ವತಿಗೂ ನಡೆದ ವಿವಾಹವನ್ನು ವರ್ಣಿಸಿದೆ. ಈತನು ಒಂದುನೂರಇಪ್ಪತ್ತು ಶಿವಭಕ್ತರ ಮೇಲೆ ರಗಳೆಗಳನ್ನು ಬರೆದಿದ್ದಾನೆ. ಪಂಪಾವಿರೂಪಾಕ್ಷನ ಸ್ತುತಿರೂಪವಾದ ಪಂಪಾಶತಕವನ್ನು ಭಕ್ತಿವೈರಾಗ್ಯಗಳನ್ನು ಬೋಧಿಸುವ ರಕ್ಷಾಶತಕವನ್ನೂ ಬರೆದಿದ್ದಾನೆ. ಚಂಪೂ, ರಗಳೆ, ಶತಕಗಳಲ್ಲಿ ವೀರಶೈವ ಕೃತಿಗಳನ್ನು ಬರೆದ ಮೊದಲಿಗ ಎಂಬ ಕೀರ್ತಿಗೆ ಭಾಜನನಾಗಿದ್ದಾನೆ.

ಈತನ ತರುವಾಯ ಷಟ್ಪದಿ ನಿರ್ಮಾಪಕ ಎಂಬ ಖ್ಯಾತಿಯನ್ನು ಪಡೆದಿರುವ ಈತನ ಅಳಿಯ ರಾಘವಾಂಕ, ಹರಿಶ್ಚಂದ್ರ ಕಾವ್ಯ, ಸೋಮನಾಥ ಚರಿತೆ, ಸಿದ್ಧರಾಮ ಪುರಾಣ, ವೀರೇಶ್ವರ ಚರಿತೆ, ಶರಭಚಾರಿತ್ರ, ಹರಿಹರಮಹತ್ವ ಎಂಬ ವೀರಶೈವಧರ್ಮಪ್ರತಿಪಾದಕ ಕೃತಿಗಳನ್ನು ಬರೆದಿದ್ದಾನೆ. ಷಟ್ಪದಿಯಲ್ಲಿ ಕೃತಿರಚನೆ ಮಾಡಿದವರಲ್ಲಿ ಈತನೇ ಮೊದಲಿಗ. ಈತನಾದ ಮೇಲೆ ಸು. ೧೧೬೫ರಲ್ಲಿದ್ದ ಕೆರೆಯ ಪದ್ಮರಸ "ದೀಕ್ಷಾಬೋಧೆ" ಎಂಬ ರಗಳೆ ರೂಪದ ಗ್ರಂಥವನ್ನೂ ಸು. ೧೧೮೦ರಲ್ಲಿದ್ದ ಈತನ ಮಗ ಕುಮಾರ ಪದ್ಮರಸ "ಸಾನಂದ ಚರಿತ್ರೆ"ಯನ್ನು ಬರೆದಿದ್ದಾನೆ. ಇದು ವಿವಿಧ ಷಟ್ಪದಿಗಳಲ್ಲಿದೆ.

ಕುಮಾರ ಪದ್ಮರಸನ ತರುವಾಯ ಸು. ೧೧೯೫ರಲ್ಲಿದ್ದ ಪಾಲ್ಕುರಿಕೆಸೋಮನಾಥ ವಚನರೂಪವಾದ ಶೀಲಸಂಪಾದನೆ, ಗಣಸಹಸ್ರನಾಮ, ಪಂಚರತ್ನ, ಸದ್ಗುರು ರಗಳೆ, ಚನ್ನಬಸವ ಸ್ತೋತ್ರದ ರಗಳೆ, ಶರಣು ಬಸವರಗಳೆ ಮುಂತಾದ ಕೃತಿಗಳನ್ನು ರಚಿಸಿದ್ದಾನೆ. ಈವರೆಗೆ ವಿವೇಚಿಸಿದ ಕವಿಗಳೆಲ್ಲರೂ ವೀರಶೈವ ಸಾಹಿತ್ಯದ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಅನರ್ಘ್ಯಕೃತಿಗಳನ್ನು ನೀಡಿದ್ದಾರೆ. ಈ ಶತಮಾನದಲ್ಲಿ ಈವರೆಗೆ ಪ್ರಸ್ತಾಪಿಸಿದವರೇ ಅಲ್ಲದೆ ಇನ್ನೂ ಹಲವಾರು ವೀರಶೈವ ಕವಿಗಳು ಕೃತಿಗಳನ್ನು ರಚಿಸಿದ್ದಾರೆ.

ಹದಿಮೂರನೆಯ ಶತಮಾನದ ಸೋಮರಾಜ ೧೨೨೨ರಲ್ಲಿ ಬಾಳಿ ಬೆಳಗಿದವನು. ಈತನು ಶೃಂಗಾರಸಾರ ಎಂಬ ಚಂಪೂಕೃತಿಯನ್ನು ಬರೆದಿದ್ದಾನೆ. ಇದಕ್ಕೆ ಉದ್ಭಟಕಾವ್ಯ ಎಂಬ ಹೆಸರು ರೂಢಿಯಲ್ಲಿದೆ.

ಹದಿನಾಲ್ಕನೆಯ ಶತಮಾನದ ವೀರಶೈವ ಕವಿಗಳಲ್ಲಿ ಸು. ೧೩೫೦ರಲ್ಲಿದ್ದ ಗುರುದೇವ ಸು. ೧೩೯೯ರಲ್ಲಿದ್ದ ಭೀಮಕವಿ, ಸು. ೧೩೮೫ರಲ್ಲಿದ್ದ ಪದ್ಮಣಾಂಕ ಪ್ರಮುಖರು. ಗುರುದೇವ ಮಹಿಮ್ನಾ ಸ್ತೋತ್ರ, ಮಲೆಯರಾಜ ಸ್ತೋತ್ರ, ಅನಾಮಯ ಸ್ತೋತ್ರ, ಹಲಾಯುಧ ಸ್ತೋತ್ರ, ಭೃಂಗಿಸ್ತವ – ಇವುಗಳಿಗೆ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾನೆ. ಭೀಮಕವಿ ಬಸವಪುರಾಣವನ್ನೂ ಭೀಮಕವೀಶ್ವರ ರಗಳೆಯನ್ನೂ ಬರೆದಿದ್ದಾನೆ. ಬಸವಪುರಾಣ ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿದೆ. ಇದರಲ್ಲಿ ೮ ಆಶ್ವಾಸಗಳೂ ೬೧ ಸಂಧಿಗಳು ೩೬೨೧ ಪದ್ಯಗಳೂ ಇವೆ. ಇದರಲ್ಲಿ ಬಸವನ ಚರಿತವೂ ಅವನು ಮಾಡಿದ ಪವಾಡಗಳೂ, ಅಲ್ಲಲ್ಲಿ ಶಿವಭಕ್ತರ ಕಥೆಗಳೂ ಹೇಳಿವೆ. ಪದ್ಮಣಾಂಕ ಪದ್ಮರಾಜ ಪುರಾಣವನ್ನು ಬರೆದಿದ್ದಾನೆ. ಇದರಲ್ಲಿ ಕೆರೆಯ ಪದ್ಮರಸನ ಚರಿತ್ರೆಯನ್ನು ಹೇಳಿದೆ. ವಾರ್ಧಕ ಷಟ್ಪದಿಯಲ್ಲಿರುವ ಈ ಕೃತಿಯಲ್ಲಿ ೧೩ ಸಂಧಿಗಳೂ ೧೨೬೬ ಪದ್ಯಗಳೂ ಇವೆ. ಈ ಶತಮಾನದಲ್ಲಿ ಇವರೇ ಅಲ್ಲದೆ ಇನ್ನೂ ಹಲವು ವೀರಶೈವ ಕವಿಗಳು ಆಗಿಹೋಗಿದ್ದಾರೆ.

ಹದಿನೈದು ಮತ್ತು ಹದಿನಾರನೆಯ ಶತಮಾನಗಳನ್ನು ವೀರಶೈವ ಸಾಹಿತ್ಯದ ಸುವರ್ಣಯುಗವೆಂದು ಪರಿಗಣಿಸಬಹುದು. ೧೪೧೩ರಲ್ಲಿದ್ದ ಮಲ್ಲಣ್ಣ ರೇವಣಸಿದ್ಧೇಶ್ವರ ಕಾವ್ಯವನ್ನು ಬರೆದಿದ್ದಾನೆ. ಇದು ಭಾಮಿನಿ ಷಟ್ಪದಿಯಲ್ಲಿದೆ. ೩ ಸಂಧಿ,

೩೧೦ ಪದ್ಯಗಳಿವೆ. ಇದರಲ್ಲಿ ವೀರಶೈವಾಚಾರ್ಯರು ಐವರಲ್ಲಿ ಒಬ್ಬನಾದ ರೇವಣಸಿದ್ಧನ ಚರಿತ್ರವು ಹೇಳಿದೆ. ಆಮೇಲೆ ೧೪೨೪ರಲ್ಲಿದ್ದ ಲಕ್ಕಣ್ಣದಂಡೇಶ ಶಿವತತ್ತ್ವ ಚಿಂತಾಮಣಿಯನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಇದರಲ್ಲಿ ೫೪ ಸಂಧಿಗಳೂ ೨೧೨೧ ಪದ್ಯಗಳೂ ಇವೆ. ತರುವಾಯ ಸು. ೧೪೨೫ರಲ್ಲಿದ್ದ ಮಹಾಲಿಂಗದೇವ ಏಕೋತ್ತರ ಶತಸ್ಥಲ, ಪ್ರಭುದೇವರ ಷಟ್ಸ್ಥಲಜ್ಞಾನ ಚಾರಿತ್ರ ವಚನದ ಟೀಕೆ ಇವುಗಳನ್ನು ಬರೆದಿದ್ದಾನೆ. ಸು. ೧೪೩೦ರಲ್ಲಿದ್ದ ಕುಮಾರ ಬಂಕನಾಥ ಷಟ್ಸ್ಥಲೋಪದೇಶ, ಪ್ರಭುದೇವರ ಟೀಕಿನ ವಚನ ಇವುಗಳನ್ನು ಬರೆದಿದ್ದಾನೆ. ಸು. ೧೪೩೦ರಲ್ಲಿದ್ದ ಜಕ್ಕಣಾರ್ಯ ನೂರೊಂದು ಸ್ಥಲ ಎಂದರೆ ಏಕೋತ್ತರ ಸ್ಥಲವನ್ನು ಬರೆದಿದ್ದಾನೆ. ಚಾಮರಸ ಸು. ೧೪೩೦ ಈತನು ಪ್ರಭುಲಿಂಗ ಲೀಲೆಯನ್ನು ಬರೆದಿದ್ದಾನೆ. ಇದು ಭಾಮಿನೀ ಷಟ್ಪದಿಯಲ್ಲಿದೆ. ಇದರಲ್ಲಿ ೬೫ ಗತಿಗಳೂ ೧೧೧೧ ಪದ್ಯಗಳೂ ಇವೆ. ಇದರಲ್ಲಿ ಪ್ರಭುದೇವನ ಅಥವಾ ಅಲ್ಲಮನ ಚರಿತ್ರವು ಹೇಳಿದೆ. ಸು. ೧೪೩೦ರಲ್ಲಿದ್ದ ಕಲ್ಲಮಠದ ಪ್ರಭುದೇವ ಲಿಂಗಲೀಲಾವಿಲಾಸಚಾರಿತ್ರ, ಪ್ರಭುದೇವರ ಮಂತ್ರಗೋಪ್ಯದ ಟೀಕೆ ಇವುಗಳನ್ನು ಬರೆದಿದ್ದಾನೆ. ಲಿಂಗಲೀಲಾವಿಲಾಸಚಾರಿತ್ರ ಷಟ್ಸ್ಥಲವನ್ನು ಬೋಧಿಸುವ ವಚನಗ್ರಂಥ ಸ್ಥಲ ೧೬ ವಚನ, ೭೨೦. ಪ್ರಭುದೇವರ ಮಂತ್ರಗೋಪ್ಯದಲ್ಲಿ ೨೭ ಪದ್ಯಗಳಿವೆ. ಇದು ಅವಕ್ಕೆ ವ್ಯಾಖ್ಯಾನ. ಸು. ೧೪೩೦ರಲ್ಲಿದ್ದ ಕರಸ್ಥಲದ ನಾಗಿದೇವ ಒಂದು ತ್ರಿಪದಿಗ್ರಂಥವನ್ನು ಬರೆದಿದ್ದಾನೆ. ಇದಕ್ಕೆ ಕರಸ್ಥಲದ ನಾಗಿದೇವ ತ್ರಿವಿಧಿ ಎಂದು ಹೆಸರು. ಇದರಲ್ಲಿ ೩೧ ಪದ್ಯಗಳಿವೆ. ಇವು ಗೂಢಾರ್ಥವುಳ್ಳ ಪದ್ಯಗಳು; ವೀರಶೈವ ಸಿದ್ಧಾಂತವನ್ನು ಬೋಧಿಸುತ್ತವೆ. ಮಗ್ಗೆಯ ಮಾಯಿದೇವ ಸು. ೧೪೦೦. ಈತನು ಅನುಭವಸೂತ್ರ, ಪ್ರಭುಗೀತ, ಏಕೋತ್ತರ ಶತಸ್ಥಲ ಷಟ್ಪದಿ, ಷಟ್ಸ್ಥಲಗದ್ಯ, ಶತಕತ್ರಯ, ಮಗ್ಗೆಯ ಮಾಯಿದೇವ ವಚನ ಎಂಬ ಗ್ರಂಥಗಳನ್ನು ಬರೆದಂತೆ ತಿಳಿಯುತ್ತದೆ. ಶತಕತ್ರಯದಲ್ಲಿ ಶಿವಾಧವ ಶತಕ, ಶಿವಾವಲ್ಲಭಶತಕ, ಐಪುರೀಶ್ವರ ಶತಕ ಎಂಬ ಮೂರುಶತಕಗಳಿವೆ. ಶಿವಾಧವಶತಕದಲ್ಲಿ ೧೦೧ ವೃತ್ತಗಳಿವೆ. ಪ್ರತಿಪದ್ಯವೂ ಶಿವಾಧವ ಎಂದು ಮುಗಿಯುತ್ತದೆ. ಶಿವಾವಲ್ಲಭಶತಕದಲ್ಲಿ ೧೦೩ ವೃತ್ತಗಳಿವೆ. ಪ್ರತಿಪದ್ಯವೂ ಶಿವಾವಲ್ಲಭ ಎಂದು ಮುಗಿಯುತ್ತದೆ. ಐಪುರೀಶ್ವರಶತಕದಲ್ಲಿ ೧೧೩ ವೃತ್ತಗಳಿವೆ. ಪ್ರತಿಪದ್ಯವೂ ಮಹದೈವಪುರೀಶ್ವರಾ ಎಂದು ಮುಗಿಯುತ್ತದೆ. ಸು. ೧೪೩೦ರಲ್ಲಿದ್ದ ಗುರುಬಸವ ಶಿವಯೋಗಾಂಗಭೂಷಣ, ಸದ್ಗುರುರಹಸ್ಯ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭಗೀತೆ, ಅವಧೂತಗೀತೆ, ಮನೋವಿಜಯಕಾವ್ಯ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಶಿವಯೋಗಾಂಗ ಭೂಷಣ ಪರಿವರ್ಧಿನೀ ಷಟ್ಪದಿಯಲ್ಲಿದೆ. ಸಂಧಿ ೬, ಪದ್ಯ ೨೭೮; ಸದ್ಗುರುರಹಸ್ಯ ಭಾಮಿನೀ ಷಟ್ಪದಿಯಲ್ಲಿದೆ. ಉಪದೇಶ ೯, ಪದ್ಯ ೨೩೭; ಕಲ್ಯಾಣೇಶ್ವರ ಪರಿವರ್ಧಿನೀ ಷಟ್ಪದಿಯಲ್ಲಿದೆ ಪದ್ಯ ೧೦೨; ವೃಷಭಗೀತೆ ಭೋಗಷಟ್ಪದಿಯಲ್ಲಿದೆ ಪದ್ಯ ೧೦೧, ಅವಧೂತ ಗೀತೆ ಹಾಡಿನ ರೂಪದಲ್ಲಿದೆ. ಹಾಡು ೧೦೧. ಮನೋವಿಜಯಕಾವ್ಯ ಕುಸುಮ ಷಟ್ಪದಿಯಲ್ಲಿದೆ. ಪ್ರಕರಣ ೯ ಪದ್ಯ ೩೫೫. ಈತನಾದ ಮೇಲೆ ಸು. ೧೪೮೦ರಲ್ಲಿದ್ದ ಚಂದ್ರಕವಿ ವಿರೂಪಾಕ್ಷಾಸ್ಥಾನ, ಗುರುಮೂರ್ತಿಶಂಕರ ಶತಕ ಇವುಗಳನ್ನು ಬರೆದಿದ್ದಾನೆ. ವಿರೂಪಾಕ್ಷಾಸ್ಥಾನ ಚಂಪೂರೂಪವಾಗಿದೆ. ಗುರುಮೂರ್ತಿಶಂಕರ ಶತಕ ವೃತ್ತದಲ್ಲಿದೆ. ಸು. ೧೪೫೦ರಲ್ಲಿದ್ದ ಬೊಮ್ಮರಸ ಸೌಂದರಪುರಾಣವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಸಂಧಿ ೧೦, ಪದ್ಯ ೧೨೦೫ ಇದರಲ್ಲಿ ೬೩ ಶಿವಭಕ್ತರಲ್ಲಿ ಒಬ್ಬನಾದ ಸೌಂದರೇಶ ಅಥವಾ ನಂಬಿಯಣ್ಣನ ಚರಿತ್ರೆ ಹೇಳಿದೆ. ಸು. ೧೪೫೦ರಲ್ಲಿದ್ದ ಸಾಸಲ ಚಿಕ್ಕಣಾರಾಧ್ಯ ಪಂಚಬ್ರಹ್ಮೋದಯಭಾಷ್ಯವನ್ನು ಬರೆದಿದ್ದಾನೆ. ಇದು ಗದ್ಯಗ್ರಂಥ. ಅಧ್ಯಾಯ ೯ ಅಥರ್ವಣವೇದಮಂತ್ರವ್ಯಾಖ್ಯೆಯೆಂದು ಹೇಳಿದೆ. ಕೊನೆಯಲ್ಲಿ ಪಂಚಾಚಾರ್ಯರು ಅವರ ಸಂತತಿಯವರು, ತತ್ಕೃತ ಗ್ರಂಥಗಳು ಈ ವಿಷಯಗಳು ಉಕ್ತವಾಗಿವೆ. ತರುವಾಯ ಸು. ೧೪೩೦ರಲ್ಲಿದ್ದ ಗುಬ್ಬಿಯ ಮಲ್ಲಣ್ಣ ಗಣಭಾಷ್ಯ ರತ್ನಮಾಲೆ, ವಾತುಲತಂತ್ರ ಟೀಕೆ ಇವುಗಳನ್ನು ಬರೆದಿದ್ದಾನೆ. ಗಣಭಾಷ್ಯರತ್ನಮಾಲೆ ವಚನ ಗ್ರಂಥ ಇದಕ್ಕೆ ಗಣಭಾಷಿತ ರತ್ನಮಾಲೆ ಎಂಬ ಹೆಸರೂ ಉಂಟು.

ಸು. ೧೪೮೦ರಲ್ಲಿದ್ದ ಸ್ವತಂತ್ರ ಸಿದ್ಧಲಿಂಗೇಶ್ವರ, ಸ್ವತಂತ್ರ ಸಿದ್ಧಲಿಂಗೇಶ್ವರ ವಚನ; ಮುಕ್ತ್ಯಂಗನೆಯ ಕಂಠಮಾಲೆ ಇವುಗಳನ್ನು ಬರೆದಿದ್ದಾನೆ. ಸ್ವತಂತ್ರ ಸಿದ್ಧಲಿಂಗೇಶ್ವರ ವಚನ ವೀರಶೈವ ಸಿದ್ಧಾಂತವನ್ನು ಬೋಧಿಸುತ್ತದೆ. ವಚನ ೪೩೦. ಮುಕ್ತ್ಯಂಗನೆಯ ಕಂಠಮಾಲೆ ವಚನ ರೂಪವಾಗಿದೆ. ಇದಕ್ಕೆ ಒಂದು ಕನ್ನಡ ವ್ಯಾಖ್ಯಾನವಿದೆ. ತರುವಾಯ ಸು. ೧೪೮೫ರಲ್ಲಿದ್ದ ಮಲ್ಲಿಕಾರ್ಜುನ ಕವಿ ಶ್ವೇತನ ಸಾಂಗತ್ಯವನ್ನು ಬರೆದಿದ್ದಾನೆ. ಈ ಶತಮಾನದ ಷಟ್ಪದಿ ಕವಿಗಳ

ಸಾಲಿನಲ್ಲಿ ನೀಲಕಂಠಾಚಾರ್ಯ (ಸು. ೧೪೮೫)ನಿಗೆ ವಿಶೇಷ ಸ್ಥಾನವಿದೆ. ಈತನು ಆರಾಧ್ಯ ಚಾರಿತ್ರವನ್ನು ಬರೆದಿದ್ದಾನೆ. ಆರಾಧ್ಯ ಚಾರಿತ್ರ ವಾರ್ಧಕ ಷಟ್ಪದಿಯಲ್ಲಿದೆ. ೫ ಪ್ರಕರಣ ೬೫ ಸಂಧಿ ೩೦೭೯ ಪದ್ಯಗಳಿವೆ. ಇದರಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಚರಿತೆ ಹೇಳಿದೆ.

ಸು. ೧೫೦೦ರಲ್ಲಿದ್ದ ಚತುರ್ಮುಖ ಬೊಮ್ಮರಸ ರೇವಣಸಿದ್ಧೇಶ್ವರ ಪುರಾಣವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಸಂಧಿ ೧೮ ಪದ್ಯ ೫೬೫. ಇದರಲ್ಲಿ ರೇವಣಸಿದ್ಧೇಶ್ವರ ಚರಿತವು ಹೇಳಿದೆ; ಆನಂದ ಬಸವಲಿಂಗ ಶಿವಯೋಗಿ ಸು. ೧೫೦೦ರಲ್ಲಿದ್ದು ಮಾಚಿದೇವ ಮನೋವಿಲಾಸವನ್ನು ಬರೆದಿದ್ದಾನೆ. ಇದು ಗದ್ಯರೂಪವಾಗಿದೆ. ಪ್ರಕರಣ ೩೪. ಇದರಲ್ಲಿ ಮಡಿವಾಳಮಾಚಿದೇವನ ಮನೋಭಾವವನ್ನು ಅನುಸರಿಸಿ ವೀರಶೈವ ಸಿದ್ಧಾಂತವು ನಿರೂಪಿತವಾಗಿದೆ. ಸು. ೧೫೦೦ರಲ್ಲಿದ್ದ ವಿರತ ಮಹಲಿಂಗದೇವ ಗುರುಬೋಧಾಮೃತವನ್ನು ಬರೆದಿದ್ದಾನೆ. ಇದು ತ್ರಿಪದಿಯಲ್ಲಿದೆ. ಕೆಲವು ಕಂದವೃತ್ತಗಳೂ ಇವೆ. ಒಟ್ಟು ೧೦೨೧; ಸ್ಥಲ ೫.

ಸಿಂಗಿರಾಜ ಸು. ೧೫೦೦ ಈತನು ಮಲಬಸವರಾಜ ಚಾರಿತ್ರವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಅಲ್ಲಲ್ಲಿ ಇತರ ಷಟ್ಪದಿಗಳೂ ಇವೆ. ಸಂಧಿ ೪೮, ಪದ್ಯ ೧೯೦೭. ಇದಕ್ಕೆ ಸಿಂಗಿರಾಜಪುರಾಣ ಎಂಬ ಹೆಸರೂ ಉಂಟು. ಇದರಲ್ಲಿ ಬಸವನ ೮೮ ಪವಾಡಗಳು ವರ್ಣಿತವಾಗಿವೆ.

ಸು. ೧೫೦೦ರಲ್ಲಿದ್ದ ನಿಜಗುಣ ಶಿವಯೋಗಿ ಅನುಭವಸಾರ, ಅರವತ್ತುಮೂವರ ತ್ರಿಪದಿ, ಕೈವಲ್ಯ ಪದ್ಧತಿ, ಪರಮಾನುಭವಬೋಧೆ, ಪರಮಾರ್ಥಗೀತೆ, ಪರಮಾರ್ಥ ಪ್ರಕಾಶಿಕೆ, ವಿವೇಕ ಚಿಂತಾಮಣಿ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಅನುಭವಸಾರ ತ್ರಿಪದಿಯಲ್ಲಿದೆ ಸಂಧಿ ೮, ಸೂತ್ರ ೪೬, ಪದ್ಯ ೫೩೫; ಕೈವಲ್ಯ ಪದ್ಧತಿ ಹಾಡುಗಳ ರೂಪವಾಗಿದೆ. ಸ್ಥಲ ೫ ವಚನಗಳ ಜೋಡು ೧೭೪, ಪದಗಳು ೬೪೮; ಪರಮಾರ್ಥಗೀತೆ ಲಲಿತರಗಳೆಯಲ್ಲಿದೆ. ಕೆಲವು ಕಂದಗಳೂ ಇವೆ. ಗತಿ ೧೧ ಕಂದ ೩೨ ನಿರೂಪಣೆ ೧೨೧ ಚರಣ ೧೪೯೬; ಪರಮಾನುಭವಬೋಧೆ ಸಾಂಗತ್ಯದಲ್ಲಿ ಬರೆದಿರುವಂತೆ ತೋರುತ್ತದೆ. ಸಂಧಿ ೬ ಸೂತ್ರ ೧೨೨ ಪದ ೯೮೫; ಅರವತ್ತುಮೂವರ ತ್ರಿಪದಿಗೆ ಪುರಾತನರ ತ್ರಿವಿಧಿ ಎಂಬ ಹೆಸರೂ ಉಂಟು; ೭೭ ಪದ್ಯಗಳಿವೆ, ವಿವೇಕ ಚಿಂತಾಮಣಿ ಗದ್ಯಗ್ರಂಥ, ಪ್ರಕರಣ ೧೦ ವಿಷಯಗಳು ೭೬೬ ಗ್ರಂಥ ಸಂಖ್ಯೆ ೬೦೦೦; ಪರಮಾರ್ಥ ಪ್ರಕಾಶಿಕೆ. ಇದು ಚೆನ್ನಸದಾಶಿವಯೋಗಿ ಕೃತ ಶಿವಯೋಗ ಪ್ರದೀಪಿಕೆಗೆ ಕನ್ನಡ ವ್ಯಾಖ್ಯಾನ, ಪರಿಚ್ಛೇದ ೫.

ಸುರಂಗಕವಿ ಸು. ೧೫೦೦. ಈತನು ತ್ರಿಷಷ್ಟಿಪುರಾತನರಚರಿತ್ರೆಯನ್ನು ಬರೆದಿದ್ದಾನೆ. ಇದು ಚಂಪೂರೂಪವಾಗಿದೆ. ಆಶ್ವಾಸ ೬೩. ಇದರಲ್ಲಿ ಪ್ರಸಿದ್ಧರಾದ ೬೩ ಶಿವಭಕ್ತರ ಚರಿತ್ರವು ಹೇಳಿದೆ. ಸು. ೧೫೦೦ರಲ್ಲಿದ್ದ ನೀಲಕಂಠಾರಾಧ್ಯ ಪರವಾದಿಗಜಾಂಕುಶ ತಾರಾವಳಿಯನ್ನು ಬರೆದಿದ್ದಾನೆ. ಚೆನ್ನವೀರ ಸು. ೧೫೦೦ರಲ್ಲಿದ್ದು ಸಾರಸ್ವತ ವ್ಯಾಕರಣ, ಪುರುಷಸೂಕ್ತ ನಮಕಚಮಕ ಇವುಗಳಿಗೆ ಕನ್ನಡ ಟೀಕೆಯನ್ನು ಬರೆದಿದ್ದಾನೆ.

**ಹದಿನಾರನೆಯ ಶತಮಾನ**

ಈ ಶತಮಾನದಲ್ಲಿ ಅಸಂಖ್ಯ ವೀರಶೈವ ಕವಿಗಳು ಜನ್ಮತಾಳಿ ತಮ್ಮ ಶ್ರೇಷ್ಠ ಕೃತಿಗಳಿಂದ ಚಿರಸ್ಮರಣೀಯರಾಗಿದ್ದಾರೆ. ಗುಬ್ಬಿಯ ಮಲ್ಲಣಾರ್ಯ ಈ ಶತಮಾನದ ಆದಿಕವಿಯೂ ಅಗ್ರಕವಿಯೂ ಎನಿಸಿಕೊಂಡಿದ್ದಾನೆ. ೧೫೧೩ರಲ್ಲಿದ್ದ ಈತನು ಭಾವಚಿಂತಾರತ್ನ, ವೀರಶೈವಾಮೃತ ಪುರಾಣ ಇವುಗಳನ್ನು ಬರೆದಿದ್ದಾನೆ. ಭಾವಚಿಂತಾರತ್ನ ವಾರ್ಧಕ ಷಟ್ಪದಿಯಲ್ಲಿದೆ. ಸಂಧಿ ೯ ಪದ್ಯ ೩೭೧. ಈ ಗ್ರಂಥಕ್ಕೆ ಸತ್ಯೇಂದ್ರಚೋಳ ಕಥೆ ಎಂಬ ಹೆಸರೂ ಉಂಟು. ವೀರಶೈವಾಮೃತ ಪುರಾಣ ವಾರ್ಧಕ ಷಟ್ಪದಿಯಲ್ಲಿದೆ. ಕಾಂಡ ೮ ಸಂಧಿ ೧೩೬ ಪದ್ಯ ೭೯೯. ಇದರಲ್ಲಿ ವೀರಶೈವ ಸಿದ್ಧಾಂತವು ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿದೆ. ವೇದಾಗಮ ಪುರಾಣೇತಿಹಾಸ ಸ್ಮೃತಿಗಳಿಂದ ವಾಕ್ಯಗಳು ಸಾಕ್ಷಿ ಎಂದು ಅನುವಾದ ಮಾಡಲ್ಪಟ್ಟಿವೆ.

ವಿರುಪರಾಜ ೧೫೧೯. ಈತನು ತ್ರಿಭುವನತಿಲಕವನ್ನು ಬರೆದಿದ್ದಾನೆ. ಇದು ಸಾಂಗತ್ಯದಲ್ಲಿದೆ. ಸಂಧಿ ೨೭ ಪದ್ಯ ೧೫೨೫. ಇದರಲ್ಲಿ ೬೩ ಶಿವಭಕ್ತರೊಳಗೆ ಒಬ್ಬನಾದ ಚೇರಮಾಂಕನೃಪನ ಕಥೆ ಹೇಳಿದೆ. ಸು. ೧೫೨೦ರಲ್ಲಿದ್ದ ಪ್ರಭುಗ ಚೂಡನಾಸ್ಥಾನ ವೈಭೋಗರಾಜಾಸ್ಥಾನ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಚೂಡನಾಸ್ಥಾನ, ಚೂಡೆಯಲಿಂಗ, ಶೌಂಡನಾಥ

ಎಂದು ಕರೆಯಲ್ಪಡುವ ಈಶ್ವರನ ಆಸ್ಥಾನದ ವರ್ಣನಾರೂಪದ ಚಂಪೂಗ್ರಂಥ. ೧೦೧ ಪದ್ಯಗಳಿವೆ. ವೈಭೋಗನಾಸ್ಥಾನ, ವೈಭೋಗರಾಜ್ಯ ಎಂದು ಕರೆಯಲ್ಪಡುವ ಈಶ್ವರನ ಆಸ್ಥಾನ ವರ್ಣನಾರೂಪವಾದ ಚಂಪೂಗ್ರಂಥ. ಪದ್ಯ ೧೦೧.

ಚೇರಮಾಂಕ ೧೫೨೧. ಈತನು ಚೇರಮಕಾವ್ಯವನ್ನು ಬರೆದಿದ್ದಾನೆ. ಚೇರಮಕಾವ್ಯ ವಾರ್ಧಕ ಷಟ್ಪದಿಯಲ್ಲಿದೆ. ಸಂಧಿ ೧೧ ಪದ್ಯ ೫೬೫. ಮುರಿಗೆಯ ಶಾಂತವೀರ: ಸೋಮಶೇಖರ ಶಿವಯೋಗಿ (ಸು. ೧೭೦೦) ಕೊಟ್ಟಿರುವ ತೋಂಟದ ಸಿದ್ಧಲಿಂಗನ ಶಿಷ್ಯ ಪರಂಪರೆಯ ಪ್ರಕಾರ ಮುರಿಗೆಯ ಶಾಂತವೀರನು ಆ ಗುರುವಿನಿಂದ ಆರನೆಯವ ನಾಗುತ್ತಾನೆ. ಇದು ನಿಜವಾಗಿದ್ದ ಪಕ್ಷದಲ್ಲಿ ಅವನ ಕಾಲವನ್ನು ಸುಮಾರು ೩೦ ವರ್ಷ ಈಚೆ ಹಾಕಬೇಕಾಗುತ್ತದೆ. ಇವನು ಶಿವಲಿಂಗಮಹಿಮಾಷಟ್ಪದ ಎಂಬ ಗ್ರಂಥವನ್ನು ಬರೆದಂತೆ ತೋರುತ್ತದೆ. ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ. ಪದ್ಯ ೧೦೫. ಈತನು ಪ್ರಭುಲಿಂಗದ ಕಂದ, ವೈರಾಗ್ಯ ಷಟ್ಪದಿ, ಏಕೋನವಿಂಶತಿ ಪ್ರಬಂಧ ಇವುಗಳನ್ನು ಬರೆದಿದ್ದಾನೆ. 'ಪ್ರಭುಲಿಂಗದ ಕಂದ'ದಲ್ಲಿ ೫೩ ಕಂದಗಳಿವೆ. ವೈರಾಗ್ಯ ಷಟ್ಪದಿಯಲ್ಲಿ ನೀತಿ ವೇದಾಂತ ಬೋಧಕವಾದ ೧೦೧ ವಾರ್ಧಕ ಷಟ್ಪದಿಗಳಿವೆ. ಏಕೋನವಿಂಶತಿ ಪ್ರಬಂಧದಲ್ಲಿ ೧೯ ಪದ್ಯಗಳಿರುವುದರಿಂದ ಈ ಹೆಸರು ಬಂದಂತೆ ತೋರುತ್ತದೆ. ೧೫೩೦ರಲ್ಲಿದ್ದ ಸಂಪಾದನೆಯ ಚೆನ್ನಂಜೇದೇವ ಆಚರಣೆಯ ಸಂಬಂಧದ ವಚನ ೨೬೧, ಬಸವಸ್ತೋತ್ರದ ವಚನ ೧೨೩, ಮಿಶ್ರಸ್ತೋತ್ರದ ವಚನ ೧೦೮ ಇವುಗಳನ್ನು ಸೇರಿಸಿದುದಾಗಿ ತಿಳಿಯುತ್ತದೆ.

ವೀರಭದ್ರರಾಜ ಸು. ೧೫೩೦. ಈತನು ವೀರಭದ್ರ ವಿಜಯವನ್ನೂ ಪಾರ್ವತೀ ವಲ್ಲಭ ಶತಕ, ಉಮಾಮಹೇಶ್ವರ ಶತಕ, ಪ್ರಾಣನಾಥ ಶತಕ, ಶ್ರೀಕಂಠ ಸೋಮೇಶ್ವರ ಶತಕ, ಕಂದ ಶತಕ ಎಂಬ ೫ ಶತಕಗಳನ್ನು ಬರೆದಿದ್ದಾನೆ. ವೀರಭದ್ರ ವಿಜಯ ಚಂಪೂಗ್ರಂಥ ಇದರಲ್ಲಿ ವೀರಶೈವಚರಿತ್ರವು ಹೇಳಿದೆ. ಪಾರ್ವತೀವಲ್ಲಭ ಶತಕದಲ್ಲಿ ೧೦೧ ವೃತ್ತಗಳಿವೆ. ಪ್ರತಿವೃತ್ತವೂ ಶ್ರೀ ಪಾರ್ವತೀವಲ್ಲಭಾ ಎಂದು ಮುಗಿಯುತ್ತದೆ. ಉಮಾಮಹೇಶ್ವರ ಶತಕದಲ್ಲಿ ೧೦೧ ವೃತ್ತಗಳೂ ಪ್ರಾಣನಾಥ ಶತಕದಲ್ಲಿ ೧೦೧ ವೃತ್ತಗಳೂ ಶ್ರೀಕಂಠ ಸೋಮೇಶ್ವರ ಶತಕದಲ್ಲಿ ೧೦೧ ವೃತ್ತಗಳೂ ಕಂದ ಶತಕದಲ್ಲಿ ೧೧೫ ಕಂದಗಳೂ ಇವೆ.

ಇಮ್ಮಡಿ ತೋಂಟದಯ್ಯ ಸು. ೧೫೩೦. ಈತನು ವಜ್ರಬಾಹುಚರಿತೆಯನ್ನು ಬರೆದಿದ್ದಾನೆ. ವಜ್ರಬಾಹು ಚರಿತೆಗೆ ತೋಂಟದಯ್ಯನ ಕಾವ್ಯ ಎಂಬ ಹೆಸರೂ ಇರುವಂತೆ ತೋರುತ್ತದೆ. ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ. ಅಸಮಗ್ರ.

ಚೆನ್ನಬಸವಾಂಕ ಸು. ೧೫೦೦. ಈತನು ಮಹಾದೇವಿಯಕ್ಕನ ಪುರಾಣವನ್ನು ಬರೆದಿದ್ದಾನೆ. ಇದು ನಾನಾ ಷಟ್ಪದಿಗಳಲ್ಲಿದೆ. ಕೆಲವು ಸಾಂಗತ್ಯಗಳೂ ಇವೆ. ಸ್ಥಲ ೩೩ ಪದ್ಯ ೧೬೦೪.

ಸು. ೧೫೫೦ರಲ್ಲಿದ್ದ ಕುಮಾರ ಚೆನ್ನಬಸವ ಬಸವಪುರಾಣದ ಪುರಾತನರ ಚರಿತೆಯನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಸಂಧಿ ೬ ಪದ್ಯ ೩೫೦.

ಲಿಂಗ ಸು. ೧೫೫೦. ಈತನು ಚೋಳರಾಜಸಾಂಗತ್ಯವನ್ನು ಬರೆದಿದ್ದಾನೆ. ಸಂಧಿ ೩ ಪದ್ಯ ೫೬೧

ಸಿರಿನಾಮಧೇಯ ಸು. ೧೫೫೦. ಈತನು ಮಲ್ಲೇಶ್ವರ ಶತಕವನ್ನು ಬರೆದಿದ್ದಾನೆ. ಇದರಲ್ಲಿ ೧೧೧ ವೃತ್ತಗಳಿವೆ.

ಸು. ೧೫೫೦ರಲ್ಲಿದ್ದ ಉಜ್ಜನೀಶ ವೀರಶೈವ ಸಿದ್ಧಾಂತ ಶಿಖಾಮಣಿಗೂ ಮಗ್ಗೆಯ ಮಾಯಿದೇವನ ವಿಶೇಷಾರ್ಥ ಪ್ರಕಾಶಿಕೆಗೂ ಕನ್ನಡ ಟೀಕೆಯನ್ನು ಬರೆದಿದ್ದಾನೆ.

ಸು. ೧೫೫೦ರಲ್ಲಿದ್ದ ಶ್ರೀಧರಾಂಕ ನೀಲಕಂಠನಾಗನಾಥಾಚಾರ್ಯನ ಸಂಗ್ರಹಕ್ಕೆ ಕನ್ನಡ ಟೀಕೆಯನ್ನು ಬರೆದಿದ್ದಾನೆ.

ಬಸವಾಂಕ ಸು. ೧೫೫೦. ಈತನು ಉದ್ಭಟದೇವ ಚರಿತೆಯನ್ನು ಬರೆದಿದ್ದಾನೆ. ಇದು ವಾರ್ಧಕ, ಪರಿವರ್ಧಿನಿ ಷಟ್ಪದಿಗಳಲ್ಲಿದೆ. ಸಂಧಿ ೭ ಪದ್ಯ ೩೫೪.

ಗುರುಲಿಂಗ ವಿಭು ಸು. ೧೫೫೦. ಈತನು ಭಿಕ್ಷಾಟನ ಚರಿತೆಯನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಸಂಧಿ ೩ ಪದ್ಯ ೧೫೫

ಕಿಕ್ಕೇರಿಯಾರಾಧ್ಯ ನಂಜುಂಡ ಸು. ೧೫೫೦. ಈತನು ಭೈರವೇಶ್ವರ ಕಾವ್ಯವನ್ನು ಬರೆದಿದ್ದಾನೆ. ಇದು ಸಾಂಗತ್ಯದಲ್ಲಿದೆ. ಸಂಧಿ ೫ ಪದ್ಯ ೧೨೫೭

ಸು. ೧೫೫೦ರಲ್ಲಿದ್ದ ಬಸವ ಚಿಕ್ಕಯ್ಯನಸಾಂಗತ್ಯವನ್ನು ಬರೆದಿದ್ದಾನೆ. ಇದರಲ್ಲಿ ಸಂಧಿ ೪ ಪದ್ಯ ೮೩೦ ಇವೆ.

ಸದಾಶಿವಯೋಗಿ ೧೫೫೪ ಈತನು ರಾಮನಾಥವಿಲಾಸವನ್ನು ಬರೆದಿದ್ದಾನೆ. ಇದಕ್ಕೆ ರಾಮನಾಥ ಚರಿತ್ರೆ ಎಂಬ ಹೆಸರೂ ಉಂಟು. ಇದು ಚಂಪೂರೂಪವಾಗಿದೆ. ಉಲ್ಲಾಸ ೧೬ ಅಲ್ಲಲ್ಲಿ ಷಟ್ಪದಿಗಳೂ ಇವೆ. ಗ್ರಂಥ ಸಂಖ್ಯೆ ೪೩೦೦.

ವಿರಕ್ತ ತೋಂಟದಾರ್ಯ ಸು. ೧೫೬೦. ಈತನು ಸಿದ್ಧೇಶ್ವರ ಪುರಾಣ, ಪಾಲ್ಕುರಿಕೆ ಸೋಮೇಶ್ವರ ಪುರಾಣ, ಕರ್ಣಾಟಕ ಶಬ್ದಮಂಜರಿ, ಮನೋವಿಜಯ ತಾತ್ಪರ್ಯ, ಮಗ್ಗೆಯಮಾಯಿದೇವ ಶತಕತ್ರಯ ಟೀಕೆ ಈ ಗ್ರಂಥಗಳನ್ನು ಬರೆದಿದ್ದಾನೆ. ಸಿದ್ಧೇಶ್ವರ ಪುರಾಣ ವಾರ್ಧಕ ಷಟ್ಪದಿಯಲ್ಲಿದೆ ಸಂಧಿ ೨೫ ಪದ್ಯ ೧೫೩೫. ಪಾಲ್ಕುರಿಕೆ ಸೋಮೇಶ್ವರ ಪುರಾಣ ವಾರ್ಧಕ ಷಟ್ಪದಿಯಲ್ಲಿದೆ. ಸಂಧಿ ೧೫ ಪದ್ಯ ೧೪೫೬. ಮನೋವಿಜಯ ತಾತ್ಪರ್ಯ ಗುರುಬಸವನ ಮನೋವಿಜಯ ಕಾವ್ಯದ ವ್ಯಾಖ್ಯಾನ. ಮಗ್ಗೆಯಮಾಯಿದೇವ ಶತಕತ್ರಯ ಟೀಕೆ ಮಗ್ಗೆಯದೇವರ ಐಪುರೀಶ್ವರ ಶತಕ, ಶಿವಾಧವ ಶತಕ, ಶಿವಾವಲ್ಲಭ ಶತಕಗಳ ವ್ಯಾಖ್ಯಾನ.

ಮುರಿಗೆ ದೇಶಿಕೇಂದ್ರ ೧೫೬೦. ಈತನು ರಾಜೇಂದ್ರ ವಿಜಯವನ್ನು ಬರೆದಿದ್ದಾನೆ. ಇದು ಚಂಪೂರೂಪವಾಗಿದೆ. ಪ್ರಕರಣ ೯ ಪದ್ಯ ೭೫೩. ಇದಕ್ಕೆ ಹಮ್ಮಿರಕಾವ್ಯ, ಮನುರಾಜನ ಕಾವ್ಯ ಎಂಬ ಹೆಸರುಗಳೂ ಉಂಟು.

ಮಹಾಂತಸ್ವಾಮಿ ಸು. ೧೫೬೦. ಈತನು ಮುರಿಗೆ ಶಾಂತವೀರನ ಸ್ತುತಿರೂಪವಾದ ಒಂದು ಷಟ್ಪದಿ ಗ್ರಂಥವನ್ನು ಬರೆದಿದ್ದಾನೆ. ಇದಕ್ಕೆ ನಾಂದ್ಯ ಎಂಬ ಹೆಸರು ಹೇಳಿದೆ. ಈ ನಾಂದ್ಯ ಭಾಮಿನೀ ಷಟ್ಪದಿಯಲ್ಲಿದೆ. ಪದ್ಯ ೨೫.

ಚೆನ್ನಮಲ್ಲಿಕಾರ್ಜುನ ಸು. ೧೫೬೦. ಈತನು ಶಿವಮಹಿಮಾ ಶತಕ, ಗುರುಸ್ತೋತ್ರದ ಟೀಕೆ ಇವುಗಳನ್ನು ಬರೆದಿದ್ದಾನೆ. ಶಿವಮಹಿಮಾ ಶತಕದಲ್ಲಿ ೧೧೩ ವೃತ್ತಗಳೂ ೨ ಕಂದಗಳೂ ಇವೆ.

ಶಾಂತೇಶ ೧೫೬೧. ಈತನು ತೋಂಟದ ಸಿದ್ಧೇಶ್ವರ ಪುರಾಣವನ್ನು ಬರೆದಿದ್ದಾನೆ. ಇದು ಭಾಮಿನೀ ಷಟ್ಪದಿಯಲ್ಲಿದೆ. ಸಂಧಿ ೭ ಪದ್ಯ ೧೦೦೦. ಇದರಲ್ಲಿ ತೋಂಟದ ಸಿದ್ಧಲಿಂಗಯತಿಯ ಚರಿತವು ಹೇಳಿದೆ.

೧೫೬೫ರಲ್ಲಿದ್ದ ಎಳಮಲೆಯ ಗುರುಶಾಂತದೇವ ಶರಣಸ್ತೋತ್ರದ ವಚನ, ಲಿಂಗವಿಕಳಾವಸ್ಥೆಯ ವಚನ, ಷಟ್ಸ್ಥಲ ಸ್ತೋತ್ರದ ವಚನ, ಅಷ್ಟಾವರಣ ಸ್ತೋತ್ರದ ವಚನ ಇವುಗಳನ್ನು ಸೇರಿಸಿದುದಾಗಿ ತಿಳಿಯುತ್ತದೆ.

ಪರ್ವತದೇವ ೧೫೭೮. ಇವನು ನನ್ನಯ್ಯಗಳಚಾರಿತ್ರವನ್ನು ಬರೆದಿದ್ದಾನೆ. ಇದು ಸಾಂಗತ್ಯದಲ್ಲಿ ಬರೆದಿದೆ. ಸಂಧಿ ೧೩ ಪದ್ಯ ೧೫೫೦.

ಅದೃಶ್ಯಕವಿ ಸು. ೧೫೮೦. ಈತನು ಪ್ರೌಢದೇವರಾಯನ ಕಾವ್ಯವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಸಂಧಿ ೨೧ ಪದ್ಯ ೧೧೧೩.

ವಿರೂಪಾಕ್ಷ ಪಂಡಿತ ೧೫೮೪. ಈತನು ಚೆನ್ನಬಸವ ಪುರಾಣವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಕಾಂಡ ೫ ಸಂಧಿ ೬೩ ಪದ್ಯ ೨೫೯೮.

ಇಮ್ಮಡಿ ಮುರಿಗಾ ಗುರುಸಿದ್ಧ ಸು. ೧೫೯೦. ಹಾಲಾಸ್ಯಪುರಾಣ ಎಂಬ ಬೃಹದ್ಗ್ರಂಥವನ್ನೂ ಹತ್ತಾರು ಕಿರುಕೃತಿಗಳನ್ನೂ ಬರೆದಿದ್ದಾನೆ. ಮೈಸೂರಿನ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಿಂದ ಪ್ರಕಟವಾಗಿರುವ ಕೃತಿಯನ್ನು ಪರಿಶೀಲಿಸಬಹುದು.

ಮಲ್ಲಿಕಾರ್ಜುನ ಕವಿ ೧೫೯೩. ಇವನು ಕಂಚಿ ಶಂಕರಾರಾಧ್ಯ ಅಥವಾ ಶಂಕರಕವಿಕೃತ ಬಸವಪುರಾಣ, ಗುರುರಾಜಕೃತ ಪಂಡಿತಾರಾಧ್ಯ ಚಾರಿತ್ರ, ಮಗ್ಗೆಯ ಮಾಯಿದೇವ ಶತಕತ್ರಯ ಇವಕ್ಕೆ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾನೆ.

ಉತ್ತರದೇಶದ ಬಸವಲಿಂಗ ಸು. ೧೬೦೦. ಈತನು ಬಸವೇಶ್ವರ ಪುರಾಣದ ಕಥಾಸಾಗರ, ಭೈರವೇಶ್ವರ ಕಾವ್ಯದ ಕಥಾಸಾಗರ, ಉಚಿತ ಕಥೆಗಳು ಇವುಗಳನ್ನು ಬರೆದಿದ್ದಾನೆ.

ಸಿದ್ಧಲಿಂಗ ಶಿವಯೋಗಿ ಸು. ೧೬೦೦. ಈತನು ಭೈರವೇಶ್ವರಪುರಾಣವನ್ನು ಬರೆದಿದ್ದಾನೆ. ಇದಕ್ಕೆ ರಾಜೇಂದ್ರ ವಿಜಯಪುರಾಣ ಎಂಬ ನಾಮಾಂತರವೂ ಉಂಟು. ಲಭ್ಯವಾಗಿರುವುದು ಅಸಮಗ್ರ

ಸಂಪಾದನೆಯ ಸಿದ್ಧವೀರಣಾಚಾರ್ಯ ಸು. ೧೬೦೦. ಈತನು ಆಚರಣೆಯ ಸಂಬಂಧದ ವಚನ. ಲಿಂಗಸ್ತೋತ್ರದ ವಚನ, ಮಿಶ್ರಸ್ತೋತ್ರ ಸರ್ವಜ್ಞ ಮೂರ್ತಿಯ ತ್ರಿವಿಧಿ, ಪಾದಸ್ತೋತ್ರ ಇವುಗಳನ್ನು ಸೇರಿಸಿರುವುದಾಗಿ ತಿಳಿಯುತ್ತದೆ. ಇವನು ಸಂಸ್ಕೃತದಲ್ಲಿ ಅನಾದಿವೀರಶೈವಾಚಾರಸಂಗ್ರಹ ಬರೆದಿದ್ದಾನೆ.

ಸಂಗನ ಬಸವೇಶ್ವರ ಸು. ೧೬೦೦. ಈತನು ರಥೋದ್ಧರಣೆ ವಾಚ್ಯವನ್ನು ಬರೆದಿದ್ದಾನೆ.

ಅಣ್ಣಾಜಿ ಸು. ೧೬೦೦. ಈತನು ಸೌಂದರವಿಳಾಸವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ.

ವಾರತೆ ಸೋಮಣ್ಣ ಸು. ೧೬೦೦. ಈತನು ಪಂಚೀಕರಣದ ಪದಗಳನ್ನೂ ಬರೆದಿದ್ದಾನೆ. ಇವು ಕೆಲವು ಷಟ್ಪದಿಗಳನ್ನೂ ಹಾಡುಗಳನ್ನೂ ಒಳಕೊಂಡಿವೆ.

ಮಲ್ಲಿಕಾರ್ಜುನರಾಯ ಸು. ೧೬೦೦. ಇವನು ಚೋರಕಥೆಗಳನ್ನು ಬರೆದಿದ್ದಾನೆ. ಇವು ತ್ರಿಪದಿಯಲ್ಲಿವೆ. ಸಂಧಿ ೬ ಪದ್ಯ ೭೭೦.

ಬಸವೇಶ ಸು. ೧೬೦೦. ಈತನು ಪದ್ಯೈಕೋತ್ತರ ಶತಸ್ಥಲವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಪದ್ಯ ೧೧೨

ಮಲ್ಲಿಕಾರ್ಜುನ ಸು. ೧೬೦೦. ಇವನು ಸಹಸ್ರ ಗಣನಾಮವನ್ನು ಬರೆದಿದ್ದಾನೆ. ಇದರಲ್ಲಿ ಪ್ರಥಮಗಣ, ರುದ್ರಗಣ, ಭಕ್ತಗಣ, ಯೋಗಾಚಾರ್ಯರು, ತ್ರಿಷಷ್ಟಿಗಣ, ತೇರಸಗಣ, ಅಮರಗಣ, ದಶಗಣ ಇವರ ನಾಮಗಳು ಹೇಳಿವೆ.

ಬಸವೇಶ ಸು. ೧೬೦೦. ಇವನು ಸುಜ್ಞಾನಚಿಂತಾಮಣಿಯನ್ನು ಬರೆದಿದ್ದಾನೆ. ಇದು ಭಾಮಿನಿ ಷಟ್ಪದಿಯಲ್ಲಿದೆ. ಸಂಧಿ ೯ ಪದ್ಯ ૩೪೬

ಕಂಬಾಳ ಶಾಂತಮಲ್ಲೇಶ ಸು. ೧೬೦೦. ಇವನು ಗಣವಚನ ರತ್ನಾವಳಿಯನ್ನು ಬರೆದಿದ್ದಾನೆ. ಇದು ಪುರಾತನ ವಚನಗಳ ಸಂಗ್ರಹ ಸ್ಥಲ ೨೧೬ ಸ್ವರಪದಂಗಳು ೧೨೦೬.

**ಹದಿನೇಳನೆಯ ಶತಮಾನ**

ಹರೀಶ್ವರ ೧೬೦೬. ಈತನು ಪ್ರಭುದೇವರ ಪುರಾಣವನ್ನು ಬರೆದಿದ್ದಾನೆ. ಇದು ನಾನಾ ಷಟ್ಪದಿಗಳಲ್ಲಿ ಬರೆದಿದೆ. ಸಂಧಿ ೯ ಪದ್ಯ ೧೪೭೯.

ಬಸವಲಿಂಗ ೧೬೧೧. ಈತನು ಶಿವಾಧಿಕ್ಯಪುರಾಣವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ ಸಂಧಿ ೧೧ ಪದ್ಯ ೯೬೫ ಕೆಲವು ಕಂದವೃತ್ತ ವಚನಗಳೂ ಇವೆ. ಒಟ್ಟು ೧೪೦೦.

ಶಂಕರದೇವ ಸು. ೧೬೨೦. ಇವನು ಶಂಕರಶತಕವನ್ನು ಬರೆದಿದ್ದಾನೆ. ಶಂಕರಶತಕ ವೃತ್ತರೂಪವಾಗಿದೆ. "ಶಂಕರದೇವರ ಕಂದ" ಭಕ್ತಿರಸ ಪ್ರಧಾನವಾಗಿದೆ. "ಷಡಕ್ಷರ ರಗಳೆ"ಯಲ್ಲಿ ೭೧ ನುಡಿಗಳಿವೆ. "ಭಕ್ತಿ ಬಿನ್ನಹದ ರಗಳೆ" ಇದರಲ್ಲಿ ೧೩೮ ನುಡಿಗಳಿವೆ. "ವೀರಶೈವ ರಗಳೆ" ಇದರಲ್ಲಿ ೧೩೮ ನುಡಿಗಳಿವೆ. "ಮೈದುನ ರಾಮನ ರಗಳೆ" ಇದರಲ್ಲಿ ೧೫೧ ನುಡಿಗಳಿವೆ.

ಸೋಸಲೆ ರೇವಣಾರಾಧ್ಯ ಸು. ೧೬೨೩. ಈತನು "ಮಹಿಮ್ನಸ್ತವ", "ವೀರಶೈವ ಸಿದ್ಧಾಂತ ಶಿಖಾಮಣಿ", ಶಿವಾಧಿಕ್ಯ ಶಿಖಾಮಣಿ. ಸದ್ಗುರುಗಳೆ; ಇವುಗಳಿಗೆ ಕನ್ನಡ ವ್ಯಾಖ್ಯಾನವನ್ನೂ ಶಾರೀರ ಪ್ರಕಾಶಿಕೆ; ಅಂತಃಕರಣ ಪ್ರಕಾಶಿಕೆ; ಸ್ವಸ್ವರೂಪ ಪ್ರಕಾಶಿಕೆ; ಪರಮಾತ್ಮ ಪ್ರಕಾಶಿಕೆ; ನಿಜದೀಪ್ತಿ ಪ್ರಕಾಶಿಕೆ ಎಂಬ ಗ್ರಂಥಗಳನ್ನೂ ಬರೆದಿದ್ದಾನೆ.

ಶಾಂತವೀರದೇಶಿಕ ಸು. ೧೬೫೦. ಈತನು ಶಿವಲಿಂಗ ಚಾರಿತ್ರ, ಶಿವಗಣ ಚಾರಿತ್ರ, ಸೌಂದರೇಶನ ಯಕ್ಷಗಾನ, ಶಿವಮಹತ್ವಸಾರ ಶಿಖಾಮಣಿ, ಸಂಗ್ರಹ ಶತಕ, ಗಿರಿಜಾದೇವಿಯ ಸಂಕೀರ್ತನ ಇವುಗಳನ್ನು ಬರೆದಿದ್ದಾನೆ. ಶಿವಲಿಂಗ

ಚಾರಿತ್ರ ಚಂಪೂಗ್ರಂಥ. ಆಶ್ವಾಸ ೩ ಪದ್ಯ ೧೨೪. ಶಿವಗಣಚಾರಿತ್ರ ಸಾಂಗತ್ಯದಲ್ಲಿ ಬರೆದಿದೆ. ಸಂಧಿ ೪೨ ಪದ್ಯ ೨೭೪೦. ಸೌಂದರೇಶನ ಯಕ್ಷಗಾನ ಸಂಧಿ ೧೨ ಪದ್ಯ ೧೬೧೦. "ಶಿವಮಹತ್ವಸಾರ ಶಿಖಾಮಣಿ ಸಂಗ್ರಹ ಶತಕ" ಶಾರ್ದೂಲ ವಿಕ್ರೀಡಿತ ವೃತ್ತಗಳಲ್ಲಿ ರಚಿತವಾಗಿದೆ. ವೃತ್ತಗಳು ೧೦೦. ಗಿರಿಜಾದೇವಿ ಸಂಕೀರ್ತನ ಇದರಲ್ಲಿ ಪಾರ್ವತೀ ಸ್ತುತಿರೂಪವಾದ ೧೩೧ ಪದಗಳಿವೆ.

ಸಿದ್ಧನಂಜೇಶ ಸು. ೧೬೫೦. ಈತನು ರಾಘವಾಂಕ ಚಾರಿತ್ರ, ಗುರುರಾಜ ಚಾರಿತ್ರ ಇವುಗಳನ್ನು ಬರೆದಿದ್ದಾನೆ. ಅಲ್ಲದೆ ತೋಂಟದ ಸಿದ್ಧದೇಶಿಕನ ಭಾವರತ್ನಾಭರಣ, ಬಸವಶತಕ ಎಂಬ ಗ್ರಂಥಗಳನ್ನು ಬರೆದಿರುವಂತೆ ಗುರುರಾಜ ಚಾರಿತ್ರದಿಂದ ತಿಳಿಯುತ್ತದೆ. ರಾಘವಾಂಕ ಚಾರಿತ್ರ ವಾರ್ಧಕ ಷಟ್ಪದಿಯಲ್ಲಿ ಬರೆದಿದೆ. ಇದರಲ್ಲಿ ಸಂಧಿ ೧೯ ಪದ್ಯ ೧೫೨೧ ಇವೆ. ಗುರುರಾಜ ಚಾರಿತ್ರ ವಾರ್ಧಕ ಷಟ್ಪದಿಯಲ್ಲಿದೆ. ಇದರಲ್ಲಿ ೧೬ ಸಂಧಿಗಳು ೧೨೭೭ ಪದ್ಯಗಳೂ ಇವೆ.

ಶಾಂತಮಲ್ಲ ಸು. ೧೬೫೦. ಈತನು ಅನುಭವಮುದ್ರೆ ಗುರುರಗಳೆಯ ಟೀಕೆ ಇವುಗಳನ್ನು ಬರೆದಿದ್ದಾನೆ. ಅನುಭವಮುದ್ರೆ ಸಾಂಗತ್ಯದಲ್ಲಿದೆ. ಸ್ಥಲ ೨೯.

ಪರ್ವತ ಶಿವಯೋಗಿ ಸು. ೧೬೫೦. ಈತನು ಬಸವೇಶ್ವರದೇವರ ವಚನ ಸಾರಾರ್ಥ. ಮುರಿಗೆಯ ಶಾಂತವೀರೇಶನ ಪ್ರಭುಲಿಂಗ ಕಂದದ ಟೀಕೆ, ಕರಸ್ಥಲದ ನಾಗಲಿಂಗ ತ್ರಿಪದಿಯ ಟೀಕೆ, ಗುರುಸ್ತೋತ್ರ ತ್ರಿಪದಿಯ ಟೀಕೆ, ಚೆನ್ನಬಸವನ ಕರಣಹಸುಗೆಯ ಟೀಕೆ, ಚೆನ್ನಬಸವನ ಮಿಶ್ರಾರ್ಪಣದ ಟೀಕೆ ಇವುಗಳನ್ನು ಬರೆದಿದ್ದಾನೆ.

ಮರಿರಾಚವಟ್ಟೇಶ ಸು. ೧೬೫೦. ಈತನು ಪ್ರಭುನಟನ ತಾರಾವಳಿಯನ್ನು ಬರೆದಿದ್ದಾನೆ. ಇದು ಹಾಡಿನ ರೂಪವಾಗಿದೆ. ಇದರಲ್ಲಿ ೨೭ ನುಡಿಗಳಿವೆ.

ರುದ್ರ ಸು. ೧೬೫೦. ಈತನು ಕರಸ್ಥಲದ ನಾಗಯ್ಯನ ಚರಿತೆಯನ್ನು ಬರೆದಿದ್ದಾನೆ. ಇದು ಸಾಂಗತ್ಯದಲ್ಲಿದೆ. ಅಲ್ಲಲ್ಲಿ ಕೆಲವು ಷಟ್ಪದಿಗಳೂ ಇವೆ. ಸಂಧಿ ೧೧ ಪದ್ಯ ೯೫೨.

ವೀರಜನಪತಿ ಸು. ೧೬೫೦. ಈತನು ವಿಕ್ರಮ ವಿಲಾಸವನ್ನು ಬರೆದಿದ್ದಾನೆ. ಇದು ಸಾಂಗತ್ಯದಲ್ಲಿದೆ. ಸಂಧಿ ೨೩ ಪದ್ಯ ೧೬೨೧

ಪೆಮ್ಮಿಸೆಟ್ಟಿ ಸು. ೧೬೫೦. ಈತನು ಗುರುಭಕ್ತಾಂಡಾರಿಚರಿತ್ರೆಯನ್ನು ಬರೆದಿದ್ದಾನೆ. ಇದು ಉದ್ದಂಡ ಷಟ್ಪದಿಯಲ್ಲಿದೆ. ಇದರಲ್ಲಿ ೩ ಸಂಧಿ ೨೭೩ ಪದ್ಯಗಳಿವೆ.

ಚೆನ್ನವೀರೊಡೆಯ ಸು. ೧೬೫೦. ಈತನು ಚೆನ್ನಬಸವನ ಮಿಶ್ರಷಟ್ಸ್ಥಲದ ವಚನಗಳನ್ನು ಸೇರಿಸಿದ್ದಾನೆ.

ವೀರಣಾರಾಧ್ಯ ಸು. ೧೬೫೦. ಈತನು ದಶಗ್ರಂಥಿಗೆ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾನೆ.

ಹಲಗ ಸು. ೧೬೫೦. ಈತನು ಹರಿಶ್ಚಂದ್ರ ಸಾಂಗತ್ಯವನ್ನು ಬರೆದಿದ್ದಾನೆ. ಇದರಲ್ಲಿ ೭ ಸಂಧಿಗಳೂ ೧೦೦೧ ಪದ್ಯಗಳೂ ಇವೆ.

ಮಲ್ಲು ಸು. ೧೬೫೦. ಈತನು ಪ್ರಸಾದ ಸಾಂಗತ್ಯವನ್ನು ಬರೆದಿದ್ದಾನೆ. ಅಸಮಗ್ರ ೧೪೦ ಪದ್ಯಗಳಿವೆ.

ಚೆನ್ನಣ್ಣ ಸು. ೧೬೫೦. ಈತನು ವೀರೇಶ್ವರ ಚರಿತೆಯನ್ನು ಬರೆದಿದ್ದಾನೆ. ಇದು ಸಾಂಗತ್ಯದಲ್ಲಿದೆ ಅಸಮಗ್ರ ೩ ಸಂಧಿಗಳಿವೆ.

ವೀರಣಾರ್ಯ ಸು. ೧೬೫೦. ಈತನು ಪ್ರಸಾದಚಾರಿತ್ರವನ್ನೂ ನಂಜುಂಡೇಶ್ವರ ಪುರಾಣವನ್ನೂ ಬರೆದಿದ್ದಾನೆ. ಪ್ರಸಾದ ಚಾರಿತ್ರ ಸಾಂಗತ್ಯದಲ್ಲಿದೆ. ನಂಜುಂಡೇಶ್ವರ ಪುರಾಣ ಭಾಮಿನೀ ಷಟ್ಪದಿಯಲ್ಲಿದೆ. ಸಂಧಿ ೧೧ ಪದ್ಯ ೬೯೭

ಕವಿ ಮಾದಣ್ಣ ಸು. ೧೬೫೦. ಇವನು ನನ್ನಯ್ಯಗಳ ಚಾರಿತ್ರವನ್ನು ಬರೆದಿದ್ದಾನೆ. ಇದು ಚಂಪೂರೂಪವಾಗಿದೆ. ಸಂಧಿ ೫.

ಮಹಾದೇವ ಸು. ೧೬೫೦. ಈತನು ಹೇರೂರುಹೆಣ್ಣಿನ ಸಾಂಗತ್ಯವನ್ನು ಬರೆದಿದ್ದಾನೆ. ಇದರಲ್ಲಿ ಸಂಧಿ ೩ ಪದ್ಯ ೪೫೬ ಇವೆ.

ಸಿದ್ಧಮಲ್ಲೇಶ ಸು. ೧೬೫೦. ಈತನು ವೀರಸಂಗಯ್ಯನ ಚರಿತೆಯನ್ನು ಬರೆದಿದ್ದಾನೆ. ಇದು ಸಾಂಗತ್ಯದಲ್ಲಿದೆ. ಸಂಧಿ ೫ ಪದ್ಯ ೪೮೭.

ನಂಜಣಾರ್ಯ ಸು. ೧೬೫೦. ಈಥನು ನೀತಿರತ್ನಾಭರಣವನ್ನು ಬರೆದಿದ್ದಾನೆ. ಇದು ಕಂದದಲ್ಲಿ ಬರೆದಿದೆ. ಪದ್ಯ ೧೬೯

ಮರುಳಸಿದ್ದೇಶ ಸು. ೧೬೫೦. ಈತನು ಗುರುಲಿಂಗಜಂಗಮ ಚಾರಿತ್ರವನ್ನು ಬರೆದಿದ್ದಾನೆ. ಇದು ಸಾಂಗತ್ಯದಲ್ಲಿದೆ. ಸಂಧಿ ೫ ಪದ್ಯ ೯೩೭

ಚೆನ್ನಪ್ಪ ಸು. ೧೬೫೦. ಈತನು ಒಂದು ಕಾಲಜ್ಞಾನವನ್ನು ಬರೆದಿದ್ದಾನೆ. ಇದರಲ್ಲಿ ಸುಮಾರು ೨೮೫ ಹಾಡುಗಳಿವೆ.

ಮಂಚಯ್ಯ ಸು. ೧೬೫೦. ಈತನು ಭಕ್ತಿರಸಸೋನೆಯನ್ನು ಬರೆದಿದ್ದಾನೆ. ಇದು ಸಾಂಗತ್ಯದಲ್ಲಿದೆ.

ಅನ್ನದಾನಿ ಮಲ್ಲಿಕಾರ್ಜುನಾಚಾರ್ಯ ಸು. ೧೬೫೦. ಇವರು ತಾತ್ಪರ್ಯಸಂಗ್ರಹ ಟೀಕೆಯನ್ನು ಬರೆದಿದ್ದಾನೆ.

ನಿಜಗುಣಾರ್ಯ ಸು. ೧೬೫೦. ಈತನು ಅದ್ವೈತರಾಮಾಯಣವನ್ನು ಬರೆದಿದ್ದಾನೆ.

ಕಂಪಿನಂಜಯ್ಯ ಸು. ೧೬೫೦. ಈತನು ಮುರಿಗೆಯ ಶಾಂತವೀರನ ಸ್ತುತಿರೂಪವಾದ ನಾಂದ್ಯವೆಂಬ ಷಟ್ಪದಿ ಗ್ರಂಥವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿ ಬರೆದಿದೆ. ಪದ್ಯ ೨೪.

ಷಡಕ್ಷರದೇವ ೧೬೫೫. ಈತನು ರಾಜಶೇಖರವಿಲಾಸ, ಬಸವರಾಜವಿಜಯ, ಶಬರಶಂಕರ ವಿಲಾಸ, ಷಡಕ್ಷರಮಂತ್ರ ಸ್ತೋತ್ರ ಈ ಗ್ರಂಥಗಳನ್ನು ಬರೆದಿದ್ದಾನೆ. ರಾಜಶೇಖರವಿಳಾಸ ಚಂಪೂಗ್ರಂಥ. ಆಶ್ವಾಸ ೧೪. ಬಸವರಾಜ ವಿಜಯ ಚಂಪೂಗ್ರಂಥ ಆಶ್ವಾಸ ೪೨. ಇದಕ್ಕೆ ವೃಷಭೇಂದ್ರ ವಿಜಯ ಎಂಬ ಹೆಸರೂ ರೂಢಿಯಲ್ಲಿದೆ. ಶಬರಶಂಕರ ವಿಲಾಸ ಚಂಪೂರೂಪವಾಗಿದೆ. ಆಶ್ವಾಸ ೫. ಷಡಕ್ಷರ ಮಂತ್ರ ಸ್ತೋತ್ರ ಇದು ಉತ್ಸಾಹ ರಗಳೆಯಲ್ಲಿದೆ. ಸುಮಾರು ೧೦೫ ವಾಕ್ಯಗಳಿವೆ.

ಮುಖಬೋಳು ಸಿದ್ಧರಾಮ ಸು. ೧೬೫೬. ಈತನು ಷಟ್ಸ್ಥಲತಿಲಕವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಸ್ಥಲ ೨೦ ಪದವೃತ್ತ ಕಂದ ಸಹ ೯೨೩.

ಮುಮ್ಮಡಿ ತಮ್ಮ ಸು. ೧೬೬೫. ಇವನು ಶಂಕರಸಂಹಿತೆಯನ್ನು ಒಂದು ಯಕ್ಷಗಾನವನ್ನೂ ಬರೆದಿದ್ದಾನೆ. ಶಂಕರ ಸಂಹಿತೆ ವಾರ್ಧಕ ಷಟ್ಪದಿಯಲ್ಲಿದೆ. ಅಸಮಗ್ರ ಪ್ರತಿಯಲ್ಲಿ ಕಾಂಡ ೭ ಸಂಧಿ ೮೦ ಪದ್ಯ ೪೧೦೦ ಇವೆ.

ಸಪ್ಪೆಯ ಸಿದ್ಧಲಿಗಾರ್ಯ ಸು. ೧೬೬೫. ಈತನು ಮಳೆಯರಾಜನ ಚರಿತ್ರೆಯನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಸಂಧಿ ೩೪

ಸಂಪಾದನೆಯ ಗುರುಲಿಂಗದೇವ ಸು. ೧೬೭೦. ಈತನು ಶೀಲವಂತಯ್ಯನ ತ್ರಿವಿಧಿಗೆ ವ್ಯಾಖ್ಯಾನವನ್ನು ಬರೆದಿದ್ದಾನೆ.

ಶಾಂತಲಿಂಗದೇಶಿಕ ೧೬೭೨. ಈತನು ಭೈರವೇಶ್ವರ ಕಾವ್ಯದ ಕಥಾಸೂತ್ರವನ್ನು ಬರೆದಿದ್ದಾನೆ. ಇದು ಗದ್ಯಗ್ರಂಥ ಇದರಲ್ಲಿ ೮೧ ಕಥೆಗಳೂ ೬೧೮ ವಾಕ್ಯಗಳೂ ಇವೆ.

ಬಸವಲಿಂಗಕವಿ ೧೬೭೯. ಈತನು ಕೊಟ್ಟೂರು ಬಸವೇಶ್ವರ ಪುರಾಣವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಸಂಧಿ ೧೯.

ಸಂಪಾದನೆಯ ಪರ್ವತೇಶ್ವರ ೧೬೯೮. ಈತನು ಚತುರಾಚಾರ್ಯ ಪುರಾಣವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಕಾಂಡ ೬ ಸಂಧಿ ೫೪ ಪದ ೩೧೮೭. ಇದರಲ್ಲಿ ರೇಣುಕ ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ ಈ ೪ ಆಚಾರ್ಯರುಗಳ ಚರಿತವು ಹೇಳಿದೆ.

ಸೋಮಶೇಖರ ಶಿವಯೋಗಿ ಸು. ೧೭೦೦. ಇವನು ಬಸವ ಷಟ್ಸ್ಥಲದವಚನದ ಟೀಕೆ. ತೋಂಟದ ಸಿದ್ಧಲಿಂಗನ ಷಟ್ಸ್ಥಲಜ್ಞಾನ ಸಾರಾಮೃತದ ವಚನದ ಟೀಕೆ ಇವುಗಳನ್ನು ಬರೆದಿದ್ದಾನೆ.

ಮರುಳಸಿದ್ಧ ಸು. ೧೭೦೦. ಈತನು ಬಸವರಾಜನ ಪವಾಡಗಳನ್ನು ಬರೆದಿದ್ದಾನೆ. ಇದು ಗದ್ಯಗ್ರಂಥ. ಇದರಲ್ಲಿ ಬಸವನು ಕಾಯವಚನ ಮನಸ್ಸುಗಳಿಂದ ನಡೆಸಿದ ೩೬೦ ಪವಾಡಗಳು ವರ್ಣಿತವಾಗಿವೆ.

ಪಟ್ಟುಗಂಬಳಿ ಸಿದ್ಧಲಿಂಗಸ್ವಾಮಿ ಸು. ೧೭೦೦. ಇವನು ಗುಬ್ಬಿಯ ಮಲ್ಲಣಾರ್ಯನ ಭಾವಚಿಂತಾರತ್ನಕ್ಕೆ ಕನ್ನಡ ಟೀಕೆಯನ್ನು ಬರೆದಿದ್ದಾನೆ.

ಸರ್ವಜ್ಞ ಸು. ೧೭೦೦. ಇವನು ತ್ರಿಪದೀ ರೂಪವಾದ ಒಂದು ಗ್ರಂಥವನ್ನು ಬರೆದಿದ್ದಾನೆ. ಇದಕ್ಕೆ ಸರ್ವಜ್ಞತ್ರಿಪದಿ ಎಂದು ಹೆಸರು. ಈ ಗ್ರಂಥಕ್ಕೆ ಪರಮಾರ್ಥ ಎಂಬ ಹೆಸರೂ ಇದೆ. ಕೆಲವು ಪ್ರತಿಗಳಲ್ಲಿ ೨೭ ಪದ್ಧತಿಗಳೂ ಕೆಲವು ಪ್ರತಿಗಳಲ್ಲಿ ೨೯ ಪದ್ಧತಿಗಳೂ ಇವೆ.

ಬಸವರಾಜೇಂದ್ರ ಸು. ೧೭೦೦. ಇವನು ಮಹಾವಿಭೂತಿ ಮಹಿಮೆಯನ್ನು ಬರೆದಿದ್ದಾನೆ. ಇದು ಗದ್ಯರೂಪವಾಗಿದೆ. ಅಧ್ಯಾಯ ೨೨.

ಸೋಮ ಸು. ೧೭೦೦. ಈತನು ವೀರಭದ್ರ ಸಾಂಗತ್ಯವನ್ನು ಬರೆದಿದ್ದಾನೆ. ಸಂಧಿ ೫ ಪದ್ಯ ೧೫೧೫ ಇವೆ.

ಪರಮಭಕ್ತ ಸು. ೧೭೦೦. ಇವನು ಘೋರಾಸುರ ಯುದ್ಧವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ ಸಂಧಿ ೮ ಪದ್ಯ ೬೧೭

ಚೆನ್ನಮಲ್ಲೇಶ ಸು. ೧೭೦೦. ಈತನು ದೀಪದ ಕಲಿಯಾರ ಕಾವ್ಯ. ವೀರಸಂಗಯ್ಯನ ಚೌಪದ ಇವುಗಳನ್ನು ಬರೆದಿದ್ದಾನೆ. ೯ ಸಂಧಿ ೧೧೧೬ ಪದ್ಯಗಳಿವೆ. ವೀರಸಂಗಯ್ಯನ ಚೌಪದದಲ್ಲಿ ೮೯ ಪದ್ಯಗಳಿವೆ.

ನಂಜ ಸು. ೧೭೦೦. ಈತನು ಕಪೋತ ವಾಕ್ಯವನ್ನು ಬರೆದಿದ್ದಾನೆ. ಇದು ಸಾಂಗತ್ಯದಲ್ಲಿದೆ. ಪದ ೧೧೬.

ಶಾಂತ ವೃಷಭೇಶ ಸು. ೧೭೦೦. ಈತನು ಅನುಭವಶತಕವನ್ನು ಬರೆದಿದ್ದಾನೆ. ಇದು ಕಂದಪದ್ಯದಲ್ಲಿದೆ. ಪದ್ಯ ೧೧೫

ಸಿದ್ದಪ್ಪ ಸು. ೧೭೦೦. ಇವನು ಸಿದ್ಧನೀತಿಯನ್ನು ಬರೆದಿದ್ದಾನೆ. ಇದು ಕಂದಪದ್ಯದಲ್ಲಿದೆ. ಪದ್ಯ ೧೦೫.

ಬಸವ ಸು. ೧೭೦೦. ಇವನು ರೇಣುಕಾಚಾರ್ಯ ಚರಿತೆಯನ್ನು ಬರೆದಿದ್ದಾನೆ. ಇದು ಸಾಂಗತ್ಯದಲ್ಲಿದೆ. ಸಂಧಿ ೧೫ ಪದ್ಯ ೧೬೭೫

ಶಾಂತಾಚಾರ್ಯ ಸು. ೧೭೦೦. ಈತನು ಪ್ರಸಾದ ಚಿಂತಾಮಣಿಗೆ ಕನ್ನಡ ಟೀಕನ್ನೂ ಮರಣಮಣಿದರ್ಪಣ ಶತಕವನ್ನೂ ಬರೆದಿದ್ದಾನೆ. ಇದರಲ್ಲಿ ೧೦೦ ಕಂದಗಳಿವೆ.

ಉದ್ದಂಡ ಸು. ೧೭೦೦. ಇವನು ಸುಜ್ಞಾನಿದೇವ ಕಾವ್ಯವನ್ನು ಬರೆದಿದ್ದಾನೆ. ಇದರಲ್ಲಿ ಸಂಧಿ ೭ ಪದ್ಯ ೧೧೧೭ ಇವೆ.

ಚೆನ್ನವೃಷಭ ಸು. ೧೭೦೦. ಈತನು ನುಲಿಯಚಂದಯ್ಯನ ಕಥೆಯನ್ನು ಬರೆದಿದ್ದಾನೆ. ಇದರಲ್ಲಿ ೨೫ ಹಾಡುಗಳಿವೆ.

ಸಿದ್ಧ ಸು. ೧೭೦೦ ಈತನು ಸಿರುಮನಸಾಂಗತ್ಯವನ್ನು ಬರೆದಿದ್ದಾನೆ. ಸಂಧಿ ೫ ಪದ್ಯ ೬೨೬.

ಶಿವಲಿಂಗಯೋಗಿ ಸು. ೧೭೦೦. ಈತನು ಶಿವಸರ್ವಾಂಗ ಸ್ತುತಿಯನ್ನು ಬರೆದಿದ್ದಾನೆ. ಇದರಲ್ಲಿ ೯೫ ಪದ್ಯಗಳಿವೆ.

ಸಪ್ಪಣ್ಣ ಸು. ೧೭೦೦. ಈತನು ಕೈವಲ್ಯ ಕಲ್ಪವಲ್ಲರಿಯನ್ನು ಬರೆದಿದ್ದಾನೆ. ಇದು ಹಾಡಿನ ರೂಪದಲ್ಲಿದೆ. ಸ್ಥಲ ೫ ವಚನ ೧೭೭

ಗುರುವ ಸು. ೧೭೦೦. ಈತನು ಪ್ರಾಣಲಿಂಗಶತಕವನ್ನು ಬರೆದಿದ್ದಾನೆ. ಇದರಲ್ಲಿ ೧೦೧ ವೃತ್ತಗಳಿವೆ.

ಮುಮ್ಮಡಿ ಕಾರ್ಯೇಂದ್ರ ಸು. ೧೭೦೦. ಈತನು ವೇದಸಂಜೀವಿನಿಯನ್ನು ಬರೆದಿದ್ದಾನೆ. ಇದು ವೀರಶೈವ ಸಿದ್ಧಾಂತವನ್ನು ಬೋಧಿಸುವ ವಚನಗ್ರಂಥ ವಚನ ೧೧೬.

ಹುಬ್ಬಳ್ಳಿಯ ಸಂಗಯ್ಯ ಸು. ೧೭೦೦. ಇವನು ಶಿವಯೋಗ ರತ್ನಾಕರವನ್ನು ಬರೆದಿದ್ದಾನೆ. ಇದು ವೇದಾಂತವನ್ನು ಬೋಧಿಸುವ ಗ್ರಂಥ.

ಹಾಗಲವಾಡಿ ಸಿದ್ಧರಾಮಪ್ಪ ನಾಯಕ ಸು. ೧೭೦೦. ಇವನು ಮಹಾನುಭಾವ ಪ್ರಕಾಶಿಕೆಯನ್ನು ಬರೆದಿದ್ದಾನೆ. ಇದು ಗದ್ಯಗ್ರಂಥ.

ಹಾರುವ ಸು. ೧೭೦೦. ಇವನು ಬಸವಶಿಖಾಮಣಿಯನ್ನು ಬರೆದಿದ್ದಾನೆ. ಇದು ಸಾಂಗತ್ಯದಲ್ಲಿದೆ. ಸಂಧಿ ೧೧ ಪದ್ಯ ೧೨೭೦.

**ಹದಿನೆಂಟನೆಯ ಶತಮಾನ**

ನಿರ್ವಾಣ ಮಂತ್ರಿ ಸು. ೧೭೨೫. ಈತನು ಶಿವಪೂಜಾವಿಧಾನವನ್ನು ಬರೆದಿದ್ದಾನೆ. ಇದು ಗದ್ಯರೂಪವಾಗಿದೆ.

ಕಾಡಸಿದ್ಧೇಶ ಸು. ೧೭೨೫. ಈತನು ಇಷ್ಟಲಿಂಗ ಶತಕವನ್ನು ಬರೆದಿದ್ದಾನೆ. ಇದರಲ್ಲಿ ೧೧೧ ವೃತ್ತಗಳಿವೆ.

ಚೆಲುವ ಸು. ೧೭೨೫. ಇವನು ಮಡಿವಾಳಯ್ಯನ ಚರಿತೆ, ವೀರಭದ್ರ ಚರಿತೆ ಇವುಗಳನ್ನು ಬರೆದಿದ್ದಾನೆ. ಮಡಿವಾಳಯ್ಯನ ಚರಿತೆ ಸಾಂಗತ್ಯದಲ್ಲಿದೆ. ಸಂಧಿ ೩ ಪದ್ಯ ೧೨೭ ವೀರಭದ್ರ ಚರಿತೆ ಲಭ್ಯವಿಲ್ಲ.

ಮೋದಿಯ ರುದ್ರ ೧೭೩೭. ಈತನು ವಿರಕ್ತಕಾವ್ಯ, ಪಂಚಮೋದ್ಭವಕಾವ್ಯಗಳನ್ನು ಬರೆದಿದ್ದಾನೆ. ವಿರಕ್ತರ ಕಾವ್ಯ ವಾರ್ಧಕ ಪರಿವರ್ಧಿನಿ ಷಟ್ಪದಿಗಳಲ್ಲಿ ಬರೆದಿದೆ. ಸಂಧಿ ೬ ಪದ್ಯ ೭೪೨

ನೂರೊಂದ ಸು. ೧೭೪೦. ಈತನು ಸೌಂದರಕಾವ್ಯವನ್ನು ಬರೆದಿದ್ದಾನೆ. ಇದು ಸಾಂಗತ್ಯದಲ್ಲಿದೆ. ಸಂಧಿ ೧೩ ಪದ್ಯ ೧೩೯೫.

ನಂದಿನಾಥ ೧೭೪೫. ಈತನು ವಲ್ಲೀಕಂಠಾಭರಣವನ್ನು ಬರೆದಿದ್ದಾನೆ. ಇದು ಯಕ್ಷಗಾನದಂತೆ ಕಾಣುತ್ತದೆ. ಸ್ಥಲ ೯ ಕಂದವೃತ್ತ ಪದಗಳ ಗಣನೆ ೧೬೧೦.

ಚೆನ್ನಪ್ಪ ಸು. ೧೭೫೦. ಈತನು ಶಿವಶರಣಲೀಲಾಮೃತವನ್ನು ಬರೆದಿದ್ದಾನೆ. ಇದು ಯಕ್ಷಗಾನದಲ್ಲಿದೆ. ಸಂಧಿ ೧೧

ವಿರಕ್ತ ಷಡಕ್ಷರಯ್ಯ ಸು. ೧೭೫೦. ಈತನು ವಚನಗಳು ಶಿವಪೂಜಾಷ್ಟಕ, ಶಿವಯೋಗಾಷ್ಟಕ ಇವುಗಳನ್ನು ಬರೆದಿದ್ದಾನೆ. ಶಿವಪೂಜಾಷ್ಟಕದಲ್ಲಿ ೯ ಕಂದಗಳಿವೆ. ಶಿವಯೋಗಾಷ್ಟಕದಲ್ಲಿಯೂ ೯ ಕಂದಗಳಿವೆ.

ಗುರುಸಿದ್ದಪ್ಪ ಸು. ೧೭೫೦. ಈತನು ಮಾದೇಶ್ವರ ಸಾಂಗತ್ಯವನ್ನು ಬರೆದಿದ್ದಾನೆ. ಇದರಲ್ಲಿ ಸಂಧಿ ೩ ಪದ್ಯ ೩೬೩ ಇವೆ.

ಯೋಗಾನಂದ ಸು. ೧೭೫೦. ಈತನು ವಿರೂಪಾಕ್ಷ ಶತಕ, ಬಸವ ಶತಕ ಇವುಗಳನ್ನು ಬರೆದಿದ್ದಾನೆ. ವಿರೂಪಾಕ್ಷ ಶತಕದಲ್ಲಿ ೧೦೦ ಕಂದಗಳಿವೆ. ಬಸವ ಶತಕದಲ್ಲಿ ೧೧೧ ಪದಗಳಿವೆ.

ನಿಶ್ಚಿಂತಾತ್ಮ ಸು. ೧೭೫೦. ಇವನು ವೀರಭದ್ರ ಲೀಲಾವಿಜಯವನ್ನು ಬರೆದಿದ್ದಾನೆ. ಇದು ಭಾಮಿನಿ ಷಟ್ಪದಿಯಲ್ಲಿದೆ. ಅಧ್ಯಾಯ ೯ ಪದ್ಯ ೮೦೦.

ನಿರಂಜನಾರ್ಯ ಸು. ೧೭೫೦. ಈತನು ನಂಜುಂಡ ಶತಕ, ನಿಷ್ಕಾಮ ವಚನ ಇವುಗಳನ್ನು ಬರೆದಿದ್ದಾನೆ. ನಂಜುಂಡ ಶತಕ ಕಂದದಲ್ಲಿದೆ. ಇದಕ್ಕೆ ನೀತಿಶಾಸ್ತ್ರ ಎಂಬ ಹೆಸರೂ ಇದೆ. ನಿಷ್ಕಾಮ ವಚನದಲ್ಲಿ ೧೨೯ ಹಾಡುಗಳಿವೆ.

ಶಂಕರ ಕವಿ ೧೭೬೩. ಈತನು ಚೋರಬಸವ ಚರಿತ್ರೆಯನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಸಂಧಿ ೧೩ ಪದ್ಯ ೭೫೫.

ನಾರಸಿಂಹ ೧೭೬೮. ಈತನು ಅನುಭವಶಿಖಾಮಣಿಯನ್ನು ಬರೆದಿದ್ದಾನೆ. ಇವನು ವೀರಶೈವ ಕವಿ ಎಂದು ತೋರುತ್ತದೆ. ಅನುಭವ ಶಿಖಾಮಣಿ ಭಾಮಿನಿ, ವಾರ್ಧಕ, ಶರ ಷಟ್ಪದಿಗಳಲ್ಲಿದೆ. ಸಂಧಿ ೨೪ ಪದ್ಯ ೧೦೨೯.

ಮಹಮೂರ್ತಿ ೧೭೭೨. ಈತನು ಅಷ್ಟಾವರಣತಿಲಕವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಸಂಧಿ ೧೧ ಪದ್ಯ ೧೧೩೬

ಕಸ್ತೂರಿಸಿದ್ಧ ಸು. ೧೮೦೦. ಇವನು ಚೋರಕಥೆ ಎಂಬ ಯಕ್ಷಗಾನ ಬರೆದಿದ್ದಾನೆ.

ನಿಜಲಿಂಗಾರಾಧ್ಯ ಸು. ೧೮೦೦. ಈತನು ನಿರಂಜನಲಿಂಗಶತಕವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಪದ್ಯ ೧೦೦

ಕಪ್ಪಿನಿ ಸು. ೧೮೦೦. ಇವನು ನಂಜುಂಡ ಶತಕವನ್ನು ಬರೆದಿದ್ದಾನೆ. ಇವನು ವೀರಶೈವ ಕವಿ ಎಂದು ತೋರುತ್ತದೆ. ನಂಜುಂಡ ಶತಕ ಕಂದದಲ್ಲಿ ಬರೆದಿದೆ. ಪದ್ಯ ೧೦೩

**ಹತ್ತೊಂಬತ್ತನೆಯ ಶತಮಾನದ ಕವಿಗಳು**

ಮಾವನೂರು ಚೆನ್ನಬಸವ ೧೮೪೦. ಈತನು ಶರಣುಬಸವಚರಿತೆಯನ್ನು ಬರೆದಿದ್ದಾನೆ. ಇದು ಭಾಮಿನಿ ಷಟ್ಪದಿಯಲ್ಲಿದೆ. ಸಂಧಿ ೧೫ ಪದ್ಯ ೧೦೧೧

ಮದ್ದಗಿರಿ ನಂಜಪ್ಪ ಸು. ೧೮೪೦. ಈತನು ಕೃಷ್ಣರಾಜೇಂದ್ರ ವಿಲಾಸವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಪ್ರಕರಣ ೬

ದೇವಲಾಪುರದ ನಂಜುಂಡ ೧೮೪೧. ಈತನು ಅಪರಾಧಸ್ತೋತ್ರ, ಕೃಷ್ಣರಾಜಪಟ್ಟಾಭಿಷೇಕ ವರ್ಣನೆ, ಕೃಷ್ಣರಾಜ ಭಕ್ತಿಸಾರ, ಕೃಷ್ಣರಾಜ ಭೋಗಾವಳಿ, ಕೃಷ್ಣರಾಜ ಶೃಂಗಾರ ಶತಕ, ಕೃಷ್ಣರಾಜೇಂದ್ರ, ವೃತ್ತರತ್ನಾವಳೀ ಟೀಕೆ, ಕೃಷ್ಣೇಂದ್ರ ಗೀತೆ, ತಿಬ್ಬಾಂಬಿಕಾ ಶತಕ, ಲಿಂಗಸ್ತುತಿ, ಶಂಕರಾಷ್ಟಕ, ಶೈಲಜಾಧವಸ್ತೋತ್ರ, ಸಮುದ್ರಮಥನ ಕಥೆ, ಸೌಂಗಧಿಕಾ ಪರಿಣಯ.

ನಂಜುಂಡ ಶಿವಯೋಗಿ ಸು. ೧೮೦೦. ಈತನು ಅಟವೀಶ್ವರ ಗೀತಾಮಂಜರಿಯನ್ನು ಬರೆದಿದ್ದಾನೆ.

ಮಹಾದೇವ ೧೮೭೦. ಈತನು ಮಹಾಲಿಂಗೇಂದ್ರ ವಿಜಯವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಸಂಧಿ ೩೨ ಪದ್ಯ ೨೦೬೨.

ಬಸವಕವಿ ೧೮೮೭. ಈತನು ಸಿದ್ಧಲಿಂಗೇಶ್ವರ ಕಾವ್ಯವನ್ನು ಬರೆದಿದ್ದಾನೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಸಂಧಿ ೧೫ ಪದ್ಯ ೪೩೮

ಬಸವಪ್ಪಶಾಸ್ತ್ರಿ, ಸಾವಿತ್ರೀ ಚರಿತ್ರೆ (ಷಟ್ಪದಿ); ಭರ್ತೃಹರಿ ಸುಭಾಷಿತ (ವೃತ್ತ) ನೀತಿಸಾರ ಸಂಗ್ರಹ (ಕಂದ) ದಮಯಂತೀ ಸ್ವಯಂವರ (ಚಂಪು) ಶಾಕುಂತಳ, ಚಂಡಕೌಶಿಕ, ಉತ್ತರರಾಮಚರಿತೆ, ಶೂರಸೇನ ಚರಿತ್ರೆ (ನಾಟಕಗಳು) ರೇಣುಕಾರ್ಯ ವಿಜಯ (ಚಂಪು).

■

# ಧಾರ್ಮಿಕ ಹಿನ್ನೆಲೆಯಲ್ಲಿ ದಾನದ ಪರಿಕಲ್ಪನೆ

ಅಗಜಾನನ ಪದ್ಮಾರ್ಕಂ ಗಜಾನನಮಹರ್ನಿಶಂ
ಅನೇಕದಂತಂ ಭಕ್ತಾನಾಂ ಏಕದಂತಮುಪಾಸ್ಮಹೇ ॥

**ಭ**ರತಖಂಡ ಧರ್ಮಪ್ರಧಾನವಾದ ನಾಡು. ಈ ನಾಡಿನಲ್ಲಿ ಅನೇಕ ಧರ್ಮಗಳು ಕಾಲಕಾಲಕ್ಕೆ ತಲೆಯೆತ್ತಿ ವಿಜೃಂಭಿಸುವುದನ್ನು ಇತಿಹಾಸದಿಂದ ಕಂಡುಕೊಳ್ಳಬಹುದಾಗಿದೆ. ಈ ನಾಡಿನ ಜನ ಎಲ್ಲ ಧರ್ಮಗಳಿಗೂ ಅತ್ಯಂತ ಮಹತ್ವವನ್ನು ನೀಡಿದ್ದಾರೆ. ಧರ್ಮಪರವಾದ ಈ ನಾಡಿನ ಜನತೆ ಧರ್ಮವನ್ನು ನಿರಂತರವಾಗಿ ರಕ್ಷಿಸಿಕೊಂಡು ಬಂದಿದ್ದಾರೆ. ಏಕೆಂದರೆ ಧರ್ಮವನ್ನು ರಕ್ಷಿಸಿದವರನ್ನು ಧರ್ಮ ರಕ್ಷಿಸುತ್ತದೆ ಎಂಬ ಬಲವಾದ ನಂಬಿಕೆ ಅವರಲ್ಲಿ ಮನೆಮಾಡಿತ್ತು. ಅದನ್ನೇ ಈ ಪ್ರಾಚೀನ ಶ್ಲೋಕ ಮತ್ತಷ್ಟು ದೃಢಪಡಿಸುತ್ತದೆ.

ಧರ್ಮ ಏವ ಹತೋಹಂತಿ ಧರ್ಮೋ ರಕ್ಷತಿ ರಕ್ಷಿತಃ
ತಸ್ಮಾದ್ಧರ್ಮೋ ನ ಹಂತವ್ಯಸ್ಸರ್ವೈಶ್ವರ್ಯ ಫಲೇಪ್ಸುಭಿಃ

ಧರ್ಮಶಬ್ದಕ್ಕೆ ಅನೇಕಾರ್ಥಗಳಿವೆ. ವಚನಕಾರರ ನೇತಾರರಾದ ಬಸವಣ್ಣ ನವರು:

ದಯವಿಲ್ಲದ ಧರ್ಮವದೇವುದಯ್ಯ
ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿಯೂ
ದಯವೇ ಧರ್ಮದ ಮೂಲವಯ್ಯಾ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ

ಎಂದಿದ್ದಾರೆ. ಕುಮಾರವ್ಯಾಸ ತನ್ನ ಭಾರತದ ಉದ್ಯೋಗಪರ್ವತದಲ್ಲಿ:

ಧರ್ಮದಾಧಾರದಲಿಹುದು ಜಗ
ಧರ್ಮವುಳ್ಳವನಾಶ್ರಯಿಸುವುದು
ಧರ್ಮವೇ ನೂಕುವುದು ಜನ್ಮಾಂತರದ ಪಾತಕವ
.............ಧರ್ಮವನ್ನು ಬಿಟ್ಟಿಹುದು ಬದುಕಲ್ಲ

ಎಂದು ಹೇಳಿದ್ದಾನೆ.

ಧರ್ಮ ಶಬ್ದಕ್ಕೆ ಉಚಿತವಾಗಿ ಕೊಟ್ಟದ್ದು ದಾನ ಎಂಬ ಅರ್ಥವೂ ಇದೆ. "ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಲಿಗೆ ಹೋಗಿ ಮೊಳಹಾಕಿ ನೋಡಿದ"; "ಕೆಟ್ಟು ನೆಂಟರ ಸೇರಬೇಡ, ಕೊಟ್ಟ ಧರ್ಮ ತಿರಿಗಿ ಕೇಳಬೇಡ" ಎಂಬ ಗಾದೆಗಳು ಇಂದಿಗೂ ಜನತೆಯಲ್ಲಿ ಪ್ರಚಲಿತವಾಗಿವೆ. ಧಾರ್ಮಿಕ ಶಬ್ದಕ್ಕೆ ಧರ್ಮಕ್ಕೆ ಸಂಬಂಧಿಸಿದ, ಧರ್ಮಬುದ್ಧಿಯ ಎಂಬ ಗುಣವಾಚಕದ ಅರ್ಥಗಳೂ, ಧರ್ಮದಿಂದ ಕೂಡಿದುದು; ಪುಣ್ಯಕರವಾದುದು; ಧರ್ಮವನ್ನು ಆಚರಿಸುವವನು ಎಂಬ ನಾಮವಾಚಕದ ಅರ್ಥಗಳೂ ರೂಢಿಯಲ್ಲಿವೆ. ಜನ್ನ ಕವಿಯ ಅನಂತನಾಥಪುರಾಣದಲ್ಲಿ: "ಧರ್ಮಂ ಧಾರ್ಮಿಕ ನಿಂದೆ ನಿಲ್ವುದದಜೆಂದಂ ಧಾರ್ಮಿಕಾಗ್ರೇಸರಂ ಧರ್ಮಂ" (೩–೬೩) ಎಂಬ ಪ್ರಯೋಗವಿದೆ. ಕ್ರಿ.ಶ. ೧೧೮೨ರ ಒಂದು ಶಾಸನದಲ್ಲಿ "ಕೃತಯುಗಮಾದುದು ಕಲಿಯುಗಮತಿಧಾರ್ಮಿಕಮಾಯ್ತು ವಿಕ್ರಮಾದಿತ್ಯನೃಪಂ ಪಾಳಿಪ... ರಾಷ್ಟ್ರಂ" (ಎಫಿಗ್ರಾಫಿಯಾ ಇಂಡಿಕಾ xxviii, ೩೮೯) ಎಂಬ ಉಲ್ಲೇಖವಿದೆ.

'ದಾನ' ಪದಕ್ಕೆ ಕೆಲವಾರು ಅರ್ಥಗಳಿದ್ದರೂ ಕೊಡುಗೆ, ಕಾಣಿಕೆ, ಉಪಾಯನ ಎಂಬ ಅರ್ಥಗಳು ತೀರ ಪ್ರಚಲಿತವಾದುವು. ದೇವರ ದಾಸಿಮಯ್ಯ:

ಎತ್ತು ನಿಮ್ಮ ದಾನ ಬಿತ್ತು ನಿಮ್ಮ ದಾನ
ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ ರಾಮನಾಥಾ. (೧೦೮)

ಎಂದು ಪ್ರಶ್ನಿಸಿದ್ದಾನೆ. ಪಾಲ್ಕುರಿಕೆ ಸೋಮನಾಥನ ಸೋಮೇಶ್ವರ ಶತಕದಲ್ಲಿ "ಕೊಡಬೇಕುತ್ತಮನಾದವಂಗೆ ಮಗಳಂ ಸತ್ಪಾತ್ರಕಂ ದಾನವಂ" ಎಂದು ಹೇಳಿದೆ. ಸರ್ವಜ್ಞ ಕವಿ "ಸಿರಿ ಬಂದ ಕಾಲಕ್ಕೆ ಕರೆದು ದಾನವ ಮಾಡು" ಎಂಬ ತಿಳಿವಳಿಕೆಯನ್ನು ನೀಡಿದ್ದಾನೆ.

ದಾನ ಮಾಡುವುದರಲ್ಲಿ ಒಂದು ವಿವೇಚನೆ ಇರಬೇಕು. ದಾನ ಧರ್ಮಪರವಾಗಿರಬೇಕು. ಸತ್ಪಾತ್ರರಿಗೆ ಸಲ್ಲಬೇಕು. ಅಧಮರಿಗೆ ಅವಿವೇಕಿಗಳಿಗೆ ನೀಚರಿಗೆ ಮಾಡಿದ ದಾನ, ಉಪಕಾರ ಎಷ್ಟು ಅಪಾಯಕಾರಿ ಎಂಬುದನ್ನು ಈ ಪ್ರಾಚೀನ ಸುಭಾಷಿತ ಸಾರುತ್ತಿದೆ:

ಉಪಕಾರೋಪಿ ನೀಚಾನಾಂ ಅಪಕಾರಾಯ ಪರಿಕಲ್ಪತೇ
ಪಯಃಪಾನಂ ಭುಜಂಗಾನಾಂ ಕೇವಲಂ ವಿಷವರ್ಧನಂ

ನೀಚರಿಗೆ ದಾನ ಮಾಡಿದರೆ, ಉಪಕಾರ ಮಾಡಿದರೆ, ಸಹಾಯ ಮಾಡಿದರೆ ಅಪಕಾರವಾಗುತ್ತದೆ. ಹಾವಿಗೆ ಹಾಲೆರೆದರೆ ಅದರ ವಿಷವನ್ನು ಹೆಚ್ಚಿಸಿದಂತಾಗುತ್ತದೆ.

ಧಾರ್ಮಿಕ ಹಿನ್ನೆಲೆಯಲ್ಲಿ ದಾನದ ಪರಿಕಲ್ಪನೆ ಎಂತಿರಬೇಕು, ಹೇಗಿರಬೇಕು ಎಂಬುದನ್ನು ಮತ್ತೆ ಕೆಲವು ಪ್ರಾಚೀನ ದೃಷ್ಟಾಂತಗಳಿಂದ ಪರಿಶೀಲಿಸೋಣ. ವಚನಕಾರರು ಧರ್ಮದಾನಗಳ ಬಗೆಗೆ ವಿಶೇಷವಾಗಿ ಹೇಳಿದ್ದಾರೆ. ಕೆಲವನ್ನು ಈಗಾಗಲೇ ಉದಾಹರಿಸಲಾಗಿದೆ. ಮತ್ತೆ ಕೆಲವು ಇಂತಿವೆ: ಅಖಂಡೇಶ್ವರ ವಚನದಲ್ಲಿ : "ಧರ್ಮ ಅರ್ಥ ಕಾಮ ಮೋಕ್ಷವೆಂಬ ಚತುರ್ವಿಧ ಫಲರಿಗಳ ನಾನೊಲ್ಲೆನಯ್ಯ" ಎಂದು ಹೇಳಲಾಗಿದೆ. ಉರಿಲಿಂಗಪೆದ್ದಿಗಳು "ಧರ್ಮದೊಳಗೆ ಶಿವಧರ್ಮವೇ ಧರ್ಮವೆಂದರಿದೆನಾಗಿ ಧರ್ಮ ಸಾಧ್ಯವಾಯಿತ್ತೆನಗೆ" ಎಂದಿದ್ದಾರೆ. ಪುರಂದರದಾಸರು, "ಧರ್ಮಕೆ ಕೈಬಾರದೀ ಕಾಲ ಪಾಪಕರ್ಮಕೆ ಮನಸೋಲೋದೀ ಕಾಲ" ಎಂದು ಉದ್ಗರಿಸಿದ್ದಾರೆ.

ಧರ್ಮಬುದ್ಧಿ ಅನಾದಿಕಾಲದಿಂದ ಈ ದೇಶದ ಜನತೆಯಲ್ಲಿ ರೂಢಮೂಲವಾಗಿತ್ತು ಎಂಬುದಕ್ಕೆ ಈ ಮುಂದಿನ ಶಾಸನ ಪದ್ಯ ಜ್ವಲಂತನಿದರ್ಶನವಾಗಿದೆ. ವಿಜಯನಗರದ ಪ್ರೌಢ ಪ್ರತಾಪದೇವರಾಯನ ಮಂತ್ರಿಯಾಗಿದ್ದ, ಕನ್ನಡದ ಕುಲಕ್ಕೆ ರನ್ನಗನ್ನಡಿಯಂತಿದ್ದ ಲಕ್ಷ್ಮೀಧರಾಮಾತ್ಯನು ಮಗುವಾಗಿದ್ದಾಗ ಆತನ ತಾಯಿ ಹಾಲು ಕುಡಿಸುತ್ತಿದ್ದಾಗ ಆತನ ಕಿವಿಯಲ್ಲಿ ಈ ಪದ್ಯವನ್ನು ಹೇಳುತ್ತಿದ್ದಳಂತೆ:

ಕೆಱೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸ
ಜ್ಜೆಱೆಯೊಳ್ ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ-
ರ್ಗೆಱೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾ
ಯೆಱೆದಳ್ ಪಾಲೆಱೆವಂದುತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಮನಾ

ಕೆರೆಯನ್ನು ಕಟ್ಟಿಸು, ಬಾವಿಯನ್ನು ತೋಡಿಸು, ದೇವಾಲಯವನ್ನು ನಿರ್ಮಿಸು, ಬಂಧನಕ್ಕೆ ಸಿಕ್ಕಿದ ಅನಾಥರನ್ನು ಬಿಡಿಸು, ಸ್ನೇಹಿತರಿಗೆ ಅನುಕೂಲ ಮಾಡಿಕೊಡು, ನಂಬಿದವರಿಗೆ ಆಶ್ರಯದಾತನಾಗು, ಸತ್ಪುರುಷರನ್ನು ರಕ್ಷಿಸು.

ಚಾಳುಕ್ಯ ವಿಕ್ರಮಾದಿತ್ಯನ ಕಾಲದ ಧಾರವಾಡ ಜಿಲ್ಲೆಯ ಗದಗ ತಾಲ್ಲೂಕಿನ ಕ್ರಿ.ಶ. ೧೧೯೨ರ ಶಾಸನದಲ್ಲಿ ದೀನಾನಾಥರನ್ನು ತುಷ್ಟಿಬಡಿಸುವ ದಾನವೇ ಶ್ರೇಷ್ಠವಾದುದು ಎಂದು ಬಗೆದ ತೆಲ್ಲಿಗ ಜಕಿಯಬ್ಬೆ ಎಂಬಾಕೆ ಅನ್ನಸತ್ರಕ್ಕೆ ಭೂಮಿಯನ್ನು ದಾನಮಾಡಿದ ವಿಷಯ ನಿರೂಪಿತವಾಗಿದೆ.

ದಾನದೊಳನ್ನದಾನಮೆ ಸಾರಂ
ದೀನಾನಾಥರ್ಗೆ ತುಷ್ಟಿದಾನಮೆನುತ್ತುಂ
ತಾನಜಿದು ಜಕ್ಕಿಯಬ್ಬೆ ಯ
ಶೋನಿಧಿ ಸತ್ರಕ್ಕೆ ಭೂಮಿದಾನಮನಿತ್ತಳ್

ಎಲ್ಲ ದಾನಗಳಲ್ಲಿ ಅನ್ನದಾನವೇ ಸರ್ವಶ್ರೇಷ್ಠವಾದುದು ಎಂಬ ಧಾರ್ಮಿಕ ಮನೋಭಾವ ಸುವ್ಯಕ್ತವಾಗಿದೆ.

ಧಾರ್ಮಿಕ ಹಿನ್ನೆಲೆಯಲ್ಲಿ ಚಟ್ಟಗಾವುಂಡ ಎಂಬುವನ ಶೀಲ ಮತ್ತು ಚಾರಿತ್ರಗಳು ಸೊರಬದ ಈ ಶಾಸನ ಪದ್ಯದಲ್ಲಿ ಬಿತ್ತರಗೊಂಡಿವೆ:

ಚಟ್ಟಂ ಪರವನಿತೆಯರಂ
ಮುಟ್ಟಂ ವಿತರಣಮನಮರಭೂರುಹದೊಳ್ ಕೋ
ಡಿಟ್ಟಂ ಪಾಪದ ಪಥಮಂ
ಮೆಟ್ಟಂ ಶಾಶ್ವತಪದಕ್ಕೆ ಕಳಶಮನಿಟ್ಟಂ

ವೇದೋಪನಿಷತ್ತಿನಲ್ಲಿ ಧರ್ಮ ಮತ್ತು ದಾನ ಇವುಗಳ ಪರಿಕಲ್ಪನೆಯನ್ನು ವಿಸ್ತಾರವಾಗಿಯೂ ಯಥಾವತ್ತಾಗಿಯೂ ಮಾಡಿಕೊಡಲಾಗಿದೆ.

"ಧಾರಣಾದ್ಧರ್ಮ ಇತ್ಯಾಹುಃ ಧರ್ಮೋಧಾರಯತಿ ಪ್ರಜಾಃ" ಎಂದರೆ ಜನರನ್ನು ಹಿಡಿದು ನಿಲ್ಲಿಸಿರುವ, ಒಗ್ಗೂಡಿಸಿ ಪರಸ್ಪರವಾಗಿ ಸಹಾನುಭೂತಿಯಿಂದ ಸಹಕರಿಸುತ್ತಿರುವಂತೆ ಪ್ರೇರೇಪಿಸುತ್ತಿರುವ ತತ್ವ ಅಥವಾ ಶಕ್ತಿಗೆ ಧರ್ಮವೆಂದು ಹೆಸರು ಬಂದಿದೆ.

"ಸತ್ಯಂವದ, ಧರ್ಮಂಚರ" (ತೈತ್ತರೀಯ ಉಪನಿಷತ್)
"ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ"
"ಧರ್ಮೇಣ ಪಾಪಮಪನುದತಿ ಧರ್ಮೇ ಸರ್ವಂ ಪ್ರತಿಷ್ಠಿತಂ
ತಸ್ಮಾತ್ ಧರ್ಮಂ ಪರಮಂ ವದಂತಿ" (ಮಹಾನಾರಾಯಣ ಉಪನಿಷತ್)

ಎಂದರೆ, ಸತ್ಯವನ್ನು ಹೇಳು ಧರ್ಮವನ್ನು ಆಚರಿಸು:

ಧರ್ಮವು ಈ ಪ್ರಪಂಚವನ್ನೆಲ್ಲವನ್ನೂ ಎತ್ತಿಹಿಡಿದು ನಿಲ್ಲಿಸಿರುತ್ತದೆ. ಅದು ಈ ಜಗತ್ತು ನಾಶವಾಗದಂತೆ ವ್ಯವಸ್ಥೆಯಿಂದ ಮುಂದುವರಿಯುತ್ತಿರಲು ಸಹಾಯಮಾಡುತ್ತಿರುತ್ತದೆ. ಈ ಲೋಕದಲ್ಲಿ ಎಲ್ಲೆಡೆಯಲ್ಲೂ ನೆಲೆಸಬೇಕಾಗಿರುವ ಸುಖಶಾಂತಿಗಳಿಗೆ ಧರ್ಮಾಚರಣೆಯೇ ಮುಖ್ಯವಾದ ಅವಲಂಬನವಾಗಿರುವುದರಿಂದ ಅದನ್ನು ಕಾಪಾಡುತ್ತಿರುತ್ತದೆ. ಧರ್ಮವು ಈ ಎಲ್ಲ ಜಗತ್ತಿಗೂ ಆಧಾರ ನೆಲೆಯಾಗಿರುತ್ತದೆ.

ಧರ್ಮವೆಂದರೆ ಕೇವಲ ಮೂಢನಂಬಿಕೆಯ ಮತಾಚರಣೆಗಳಲ್ಲ. ಹಾಗೆಯೇ ಬರಿಯ ಕಾಯಕ್ಲೇಶಕರವಾದ ಕರ್ಮಕಲಾಪವೂ ಅಲ್ಲ. ನಮಗೆ ಇಹಲೋಕದಲ್ಲಿ ದೊರೆಯುವ ಸುಖಸೌಕರ್ಯಗಳ ಸಾಧನೆಗಳನ್ನು ಬಿಟ್ಟು ಖಚಿತವಾಗಿ ಗೊತ್ತಾಗದೆ ಇರುವ ಪಾರಲೌಕಿಕ ಸದ್ಗತಿಗಳಿಗಾಗಿ ಆಶೆಪಡುವಿಕೆಯೂ ದುಡಿಯುವಿಕೆಯೂ ಧರ್ಮವೆನಿಸಿಕೊಳ್ಳಲಾರದು. ಜ್ಞಾನಪ್ರಧಾನವಾದ ಈ ಮನುಷ್ಯಜನ್ಮದಲ್ಲಿರುವ ನಾವು ಪಡೆಯಬೇಕಾದ ಫಲವನ್ನು ವಿಚಾರ ಮಾಡಿ ತಿಳಿದು ನಮ್ಮ ಕಾಲ ಪ್ರಯತ್ನಗಳು ವ್ಯರ್ಥವಾಗದಂತೆಯೂ ಅಪವ್ಯಯವಾಗದಂತೆಯೂ, ಆ ಫಲ ಅಥವಾ ಪುರುಷಾರ್ಥಗಳ ತಿಳಿವಳಿಕೆ,

ಅವನ್ನು ಪಡೆಯಲು ಅವಶ್ಯಕವಾದ ನಡವಳಿಕೆ ಮತ್ತು ಮನಃಪೂರ್ವಕವಾದ ಚಟುವಟಿಕೆ, ಇವಕ್ಕೇ ಧರ್ಮವೆಂದು ಹೆಸರು. (ಧಾರ್ಮಿಕ ಸಂಸ್ಕೃತಿ, ೧೩-೧೭)

"ಧರ್ಮಸ್ಸರ್ವಸುಖಾವಹಃ ಪರತರಂ ಧರ್ಮಂ ಬುಧಾಶ್ಚಿನ್ವತೇ
ಧರ್ಮೇಣೇಹ ನಿಜೇಷ್ಟಸಾಧನ ಮತೋಧರ್ಮಾಯ ತಸ್ಮೈ ನಮಃ
ಧರ್ಮಾನ್ನಾಸ್ತಿಪರಂ ಪುಮರ್ಥಕರಣಂ ಧರ್ಮಸ್ಯಮೂಲಂದಯಾ
ಧರ್ಮೇಬುದ್ಧಿರಿ ಹಾಸ್ತುಮೇ ನತು ಫಲೇ ಹೇ ಧರ್ಮಮಾಂ ತಾರಯ"

ಧರ್ಮಾಚರಣೆಯೇ ಎಲ್ಲರಿಗೂ ಸುಖಪ್ರಾಪ್ತಿ ಮತ್ತು ದುಃಖನಿವೃತ್ತಿ ರೂಪವಾದ ಫಲವನ್ನುಂಟುಮಾಡುತ್ತದೆ. ಪ್ರಾಜ್ಞರು ಅತ್ಯುತ್ತಮವಾದ ಧರ್ಮವನ್ನೇ ಹೆಚ್ಚಾಗಿ ಆಚರಿಸುತ್ತಾರೆ. ಧರ್ಮದಿಂದಲೇ ಎಲ್ಲರೂ ತಮ್ಮ ತಮ್ಮ ಇಷ್ಟಾರ್ಥಗಳನ್ನು ಸಾಧಿಸಿಕೊಳ್ಳಬಹುದಾಗಿದೆ. ಆದುದರಿಂದಲೇ ಧರ್ಮದ ವಿಷಯದಲ್ಲಿ ನಮಗೆ ಪ್ರೀತ್ಯಾದರಗಳಿರಬೇಕು. ಪುರುಷಾರ್ಥಗಳನ್ನು ಸಾಧಿಸಿಕೊಳ್ಳಬೇಕಾದರೆ ಧರ್ಮಾಚರಣೆಗಿಂತ ಮೇಲಾದ ಸಾಧನ ಮತ್ತೊಂದಿಲ್ಲ. ಧರ್ಮವನ್ನು ದಯೆಯಿಂದ ಕೂಡಿಯೇ ಆಚರಿಸುತ್ತಿರಬೇಕು.

ದಾನಧರ್ಮಾದಿಗಳನ್ನು ನಿರ್ಬಂಧದಿಂದಾಗಲಿ ತಿರಸ್ಕಾರಬುದ್ಧಿಯಿಂದಾಗಲಿ ಮಾಡಬಾರದು. ಹಾಗೆ ಮಾಡಿದರೆ ಅಂಥಾ ಧರ್ಮವು ಯಥೋಕ್ತಫಲಕಾರಿಯಾಗದೆ ಹೋಗಬಹುದು. ದಾನವನ್ನು ಆದರ ಪ್ರೀತಿಪೂರ್ವಕವಾಗಿ ಮಾಡಬೇಕು. ಅನಾದರ ತಿರಸ್ಕಾರಗಳಿಂದ ಮಾಡಬಾರದು.

ಅದಾನದೋಷೇಣ ಭವೇದ್ದರಿದ್ರಃ ದಾರಿದ್ರ್ಯದೋಷೇಣ ಕರೋತಿ ಪಾಪಂ
ಪಾಪಸ್ಯ ಹೇತೋರ್ನರಕಂ ಪ್ರಯಾತಿ ಪುನರ್ದರಿದ್ರಃ ಪುನರೇವ ಪಾಪೀ

ಹಿಂದೆ ದಾನಮಾಡದೆ ಇದ್ದ ದೋಷದಿಂದ ಈಗ ಬಡವನಾಗಿರುತ್ತಾನೆ. ಬಡತನದ ಕಾರಣದಿಂದ ಪಾಪವನ್ನೂ ಮಾಡಬೇಕಾಗುತ್ತದೆ. ಪಾಪಾಚರಣೆಯಿಂದ ನರಕಕ್ಕೆ ಹೋಗಿ ದುಃಖವನ್ನು ಅನುಭವಿಸುತ್ತಾನೆ. ಆದುದರಿಂದ ಮತ್ತೆ ಮತ್ತೆ ಬಡವನಾಗಿಯೂ ಪಾಪಿಯಾಗಿಯೂ ಜನ್ಮವನ್ನು ಪಡೆಯುತ್ತಿರುತ್ತಾನೆ. ಆದುದರಿಂದ ದಾನವು ಒಂದು ಮಹತ್ವವುಳ್ಳ ಧರ್ಮವಾಗಿದೆ. ತಿಳಿವಳಿಕೆ ಸಹಾನುಭೂತಿ ಪ್ರೀತಿಗಳಿಂದ ಕೂಡಿ ದಾನವನ್ನು ಮಾಡಬೇಕು. ದಾನವು ಎಷ್ಟು ಮಹತ್ವವುಳ್ಳ ಪ್ರಭಾವಶಾಲಿಯಾದ ಆದ್ಯಂತಗಳಲ್ಲೂ ಪರಿಣಾಮಕಾರಿಯಾದ ಧರ್ಮ ಎಂಬ ತಿಳಿವಳಿಕೆಯಿಂದ ಕೂಡಿ ದಾನವನ್ನು ಮಾಡಬೇಕು. (ಭಾರತಾರ್ಯರ ಧಾರ್ಮಿಕ ಸಂಸ್ಕೃತಿ, ಪು. ೧೭, ೨೬, ೨೭, ೨೮, ಎಡತೊರೆ ಚಂದ್ರಶೇಖರಶಾಸ್ತ್ರೀ)

■

# ಸರ್ವಜ್ಞ

ಕರ್ನಾಟಕದಲ್ಲಿ ಹಲವಾರು ಜನ ಧರ್ಮಬೋಧಕರು, ನೀತಿಪ್ರಸಾರಕರು, ಭಕ್ತವಿರಕ್ತರು, ಕವಿಪ್ರವಾದಿಗಳು ಆಗಿಹೋಗಿದ್ದಾರೆ. ನಾಡಿನಲ್ಲಿ ಅಧರ್ಮ, ಅನ್ಯಾಯ, ಕೃತ್ರಿಮ ಇತ್ಯಾದಿಗಳು ವಿಶೇಷವಾಗಿ ತಲೆದೋರಿದಾಗ ಆಗಿಂದಾಗ್ಗೆ ಇಂತಹ ಮಹಾನುಭಾವರು ಜನ್ಮವೆತ್ತಿ ಜನತೆಯನ್ನು ಜಾಗ್ರತಿಗೊಳಿಸಿದ್ದಾರೆ; ಅವರ ಕಲ್ಯಾಣ ಮಾರ್ಗವನ್ನು ತೋರಿಸಿದ್ದಾರೆ. ಈ ತೆರನ ಕಾರ್ಯಕ್ಕಾಗಿ ಅವರು ತಮ್ಮ ತನು, ಮನ, ಧನಗಳನ್ನು ಅರ್ಪಿಸಿದ್ದಾರೆ. ಅಂತವರಲ್ಲಿ ಸರ್ವಜ್ಞನೂ ಒಬ್ಬನು. ಈತನು ಸಮಾಜಸುಧಾರಕನಾಗಿ, ನೀತಿಬೋಧಕನಾಗಿ ಮಹತ್ಕಾರ್ಯಗಳನ್ನು ಸಾಧಿಸಿದ್ದಾನೆ. ಕವಿಯಾಗಿ ಚಿರಸ್ಥಾಯಿಯಾದ ಸ್ಥಾನವನ್ನು ಗಳಿಸಿದ್ದಾನೆ. ಈತನ ತೀಕ್ಷ್ಣ ಪ್ರತಿಭೆಗೆ ಒಳಗಾಗದ ವಸ್ತುವಿಲ್ಲ. ಸಾಮಾಜಿಕ, ರಾಜಕೀಯ, ಧಾರ್ಮಿಕ, ನೈತಿಕ ಮುಂತಾದ ವಿಚಾರಗಳೆಲ್ಲ ಈತನ ತ್ರಿಪದಿಗಳಲ್ಲಿ ಸ್ಪಷ್ಟವಾಗಿ ಪ್ರತಿಪಾದಿತವಾಗಿವೆ. ಈತನಿಗೆ ಆರ ಹಂಗೂ ಇಲ್ಲ, ಆವ ಹಂಗೂ ಇಲ್ಲ. ಆದುದರಿಂದಲೇ "ಆರು ಮುನಿದೇನು ಮಾಡುವರು, ಊರು ಮುನಿದೇನು ಮಾಡುವುದು, ನಮ್ಮ ಕುನ್ನಿಗೆ ಕೂಸನೀಯಬೇಡ" ಎಂದು ಬಸವಣ್ಣನವರು ಸಾರಿದಂತೆ ಸರ್ವಜ್ಞನು ನಿರ್ದಾಕ್ಷಿಣ್ಯವಾಗಿ ತನ್ನ ತ್ರಿಪದಿಗಳಲ್ಲಿ ಹೇಳಿದ್ದಾನೆ. ಈತನ ವಚನಗಳು ಆಣಿಮುತ್ತುಗಳಂತಿವೆ. ಧರ್ಮಬೋಧಕವಾಗಿವೆ. ಸಾರ್ವಜನಿಕವೂ ಸಾರ್ವಕಾಲಿಕವೂ ಆಗಿವೆ. ಈತನಿಗೆ ತನ್ನವರು ನನ್ನವರು ಎಂಬ ಅಭಿಮಾನವಾಗಲೀ ಭೇದಭಾವವಾಗಲೀ ಇಲ್ಲ. ತಾನು ಕಂಡದ್ದನ್ನು ಕಂಡಂತೆ ಹೇಳುವುದೇ ಈತನ ವಿಶಿಷ್ಟಗುಣ.

ಸರ್ವಜ್ಞನ ಜೀವನದ ವಿಚಾರದಲ್ಲಿ ಹಲವಾರು ಕಥೆಗಳು ಹುಟ್ಟಿಕೊಂಡಿವೆ. ವಿದ್ವಾಂಸರಲ್ಲಿ ಒಮ್ಮತವಿಲ್ಲ. ಆತನ ತ್ರಿಪದಿಗಳಿಂದಲೇ ಕೆಲವು ಸಂಗತಿಗಳು ತಿಳಿದು ಬರುತ್ತವೆ. ಅದರಂತೆ ಈತನು ಕೈಲಾಸದಲ್ಲಿ ಪುಷ್ಪದಂತನೆಂಬ ಗಣನಾಥನಾಗಿದ್ದನು. ಆಮೇಲೆ ವರರುಚಿಯಾಗಿ ಕೊನೆಗೆ ಭೂಲೋಕದಲ್ಲಿ ಸರ್ವಜ್ಞನಾಗಿ ಜನ್ಮವೆತ್ತಿದನಂತೆ. ಧಾರವಾಡ ಜಿಲ್ಲೆಯ ಮಾಸೂರಿನಲ್ಲಿದ್ದ ಬಸವರಸ ಎಂಬ ಆರಾಧ್ಯ ಬ್ರಾಹ್ಮಣ ಈತನ ತಂದೆ, ಮಲ್ಲಮ್ಮ ಈತನ ತಾಯಿ. ಈ ದಂಪತಿಗಳಿಗೆ ಮಕ್ಕಳಿರಲಿಲ್ಲ. ಈ ಕೊರತೆ ಸದಾ ಅವರನ್ನು ಕಾಡುತ್ತಿತ್ತು. ಅದನ್ನು ನಿವಾರಿಸಲೋಸುಗ, ಬಸವರಸ ಕಾಶಿಗೆ ಹೋಗಿ, ಈಶ್ವರನಿಂದ ವರಪ್ರಸಾದವನ್ನು ಪಡೆದು, ಊರಿಗೆ ಹಿಂತಿರುಗಿದನು. ಆದರೆ ಮಾರ್ಗಮಧ್ಯೆ ಅಂಬಲೂರಿನಲ್ಲಿ ತಂಗಬೇಕಾಯಿತು. ಆ ಊರಿನಲ್ಲಿದ್ದ ಕುಂಬಾರ ಮಾಳಿಯಲ್ಲಿ ಮೋಹಗೊಂಡನು. ಕ್ರಮೇಣ ಮಾಳಿ ಗರ್ಭಿಣಿಯಾಗಿ ಸರ್ವಜ್ಞನನ್ನು ಪಡೆದಳು. ಈ ಪ್ರಸಂಗದ ಸತ್ಯಾಸತ್ಯದ ಚರ್ಚೆ ಇಲ್ಲಿ ಅಪ್ರಕೃತ. ಇಷ್ಟನ್ನು ಬಿಟ್ಟು ಸರ್ವಜ್ಞನ ಕಾಲ ದೇಶಗಳ ಬಗ್ಗೆ ಮತ್ತೇನೂ ತಿಳಿದುಬಂದಿಲ್ಲ.

ಸರ್ವಜ್ಞನ ಕಾಲವಿಚಾರದಲ್ಲಿ ವಿದ್ವಾಂಸರಲ್ಲಿ ಒಮ್ಮತವಿದ್ದಂತೆ ಕಂಡುಬರುವುದಿಲ್ಲ. ಕರ್ನಾಟಕ ಕವಿಚರಿತೆಕಾರರು ಈತನ ಕಾಲವನ್ನು ಕ್ರಿ.ಶ. ೧೭೦೦ ಇದ್ದಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ.* ಸರ್ವಜ್ಞನ ವಚನಗಳನ್ನು ಅತ್ಯಂತ ಆತ್ಮೀಯತೆಯಿಂದ ಅಪಾರ ಕಷ್ಟಗಳನ್ನನುಭವಿಸಿ ಪ್ರಕಟಪಡಿಸಿರುವ ಶ್ರೀಮಾನ್ ಚನ್ನಪ್ಪ ಉತ್ತಂಗಿಯವರು ಈತನ ಕಾಲವು ಸುಮಾರು ೧೬ನೇ ಶತಮಾನವಾಗಿರಬಹುದೆಂದು ತಿಳಿಸಿದ್ದಾರೆ.

ಸರ್ವಜ್ಞ ಆವ ಮತಕ್ಕೆ ಸೇರಿದವನು ಎಂದು ನಿರ್ಧರಿಸುವುದು ಕಷ್ಟಸಾಧ್ಯವಾಗಿದೆ. ಸರ್ವಜ್ಞ ಎಂಬುದು ಆತನ ಹೆಸರೋ ಬಿರುದೋ ತಿಳಿಯದಾಗಿದೆ. ಈ ಬಗ್ಗೆ ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳವರ ಅಭಿಪ್ರಾಯ ಉಲ್ಲೇಖಾರ್ಹವಾಗಿದೆ.

---

* ಕರ್ನಾಟಕ ಕವಿ ಚರಿತ್ರೆ : ಭಾಗ–೨, ಪುಟ ೫೩೨

"ಸರ್ವಜ್ಞ ಎಂಬುದನ್ನು ಅಂಕಿತವೆಂದು ಒಪ್ಪಿಕೊಂಡರೆ ಈ ಕವಿಯು ಯಾವ ಮತದವನೆಂದು ಅದರಿಂದಲೇ ಊಹಿಸುವುದು ಕಷ್ಟವಾಗುತ್ತದೆ. ಏಕೆಂದರೆ ಮೇಲೆ ಹೇಳಿದಂತೆ, ಸರ್ವಜ್ಞ ಎಂಬ ಹೆಸರುಳ್ಳ ಯಾವ ಶೈವ, ವೈಷ್ಣವ, ಜೈನ, ಬೌದ್ಧದೇವತೆಗಳೂ ತಿಳಿದುಬಂದಿಲ್ಲ. ಅವನ ಗ್ರಂಥವನ್ನು ನೋಡಿದರೆ ಷಟ್‌ಸ್ಥಲ, ಅಷ್ಟಾವರಣ ಮುಂತಾದ ವೀರಶೈವ ಧರ್ಮಕ್ಕೆ ಸಂಬಂಧಪಟ್ಟ ಕೆಲವು ವಿಚಾರಗಳನ್ನು ಕುರಿತ ಪದ್ಯಗಳು ದೊರೆಯುತ್ತವೆ. ಆದ್ದರಿಂದ ಸರ್ವಜ್ಞನು ವೀರಶೈವನೆನ್ನಬಹುದು. ವಚನಗಳು, ಎಂದು ಅವನ ಕಾವ್ಯಗಳು ರೂಢಿಯಾಗಿರುವುದು ಇದನ್ನೇ ಸೂಚಿಸುತ್ತದೆ."

ಸರ್ವಜ್ಞನ ವಚನಗಳು "ತ್ರಿಪದಿ"ಯಲ್ಲಿ ರಚಿತವಾಗಿವೆ. ಈ ತ್ರಿಪದಿ ಅಚ್ಚಕನ್ನಡ ಛಂದಸ್ಸಿನ ಹಾಡುಗಬ್ಬದ ಜಾತಿಗೆ ಸೇರಿದ್ದು. ಇದಕ್ಕೆ ತಿವದಿ, ತಿವಳಿ ಎಂಬ ನಾಮಾಂತರಗಳೂ ಉಂಟು. ಕನ್ನಡ ಸಾಹಿತ್ಯದಲ್ಲಿ ತ್ರಿಪದಿಯಲ್ಲಿಯೇ ಸಮಗ್ರ ಕಾವ್ಯಗಳನ್ನು ಬರೆದಿರುವ ಕವಿಗಳು ಅತಿ ವಿರಳ; ಇಲ್ಲವೆಂದೇ ಹೇಳಬಹುದು. ತ್ರಿಪದಿ ಪ್ರಾಚೀನವಾದುದು. ಸುಮಾರು ೧೧ನೇ ಶತಮಾನದ ಶಾಸನಗಳಲ್ಲಿಯೇ ಕಂಡುಬರುತ್ತದೆ. ಸರ್ವಜ್ಞನನ್ನು ಕುರಿತು ಡಾ. ರಂ.ಶ್ರೀ. ಮುಗಳಿಯವರು "ಸರ್ವಜ್ಞನ ತ್ರಿಪದಿಗಳಲ್ಲಿ ಕಥೆಯಿಲ್ಲ, ವರ್ಣನೆಯಿಲ್ಲ, ಆದರೆ ಸಮಗ್ರ ಜೀವನ ಕಥೆ ಇಲ್ಲವೇ ಜೀವನ ಧರ್ಮ ಅವುಗಳಲ್ಲಿ ರೂಪಗೊಂಡಿವೆ. ಜೀವನ ರಸಕ್ಕೆ ಪೋಷಕವಾಗಿವೆ. ಅವು ಬರೀ ನೀತಿಬೋಧಕವಾದವುಗಳಲ್ಲ. ಅನುಭವದ ವೇದ, ವಿವೇಕದ ವಾಣಿ ಅವುಗಳಲ್ಲಿದೆ. ಕೆಲವು ಕಾವ್ಯಗಳಲ್ಲಿ ಇದು ಲೇಸು, ಇದು ಹೊಲ್ಲ ಎಂದು ಹೇಳುವಾಗ ಮಾತಿನ ಚಿತ್ರವಾದ ಜೋಡಣೆ ಹಗುರಾದ ನಗೆ ಮಾತ್ರ ಕಾಣುತ್ತದೆ. ಉಳಿದ ಅನೇಕ ವಚನಗಳಲ್ಲಿ ಸಮಾಜದ ಗುಣದೋಷಗಳ ಚಿತ್ರವಿದೆ. ವಿಡಂಬನೆ ಇದೆ; ಬೋಧನೆ ಇದೆ. ಯಾರ ಭಿಡೆ ಮುರವತ್ತುಗಳಿಲ್ಲದೆ ಮುಚ್ಚುಮರೆಯಿಲ್ಲದೆ ಅವನು ಕಂಡದ್ದನ್ನಾಡಿದ್ದಾನೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಇಷ್ಟುಮಟ್ಟಿನ ಸ್ವಾತಂತ್ರ್ಯ, ಮನೋಧೈರ್ಯಗಳು ಬೇರೆಯವರಲ್ಲಿ ಕಾಣವು..." ಕಿಱಿದಱೊಳ್ ಪಿರಿದುಮರ್ಥವನಱಿಪಲ್ ನೆಱೆವಾತ"ನಾದ ಸರ್ವಜ್ಞನ ಸಂಕ್ಷೇಪ ಸ್ವಾರಸ್ಯ, ತ್ರಿಪದಿ ತ್ರಿವಿಕ್ರಮಶಕ್ತಿ, ಅಚ್ಚಕನ್ನಡದ ಸೊಬಗು ಇವನ್ನು ಎಷ್ಟು ಹೊಗಳಿದರೂ ಸಾಲದು. ಅವನ ಬರವಣಿಗೆಯೆಲ್ಲಾ ಉತ್ತಮ ಕಾವ್ಯವೆನ್ನಲಾಗದಿದ್ದರೂ ಅವನಲ್ಲಿ ಉತ್ತಮ ಕವಿಯ ಸತ್ವವಿದೆಯೆನ್ನಬೇಕು. ಅವನ ವಚನಗಳು ಜನತೆಯ ಜ್ಞಾನಕೋಶವಾಗಿವೆ; ಸೂಕ್ತಿವಾಕ್ಯಗಳಾಗಿವೆ, ಗಾದೆ ಮಾತುಗಳಾಗಿವೆ. ಕನ್ನಡ ಸಾಹಿತ್ಯದ ದೇಸಿ ತತ್ವವು ಸರ್ವಜ್ಞನಲ್ಲಿ ಸಾರ್ಥಕ್ಯವನ್ನು ಪಡೆದಿದೆ.*

ಸರ್ವಜ್ಞನ ವಚನಗಳ ಹಲವಾರು ಮುದ್ರಣಗಳು ಈಗಾಗಲೇ ಪ್ರಕಟವಾಗಿವೆ. ಕೆಲವು ಲೇಖನಗಳೂ ವಿಮರ್ಶೆಗಳೂ ಹೊರಬಿದ್ದಿವೆ. ಇಷ್ಟಾದರೂ ಸರ್ವಜ್ಞನ ತ್ರಿಪದಿಗಳು ಎಷ್ಟು ಎಂಬುದನ್ನು ಖಚಿತವಾಗಿ ನಿರ್ಧರಿಸಲು ಸಾಧ್ಯವಿಲ್ಲವಾಗಿದೆ. ಸರ್ವಜ್ಞನ ತರುವಾಯ ಬಂದ ಜನ, ಆತನ ತ್ರಿಪದಿಗಳನ್ನು ಅತ್ಯಂತ ಆದರದಿಂದ ಓದಿ ಓದಿ ಅಭಿಮಾನದಿಂದ ಕೆಲವು ಹೊಸ ತ್ರಿಪದಿಗಳನ್ನೇ ಬರೆದು ಆತನ ಹೆಸರಿಗೆ ಕಟ್ಟಿರುವಂತೆ ಕಂಡುಬರುತ್ತದೆ. ಕಾಲಜ್ಞಾನದ ತ್ರಿಪದಿಗಳಲ್ಲಿ ಇದು ಸುಸ್ಪಷ್ಟವಾಗಿ ಗೋಚರವಾಗುತ್ತಿದೆ. ಈ ಪ್ರಕ್ಷಿಪ್ತ ತ್ರಿಪದಿಗಳು ಯಾವುವು ಎಂಬುದನ್ನು ನಿರ್ಧರಿಸುವುದು ಕಷ್ಟಸಾಧ್ಯವಾದುದಾದರೂ ಸಂಶೋಧನೆ ಹೊಸವಿಧಾನಗಳಿಂದ ಸಾಧ್ಯವಾದೀತು. ಈತನು ಸಮಾಜಕ್ಕೆ ಸಾಹಿತ್ಯಕ್ಕೆ ಸಲ್ಲಿಸಿರುವ ಸೇವೆ ಅತ್ಯಮೋಘವಾದುದು. ತನ್ನ ತ್ರಿಪದಿಗಳಲ್ಲಿ ಲೌಕಿಕ ಆಧ್ಯಾತ್ಮಿಕ ಸಂಗತಿಗಳನ್ನೆಲ್ಲಾ ಪ್ರತಿಪಾದಿಸಿದ್ದಾನೆ. ಕರದಿ ಕಪ್ಪರವಿಡಿದು ಹಿರಿದಾದ ನಾಡಿನಲ್ಲೆಲ್ಲ ಸಂಚರಿಸಿ, ಸರ್ವರೊಳೊಂದೊಂದು ನುಡಿಗಲ್ತು, ವಿದ್ಯದ ಪರ್ವತವೇ ಆಗಿ, ಕಂಡದ್ದನ್ನು ಕಂಡಂತೆಯೇ ಹೇಳಿದ್ದಾನೆ. ತನ್ನ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ ಮುಂತಾದುವುಗಳ ಸೋಗಿನಲ್ಲಿ ನಡೆಯುತ್ತಿದ್ದ ಅನ್ಯಾಯ, ಅನಾಚಾರ, ದಬ್ಬಾಳಿಕೆಗಳನ್ನು ದಿಟ್ಟತನದಿಂದ ಬಟ್ಟಬಯಲು ಮಾಡಿದ್ದಾನೆ. ಆದ್ದರಿಂದ ಈತನನ್ನು ಆ ಕಾಲದ ಅತ್ಯುತ್ತಮ ವಿಡಂಬನಕಾರನೆಂದು ಹೇಳಬಹುದು. ಅಂದಿನ ಸಮಾಜದ ರೋಗ ರುಜಿನಗಳಿಗೆ ಉತ್ತಮ ಚಿಕಿತ್ಸೆಗಳನ್ನು ಕಂಡುಹಿಡಿದು ಸಮಾಜದ ವೈದ್ಯನಾಗಿದ್ದಾನೆ. ಈತನ ವಚನಗಳು ಕೇವಲ ನೀತಿಪ್ರದವಾಗಿರದೆ ಸಾಹಿತ್ಯದ ಗುಣಗಳಿಂದಲೂ ತುಂಬಿವೆ. ಇಂತಹ ಸಾಹಿತ್ಯ ಎಲ್ಲರಿಗೂ ಇಲ್ಲ ಎಂಬುದನ್ನು ಹೀಗೆ ಹೇಳಿದ್ದಾನೆ. "ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ, ಬಲ್ಲಿದರು ಇದ್ದು ಬಲವಿಲ್ಲ, ಸಾಹಿತ್ಯವೆಲ್ಲವರಿಗಿಲ್ಲ ಸರ್ವಜ್ಞ."

ತಮಿಳಿನಲ್ಲಿ ತಿರುವಳ್ಳುವರ್ ಬರೆದಿರುವ 'ಕುರಳ್', ತೆಲುಗಿನಲ್ಲಿ ವೇಮನ ಬರೆದಿರುವ ವಚನಗಳು ಪ್ರಸಿದ್ಧವಾಗಿರುವಂತೆಯೇ ಕನ್ನಡದಲ್ಲಿ ಸರ್ವಜ್ಞನ ವಚನಗಳು ಸುಪ್ರಸಿದ್ಧವಾಗಿವೆ. ಬಹುಜನಪ್ರಿಯವಾಗಿವೆ; ದಿನನಿತ್ಯದ ಬಳಕೆಯಲ್ಲಿವೆ. ಚಿರನೂತನವಾಗಿವೆ.

---

* ಕನ್ನಡ ಸಾಹಿತ್ಯ ಚರಿತ್ರೆ : ಪುಟ ೩೪೫–೩೪೭

# ಸಂಶೋಧಕ ಎಂ. ಗೋವಿಂದಪೈ

**ಹ**ತ್ತೊಂಬತ್ತನೆಯ ಶತಮಾನದ ಅಂತ್ಯಭಾಗ ಇಪ್ಪತ್ತನೆಯ ಶತಮಾನದ ಮಧ್ಯಭಾಗದ ವರೆಗೆ ಬಾಳಿಬದುಕಿ ಕನ್ನಡಸಾಹಿತ್ಯವನ್ನು ಶ್ರೀಮಂತಗೊಳಿಸಿದ ಹಿರಿಯ ಚೇತನಗಳಲ್ಲಿ ರಾಷ್ಟ್ರಕವಿ ಎಂ. ಗೋವಿಂದಪೈ ಅವರು ಚಿರಸ್ಮರಣೀಯರು. ಅವರ ಜೀವಿತದ ಕಾಲಾವಧಿ ೧೮೮೩ ರಿಂದ ೧೯೬೩. ಎಂಬತ್ತು ವರ್ಷಗಳ ತಮ್ಮ ಜೀವಿತಾವಧಿಯಲ್ಲಿ ವಿಶಿಷ್ಟ ವಿನೂತನ ವೈವಿಧ್ಯಮಯ ಬರಹಗಳಿಂದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಗೋವಿಂದಪೈ ಅವರು ಅಮರರಾಗಿದ್ದಾರೆ. ಶ್ರೇಷ್ಠಸಂಶೋಧಕರೆಂದೂ ಬಹುಭಾಷಾವಿಶಾರದರೆಂದೂ ಖ್ಯಾತನಾಮರಾಗಿದ್ದಾರೆ. ಸಂಶೋಧನೆ, ಕವಿತೆ, ನಾಟಕ, ವಿಮರ್ಶೆ, ಇತಿಹಾಸ, ಧರ್ಮ –ಮೊದಲಾದ ಕ್ಷೇತ್ರಗಳಿಗೆ ಸಂಬಂಧಿಸಿದ ಮೌಲಿಕ ಬರಹಗಳನ್ನು ಬರೆದಿದ್ದಾರೆ, ಕೃತಿಗಳನ್ನು ರಚಿಸಿದ್ದಾರೆ.

ಅವರ ಕೃತಿಗಳ ಒಂದು ಕಿರುಪರಿಚಯ: 'ಭಕ್ತವಾಣಿ' ಎಂಬುದು ವಿವಿಧ ಧರ್ಮಗ್ರಂಥಗಳಿಂದ ಆಯ್ದು ೧೪೮ ವಚನಗಳ ಸಂಗ್ರಹ. ೨೮ ಪುಟಗಳುಳ್ಳ ಈ ಕೃತಿ ೧೯೨೮ರಲ್ಲಿ ಪ್ರಕಟವಾಗಿದೆ. 'ಗೊಮ್ಮಟ ಜಿನಸ್ತುತಿ' ವೇಣೂರಿನ ಗೊಮ್ಮಟೇಶ್ವರ ಮಹಾಮಸ್ತಕಾಭಿಷೇಕದ ಸಂದರ್ಭದಲ್ಲಿ ರಚಿಸಿದ ಪ್ರಾಸರಹಿತ ೩೫ ವೃತ್ತಗಳ ಕಿರುಕೃತಿ. ೧೯೨೮ರಲ್ಲಿ ಪ್ರಕಟವಾದ ಕೃತಿ. "ವೇಣೂರಿನ ಶಿಲಾಶಾಸನಗಳು" ಒಂದು ಇತಿಹಾಸ ಪ್ರಬಂಧ. ಇದರಲ್ಲಿ ಗೊಮ್ಮಟೇಶ್ವರಮೂರ್ತಿಗೆ ಸಂಬಂಧಿಸಿದ ಶಿಲಾಶಾಸನಗಳ ಗದ್ಯಾನುವಾದ ಮತ್ತು ಟೀಕೆ ಟಿಪ್ಪಣಿಗಳಿವೆ. ೧೯೨೮ರಲ್ಲಿ ಪ್ರಕಟವಾದ 'ಗಿಳಿವಿಂಡು' ಗೋವಿಂದಪೈ ಅವರ ಮೊದಲ ಕವನ ಸಂಕಲನ. ೪೬ ಕವನಗಳಿರುವ ಈ ಕೃತಿಯಲ್ಲಿ ಚತುರ್ದಶಪದಗಳೂ ನೀಳ್ಗವಿತೆಗಳೂ ಇವೆ. ಹೊಸವಿಚಾರಗಳಿಂದ ಕೂಡಿದ ಈ ಕವನಸಂಕಲನ ೧೯೩೦ರಲ್ಲಿ ಪ್ರಕಟಗೊಂಡಿದೆ. "ಗೊಲ್ಗೊಥಾ" ಏಸುಕ್ರಿಸ್ತನ ಕೊನೆಯ ದಿನಗಳನ್ನು ಚಿತ್ರಿಸುವ ಒಂದು ಕಥನಕಾವ್ಯ. ೧೯೩೧ರಲ್ಲಿ ಪ್ರಕಟಿತವಾದುದು. "ಪಾರ್ಶ್ವನಾಥ ತೀರ್ಥಂಕರ ಚರಿತೆ" ೩೨ ಪುಟಗಳ ಈ ಕೃತಿ ೧೯೩೩ರಲ್ಲಿ ಹೊರಬಂದಿದೆ. 'ಬಾಹುಬಲಿ ಗೊಮ್ಮಟೇಶ್ವರ ಚರಿತ್ರ'. ಕರ್ಣಾಟಕದಲ್ಲಿರುವ ಮೂರು ಗೊಮ್ಮಟಮೂರ್ತಿಗಳಿಗೆ ಸಂಬಂಧಿಸಿದುದು. ೪೩ ಪುಟಗಳಿವೆ. ೧೯೩೯ರಲ್ಲಿ ಪ್ರಕಟವಾಗಿದೆ. 'ಮೂರು ಉಪನ್ಯಾಸಗಳು' ಇದರಲ್ಲಿ ರನ್ನನ ಪರಶುರಾಮಚರಿತೆ, ಚಕ್ರೇಶ್ವರ ಚರಿತೆ, ಗದಾಯುದ್ಧದ ರಚನಾಕಾಲ, ಬಸವೇಶ್ವರನ ಕಾಲನಿರ್ಣಯ, ಕನ್ನಡ ಸಾಹಿತ್ಯದ ಪ್ರಾಚೀನತೆ ಈ ವಿಷಯಗಳನ್ನು ಕುರಿತ ಲೇಖನಗಳಿವೆ. ೧೫೪ ಪುಟಗಳಿರುವ ಈ ಕೃತಿ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಿಂದ ೧೯೪೦ರಲ್ಲಿ ಪ್ರಕಟವಾಗಿದೆ. "ಹೆಬ್ಬೆರಳು" ಇದು ಏಕಲವ್ಯನನ್ನು ಕುರಿತ ಏಕಾಂಕ ನಾಟಕ, ಪುಟ ೧೦೨, ಮುದ್ರಣ ೧೯೪೬. "ವೈಶಾಖಿ" ಇದು ಒಂದು ಖಂಡಕಾವ್ಯ. ಬುದ್ಧನ ಕಡೆಯ ದಿನಗಳನ್ನು ಚಿತ್ರಿಸಲಾಗಿದೆ. ಪುಟ ೩೨, ಮುದ್ರಣ ೧೯೪೭. "ಭಗವಾನ್ ಬುದ್ಧ" ಬುದ್ಧಜಯಂತಿಯ ಸಂದರ್ಭದಲ್ಲಿ ಮಾಡಿದ ಭಾಷಣ ೨೧ ಪುಟಗಳ ಕಿರುಕೃತಿಯಾಗಿ ೧೯೫೪ರಲ್ಲಿ ಪ್ರಕಟವಾಗಿದೆ. (ಗೋವಿಂದಪೈ ವಾಙ್ಮಯ ದರ್ಶನ, ಪು. ೧-೪)

ಕಾರಣಾಂತರಗಳಿಂದ ಬಿ.ಎ. ಪದವಿಯನ್ನೂ ಪೂರೈಸಲಾಗದಿದ್ದ ಗೋವಿಂದಪೈ ಅವರು ಕರ್ನಾಟಕದ ಹೊರಗಿನ ಮಂಜೇಶ್ವರದಲ್ಲಿ ನೆಲೆನಿಂತು ತಮ್ಮ ಇಡೀಜೀವನವನ್ನು ನಾಡುನುಡಿಗಳ ಸಂವರ್ಧನೆಗಾಗಿ ಮುಡುಪಾಗಿಟ್ಟವರು. ಸುಮಾರು ಅರುವತ್ತು ವರ್ಷಗಳ ಅವಧಿಯಲ್ಲಿ ಅವರು ಬರೆದಷ್ಟು ವೈವಿಧ್ಯಮಯವಾದ ಸಾಹಿತ್ಯವನ್ನು ಮತ್ತಾರೂ ಬರೆದಂತೆ

ಕಂಡುಬರುವುದಿಲ್ಲ. ಒಬ್ಬ ವ್ಯಕ್ತಿ ತನ್ನ ಜೀವಮಾನದ ಅವಧಿಯಲ್ಲಿ ಇಷ್ಟೊಂದು ಬರೆಯಲು ಸಾಧ್ಯವೇ ಎಂಬುದು ಊಹೆಗೂ ನಿಲುಕದ ಸಂಗತಿಯಾಗಿದೆ. ಗೋವಿಂದಪೈ ಅವರ ಎಲ್ಲ ಬರವಣಿಗೆಗಳೂ ಪ್ರಕಟವಾಗಿವೆ. ಉಡುಪಿಯ ಗೋವಿಂದಪೈ ಸಂಶೋಧನ ಸಂಸ್ಥೆಯವರು ಗೋವಿಂದಪೈ ಅವರ ಎಲ್ಲ ಬರಹಗಳನ್ನೂ 'ಗೋವಿಂದಪೈ ಸಂಶೋಧನ ಸಂಪುಟ' ಎಂಬ ಬೃಹತ್ ಗ್ರಂಥದಲ್ಲಿ ಪ್ರಕಟಿಸಿದ್ದಾರೆ. ಅಲ್ಲದೆ ಗೋವಿಂದಪೈ ವಾಙ್ಮಯದರ್ಶನ, ಗೋವಿಂದಪೈ ಸ್ಮಾರಕ ಗ್ರಂಥ. "ದೀವಿಗೆ" ಮೊದಲಾದ ಕೃತಿಗಳೂ ಹೊರಬಂದಿವೆ.

'ರಾಷ್ಟ್ರಕವಿ' ಎಂಬ ಕೀರ್ತಿಗೆ ಭಾಜನರಾಗಿರುವ ಗೋವಿಂದಪೈ ಅವರಿಗೆ ಶಾಶ್ವತವಾದ ಕೀರ್ತಿಯನ್ನು ತಂದು ಕೊಟ್ಟಿರುವುದು ಅವರ ಅತ್ಯಮೂಲ್ಯ ಸಂಶೋಧನ ಬರಹಗಳೇ ಎಂಬುದು ನನ್ನ ಖಚಿತವಾದ ಅಭಿಪ್ರಾಯವಾಗಿದೆ. ಪ್ರಸ್ತುತ ಅವರ ಸಂಶೋಧನ ಬರಹಗಳ ಒಂದು ವಿಹಂಗಮ ದರ್ಶನ ಮಾಡಿಸುವುದೇ ನನ್ನ ಉದ್ದೇಶವಾಗಿದೆ.

ಗೋವಿಂದಪೈ ಅವರು ಬಹುಶ್ರುತರು. ಹಲವಾರು ಭಾಷೆಗಳನ್ನು ಬಲ್ಲವರಾಗಿದ್ದರು. ಕನ್ನಡ ಸಾಹಿತ್ಯದ ಎಲ್ಲ ಪ್ರಭೇದಗಳನ್ನೂ ಎಲ್ಲ ಪ್ರಕಾರಗಳನ್ನೂ ತಿಳಿದವರಾಗಿದ್ದರು. ಅಷ್ಟೇ ಏಕೆ ವ್ಯಾಕರಣ, ಛಂದಸ್ಸು, ಅಲಂಕಾರ ಮುಂತಾದ ಶಾಸ್ತ್ರಪರಿಭಾಷೆಯಲ್ಲೂ ಬಲ್ಲಿದರಾಗಿದ್ದರು. ಶ್ರೀಯುತರ ಸಮಸ್ತ ಲೇಖನಗಳನ್ನು ಪರಿಶೀಲಿಸಿದವರಿಗೆ ಇವು ಮನದಟ್ಟಾಗುತ್ತವೆ.

ಗೋವಿಂದಪೈ ಅವರ ಗ್ರಂಥಭಂಡಾರದಲ್ಲಿ ಮೂವತ್ತಾರು ಭಾಷೆಗಳಿಗೆ ಸಂಬಂಧಿಸಿದ ಸುಮಾರು ಐದು ಸಹಸ್ರ ಕೃತಿಗಳಿದ್ದುವೆಂದು ಸಂಶೋಧನ ಸಂಪುಟದಲ್ಲಿ ದಾಖಲಿಸಿದ್ದಾರೆ. ಶ್ರೀಯುತರು ಕನ್ನಡ, ಕೊಂಕಣಿ, ತುಳು, ಇಂಗ್ಲಿಷ್, ಮರಾಠಿ, ಮಲಯಾಳಂ, ಸಂಸ್ಕೃತ, ಪ್ರಾಕೃತ, ಪಾಲಿ, ಅರ್ಧಮಾಗಧಿ, ಹಿಂದಿ, ಉರ್ದು, ತಮಿಳು, ತೆಲುಗು, ಒರಿಯ, ಬಂಗಾಲಿ, ಜಪಾನಿ, ಗ್ರೀಕ್, ಲ್ಯಾಟಿನ್, ಪರ್ಷಿಯನ್ -ಇವೇ ಮೊದಲಾದ ಭಾಷೆಗಳನ್ನು ಬಲ್ಲವರಾಗಿದ್ದುದಷ್ಟೇ ಅಲ್ಲದೆ ಕೆಲವು ಭಾಷೆಗಳಲ್ಲಿ ಬಲ್ಲಿದರೂ ಆಗಿದ್ದರು.

ಗೋವಿಂದಪೈ ಅವರ ಕಾವ್ಯಗಳನ್ನುಳಿದು ಇತರ ಎಲ್ಲ ಬರಹಗಳನ್ನೂ ಹತ್ತು ವರ್ಗಗಳಾಗಿ ವಿಂಗಡಿಸಲಾಗಿದೆ. ಅವುಗಳ ಸ್ಥೂಲ ಪರಿಚಯ ಇಂತಿದೆ. ಹಳಗನ್ನಡ ನಡುಗನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಐವತ್ತೈದು ಲೇಖನಗಳಿವೆ. ಹೊಸಗನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಹದಿನಾಲ್ಕು ಲೇಖನಗಳು; ತುಳುನಾಡಿನ ಇತಿಹಾಸಕ್ಕೆ ಸಂಬಂಧಿಸಿದ ಇಪ್ಪತ್ತೊಂದು ಲೇಖನಗಳು; ಕರ್ಣಾಟಕದ ಇತಿಹಾಸಕ್ಕೆ ಸಂಬಂಧಿಸಿದ ಇಪ್ಪತ್ತೆರಡು ಲೇಖನಗಳು; ಭಾರತದ ಇತಿಹಾಸಕ್ಕೆ ಸಂಬಂಧಿಸಿದ ಹದಿನೈದು ಲೇಖನಗಳು; ವಾಗರ್ಥವನ್ನು ಕುರಿತ ಆರು ಲೇಖನಗಳು; ತತ್ತ್ವಜ್ಞಾನ ಭಾಷಾಂತರಕ್ಕೆ ಸಂಬಂಧಿಸಿದ ಹದಿನೈದು ಲೇಖನಗಳು; ಮುನ್ನುಡಿಗಳು ಐವತ್ತೆರಡು; ಪುಸ್ತಕ ವಿಮರ್ಶೆಗಳು ಎಂಟು; ಸಂಕೀರ್ಣ ಐದು; ಇಂಗ್ಲಿಷ್ ಲೇಖನಗಳು ಹದಿನಾಲ್ಕು. ಈ ಒಂದೊಂದೂ ಪ್ರಕಾರದ ಲೇಖನಗಳನ್ನು ವಿದ್ವಾಂಸರು ಸಮೀಕ್ಷೆ ಮಾಡಿದ್ದಾರೆ. ಅವರ ಸಮೀಕ್ಷೆಗಳನ್ನು ನಾವು ಇಂದು ಪರಿಶೀಲಿಸಬೇಕಾಗಿದೆ.

ಹಳಗನ್ನಡ ನಡುಗನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳು ಬಹುಮಟ್ಟಿಗೆ ಕವಿಗಳ ಕಾಲದೇಶ ವರ್ತಮಾನಗಳಿಗೆ ಸಂಬಂಧಿಸಿದವುಗಳಾಗಿವೆ. ಕವಿರಾಜಮಾರ್ಗದ ನೃಪತುಂಗನಿಂದ ಹಿಡಿದು ನಂದಳಿಕೆ ಲಕ್ಷ್ಮೀನಾರಾಯಣ(ಮುದ್ದಣ) ನವರೆಗೆ ಈ ಸಂಶೋಧನೆ ಹರಡಿಕೊಂಡಿದೆ. ಪಂಪ, ಪೊನ್ನ, ರನ್ನ, ನಾಗಚಂದ್ರ, ನಾಗವರ್ಮ, ಹರಿಹರ, ರಾಘವಾಂಕ, ದುರ್ಗಸಿಂಹ, ಬ್ರಹ್ಮಶಿವ, ಬಸವೇಶ್ವರ, ಸೋಮರಾಜ, ಕುಮಾರವ್ಯಾಸ. ಶಿಶುಮಾಯಣ, ಷಡಕ್ಷರಿ, ರತ್ನಾಕರವರ್ಣಿ -ಇವರೇ ಮೊದಲಾದವರ ಇತಿವೃತ್ತಗಳೂ ಮಹತ್ವದ ಸಂಗತಿಗಳೂ ಬಿತ್ತರಗೊಂಡಿವೆ. ಈ ಎಲ್ಲ ಕವಿಗಳಿಗೆ ಸಾಂಕೇತಿಕವಾಗಿ ನಾನು ಸಂಪಾದಿಸಿದ 'ತ್ರಿಪುರದಹನ ಸಾಂಗತ್ಯದ' ಕರ್ತೃ ಶಿಶುಮಾಯಣನ ಕಾಲವಿಚಾರ ನಿರ್ಣಯವನ್ನು ಗೋವಿಂದ ಪೈಗಳು ಯಾವ ರೀತಿ ಮಾಡಿರುವರೆಂಬುದನ್ನು ನಿರೂಪಿಸುತ್ತೇನೆ.

ತ್ರಿಪುರದಹನ ಸಾಂಗತ್ಯದಲ್ಲಿ: "ಶಕವರ್ಷದ ಸಾವಿರದ ನೂಱಱೊಳು । ತ್ಸಕಲವಾದಾಱುವತ್ಸರದ ॥ ಪ್ರಕಟಿತ ಪುತ್ರವರ್ಷದ ಮಾಘಶುದ್ಧದಿ । ನಕಳಂಕ ಪಾಡ್ಯದೊಳಾಯ್ತು" ಎಂಬ ಕಾಲಸೂಚಿ ಪದ್ಯವಿದೆ. ಕರ್ಣಾಟಕ ಕವಿಚರಿತಕಾರರು ಈ ಪದ್ಯವನ್ನು ಉದ್ಧರಿಸಿ "ಪುತ್ರವರ್ಷವೆಂದರೆ ನಂದನವರ್ಷವೆಂದು ತೋರುತ್ತದೆ. ಆದರೆ ೧೧೦೬ನೆಯ ವರ್ಷವು ಕ್ರೋಧಿಯಾಗುತ್ತದೆ. ಉತ್ಸಕಲ ಎಂಬ ಪದಕ್ಕೆ ವಿಶೇಷಾರ್ಥವೇನಾದರೂ ಇರಬಹುದೋ ಏನೋ ತಿಳಿಯದು. ಶಕ

೧೧೦೦ ವರ್ಷಗಳಿಂದ ಮೇಲೆ ಪ್ರಭವಾದಿ ವತ್ಸರಗಳಲ್ಲಿ ಮಿಕ್ಕ ಕೊನೆಯ ೬ ವರ್ಷಗಳಲ್ಲಿಯ ನಂದನ ಎಂದು ಅರ್ಥಮಾಡಿದರೆ ಶಕ ೧೧೫೪ (೧೨೩೨) ಆಗುತ್ತದೆ. ಕವಿಯ ಆಶಯವೂ ಇದೇ ಆಗಿರಬಹುದೋ ಏನೋ ತಿಳಿಯದು. ಈತನು ಜನ್ನವನ್ನು (೧೨೩೦) ಸ್ತುತಿಸುವುದರಿಂದ ಸ್ವಲ್ಪ ಹೆಚ್ಚು ಕಡಿಮೆ ಅವನ ಸಮಕಾಲದವನಾಗಿದ್ದಿರಬಹುದು" ಎಂದಿದ್ದಾರೆ. (ಕರ್ನಾಟಕ ಕವಿಚರಿತೆ, ಸಂಪುಟ–೨, ಪು. ೪೧೪–೪೧೫). ಗೋವಿಂದಪೈಗಳು "ಶಿಶುಮಾಯಣ ಕವಿಯ ಕಾಲವಿಚಾರ" ಎಂಬ ಸುದೀರ್ಘವಾದ ಲೇಖನದಲ್ಲಿ: "ತ್ರಿಪುರದಹನ ಮತ್ತು ಅಂಜನಾಚರಿತ್ರೆಗಳೆಂಬ ಸಾಂಗತ್ಯಬದ್ಧವಾದ ಕಾವ್ಯಗಳನ್ನು ರಚಿಸಿದ ಶಿಶುಮಾಯಣನೆಂಬ ಜೈನಕವಿಯ ಕಾಲವನ್ನು ಕಂಡುಹಿಡಿಯುವ ಬಗ್ಗೆ ಆತನ ತ್ರಿಪುರದಹನದಲ್ಲಿಯ ಒಂದು ಸಾಂಗತ್ಯವಲ್ಲದೆ ಬೇರೆ ಆಧಾರ ತೋರುವುದಿಲ್ಲ. ನನಗೆ ತಿಳಿದಿರುವ ಮಟ್ಟಿಗೆ ಮಂಗಳೂರಿನ ಸಹಕಾರಿ(XI, ೭–೮)ಯಲ್ಲಿ ಆ ತ್ರಿಪುರದಹನವನ್ನು ಪ್ರಕಟಿಸುವವರೆಗೆ ಆ ಕಾವ್ಯವೆಲ್ಲಿಯೂ ಆ ಮುಂಚೆ ಪ್ರಕಟವಾಗಿರಲಿಲ್ಲ. 'ಅಂಜನಾ ಚರಿತ್ರೆ' ಇನ್ನೂ ಪ್ರಕಟವಾಗಿಲ್ಲವೆಂದು ಕಾಣುತ್ತದೆ. ಕವಿಚರಿತೆಕಾರರು ಕಂಡಿರುವ ತ್ರಿಪುರದಹನದ ಹಸ್ತಪ್ರತಿಯಲ್ಲಿ ಆ ಪದ್ಯದ ಪಾಠ ಹೀಗಿದೆ:

> ಶಕವರ್ಷದ ಸಾವಿರದ ನೂರರೊಳು । ತ್ಸಕಲವಾದಾರು ವತ್ಸರದ
> ಪ್ರಕಟಿತ ಪುತ್ರವರ್ಷದ ಮಾಘಶುದ್ಧದಿ । ನಕಳಂಕ ಪಾಡ್ಯದೊಳಾಯ್ತು

ನಾನು ಕೆಲವು ತಿಂಗಳ ಹಿಂದೆ ಮದ್ರಾಸಿನ ಪ್ರಾಚ್ಯಹಸ್ತಪ್ರತಿಗಳ ಭಂಡಾರ (Oriental Ms. Library)ದ ಕನ್ನಡ ಶಾಖೆಯಲ್ಲಿರುವ ತ್ರಿಪುರದಹನದ ಕಾಗದದ ಪುಸ್ತಕದ ಹಸ್ತಪ್ರತಿಯಲ್ಲಿ (ನಂ.೫೨೨) ಕಂಡ ಅದೇ ಪದ್ಯದ ಪಾಠವು ಹೆಚ್ಚು ಕಡಿಮೆ ಹಾಗೆಯೇ ಇದೆ. x x x ಕವಿಚರಿತೆಕಾರರು ಎಂದಿರುವಂತೆ ಪುತ್ರವರ್ಷವೆಂದರೆ ನಂದನ ಸಂವತ್ಸರವೆಂಬಲ್ಲಿ ಸಂಶಯವಿಲ್ಲ. ಆದರೆ ಅವರು 'ಉತ್ಸಕಲ' ಎಂಬ ಪದಕ್ಕೆ ವಿಶೇಷಾರ್ಥವೇನಾದರೂ ಇರಬಹುದೋ ಏನೋ ತಿಳಿಯದು (ಪು. ೩೫೦) ಎಂದು ಶಂಕಿಸಿರುವರಾದರೂ ಯಾವ ಕಾರಣದಿಂದೇನೋ ಆ ನಂದನ ಸಂವತ್ಸರವು ಶಾ.ಶಕ ೧೧೫೪ (ಕ್ರಿ.ಶ. ೧೨೩೨–೩೩) ಎಂದು ಊಹಿಸಿಕೊಂಡು ಶಿಶುಮಾಯಣನಿಗೆ ಆ ಕಾಲವನ್ನು ಗೊತ್ತು ಹಚ್ಚಿರುವರು. x x x ಕನ್ನಡ ಸಹಕಾರಿಯಲ್ಲಿ ಪ್ರಕಟಿಸಿದ (ಮೂಡಬಿದರೆಯ ಜೈನಸಾಹಿತ್ಯ ಭಂಡಾರದಿಂದ ತರಿಸಿಕೊಂಡ ಓಲೆಗರಿಯ ಮೂಲಪ್ರತಿಯ ಆಧಾರದಿಂದ ಪ್ರಕಟಿತವಾದುದೆಂದು ಕೇಳಬರುವ) ತ್ರಿಪುರದಹನದಲ್ಲಿ ಈ ಮೇಲೆ ಕೊಟ್ಟಿರುವ ಆ ಸಾಂಗತ್ಯಕ್ಕೆ ಇದೊಂದು ಬೇರೆಯ ಪಾಠವಿದೆ:

> ಶಕವರ್ಷ(ದ) ಸಾವಿರದ ನಾನೂರರೊ । ಳ್ವಿಕಲವಾದಾರುವತ್ಸರದ
> ಪ್ರಕಟಿತ ಪುತ್ರವರ್ಷ(ದ) ಮಾಘಶುದ್ಧದಿ । ಯಕಳಂಕಪಾಡ್ಯದೊಳಾಯ್ತು (೨೮೬)

ಕವಿಚರಿತೆಕಾರರು ಕಂಡ ಪಾಠದಲ್ಲಿ 'ಸಾವಿರದ ನೂರು' ಮತ್ತು 'ಉತ್ಸಕಲ' ಎಂದಿದೆ. ಸಹಕಾರಿಯ ಪಾಠದಲ್ಲಿ 'ಸಾವಿರದ ನಾನೂರು' ಮತ್ತು 'ವಿಕಲ' ಎಂದಿದೆ. ಹೀಗೆ ಇವೆರಡು ಪಾಠಗಳಲ್ಲಿ ಮುನ್ನೂರು ವರ್ಷಗಳ ಅಂತರವಷ್ಟೇ ಅಲ್ಲ. ಮೊದಲನೆಯದರಲ್ಲಿರುವ ಯಾವ ಅರ್ಥಕ್ಕೂ ಸಲ್ಲದ, ಅರ್ಥಕ್ಕೆ ಅಸಾಧ್ಯವೇ ಎನ್ನಬಹುದಾದ ಆ 'ಉತ್ಸಕಲ' ಎಂಬ ಪದಕ್ಕೆ ನೇರಾಗಿ ಅರ್ಥವಾಗತಕ್ಕ 'ವಿಕಲ' ಎಂಬ ಪದವೂ ಇದೆ. ಆದರೆ ಇವೆರಡರಲ್ಲಿಯೂ ಯಾವ ವಾರದಂದು ಆ ಮಾಘಶುದ್ಧ ಪಾಡ್ಯ ಬಂದಿತೆಂದು ಹೇಳಿಲ್ಲವೆಂದೇ ರಗಳೆಗೆ ಕಾರಣ. ವಾರವನ್ನು ಹೇಳಿದ್ದರೆ ಇವಲ್ಲಿ ಯಾವ ಪಾಠವೂ ಶುದ್ಧ ಯಾವುದು ಅಶುದ್ಧವೆಂದು ಬಹುಶಃ ಸಾಕಷ್ಟು ಸುಲಭವಾಗಿ ನಿರ್ಧರಿಸಲಾಗುತ್ತಿತ್ತೇನೋ. ಹೇಗೂ ಇರಲಿ, ಈಗ ಇತರ ಸಾಧನಗಳಿಂದಾದರೂ ಇವಲ್ಲಿ ಯಾವ ಪಾಠವು ಸರಿಯಾಗಿರಬೇಕು? ಮತ್ತು ಏಕೆ? ಎಂಬುದನ್ನು ಖಂಡಿತವಾಗಿ ನಿರ್ಧರಿಸಲಾದರೆ ಶಿಶುಮಾಯಣನ ಕಾಲವನ್ನು ಸರಿಯಾಗಿ ಗೊತ್ತುಹಚ್ಚಿದಂತಾಗುತ್ತದೆ ಎಂದು ಬೇರೆ ಹೇಳಬೇಕೆಂದಿಲ್ಲ.

ಇವೆರಡು ಪಾಠಗಳಲ್ಲಿ ಯಾವುದು ಸರಿ ಎಂಬುದನ್ನು ನಿರ್ಧರಿಸುವ ಮುಂಚೆ ಆ 'ಉತ್ಸಕಲ' ಎಂಬ ಪದಕ್ಕೆ ಅರ್ಥವಾಗುವುದಿಲ್ಲ ಎಂದು ಕವಿಚರಿತೆಕಾರರೂ ಡಾ. ವೆಂಕಟಸುಬ್ಬಯ್ಯನವರೂ ಮುಕ್ತಕಂಠವಾಗಿ ಹೇಳಿರುತ್ತಾರೆಂಬುದನ್ನು ಚೆನ್ನಾಗಿ ಗಮನಿಸಬೇಕು. ಆ ಪದಕ್ಕೆ ಅರ್ಥವಾಗುವುದು ಮಾತ್ರವಲ್ಲ. ಅದಕ್ಕೆ ಅರ್ಥವೇ ಇಲ್ಲ. ಅದೊಂದು ಅಪಪಾಠವೆಂದು ಧೈರ್ಯವಾಗಿ ಹೇಳಬಹುದು. ಅದು ಯಾವನೊಬ್ಬ ಸಂಪ್ರತಿಕಾರನಿಂದ ಆದ ಕೆಯ್ತಪ್ಪು ಎಂಬುದರಲ್ಲಿ ಸಂಶಯವಿಲ್ಲ.

ಆದರೂ ಆ 'ಉತ್ಸಕಲ' ಎಂಬ ಪದವು ಸರಿಯಾದ ಅರ್ಥವುಳ್ಳ ಪದದ ಬದಲಾಗಿ ಬರೆದು ಹೋದ ಕೆಯ್ತಪ್ಪು ಎಂದಾದರೆ ಅಂಥ ಸಾರ್ಥವಾದ ಸರಿಯಾದ ಆ ಮೂಲಪದಕ್ಕೆ 'ಕೂಡಿಸಿದ-ಕೂಡಿಸಲ್ಪಟ್ಟ' ಅಥವಾ 'ಕಳೆದ-ಕಳೆಯಲ್ಪಟ್ಟ' ಎಂದು ತಾನೆ ಅರ್ಥವಾಗಬೇಕಲ್ಲದೆ, ಬೇರಾವ ಅರ್ಥವಾದರೂ ಆಗಲಾರದಷ್ಟೆ. ಆದರೆ ಈ 'ಉತ್ಸಕಲ' ಎಂಬ ಪದವಿರುವ ಪಾಠದಲ್ಲಿ 'ಸಾವಿರದ ನೂರರೊಳು' ಎಂಬ ಸಪ್ತಮೀ ವಿಭಕ್ತಿಯೊಂದಿಗೆ ಆ ಪದವು ಜೋಡಿಸಲ್ಪಟ್ಟಿರುವುದರಿಂದ ಆ ಪದಕ್ಕೆ ಆ ಸಂಖ್ಯೆಯಲ್ಲಿ 'ಕಳೆದ-ಕಳೆಯಲ್ಪಟ್ಟ' ಎಂದು ತಾನೆ ಅರ್ಥವಾಗಬೇಕಲ್ಲದೆ 'ಕೂಡಿಸಿದ-ಕೂಡಿಸಲ್ಪಟ್ಟ' ಎಂದು ಅರ್ಥವಾಗಲಾರದು; ಏಕೆಂದರೆ ಕೂಡಿಸಿದ ಎಂಬ ಅರ್ಥವುಳ್ಳ ಪದದೊಂದಿಗೆ ಚತುರ್ಥಿ ವಿಭಕ್ತಿಯ ಪ್ರಯೋಗವು ಸರಿಯೆನಿಸದು. ಹಾಗಾದರೆ 'ಉತ್ಸಕಲ' ಎಂಬ ಪದಕ್ಕೆ 'ಕಳೆದ-ಕಳೆಯಲ್ಪಟ್ಟ' ಎಂಬ ಅರ್ಥವಿದೆಯೇ? ಅಥವಾ ಉತ್ ಎಂಬ ಆಧಿಕ್ಯಾರ್ಥವುಳ್ಳ ಉಪಸರ್ಗವಿರುವ ಪದವು ನ್ಯೂನಾರ್ಥವನ್ನು ಹೇಗೆ ತಾನೆ ಸೂಚಿಸೀತು? x x x.

ಹೀಗೆ ಈ ಮೇಲೆ ಕೊಟ್ಟಿರುವ ಅವೆರಡು ಪಾಠಗಳಲ್ಲಿ ಒಂದರಲ್ಲಿ ಶಕವರ್ಷ ೧೧೦೦ರಲ್ಲಿ ೬ ವರ್ಷಗಳು 'ಉತ್ಸಕಲ'ವಾದರೆ ನಂದನ ಸಂವತ್ಸರ (ಅಂದರೆ ನಂದನ ಸಂವತ್ಸರದ ಶಕಸಂಖ್ಯೆ) ಎಂದೂ ಇನ್ನೊಂದರಲ್ಲಿ ಶಕವರ್ಷ ೧೪೦೦ರಲ್ಲಿ ೬ ವರ್ಷಗಳು 'ವಿಕಲ'ವಾದರೆ ನಂದನ ಸಂವತ್ಸರವೆಂದೂ ತಿಳಿಯುತ್ತದೆ. ಎರಡನೆಯ ಪಾಠದಲ್ಲಿರುವ 'ವಿಕಲ' ಎಂಬುದಕ್ಕೆ ಕಳೆಯಲ್ಪಟ್ಟ (ಅಥವಾ ಕಡಿಮೆಮಾಡಲ್ಪಟ್ಟ) ಎಂದು ನಿಶ್ಚಿತಾರ್ಥವಿರುವುದರಿಂದ ಹಾಗೆ ಮಾಡಿದರೆ, ಶಕವರ್ಷ ೧೪೬೦-೬=ಶಕ. ೧೩೯೪ ಕ್ರಿ.ಶ. ೧೪೭೨ ಇದು ನಂದನ ಸಂವತ್ಸರ ತಾನೆ, ಮೊದಲನೆಯ ಪಾಠದಲ್ಲಿಯ 'ಉತ್ಸಕಲ' ಎಂಬುದಕ್ಕೆ ಅರ್ಥವಿದೆಯೇ ಎಂದಾದರೆ, ಅದೂ 'ಕಳೆದ-ಕಳೆಯಲ್ಪಟ್ಟ' ಎಂದು ತಾನೇ ಆಗಿರಬೇಕಲ್ಲದೆ ಅನ್ಯಥಾ ಆಗಿರಲಾರದೆಂದು ಈ ಮೇಲೆ ನಿರ್ಣಯಿಸಿದೆಯಾದರೂ ಅದರ ಅರ್ಥವು ಕೂಡಿಸುವುದೆಂದೂ ಕಳೆಯುವುದೆಂದೂ ಇನ್ನೂ ನಿಷ್ಕೃಷ್ಟವಿಲ್ಲ ಎಂದು ಇಟ್ಟುಕೊಂಡು ಶಕವರ್ಷ ೧೧೦೦ಕ್ಕೆ ೬ ವರ್ಷಗಳನ್ನು ಕೂಡಿಸಿಯೂ ನೋಡೋಣ. ಶಕವರ್ಷ ೧೧೦೦ ರಿಂದ ೬ ವರ್ಷಗಳನ್ನು ಕಳೆದೂ ನೋಡೋಣ. ಹೇಗೆ ಮಾಡಿದರೆ ನಂದನ ಸಂವತ್ಸರದ ಶಕಸಂಖ್ಯೆ ಹುಟ್ಟುತ್ತದೆಂದು ನೋಡೋಣ-

೧. ಶಕ ೧೧೦೦ + ೬ = ಶಕ ೧೧೦೬ = ಕ್ರಿ.ಶ. ೧೧೮೪ ಕ್ರೋಧಿಸಂವತ್ಸರದ

೨. ಶಕ ೧೧೦೦ - ೬ = ಶಕ ೧೦೯೪ = ಕ್ರಿ.ಶ. ೧೧೭೨ ನಂದನಸಂವತ್ಸರ

x x x 'ತ್ರಿಪುರದಹನ'ವು ಶಾ.ಶ. ೧೦೯೪ (ಕ್ರಿ.ಶ. ೧೧೭೨) ಶಾ.ಶ. ೧೩೯೪ (ಕ್ರಿ.ಶ. ೧೪೭೨) ಮತ್ತು ಶಾ.ಶ. ೧೬೯೪ (ಕ್ರಿ.ಶ. ೧೭೭೨) ಈ ಮೂರರಲ್ಲಿ ಯಾವುದೊಂದು ವರ್ಷದಲ್ಲಿಯೇ ವಿನಾ ಬೇರಾವ ವರ್ಷದಲ್ಲಿಯೂ ರಚಿತವಾಗಿರಲಾರದು ಎಂಬುದಿಷ್ಟು ನಿಶ್ಚಿತವಿರುವಾಗ ಅವಲ್ಲಿ ಉಳಿದ ಶಾ.ಶ. ೧೩೯೪ (ಕ್ರಿ.ಶ. ೧೪೭೨)ನೆಯ ನಂದನ ವತ್ಸರದಲ್ಲಿ ತಾನೆ ಅದು ರಚಿತವಾಗಿರಬೇಕೆಂದು ಸ್ವಯಂಸಿದ್ಧವಾಗುತ್ತದೆ. ಆ ಕ್ರಿ.ಶ. ೧೪೭೨ನೆಯ ನಂದನ ಸಂವತ್ಸರದಲ್ಲಿ ಮಾಘಶುದ್ಧ ಪಾಡ್ಯವು ದಶಂಬರ ೩೧ನೆಯ ತಾರೀಕು ಗುರುವಾರದಂದಾಗಿತ್ತು. ಅಂದು ತಾನೆ ಶಿಶುಮಾಯಣನು ತನ್ನ 'ತ್ರಿಪುರದಹನ'ವನ್ನು ಬರೆದು ಮುಗಿಸಿದನೆಂಬಲ್ಲಿ ಸಂದೇಹವಿಲ್ಲ" ಎಂದು ನಿರ್ಣಯಿಸಿರುವರು.

ಹಳಗನ್ನಡ ನಡುಗನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಗೋವಿಂದಪೈಗಳು ಬರೆದಿರುವ ಐವತ್ತೈದು ಲೇಖನಗಳ ಸಮೀಕ್ಷಕರಾದ ಡಾ. ಎಂ.ಎಂ. ಕಲಬುರ್ಗಿ ಅವರು ಹೇಳಿರುವ ಮಾತುಗಳು ಉಲ್ಲೇಖಾರ್ಹವಾಗಿವೆ:

ಈ ಬಗೆಯ ಪ್ರಬಂಧ ಚೌಕಟ್ಟಿನಲ್ಲಿ ಸಂಯೋಜಕ ಪ್ರತಿಭೆ ಕೆಲಸ ಮಾಡುವ ರೀತಿ ಬೆರಗುಹುಟ್ಟಿಸುತ್ತದೆ. ಸಮಸ್ಯೆಯನ್ನು ಎಲ್ಲ ಮಗ್ಗಲುಗಳಿಂದ ಪರಿಶೀಲಿಸುವ, ಪ್ರಶ್ನೆ-ಉಪಪ್ರಶ್ನೆ, ನೇರಪ್ರಶ್ನೆ-ಪೂರಕ ಪ್ರಶ್ನೆಗಳಿಂದ ಅದನ್ನು ತರ್ಕಬದ್ಧವಾಗಿ ಶಸ್ತ್ರಕ್ರಿಯೆಗೆ ಒಳಪಡಿಸುವ, ಊಹೆಯಿಂದ ಕೊರತೆಯನ್ನು ತುಂಬಿಕೊಳ್ಳುವ, ಫಲಿತಾಂಶವನ್ನು ಅಲ್ಲಲ್ಲಿಯೇ ಹೊರಹಾಕುವ ಕೊನೆಗೆ ಅದೆಲ್ಲವನ್ನೂ ಏಕಸೂತ್ರದಲ್ಲಿ ಬಂಧಿಸುವ ಚಟುವಟಿಕೆಗಳ ಬರವಣಿಗೆ ಚಲನಕ್ರಿಯೆಯಲ್ಲಿರುವ ಒಂದು ದೊಡ್ಡ ಯಂತ್ರವನ್ನು ನೆನಪಿಗೆ ತರುತ್ತದೆ. ಇದು ಕಾರಣವಾಗಿ ಕೆಲವೊಮ್ಮೆ ನಡೆದ ಫಲಿತಾಂಶ ವಿಫಲವೆನಿಸುತ್ತಿದ್ದರೂ- ದುಡಿದ ರೀತಿ ಅನುಕರಣೀಯವೆನಿಸುತ್ತದೆ. ನೀಡಿದ ನಿರ್ಣಯದ ತಪ್ಪನ್ನು ಅನ್ಯರು ಎತ್ತಿ ತೋರಿಸಿದಾಗ, ಏಕೆ ತಮಗೇ ಗೊತ್ತಾದಾಗ ಪೈಗಳು ಕೂಸಿನಂತೆ ನಿರ್ವಿಕಾರವಾಗಿ ಒಪ್ಪಿಕೊಳ್ಳುವ ರೀತಿ, ಆಗ ಬಳಸುವ ಭಾಷೆ ನಾವು

ತಲೆದೂಗುವಂತೆ ಮಾಡುತ್ತವೆ. ಈ ಎಲ್ಲ ಗುಣಾಧಿಕ್ಯಗಳ ನಡುವೆಯೂ ಒಂದಿಷ್ಟು ದೌರ್ಬಲ್ಯಗಳೂ ಕಾಣುತ್ತವೆ. ಅವು: ಕೆಲವೊಮ್ಮೆ ಊಹೆ ಅತಿಯಾಗುತ್ತದೆ; ನವೋದಯ ಕಾಲದ ವೈಭವೀಕರಣ ಇಣುಕುತ್ತದೆ. ಲೇಖನವನ್ನು ಅನವಶ್ಯ ಬೆಳೆಸುತ್ತಾರೆ. ಬರವಣಿಗೆಯ ಶೈಲಿ ಜಟಿಲವೆನಿಸುತ್ತದೆ –ಎತ್ತಿಹೇಳಬೇಕಾದ ದೋಷಗಳಿವು.

ಈ ಗುಣದೋಷಗಳ ಮನೋಮಾರ್ಗದಲ್ಲಿ ಹಾಯ್ದುಬಂದ ಪೈಗಳ ಹಳಗನ್ನಡ-ನಡುಗನ್ನಡ ಸಂಶೋಧನೆಗಳಲ್ಲಿ ಬಹುಳಷ್ಟು ಇಂದಿಗೂ ಮೌಲಿಕ ಬರಹಗಳಾಗಿದ್ದು ಅವುಗಳಿಗೆ ಶಾಶ್ವತಬೆಲೆಯಿದೆ. ಆದರೆ ಸುದೀರ್ಘತೆ ಜಟಿಲತೆ ಕಾರಣವಾಗಿ ಅಭ್ಯಾಸಿ ಅವುಗಳನ್ನು ಪೂರ್ಣ ಓದುವಲ್ಲಿ ದಣಿಯುತ್ತಾನೆ; ಸಂಯಮ ಕಳೆದುಕೊಳ್ಳುತ್ತಾನೆ. ವ್ಯಾಪಕ ವ್ಯುತ್ಪತ್ತಿ ಇಲ್ಲದ ಅಭ್ಯಾಸಿಗಳಿಗಂತೂ ವಿಷಯ ತೆಕ್ಕೆಗೆ ಸಿಗುವುದೇ ಇಲ್ಲ. ಹೀಗಾಗಿ ಪೈ ಫಲಿತಾಂಶಗಳು ಇನ್ನು ಮುಂದೆ ಓದುಗರಿಂದ ದೂರ ಉಳಿಯುವ ಭಯವಿದೆ. ಈ ಅಪಾಯವನ್ನು ತಪ್ಪಿಸುವ ಸಲುವಾಗಿ ಸರಳ ಭಾಷೆಯಲ್ಲಿ ಒಂದು ಪುಟ ವ್ಯಾಪ್ತಿಯಲ್ಲಿ ಪ್ರತಿಯೊಂದು ಪ್ರಬಂಧದ ಸಾರಲೇಖನವನ್ನು ಬರೆದು ಪೈ ಸಂಶೋಧನ ವಾಚಿಕೆಯನ್ನು ಸಿದ್ಧಪಡಿಸುವುದು ಇಂದು ಅವಶ್ಯವಿದೆ." (ಗೋವಿಂದ ಪೈ ಸಂಶೋಧನ ಸಂಪುಟ. ಪು. ೪೭೩–೪೮೧)

ಹೊಸಗನ್ನಡ ಸಾಹಿತ್ಯ ವಿಭಾಗದಲ್ಲಿ ಹದಿನಾಲ್ಕು ಲೇಖನಗಳಿವೆ. ಗೋವಿಂದ ಪೈಗಳ ಆತ್ಮಕಥನ ಮತ್ತು ಕನ್ನಡ ಸಾಹಿತ್ಯ ಸಮ್ಮೇಳನ–ಅಧ್ಯಕ್ಷ ಭಾಷಣ ತುಂಬ ಸ್ವಾರಸ್ಯಕರವಾಗಿವೆ. ಸಮಕಾಲೀನ ವ್ಯಕ್ತಿಗಳ ಚಿತ್ರಣದಲ್ಲಿ ಕಿಟೆಲ್, ಬೇಂದ್ರೆ, ಬಿಎಂಶ್ರೀ, ಎಂಆರ್‌ಶ್ರೀ, ಧರ್ಮಸ್ಥಳದ ಮಂಜಯ್ಯ ಹೆಗ್ಗಡೆ, ಎಂ.ಎನ್. ಕಾಮತ್. ಪಂಜೆ ಮಂಗೇಶರಾವ್ –ಇವರೆಲ್ಲ ಸೇರಿಹೋಗಿದ್ದಾರೆ. ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ ಗ್ರೀಕ್ ಭಾಷೆಯೊಂದರ ಪ್ರಹಸನದಲ್ಲಿಯ ಹಲವು ಕನ್ನಡ ಶಬ್ದಗಳನ್ನು ಗುರುತಿಸಿರುವುದೇ ಅಲ್ಲದೆ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ಕನ್ನಡ ಕೋಶರಚನೆಯ ಬಗೆಗೆ ಅಪಾರ ಕಾಳಜಿಯನ್ನು ವ್ಯಕ್ತಪಡಿಸಲಾಗಿದೆ.

ಗೋವಿಂದ ಪೈಗಳ ಆತ್ಮಕಥನದ ಎರಡು ಸ್ವಾರಸ್ಯಕರವಾದ ಪ್ರಸಂಗಗಳನ್ನು ಉಲ್ಲೇಖಿಸುವುದು ಉತ್ತಮವೆಂದು ನಾನು ಭಾವಿಸಿದ್ದೇನೆ. ಅವು ಇಂತಿವೆ: "ಒಮ್ಮೆ ನಮ್ಮಲ್ಲಿ ಸೋದರರೊಳಗೆ ಜಗಳ ಹತ್ತಿದಾಗ ನನ್ನಲ್ಲಿ ಸಿಟ್ಟಿಗೆದ್ದ ನನ್ನ ತಮ್ಮಂದಿರು ನಾನು ಕವನಿಸುತ್ತೇನೆಂದು ನಮ್ಮ ತಾಯಿಯೊಂದಿಗೆ ದೂರಿತ್ತರು. ನಮ್ಮ ತಾಯಿ ತೀರ ಹಳಬಳೆಂಬ ನೇಮವಂತೆ. ತುಳುನಾಡಿನ ಸರ್ವಶ್ರೇಷ್ಠ ಯಕ್ಷಗಾನ ಕವಿಯಾದ ಮೂಲ್ಕಿಯ ವಾಸುದೇವಪ್ರಭು ಎಂಬವರು 'ಬಿಲ್ಲಹಬ್ಬ'ವನ್ನು ರಚಿಸುತ್ತಲೇ ಅವರಿಗೆ ಹುಚ್ಚು ಹಿಡಿಯಿತು. ಅನಂತರ 'ಸಮುದ್ರಮಥನ'ವನ್ನು ರಚಿಸಿದ ಮೇಲೆ ಅವರ ಹುಚ್ಚು ಕಳೆಯಿತು, ಅತಿ ಎಳೆ ಕವನಿಸಿದರೆ ಹುಚ್ಚು ಹತ್ತುತ್ತದೆಂದು ಮನಸಾರೆ ನಂಬಿದ್ದ ನಮ್ಮ ತಾಯಿ ಅದನ್ನು ಕೇಳುತ್ತಲೇ ನನ್ನಲ್ಲಿ ರೇಗಿ ಕವನಿಸುವ ಹುಚ್ಚನ್ನು ಬಿಡಿಸಲೆಂದು ನನ್ನನ್ನು ದಂಡಿಸಿದರು. ಅಂದಿನಿಂದ ಕೆಲಕಾಲ ಮನೆಯಲ್ಲಿ ಕವನಿಸಲಾರದೆ, ನಿದ್ದೆ ಬಂದರೆ ಗದ್ದೆಯಲ್ಲಿ ಮಲಗಬಹುದೆಂದು, ಮರಮರಕ್ಕೆ ತೊಟ್ಟಿಲು ಕಟ್ಟುತ್ತ ಹೋಗುತ್ತಿರುವ ಕಿಡಿಕೆಯಂತೆ ನಡೆದಾಡುವಾಗ ಬೀದಿಯಲ್ಲೂ ಬಿಡುವಾದಾಗ ಸಾಲೆಯಲ್ಲೂ ಕವನಿಸುತ್ತಿದ್ದೆ. ಹೀಗೆಯೇ ೧೮೯೮ರ ವರೆಗೆ ನಡೆಯಿತು." (ಆತ್ಮಕಥನ, ಪು. ೪೪೮, ಗೋವಿಂದ ಪೈ ಸಂಶೋಧನ ಸಂಪುಟ)

ಗೋವಿಂದ ಪೈಗಳು ಪ್ರಾಸಸಹಿತವಾಗಿಯೂ ಪ್ರಾಸರಹಿತವಾಗಿಯೂ ಕವಿತೆಗಳನ್ನು ಬರೆದಿದ್ದಾರೆ. ಪ್ರಾಸರಹಿತವಾಗಿ ಕವಿತೆ ಬರೆದಾಗ ಬಂದ ಪ್ರತಿಕ್ರಿಯೆಯನ್ನು ಅವರ ಮಾತುಗಳಲ್ಲೇ ಕೇಳಬೇಕು. 'ಹೊಲೆಯನು ಯಾರು' ಎಂಬ ಕವಿತೆಯನ್ನು ಪ್ರಾಸವಿಲ್ಲದೆ ಬರೆದು ಅದನ್ನೂ 'ಸ್ವದೇಶಾಭಿಮಾನಿ'ಯಲ್ಲಿ ಪ್ರಕಟಿಸಿದೆ. ಅದು ಹೊರಬೀಳುತ್ತಲೇ ಕನ್ನಡ ಕಾವ್ಯ ಮಾರ್ಗದಲ್ಲಿ ಹುಲಿ! ಹುಲಿ! ಎಂದು ನನ್ನ ಪ್ರಾಸತ್ಯಾಗವನ್ನು ಬಿರುಸಾಗಿ ಖಂಡಿಸಿ ಆ ಪತ್ರಿಕೆಯಲ್ಲಿ ಪತ್ರವ್ಯವಹಾರದ ಚಳವಳಿ ಎದ್ದಿತು. ಅದಕ್ಕೆ ಪ್ರತ್ಯುತ್ತರವಾಗಿ ಆಂಗ್ಲ ಸಾಹಿತ್ಯದಲ್ಲಿ ತಮ್ಮಂದಿನವರೆಗೆ ವಿವಿಚಾಲ್ಯವಾಗಿದ್ದ ಅಂತ್ಯಪ್ರಾಸವನ್ನು (Rhyme) ಮೊತ್ತಮೊದಲಲ್ಲಿ ಸರ್ರೆ (Surrey ಕ್ರಿ.ಶ. ೧೫೧೬–೪೭) ಮತ್ತು Wyatt (೧೫೦೩–೪೪) ಎಂಬುವರು ತೀರ ತೊರೆದು, ಕವಿತೆಯನ್ನು ಉಚ್ಚೃಂಖಲಿಸಿ ಪ್ರಾಸರಹಿತವಾಗಿ ಬರೆಯಲಾರಂಭಿಸಿದರು. ಅನಂತರ ಅದೇ ಜಾಡುಹಿಡಿದು ಶೇಕ್ಸ್‌ಪಿಯರನು (Shakespeare ೧೫೬೪–೧೬೧೬) ತನ್ನ ನಾಟಕಗಳನ್ನೂ ಮಿಲ್ಟನನು (Milton, ೧೬೦೮–೭೪) ತನ್ನ ಕಾವ್ಯಗಳನ್ನು ಬರೆದರು. ಅಂದಿನಿಂದ ಇಂದಿಗೂ ಅಲ್ಲಿ ಇದೇ ಕ್ರಮ ರೂಢಿಯಲ್ಲಿದೆ ಮಾತ್ರವಲ್ಲ, ಕನ್ನಡಕ್ಕೆ

ಪ್ರಾಸವೇನೂ ವೇದವಾಕ್ಯವೂ ಅಲ್ಲ, ಶಾಶ್ವತವೂ ಅಲ್ಲ. ಅದನ್ನು ಬೇಕಾದಂತೆ ಬೇಕಾದಾಗ ಬಿಟ್ಟುಬಿಡಬಹುದು. ಅತಏವ ಕಾಲಕ್ಕೆ ತಕ್ಕಂತೆ ರಚನೆಯನ್ನೇ ಅಲ್ಲ. ಛಂದಸ್ಸನ್ನೂ ವ್ಯಾಕರಣವನ್ನೂ ಕೂಡ ತನಗೆ ಬೇಕಾದಂತೆ ಮಾರ್ಪಡಿಸಿಯೂ ನೇರ್ಪಡಿಸಿಯೂ ಕೊಳ್ಳಲಿಕ್ಕೆ ಕವಿಗೆ ಅಧಿಕಾರವಿದೆ. ಬೇಕಾದವರು ಈ ಹೊಸಹಾದಿಯನ್ನು ಹಿಡಿಯಲಿ ಬೇಡದವರು ಹಳೆಯ ಹಾದಿಯಲ್ಲೇ ನಡೆಯಲಿ ಮತ್ತು ಇಂದು ಒಬ್ಬನೇ ನಡೆವ ಮೇಕೆದಾರಿಯೇ ಮುಂದು ತೇರು ಎಳೆಯುವ ಹೆದ್ದಾರಿ ಎಂದು ಮೊದಲಾಗಿ ಆ ಪತ್ರಿಕೆಯಲ್ಲಿ ಬರೆದೆ. ಆ ಪತ್ರವ್ಯವಹಾರ ಹೇಗೆ ಮತ್ತು ಎಲ್ಲಿಯವರೆಗೆ ಸಾಗುತ್ತದೊ ಕರ್ಣಾಟಕದ ಈ ಛಾಂದಸ ಮಹಾಪ್ರಶ್ನೆಯನ್ನು ಕನ್ನಡದ ಸಾಹಿತಿಗಳು ಹೇಗೆ ಇತ್ಯರ್ಥಿಸುವರೋ ನೋಡಬೇಕೆಂದು ನಾನು ತುಂಬ ಕುತೂಹಲಿಸಿದ್ದೆ. ಆದರೆ ಆ ಕುರಿತು ಮತ್ತೂ ಮತ್ತೂ ಪತ್ರಗಳು ಕನ್ನಡದ ಆಯಾಭಾಗಗಳಿಂದ ಬಂದು ಬರುತ್ತಲೂ ಇದ್ದರೂ ಸಾಹಿತ್ಯದ ಗಂಧಗಾಳಿ ನಸುವೂ ಇಲ್ಲದ 'ಸ್ವದೇಶಾಭಿಮಾನಿ'ಯ ಅಂದಿನ ಸಂಪಾದಕರು ಅದನ್ನು ಮೊಳೆಯಲ್ಲೇ ಕಿವಿಚಿಬಿಟ್ಟರು. ಹಾಗಾಗಿ ಅದು ಬಟ್ಟಲಿನ ಬಿರುಗಾಳಿಯಂತೆ ಎದ್ದಲ್ಲಿಗೇ ಬೇಗನೆ ಆರಿತು. ಆದರೆ ತೊಟ್ಟ ಬಾಣ ತೊಟ್ಟೇ ತೀರಿತು. ಬಿಟ್ಟ ಪ್ರಾಸ ಬಿಟ್ಟೇ ಹೋಯಿತು. ಅನಂತರದ ನನ್ನ ಯಾವತ್ತು ಕವಿತೆಗಳಲ್ಲಿ (ಒಂದೆರಡರಲ್ಲಿ ಏನೋ ಏನಾ) ಪ್ರಾಸವಿಲ್ಲ." (ಆತ್ಮಕಥನ, ಪು. ೪೮೮–೮೯). ಗೋವಿಂದ ಪೈ ಸಂಶೋಧನ ಸಂಪುಟ.

ಕನ್ನಡದ ಬಗೆಗೆ ಗೋವಿಂದ ಪೈ ಅವರ ಕಳಕಳಿಯಿದು: "ನಾನು ಎರಡು ತಾಯಂದಿರ ಕೂಸು. ಕೊಂಕಣಿ ನನ್ನ ಹೆತ್ತತಾಯಿ, ಕನ್ನಡ ಸಾಕುತಾಯಿ. ನನ್ನನ್ನು ಸಾಕಿದ ತಾಯಿ ಕೊಂಕಣಿಯಲ್ಲಿ ಹೆಸರಿಗೆ ತಕ್ಕಷ್ಟರ ಸಾಹಿತ್ಯವಿದ್ದರೆ ಸಾಕಿತ್ತು. ಫ್ರಾನ್ಸ್ (France) ದೇಶದ ಪ್ರೊವಾಂಸ್ (Provance) ಎಂಬ ಕೆಂಕಣ ಜಿಲ್ಲೆಯವನಾದ Fredaric Mistral (ಫ್ರೆಡರಿಕ್ ಮಿಸ್ಟ್ರಾಲ್) ಎಂಬ ಕವಿ ಫ್ರೆಂಚ್ ಭಾಷೆಯಲ್ಲಿ ವಿಪುಲವೂ ಜಗದ್ವಿಖ್ಯಾತವೂ ಆದ ಸಾಹಿತ್ಯವಿದ್ದರೂ ಅದರಲ್ಲಿ ರಚಿಸದೆ ಅದರಿಂದ ಭಿನ್ನವಾದ ತನ್ನ ತಾಯಿ ನುಡಿಯಾದ ಪ್ರೊವೆಂಸಾಲ್ (Provencal) ಭಾಷೆಯಲ್ಲಿ ತಾನ ರಚಿಸುತ್ತಿದ್ದೆನೇನೋ. ಆದರೆ ತಾಯಿಯ ಮೊಲೆಯಲ್ಲಿ ಹಾಲಿಲ್ಲ ಕೊಂಕಣಿಯಲ್ಲಿ ಸಾಹಿತ್ಯವಿಲ್ಲ. ಆಕೆ ಆ ಬಗ್ಗ ನನ್ನನ್ನು ಕನ್ನಡದ ಮನೆಯಲ್ಲಿ ಸಾಕಿದಳು. ಈ ತಾಯಿಯಾದರೆ ಸಾವಿರಾರು ವರ್ಷ ಕಾಲದಿಂದ ಎಷ್ಟೋ ಕವಿಗಳನ್ನು ಊಡಿಸಿಯೂ ಮತ್ತೂ ಬತ್ತದ ದೇವರ ದಯೆಯಿಂದ ಸರ್ವದಾಬತ್ತದಾದಿದ ಸದಾಪು... ತನ್ನ ಮೊಲೆಯನ್ನು ಆಕೆ ತಾಯಿಗೂ ಮಿಕ್ಕ ಅಕ್ಕರೆಯಿಂದ ನನಗೆ ಉಣಿಸಿದಳು. ಆಕೆಯ ಅಕ್ಕರೆಯ ಸಾಲವನ್ನು ಏಳೇಳು ಜನ್ಮಕ್ಕೆ ತೆತ್ತು ತೀರಿಸಲಾರೆ. ತಾಯಿ ನೀನು ನನ್ನಲ್ಲಿ ಇಟ್ಟ ಮಮತೆಗೂ ನಾನು ನಿನಗೆ ಸಲ್ಲಿಸುತ್ತಿರುವ ಪ್ರತಿಮಮತೆಗೂ ಸರ್ವಥಾ ಎಣೆಯಿಲ್ಲ. ನೀನು ನನಗೆ ತರುವ ಎಂದರೆ ಅಮೃತದಂತೆ ಮೊಲೆಹಾಲು. ನಾನು ನಿನಗೆ ತರುವ ಎಂದರೆ ನಿನ್ನ ಕಾಲುಂಗುರವನ್ನು ಕೂಡ ತೊಳೆಯ ಸಾಲದ ಕಣ್ಣೀರು ಬೇರೆ ಏನಿದೆ ನನ್ನಲ್ಲಿ? ಅವ್ವಾ, ಅದರಿಂದ ತಾನೆ ತೃಪ್ತಳಾಗು."

"ನಾನು ಬೋಧಕನಲ್ಲ ಸಾಧಕ. ಆಜೀವ ಶ್ರಾವಕ, ಕೇಳುವಾತನಲ್ಲದೆ ಕೇಳಿಸುವಾತನಲ್ಲ. ಪರರಿಂದ ಕಲಿಯ ತಕ್ಕವನಲ್ಲದೆ ಪರರಿಗೆ ಕಲಿಸತಕ್ಕವನಲ್ಲ" ಇದು ಗೋವಿಂದ ಪೈ ಅವರ ಸ್ಪಷ್ಟ ನಿಲುವು.

ಇತಿಹಾಸಕ್ಕೆ ಸಂಬಂಧಪಟ್ಟಂತೆ ಗೋವಿಂದ ಪೈಗಳ ಲೇಖನಗಳು ಅತ್ಯಂತ ಮಹತ್ವಪೂರ್ಣವಾದುವು. ಅವುಗಳಲ್ಲಿ ತುಳುನಾಡಿನ ಇತಿಹಾಸಕ್ಕೆ ಸಂಬಂಧಿಸಿದಂತೆ ಇಪ್ಪತ್ತೊಂದು ಲೇಖನಗಳೂ ಕರ್ಣಾಟಕದ ಇತಿಹಾಸಕ್ಕೆ ಸಂಬಂಧಿಸಿದಂತೆ ಇಪ್ಪತ್ತೆರಡು ಲೇಖನಗಳೂ ಭಾರತದ ಇತಿಹಾಸಕ್ಕೆ ಸಂಬಂಧಿಸಿದಂತೆ ಹದಿನೈದು ಲೇಖನಗಳೂ ಸೇರಿವೆ. ಈ ಮೂರು ವಿಭಾಗಗಳಿಗೆ ಸಂಬಂಧಿಸಿದ ಸಮೀಕ್ಷೆಯನ್ನು ಸುಪ್ರಸಿದ್ಧ ಶಾಸನತಜ್ಞರಾದ ಡಾ. ಕೆ.ವಿ. ರಮೇಶ ಅವರು ಮಾಡಿದ್ದಾರೆ.

"ತುಳುನಾಡಿನ ಇತಿಹಾಸವನ್ನು ಕುರಿತ ಪೈಗಳ ಲೇಖನಗಳು ಆ ಪ್ರಾಂತದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಭೌಗೋಳಿಕ, ಜನಾಂಗ, ಸ್ಥಳನಾಮ, ಜಾನಪದ, ವಾಸ್ತುಶಿಲ್ಪ ಕ್ಷೇತ್ರಗಳಿಗೂ ಐತಿಹಾಸಿಕ ಕಾಲಮಾಪನಗಳಿಗೂ ಸಂಬಂಧಿಸಿದ್ದಾಗಿವೆ. ಈ ವಿಷಯಗಳಿಗೆ ಸಂಬಂಧಿಸಿದಂತೆ ಅವರು ಆರಿಸಿಕೊಂಡಿರುವ ಅಂಶಗಳನ್ನು ಚರ್ಚಿಸುವಲ್ಲಿ ಅವರು ಆ ಕಾಲಕ್ಕೆ ಲಭ್ಯವಿದ್ದ ಎಲ್ಲ ಪುರಾವೆಗಳನ್ನೂ ಯಾವುದನ್ನೂ ತಳ್ಳಿಹಾಕದೆ, ಕಡೆಗಣಿಸದೆ, ಬಳಸಿಕೊಂಡಿರುವುದನ್ನು ಕಂಡು ಯಾರಿಗೂ ಅಚ್ಚರಿಯಾಗದಿರದು. ಏಕೆಂದರೆ ಅಂದಿನಿಂದ ಇಂದಿನವರೆಗೂ ತಮ್ಮ ಪೂರ್ವಾಗ್ರಹಗಳಿಗೆ ಸಹಾಯಕವಾಗುವಂತಹ ಪುರಾವೆಗಳನ್ನಷ್ಟೇ ಗಣನೆಗೆ ತೆಗೆದುಕೊಳ್ಳುವುದು ಸರ್ವಸಾಮಾನ್ಯವಾಗಿ ಇತಿಹಾಸಕಾರರಲ್ಲಿ

ಕಂಡುಬರುವ ಹಾಗೂ ಪೈಗಳಲ್ಲಿ ಕಾಣಸಿಗದ ಒಂದು ಕೊರತೆ. x x x ಹಲವಾರು ಮುಖ್ಯ ವಿಷಯಗಳನ್ನು ಕುರಿತ ಪೈಗಳ ಬರಹಗಳಲ್ಲಿ ಅವರ ಪಕ್ಷಪಾತರಹಿತ ಪ್ರಾಮಾಣಿಕತೆ ಎದ್ದುಕಾಣುತ್ತದೆ. ತುಳುನಾಡಿನ ಇತಿಹಾಸವನ್ನು ಕುರಿತ ಪೈಗಳ ಸಂಶೋಧನೆಗಳ ಸಿದ್ಧಾಂತಗಳ ಮೌಲ್ಯಮಾಪನ ಮಾಡುವವರು ಕೆಲವೊಂದು ಸತ್ಯಾಂಶಗಳನ್ನು ನೆನಪಿನಲ್ಲಿಡುವುದು ಅಗತ್ಯ. ಅವರ ಕಾಲಕ್ಕೆ ಲಭ್ಯವಿದ್ದ ಪುರಾವೆಗಳ ಕೂಲಂಕಷ ಪರಿಶೀಲನೆಯ ನಂತರ ಪೈಗಳು ಮುಂದೊಡ್ಡಿದ ಹಲಕೆಲವು ಸಿದ್ಧಾಂತಗಳಲ್ಲಿ ಕೆಲವು ಇಂದು ತಿರಸ್ಕೃತವಾಗಿವೆ; ಇನ್ನೂ ಕೆಲವು ಹೊಸ ಪುರಾವೆಗಳ ಹಿನ್ನೆಲೆಯಲ್ಲಿ ಬದಲಾವಣೆಗೆ ಒಳಗಾಗಿವೆ. ಆದರೆ ಅಂದಿನಂತೆ ಇಂದಿಗೂ ಅಚ್ಚಳಿಯದೆ ಆದರ್ಶಪ್ರಾಯವಾಗಿ ಉಳಿದು ಬಂದಿರುವ, ಮುಂದೆಂದಿಗೂ ಉಳಿಯುವಂತಹ ಪೈಗಳ ಒಂದು ಅಮೂಲ್ಯ ಕೊಡುಗೆಯೆಂದರೆ ಅವರು ಬಳಕೆಗೆ ತಂದ ಪ್ರಾಮಾಣಿಕ ಸಂಶೋಧನಾಕ್ರಮ." (ಗೋವಿಂದ ಪೈ ಸಂಶೋಧನ ಸಂಪುಟ, ಪು. ೭೧೯–೭೨೧)

"ಕರ್ನಾಟಕದ ಇತಿಹಾಸವನ್ನು ಕುರಿತ ಸಂಶೋಧನೆಗಳಿಗೆ ಪೈಗಳು ಮುಖ್ಯವಾಗಿ ಆರಿಸಿಕೊಂಡದ್ದು ಮೂಲ ಸಾಮಗ್ರಿಗಳೆಂದರೆ ಶಾಸನಗಳು ಮತ್ತು ಸಾಹಿತ್ಯ ಕೃತಿಗಳು. ಈ ಎರಡೂ ಸಾಮಗ್ರಿಗಳ ಮಟ್ಟಿಗೂ ಪೈಗಳು ಪ್ರಕಟಿತ ಪಾಠಗಳನ್ನೇ ಅವಲಂಬಿಸಿರುವುದು ಅನಿವಾರ್ಯವಿತ್ತು. ಈ ಸತ್ಯವನ್ನು ಅಗತ್ಯವೆನಿಸಿದಲ್ಲೆಲ್ಲ ಪೈಗಳು ಸೂಚಿಸಲು ಮರೆತಿಲ್ಲ.

ಸಂಶೋಧನ ಕ್ಷೇತ್ರದಲ್ಲಿ ಯಾರ ಮಾತೂ ಕೊನೆಯ ಮಾತಾಗಲಾರದು ಎಂದು ಅರಿತಿದ್ದ ಪೈಗಳು ಸ್ವಭಾವತಃ ಜಿಜ್ಞಾಸುಗಳು, ಅನುಸಂಧಾನಶೀಲರು. x x x

ಪೈಗಳ ಎಲ್ಲ ಲೇಖನಗಳನ್ನೂ ಪರಾಮರ್ಶಿಸಿದವರಿಗೆ ಒಬ್ಬ ಪ್ರಾಮಾಣಿಕ ಸಂಶೋಧಕನಲ್ಲಿ ಇರಲೇಬೇಕಾದ ಎಲ್ಲ ವಿಶಿಷ್ಟ ಗುಣಗಳೂ ಪೈಗಳಲ್ಲಿ ಮನೆಮಾಡಿದ್ದವೆಂಬ ಅರಿವು ಉಂಟಾಗದಿರದು.

ಕರ್ನಾಟಕದ ಇತಿಹಾಸದ ಪುನಾರಚನೆಯ ಕುರಿತಾದ ಸಂಶೋಧನೆಯ ಕ್ಷೇತ್ರದಲ್ಲಿ ಗೋವಿಂದ ಪೈಗಳಿಗೆ ದೊರೆಯಬೇಕಾದಷ್ಟು ಪ್ರಾಮುಖ್ಯ ಸ್ಥಾನಮಾನಗಳು ಅವರ ಕಾಲದಲ್ಲಾಗಲಿ ಈಗಾಗಲಿ ದೊರೆತಿಲ್ಲವೆಂಬುದು ಅಚ್ಚರಿಯ ಸಂಗತಿಯೇ ಆಗಿದೆ. x x x ಮೊದಲನೆಯ ಕಾರಣ: ಪೈಗಳು ತಮ್ಮ ಪ್ರತಿಯೊಂದು ಸಂಶೋಧನಾ ಪ್ರಬಂಧದಲ್ಲೂ ತಮ್ಮ ವಾದಗಳಿಗೆ ಪೋಷಕವಾಗಿ ಬಹಳಷ್ಟು ಶಾಸನಿಕ ಮತ್ತು ಸಾಹಿತ್ಯಿಕ ಮೂಲಪಾಠಗಳನ್ನು ಉದ್ಧರಿಸಿದ್ದು, ಅವುಗಳನ್ನು ಓದಿ ಅರ್ಥೈಸಿಕೊಳ್ಳುವ ತಾಳ್ಮೆಯಾಗಲಿ ಪರಿಣತಿಯಾಗಲಿ ಇರದ ಇತರ ಸಂಶೋಧಕರು ಸಾಧ್ಯವಾದಮಟ್ಟಿಗೆ ಅವರ ಲೇಖನಗಳಿಂದ ದೂರವಿರುತ್ತಿರುವುದು. ಇಂತಹ ನಕಾರಾತ್ಮಕ ಧೋರಣೆಗೆ ಪೈಗಳು ಸುತ್ತಿ ಬಳಸಿ ಬರೆಯುವ ಶೈಲಿಯು ಕಾರಣವಿರಲೂಬಹುದು. ಎರಡನೆಯ ಕಾರಣ: ಪೈಗಳ ಸಂಶೋಧನಾತ್ಮಕ ಪ್ರಬಂಧಗಳೆಲ್ಲವೂ ಬೇರೆ ಬೇರೆಯ ಪ್ರಕಟಣೆಗಳಲ್ಲಿ ಚದುರಿಹೋಗಿದ್ದು ಆಸಕ್ತ ವಿದ್ವಾಂಸರಿಗೆ ದೊರೆಯದೇ ಹೋಗಿರಬಹುದು." (ಗೋವಿಂದಪೈ ಸಂಶೋಧನ ಸಂಪುಟ, ಪು. ೬೨೧–೬೨೪)

"ಭಾರತದ ಇತಿಹಾಸವನ್ನು ಕುರಿತು ಪೈಗಳು ಕನ್ನಡದಲ್ಲಿ ಬರೆದಿರುವ ಪ್ರಬಂಧಗಳು ಸಂಖ್ಯೆಯ ಮತ್ತು ವಿಷಯ ವ್ಯಾಪ್ತಿಯ ದೃಷ್ಟಿಯಿಂದ ಕಡಿಮೆಯೇ ಆಗಿದ್ದು, ಅವೂ ಕೂಡ ಕನ್ನಡೇತರ ಇತಿಹಾಸಕಾರರ ಹಾಗೂ ಇತರ ವಿದ್ವಾಂಸರ ಗಮನವನ್ನು ಸಾಕಷ್ಟು ಸೆಳೆದಿಲ್ಲವೆಂದೇ ಹೇಳಬೇಕು. ಸಮಗ್ರ ಭಾರತದ ಇತಿಹಾಸದ ಪುನಾರಚನೆಗೆ ಪೈಗಳ ಕೊಡುಗೆಯನ್ನು ಪರಿಶೀಲಿಸಿದಾಗ ಅವರು ಬೌದ್ಧ ಮತ್ತು ಜೈನಧರ್ಮಗಳ ಬಗ್ಗೆ ಹೆಚ್ಚಿನ ಗಮನ ನೀಡಿದ್ದರೆಂಬುದು ವಿಶದವಾಗುತ್ತದೆ. ಅವರು ಸಂಶೋಧನಾ ಕಾರ್ಯದಲ್ಲಿ ತೀವ್ರವಾಗಿ ನಿರತರಾಗಿದ್ದ ದಶಕಗಳಲ್ಲಿ ಹೊಸ ಹೊಸತಾಗಿ ಪತ್ತೆ ಹಚ್ಚಲಾಗುತ್ತಿದ್ದ ಪ್ರಾಕೃತ ಶಾಸನಗಳೂ ವಿವಿಧ ಭಾಷೆಗಳಲ್ಲಿಯ ಶೈವ, ಬೌದ್ಧಕೃತಿಗಳೂ, ಅಂದಿನ ವಿದ್ವಜ್ಜಗತ್ತಿನಲ್ಲಿ ಉಂಟುಮಾಡಿದ್ದ ವ್ಯಾಪಕವಾದ ಆಸಕ್ತಿಯೇ ಪೈಗಳ ಈ ಒಲವಿಗೂ ಕಾರಣವಿದ್ದಿರಬೇಕು. ಭಾರತೀಯ ಇತಿಹಾಸಕ್ಕೆ ಸಂಬಂಧಿಸಿದ ಈ ಮೇಲಿನ ಪ್ರಬಂಧ ಸಂಕಲನದಲ್ಲಿ ಆರರಷ್ಟು ಲೇಖನಗಳು ಈ ಎರಡೂ ಧರ್ಮಗಳಿಗೆ ನೇರವಾಗಿ ಸಂಬಂಧಿಸಿದುವು. x x x ಒಟ್ಟಿನಲ್ಲಿ ಹೇಳುವುದಾದರೆ ಇತಿಹಾಸಕ್ಕೆ ಸಂಬಂಧಿಸಿದಂತೆ ತಾವು ಚರ್ಚಿಸಿರುವ ವಿಷಯಗಳನ್ನೂ ಕುರಿತು ಪೈಗಳು ಮುಂದೊಡ್ಡಿರುವ ಸಿದ್ಧಾಂತಗಳ ಪೈಕಿ ಹಲವು ಇಂದು ತಿರಸ್ಕೃತವಾಗಿರಬಹುದಾದರೂ, ಅವರು

ತಮ್ಮದಾಗಿಸಿಕೊಂಡಿದ್ದ ಸಂಶೋಧನಾಕ್ರಮವು ಸರ್ವಥಾ ಅನುಕರಣೀಯ." (ಗೋವಿಂದ ಪೈ ಸಂಶೋಧನ ಸಂಪುಟ, ಪು. ೧೦೩೩-೧೦೩೪)

ವಾಗರ್ಥ ವಿಭಾಗದಲ್ಲಿ ಆರು ಲೇಖನಗಳಿವೆ. ಇದರಲ್ಲಿ ಅಮಾವಾಸ್ಯೆ, ತಿಂಗಳು, ಪೆಜೆ, ನೀನ್ ಆರ್‌ಗೆ, ಗೊಮ್ಮಟ, ವೃಷಲ ಮೊದಲಾದ ಶಬ್ದಗಳ ಅರ್ಥ ಮತ್ತು ನಿಷ್ಪತ್ತಿಯನ್ನು ಕೊಟ್ಟಿದ್ದಾರೆ. ಅನೇಕ ಪ್ರಾಚೀನ ಕಾವ್ಯಗಳಿಂದಲೂ ಶಾಸನಗಳಿಂದಲೂ ಪ್ರಯೋಗಗಳನ್ನು ಕೊಟ್ಟಿದ್ದಾರೆ. ಅನ್ಯಭಾಷೆಗಳ ಜ್ಞಾತಿಶಬ್ದಗಳನ್ನು ಸೂಚಿಸಿದ್ದಾರೆ. ಗೋವಿಂದ ಪೈಗಳಿಗೆ ಭಾಷೆಯ ಬೆಳವಣಿಗೆಯ ಬಗೆಗೆ ಹೊಸ ಶಬ್ದಗಳ ಸೃಷ್ಟಿಯ ಬಗೆಗೆ ಅಪಾರ ಕಾಳಜಿಯಿತ್ತು. ಇಳನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ "ಕೈಲಾದ ಮಟ್ಟಿಗೆ ಹೊಸ ಹೊಸ ಶಬ್ದಗಳನ್ನು ಸೃಷ್ಟಿಸಿ ನಮ್ಮ ಶಬ್ದಸ್ತೋಮವನ್ನು ಹೆಚ್ಚಿಸಬೇಕು. ಏಕೆಂದರೆ ಈಗ ಹೊಸ ಹೊಸಭಾವನೆಗಳು ಹುಟ್ಟುತ್ತಿರುವಲ್ಲಿ, ಅವುಗಳನ್ನು ಯಥಾವತ್ತಾಗಿ ಮೂಡಿಸಲಿಕ್ಕೆ ಹಳೆಯ ಶಬ್ದಸಂಗ್ರಹ ಸಾಲದು. ಈ ಕೆಲಸದಲ್ಲಿ ಮೊದಲ ಹೆಜ್ಜೆಗಳೆಂದರೆ, ಸಂಸ್ಕೃತ ಶಬ್ದಗಳಿಗೆ ಕನ್ನಡ ಪ್ರತ್ಯಯಗಳನ್ನು ಹಚ್ಚಿ ಹೊಸ ಕ್ರಿಯಾಪದಗಳನ್ನೂ, ಉದಾ: "ಅರುಣಿಸಿತು ಮೂಡದೆಸೆ" ಮೂಡಲಲ್ಲಿ ಕೆಂಬೆಳಕು ತೋರಿತು, "ಸವ್ಯಸಾಚಿಸು" ಎರಡು ಕೆಯ್ಗಳಿಂದಲೂ ಬಾಣಗಳನ್ನು ಎಸೆ. ಇ. ಹೊಸನಾಮಪದಗಳನ್ನು ಉದಾ: ಸಮ್ರಾಜಿಕೆ (empire, imperialism) ಇ. ಕನ್ನಡ ಶಬ್ದಗಳಿಗೂ ಕನ್ನಡ ಪ್ರತ್ಯಯಗಳನ್ನು ಹಚ್ಚಿ ಹೊಸ ಶಬ್ದಗಳನ್ನೂ, ಉದಾ: ಕೆಳಗಿಸು-ಕೆಳಗೆ ಇಳಿಸು, ಕಮ್ಮಿಸು-ಪರಿಮಳಿಸು ಇ. ರಚಿಸಬೇಕು. x x x ಯಾವುದೇ ಭಾವನೆಗಳಿಗೆ ತಕ್ಕ ಅಚ್ಚ ಕನ್ನಡವಾಗಲಿ ಇತರ ದ್ರಾವಿಡವಾಗಲಿ ಸಂಸ್ಕೃತವಾಗಲಿ ಶಬ್ದಗಳು ಇಲ್ಲವಾದರೆ ಹೊರಗಣ ಭಾಷೆಗಳಿಂದ ಅವನ್ನು ಎರಕೊಂಡು ಅವನ್ನು ಕನ್ನಡಿಸಬೇಕು. ಅಂದರೆ ಕನ್ನಡದ ಧೋರಣೆಗೆ ತಕ್ಕಂತೆ ರೂಪಾಂತರಿಸಬೇಕು" ಎಂದು ಹೇಳಿದ್ದಾರೆ. ಅಷ್ಟೇ ಅಲ್ಲದೆ ಈ ದಿಕ್ಕಿನಲ್ಲಿ ಗೋವಿಂದ ಪೈ ಅವರು ಬಹುಮುಂದೆ ಹೋಗಿಬಿಟ್ಟಿದ್ದಾರೆ. 'ಇಸು' ಕನ್ನಡದಲ್ಲಿ ಪ್ರೇರಣಾರ್ಥಕ ಪ್ರತ್ಯಯ; ಸಾಧಕಪ್ರತ್ಯಯ (derivative suffix) ಇದನ್ನು ಸಾಧಕ ಪ್ರತ್ಯಯವಾಗಿ ಕೆಲವು ಧಾತುಗಳಿಗೆ ಮಾತ್ರ ಹಚ್ಚುವ ಸಂಪ್ರದಾಯ ಬೆಳೆದು ಬಂದಿದೆ. ಧಾತುವಿಗೆ ಹೇತುವಿನಲ್ಲಿ ಸ್ವಯಂಕರ್ತೃವಿನಲ್ಲಿ ಅನ್ಯಕರ್ತೃವಿನಲ್ಲಿ ಇಸು ಸೇರುವುದೆಂದು ಕೇಶಿರಾಜ ಶಬ್ದಮಣಿದರ್ಪಣದಲ್ಲಿ ಹೇಳಿದ್ದಾನೆ. ಅಲ್ಲದೆ ಇದು ನಾಮಪ್ರಕೃತಿಗಳಿಗೂ ನೇರವಾಗಿ ಹತ್ತಿ ನಾಮಧಾತುಗಳಾಗುವುವೆಂದೂ ತಿಳಿಸಿದ್ದಾನೆ. ಈ ಸೀಮಿತ ಬಳಕೆಯ ಪ್ರತ್ಯಯವನ್ನು ಗೋವಿಂದ ಪೈಗಳು ಸರ್ವವ್ಯಾಪಕ ಉತ್ಪಾದಕ ಪ್ರತ್ಯಯವಾಗಿ (productive suffix) ಉಪಯೋಗಿಸಿಕೊಂಡು ಸಹಸ್ರಾರು ಕ್ರಿಯಾಪದಗಳನ್ನು ಬಳಕೆಗೆ ತರಬಹುದೆಂದು ತೋರಿಸಿಕೊಟ್ಟಿದ್ದಾರೆ. ಸಂಸ್ಕೃತ ಕನ್ನಡ ಪದಗಳಿಗೂ ಈ ಪ್ರತ್ಯವನ್ನು ಹಚ್ಚಿದ್ದಾರೆ. ಉದಾ: ಅಂಕಿಸು, ಪಾನಿಸು, ಉದ್ಯಮಿಸು, ಕಥಿಸು, ಮನನಿಸು, ಕೋಲಾಹಲಿಸು, ತೂಷ್ಣಿಸು, ಒಳಗಿಸು. ಹಾಗೆಯೇ ಭಗೀರಥಿಸು, ಬೃಹನ್ನಳಿಸು, ಭೀಮಿಸು, ಅತಿಪಾರ್ಥಿಸು ಈ ಶಬ್ದಗಳನ್ನೂ ರೂಪಿಸಿದ್ದಾರೆ. ಈ ಸಾಧಕ ಮತ್ತು ತದ್ಧಿತ ಪ್ರತ್ಯಯಗಳನ್ನು ಹಚ್ಚಿ ಉದಾ: ಕಡಿಕ, ಕನ್ನಡಿಕೆ, ಕೇಳುಗ, ಭರವಸಿಗ, ನುಡಿತ, ನೇರ್ಮೆ, ಅಜ್ಞತನ, ವರ್ತಕತನ ಎಂಬ ನಾಮಪದಗಳನ್ನೂ ಟಂಕಿಸಿದ್ದಾರೆ ಮತ್ತು ಟೆಂಭೂಮಿ, ತೆಮ್ಮೊಡು, ಕೈಕಾಗದ, ಕೆಂಗರಿಗ, ಮುಸಿಗೇಡು, ಹಿಂಗತೆ, ಹಿಂಡುಗತ್ತಲೆ, ಭೀಮಕಾರ್ಯ, ಮೆಟ್ಟಾಳಿಕೆ, ಒಪ್ಪಯಿಕೆ, ಒಳಕೈಸು ಮುಂತಾದ ಶಬ್ದಗಳನ್ನೂ ಸೃಷ್ಟಿಮಾಡಿದ್ದಾರೆ. ಈ ವಿಭಾಗದ ಸಮೀಕ್ಷಕರಾದ ಡಾ. ಯು.ಪಿ. ಉಪಾಧ್ಯಾಯರ ಮಾತುಗಳಿವು: "ಗೋವಿಂದ ಪೈಯವರು ವಿದ್ವಾಂಸರು ಮಾತ್ರವಲ್ಲ, ವಿದ್ವಾಂಸರ ವಿದ್ವಾಂಸರು. ಸಾಮಾನ್ಯ ಸಾಹಿತ್ಯಾಸಕ್ತರು, ವಿದ್ಯಾರ್ಥಿಗಳು ಅವರು ಬರೆದದ್ದನ್ನು ಅರ್ಥಮಾಡಿಕೊಳ್ಳಬೇಕಾದರೂ ತುಂಬ ಶ್ರಮಪಡಬೇಕಾಗುತ್ತದೆ. ಹೆಜ್ಜೆಹೆಜ್ಜೆಗೂ ಅವರು ಕೊಡುವ ಸಾಕ್ಷ್ಯಾಧಾರಗಳು ನಮ್ಮನ್ನು ದಂಗುಗೊಳಿಸುತ್ತವೆ. ವೇದಗಳ ಸ್ತೋತ್ರಗಳಿಂದ ಹಿಡಿದು ಬೈಬಲ್ ಕುರಾನ್‌ಗಳ ನುಡಿಗಳವರೆಗೆ, ಯಾಸ್ಕನ ನಿರುಕ್ತದಿಂದ ಹಿಡಿದು ಆಧುನಿಕ ಆಡುನುಡಿಗಳ ವ್ಯಾಕರಣಗಳವರೆಗೆ ಗ್ರೀಕ್, ಪರ್ಶಿಯನ್, ಅವೆಸ್ತ ಭಾಷೆಗಳಿಂದ ಹಿಡಿದು ಪಾಲಿ ಪ್ರಾಕೃತ ತುಳು ಕೊಡವದವರೆಗೆ, ಅಷ್ಟಾದಶ ಪುರಾಣಗಳಿಂದ ಹಿಡಿದು ಜೈನಬೌದ್ಧ ಧರ್ಮಗ್ರಂಥಗಳವರೆಗೆ, ಶಿಲಾಶಾಸನಗಳಿಂದ ಹಿಡಿದು ಪತ್ರಿಕಾ ವರದಿಗಳವರೆಗೆ ಪ್ರಾಚೀನ ಗಣಿತ, ಹೋರಾಶಾಸ್ತ್ರ, ಜ್ಯೋತಿಷಶಾಸ್ತ್ರಗಳಿಂದ ಹಿಡಿದು ಆಧುನಿಕ ವಿಜ್ಞಾನದವರೆಗೆ ವಿವಿಧ ಮೂಲಗಳಿಂದ ಆಧಾರಗಳನ್ನು ಉಲ್ಲೇಖಿಸಿ ಇದಮಿತ್ಥಂ ಎಂದು ಅವರು ಪ್ರತಿಪಾದಿಸಿರುವ ರೀತಿ ಎಲ್ಲ ಕಾಲದ ಸಂಶೋಧಕರಿಗೂ ಮಾರ್ಗದರ್ಶಿಯಾಗಿದೆ.

ಕನ್ನಡ ಭಾಷೆಯನ್ನು ವಿಜ್ಞಾನ ಹಾಗೂ ಮಾನವಿಕಶಾಸ್ತ್ರಗಳ ಶಿಕ್ಷಣ ಮಾಧ್ಯಮವಾಗಿ, ಸರಕಾರದ ಆಡಳಿತ ಭಾಷೆಯಾಗಿ, ಕೋರ್ಟು ಕಚೇರಿಗಳ ವ್ಯವಹಾರ ಭಾಷೆಯಾಗಿ, ಉದ್ಯಮ, ಕೈಗಾರಿಕೆ, ಪತ್ರಿಕೆ, ಆಕಾಶವಾಣಿ ಮುಂತಾದವುಗಳಲ್ಲಿ ಸಾಮೂಹಿಕ ಸಂಪರ್ಕ ಮಾಧ್ಯಮವಾಗಿ ಬೆಳಸುತ್ತಿರುವ ಇಂದಿನ ದಿನಗಳಲ್ಲಿ ಗೋವಿಂದ ಪೈಯವರು ತೋರಿಸಿಕೊಟ್ಟ ಮಾರ್ಗ ನಮಗೆ ಪ್ರೇರಣೆ ನೀಡುತ್ತವೆ. ಕನ್ನಡದಲ್ಲಿ ಹೊಸ ಪಾರಿಭಾಷಿಕ ಪದಗಳನ್ನು ಸೃಷ್ಟಿಸುವ ಸಂದರ್ಭದಲ್ಲಿ ಗೋವಿಂದ ಪೈಯವರ ಬರಹಗಳು ನಮಗೆ ಮಾರ್ಗದರ್ಶನ ಮಾಡುತ್ತವೆ." (ಗೋವಿಂದ ಪೈ ಸಂಶೋಧನ ಸಂಪುಟ, ಪು. ೧೦೮೫–೧೦೯೦)

ಗೋವಿಂದ ಪೈಗಳು ಹದಿನಾಲ್ಕು ಇಂಗ್ಲಿಷ್ ಲೇಖನಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಅನೇಕ ಲೇಖನಗಳು ಇತಿಹಾಸಕ್ಕೆ ಸಂಬಂಧಿಸಿದುವೇ ಆಗಿವೆ. ಪ್ರಾಚೀನ ಗಂಗರು, ಶಕರು, ಪಲ್ಲವರು, ಕುಶೀನರು, ಬನವಾಸಿ ಕದಂಬರು, ಶಾತವಾಹನರು, ವಾಕಾಟಕರು, ಹೈಗೆ ಹೈವೆ, ಗೌಡಸಾರಸ್ವತರು, ಪುನ್ನಾಟರು –ಇವರೇ ಮೊದಲಾದವರು ಇವುಗಳಲ್ಲಿ ಸೇರಿದ್ದಾರೆ.

ಶಾಸನ ಸಾಹಿತ್ಯಕ್ಕೆ ಗೋವಿಂದ ಪೈಗಳ ಕೊಡುಗೆ ಅಮೋಘವಾದುದು. ಶಾಸನಗಳಿಂದ ಇತಿಹಾಸವನ್ನು ನಿರೂಪಿಸಿದ ಪ್ರತಿಭಾವಂತರು.

ಜೈನ, ಬೌದ್ಧ, ವೀರಶೈವ, ವೈದಿಕ ಧರ್ಮ ಸಾಹಿತ್ಯಗಳಿಗೆ ಸಂಬಂಧಿಸಿದಂತೆ ಬೆಲೆಯುಳ್ಳ ಸಂಶೋಧನ ಲೇಖನಗಳನ್ನು ಬರೆದಿದ್ದಾರೆ.

ಗೋವಿಂದ ಪೈಗಳು ನಾಟಕಗಳನ್ನೂ ಬರೆದಿದ್ದಾರೆ. ಜಪಾನಿನ ನೋ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ತತ್ತ್ವಜ್ಞಾನ ಭಾಷಾಂತರಗಳಿಗೆ ಸಂಬಂಧಿಸಿದ ಹದಿನೈದು ಲೇಖನಗಳಿವೆ.

ಗೋವಿಂದ ಪೈಗಳು ಐವತ್ತೆರಡು ಕೃತಿಗಳಿಗೆ ಮುನ್ನುಡಿಗಳನ್ನು ಬರೆದಿದ್ದಾರೆ. ಎಂಟು ಪುಸ್ತಕಗಳ ವಿಮರ್ಶೆಯನ್ನು ಮಾಡಿದ್ದಾರೆ.

ಗೋವಿಂದ ಪೈಯವರ ಪತ್ರಗಳೂ ಪ್ರಕಟವಾಗಿವೆ. ಈ ಪತ್ರಗಳು ಕೂಡ ಒಂದು ರೀತಿ ಸಂಶೋಧನಾತ್ಮಕವಾಗಿವೆ ಎಂದೇ ಹೇಳಬಹುದು.

ಈವರೆಗಿನ ಒಂದು ಸ್ಥೂಲ ವಿವೇಚನೆಯಿಂದ ಗೋವಿಂದ ಪೈಗಳು ಈ ಶತಮಾನದ ಅದ್ವಿತೀಯ ಸಂಶೋಧಕರು ಎಂಬುದು ನಿರ್ವಿವಾದವಾದುದು. ತಮ್ಮ ಜೀವಮಾನವನ್ನೆಲ್ಲಾ ಸಂಶೋಧನೆಗೇ ಮುಡಿಪಾಗಿಟ್ಟವರು. ಅವರ ಸಂಶೋಧನ ಮಾರ್ಗ ಅನನುಕರಣೀಯ. ಗೋವಿಂದ ಪೈ ಅವರ ಲೇಖನಗಳ ಸಮೀಕ್ಷರು ಹೇಳಿರುವಂತೆ ಗೋವಿಂದ ಪೈ ಅವರ ಕೆಲವು ಲೇಖನಗಳು ಅಕಾಲಿಕವಾಗಿ, ಅವರ ಕೆಲವು ತೀರ್ಮಾನಗಳು ಇಂದು ತಿರಸ್ಕೃತವಾಗಿವೆ. ಮತ್ತೆ ಕೆಲವು ಪುನರ್ ಪರಿಶೀಲನೆಗೊಳ್ಳಬೇಕಾಗಿವೆ. ಆದರೆ ಗೋವಿಂದ ಪೈ ಅವರು ತಮ್ಮ ಬರವಣಿಗೆಗಳಿಗೆ ಕೊಟ್ಟಿರುವ ಆಕರ ಪರಿಕರಗಳು ಸಾರ್ವಕಾಲಿಕವಾಗಿವೆ. ಅವರ ಕಾಲಕ್ಕೆ ಲಭ್ಯವಾದ ಎಲ್ಲ ಮಾಹಿತಿಗಳ ಆಧಾರಗಳ ನೆರವಿನಿಂದ ಅವರು ತಮ್ಮ ಲೇಖನಗಳನ್ನು ಬರೆದಿದ್ದಾರೆ. ಅಲ್ಲಿಂದೀಚೆಗೆ ಲಭ್ಯವಾದ ಹೊಸ ಆಕರಗಳಿಂದ ಇವು ಪುನರ್ ಪರಿಷ್ಕರಣಗೊಳ್ಳಬೇಕಾಗಿದೆ. ಗೋವಿಂದ ಪೈಗಳ ಲೇಖನಗಳ ಪ್ರತಿಯೊಂದು ವಿಭಾಗದಲ್ಲೂ ಈ ಕಾರ್ಯ ನಡೆಯಬೇಕಾಗಿದೆ. ಇಂತಹ ಮಹತ್ಕಾರ್ಯವನ್ನು ಗೋವಿಂದ ಪೈ ಸ್ಮಾರಕ ಸಂಸ್ಥೆಯವರು ಕೈಕೊಳ್ಳುವರೆಂದು ನಂಬಿದ್ದೇನೆ.

ಗೋವಿಂದಪೈ ದೈತ್ಯ ಪ್ರತಿಭೆಯ ಶಬ್ದಬ್ರಹ್ಮ, ಸಂಶೋಧಕ ತಪಸ್ವಿ ಇವರ ಸಂಶೋಧನ ಸಿಂಧುವಿನಲ್ಲಿ ನಿಮಜ್ಜನಿಸಿ ಕೆಲವು ರಸಬಿಂದುಗಳನ್ನು ತಂದು ತಮ್ಮ ಮುಂದೆ ಸಿಂಚನಿಸಿದ್ದೇನೆ. ಇದರಿಂದ ಗೋವಿಂದ ಪೈ ಅವರ ಬರವಣಿಗೆಗಳತ್ತ ತಮ್ಮ ಒಲವು ಮೂಡುವುದೆಂದು ಭಾವಿಸಿದ್ದೇನೆ.

■

# ಡಾ. ಎ.ಆರ್. ಕೃಷ್ಣಶಾಸ್ತ್ರಿಗಳ ಜನ್ಮಶತಮಾನೋತ್ಸವ

**ಕ**ನ್ನಡ ಸಾರಸ್ವತಲೋಕದ ಆಚಾರ್ಯರೂ ಪ್ರಾಚಾರ್ಯರೂ ಸುಪ್ರಸಿದ್ಧ ವಿದ್ವಾಂಸರೂ ಆದ ಡಾ. ಎ.ಆರ್. ಕೃಷ್ಣಶಾಸ್ತ್ರಿಗಳವರ ಜನ್ಮಶತಾಬ್ದಿಯನ್ನು ಆಚರಿಸುತ್ತಿರುವುದು ನನಗೆ ಅಮಿತಾನಂದವನ್ನುಂಟುಮಾಡಿದೆ. ಶ್ರೀಯುತರ ವಿದ್ಯಾರ್ಥಿಯಾಗಿ ಪೂಜ್ಯಗುರುಗಳ ಸಂಸ್ಮರಣೆ ಮಾಡುವುದು ಪುಣ್ಯದಾಯಕವೆಂದು ಭಾವಿಸಿದ್ದೇನೆ. ಕನ್ನಡದ ಅಶ್ವಿನಿದೇವತೆಗಳಲ್ಲೊಬ್ಬರೆಂದು ಪರಿಕೀರ್ತಿತರಾಗಿರುವ ಡಾ. ಎ.ಆರ್. ಕೃಷ್ಣಶಾಸ್ತ್ರಿಗಳವರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿಗೆ ಸಲ್ಲಿಸಿದ ಅಮೋಘ ಸೇವೆಯನ್ನು ಯಥಾಮತಿಯಾಗಿ ನಿರೂಪಿಸಲು ಪ್ರಯತ್ನಿಸುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ ಕನ್ನಡ ನಿಘಂಟಿನ ಹಿನ್ನೆಲೆ ಇಂತಿದೆ. ೧೯೪೧ನೆಯ ಡಿಸೆಂಬರ್ ತಿಂಗಳು ಹೈದರಾಬಾದಿನಲ್ಲಿ ಸೇರಿದ್ದ ಪರಿಷತ್ತಿನ ಸಕಲ ಸದಸ್ಯರ ವಾರ್ಷಿಕಾಧಿವೇಶನದಲ್ಲಿ ಡಾ. ರಂ.ಶ್ರೀ. ಮುಗಳಿ ಅವರು ಕನ್ನಡ ನಿಘಂಟು ರಚನೆಯನ್ನು ಕುರಿತು ಒಂದು ನಿರ್ಣಯವನ್ನು ಮಂಡಿಸಿ ಪರಿಷತ್ತು ನಿಘಂಟು ಕಾರ್ಯವನ್ನು ಕೈಕೊಳ್ಳಬೇಕೆಂಬ ಸಲಹೆಯನ್ನು ಸೂಚಿಸಿದರು. ಅದರಂತೆ ಸಕಲಸದಸ್ಯರ ಸಭೆ ಆ ನಿರ್ಣಯವನ್ನು ಅಂಗೀಕರಿಸಿ ಒಂದು ಯೋಜನೆಯನ್ನು ಸಿದ್ಧಪಡಿಸಲು ಮುಗಳಿ ಅವರ ಸಂಚಾಲಕತ್ವದಲ್ಲಿ ಒಂದು ಉಪಸಮಿತಿಯನ್ನು ರಚಿಸಿತು. ಆ ಉಪಸಮಿತಿ ಸಿದ್ಧಪಡಿಸಿದ್ದ ಯೋಜನೆಯನ್ನು ಪರಿಷತ್ತಿನ ಕಾರ್ಯಸಮಿತಿ ಚರ್ಚಿಸಿ ಒಂದು ಸಂಪಾದಕ ಸಮಿತಿಯನ್ನು ನೇಮಿಸಿತು. ಆ ಸಮಿತಿಗೆ ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳು ಅಧ್ಯಕ್ಷರಾಗಿಯೂ ಡಾ. ಡಿ.ಎಲ್. ನರಸಿಂಹಾಚಾರ್, ಪ್ರೊ. ಕ.ವೆಂ. ರಾಘವಾಚಾರ್ ಸದಸ್ಯರಾಗಿಯೂ ಪ್ರೊ. ತೀ.ನಂ. ಶ್ರೀಕಂಠಯ್ಯನವರು ಕಾರ್ಯದರ್ಶಿಗಳಾಗಿಯೂ ಇದ್ದರು. ಈ ಸಂಪಾದಕ ಸಮಿತಿಯ ಮೊದಲ ಸಭೆ ೧೯೪೪ನೆಯ ಡಿಸೆಂಬರ್ ೧೮ ರಂದು ಸಭೆ ಸೇರಿ ಒಂದು ಯೋಜನೆಯನ್ನು ಸಿದ್ಧಪಡಿಸಿತು. ಈ ಸಂಪಾದಕ ಸಮಿತಿಗೆ ವಿವಿಧಾಂಗಗಳಲ್ಲಿ ಒದಗಬಹುದಾದ ಸಂದೇಹಗಳನ್ನು ಪರಿಹರಿಸುವುದಕ್ಕೂ ತೆಲುಗು, ಮಲಯಾಳ, ತುಳು, ಪ್ರಾಕೃತ, ಮರಾಠಿ ಮೊದಲಾದ ಭಾಷೆಗಳಿಗೆ ಸಂಬಂಧಪಟ್ಟ ವಿಶೇಷಾಂಶಗಳನ್ನು ತಿಳಿಸಿ ಉಪಕರಿಸುವುದಕ್ಕೂ ಒಂದು ಸಮಾಲೋಚನ ಸಮಿತಿಯನ್ನು ರಚಿಸಿತು. ಆ ಸಮಿತಿ ಹೀಗಿತ್ತು–

ರಾಜಸೇವಾಸಕ್ತ ಬಿ.ಎಂ. ಶ್ರೀಕಂಠಯ್ಯನವರು (ಬೆಂಗಳೂರು)

ಎಂ. ಗೋವಿಂದ ಪೈ ಅವರು (ಮಂಜೇಶ್ವರ)

ಎಲ್.ವಿ. ರಾಮಸ್ವಾಮಿ ಅಯ್ಯರ್ ಅವರು (ಎರ್ನಾಕುಳಂ)

ಡಾ. ಎ.ಎನ್. ಉಪಾಧ್ಯೆ ಅವರು (ಕೊಲ್ಲಾಪುರ)

ಆಸ್ಥಾನವಿದ್ವಾನ್ ಆರ್. ಅನಂತಕೃಷ್ಣಶರ್ಮ ಅವರು (ಮೈಸೂರು)

ಪಿ.ಎಂ. ಸೋಮಸುಂದರಂ ಅವರು (ಬೆಂಗಳೂರು)

ಕನ್ನಡ ನಿಘಂಟು ಕಚೇರಿ ಪ್ರಾರಂಭವಾದದ್ದು ೧೯೪೪ನೆಯ ಜನವರಿ ೨೭ ರಂದು. ತೀ.ನಂ. ಶ್ರೀಕಂಠಯ್ಯನವರು ನಿಘಂಟಿನ ಗೌರವ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದರು.

ಎಂ.ಆರ್. ಶ್ರೀನಿವಾಸಮೂರ್ತಿಗಳು ಪರಿಷತ್ತಿನ ಅಧ್ಯಕ್ಷರಾದ ಮೇಲೆ ಆಗಿನ ಮುಖ್ಯಮಂತ್ರಿಗಳಾಗಿದ್ದ ಕೆಂಗಲ್ ಹನುಮಂತಯ್ಯನವರಿಗೆ ನಿಘಂಟಿನ ವಿಷಯವನ್ನು ವಿವರಿಸಿ ಈ ಕಾರ್ಯಕ್ಕಾಗಿ ಒಂದು ಲಕ್ಷರೂಪಾಯಿಗಳನ್ನು ಪಡೆದರು. ೧೯೫೪ ಅಕ್ಟೋಬರ್ ೧೮ ರಂದು ಡಾ. ಡಿ.ಎಲ್. ನರಸಿಂಹಾಚಾರ್ಯರು ನಿಘಂಟಿನ ಸಂಪಾದಕತ್ವ ವಹಿಸಿಕೊಂಡರು. ಆಮೇಲೆ ಎನ್. ಬಸವಾರಾಧ್ಯ, ಹೆಮ್ಮಿಗೆ ದೇಶಿಕಾಚಾರ್ ಅವರನ್ನು ಸಹಾಯಕರಾಗಿ ನೇಮಿಸಿಕೊಳ್ಳಲಾಯಿತು. ೧೯೫೬ ಮೇ ತಿಂಗಳಲ್ಲಿ ಡಾ. ಡಿ.ಎಲ್. ನರಸಿಂಹಾಚಾರ್ಯರು ಪ್ರಾಧ್ಯಾಪಕರಾಗಿ ನೇಮಕಗೊಂಡು ಮೈಸೂರಿಗೆ ಹಿಂತಿರುಗಿದರು. ಆಗ ಡಾ. ಎ.ಆರ್. ಕೃಷ್ಣಶಾಸ್ತ್ರಿಗಳು ಅಧ್ಯಕ್ಷತೆ ಜೊತೆಗೆ ಸಂಪಾದಕತ್ವವನ್ನೂ ವಹಿಸಿಕೊಂಡು ಕಾರ್ಯನಿರ್ವಹಿಸುತ್ತಿದ್ದರು. ಈ ಎರಡು ಸ್ಥಾನಗಳ ಕಾರ್ಯಭಾರವನ್ನು ಹೊರುವುದು ತಮ್ಮಿಂದ ಸಾಧ್ಯವಿಲ್ಲವೆಂದು ಪರಿಷತ್ತಿನ ಅಂದಿನ ಅಧಿಕಾರಿಗಳಿಗೆ ಲಿಖಿತ ಮೂಲಕವಾಗಿ ತಿಳಿಸಿದರು. ಶ್ರೀಯುತರ ಕೋರಿಕೆಯಂತೆ ೬-೧-೧೯ ರಂದು ಅವರನ್ನು ಬಿಡುಗಡೆ ಮಾಡಲಾಯಿತು. ಆಮೇಲೆ ಪ್ರೊ. ತೀ.ನಂ. ಶ್ರೀಕಂಠಯ್ಯನವರು ಅಧ್ಯಕ್ಷರಾಗಿಯೂ ಡಾ. ಡಿ.ಎಲ್. ನರಸಿಂಹಾಚಾರ್ಯರು ಉಪಾಧ್ಯಕ್ಷರಾಗಿಯೂ ಕಾರ್ಯನಿರ್ವಹಿಸುತ್ತಿದ್ದರು. ಈ ಅವಧಿಯಲ್ಲಿ ನಾನು ಸಂಪಾದಕನಾಗಿ ಕಾರ್ಯನಿರ್ವಹಿಸುವ ಸದವಕಾಶ ಪ್ರಾಪ್ತವಾಯಿತು. ಇದಿಷ್ಟು ನಿಘಂಟು ನಡೆದು ಬಂದ ದಾರಿ.

ಭಾಷಾಶಾಸ್ತ್ರ ತತ್ವಗಳಿಗೆ ಅನುಸಾರವಾಗಿ ಚಾರಿತ್ರಿಕ ವಿವರಣೆಯಿಂದ ಕೂಡಿರುವ ಪ್ರಮಾಣಭೂತವೂ ಸಮಗ್ರವೂ ಆದ ಕನ್ನಡ ನಿಘಂಟನ್ನು ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ ವಿಷಯ ತಮಗೆಲ್ಲ ವೇದ್ಯವಷ್ಟೆ. ಈ ನಿಘಂಟು ಸುಮಾರು ಐದುಸಾವಿರ ಪುಟಗಳಷ್ಟಿರಬಹುದೆಂದು ಅಂದಾಜುಮಾಡಲಾಗಿತ್ತು. ಈಗ ಅದರ ಎರಡರಷ್ಟಾಗುವ ಸಂಭವವಿದೆ. ಈ ನಿಘಂಟಿನ ವೈಶಿಷ್ಟ್ಯವಿದು. ಕ್ರಿ.ಶ. ಸು. ೧೪೫೦ರ ಹಲ್ಮಿಡಿ ಶಾಸನದಿಂದ ಹಿಡಿದು ಸಹಸ್ರಾರು ಶಾಸನಗಳಿಂದ ಶಬ್ದಗಳನ್ನು ಸಂಗ್ರಹಿಸಿರುವುದು. ಕನ್ನಡ ಗ್ರಂಥಗಳಲ್ಲೂ ಶಾಸನಗಳಲ್ಲೂ ದೊರೆಯುವ ಸಂಸ್ಕೃತ, ದೇಶ್ಯ, ಅನ್ಯದೇಶ್ಯ, ತತ್ಸಮ, ತದ್ಭವ ಶಬ್ದಗಳನ್ನು ಸಂಗ್ರಹಿಸಿರುವುದು. ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯಕ್ಕೆ ಸಂಬಂಧಪಟ್ಟ ಧಾರ್ಮಿಕ ಮತ್ತು ದಾರ್ಶನಿಕ ಶಬ್ದಗಳು, ಸಂಗೀತ, ನೃತ್ಯ ಶಿಲ್ಪ ಮೊದಲಾದ ಕಲೆಗಳಿಗೆ ಸಂಬಂಧಿಸಿದ ಪ್ರಾಚೀನ ಪಾರಿಭಾಷಿಕ ಶಬ್ದಗಳು. ವ್ಯಾಕರಣ, ಅಲಂಕಾರ, ತರ್ಕ, ವೈದ್ಯ, ಜ್ಯೋತಿಷ್ಯ, ಕಾಮಶಾಸ್ತ್ರ, ಗಣಿತ ಮುಂತಾದ ಶಾಸ್ತ್ರಗಳಿಗೆ ಸಂಬಂಧಿಸಿದ ಶಬ್ದಗಳು-ವೈಜ್ಞಾನಿಕ ಪಾರಿಭಾಷಿಕ ಶಬ್ದಗಳು, ಪಠ್ಯಪುಸ್ತಕಗಳಲ್ಲಿಯ ಪಾರಿಭಾಷಿಕ ಶಬ್ದಗಳು, ಪ್ರೌಢಪತ್ರಿಕೆಗಳಲ್ಲಿಯ ವಿಶಿಷ್ಟಶಬ್ದಗಳು -ಇವೆಲ್ಲವನ್ನೂ ಈ ನಿಘಂಟು ಒಳಗೊಂಡಿದೆ.

ಕನ್ನಡ ಸಾಹಿತ್ಯ ಪರಿಷತ್ತು ಕೈಕೊಂಡಿರುವ ಈ ಬೃಹತ್‌ನಿಘಂಟಿಗೆ ನಿಷ್ಕಾಮಬುದ್ಧಿಯಿಂದ ನಿರಪೇಕ್ಷ ಮನೋಭಾವದಿಂದ ದುಡಿದ ಮಹಾನುಭಾವರು ಎಷ್ಟೋ ಮಂದಿ. ಆ ವಿದ್ವಾಂಸರಲ್ಲಿ ಡಾ. ಎ.ಆರ್. ಕೃಷ್ಣಶಾಸ್ತ್ರಿಗಳು ಅಗ್ರೇಸರರು. ನಿಘಂಟಿನ ಪ್ರಾರಂಭಾವಸ್ಥೆಯಿಂದ ಹಿಡಿದು ಅದು ಭದ್ರಬುನಾದಿಯ ಮೇಲೆ ನಿಲ್ಲುವವರೆಗೆ ಅಹರ್ನಿಶಿ ದುಡಿದವರಲ್ಲಿ ಶ್ರೀಯುತರು ಪ್ರಾತಃಸ್ಮರಣೀಯರು. ಶ್ರೀಯುತರ ವಿದ್ಯಾರ್ಥಿಯಾಗುವ ಸೌಭಾಗ್ಯ ನನಗೆ ಲಭಿಸದಿದ್ದರೂ ಕೆಲಕಾಲ ಅವರ ನಿರ್ದೇಶನದಲ್ಲಿ ನಿಘಂಟಿನ ಕಾರ್ಯನಿರ್ವಹಿಸುವ ಸುಯೋಗ ಪ್ರಾಪ್ತವಾಗಿತ್ತು. ಇದು ನನ್ನ ಪೂರ್ವಾಜಿತ ಪುಣ್ಯವೆಂದೇ ಭಾವಿಸಿದ್ದೇನೆ. ಈ ಪ್ರಸಂಗ ಒದಗಿಬಂದಿದ್ದು ಹೀಗೆ. ನಿಘಂಟಿನ ಸಂಪಾದಕರಾಗಿದ್ದ ನನ್ನ ವಿದ್ಯಾಗುರುಗಳು ಡಾ. ಡಿ.ಎಲ್. ನರಸಿಂಹಾಚಾರ್ಯರು ಪ್ರಾಧ್ಯಾಪಕರಾಗಿ ನೇಮಕಗೊಂಡು ಮೈಸೂರಿಗೆ ಹಿಂತಿರುಗಿದ ಮೇಲೆ ಡಾ. ಎ.ಆರ್. ಕೃಷ್ಣಶಾಸ್ತ್ರಿಗಳೇ ಸಂಪಾದಕರ ಕಾರ್ಯವನ್ನು ಕಚೇರಿಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದರು. ಆಗ ನಾನು ನಿಘಂಚಿನ ಉಪಸಂಪಾದಕನಾಗಿದ್ದೆ. ಕೆಲದಿನಗಳಾದ ಮೇಲೆ ಒಮ್ಮೆ ಕಚೇರಿಗೆ ಬಂದ ಶಾಸ್ತ್ರಿಗಳು ತೆರವಾಗಿದ್ದ ಸಂಪಾದಕ ಸ್ಥಾನವನ್ನು ಗಮನಿಸಿ ನನ್ನೊಡನೆ "ಏನಪ್ಪಾ, ನರಸಿಂಹಾಚಾರ್ಯರು ಮೈಸೂರಿಗೆ ಹೊರಟು ಹೋದರು. ಇನ್ನು ಮುಂದೆ ನೀನೇ ಸಂಪಾದಕನಾಗಿ ನಿಘಂಟಿನ ಕೆಲಸ ಕಾರ್ಯಗಳನ್ನು ನೋಡಿಕೊಳ್ಳಬೇಕು. ನಾನು ಪರಿಷತ್ತಿನವರಿಗೆ ಈ ವಿಷಯವನ್ನು ಬರೆದು ತಿಳಿಸುತ್ತೇನೆ" ಎಂದರು. ಅದನ್ನು ಕೇಳಿ ಅವಾಕ್ಕಾದ ನಾನು "ನನ್ನ

ಗುರುಗಳು ಕುಳಿತುಕೊಂಡ ಜಾಗದಲ್ಲಿ ಕುಳಿತು ಕೆಲಸಮಾಡುವಷ್ಟು ಯೋಗ್ಯತೆ ನನ್ನಲ್ಲಿಲ್ಲ ಸಾರ್. ದಯವಿಟ್ಟು ನನಗಿಂತಲೂ ವಿದ್ವಾಂಸರಾದ ಮತ್ತಾರನ್ನಾದರೂ ಈ ಕೆಲಸಕ್ಕೆ ನೇಮಿಸಿ" ಎಂದು ನಮ್ರವಾಗಿ ಕೇಳಿಕೊಂಡೆ. ಅದನ್ನು ಕೇಳಿದ ಅವರು "ನರಸಿಂಹಾಚಾರ್ಯರು ನಿನ್ನನ್ನು ನಿಘಂಟಿನ ಕೆಲಸಕ್ಕೆ ಕರೆದುಕೊಂಡು ಬಂದಿದ್ದಾರೆ. ಅವರಿಗೆ ನಿನ್ನಲ್ಲಿ ವಿಶೇಷವಾದ ನಂಬಿಕೆಯಿದೆ. ಅಲ್ಲದೆ ನೀನು ಸಂಪಾದಿಸಿರುವ ಪುಸ್ತಕಗಳಿಂದಲೂ ನಿನ್ನ ಪಾಂಡಿತ್ಯ ಗೊತ್ತಾಗುತ್ತದೆ. ಗುರುವಿನ ಜಾಗಕ್ಕೆ ಶಿಷ್ಯನೇ ಬರಬೇಕು" ಎಂದು ಹೇಳಿ ಈ ವಿಷಯವನ್ನು ಪರಿಷತ್ತಿಗೆ ಬರೆದು ತಿಳಿಸಿಯೇಬಿಟ್ಟರು. ಶಾಸ್ತ್ರಿಗಳಿಗೆ ಶಿಷ್ಯರಲ್ಲಿದ್ದ ಅಭಿಮಾನಕ್ಕೆ ಇದೊಂದು ಜ್ವಲಂತ ನಿದರ್ಶನವಾಗಿದೆ.

ನಿಘಂಟಿನ ಮಾದರಿ ಪುಟಗಳನ್ನು ಸಿದ್ಧಪಡಿಸಿ ವಿದ್ವಾಂಸರ ಅಭಿಪ್ರಾಯಕ್ಕೂ ಸಲಹೆ ಸೂಚನೆಗಳಿಗೂ ಕಳಿಸಿ ಕೊಡಬೇಕೆಂಬುದು ಶಾಸ್ತ್ರಿಗಳ ಮನೋಗತವಾಗಿತ್ತು. ಅದಕ್ಕಾಗಿ ಪ್ರತಿನಿತ್ಯವೂ ಕಚೇರಿಗೆ ಬರುತ್ತಿದ್ದರು. ನಿಘಂಟಿನ ಮೊದಲ ಹಸ್ತಪ್ರತಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಸೂಕ್ತ ಸಲಹೆ-ಸೂಚನೆಗಳನ್ನು ನೀಡಿ ಮನೆಗೆ ಹಿಂತಿರುಗುತ್ತಿದ್ದರು. ಮನೆಯಲ್ಲಿಯೂ ಇದೇ ಕೆಲಸವನ್ನು ಮಾಡುತ್ತ ಗ್ರಂಥಗಳನ್ನು ಪರಿಶೀಲಿಸಬೇಕಾಗಿದ್ದಲ್ಲಿ ಕೂಡಲೇ ನನಗೆ ಬರೆದು ಕಳಿಸುತ್ತಿದ್ದರು. ಅದರ ಒಂದು ಒಕ್ಕಣೆಯನ್ನು ಮಾತ್ರ ತಮ್ಮ ಗಮನಕ್ಕೆ ತರುತ್ತೇನೆ. Mr. N.B. please being the following books and dictionaries and also vuotation slips etc. ನಾನು ಇವನ್ನೆಲ್ಲಾ ತೆಗೆದುಕೊಂಡು ಅವರ ಮನೆಗೆ ಹೋಗಿ ಅವರ ಅಭಿಪ್ರಾಯಗಳನ್ನೆಲ್ಲಾ ಕೇಳಿಕೊಂಡು ಅವರ ನಿರ್ದೇಶನದಂತೆ ನಿಘಂಟಿನ ಹಸ್ತಪ್ರತಿಯನ್ನು ಸಿದ್ಧಪಡಿಸುತ್ತಿದ್ದೆ. "ಅತ್ತಿಗೆ" ಶಬ್ದದ ಅರ್ಥಪ್ರಯೋಗ ನಿಷ್ಪತ್ತಿಯ ಬಗೆಗೆ ಶಾಸ್ತ್ರಿಗಳು ಬಹಳಷ್ಟು ಹೆಣಗಾಡಿದ್ದಾರೆ. ಇದು ದೇಶ್ಯ ಶಬ್ದವೆ? ಸಂಸ್ಕೃತವೆ, ತತ್ಸಮವೆ, ತದ್ಭವವೆ ಅನ್ಯದೇಶ್ಯವೆ ಎಂಬ ಬಗೆಗೆ ಆಲೋಚನೆ ಮಾಡಿದ್ದಾರೆ. ಎಲ್ಲ ಆಕರಗಳನ್ನೂ ಶೋಧಿಸಿ ಕೊನೆಗೆ ಸಂಸ್ಕೃತದ ಅತ್ತಿಕಾ ಶಬ್ದಕ್ಕೆ ಜ್ಯೇಷ್ಠಭಗಿನೀ ಎಂಬ ಅರ್ಥವಿರುವುದಾಗಿಯೂ ತಮಿಳಿನಲ್ಲಿ ಅತ್ತಾಚ್ಚಿ=ಅಣ್ಣನ ಹೆಂಡತಿ, ಗಂಡನ ಸಹೋದರಿ ಎಂದಿರುವುದಾಗಿಯೂ ತುಳುವಿನಲ್ಲಿ ಅತ್ತಿಗೆ=ಅಣ್ಣನ ಹೆಂಡತಿ ಎಂದಿರುವುದಾಗಿಯೂ ನಿಷ್ಪತ್ತಿಯಲ್ಲಿ ಸೂಚಿಸಿದರು. ಈ ಉಲ್ಲೇಖದ ಬಗೆಗೆ ಒಂದು ಲೇಖನವನ್ನೇ ಬರೆದು ಪ್ರಕಟಿಸಿದರು. ಮತ್ತೊಂದು ಶಬ್ದ 'ಆಯಕ' ಎಂಬುದು ಶಾಸ್ತ್ರಿಗಳ ವಿಶೇಷ ಗಮನಕ್ಕೆ ಒಳಗಾಯಿತು. ಈ ಶಬ್ದಕ್ಕೆ ಕೇವಲ ಮೂರು ಪ್ರಯೋಗಗಳು ಮಾತ್ರ ಇದ್ದುವು. ಅದರಲ್ಲಿ ಒಂದು ಮೋಹನತರಂಗಿಣಿಯದು. ಅದು ಹೀಗಿದೆ: ಬೆರಲ್ಗಳೊಪ್ಪಿರ್ದುವಾಯಕನಂಘ್ರಿಯುಗಳಪಲ್ಲವದಿ (ಮೋಹನ ತರಂಗಿಣಿ ೨೩-೧೪). ಈ ಶಬ್ದ 'ಅಕ'ವೇ ಆಯಕವೇ ಎಂಬುದು ಸಮಸ್ಯೆಯಾಗಿತ್ತು. ಇದು ಶ್ರೀಯುತರನ್ನು ಬಹಳವಾಗಿ ಕಾಡಿತು. ಅವರು ಮೋಹನ ತರಂಗಿಣಿಯನ್ನು ತರಿಸಿಕೊಂಡು ಆಕೃತಿಯನ್ನು ಸಮಗ್ರವಾಗಿ ಅಭ್ಯಸಿಸಿ 'ಆಯಕ' ಪ್ರಯೋಗವಾಗಿರುವ ಸಂದರ್ಭಗಳನ್ನೆಲ್ಲಾ ದಾಖಲಿಸಿದರು. ಅಲ್ಪಸ್ವಲ್ಪ ತೆಲುಗು ಬಲ್ಲವನಾಗಿದ್ದ ನಾನು 'ಆಯಕ' ತೆಲುಗು ಶಬ್ದವೆಂದೂ ಇದಕ್ಕೆ ಆಕೆ ಎಂಬ ಅರ್ಥವಿದೆಯೆಂದೂ ಅರಿಕೆ ಮಾಡಿಕೊಂಡೆ. ಆ ಸಂಬಂಧವಾಗಿ ಅವರು ಬರೆದ ಪತ್ರದ ಒಕ್ಕಣೆ ಹೀಗಿದೆ: Mr N.B. It is possible that ಆಯಕ is one word=ಆಕೆ. Telugu scholars derive ಆಕೆ from ಆ+ಅಕ. We must gothorough the whole of ಮೋಹನ ತರಂಗಿಣಿ Carefully and collect all the instances of ಆಯಕ and ಅಕ್ಕ. If ಆಯಕ occurs elsewhere they must also be noted. Probably we can get some instances of the kind if we verify all the prayoga's of ಅಕ and ಅಕ್ಕ. ಕೊನೆಗೆ ಈ ಶಬ್ದಕ್ಕೆ ಆ ಅಕ್ಕ; ಆ ಹೆಂಗಸು ಎಂಬ ಅರ್ಥವನ್ನು ಕೊಟ್ಟು ಎಲ್ಲ ಪ್ರಯೋಗಗಳನ್ನು ಬರೆದು ನಿಷ್ಪತ್ತಿಯಲ್ಲಿ [ಆ(ಅದು) + ಅಕ್ಕ (<ಅಕ್ಕಾ) / ತೆಲು. ಆಯಕ = ಆಕೆ, ಪೂಜ್ಯೆ] ಎಂದು ಸೂಚಿಸಿದರು. ಇದೇರೀತಿ ಮಾದರಿಪುಟಗಳಲ್ಲಿನ ಶಬ್ದಗಳನ್ನೆಲ್ಲಾ ಕೂಲಂಕಷವಾಗಿ ಪರಿಶೀಲಿಸಿ ಅವನ್ನು ಅಚ್ಚುಮಾಡಿಸಿ ನಾಡಿನ ವಿದ್ವಾಂಸರ ಅಭಿಪ್ರಾಯಕ್ಕಾಗಿ ಕಳಿಸಿಕೊಟ್ಟರು. ಈ ಪುಟಗಳ ಮುದ್ರಣ ಕಾರ್ಯದಲ್ಲಿ ಅವರು ವಹಿಸಿದ ಶ್ರದ್ಧೆ ಕಾಳಜಿಗಳು ಆದರ್ಶಪ್ರಾಯವಾದುವು.

ಡಾ. ಕೃಷ್ಣಶಾಸ್ತ್ರಿಗಳು ಸಂಪಾದಕ ಸಮಿತಿಯ ಸಭೆಗಳನ್ನು ನಡೆಸುತ್ತಿದ್ದ ವಿಧಾನ ವಿಶಿಷ್ಟವಾಗಿರುತ್ತಿತ್ತು. ಸಭೆಗೆ ಬಂದ ಸದಸ್ಯರ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಆಮೇಲೆ ನಿಘಂಟಿನ ಕಾರ್ಯವನ್ನು ಪ್ರಾರಂಭಿಸುತ್ತಿದ್ದರು. ಶಬ್ದಾರ್ಥಗಳು

ಚರ್ಚೆಗೆ ಬಂದಾಗ ಪ್ರತಿಯೊಬ್ಬ ಸದಸ್ಯರ ಅಭಿಪ್ರಾಯವನ್ನೂ ಕೇಳಿ ಕೊನೆಗೆ ಎಲ್ಲರಿಗೂ ಒಪ್ಪಿಗೆಯಾಗುವಂತೆ ನಿರ್ಣಯಿಸಿಬಿಡುತ್ತಿದ್ದರು. ಮೀನಾಮೇಷ ಎಣಿಸುವ ಸ್ವಭಾವ ಅವರದಾಗಿರಲಿಲ್ಲ. ನಿಘಂಟುಸಂಪಾದಕ ಸಮಿತಿಯಲ್ಲಿ ನಾಡಿನ ಖ್ಯಾತ ವಿದ್ವಾಂಸರಿರುವಾಗ ಅವರಿಗೆ ತಿಳಿಯದಿರುವುದು ಮತ್ತಾವುದಿದೆ ಎಂಬುದು ಶಾಸ್ತ್ರಿಗಳವರ ನಿಲವು. ಪ್ರೊ. ತೀ.ನಂ. ಶ್ರೀಕಂಠಯ್ಯನವರು ಒಮ್ಮೊಮ್ಮೆ ಅರ್ಥಗಳ ಬಗೆಗೆ ಅಷ್ಟಾಗಿ ಸಮಾಧಾನ ವ್ಯಕ್ತಪಡಿಸದಿದ್ದಾಗ ಶಾಸ್ತ್ರಿಗಳು ಹೀಗೆ ಹೇಳುತ್ತಿದ್ದರು. "ಶ್ರೀಕಂಠಯ್ಯ, ಇಷ್ಟೊಂದು ಜನ ವಿದ್ವಾಂಸರು ಆಲೋಚಿಸಿಕೊಂಡು ಬಂದಿರುವಾಗ ಇವರಿಗೆ ತಿಳಿಯದಿರುವುದು ಬೇರೆ ಇದೆ ಎಂದು ನಾನು ಭಾವಿಸುವುದಿಲ್ಲ. ಒಂದ ವೇಳೆ ಹಾಗೇನಾದರೂ ಇದ್ದಲ್ಲಿ ಮುಂದೆ ಅದನ್ನು ಬದಲಾಯಿಸಿಕೊಳ್ಳೋಣ" ಎಂದು ಹೇಳಿ ಸಮಾಧಾನಪಡಿಸುತ್ತಿದ್ದರು. ಅವರು ನಿಘಂಟಿನ ಸಂಪರ್ಕ ಇಟ್ಟುಕೊಂಡಿದ್ದಷ್ಟು ದಿವಸವೂ ಅತ್ಯಂತ ಪ್ರಾಮಾಣಿಕವಾಗಿ ನಿಷ್ಠೆಯಿಂದ ನಿಸ್ವಾರ್ಥದಿಂದ ದುಡಿದಿದ್ದಾರೆ. ಕನ್ನಡ ನಿಘಂಟಿಗೆ ಡಾ. ಎ.ಆರ್. ಕೃಷ್ಣಶಾಸ್ತ್ರಿಗಳು ಸಲ್ಲಿಸಿದ ಸೇವೆಯನ್ನು ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕಾಗಿದೆ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಕನ್ನಡ ನಾಡಿನ ವಿದ್ವನ್ಮಣಿಗಳೂ ಉದ್ದಾಮ ಸಾಹಿತಿಗಳೂ ಶ್ರೇಷ್ಠ ಸಂಶೋಧಕರೂ ಕನ್ನಡ ನಿಘಂಟು ಸಂಪಾದಕ ಸಮಿತಿಯ ಪ್ರಥಮ ಅಧ್ಯಕ್ಷರೂ "ಶ್ರೀರಾಮಕೃಷ್ಣ ಪರಮಹಂಸರ ಚರಿತ್ರೆ", "ಸ್ವಾಮಿ ಶಿಷ್ಯ ಸಂವಾದ", "ನಾಗಮಹಾಶಯ", "ಭಾಸಕವಿ", "ಸಂಸ್ಕೃತ ನಾಟಕ", "ಕವಿ ಜಿಹ್ವಾಬಂಧನ", "ಭಾಷಣಗಳು ಮತ್ತು ಲೇಖನಗಳು", "ಸರ್ವಜ್ಞ ಕವಿ", "ವಚನ ಭಾರತ", "ಕಥಾಮೃತ", "ಶ್ರೀಪತಿಯ ಕಥೆಗಳು", "ನಿರ್ಮಲ ಭಾರತಿ", "ಹರಿಶ್ಚಂದ್ರಕಾವ್ಯ ಸಂಗ್ರಹ", "ಬಂಕಿಮಚಂದ್ರ" ಇತ್ಯಾದಿ ಗ್ರಂಥಗಳ ಕರ್ತೃಗಳೂ ಸಂಪಾದಕರೂ, "ಪ್ರಬುದ್ಧ ಕರ್ಣಾಟಕ"ದ ಸಂಸ್ಥಾಪಕರೂ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತರೂ ಇಂಗ್ಲಿಷ್-ಕನ್ನಡ ನಿಘಂಟು ಸಂಪಾದಕ ಸಮಿತಿಯ ಸದಸ್ಯರೂ ಕನ್ನಡ ನಾಡುನುಡಿಗಳ ಹಿರಿಯ ಅಭಿಮಾನಿಗಳೂ ಆದ ಡಾ. ಎ.ಆರ್. ಕೃಷ್ಣಶಾಸ್ತ್ರಿಗಳವರು ದಿನಾಂಕ ೧.೨.೧೯೬೮ ರಂದು ಬೆಂಗಳೂರಿನಲ್ಲಿ ದಿವಂಗತರಾದರೆಂದು ವಿಷಯವನ್ನು ತಿಳಿದು ಕನ್ನಡ ನಿಘಂಟು ಸಂಪಾದಕ ಸಮಿತಿ ತನ್ನ ಅಪಾರವಾದ ದುಃಖವನ್ನು ಈ ಮೂಲಕ ವ್ಯಕ್ತಪಡಿಸುತ್ತದೆ.

ಕನ್ನಡ ನಿಘಂಟು ರಚನೆಯ ಪ್ರಯತ್ನಕ್ಕೆ ಮೊದಲಿನಿಂದಲೂ ಪ್ರೋತ್ಸಾಹಕರೂ ಆ ಪ್ರಯತ್ನ ಕಾರ್ಯರೂಪಕ್ಕೆ ಬರುವ ಸಮಯದಲ್ಲಿ ಅದಕ್ಕೆ ಒಂದು ಖಚಿತರೂಪವನ್ನು ಕೊಟ್ಟವರೂ ನಿಘಂಟು ಸಂಪಾದಕ ಸಮಿತಿ ಪ್ರಾರಂಭವಾದಾಗಿನಿಂದ ಅದರ ಸಂಪಾದಕ ಅಧ್ಯಕ್ಷರಾಗಿದ್ದು ಉದ್ದಕ್ಕೂ ಕಾರ್ಯನಿರ್ದೇಶನ ಮಾಡಿದವರೂ, ನಿಘಂಟಿನ ಮೊದಲ ಎಂಟು ಪುಟಗಳ ಕರಡು ಪ್ರತಿಯನ್ನು ಸಿದ್ಧಪಡಿಸಿ ಪ್ರಕಟಿಸಿದವರೂ ಆದ ಡಾ. ಎ.ಆರ್. ಕೃಷ್ಣಶಾಸ್ತ್ರಿಗಳವರ ಅಮೋಘ ಸೇವೆಯನ್ನು ಸಂಪಾದಕ ಸಮಿತಿ ಅತ್ಯಂತ ಕೃತಜ್ಞತೆಯಿಂದ ನೆನೆಯುತ್ತದೆ.

ಡಾ. ಕೃಷ್ಣಶಾಸ್ತ್ರಿಗಳವರ ಅನೇಕ ಕೃತಿಗಳು ಶಾಶ್ವತ ಮೌಲ್ಯಗಳುಳ್ಳವಾಗಿವೆ. ಅನಂತಕಾಲ ಜನಮನವನ್ನು ಬೆಳಗಬಲ್ಲವಾಗಿವೆ. ಇಂತಹ ಅಮರಕೃತಿಗಳಿಗೆ ಕರ್ನಾಟಕ ರಾಜ್ಯದ ಪಂಪ ಪ್ರಶಸ್ತಿ ಪ್ರಾಪ್ತವಾಗುವುದು ಅನಿವಾರ್ಯವಾಗಿದೆ. ಶ್ರೀಯುತರ ಈ ಶತಮಾನೋತ್ಸವ ಸಂದರ್ಭದಲ್ಲಿಯಾದರೂ ಈ ಪ್ರಶಸ್ತಿ ಲಭ್ಯವಾಗಿ ಕನ್ನಡ ಜನತೆ ಈ ವಿದ್ವನ್ಮಣಿಗೆ ತಮ್ಮ ಋಣವನ್ನು ತೀರಿಸುವಂತಾಗಲಿ ಎಂದು ಹಾರೈಸುತ್ತೇನೆ. ನನ್ನ ಪೂಜ್ಯಗುರುಗಳು ಜನ್ಮ ತಾಳಿದ್ದು ೧೨.೨.೧೮೯೦ ರಂದು ಇಹಲೋಕ ಯಾತ್ರೆಯನ್ನು ಮುಗಿಸಿದ್ದು ೧.೨.೧೯೬೮ ರಂದು. ಈ ನನ್ನ ನೆಚ್ಚಿನ ಗುರುಗಳ ಸಂಸ್ಮರಣೆಯನ್ನು ಮಾಡಿಕೊಳ್ಳಲು ಅವಕಾಶ ಮಾಡಿಕೊಟ್ಟ ತಮಗೆಲ್ಲರಿಗೂ ವಂದಿಸಿ, ನನ್ನ ಗುರುಗಳಿಗೆ ಪ್ರಾಂಜಲ ಮನಸ್ಸಿನಿಂದ ಅನಂತ ನಮಸ್ಕಾರಗಳನ್ನು ಸಮರ್ಪಿಸುತ್ತೇನೆ.

■

# ಡಾ. ಡಿ.ಎಲ್. ನರಸಿಂಹಾಚಾರ್ಯರು

ಆಧುನಿಕ ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಇಪ್ಪತ್ತನೆಯ ಶತಮಾನವನ್ನು ಸುವರ್ಣಯುಗವೆಂದು ಕರೆಯಬಹುದಾಗಿದೆ. ಈ ಶತಮಾನದಲ್ಲಿ ಅವತರಿಸಿದ ಶ್ರೇಷ್ಠಕವಿಗಳೂ ಪ್ರಕಾಂಡಪಂಡಿತರೂ ಸರ್ವಶ್ರೇಷ್ಠ ವಿದ್ವಾಂಸರೂ ಸಂಶೋಧಕರೂ ದಾರ್ಶನಿಕರೂ ವಿಮರ್ಶಕರೂ ವಿಚಾರವಾದಿಗಳೂ ಕನ್ನಡ ಸಾಹಿತ್ಯವನ್ನು ಎಲ್ಲಂದಗಳಲ್ಲೂ ಸಂಪದ್ಭರಿತವನ್ನಾಗಿ ಮಾಡಿಹೋಗಿದ್ದಾರೆ. ಮುಂದಿನ ಸಾಹಿತ್ಯ ಪೀಳಿಗೆಗೆ ಭದ್ರವಾದ ಬುನಾದಿಯನ್ನು ಹಾಕಿದ್ದಾರೆ. ನಾಡು ನುಡಿ ಸಾಹಿತ್ಯ ಸಂಸ್ಕೃತಿ ಇತಿಹಾಸ ಇವೇ ಮೊದಲಾದ ಪ್ರಕಾರಗಳಲ್ಲಿ ತಲಸ್ಪರ್ಶಿಯಾದ ಸಂಶೋಧನೆಯನ್ನು ನಡೆಸಿ ಮೌಲಿಕವಾದ ಗ್ರಂಥಗಳನ್ನು ರಚಿಸಿ ಅಜರಾಮರರಾಗಿದ್ದಾರೆ. ಈ ಪ್ರಾತಃಸ್ಮರಣೀಯರ ಸಾಲಿನಲ್ಲಿ ಪ್ರಮುಖರಾದವರು ಪ್ರಕಾಂಡಪಂಡಿತರೂ ಶಿಷ್ಯವಾತ್ಸಲ್ಯಪ್ರಪೂರ್ಣರೂ ಆದ ಡಾ. ಡಿ.ಎಲ್. ನರಸಿಂಹಾಚಾರ್ಯರು. ದೊಡ್ಡಬೆಲೆ ನರಸಿಂಹಾಚಾರ್ಯರು ಕನ್ನಡ ಸಾಹಿತ್ಯಕ್ಕೆ ನಿಜಕ್ಕೂ ದೊಡ್ಡಬೆಲೆಯನ್ನೇ ತಂದುಕೊಟ್ಟಿದ್ದಾರೆ. ಕೆಲವಾರು ವರ್ಷಗಳು ಅವರ ವಿದ್ಯಾರ್ಥಿಯಾಗಿ ಹಲವಾರು ವರ್ಷಗಳು ಅವರ ನೇರ ನಿರ್ದೇಶನದಲ್ಲಿ ಕೆಲಸಮಾಡುವ ಅಪೂರ್ವ ಸುಯೋಗ ಲಭ್ಯವಾದ ಭಾಗ್ಯಶಾಲಿಗಳಲ್ಲಿ ನಾನೂ ಒಬ್ಬ. ಕಾಡುಶಿಲೆಯನ್ನು ಕಟೆದು ಅದನ್ನು ಮಾನವ ವಿಗ್ರಹವನ್ನಾಗಿ ಮಾಡಿ ಅದಕ್ಕೆ ಪ್ರಾಣಪ್ರತಿಷ್ಠೆಯನ್ನು ಮಾಡಿ ಅದು ಒಂದು ವ್ಯಕ್ತಿಯಾಗಿ ಶಕ್ತಿಯಾಗಿ ಸಾರ್ಥಕ ಕಾರ್ಯನಿರ್ವಹಿಸುವಂತೆ ಮಾಡಿದ ಕಾರಣಪುರುಷರೂ ವಿಭೂತಿಪುರುಷರೂ ಆದವರು ಡಾ. ಡಿ.ಎಲ್. ನರಸಿಂಹಾಚಾರ್ಯರು. ಅವರ ವಿಧೇಯವಿದ್ಯಾರ್ಥಿಯಾಗಿ ಅವರ ಮಾನವೀಯತೆಯನ್ನೂ ಮೇರುಸದೃಶ ಪಾಂಡಿತ್ಯವನ್ನೂ ಶಾಶ್ವತಸಾಹಿತ್ಯ ಸೇವೆಯನ್ನೂ ನಾನು ಕಂಡಂತೆ ಇಲ್ಲಿ ದಾಖಲಿಸಿದ್ದೇನೆ.

ಡಾ. ಡಿ.ಎಲ್. ನರಸಿಂಹಾಚಾರ್ಯರು ಕನ್ನಡ ಸಾಹಿತ್ಯ ವಿವಿಧ ಪ್ರಕಾರಗಳಿಗೆ ಸಲ್ಲಿಸಿರುವ ಸೇವೆ 'ನ ಭೂತೋ ನ ಭವಿಷ್ಯತಿ' ಎನ್ನುವಂತಹುದು. ಪ್ರಸ್ತುತ ಅವರು ನಿರುಕ್ತ ಪ್ರಕಾರಕ್ಕೆ ನೀಡಿರುವ ಅಮೂಲ್ಯ ಕಾಣಿಕೆಯ ಒಂದು ನೈಜಚಿತ್ರಣವನ್ನು ನೀಡಲು ಸಂಕಲ್ಪಿಸಿದ್ದೇನೆ.

**ಡಿಎಲ್‌ಎನ್ ಹಾಗೂ ಗ್ರಂಥಸಂಪಾದನೆ**

ಜಂಗಮ ವಿಶ್ವಕೋಶ ಎಂಬ ಕೀರ್ತಿಗೆ ಭಾಜನರಾಗಿರುವ ಡಾ. ಡಿ.ಎಲ್. ನರಸಿಂಹಾಚಾರ್ಯರು ಕನ್ನಡ ಸಾಹಿತ್ಯದ ವಿವಿಧ ಕ್ಷೇತ್ರಗಳಿಗೆ ಸಲ್ಲಿಸಿರುವ ಸೇವೆ ಅಪಾರವಾದುದು, ಅನಂತವಾದುದು, ಬಹುಕಾಲ ನಿಲ್ಲುವಂತಹುದು. ಅವರ ಪಾಠಪ್ರವಚನಗಳನ್ನು ಕೇಳಿ ಭಾಗ್ಯವಂತರಾದ ಸಹಸ್ರಾರು ವಿದ್ಯಾರ್ಥಿಗಳಲ್ಲಿ ನಾನೂ ಒಬ್ಬ. ಅಷ್ಟೇ ಅಲ್ಲ ಉಳಿದೆಲ್ಲ ವಿದ್ಯಾರ್ಥಿಗಳಿಗಿಂತಲೂ ಬಹು ದೀರ್ಘಕಾಲ ಅವರ ಶಿಷ್ಯನಾಗುವ ಅವಕಾಶ ಲಭ್ಯವಾದದ್ದು ನನ್ನ ಪೂರ್ವಜನ್ಮದ ಪುಣ್ಯವೆಂದೇ ಭಾವಿಸಿದ್ದೇನೆ. ನನ್ನ ಗುರುಗಳು ನನಗೆ ವಿದ್ಯಾದಾನವನ್ನೂ ಮಾಡಿದ್ದಾರೆ, ಅನ್ನದಾನವನ್ನೂ ಮಾಡಿದ್ದಾರೆ. ಇಂದು ನಾನು ತಮ್ಮ ಮುಂದೆ ನಿಂತು ನನ್ನ ಗುರುಗಳ ಸಾಹಿತ್ಯ ಸೇವೆಯ ಸಂಸ್ಮರಣೆ ಮಾಡುವ ಅವಕಾಶ ದೊರೆತದ್ದು ಒಂದು ಯೋಗಾಯೋಗ. ನನ್ನದೆಂಬುದು ಏನೂ ಇಲ್ಲ. ಪೂಜ್ಯಗುರುಗಳು ಆಡಿಸಿದಂತೆ ಆಡುತ್ತೇನೆ.

ಡಾ. ಡಿ.ಎಲ್. ನರಸಿಂಹಾಚಾರ್ಯರು ಸಾಹಿತ್ಯ, ಸಂಸ್ಕೃತಿ, ಸಂಶೋಧನೆ, ಇತಿಹಾಸ, ಶಾಸನ, ವ್ಯಾಕರಣ, ಛಂದಸ್ಸು, ಅಲಂಕಾರ, ನಿಘಂಟು, ಗ್ರಂಥಸಂಪಾದನೆ – ಇವೇ ಮೊದಲಾದ ಪ್ರಕಾರಗಳಿಗೆ ಸಲ್ಲಿಸಿರುವ ಸೇವೆ

ಅಜರಾಮರವಾದುದು. ಪ್ರಸ್ತುತ ಗ್ರಂಥಸಂಪಾದನ ಕ್ಷೇತ್ರಕ್ಕೆ ಅವರ ಅಮೋಘ ಸೇವೆಯ ಒಂದು ಸಂಕ್ಷಿಪ್ತ ಪರಿಚಯವನ್ನು ಯಥಾಮತಿಯಾಗಿ ಮಾಡಿಕೊಡಲು ಪ್ರಯತ್ನಿಸುತ್ತೇನೆ. ಆದರೆ ಇದಕ್ಕೂ ಮೊದಲು ನನ್ನ ಅಭಿಪ್ರಾಯಗಳ ಸತ್ಯಾಸತ್ಯತೆಯನ್ನು ಪರೀಕ್ಷಿಸಲು, ಪುಷ್ಟೀಕರಿಸಲು, ನನ್ನ ಮತ್ತೊಬ್ಬ ವಿದ್ಯಾಗುರುಗಳೂ ದೇಹವೆರಡು ಆತ್ಮವೊಂದೇ ಎಂಬಂತಿದ್ದ ಪ್ರೊ.ತೀ.ನಂ. ಶ್ರೀಕಂಠಯ್ಯ ಅವರ ಅಭಿಪ್ರಾಯವನ್ನು ನನ್ನ ಗುರುಗಳ ಹಿರಿಯ ಶಿಷ್ಯರಾಗಿದ್ದ ಪ್ರೊ. ದೇ. ಜವರೇಗೌಡ ಅವರ ಅನಿಸಿಕೆಗಳನ್ನು ಯಥಾವತ್ತಾಗಿ ದಾಖಲಿಸಿದ್ದೇನೆ.

ಪ್ರೊ. ತೀ.ನಂ. ಶ್ರೀಕಂಠಯ್ಯ ಅವರು ಜ್ಞಾನೋಪಾಸಕದ ಮುನ್ನುಡಿಯಲ್ಲಿ: "ಡಿಎಲ್‌ಎನ್ ಎಂದರೆ ಪಾಂಡಿತ್ಯ, ಪಾಂಡಿತ್ಯ ಎಂದರೆ ಡಿಎಲ್‌ಎನ್" ಎನ್ನುವುದು ಕನ್ನಡ ಬಲ್ಲವರಲ್ಲೆಲ್ಲ ಈಗ ರೂಢಿಯ ಭಾವನೆಯಾಗಿದೆ. ಪಾಂಡಿತ್ಯದ ಗಳಿಕೆಗಾಗಿ ಬೆಳವಣಿಗೆಗಾಗಿ ಏಳಿಗೆಗಾಗಿ ಜೀವಮಾನವನ್ನೇ ತೇಯುತ್ತಿರುವವರು ನರಸಿಂಹಾಚಾರ್ಯರು. ಪಾಂಡಿತ್ಯ ಎನ್ನುವುದು ಸಮಯಸ್ಫೂರ್ತಿಯಿಂದ ಮಿಂಚುವ ವಸ್ತುವಲ್ಲ. ನಿರಂತರವಾದ ವ್ಯಾಸಂಗವೇ ಅದನ್ನು ಸಾಧಿಸುವ ರಾಜಮಾರ್ಗ.

ಪಾಂಡಿತ್ಯವೆಂದರೆ ಕೇವಲ ವಿಷಯರಾಶಿಯ ಸಂಗ್ರಹವಲ್ಲ. ಆ ರಾಶಿ ಬೇಕೇಬೇಕು. ಆದರೆ ಇಷ್ಟೇ ಸಾಲದು. ಆ ವಿವಿಧ ವಿಷಯಗಳಲ್ಲಿ ಮರೆಯಾಗಿರುವ ಸಂಬಂಧಗಳನ್ನು ಊಹಿಸಿ ಗ್ರಹಿಸಿ ಎಳೆಗಳ ತೊಡಕುಗಳನ್ನು ಬಿಡಿಸಿ ಕೂಡಿಸಿ ತತ್ವಗಳನ್ನು ಬೆಳಗುವ ಸಂಯೋಜಕ ಪ್ರತಿಭೆಯೂ ಜೊತೆಗೆ ಅವಶ್ಯಕವಾಗಿರಬೇಕು. ಇದು ನರಸಿಂಹಾಚಾರ್ಯರಲ್ಲಿ ಹೇಗೆ ಕೆಲಸ ಮಾಡುತ್ತಿರುತ್ತದೆ ಎಂಬುದನ್ನು ನಾನು ಹಲವು ಸಂದರ್ಭಗಳಲ್ಲಿ ಕಂಡು ಬೆರಗಾಗಿದ್ದೇನೆ. ಹಳಗನ್ನಡ ಭಾಷೆ ಸಾಹಿತ್ಯಗಳ ವಿಷಯಕ್ಕಂತೂ ಹಲವರು ಹೇಳಿರುವಂತೆ ನಾನು ಬಲ್ಲಂತೆ ಅವರೊಂದು "ಜಂಗಮ ಬೃಹತ್ಕೋಶ". ಅವರಿಗೂ ಹರಿಯದಿರುವ ಪ್ರಶ್ನೆಗಳು ಇಲ್ಲವೆಂದಿಲ್ಲ. ಆದರೆ ಹಳಗನ್ನಡದಲ್ಲಿ ಅವರಿಗಿಂತಲೂ ನಿಷ್ಣಾತರಾದ ವಿದ್ವಾಂಸರನ್ನು ಸದ್ಯದಲ್ಲಿ ಕಾಣುವುದು ಅಶಕ್ಯವೆಂದೇ ನನ್ನ ಭಾವನೆ.

ನರಸಿಂಹಾಚಾರ್ಯರ ಪಾಂಡಿತ್ಯಕ್ಕೆ ಅವರ ಜ್ಞಾಪಕಶಕ್ತಿಯ ಬೆಂಬಲ ಅತ್ಯಧಿಕ. ನರಸಿಂಹಾಚಾರ್ಯರ ಶಿಷ್ಯರಾಗಿ ಅವರಿಂದ ಪಾಠಕಲಿತ ವಿದ್ಯಾರ್ಥಿಗಳು ನಿಜವಾಗಿಯೂ ಧನ್ಯರು. ಭಾಷೆಯ ರಹಸ್ಯ ಸಾಹಿತ್ಯದ ಸ್ವಾರಸ್ಯ ಎರಡನ್ನೂ ಏಕರೀತಿಯ ಉತ್ಸಾಹದಿಂದ ಮನಮುಟ್ಟಿಸಬಲ್ಲ ಸವ್ಯಸಾಚಿಗಳು ಅವರು.

ಉಪಾಯನದಲ್ಲಿ "ಶ್ರೀ ಆಚಾರ್ಯರೊಡನೆ" ಎಂಬ ಲೇಖನದಲ್ಲಿ ದೇಜಗೌ ಅವರು ಹೇಳಿರುವ ಮಾತುಗಳಿವು: "ಮೈಸೂರು ವಿಶ್ವವಿದ್ಯಾನಿಲಯದಲ್ಲಿ ರತ್ನತ್ರಯವೆಂಬ ಬಿರುದಿಗೆ ಪಾತ್ರರಾದ ಕುವೆಂಪು ತೀನಂಶ್ರೀ ಡಿಎಲ್‌ಎನ್ ಅವರು ವಿಶ್ವವಿದ್ಯಾನಿಲಯಕ್ಕೆ ಕನ್ನಡನಾಡಿಗೆ ಕನ್ನಡಕ್ಕೆ ರಾಷ್ಟ್ರೀಯ ಗೌರವವನ್ನು ಸಂಪಾದಿಸಿಕೊಟ್ಟಿದ್ದಾರೆ. ಮುಂದಿನ ಪೀಳಿಗೆಗೆ ಆದರ್ಶಪ್ರಾಯರಾಗಿ ಸ್ಫೂರ್ತಿಶಕ್ತಿಯಾಗಿ ಪರಿಣಮಿಸಿದ್ದಾರೆ.

ಪಳೆಯುಳಿಕೆ ನುಡಿಗಳ ರೂಪಾರ್ಥಗಳನ್ನು ಖಚಿತಪಡಿಸುವಲ್ಲಿ ಗ್ರಂಥಸಂಪಾದನೆಗೆ ಸಂಬಂಧಿಸಿದಂತೆ ಪಾಠಾಂತರಗಳನ್ನು ನಿರ್ಣಯಿಸುವಲ್ಲಿ ಡಿಎಲ್‌ಎನ್ ಅವರ ಪ್ರತಿಭಾಸಾಮರ್ಥ್ಯ ಜ್ವಾಜಲ್ಯಮಾನವಾಗಿ ಪ್ರಕಾಶಿಸುತ್ತದೆ.

ಪಾಠಾಂತರ ನಿಷ್ಕರ್ಷೆಯಲ್ಲಂತೂ ಡಿಎಲ್‌ಎನ್ ಸಿದ್ಧಹಸ್ತರು. ಸಾವಿರಾರು ವರ್ಷಗಳ ಹಿಂದಿನ ಕವಿಯೊಬ್ಬರ ಮನೋಗರ್ಭವನ್ನು ಪ್ರವೇಶಿಸಿ ಅವನ ಅನುಭವವನ್ನು ತಮ್ಮದಾಗಿಸಿಕೊಂಡು ಮೂಲಕವಿಯ ಪ್ರತಿಭೆಯನ್ನು ಪ್ರತಿಬಿಂಬಿಸುವಂಥ ಪಾಠವನ್ನು ನಿರ್ಣಯಿಸುವಲ್ಲಿ ಡಿಎಲ್‌ಎನ್ ಅವರ ಸಂಯೋಜಕಪ್ರತಿಭೆ ಊಹಾಶಕ್ತಿ, ಬಹುಶ್ರುತತ್ವ ಮತ್ತು ಯಥಾರ್ಥಜ್ಞಾನಗಳು ಸುವ್ಯಕ್ತವಾಗುತ್ತವೆ.

ಡಾ. ಡಿ.ಎಲ್. ನರಸಿಂಹಾಚಾರ್ಯರ ಸಾಹಿತ್ಯಭಂಡಾರ ಇಂತಿದೆ. **ಸಂಪಾದಿತ ಕೃತಿಗಳು:** ೧. ವಡ್ಡಾರಾಧನೆ, ೨. ಸಕಲವೈದ್ಯಸಂಹಿತ ಸಾರಾರ್ಣವ, ೩. ಶಬ್ದಮಣಿದರ್ಪಣ, ೪. ಪಂಪ ರಾಮಾಯಣ ಸಂಗ್ರಹ, ೫. ಕುಮಾರವ್ಯಾಸನ ಭೀಷ್ಮಪರ್ವ, ೬. ಶಾಂತಿನಾಥನ ಸುಕುಮಾರ ಚರಿತೆ : ಟಿ.ಎಸ್. ಶಾಮರಾವ್ ಜೊತೆ, ೭. ಸಿದ್ಧರಾಮ ಚಾರಿತ್ರ : ಟಿ.ಎಸ್. ವೆಂಕಣ್ಣಯ್ಯ ಅವರೊಡನೆ, ೮. ಗೋವಿನ ಹಾಡು, ೯. ಸಿದ್ಧರಾಮ ಚರಿತೆಯ ಸಂಗ್ರಹ.

**ಸ್ವತಂತ್ರ ಕೃತಿಗಳು:** ೧. ಕನ್ನಡ ಗ್ರಂಥಸಂಪಾದನೆ, ೨. ಹಂಪೆಯ ಹರಿಹರ, ೩. ಪಂಪಭಾರತ ದೀಪಿಕೆ, ೪. ಶಬ್ದವಿಹಾರ.

**ಬಿಡಿ ಲೇಖನಗಳು:** ಸುಮಾರು ಎಂಬತ್ತಕ್ಕೂ ಮೀರಿದ ಸಂಶೋಧನಾತ್ಮಕ ಲೇಖನಗಳು.

**ಮುನ್ನುಡಿಗಳು:** ಒಂಬತ್ತು ಜನ ವಿದ್ವಾಂಸರ ಕೃತಿಗಳಿಗೆ ಬರೆದಿರುವ ಮುನ್ನುಡಿಗಳು.

ಪ್ರಸ್ತುತ ಗ್ರಂಥ ಸಂಪಾದನೆ ಬಗೆಗೆ ನನ್ನ ಗುರುಗಳು ಬರೆದಿರುವುದನ್ನೇ ಯಥಾವತ್ತಾಗಿ ಉದ್ಧರಿಸಿದ್ದೇನೆ.

"ಗ್ರಂಥಸಂಪಾದನೆ" ಎಂದರೆ ಹಳೆಯ ಗ್ರಂಥಗಳನ್ನು ಶೇಖರಿಸಿ ತರುವಾಯ ಗ್ರಂಥಸಂಸ್ಕರಣ ಅಥವಾ ಪರಿಷ್ಕರಣ ಮಾಡಿ ಅಚ್ಚುಹಾಕಿಸುವುದು. (Textual criticism) ಅಚ್ಚುಕೂಟಗಳು ಆರಂಭವಾದ ಮೇಲೆ ರಚಿತವಾದ ಗ್ರಂಥಗಳಿಗೆ, ಅವು ಲೇಖಕರ ಕಣ್ಣೆದುರಿಗೇ ಅಚ್ಚಾಗಿರುವುದರಿಂದ ಯಾವ ಸಂಸ್ಕರಣವೂ ಅಗತ್ಯವಿಲ್ಲ.

ಹಿಂದೆ ಗ್ರಂಥಗಳನ್ನು ಕೈಯಲ್ಲಿ ಬರೆದಿಡುತ್ತಿದ್ದರು. ಅವುಗಳಿಗೆ ಹಸ್ತಪ್ರತಿಗಳೆಂದು ಹೆಸರು. ಸುಮ್ಮನೆ ಅವುಗಳ ಪ್ರತಿಯನ್ನು ಮಾಡಿ ಅಚ್ಚುಹಾಕಿಸಿ ಬಿಟ್ಟರೆ ಅದು ಸಂಸ್ಕರಣವಾಗುವುದಿಲ್ಲ. ಏಕೆಂದರೆ ನಾನಾ ರೀತಿಯಾದ ತಪ್ಪುಗಳು ಹಾಗೆಯೇ ಉಳಿದುಕೊಂಡುಬಿಡುತ್ತವೆ. ಕೌಶಲದಿಂದ ಇವನ್ನು ತಿದ್ದಿ ಪಾಠಗಳ ನಿರ್ಣಯಮಾಡಿಕೊಡುವುದು ಗ್ರಂಥ ಸಂಸ್ಕರಣ. ಗ್ರಂಥವೆಂದರೆ ತಿಳಿದ ಭಾಷೆಯಲ್ಲಿ ಅರ್ಥಸಹಿತವಾಗಿ ಬರೆದಿರುವ ಲೇಖನ (Document). ಗ್ರಂಥಗಳು ಹಳೆಯವಾದಷ್ಟು ತಪ್ಪುಗಳು ಹೆಚ್ಚುತ್ತವೆ. ಸಿಕ್ಕುವ ಅನೇಕ ಪ್ರತಿಗಳ ಸಹಾಯದಿಂದ ಕವಿಯ ಪಾಠವನ್ನು ಕಂಡುಹಿಡಿಯುವುದು ಗ್ರಂಥಸಂಸ್ಕರಣದ ಕೆಲಸ ಇದು 'C.I.D' ಕೆಲಸವಿದ್ದಂತೆ. ಒಂದು ಶಾಸ್ತ್ರವೂ ಹೌದು.

* * *

**ಕನ್ನಡ ವಿಷಯ ವಿಶ್ವಕೋಶ : ಕರ್ನಾಟಕ (ಪರಿಷ್ಕೃತ) ಸಂಪುಟ-೨**
**ಪುಟ ೧೧೩-೧೧೪**

"೧೯೦೬-೧೯೭೧. ಪ್ರಸಿದ್ಧ ವಿದ್ವಾಂಸರು, ಕನ್ನಡ ಸಾಹಿತ್ಯ, ಭಾಷೆ, ಗ್ರಂಥಸಂಪಾದನೆ -ಹೀಗೆ ಹಲವು ಕ್ಷೇತ್ರಗಳಲ್ಲಿ ಮೌಲಿಕಕೆಲಸ ಮಾಡಿದ್ದಾರೆ. ಇವರ ಪೂರ್ಣ ಹೆಸರು ದೊಡ್ಡಬೆಲೆ ಲಕ್ಷ್ಮೀನರಸಿಂಹಾಚಾರ್ ಎಂದು. ಇವರು ೨೭.೧೦.೧೯೦೬ ರಂದು ಚಿಕ್ಕನಾಯಕನಹಳ್ಳಿ ತಮ್ಮ ಮಾತಾಮಹ ಅಣ್ಣಾಸ್ವಾಮಿ ಅಯ್ಯಂಗಾರ್ಯರ ಮನೆಯಲ್ಲಿ ಹುಟ್ಟಿದರು. ಮನೆಯ ಸುಸಂಸ್ಕೃತ ವಿದ್ಯಾವಂತ ವಾತಾವರಣ ಇವರ ವ್ಯಕ್ತಿತ್ವದ ವಿಕಾಸಕ್ಕೆ ತುಂಬ ಪೋಷಣೆ ನೀಡಿತು. ಎಂಟ್ರೆನ್ಸ್ ಪರೀಕ್ಷೆಯನ್ನು ತುಮಕೂರಿನಲ್ಲಿ ಮುಗಿಸಿ, ಮುಂದಿನ ವಿದ್ಯಾಭ್ಯಾಸಕ್ಕಾಗಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿಗೆ ಸೇರಿದರು (೧೯೨೪). ಭೌತಶಾಸ್ತ್ರ ರಸಾಯನಶಾಸ್ತ್ರಗಳನ್ನು ಐಚ್ಛಿಕ ವಿಷಯವನ್ನಾಗಿ ಆಯ್ದುಕೊಂಡು ಆರ್ಟ್ಸ್ ವಿಭಾಗದಲ್ಲಿ ವ್ಯಾಸಂಗ ಮಾಡಿ, ಬಿ.ಎ. ಪರೀಕ್ಷೆಯನ್ನು ಮುಗಿಸಿದರು (೧೯೨೭). ಆ ಪರೀಕ್ಷೆಯಲ್ಲಿ, ಕನ್ನಡದಲ್ಲಿ ಹೆಚ್ಚು ಅಂಕಗಳನ್ನು ಪಡೆದದ್ದರಿಂದ ಚಿನ್ನದ ಪದಕ ಮತ್ತು ಬಹುಮಾನಗಳನ್ನು ಗಳಿಸಿದರು. ಅದೇ ವರ್ಷ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಆರಂಭವಾಗಿದ್ದ ಕನ್ನಡ ಎಂ.ಎ. ತರಗತಿಗೆ ಸೇರಿ ಎರಡು ವರ್ಷಗಳ ವ್ಯಾಸಂಗದ ಬಳಿಕ, ಪ್ರಥಮದರ್ಜೆ ಪ್ರಥಮ ಸ್ಥಾನಗಳೊಡನೆ ಎಂ.ಎ. ಪದವೀಧರರಾದರು (೧೯೨೯). ಅದೇ ವರ್ಷ ಮೈಸೂರು ವಿಶ್ವವಿದಾಯನಿಲಯದಿಂದ ಅದೇ ತಾನೇ ಏರ್ಪಾಡಾಗಿದ್ದ ಸಂಶೋಧನ ವಿದ್ಯಾರ್ಥಿವೇತನ ಪಡೆದುಕೊಂಡು, ವೀರಶೈವ ಸಾಹಿತ್ಯದ ಆರಂಭ ಕಾಲವನ್ನು ಕುರಿತು ಸಂಶೋಧನೆ ನಡೆಸಿದರು.

ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯಲ್ಲಿ ರೆಸಿಡೆಂಟ್ ಕನ್ನಡ ಪಂಡಿತರಾಗಿ ೧೯೩೦ರಲ್ಲಿ ಕೆಲಸಕ್ಕೆ ಸೇರಿದ ಆಚಾರ್ಯರು, ಅಲ್ಲಿದ್ದ ಎರಡು ವರ್ಷಗಳಲ್ಲಿ ಎರಡು ಪ್ರಾಚೀನ ಗ್ರಂಥಗಳ (ಸಕಲ ವೈದ್ಯಸಂಹಿತಾರ್ಣವ ಮತ್ತು ಕುಮಾರವ್ಯಾಸಭಾರತದ ಭೀಷ್ಮಪರ್ವ) ಸಂಪಾದನಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸಿದರು. ಆ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿರುವಾಗಲೇ ಮಹಾರಾಜ ಕಾಲೇಜಿನಲ್ಲಿಯೂ ಒಪ್ಪೊತ್ತಿನ ಕನ್ನಡ ಪಂಡಿತರಾಗಿ ಪಾಠ ಹೇಳುತ್ತಿದ್ದರು.

೧೯೩೨ರಲ್ಲಿ ಪೂರ್ಣಕಾಲದ ಪಂಡಿತರಾಗಿ ಮಹಾರಾಜ ಕಾಲೇಜಿಗೆ ಬಂದರು. ಅನಂತರ ೧೯೩೯ರಲ್ಲಿ, ಮೈಸೂರಿನ ಇಂಟರ್ ಮೀಡಿಯೆಟ್ ಕಾಲೇಜಿಗೆ (ಈಗಿನ ಯುವರಾಜ ಕಾಲೇಜಿಗೆ) ಬಂದು ಬಳಿಕ ೧೯೪೫ರಲ್ಲಿ ಉಪಪ್ರಾಧ್ಯಾಪಕ ಸ್ಥಾನಕ್ಕೆ ಬಡ್ತಿ ಪಡೆದು ಬೆಂಗಳೂರಿನ ಸೆಂಟ್ರಲ್ ಕಾಲೇಜಿಗೆ ಹೋದರು. ಮೂರು ವರ್ಷಗಳ ಮೇಲೆ ಮತ್ತೆ ಮಹಾರಾಜ ಕಾಲೇಜಿಗೆ ಹಿಂದಿರುಗಿ, ೧೯೫೪ ರವರೆಗೆ ಅಲ್ಲಿದ್ದು, ಆ ವರ್ಷ ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟಿನ ಪ್ರಧಾನ ಸಂಪಾದಕರಾಗಿ ಅಧಿಕಾರ ವಹಿಸಿಕೊಂಡು ಬೆಂಗಳೂರಿಗೆ ತೆರಳಿದರು. ೧೯೫೬ರಲ್ಲಿ ಪ್ರಾಧ್ಯಾಪಕ ಪದವಿಗೆ ಬಡ್ತಿ ಪಡೆದು, ಅಲ್ಲಿಂದ ಮಹಾರಾಜ ಕಾಲೇಜಿಗೆ ಮರಳಿದರು. ೩೧.೩.೧೯೬೨ರಲ್ಲಿ ಅಧ್ಯಾಪನ ವೃತ್ತಿಯಿಂದ ನಿವೃತ್ತರಾದರು. ಆದರೆ ಅಧ್ಯಯನ, ಸಂಶೋಧನ ಕಾರ್ಯಗಳು ಮಾತ್ರ ಇನ್ನೂ ವ್ಯಾಪಕಗೊಂಡವು. ೧೯೬೩ ರಿಂದ ಸುಮಾರು ಆರು ವರ್ಷಗಳ ಕಾಲ ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ಸಂಶೋಧನ ವಿದ್ವಾಂಸರಾಗಿದ್ದರು. ಆಗಲೇ ತೀ.ನಂ. ಶ್ರೀಕಂಠಯ್ಯನವರ ನಿಧನದಿಂದ ತೆರವಾದ ಕನ್ನಡ-ಕನ್ನಡ ನಿಘಂಟಿನ ಅಧ್ಯಕ್ಷಪದವಿಯನ್ನೂ ಪ್ರಧಾನಸಂಪಾದಕತ್ವವನ್ನೂ ವಹಿಸಿಕೊಂಡರು.

ಆಚಾರ್ಯರು ಮೈಸೂರು ವಿಶ್ವವಿದ್ಯಾನಿಲಯ, ವಿದ್ಯಾ ಇಲಾಖೆಗಳಲ್ಲಿಯೂ ಉಸ್ಮಾನಿಯ ಮತ್ತಿತರ ವಿಶ್ವವಿದ್ಯಾನಿಲಯಗಳಲ್ಲಿಯೂ ಬೇರೆ ಬೇರೆ ವಿದ್ಯಾಸಮಿತಿಗಳಲ್ಲಿಯೂ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ. ಕನ್ನಡ-ಕನ್ನಡ ನಿಘಂಟು ಯೋಜನೆಗೆ ಎ.ಆರ್. ಕೃಷ್ಣಶಾಸ್ತ್ರಿಗಳೂ ತೀ.ನಂ. ಶ್ರೀಕಂಠಯ್ಯನವರೂ ಅಧ್ಯಕ್ಷರಾಗಿದ್ದಾಗಲೂ ಅವರ ಅನಂತರದಲ್ಲಿಯೂ ಪ್ರಬಲವಾದ ಒತ್ತಾಸೆಯಾಗಿದ್ದು, ಶಕ್ತಿಯಾಗಿದ್ದು ಆ ಯೋಜನೆ ಸುವ್ಯವಸ್ಥಿತವಾಗಿಯೂ ಸುಭದ್ರವಾಗಿಯೂ ಮುನ್ನಡೆಯಲು ಬಹುವಾಗಿ ಶ್ರಮಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ಸಮಯದಲ್ಲಿ (೧೯೭೦) ಇವರ ಸಮಕ್ಷದಲ್ಲಿಯೇ ನಿಘಂಟಿನ ಮೊದಲನೆಯ ಸಂಪುಟ ಬಿಡುಗಡೆಯಾಯಿತು. ಶ್ರೀಯುತರು ೧೯೫೯-೬೨ರ ಅವಧಿಯಲ್ಲಿ ಪ್ರಬುದ್ಧ ಕರ್ಣಾಟಕದ ಪ್ರಧಾನ ಸಂಪಾದಕರಾಗಿದ್ದು, ಆ ಪತ್ರಿಕೆಯ ಬೆಳವಣಿಗೆಗೆ ಕೂಡ ಶ್ರಮವಹಿಸಿದರು.

ಆಚಾರ್ಯರು ಸಮರ್ಥ ಹಾಗೂ ಶ್ರದ್ಧಾವಂತ ಅಧ್ಯಾಪಕರು; ಶ್ರೇಷ್ಠ ದರ್ಜೆಯ ಹಾಗೂ ಬಹುಮುಖ ವ್ಯಾಸಂಗದ ವಿದ್ವಾಂಸರು. ಸು. ೪೦ ವರ್ಷಗಳಿಗೆ ಮೇಲ್ಪಟ್ಟಷ್ಟು ಕಾಲ ಕನ್ನಡ ಭಾಷೆ ಸಾಹಿತ್ಯಗಳ ಏಳಿಗೆಗೆ ಇವರು ತಮ್ಮ ಶಕ್ತಿಸರ್ವಸ್ವವನ್ನೂ ವಿನಿಯೋಗಿಸಿದರು. ಕನ್ನಡ ಭಾಷೆ ಸಾಹಿತ್ಯಗಳ ಏಳಿಗೆಯನ್ನು ತಮ್ಮ ಬದುಕಿನ ದೀಕ್ಷೆಯನ್ನಾಗಿ ಗ್ರಹಿಸಿ, ಅವುಗಳಲ್ಲಿ ತಕ್ಕ ಪ್ರೌಢಿಮೆಯನ್ನು ಮೊದಲು ತಾವು ಗಳಿಸಿಕೊಂಡು ಅನಂತರ ಚಿಂತನ ವಿಚಾರ ವಿಮರ್ಶೆ ಸಿದ್ಧಾಂತಗಳ ಫಲವನ್ನು ಹಲವು ವರ್ಷಗಳವರೆಗೆ ತಮ್ಮ ಹಲವಾರು ವಿದ್ಯಾರ್ಥಿಗಳಿಗೆ ಅಧ್ಯಾಪನದ ಮೂಲಕವಾಗಿ ಕೈಗೂಡಿಸಿದರು. ಇದರ ಜೊತೆಗೆ ಆಗಿಂದಾಗ್ಗೆ ಲೇಖನಗಳ ಮೂಲಕವೂ ಕೃತಿಗಳ ಮೂಲಕವೂ ಅವುಗಳಿಗೆ ನಿಷ್ಕೃಷ್ಟ ರೂಪವನ್ನು ಕೊಟ್ಟು ಕನ್ನಡ ಸಾಹಿತ್ಯದ ಶಕ್ತಿಯನ್ನೂ ಸಂಪತ್ತನ್ನೂ ಬೆಳೆಸಿದರು. ಭಾಷೆ, ವ್ಯಾಕರಣ, ನಿಘಂಟು, ಗ್ರಂಥಸಂಪಾದನೆ, ಛಂದಸ್ಸು, ಶಾಸನಗಳು, ಪ್ರಾಚೀನ ಸಾಹಿತ್ಯ -ಇವನ್ನು ತಮ್ಮ ಕಾರ್ಯಕ್ಷೇತ್ರದ ವಿಷಯಗಳನ್ನಾಗಿ ಹಿಡಿದು ಆ ಒಂದೊಂದು ವಿಷಯದಲ್ಲೂ ವಿರಾಮಶೀಲವಾದ ಗಾಢವಾದ ಸಂಶೋಧನಗಳ ಮೂಲಕ ಕನ್ನಡ ವಿದ್ವತ್ತನ್ನು ಬಲಪಡಿಸಿದರು. ಕನ್ನಡ ಸಾಹಿತ್ಯದ ಮೂಲಾಧಾರಗಳನ್ನು ಕಟ್ಟಿದರು. ಇವರ ಬೆಲೆಯುಳ್ಳ ಮೌಲಿಕ ರಚನೆಗಳು ನಿರಂತರ ಅಧ್ಯಯನ ಅಧ್ಯಾಪನಗಳ ವೈಜ್ಞಾನಿಕ ದೃಷ್ಟಿಯ ಅನುಸಂಧಾನ ಸಂಯೋಜನೆಗಳ ಫಲವಾಗಿ ಮೂಡಿಬಂದವು. ಜ್ಞಾನೋಪಾಸನೆಯೇ ಜೀವಿತಸಾರ್ಥಕ್ಯರೆಂದೂ ಸಾಹಿತ್ಯೋಜ್ಜೀವನವೇ ಜೀವನಧ್ಯೇಯವೆಂದೂ ನಂಬಿ ಇವರು ಕೃತಿರಚನೆ ಮಾಡುತ್ತಿದ್ದುದರಿಂದ ಇವರ ರಚನೆಗಳಲ್ಲಿ ಇವರ ಶುದ್ಧವಾದ ಅಭಿರುಚಿ, ಗಾಢವಾದ ಸಾಮರ್ಥ್ಯ, ನಿಷ್ಕೃಷ್ಟವಾದ ವಿಚಾರಧಾರೆ, ಪ್ರಖರವಾದ ವಿಶ್ಲೇಷಕಪಟುತ್ವ, ವಸ್ತುನಿಷ್ಠೆಯ ಛಲಗಾರಿಕೆ, ಚಿರಕಾಲಿಕ ಸತ್ತ್ವ, ಅನಂತಕಾಂತಿ -ಈ ಗುಣಗಳೆಲ್ಲ ಮೇಲಾಗಿ ಪ್ರತಿಫಲಿಸಿ ತೋರುತ್ತಿದ್ದವು.

ಆಚಾರ್ಯರು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಸುಮಾರು ೭೦-೮೦ ಸಂಶೋಧನ ಲೇಖನಗಳನ್ನು ಬರೆದು ನಾಡಿನ ಬೇರೆ ಬೇರೆ ವಿದ್ವತ್ ಪತ್ರಿಕೆಗಳಲ್ಲಿ ಪ್ರಕಟಿಸಿದ್ದರು. ಇವುಗಳಲ್ಲಿ ಬಹುಪಾಲು ಕನ್ನಡ ಭಾಷೆ ಸಾಹಿತ್ಯಗಳ

ಮುಖ್ಯವೂ ಜಟಿಲವೂ ಆದ ಸಮಸ್ಯೆಗಳನ್ನೂ ವಿಷಯಗಳನ್ನೂ ಕುರಿತವಾಗಿವೆ. ಪ್ರಾಚೀನ ಸಾಹಿತ್ಯ, ಆ ಸಾಹಿತ್ಯದ ವಿಮರ್ಶೆ ಮತ್ತು ಚರಿತ್ರೆ, ಗ್ರಂಥಸಂಪಾದನೆ, ಶಬ್ದಾರ್ಥ ವಿಚಾರ –ಇವು ಇವರಿಗೆ ಬಹು ಮೆಚ್ಚಿಗೆಯ ವಿಷಯಗಳು. ಸಕಲವೈದ್ಯಸಂಹಿತಾ ಸಾರಾರ್ಣವ, ಭೀಷ್ಮಪರ್ವ, ಪಂಪರಾಮಾಯಣ ಸಂಗ್ರಹ, ವಡ್ಡಾರಾಧನೆ, ಸಿದ್ಧರಾಮ ಚರಿತೆಯ ಸಂಗ್ರಹ, ಶಬ್ದಮಣಿದರ್ಪಣ, ಗೋವಿನ ಹಾಡು –ಇವು ಇವರಿಂದ ಸಂಪಾದಿತವಾದ ಗ್ರಂಥಗಳು. ಇವುಗಳಲ್ಲದೆ ಇತರರೊಡನೆ ಸೇರಿ ಸಿದ್ಧರಾಮಚಾರಿತ್ರ, ಸುಕುಮಾರಚರಿತ್ರೆ –ಇವನ್ನು ಸಂಪಾದಿಸಿದ್ದಾರೆ. ಇವೆಲ್ಲ ಬಹುಮಟ್ಟಿಗೆ ಶಾಸ್ತ್ರೀಯವಾದ ಗ್ರಂಥಸಂಪಾದನೆಯ ನಿಯಮಗಳಿಗೆ ಅನುಸಾರವಾಗಿ ಸಂಪಾದಿತವಾಗಿವೆಯಲ್ಲದೆ, ವಿದ್ವತ್ಪೂರ್ಣವಾದ ಉಪೋದ್ಘಾತ, ಟಿಪ್ಪಣಿಗಳು, ಶಬ್ದಕೋಶ ಮೊದಲಾದ ಸಹಾಯಕ ಸಾಮಗ್ರಿಗಳನ್ನೂ ಒಳಗೊಂಡಿವೆ. ಶಬ್ದವಿಹಾರವೆಂಬುದು ಪ್ರಾಚೀನ ಸಾಹಿತ್ಯದ ಶಬ್ದಾರ್ಥವಿಚಾರವನ್ನು ಕುರಿತ ಇವರ ಗ್ರಂಥ, ಕನ್ನಡ ಗ್ರಂಥಸಂಪಾದನೆ ಎಂಬುದು ಗ್ರಂಥಸಂಪಾದನ ಶಾಸ್ತ್ರವನ್ನೂ ಕನ್ನಡ ಗ್ರಂಥಸಂಪಾದನೆಯ ನಾನಾ ಮುಖಗಳನ್ನೂ ಒಳಗೊಂಡಿರುವ ಅತ್ಯುಪಯುಕ್ತವಾದ ಶಾಸ್ತ್ರಗ್ರಂಥ. ಪಂಪಭಾರತ ದೀಪಿಕೆ ಎಂಬುದು ಆ ಗ್ರಂಥಕ್ಕೆ ಸವಿವರವಾದ ಹಾಗೂ ಬೆಲೆಯುಳ್ಳ ಟಿಪ್ಪಣಿಗಳನ್ನು ಕೊಟ್ಟಿರುವ ಸಹಾಯ ಗ್ರಂಥ, ಪೀಠಿಕೆಗಳು, ಲೇಖನಗಳು ಎಂಬ ಬೃಹದ್ಗ್ರಂಥ ಆಚಾರ್ಯರ ಸಂಶೋಧನ ಮತ್ತು ಇತರ ಲೇಖನಗಳ ಸಮುಚ್ಚಯ.

ಕನ್ನಡ ಭಾಷಾಸಾಹಿತ್ಯಗಳಿಗೆ, ಮುಖ್ಯವಾಗಿ ಸಂಶೋಧನೆ ಸಂಪಾದನೆ ಶಾಖೆಗಳಿಗೆ ಸಲ್ಲಿಸಿದ ವಿಶೇಷ ಸೇವೆಯಿಂದಾಗಿ ಆಚಾರ್ಯರು ೧೯೬೦ರಲ್ಲಿ ಬಿದರೆಯಲ್ಲಿ ನಡೆದ ೪೧ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾದರು. ಆ ಸಂದರ್ಭದ ಸವಿನೆನಪಿಗಾಗಿ ಇವರ ವ್ಯಕ್ತಿತ್ವ ವಿದ್ವತ್ತುಗಳನ್ನು ಕುರಿತ ಜ್ಞಾನೋಪಾಸಕ ಎಂಬ ಅಭಿನಂದನ ಗ್ರಂಥವನ್ನು ಇವರಿಗೆ ಅರ್ಪಿಸಲಾಯಿತು. ಹೀಗೆಯೇ ೧೯೬೭ರಲ್ಲಿ ಉಪಾಯನ ಎಂಬ ಇನ್ನೊಂದು ಬೃಹತ್ಪ್ರಮಾಣದ ಗ್ರಂಥವನ್ನೂ ಸನ್ಮಾನಪೂರ್ವಕವಾಗಿ ಅರ್ಪಿಸಲಾಯಿತು. ೧೯೬೭ರಲ್ಲಿ ಮೈಸೂರು ಸರ್ಕಾರ ಇವರಿಗೆ ರಾಜ್ಯಪ್ರಶಸ್ತಿಯನ್ನಿತ್ತು ಗೌರವಿಸಿತು. ೧೯೬೯ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಇವರ ಅಪಾರವಾದ ವಿದ್ವತ್ತನ್ನು ಮನ್ನಿಸಿ ಗೌರವ ಡಿ.ಲಿಟ್ ಪದವಿಯನ್ನು ನೀಡಿತು."

■

# ನನ್ನ ಪೂಜ್ಯಗುರು
# ಪ್ರೊ. ತೀ.ನಂ. ಶ್ರೀಕಂಠಯ್ಯನವರು

**ಕ**ನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಸಾರಸರ್ವಸ್ವದಂತಿದ್ದ ಆಚಾರ್ಯ ತೀ.ನಂ. ಶ್ರೀಕಂಠಯ್ಯನವರು ಇನ್ನಿಲ್ಲವಾದರು. ಪ್ರಾಚೀನ ಅರ್ವಾಚೀನ ಸಾಹಿತ್ಯದ ಸಮನ್ವಯ ಮೂರ್ತಿ ಕಣ್ಮರೆಯಾಯಿತು. ಲೌಕಿಕಾಲೌಕಿಕಗಳ ಸಮ್ಮಿಳನದ ರಸಸಿಂಧು ಅದೃಶ್ಯವಾಯಿತು.

ಸುಮಾರು ಇಪ್ಪತ್ತು ವರ್ಷಗಳ ಹಿಂದಿನ ಮಾತು. ನಾನು ಬೆಂಗಳೂರಿನ ಇಂಟರ್ ಮೀಡಿಯಟ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದೆ. ಆಗ ತೀ.ನಂ. ಶ್ರೀಕಂಠಯ್ಯನವರು ಆ ಕಾಲೇಜಿನಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದರು. ರಾಘವಾಂಕನ ಹರಿಶ್ಚಂದ್ರ ಕಾವ್ಯವನ್ನು ನಮಗೆ ಪಾಠಮಾಡುತ್ತಿದ್ದರು. ಒಂದು ದಿನ ಆ ಪಾಠ ಮಾಡುತ್ತಿದ್ದಾಗ ಆ ಕಾವ್ಯದಲ್ಲಿ ಬಂದ ಒಂದು ಶಬ್ದಕ್ಕೆ ಸರಿಯಾದ ಅರ್ಥ ಗೊತ್ತಿಲ್ಲವೆಂದರು. ಕೂಡಲೇ ಆ ಶಬ್ದಕ್ಕೆ ನನಗೆ ತಿಳಿದಿದ್ದ ನಮ್ಮ ಕಡೆಯ ಅರ್ಥವನ್ನು ಹೇಳಿದೆ. ಅವರು ನಾನು ಹೇಳಿದ ಅರ್ಥವನ್ನು ಗುರುತು ಮಾಡಿಕೊಂಡರು. ಅಲ್ಲಿಗೆ ನನ್ನ ಅವರ ಗುರುಶಿಷ್ಯ ಸಂಬಂಧ ತಾತ್ಕಾಲಿಕವಾಗಿ ತಪ್ಪಿಹೋಯಿತು. ಅವರು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಪ್ರಾಧ್ಯಾಪಕರಾಗಿ ಹೊರಟು ಹೋದರು. ನಾನು ಇತ್ತ ಮೈಸೂರು ಮಹಾರಾಜ ಕಾಲೇಜನ್ನು ಸೇರಿ ಕನ್ನಡ ಎಂ.ಎ. ಪದವಿಯನ್ನು ಮುಗಿಸಿದೆನು. ಮತ್ತೆ ಎಂ.ಎ. ಪದವಿಯ 'viva-voce' ಪರೀಕ್ಷೆಯಲ್ಲಿ ನನ್ನ ಗುರುಗಳ ಸಂದರ್ಶನವಾಯಿತು. ಆ ವೇಳೆಗೆ ಅವರು ನಾನು ಅವರ ವಿದ್ಯಾರ್ಥಿಯಾಗಿದ್ದೆನೆಂಬುದನ್ನೇ ಮರೆತುಬಿಟ್ಟಂತೆ ಕಂಡಿತು. ಪರೀಕ್ಷೆಯಲ್ಲಿ ನನ್ನನ್ನು ಹಿಗ್ಗಿಸಿ ಜಗ್ಗಿಸಿ ನೋಡಿದರು.

ಕಾಲಕಳೆಯಿತು. ನನ್ನ ವ್ಯಾಸಂಗ ಮುಗಿದ ಮೇಲೆ ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ಉದ್ಯೋಗವನ್ನು ಕೈಕೊಂಡೆ. ಆಗ ನಾನು ಸಂಪಾದಿಸಿ ಪ್ರಕಟಿಸಿದ್ದ ಎರಡು ಸಾಂಗತ್ಯ ಗ್ರಂಥಗಳನ್ನು ಧಾರವಾಡಕ್ಕೆ ಅವರಿಗೆ ಕಳಿಸಿಕೊಟ್ಟೆ. ಅದಕ್ಕೆ ಅವರಿಂದ ಬಂದ ಉತ್ತರ ಹೀಗಿತ್ತು: "ನೀವು ಅಪ್ರಕಟಿತವಾದ ಈ ಸಾಂಗತ್ಯ ಗ್ರಂಥಗಳನ್ನು ಶುದ್ಧವಾಗಿಯೂ, ಸುಂದರವಾಗಿಯೂ ಪ್ರಕಟಿಸುತ್ತಿರುವುದು ನನಗೆ ಸಂತೋಷವನ್ನುಂಟುಮಾಡಿದೆ. ನಿಮ್ಮ ಉತ್ಸಾಹ ಇದೇ ರೀತಿ ಮುಂದುವರೆಯಲಿ. ನಿಮಗೆ ನನ್ನ ಆಶೀರ್ವಾದಗಳು."

ಇದಾದ ಕೆಲವು ವರ್ಷಗಳ ಮೇಲೆ ನನ್ನ ಮತ್ತೊಬ್ಬ ಪೂಜ್ಯ ಗುರುಗಳಾದ ಪ್ರೊ. ಡಿ.ಎಲ್. ನರಸಿಂಹಾಚಾರ್ಯರು ಕನ್ನಡ ಸಾಹಿತ್ಯ ಪರಿಷತ್ತು ಕೈಕೊಂಡಿರುವ ಕನ್ನಡ ನಿಘಂಟಿನ ಕೆಲಸಕ್ಕೆ ನನ್ನನ್ನು ಬರಮಾಡಿಕೊಂಡರು. ನಿಘಂಟಿನ ಕೆಲಸದಲ್ಲಿ ಕೆಲವು ವರ್ಷಗಳು ಕಳೆದ ಮೇಲೆ ಪ್ರೊ. ಡಿ.ಎಲ್. ನರಸಿಂಹಾಚಾರ್ಯರು ಮೈಸೂರಿಗೆ ಹಿಂತಿರುಗಿದರು. ಅದಾದ ಮೇಲೆ ನಿಘಂಟು ಸಂಪಾದಕ ಸಮಿತಿಯ ಅಧ್ಯಕ್ಷರಾಗಿದ್ದ ಡಾ. ಎ.ಆರ್. ಕೃಷ್ಣಶಾಸ್ತ್ರಿಗಳವರು ಆ ಕೆಲಸವನ್ನು ಬಿಟ್ಟುಕೊಟ್ಟ ಮೇಲೆ ಶ್ರೀ ತೀ.ನಂ.ಶ್ರೀ. ಅವರು ಸಮಿತಿಯ ಅಧ್ಯಕ್ಷರಾದರು. ಕೆಲವು ವರ್ಷಗಳಾದ ಮೇಲೆ ನಾನು ಸಂಪಾದಕನಾದೆ. ಸಂಪಾದಕನಾದ ಮೇಲೆ ನನ್ನ ಅವರ ಸಂಪರ್ಕ ನಿಕಟವಾಯಿತು.

ನಿಘಂಟಿನ ರೂಪರೇಖೆಗಳನ್ನು ನಿರ್ಧರಿಸುವಲ್ಲಿ ನನಗೂ ಅವರಿಗೂ ಹಲವಾರು ಸಲ ಜಿಜ್ಞಾಸೆ ನಡೆಯುತ್ತಿತ್ತು. ಒಮ್ಮೊಮ್ಮೆ ನಿಯಮಗಳನ್ನು ಬಲವಾಗಿ ಹಿಡಿದುಕೊಂಡು ನಾನು ವಾದಮಾಡುತ್ತಿದ್ದೆ. ಆಗ ಅವರು "ನಿನಗೆ ಗಾಂಪರೊಡೆಯರ ಕತೆ ಗೊತ್ತೇನಯ್ಯಾ?" ಎನ್ನುತ್ತಿದ್ದರು. "ಇಲ್ಲ ಅದೇನು ಸಾರ್" ಎಂದೆನ್ನುತ್ತಿದ್ದೆ. ಅದಕ್ಕೆ ಅವರು "ಒಬ್ಬ ಗುರು ಇದ್ದನಂತೆ. ಆತನಿಗೆ ಕೆಲವರು ಶಿಷ್ಯರಿದ್ದರಂತೆ. ಅವರು ಗುರುಗಳು ಹೇಳಿದ ಕೆಲಸಗಳನ್ನು ನಿಯಮದಂತೆ ಮಾಡುತ್ತಿದ್ದರಂತೆ. ಒಮ್ಮೆ ಗುರುಗಳು ಕೆಳಗೆ ಬಿದ್ದುಹೋದರಂತೆ. ಆದರೆ ಗುರುಗಳು ಕೆಳಗೆ ಬಿದ್ದಾಗ ಮೇಲಕ್ಕೆ ಎತ್ತಬೇಕೆಂದು ಅವರು ಶಿಷ್ಯರಿಗೆ ಹೇಳಿಕೊಟ್ಟಿರಲಿಲ್ಲವಂತೆ. ಕೆಳಗೆ ಬಿದ್ದಿದ್ದ ಗುರುಗಳು ಎಷ್ಟು ಕೇಳಿಕೊಂಡರೂ ಶಿಷ್ಯರು ಅವರನ್ನು ಮೇಲಕ್ಕೆ ಎತ್ತಲಿಲ್ಲವಂತೆ. ನೀವು ಕೆಳಗೆ ಬಿದ್ದಾಗ ನಿಮ್ಮನ್ನು ಎತ್ತಬೇಕು ಎಂದು ನಮಗೆ ಹೇಳಿಕೊಟ್ಟಿಲ್ಲ ಗುರುಗಳೇ" ಎಂದರಂತೆ. ಈ ಕತೆಯನ್ನು ಆಗಾಗ ನಮಗೆ ಹೇಳುತ್ತಿದ್ದರು. ಇಬ್ಬರೂ ನಕ್ಕು ಸಮಾಧಾನವನ್ನು ತಂದುಕೊಳ್ಳುತ್ತಿದ್ದೆವು.

ಶ್ರೀ ತೀ.ನಂ.ಶ್ರೀ. ಅವರ ಕಾರ್ಯಕ್ರಮಗಳು ಬಹುಮಟ್ಟಿಗೆ ನನ್ನ ಮೂಲಕವೇ ನೆರವೇರುತ್ತಿದ್ದುವು. ಒಮ್ಮೆ ಅವರು ದೆಹಲಿಗೆ ಪ್ರಯಾಣ ಮಾಡಬೇಕಾಗಿತ್ತು. ಅದಕ್ಕೆ ಸಂಬಂಧಪಟ್ಟ ವ್ಯವಸ್ಥೆಯನ್ನು ಮಾಡಿದ್ದೆ. ಅವರು ಸಂಪಾದಕ ಸಮಿತಿಯ ಸಭೆಗೆ ಬರುವಾಗ ರಾಮಮೋಹನ್ ಕಂಪನಿಗೆ ಹೋಗಿ ತಮ್ಮ ಪ್ರಯಾಣದ ವ್ಯವಸ್ಥೆ ಬಗ್ಗೆ ವಿಚಾರಿಸಿದರಂತೆ. ಅದಕ್ಕೆ ಅವರು 'ನಿಮ್ಮ ಅಳಿಯ ಆಗಲೇ ಟಿಕೆಟ್ ತರಿಸಿಕೊಂಡು ಬಿಟ್ಟರು' ಎಂದರಂತೆ. ಅಲ್ಲಿಂದ ನೇರವಾಗಿ ಕಚೇರಿಗೆ ಬಂದರು. ನನ್ನನ್ನು ಕಂಡಕೂಡಲೇ "ಏನಪ್ಪಾ ನಿನ್ನನ್ನು ನನ್ನ ಅಳಿಯ ಮಾಡಿಕೊಂಡು ಬಿಟ್ಟಿದ್ದಾರಲ್ಲ. ಹೌದು ಒಂದು ರೀತಿಯಲ್ಲಿ ನೀನು ಅಳಿಯನೇ. ನಿಘಂಟನ್ನು ನಿನಗೆ ಕೊಟ್ಟು ಮದುವೆ ಮಾಡಿದ್ದೇನೆ" ಎಂದು ವಿನೋದವಾಗಿ ನುಡಿದರು. ಈ ರೀತಿ ನನ್ನನ್ನು ನಕ್ಕು ನಲಿಸಿದ ಪ್ರಸಂಗಗಳು ಹಲವಾರು.

ಶ್ರೀ ತೀ.ನಂ.ಶ್ರೀ. ಅವರ ಬರವಣಿಗೆ ನಿಷ್ಕೃಷ್ಟವಾದದ್ದು, ಸಂದೇಹಕ್ಕೆ ಎಡೆಯಿಲ್ಲದಂತಹುದು. ಯಾವ ಅಂಶವನ್ನೇ ಆಗಲಿ ಸ್ಪಷ್ಟವಾಗಿ, ಖಚಿತವಾಗಿ, ನಿರ್ದುಷ್ಟವಾಗಿ ನಿರೂಪಿಸಬೇಕೆಂಬುದು ಅವರ ದೃಷ್ಟಿ. ಸಾಮಾನ್ಯವಾದ ಬಡಪೆಟ್ಟಿಗೆ ಒಪ್ಪುವಂತಹ ಸ್ವಭಾವ ಅವರದಲ್ಲ. ಈ ಅಚ್ಚುಕಟ್ಟುತನ, ನಿಷ್ಕೃಷ್ಟತೆ, ಪ್ರಾಮಾಣಿಕತೆ ಇವು ಅವರಲ್ಲಿ ಸಾಹಿತ್ಯದಲ್ಲಿ ಮಾತ್ರವಲ್ಲದೆ ಅವರ ಜೀವನದ ಪ್ರತಿಯೊಂದು ಅಂಶದಲ್ಲಿಯೂ ಕಂಡುಬರುತ್ತಿದ್ದವು.

ಕನ್ನಡ ಸಾರಸ್ವತ ಪ್ರಪಂಚದ ಪ್ರಥಮ ಶ್ರೇಣಿಯ ಮೇಧಾವಿಗಳೂ, ವಿದ್ವನ್ಮಣಿಗಳೂ, ಉದ್ದಾಮ ಸಾಹಿತಿಗಳೂ, ಉತ್ತಮ ಸಂಶೋಧಕರೂ, ಭಾಷಾಶಾಸ್ತ್ರಜ್ಞರೂ ಆಗಿದ್ದ ಪ್ರೊ. ತೀ.ನಂ.ಶ್ರೀ. ಅವರು ಇನ್ನಿಲ್ಲವಾದರು. ಆದರೆ ಅವರ ಚಿರಂತನ ಚೇತನ ನನ್ನ ಅಂತರಂಗದಲ್ಲಿ ಸದಾ ಸಂಚರಿಸುತ್ತಿದೆ. ಅವರ ಮಾರ್ಗದರ್ಶನದಲ್ಲಿ ಸದಾ ಮುಂದುವರಿಯುವಂತೆ ಪ್ರೇರೇಪಿಸುತ್ತಿದೆ. ಅವರು ನಡೆದ ದಾರಿಯಲ್ಲಿ ನಡೆದು ಅವರು ಮಾಡಬೇಕೆಂದಿದ್ದ ಕಾರ್ಯಗಳನ್ನು ಮುಂದುವರಿಸಿ ಮುಗಿಸಿದಲ್ಲಿ ನಾವು ಕೃತಕೃತ್ಯರಾಗುತ್ತೇವೆ; ಅವರ ಆತ್ಮಕ್ಕೆ ಶಾಂತಿ ಲಭಿಸುತ್ತದೆ.

ನನ್ನ ಮೆಚ್ಚಿನ ಪೂಜ್ಯಗುರುಗಳ ನಿಧನದಿಂದ ವೈಯಕ್ತಿಕವಾಗಿ ನನಗೆ ಅಪಾರವಾದ ನಷ್ಟವಾಗಿದೆ. ನಮ್ಮ ಕೋಶದ ಶ್ವಾಸವೇ ಹೋದಂತಾಗಿದೆ. ನಾನು ಅವರ ವಿದ್ಯಾರ್ಥಿಯಾಗಿ ಅವರಿಂದ ಕಲಿತದ್ದು ಸ್ವಲ್ಪ; ಆದರೆ ನಿಘಂಟಿನ ಸಂಪಾದಕನಾಗಿ ಕಲಿತದ್ದು ಅಪಾರ. ನನ್ನ ಕೆಲಸಕಾರ್ಯಗಳನ್ನು ಮನಸಾರೆ ಮೆಚ್ಚಿಕೊಂಡು ನನ್ನನ್ನು ಸದಾ ಸನ್ಮಾರ್ಗದತ್ತ ಪ್ರವೃತ್ತಗೊಳಿಸುತ್ತಿದ್ದ ನನ್ನ ಗುರುವಿಗೆ ಮನದಲ್ಲಿಯೇ ಮಣಿದು ಮೌನವಾಗಿರುವುದೇ ಮಹಾಮಂಗಲ. ಹಿಂತಿಲ್ಲದ ಗುರು ಮುಂಬಾರದ ಗುರು ಎಂದೆಂದಿಗೂ ನೀನೇ ನನ್ನ ಗುರು. ಇದೋ ನಿನಗೆ ನನ್ನ ಅನಂತ ಪ್ರಣಾಮಗಳು.

■

# ಡಾ. ಎಸ್.ಸಿ. ನಂದೀಮಠ : ಬದುಕು-ಬರಹ

**ಡಾ.** ಶಿವಲಿಂಗಯ್ಯ ಚೆನ್ನಬಸವಯ್ಯ ನಂದೀಮಠ ಅವರು ಇಪ್ಪತ್ತನೆಯ ಶತಮಾನ ಕಂಡ ಅಪೂರ್ವ ವಿದ್ವಾಂಸರಲ್ಲಿ ಪ್ರಮುಖರು. ಸಂಸ್ಕೃತ ಭಾಷೆಯಲ್ಲಿ ಸ್ನಾತಕೋತ್ತರ ಎಂ.ಎ. ಪದವಿಯನ್ನು ಪಡೆದಿದ್ದರು. ಜೊತೆಗೆ ಕನ್ನಡ, ಪಾಲಿ, ಪ್ರಾಕೃತ, ಇಂಗ್ಲಿಷ್ ಭಾಷೆಗಳಲ್ಲಿ ಪ್ರಭುತ್ವವನ್ನು ಹೊಂದಿದ್ದರು. ಅಲ್ಲದೆ ಭಾರತೀಯ ಧರ್ಮ, ಇತಿಹಾಸ, ತತ್ವಜ್ಞಾನ, ಭಾಷಾಶಾಸ್ತ್ರ, ಪ್ರಾಚ್ಯಸಂಶೋಧನೆ, ಶಾಸನಶಾಸ್ತ್ರ ಮೊದಲಾದ ವಿಷಯಗಳಲ್ಲಿಯೂ ಅಸಾಧಾರಣ ಪಾಂಡಿತ್ಯವನ್ನೂ ಸಂಪಾದಿಸಿದ್ದರು. ಡಾ. ನಂದೀಮಠ ಅವರು ಸಾಹಿತಿಗಳಾಗಿ ಸಂಶೋಧಕರಾಗಿ ಶಿಕ್ಷಣತಜ್ಞರಾಗಿ ಅತ್ಯಂತ ಮಹತ್ತರವಾದ ಕಾರ್ಯಗಳನ್ನು ನಿರ್ವಹಿಸಿದ್ದಾರೆ. ಅಷ್ಟೇ ಅಲ್ಲದೆ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವಲ್ಲಿ ಮಹತ್ತರವಾದ ಪಾತ್ರವನ್ನು ಪ್ರದರ್ಶಿಸಿದ್ದಾರೆ. ಈ ಎಲ್ಲ ಪ್ರತಿಷ್ಠಿತ ಲೋಕೋತ್ತರ ಕಾರ್ಯಗಳಿಂದ ಡಾ. ನಂದೀಮಠ ಅವರ ಹೆಸರು ಕರ್ನಾಟಕ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ನಿಲ್ಲುವಂತಹುದಾಗಿದೆ. ಇಂತಹ ಶಾಶ್ವತ ಕಾರ್ಯಗಳನ್ನು ರೂಪಿಸುವಲ್ಲಿ ನಿರ್ವಹಿಸುವಲ್ಲಿ ಅವರಿಗೆ ಲಭ್ಯವಾದ ಸಮಯ ಸಂದರ್ಭ ಸನ್ನಿವೇಶಗಳನ್ನೂ ಡಾ. ನಂದೀಮಠರ ಪೂರ್ವಿಕರ ಮನೆತನದ ಪೂರ್ವಾಪರಗಳನ್ನೂ ಇತಿವೃತ್ತಗಳನ್ನೂ ಅವಲೋಕಿಸುವುದು ಅಗತ್ಯವಾಗಿದೆ, ಅನಿವಾರ್ಯವಾಗಿದೆ.

ಬೆಳಗಾಂ ಜಿಲ್ಲೆಯ ಗೋಕಾಕ ತಾಲ್ಲೂಕಿನ ನಂದಿ ಎಂಬ ಗ್ರಾಮದಲ್ಲಿ ಡಾ. ನಂದೀಮಠರ ತಂದೆ, ತಾತ, ಮುತ್ತಾತಂದಿರು ವಾಸವಾಗಿದ್ದರು. ಅವರ ಮುತ್ತಾತಂದಿರು ಚೆನ್ನಬಸವಯ್ಯನವರು. ಅವರು ರೇಷ್ಮೆ ವ್ಯಾಪಾರವನ್ನು ಮಾಡುತ್ತಿದ್ದರು. ಅವರಿಗೆ ಬಸವಲಿಂಗಯ್ಯ ಮತ್ತು ಶಿವಲಿಂಗಯ್ಯ ಎಂಬ ಇಬ್ಬರು ಮಕ್ಕಳು. ಬಸವಲಿಂಗಯ್ಯನವರ ಎರಡನೆಯ ಮಗ ಚೆನ್ನಬಸವಯ್ಯ. ಈ ಚೆನ್ನಬಸವಯ್ಯ ಅವರ ಮೂರನೆಯ ಮಗ ಡಾ. ನಂದೀಮಠ.

ಡಾ. ನಂದೀಮಠ ಅವರ ಮನೆತನದವರು ರೇಷ್ಮೆವ್ಯಾಪಾರವನ್ನು ಮಾಡುತ್ತಿದ್ದರು. ಪ್ರಾಚೀನ ಆಚಾರ-ವಿಚಾರಗಳಲ್ಲಿ ತುಂಬ ನಿಷ್ಠೆಯುಳ್ಳವರಾಗಿದ್ದರು. ವೀರಶೈವ ಧರ್ಮಸಾಹಿತ್ಯ ಸಂಸ್ಕೃತಿಗಳಲ್ಲಿ ಅಪಾರ ಆಸಕ್ತಿಯುಳ್ಳವರಾಗಿದ್ದರು. ಈ ಪರಿಸರ ಡಾ. ನಂದೀಮಠರ ಮನಸ್ಸಿನ ಮೇಲೆ ವಿಶೇಷ ಪ್ರಭಾವವನ್ನು ಬೀರಿತು.

ಚೆನ್ನಬಸವಯ್ಯನವರು ರೇಷ್ಮೆಯನ್ನು ವಿದೇಶಗಳಿಂದ ತರಿಸಿಕೊಂಡು ಸೀರೆಗಳನ್ನು ತಯಾರಿಸಿ ದೇಶ-ವಿದೇಶಗಳಲ್ಲಿ ಮಾರುವ ವಹಿವಾಟು ನಡೆಸುತ್ತಿದ್ದರು. ಅವರು ರೇಷ್ಮೆ ವ್ಯಾಪಾರಕ್ಕೆ ಹಲವಾರು ಕಡೆ ಹೋಗಿಬರುವಾಗ ಪುಣೆಯಲ್ಲಿ ಆಗಿಂದಾಗ್ಯೆ ತಂಗುತ್ತಿದ್ದರು. ಪುಣೆಯ ಸಾಂಸ್ಕೃತಿಕ ವಾತಾವರಣವನ್ನು ಅಲ್ಲಿ ನಡೆಯುತ್ತಿದ್ದ ಸಂಸ್ಕೃತ ಪಾಠಶಾಲೆಗಳ ಕಾರ್ಯವಿಧಾನವನ್ನೂ ಬಹಳವಾಗಿ ಮೆಚ್ಚಿಕೊಂಡಿದ್ದರು. ತಮ್ಮ ಮಗ ಬಸವಲಿಂಗಯ್ಯನವರನ್ನು ಸಂಸ್ಕೃತ ವ್ಯಾಸಂಗಕ್ಕಾಗಿ ಪುಣೆಗೆ ಕಳಿಸಿದರು. ಅಲ್ಲಿಯ ವಿದ್ಯಾಭ್ಯಾಸ ಮುಗಿಸಿಕೊಂಡು ಬಂದ ಬಸವಲಿಂಗಯ್ಯನವರು ಗೋಕಾಕದಲ್ಲಿ ಅತ್ಯಂತ ಪ್ರಮುಖ ವ್ಯಕ್ತಿಯಾದರು. ಸಾರ್ವಜನಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಶ್ರೀಯುತರು ವೀರಶೈವಧರ್ಮ ಸಾಹಿತ್ಯದಲ್ಲಿ ವಿಶೇಷ ಆಸಕ್ತಿಯನ್ನು ಹೊಂದಿದ್ದರು. ಅವರು ಗೋಕಾಕ ನಗರಸಭೆಯ ಅಧ್ಯಕ್ಷರೂ ಆಗಿದ್ದರು. ಆ ಕಾಲದಲ್ಲಿ ಮಕ್ಕಳ ವಿದ್ಯಾಭ್ಯಾಸಕ್ಕೆ ಆ ಭಾಗದಲ್ಲಿ ಯಾವ ಅನುಕೂಲವೂ ಇಲ್ಲದಿದ್ದುದರಿಂದ ಅವರು "ಫಸ್ಟ್‌ಗ್ರೇಡ್ ಆಂಗಲೋ ವರ್ನ್ಯಾಕ್ಯುಲರ್" ಶಾಲೆಯನ್ನು ಪ್ರಾರಂಭಿಸಿ ಜನತೆಗೆ ಮಹದುಪಕಾರವನ್ನು ಮಾಡಿದರು.

ಡಾ. ನಂದೀಮಠರ ತಂದೆ ಚೆನ್ನಬಸವಯ್ಯನವರು ನಂದಿಯಲ್ಲಿ ವ್ಯವಸಾಯವನ್ನು ಮಾಡಿಕೊಂಡಿದ್ದರು. ಅವರ ಹೆಂಡತಿ ಪರಮ್ಮ. ಆಕೆ ಧಾರ್ಮಿಕ ಪ್ರವೃತ್ತಿಯುಳ್ಳವಳೂ ವ್ಯವಹಾರಚತುರಳೂ ಆದ ಸಾಧ್ವಿ. ಪರೋಪಕಾರ ಬುದ್ಧಿಯುಳ್ಳ

ಪರಮ್ಮ ಎಲ್ಲರಿಗೂ ಬೇಕಾದವಳಾಗಿದ್ದಳು. ಚೆನ್ನಬಸವಯ್ಯ ಮತ್ತು ಪರಮ್ಮ ದಂಪತಿಗಳ ಮೂರನೆಯ ಮಗನಾಗಿ ೧೧.೪.೧೯೦೩ರಲ್ಲಿ ನಂದೀಮಠ ಜನಿಸಿದರು.

ನಂದಿಯಲ್ಲಿ ಆ ಕಾಲದಲ್ಲಿ ಯಾವ ಪಾಠಶಾಲೆಗಳೂ ಇರಲಿಲ್ಲ. ಪ್ರಾಥಮಿಕ ಶಿಕ್ಷಣಕ್ಕಾಗಿ ನಂದಿಗೆ ಎರಡು ಮೈಲಿ ದೂರದಲ್ಲಿದ್ದ ಮಮದಾಪುರದಲ್ಲಿದ್ದ ಶಾಲೆಗೆ ನಂದೀಮಠರನ್ನು ಸೇರಿಸಲಾಯಿತು. ಪ್ರಾಥಮಿಕ ಶಾಲೆ ವ್ಯಾಸಂಗ ಮುಗಿದ ಮೇಲೆ ಗೋಕಾಕದ ಮಾಧ್ಯಮಿಕ ಶಾಲೆಗೆ ಸೇರಿಸಿದರು. ಆ ಶಾಲೆಯಲ್ಲಿ ಮಹಾಮೇಧಾವಿಗಳೂ ಶಿಕ್ಷಣತಜ್ಞರೂ ಆಗಿದ್ದ ರ್‍ಯಾಂಗ್ಲರ್ ಪಾವಟೆ, ಶಿ.ಶಿ. ಬಸವನಾಳ, ವಿ.ಬಿ. ಮಮದಾಪುರ, ನ್ಯಾಯಾಧೀಶ ವಿ.ಬಿ. ಹಾಲಭಾವಿ, ಎಂ.ಎಸ್. ರೈನಾಪುರ ಮೊದಲಾದವರೆಲ್ಲ ನಂದೀಮಠರಿಗಿಂತ ಮೊದಲು ವ್ಯಾಸಂಗ ಮಾಡಿದ್ದರು. ಮಾಧ್ಯಮಿಕ ಶಿಕ್ಷಣದ ಮೊದಲ ಭಾಗವನ್ನು ಗೋಕಾಕ ಶಾಲೆಯಲ್ಲಿ ಪೂರೈಸಿ ತರುವಾಯ ಬೆಳಗಾವಿಯ ಅರಟಾಳ ಹೈಸ್ಕೂಲಿನಿಂದ ೧೯೨೦ರಲ್ಲಿ ಮೆಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಮುಂದೆ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ವ್ಯಾಸಂಗವನ್ನು ಮುಂದುವರಿಸಿ ೧೯೨೪ರಲ್ಲಿ ಬಿ.ಎ. ಪರೀಕ್ಷೆಯಲ್ಲಿ ಉಚ್ಚಶ್ರೇಣಿಯಲ್ಲಿ ತೇರ್ಗಡೆಯಾದರು. ಕರ್ನಾಟಕ ಕಾಲೇಜಿನ ದಕ್ಷಿಣ ಫೆಲೊ ಗೌರವವನ್ನು ಸಂಪಾದಿಸಿದ ನಂದೀಮಠ ಅವರು ೧೯೨೬ರಲ್ಲಿ ಮುಂಬಯಿ ವಿಶ್ವವಿದ್ಯಾಲಯದ ಎಂ.ಎ. ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ಸಂಸ್ಕೃತ ವಿಷಯದಲ್ಲಿ ತೇರ್ಗಡೆಯಾದರು.

ಕರ್ನಾಟಕದ ಗಡಿಭಾಗದ ಕೊಲ್ಲಾಪುರ ಆ ಕಾಲದಲ್ಲಿ ಸುಪ್ರಸಿದ್ಧ ವಿದ್ಯಾಕೇಂದ್ರವಾಗಿತ್ತು. ಕೊಲ್ಲಾಪುರದ ರಾಜಾರಾಮ ಕಾಲೇಜು ಹಲವಾರು ಮೇಧಾವಿಗಳನ್ನು ಆಕರ್ಷಿಸಿತ್ತು. ಡಾ. ಎ.ಎನ್. ಉಪಾಧ್ಯೆ, ಡಾ. ಕೆ.ಜಿ. ಕುಂದಣಗಾರರಂಥ ಮೇಧಾವಿಗಳು ಪ್ರಾಧ್ಯಾಪಕರಾಗಿದ್ದ ರಾಜಾರಾಮ ಕಾಲೇಜಿನಲ್ಲಿ ಡಾ. ನಂದೀಮಠರು ೧೯೨೭ ರಿಂದ ೧೯೨೮ರವರೆಗೆ ಎರಡು ವರ್ಷ ಸಂಸ್ಕೃತಪ್ರಾಧ್ಯಾಪಕರಾಗಿ ಸೇವೆಯನ್ನು ಸಲ್ಲಿಸಿದರು.

ಕೊಲ್ಲಾಪುರದ ರಾಜಾರಾಮ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾಗಲೇ ಹೆಚ್ಚಿನ ವ್ಯಾಸಂಗಕ್ಕಾಗಿ ವಿದೇಶಕ್ಕೆ ಹೋಗುವ ಆಕಾಂಕ್ಷೆ ಅಂಕುರಿಸಿತು. ಆ ಸಮಯದಲ್ಲಿ ಶಿರಸಂಗಿ ಲಿಂಗರಾಜರು, ಅರಟಾಳ ರುದ್ರೇಗೌಡರಂಥ ಸಮಾಜದ ಮುಖಂಡರು ಪ್ರತಿಭಾವಂತ ಲಿಂಗಾಯತ ವಿದ್ಯಾರ್ಥಿಗಳನ್ನು ಉಚ್ಚಅಭ್ಯಾಸಕ್ಕಾಗಿ ಲಿಂಗಾಯತ ಫಂಡ್ ಎಂಬ ಯೋಜನೆಯನ್ನು ರೂಪಿಸಿದ್ದರು. ಡಾ. ನಂದೀಮಠರು ಈ ಯೋಜನೆಯ ಆರ್ಥಿಕ ನೆರವನ್ನು ಪಡೆದು ತಮ್ಮ ಪ್ರಾಧ್ಯಾಪಕ ವೃತ್ತಿಯನ್ನು ಬಿಟ್ಟು ಪಿಎಚ್.ಡಿ. ಅಧ್ಯಯನಕ್ಕಾಗಿ ೧೯೨೮ರಲ್ಲಿ ಇಂಗ್ಲೆಂಡಿಗೆ ಹೋದರು. ಲಂಡನ್ ವಿಶ್ವವಿದ್ಯಾಲಯದಲ್ಲಿ ಡಾ. ಬಾರ್ನೆಟ್ ಅವರ ಮಾರ್ಗದರ್ಶನದಲ್ಲಿ "ಥೀಯಾಲಜಿ ಆಫ್ ದಿ ಶೈವಾಗಮಾಸ್ ಬೀಯಿಂಗ್ ಎ ಸರ್ವೆ ಆಫ್ ದಿ ಡಾಕ್ಟ್ರಿನ್ಸ್ ಆಫ್ ದಿ ಶೈವಸಿದ್ಧಾಂತ ಅಂಡ್ ವೀರಶೈವಿಸಂ" ಎಂಬ ವಿಷಯದ ಮೇಲೆ ಅಧ್ಯಯನ ನಡೆಸಿ ಪಿಎಚ್.ಡಿ. ಪದವಿಯನ್ನು ಗಳಿಸಿದರು. ಇವರ ಪಿಎಚ್.ಡಿ. ಪ್ರಬಂಧದ ಒಂದು ಭಾಗ "ಹ್ಯಾಂಡ್ ಬುಕ್ ಆಫ್ ವೀರಶೈವಿಸಂ" ಎಂಬ ಹೆಸರಿನಿಂದ ಪ್ರಕಟಗೊಂಡಿದೆ. ಈ ಅವಧಿಯಲ್ಲಿ ಅವರು ಲಂಡನ್ ವಿಶ್ವವಿದ್ಯಾಲಯ ಗ್ರಂಥಭಂಡಾರದಲ್ಲಿಯ ಮತ್ತು ಇಂಡಿಯಾ ಆಫೀಸ್ ಗ್ರಂಥಭಂಡಾರದಲ್ಲಿನ ಪೌರ್ವಾತ್ಯ ವಿಷಯದ ಗ್ರಂಥಗಳನ್ನು ಸಮಗ್ರವಾಗಿ ಪರಿಶೀಲಿಸಿದರು.

ಪಿಎಚ್.ಡಿ ಪದವಿಯನ್ನು ಪಡೆದ ಮೇಲೆ ಇಟಲಿ, ಫ್ರಾನ್ಸ್, ಜರ್ಮನಿ, ಸ್ವಿಟ್ಜರ್ಲೆಂಡ್ ದೇಶಗಳನ್ನು ಸಂದರ್ಶಿಸಿಕೊಂಡು ಸ್ವದೇಶಕ್ಕೆ ಬಂದರು. ಅವರಿಗೆ "ಡೆಪ್ಯುಟಿ ಡೈರೆಕ್ಟರ್ ಆಪ್ ಆರ್ಕೈಸ್" ಎಂಬ ಹುದ್ದೆಯ ಸಂದರ್ಶನಕ್ಕಾಗಿ ಮುಂಬೈಗೆ ಆಮಂತ್ರಿಸಲಾಗಿತ್ತು. ಸಂದರ್ಶನವನ್ನು ಮುಗಿಸಿಬಂದ ನಂದೀಮಠ ಅವರಿಗೆ ಆ ಹುದ್ದೆ ಸಿಕ್ಕುವುದರಲ್ಲಿತ್ತು. ಆ ಸಮಯದಲ್ಲಿ ಪರಿಚಯವಾದ ದಕ್ಷಿಣ ವಿಭಾಗದ ಎಜ್ಯುಕೇಷನಲ್ ಇನ್ಸ್‌ಪೆಕ್ಟರ್ ಕೆ.ಎಸ್. ವಕೀಲ ಎಂಬುವವರು "ಬೆಳಗಾವಿಯಲ್ಲಿ ನಿಮ್ಮ ಜನರೇ ನಡೆಯುತ್ತಿರುವ ಜಿ.ಎ. ಹೈಸ್ಕೂಲ್ ಇದೆ. ಒಂದು ಕಾಲೇಜನ್ನು ಸ್ಥಾಪಿಸುವ ವಿಚಾರವೂ ಅವರಿಗಿದೆ. ನಿಮ್ಮಂಥ ವಿದ್ವಾಂಸರು ಈ ಸಂಸ್ಥೆಯನ್ನು ಸೇರಿದರೆ ಶಾಲೆಗೂ ಘನತೆ ಬರುತ್ತದೆ. ಅಲ್ಲದೆ ನಿಮ್ಮ ಸಮಾಜಕ್ಕೂ ಒಳ್ಳೆಯದಾಗುತ್ತದೆ. ನೀವೇಕೆ ಬೆಳಗಾವಿಯ ಜಿ.ಎ. ಹೈಸ್ಕೂಲು ಸೇರಬಾರದು?" ಎಂದು ಪ್ರಶ್ನಿಸಿದರು. ಇದರಿಂದ ನಂದೀಮಠರ ಮನಸ್ಸಿನಲ್ಲಿ ಹೊಯ್ದಾಟ ಪ್ರಾರಂಭವಾಯಿತು. ಈ ಸಮಸ್ಯೆಯ ಪರಿಹಾರಕ್ಕೆ ಡಾ. ಫ.ಗು. ಹಳಕಟ್ಟಿ ಅವರು ಅಭಿಪ್ರಾಯ ಕೇಳಿದಾಗ ಅವರು ಬೆಳಗಾವಿಗೆ ಹೋಗುವುದೇ ಒಳ್ಳೆಯದು ಎಂದು ಹೇಳಿದರು. ವ್ಯಕ್ತಿಗತ ಉದ್ಧಾರಕ್ಕಿಂತ ಸಮಾಜಗತ ಉದ್ಧಾರವೇ ಮಿಗಿಲು ಎಂಬ ಸಿದ್ಧಾಂತಕ್ಕೆ ಬದ್ಧರಾಗಿ ಕೆ.ಎಲ್.ಇ. ಸಂಸ್ಥೆಯ ಆಮಂತ್ರಣದ

ಮೇರೆಗೆ ಜಿ.ಎ. ಹೈಸ್ಕೂಲಿನಲ್ಲಿ ಶಿಕ್ಷಕರಾಗಿ ಸೇವೆಯನ್ನು ಸಲ್ಲಿಸಿದರು. ಇದೇ ಸಮಯದಲ್ಲಿ ವಂಟಮುರಿ ರಾಜಾಸಾಹೇಬರ ಸಲಹೆಯಂತೆ ವಂಟಮುರಿಯ ಶ್ರೀ ಜಗನ್ನಾಥ ಈಶ್ವರಯ್ಯ ಪುರೋಹಿತ ಮತ್ತು ಶ್ರೀಮತಿ ಕಾಶಿಬಾಯಿ ಅವರ ಮಗಳು ಶ್ರೀಮತಿ ಕಲ್ಯಾಣಮ್ಮ ಅವರನ್ನು ಡಾ. ನಂದೀಮಠರು ೧೯೩೨ರಲ್ಲಿ ಮದುವೆಯಾದರು. ಈ ದಂಪತಿಗಳಿಗೆ ಕಾಲಾಂತರದಲ್ಲಿ ಏಳು ಹೆಣ್ಣುಮಕ್ಕಳೂ ಮೂರು ಗಂಡುಮಕ್ಕಳೂ ಆದರು.

ಇಪ್ಪತ್ತನೆಯ ಶತಮಾನದ ಆರಂಭದ ಕಾಲದಲ್ಲಿ ಉತ್ತರ ಕರ್ನಾಟಕ ಬಹಳ ಹಿಂದುಳಿದಿತ್ತು. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಬಡವಿದ್ಯಾರ್ಥಿಗಳು ಕಲಿಯುವುದೇ ಕಷ್ಟವಾಗಿತ್ತು. ಆ ಸಂದರ್ಭದಲ್ಲಿ ಉಚ್ಚಶಿಕ್ಷಣ ಅವಕಾಶ ಎಲ್ಲರಿಗೂ ದೊರಕಬೇಕೆಂಬ ಸಂಕಲ್ಪದಿಂದ ಕೆಲವು ಪದವೀಧರರು ಉಚ್ಚಶಿಕ್ಷಣ ಸಂಸ್ಥೆಯನ್ನು ಕಟ್ಟಲು ನಿರ್ಧರಿಸಿದರು. ಆಗ ಶಿಕ್ಷಣ ಕ್ಷೇತ್ರದ ಸಪ್ತರ್ಷಿಗಳೆಂದೇ ಪ್ರಸಿದ್ಧರಾಗಿದ್ದ ಪ್ರೊ. ಶಿ.ಶಿ. ಬಸವನಾಳ, ಮಮದಾಪುರ, ಪ್ರೊ. ಸಾಖರೆ, ಶ್ರೀ ಕಟ್ಟೀಮನಿ, ಶ್ರೀ ಹಂಚಿನಾಳ, ಸರ್ದಾರ ವೀರನಗೌಡರು, ಶ್ರೀ ಚಿಕ್ಕೋಡಿ ಇವರಿಗೆಲ್ಲ ಆಸರೆಯಾಗಿ ಆರ್ಥಿಕ ಹಾಗೂ ಸ್ಥಳ ಸೌಕರ್ಯಗಳನ್ನು ಒದಗಿಸಿಕೊಡುವಲ್ಲಿ ಶ್ರೀ ಅರಟಾಳ ರುದ್ರೇಗೌಡರು, ಗಿಲಗಂಜಿ ಸಾಹೇಬರು, ವಂಟಮುರಿ ಚರ್ಚ್ ಸಂಸ್ಥಾನಿಕರು, ಸಿರಸಂಗಿ ಲಿಂಗರಾಜ ಟ್ರಸ್ಟಿನವರು ಸಹಾಯ ಮಾಡಿದರು. ಇವರೆಲ್ಲರ ಪರಿಶ್ರಮ, ಸಹಾಯದ ಫಲವಾಗಿ ಬೆಳಗಾವಿಯಲ್ಲಿ ಕೆಎಲ್ಇ ಸಂಸ್ಥೆ ಪ್ರಾರಂಭವಾಗಿ ಮೊದಲನೆಯ ಉಚ್ಚಶಿಕ್ಷಣ ಸಂಸ್ಥೆ ಗಿಲಗಂಜಿ ಅರ್ಟಾಳ ಹೈಸ್ಕೂಲು ಪ್ರಾರಂಭಗೊಂಡಿತು. ನಂದೀಮಠ ಅವರಿಗೆ ಇವರೆಲ್ಲರ ಒಡನಾಟ ಲಭ್ಯವಾಯಿತು.

ಕೆ.ಎಲ್.ಇ. ಶಿಕ್ಷಣ ಸಂಸ್ಥೆಯ ಪದಾಧಿಕಾರಿಗಳ ನಿರಂತರ ಪ್ರಯತ್ನದಿಂದ ೧೯೨೨ರ ಹೊತ್ತಿಗೆ ಧಾರವಾಡದಲ್ಲಿಯೂ ಒಂದು ಮಾಧ್ಯಮಿಕ ಶಾಲೆಯನ್ನು ಪ್ರಾರಂಭಿಸಲಾಯಿತು ಮತ್ತು ೧೯೩೩ರಲ್ಲಿ ಬೆಳಗಾವಿಯಲ್ಲಿ ಲಿಂಗರಾಜ ಕಾಲೇಜು ಪ್ರಾರಂಭವಾಯಿತು. ಡಾ. ನಂದೀಮಠರು ಆ ಕಾಲೇಜಿನ ಮೊದಲ ಪ್ರಿನ್ಸಿಪಾಲರಾಗಿ ನೇಮಕಗೊಂಡರು. ಹನ್ನೊಂದು ವರ್ಷಗಳ ಕಾಲ ಆ ಕಾಲೇಜನ್ನು ಸಮರ್ಥವಾಗಿ ಸಮರ್ಪಕವಾಗಿ ನಡೆಸಿಕೊಂಡು ಬಂದರು. ಆ ಕಾಲೇಜಿಗೆ ಶ್ರೇಷ್ಠ ವಿದ್ವಾಂಸರನ್ನು ಬೋಧಕವರ್ಗಕ್ಕೆ ನೇಮಿಸಿಕೊಂಡು ಕೀರ್ತಿಯನ್ನು ತಂದುಕೊಟ್ಟರು.

ರಾಜಾರಾಮ ಕಾಲೇಜಿನಲ್ಲಿ ಹನ್ನೊಂದು ವರ್ಷಗಳು ಸೇವೆ ಸಲ್ಲಿಸಿದ ಮೇಲೆ ಕೆ.ಎಲ್.ಇ. ಸಂಸ್ಥೆಯ ಸದಸ್ಯರಲ್ಲಿ ಭಿನ್ನಾಭಿಪ್ರಾಯ ಉಂಟಾಯಿತು. ಈ ಕಾರಣದಿಂದಾಗಿ ಡಾ. ನಂದೀಮಠರು ೧೯೪೪ರಲ್ಲಿ ಆ ಕಾಲೇಜನ್ನು ಬಿಡಬೇಕಾಯಿತು. ಬೇರೆ ಬೇರೆ ಸಂಸ್ಥೆಗಳಿಂದ ನಂದೀಮಠರಿಗೆ ಕೆಲಸದ ಅವಕಾಶಗಳು ಬಂದರೂ ಮತ್ತೊಂದು ವಿದ್ಯಾಸಂಸ್ಥೆಯನ್ನು ಕಟ್ಟಬೇಕೆಂಬ ಸಂಕಲ್ಪವಿದ್ದುದರಿಂದ ಆ ಕಡೆ ಲಕ್ಷ್ಯವನ್ನು ಕೊಡಲಿಲ್ಲ. ಬಾಗಲಕೋಟೆಯ ವಿದ್ಯಾವರ್ಧಕ ಸಂಘದವರು ಈ ಅವಕಾಶವನ್ನು ಉಪಯೋಗಿಸಿಕೊಂಡು ಅಲ್ಲಿ ಒಂದು ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸುವುದಕ್ಕೆ ಡಾ. ನಂದೀಮಠರ ನೆರವನ್ನು ಕೋರಿದರು. ಅವರ ಕೋರಿಕೆಯಂತೆ ಬಾಗಲಕೋಟೆಯಲ್ಲಿ ಒಂದು ಕಾಲೇಜನ್ನು ಸ್ಥಾಪಿಸಿದರು. ತಾವು ಆ ಕಾಲೇಜಿನಲ್ಲಿ ಪ್ರಾಚಾರ್ಯರಾಗಿ ನಿಯೋಜಿತರಾಗಿ ಆ ಸಂಸ್ಥೆಯ ಸರ್ವತೋಮುಖವಾದ ಪ್ರಗತಿಗೆ ಕಾರಣಕರ್ತರಾದರು. ಡಾ. ನಂದೀಮಠರ ಈ ಮಹತ್ಕಾರ್ಯಕ್ಕೆ ಆ ಭಾಗದ ಮಠಾಧಿಪತಿಗಳೂ ಶ್ರೀಮಂತರೂ ದಾನಿಗಳೂ ಎಲ್ಲ ವಿಧವಾದ ನೆರವನ್ನು ನೀಡಿದರು.

ಕರ್ನಾಟಕ ವಿಶ್ವವಿದ್ಯಾನಿಲಯದ ಸ್ಥಾಪನೆಯಲ್ಲಿಯೂ ಡಾ. ನಂದೀಮಠರು ವಹಿಸಿದ ಪಾತ್ರ ಗಮನಾರ್ಹವಾದುದು. ಈ ವಿಶ್ವವಿದ್ಯಾಲಯದ ಪ್ರಾರಂಭದಲ್ಲಿ ೧೯೫೩ರಲ್ಲಿ ಡಾ. ನಂದೀಮಠರು ಕುಲಸಚಿವರಾಗಿ ಸೇವೆ ಸಲ್ಲಿಸುವುದರ ಜೊತೆಗೆ ಸ್ವಲ್ಪಕಾಲ ಹಂಗಾಮಿ ಕುಲಪತಿಗಳಾಗಿಯೂ ಕಾರ್ಯವನ್ನು ನಿರ್ವಹಿಸಿದ್ದಾರೆ. ಉತ್ತರ ಕರ್ನಾಟಕದಲ್ಲಿ ಉಚ್ಚಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವಲ್ಲಿ ಡಾ. ನಂದೀಮಠರು ವಹಿಸಿದ ಪಾತ್ರ ಬಹುಕಾಲ ನಿಲ್ಲುವಂತಹುದು.

ಡಾ. ನಂದೀಮಠ ಅವರು ೧೯೬೬ರಲ್ಲಿ ಬಾಗಲಕೋಟೆಯ ಬಸವೇಶ್ವರ ಕಾಲೇಜಿನ ಪ್ರಾಚಾರ್ಯರ ಹುದ್ದೆಯಿಂದ ನಿವೃತ್ತರಾದರು. ಆಮೇಲೆ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಯು.ಜಿ.ಸಿ. ಪ್ರಾಧ್ಯಾಪಕರಾಗಿ ನೇಮಕಗೊಂಡರು. ಆ ಅವಧಿಯಲ್ಲಿ ಕಂಚಿಯ ಶಂಕರಾರಾಧ್ಯರ ವಿರಚಿತ ಬಸವಪುರಾಣದ ಸಂಪಾದನ ಕಾರ್ಯವನ್ನು ಕೈಕೊಂಡರು. ಆದರೆ ೧೯೭೦ರಲ್ಲಿ ಪಾರ್ಶ್ವವಾಯು ರೋಗಕ್ಕೆ ತುತ್ತಾದರು. ಆದರೂ ತಮ್ಮ ಸಂಪಾದನ ಕಾರ್ಯವನ್ನು ಮುಂದುವರಿಸುತ್ತಲೇ ಇದ್ದರು. ಡಾ. ನಂದೀಮಠರ ಆರೋಗ್ಯ ಸುಧಾರಿಸಲಿಲ್ಲ. ಧಾರವಾಡದಿಂದ ಬಾಗಲಕೋಟೆಗೆ ಬಂದರು. ಕ್ರಮೇಣ ಅದರ ಪಾರ್ಶ್ವವಾಯು ಉಲ್ಬಣಿಸುತ್ತಾ ಬಂದಿತು. ಆ ವ್ಯಾಧಿಯಲ್ಲಿಯೇ ಡಾ. ನಂದೀಮಠ ಅವರು ೧೯೭೫ ಸೆಪ್ಟೆಂಬರ್

೨೫ ರಂದು ಶಿವೈಕ್ಯರಾದರು. ಬಾಗಲುಕೋಟೆಯಲ್ಲಿ ಬಸವೇಶ್ವರ ಕಾಲೇಜು ಬಿವ್ಹಿವ್ಹಿಎಸ್ ಪಾಲಿಟೆಕ್ನಿಕ್ ಸಂಸ್ಥೆ, ಬಸವೇಶ್ವರ ಇಂಜಿನಿಯರಿಂಗ್ ಕಾಲೇಜುಗಳನ್ನು ಸ್ಥಾಪಿಸಿದ ಡಾ. ನಂದೀಮಠರ ನಿಧನಕ್ಕೆ ಬಾಗಲುಕೋಟೆಯ ಮಂದಿ ಮಮ್ಮಲ ಮರುಗಿತು.

ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಅದರ ಸ್ಥಾಪನೆಯಿಂದ ಪ್ರಾರಂಭಿಸಿ ಕುಲಸಚಿವರಾಗಿ, ಹಂಗಾಮಿ ಕುಲಪತಿಗಳಾಗಿ, ೧೯೫೦-೧೯೬೬ರವರೆಗೆ ಸೆನೆಟ್, ಸಿಂಡಿಕೇಟ್, ಅಕೆಡಮಿಕ್ ಕೌನ್ಸಿಲ್ -ಇವುಗಳ ಸದಸ್ಯರಾಗಿ ಹದಿನಾರು ವರ್ಷಗಳ ಕಾಲ ಸಂಸ್ಕೃತ, ಪಾಲಿ, ಪ್ರಾಕೃತ ವ್ಯಾಸಂಗ ಸಮಿತಿಗಳ ಅಧ್ಯಕ್ಷರಾಗಿ, ಕಲಾವಿಭಾಗದ ಡೀನ್ ಆಗಿ, ಕರ್ನಾಟಕ ವಿಶ್ವವಿದ್ಯಾಲಯದ ಜನರಲ್‌ಗಳ ಸಂಪಾದಕರಾಗಿ ಸಲ್ಲಿಸಿರುವ ಸೇವೆಯನ್ನು ಸುವರ್ಣಾಕ್ಷರಗಳಲ್ಲಿ ದಾಖಲಿಸಬೇಕಾಗಿದೆ. ಇಂತಹ ಕರ್ಮಯೋಗಿಗಳ ನಿಧನಕ್ಕಾಗಿ ಧಾರವಾಡದ ಜನತೆ ಅಶ್ರುತರ್ಪಣವನ್ನು ನೀಡಿದೆ.

ಡಾ. ನಂದೀಮಠ ಅವರು ಶಿಕ್ಷಣಕ್ಷೇತ್ರಕ್ಕೆ ಶಿಕ್ಷಣ ಸಂಸ್ಥಾಪನೆಗೆ ಸಲ್ಲಿಸಿರುವ ಅನುಪಮ ಸೇವೆಯನ್ನು ಅವಲೋಕಿಸಲಾಯಿತು. ಶ್ರೀಯುತರ ಇನ್ನುಳಿದ ಕ್ಷೇತ್ರಗಳ ಸಾಧನೆಯನ್ನು ಅವಲೋಕಿಸಬೇಕಾಗಿದೆ.

ಡಾ. ನಂದೀಮಠ ಅವರ ಕೀರ್ತಿಸೌಧಕ್ಕೆ ಕಲಶವಿಟ್ಟಂತಿದೆ ಅವರ ಸಾಹಿತ್ಯಸೇವೆ. ಒಂದು ನಾಡಿನ ಇತಿಹಾಸವನ್ನು ಸಂಸ್ಕೃತಿಯನ್ನು ಬಿಂಬಿಸುವ ಶಾಸನ ಸಾಹಿತ್ಯ ಶ್ರೀಯುತರಿಗೆ ಅತ್ಯಂತ ಪ್ರಿಯವಾದುದಾಗಿತ್ತು. ಶಾಸನಗಳನ್ನು ಸಂಶೋಧಿಸುವುದು, ಶಾಸನಪಾಠವನ್ನು ಸರಿಯಾಗಿ ಓದಿ ಅರ್ಥೈಸುವುದು ಅವರ ಹವ್ಯಾಸ. ಅವರು ವ್ಯಾಸಂಗ ಮಾಡುತ್ತಿದ್ದಾಗಲೇ ಶಾಸನ ವ್ಯಾಸಂಗಕ್ಕೆ ವಿಶೇಷ ಲಕ್ಷ್ಯವನ್ನು ಕೊಟ್ಟಿದ್ದರು. ಅಷ್ಟೇ ಅಲ್ಲ, ಅವರು ಪಿಎಚ್.ಡಿ. ವ್ಯಾಸಂಗಕ್ಕೆ ಲಂಡನ್ನಿಗೆ ಹೋಗಿದ್ದಾಗ ಭಾರತದಲ್ಲಿ ಎಲ್ಲಿಯೂ ಸಿಕ್ಕದ ಎಷ್ಟೋ ಶಿಲಾಶಾಸನದ ಪ್ರತಿಗಳು ಅಲ್ಲಿಯ ಗ್ರಂಥಾಲಯಗಳಲ್ಲಿ ದೊರಕಿದವು. "ಕರ್ನಾಟಕ ದೇಶ್ ಇನ್ಸ್‌ಕ್ರಿಪ್ಷನ್ಸ್" ಹೆಸರಿನ ಶಾಸನ ಸಂಪುಟದಲ್ಲಿ ಈವರೆಗೆ ಅನೇಕರ ಗಮನಕ್ಕೆ ಬಾರದ ಮುಖ್ಯಶಾಸನಗಳನ್ನು ನಕಲು ಮಾಡಿಕೊಂಡು 'ಐತಿಹಾಸಿಕ ಟಿಪ್ಪಣಿಗಳು', 'ಚೌಡದಾನಪುರದ ಶಿಲಾಶಾಸನಗಳು' ಎಂಬ ಹೆಸರಿನಲ್ಲಿ ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸಿದರು. ನಾಡಿನ ಇತಿಹಾಸ ಸಂಸ್ಕೃತಿಗಳು ಮೇಲೆ ಬೆಳಕು ಚೆಲ್ಲುವ ಅನೇಕ ಶಾಸನಗಳನ್ನು ಕುರಿತು ಚರ್ಚಿಸಿ ತಮ್ಮ ಅಧ್ಯಯನ ಅಧ್ಯಾಪನಗಳ ಜೊತೆಗೆ ಕ್ಷೇತ್ರಕಾರ್ಯಗಳನ್ನೂ ಮಾಡಿ ವಿವರವಾದ ಟಿಪ್ಪಣಿಗಳೊಡನೆ ಪ್ರಕಟಿಸಿದ್ದಾರೆ. ಕೆಳದಿ ವೀರಶೈವ ರಾಜಮನೆತನಕ್ಕೆ ಸಂಬಂಧಿಸಿದ ಸಂಸ್ಕೃತ ಶಾಸನವನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟಿದ್ದಾರೆ. ಕುರುಂಬೆಟ್ಟ, ಗುಮ್ಮಳಾಪುರ, ಮನಗೂಳಿ, ಚೌಡದಾನಪುರ -ಈ ಶಾಸನಗಳನ್ನು ಸರಿಯಾಗಿ ಓದಿ ಹೊಸ ವಿಷಯಗಳನ್ನು ಹೊರಗೆಡಹಿದ್ದಾರೆ.

೧೯೪೪ರಲ್ಲಿ ಪ್ರಕಟವಾಗಿರುವ 'ಕರ್ನಾಟಕ ಧರ್ಮಗಳು' ಡಾ. ನಂದೀಮಠ ಅವರ ಮೊದಲ ಸ್ವತಂತ್ರ ಕೃತಿ. ಈ ಕೃತಿಯಲ್ಲಿ ಕರ್ನಾಟಕದಲ್ಲಿ ಪ್ರಚಲಿತವಾಗಿದ್ದ ಪ್ರಮುಖ ಧರ್ಮಗಳ ಪರಿಚಯವನ್ನು ಆಧಾರಪೂರ್ವಕವಾಗಿ ಮಾಡಿಕೊಡಲಾಗಿದೆ. ಈ ಗ್ರಂಥದ ಅಂತ್ಯದಲ್ಲಿ "ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ನೆಲೆಸಿದ ಪ್ರಮುಖ ಧರ್ಮಗಳ ಉಗಮ, ಇತಿಹಾಸ, ಸಾಹಿತ್ಯ ತತ್ವಗಳನ್ನು ಸಂಕ್ಷಿಪ್ತವಾಗಿ ಅವಲೋಕಿಸಲಾಯಿತು. ಮೊದಲು ಇಲ್ಲಿ ಕಾಲೂರಿದುದು ವೈದಿಕಧರ್ಮ. ಮುಂದೆ ಅದರಲ್ಲಿ ಮಾರ್ಪಾಟಾಗಿ ಹಿಂದೂಧರ್ಮವಾದಾಗ ಅದರ ಶಾಖೆಗಳೆಲ್ಲ ಇಲ್ಲಿ ಉಂಟಾದುವು. ಮುಂದೆ ಜೈನ ಬೌದ್ಧಮತಗಳು ಉದ್ಭವಿಸಿದಾಗ ಅವನ್ನೂ ಕನ್ನಡಿಗರು ಬರಮಾಡಿಕೊಂಡು ಸಾಕಿ ಸಲಹಿದರು. ಸಾವಿರಾರು ವರುಷ ಇಲ್ಲಿ ಶೈವರು, ವೈಷ್ಣವರು, ಜೈನರು, ಬೌದ್ಧರು ಮೊದಲಾದವರು ಸುಖದಿಂದ ಶಾಂತಿಯಿಂದ ಪರಸ್ಪರ ಪ್ರೇಮದಿಂದ ಬಾಳಿದರು. ಮುಂದೆ ಮಹಮದೀಯ ಮತವೂ ಕ್ರೈಸ್ತಮತವೂ ಇಲ್ಲಿಗೆ ಬಂದು ಆಶ್ರಯವನ್ನು ಹೊಂದಿ ಕನ್ನಡಿಗರೊಡನೆ ಬೆರೆತುಹೋಗಿರುವವು. ಇದು ಕನ್ನಡ ನಾಡಿನ ವೈಶಿಷ್ಟ್ಯ" ಎಂದು ಲೇಖಕರೇ ಹೇಳಿದ್ದಾರೆ. (ಪು. ೨೬-೭, ಶಕಪುರುಷ)

**ಹ್ಯಾಂಡ್ ಬುಕ್ ಆಫ್ ವೀರಶೈವಿಸಂ:** ಡಾ. ನಂದೀಮಠರ ಪಿಎಚ್.ಡಿ. ಪ್ರಬಂಧ "ಥಿಯಾಲಜಿ ಆಫ್ ದಿ ಶೈವಾಗಮಾಸ್ ಬೀಯಿಂಗ್ ಎ ಸರ್ವೆ ಆಫ್ ದಿ ಡಾಕ್ಟ್ರಿನ್ಸ್ ಆಫ್ ದಿ ಶೈವಸಿದ್ಧಾಂತ ಅಂಡ್ ವೀರಶೈವಿಸಂ" ಎಂಬುದರ ಒಂದು ಭಾಗ. ಈ ಕೃತಿ ವೀರಶೈವಧರ್ಮದ ಪ್ರಮಾಣ ಗ್ರಂಥವೆಂದು ಪರಿಗಣಿಸಲಾಗಿದೆ. ಈ ಕೃತಿಯಲ್ಲಿ ಎಂಟು

ಭಾಗಗಳಿವೆ. ಅವು ೧. ವೀರಶೈವದ ಉಗಮ, ೨. ವೀರಶೈವ ಗ್ರಂಥಕರ್ತರು, ೩. ಅಷ್ಟಾವರಣಗಳು, ೪. ವೀರಶೈವ ಸಂಸ್ಕಾರಗಳು, ೫. ವೀರಶೈವ ಸಿದ್ಧಾಂತಗಳು, ೬. ದೇವರ ಕಲ್ಪನೆ, ೭. ಇಷ್ಟಲಿಂಗ, ೮. ಸೃಷ್ಟಿಯ ರಚನೆ. ಜೀವಾತ್ಮರ ತಿರುಳು ಶಕ್ತಿ ಅಥವಾ ಮಾಯೆ. ಈ ಎಂಟು ಅಧ್ಯಾಯಗಳಲ್ಲಿ ಇಡೀ ವೀರಶೈವ ಧರ್ಮದ ಚರಿತ್ರೆ ಸಾಹಿತ್ಯ ಮತ್ತು ತತ್ವಗಳು ಸಕ್ರಮವಾಗಿ ವಿವೇಚನೆಗೆ ಒಳಪಟ್ಟಿವೆ. ನಿಜಕ್ಕೂ ಈ ಕೃತಿ ವೀರಶೈವಧರ್ಮದ ಕೈಪಿಡಿ ಎಂದೆನಿಸಿದೆ.

**ಗ್ರಂಥ ಸಂಪಾದನೆ:** ಡಾ. ನಂದೀಮಠರ ವಿಶೇಷ ಆಸಕ್ತಿಯ ಮತ್ತೊಂದು ಕ್ಷೇತ್ರ ಗ್ರಂಥಸಂಪಾದನೆ. ಶ್ರೀಯುತರು ಹಸ್ತಪ್ರತಿಗಳ ಸಂಗ್ರಹ ಕಾರ್ಯವನ್ನು ಮಾಡಿದ್ದಾರೆ. ಧಾರವಾಡದ ಲಿಂಗಾಯತ ಅಭಿವೃದ್ಧಿ ಸಂಸ್ಥೆ ಮತ್ತು ಶಿವಯೋಗ ಮಂದಿರದ ಹಸ್ತಪ್ರತಿ ಭಂಡಾರಗಳ ಬಗೆಗೆ ವಿಶೇಷ ಕಾಳಜಿಯನ್ನು ವಹಿಸಿದ್ದರು. ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ಕಾರ್ಯಾಧ್ಯಕ್ಷರಾಗಿಯೂ ಕೆಲಕಾಲ ಕಾರ್ಯನಿರ್ವಹಿಸಿದ್ದಾರೆ. ಡಾ. ನಂದೀಮಠರು ಮೂರುತಿಂಗಳಲ್ಲಿ ೮೨೩ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದು ಮತ್ತು ಅವುಗಳ ಸೂಚಿಯನ್ನು ಸಿದ್ಧಪಡಿಸಿದ್ದು ಅವರ ಆಸಕ್ತಿಗೆ ಉದಾಹರಣೆಯಾಗಿದೆ.

ಗ್ರಂಥಸಂಪಾದನೆಯ ನಿಯಮಗಳನ್ನು ಡಾ. ನಂದೀಮಠರು ತುಂಬ ಚೆನ್ನಾಗಿ ಬಲ್ಲವರಾಗಿದ್ದರು. ಗ್ರಂಥಸಂಪಾದನೆಯ ಗುರಿ ಮತ್ತು ಸ್ವರೂಪವನ್ನು ಗಿರಿಜಾಕಲ್ಯಾಣ ಪ್ರಬಂಧದ ಪ್ರಸ್ತಾವನೆಯಲ್ಲಿ ವಿವರವಾಗಿ ತಿಳಿಸಿದ್ದಾರೆ. ಶ್ರೀಯುತರು ೧೯೫೦ರಲ್ಲಿ ಗಿರಿಜಾಕಲ್ಯಾಣವನ್ನು ಸಂಗ್ರಹಿಸಿ ಪರಿಷ್ಕರಿಸಿ ಪ್ರಕಟಿಸಿದರು. ಇದು ಬಾಗಲಕೋಟೆಯ ಬಸವೇಶ್ವರ ಕಾಲೇಜಿನ ಸಾಹಿತ್ಯ ಗ್ರಂಥಮಾಲೆಯ ಮೊದಲ ಕೃತಿ. ಇದರಲ್ಲಿ ಪಾಠಾಂತರಗಳನ್ನು ಕೊಟ್ಟಿಲ್ಲ. ಪ್ರಸ್ತಾವನೆಯೂ ಇಲ್ಲ. ಈ ಸಂಗ್ರಹವನ್ನು ೧೯೬೮ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಬಿ.ಎ. ಅಂತಿಮ ಪರೀಕ್ಷೆಗೆ ಪಠ್ಯವೆಂದು ನಿಯೋಜಿಸಿದಾಗ ಇದಕ್ಕೆ ಪ್ರಸ್ತಾವನೆ, ಪರಿಶಿಷ್ಟ, ಕಠಿಣಶಬ್ದಾರ್ಥಕೋಶಗಳನ್ನು ಸೇರಿಸಲಾಯಿತು ಎಂದು ತಿಳಿಸಲಾಗಿದೆ.

ಡಾ. ನಂದೀಮಠ ಅವರು ೧೯೬೮ರಲ್ಲಿ ಗಿರಿಜಾಕಲ್ಯಾಣವನ್ನು ೧೪ ಪ್ರತಿಗಳ ಆಧಾರದಿಂದ ಶಾಸ್ತ್ರೀಯವಾಗಿ ಪರಿಷ್ಕರಿಸಿ ಸಂಪಾದಿಸಿದ್ದಾರೆ. ಸಮುಚಿತವಾದ ಪ್ರಸ್ತಾವನೆ ಪೂರಕವಾದ ಅನುಬಂಧಗಳೊಡನೆ 'ಗಿರಿಜಾಕಲ್ಯಾಣ ಪ್ರಬಂಧ' ಎಂಬ ಹೆಸರಿನಿಂದ ಪ್ರಕಟಿಸಲಾಗಿದೆ. ಈ ಹಸ್ತಪ್ರತಿಗಳ ವಿವರಗಳನ್ನೆಲ್ಲಾ ನೀಡಿದ್ದಾರೆ. ಐವತ್ತಾರು ಪುಟಗಳ ಸುದೀರ್ಘ ಪ್ರಸ್ತಾವನೆಯನ್ನು ಬರೆದಿದ್ದಾರೆ. ಅದರಲ್ಲಿ ಹರಿಹರನ ಕಾಲದೇಶ ವರ್ತಮಾನ ಮೊದಲಾದ ವಿಷಯಗಳನ್ನು ಚರ್ಚಿಸಿದ್ದಾರೆ. ಗಿರಿಜಾಕಲ್ಯಾಣದ ಕಥಾಸಾರ, ಹರಿಹರನ ಶೈಲಿ, ಕವಿ-ಕಾವ್ಯದ ತೌಲನಿಕ ವಿಮರ್ಶೆಯನ್ನು ಮಾಡಿದ್ದಾರೆ. ಅನುಬಂಧದಲ್ಲಿ ಮಹಾಕಾವ್ಯದ ಲಕ್ಷಣ, ಛಂದಸ್ಸಿನ ಸ್ವರೂಪ, ಕಠಿಣ ಪದಕೋಶ ಮುಂತಾದ ಅಗತ್ಯ ಮಾಹಿತಿಯನ್ನೆಲ್ಲ ನೀಡಲಾಗಿದೆ. ಡಾ. ನಂದೀಮಠರ ಗಿರಿಜಾಕಲ್ಯಾಣ ಮಹಾಪ್ರಬಂಧಂ ಆಧುನಿಕ ಗ್ರಂಥಸಂಪಾದನಶಾಸ್ತ್ರ ನಿಯಮಗಳಿಗನುಸಾರವಾಗಿ ಸಂಪಾದನೆಗೊಂಡು ಪ್ರಕಟವಾಗಿದೆ.

ಡಾ. ನಂದೀಮಠರ ಮತ್ತೊಂದು ಮಹತ್ವದ ಪ್ರಾಚೀನ ಕೃತಿ ಜಾಯಗೌಂಡನ ಕನ್ನಡ ಕುವಲಯಾನಂದ, ಕ್ರಿ.ಶ. ೧೭೧೬ರಲ್ಲಿದ್ದ ಜಾಯಗೌಂಡ ಬೆಳವಲ ಎರೆನಾಡಿನ ದೊರೆಗಳ ವಂಶಕ್ಕೆ ಸೇರಿದವನು. ಇದು ಒಂದು ಅಲಂಕಾರಶಾಸ್ತ್ರಕ್ಕೆ ಸಂಬಂಧಿಸಿದುದು. ಇದರಲ್ಲಿ ಲಕ್ಷ್ಯ-ಲಕ್ಷಣಗಳನ್ನು ವಿವಿಧ ಷಟ್ಪದಿಗಳಲ್ಲಿ ಹೇಳಲಾಗಿದೆ.

ಕುವಲಾನಂದವನ್ನು ಏಕೈಕ ಕಾಗದದ ಹಸ್ತಪ್ರತಿಯ ಆಧಾರದಿಂದ ಸಂಪಾದಿಸಲಾಗಿದೆ. ಏಕೈಕ ಹಸ್ತಪ್ರತಿಯಿಂದ ಗ್ರಂಥಸಂಪಾದನೆ ಮಾಡುವುದು ಎಷ್ಟು ಕಷ್ಟ ಎಂಬುದು ಈ ಕ್ಷೇತ್ರದಲ್ಲಿ ಕೆಲಸ ಮಾಡಿದವರಿಗೆ ಸುವೇದ್ಯವಾದುದು. ಈ ಬಗೆಗೆ ಈ ಕಾವ್ಯದ ಸಂಪಾದಕರು "ಇದ್ದ ಇದೊಂದೇ ಪ್ರತಿ ಹೋದರೆ ಕನ್ನಡ ಅಲಂಕಾರಶಾಸ್ತ್ರಕ್ಕೆ ಉಪಯುಕ್ತವಾದ ಒಂದು ಅಲಂಕಾರ ಶಾಸ್ತ್ರದ ಗ್ರಂಥವು ಇಲ್ಲದಂತಾಗುವುದೆಂದು ಬಗೆದು ಇದನ್ನು ಸಾಧ್ಯವಾದ ಮಟ್ಟಿಗೆ ತಿದ್ದಿ ಮುದ್ರಿಸಿ ಪ್ರಕಟಿಸುವ ಸಾಹಸ ಕಾರ್ಯಕ್ಕೆ ಕೈಹಾಕಿದುದಾಗಿಯೂ, ಇದಕ್ಕೆ ಮೂಲವಾದ ಅಪ್ಪಯ್ಯ ದೀಕ್ಷಿತರ ಸಂಸ್ಕೃತ ಕುವಲಯಾನಂದವನ್ನು ಮುಂದಿಟ್ಟುಕೊಂಡು ಗ್ರಂಥಪಾಠವನ್ನೂ ಅಶುದ್ಧತೆಯನ್ನೂ ತಕ್ಕಮಟ್ಟಿಗೆ ತಿದ್ದಿ ಅಲ್ಲಲ್ಲಿ ಸಂಸ್ಕೃತ ಪದ್ಯಗಳನ್ನು ಅಡಿಟಪ್ಪಣಿಯಲ್ಲಿ ಕೊಡಲಾಗಿದೆ" ಎಂದಿದ್ದಾರೆ. ಏಕೈಕ ಹಸ್ತಪ್ರತಿಯಿಂದ ಅಲಂಕಾರ ಗ್ರಂಥವನ್ನು ಸಂಪಾದಿಸುವುದಕ್ಕೆ ಕೈಹಾಕಿದ ಸಾಹಸವನ್ನೂ ಇಲ್ಲಿ ಮಾಡಿಕೊಂಡಿರುವ ತಿದ್ದುಪಾಡುಗಳನ್ನು ಯಾವ ಮುಚ್ಚುಮರೆಯೂ ಇಲ್ಲದೆ ಹೇಳಿಕೊಂಡಿರುವ ಸಂಪಾದಕರ ಪ್ರಾಮಾಣಿಕತೆಯನ್ನು ಯಾರಾದರೂ ಒಪ್ಪಲೇಬೇಕಾಗಿದೆ.

ಕುವಲಯಾನಂದಕ್ಕೆ ಅದರ ಸಂಪಾದಕರು ಬರೆದಿರುವ ಒಂದುನೂರಾ ತೊಂಬತ್ತೆಂಟು ಪುಟಗಳ ಸವಿಸ್ತಾರವೂ ವಿದ್ವತ್ಪೂರ್ಣವೂ ಆದ ಪ್ರಸ್ತಾವನೆ ಎಂತಹವರಿಗೂ ಬೆರಗನ್ನುಂಟುಮಾಡುತ್ತದೆ. ಸಂಪಾದಕರ ಅಪಾರ ವಿದ್ವತ್ತಿನ ಬಗೆಗೆ ವಿಶೇಷ ಗೌರವವನ್ನುಂಟುಮಾಡುತ್ತದೆ. ಅಲಂಕಾರ ಶಾಸ್ತ್ರಕ್ಕೆ ಸಂಬಂಧಿಸಿದ ಎಲ್ಲ ಪರಿಭಾಷೆಯನ್ನೂ ಪ್ರಕಾಂಡ ಪಂಡಿತರಾದ ಡಾ. ನಂದೀಮಠರು ಈ ಪ್ರಸ್ತಾವನೆಯನ್ನು ಪರಿಚಯಿಸಿಕೊಟ್ಟಿದ್ದಾರೆ. ಏಕೈಕ ಹಸ್ತಪ್ರತಿಯಿಂದ ಶಾಸ್ತ್ರಗ್ರಂಥವನ್ನು ಹೇಗೆ ಸಂಪಾದಿಸಬೇಕು ಎಂಬುದಕ್ಕೆ ನಿದರ್ಶನವಾಗಿದೆ.

ಡಾ. ನಂದೀಮಠರು ಎರಡು ಸ್ಮರಣಗ್ರಂಥಗಳನ್ನು ಹೊರತಂದಿದ್ದಾರೆ. ಬಾಲಲೀಲಾ ಮಹಾಂತ ಶಿವಯೋಗಿಗಳ ಶತಮಾನೋತ್ಸವದ ಸಂದರ್ಭದಲ್ಲಿ ಡಾ. ಎಂ.ಎಸ್. ಸುಂಕಾಪುರ ಅವರ ಸಹಯೋಗದೊಂದಿಗೆ ಮುರುಘಾಮಠದಿಂದ 'ವೈರಾಗ್ಯದಲರು' ಎಂಬ ಸಂಸ್ಮರಣ ಗ್ರಂಥವನ್ನು ಹೊರತಂದಿದ್ದಾರೆ. ಈ ಗ್ರಂಥದಲ್ಲಿ ಬಾಲಲೀಲಾ ಶಿವಯೋಗಿಗಳನ್ನು ಕುರಿತು ವಿವಿಧ ವಿಷಯಗಳಿಗೆ ಸಂಬಂಧಿಸಿದ ವೀರಶೈವ ಲೇಖನಗಳಿವೆ. ಬೇರೆ ಬೇರೆ ವಿದ್ವಾಂಸರು ಬರೆದ ವಿವಿಧ ವಿಷಯಗಳಿಗೆ ಸಂಬಂಧಿಸಿದ ಇಪ್ಪತ್ತೆಂಟು ಲೇಖನಗಳು ಸಮಾಹಿತವಾಗಿವೆ. ಈ ಲೇಖನಗಳನ್ನು ವಿಷಯಾನುಕ್ರಮವಾಗಿ ವ್ಯವಸ್ಥಿತವಾಗಿ ಅಳವಡಿಸಿ ಹೊರತರಲಾಗಿದೆ.

ಡಾ. ನಂದೀಮಠ ಅವರು ಕುವೆಂಪು ಅವರ ಜೊತೆಗೂಡಿ ಕರ್ನಾಟಕದ ಗಾಂಧಿ ಎಂದೇ ಹೆಸರುವಾಸಿಯಾದ ಶ್ರೀ ಹರ್ಡೇಕರ್ ಮಂಜಪ್ಪನವರ ಸಂಸ್ಮರಣೆಗಾಗಿ ಪ್ರಕಟಗೊಂಡ ಗ್ರಂಥ ಹರ್ಡೇಕರ್ ಮಂಜಪ್ಪನವರ ಸ್ಮಾರಕ ಗ್ರಂಥ. ಈ ಗ್ರಂಥದಲ್ಲಿ ಮಂಜಪ್ಪನವರ ಸಮಕಾಲೀನ ಗಣ್ಯವ್ಯಕ್ತಿಗಳ ಲೇಖನಗಳಿವೆ.

**ದಮ್ಮಪದ** ಡಾ. ನಂದೀಮಠರು ಅನುವಾದಿಸಿದ ಬೌದ್ಧಕೃತಿ. ಬುದ್ಧನ ಬೋಧನೆಗಳನ್ನೊಳಗೊಂಡ ಕೃತಿ ಪಾಲಿಭಾಷೆಯಿಂದ ಕನ್ನಡಕ್ಕೆ ಅನುವಾದಗೊಂಡಿದೆ. ಇದು ವೀರಶೈವ ಪತ್ರಿಕೆಯಲ್ಲಿ ಭಾಗಭಾಗವಾಗಿ ಪ್ರಕಟಗೊಂಡು ೧೯೧ ಪುಟಗಳ ಕೃತಿಯಾಗಿ ಹೊರಬಂದಿದೆ. ಈ ಗ್ರಂಥಕ್ಕೆ ವಿಸ್ತಾರವಾದ ಪ್ರಸ್ತಾವನೆಯನ್ನು ಬರೆದು ಬೌದ್ಧಧರ್ಮದ ತತ್ವಗಳನ್ನು ಪರಿಚಯ ಮಾಡಿಕೊಡಲಾಗಿದೆ. ಇಲ್ಲಿ ಬರುವ ಕಥೆಗಳಿಗೆ ಸಂವಾದಿಯಾದ ಶ್ಲೋಕಗಳನ್ನು ಸಂಸ್ಕೃತದಿಂದ ಹುಡುಕಿಕೊಟ್ಟಿದೆ. ಬೌದ್ಧಧರ್ಮ ಮತ್ತು ಹಿಂದೂಧರ್ಮದ ತೌಲನಿಕ ವಿವೇಚನೆಯನ್ನು ಮಾಡಲಾಗಿದೆ.

ಡಾ. ನಂದೀಮಠ ಅವರು ನಾಡು-ನುಡಿ, ಧರ್ಮ, ಸಾಹಿತ್ಯ, ಸಂಸ್ಕೃತಿಗಳಿಗೆ ಸಂಬಂಧಿಸಿದಂತೆ ಹಲವಾರು ಸಂಶೋಧನಾತ್ಮಕ ಮೌಲಿಕ ಲೇಖನಗಳನ್ನು ಬರೆದಿದ್ದಾರೆ. ಶಿವಾನುಭವ ಜ್ಞಾನಪ್ರಸಾದ, ಕರ್ನಾಟಕ ಭಾರತಿ, ಶರಣ ಸಾಹಿತ್ಯ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಈವರೆಗೆ ಸುಮಾರು ಅರುವತ್ತು ಲೇಖನಗಳು ಲಭ್ಯವಾಗಿದ್ದು ಅವನ್ನು ಸ್ಥೂಲವಾಗಿ ಈ ರೀತಿ ವಿಭಜಿಸಬಹುದಾಗಿದೆ.

**೧. ಶಾಸನಕ್ಕೆ ಸಂಬಂಧಿಸಿದ ಲೇಖನಗಳು:**

೧. ಶಾಸನದ ಮೂಲ, ೨. ಕುರುಂಬೆಟ್ಟದ ಶಿಲಾಶಾಸನವು, ೩. ಗುಮ್ಮಳಾಪುರದ ದಾನಶಾಸನಗಳು, ೪. ಚೌಡದಾನಪುರದ ಶಿಲಾಶಾಸನಗಳು, ೫. ಮನಗೂಳಿ ಶಾಸನ.

**೨. ವೀರಶೈವ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳು:**

೧. ವೀರಶೈವ ಇತಿಹಾಸ ಮತ್ತು ಧರ್ಮ, ೨. ಹಿಂದೂಧರ್ಮದ ಸ್ವರೂಪ, ೩. ದೇವರ ಕಲ್ಪನೆ, ೪.ಇಪ್ಪತ್ತನೆಯ ಶ್ರೀಶೈಲ ವೀರಶೈವ ಮಹಾಸಭೆಯ ಅಧ್ಯಕ್ಷರ ಭಾಷಣ, ೫. ಲಿಂಗಧಾರಣೆಯು ಎಂದಿನಿಂದ ರೂಢಿಯಲ್ಲಿ ಬಂದಿದೆ, ೬. ಸೂಕ್ಷ್ಮತಂತ್ರ, ೭. ಶೈವಧರ್ಮಗಳು, ೮. ಶೈವಾಗಮಗಳು, ೯. ದುರುದುಂಡೇಶ್ವರ ಮಠ, ೧೦. ಬಸವಣ್ಣನವರ ಜನನ ಕಾಲ, ೧೧. ಸೌರಾಷ್ಟ್ರ ಸೋಮೇಶ್ವರ, ೧೨. ಶ್ರೀಕರಭಾಷ್ಯ, ೧೩. ಮಧುರಾವಿಜಯ, ೧೪. ಸಂಸ್ಕೃತ ಬಸವ ಪುರಾಣಗಳು, ೧೫. ಪಾರಮೇಶ್ವರಾಗಮ, ೧೬. ಯೋಗವು-ವೀರಶೈವದಲ್ಲಿ.

**೩. ವಚನಶಾಸ್ತ್ರಕ್ಕೆ ಸಂಬಂಧಿಸಿದ ಲೇಖನಗಳು:**

೧. ವಚನ ವಾಙ್ಮಯ ೨. ವಚನ ವಾಙ್ಮಯ ಮತ್ತು ಅದರ ಮೇಲೆ ಸಂಸ್ಕೃತದ ಪ್ರಭಾವ.

**೪. ಇತಿಹಾಸಕ್ಕೆ ಸಂಬಂಧಿಸಿದ ಲೇಖನಗಳು:**

೧. ನಮ್ಮ ನಾಡಿನ ಘನತೆ, ೨. ಕಲ್ಯಾಣದ ಚಾಳುಕ್ಯರು, ೩. ಬಾದಾಮಿಯ ಚಾಲುಕ್ಯರು, ೪. ಕಲ್ಯಾಣದ ಕಲಚೂರಿಗಳು, ೫. ಸಾಮಾಜಿಕ ಜೀವನ (ರಾಷ್ಟ್ರಕೂಟ, ಚಾಲುಕ್ಯ) ಮತ್ತು ಆರ್ಥಿಕ ಪರಂಪರೆ, ೬. ಮತ, ಸಮಾಜ ಮತ್ತು ಸಂಸ್ಕೃತಿ, ೭. ಕೆಳದಿ ಬಿದನೂರು ಇತಿಹಾಸ, ೮. ಪಾಟಲೀಪುತ್ರ, ೯. ಐತಿಹಾಸಿಕ ಟಿಪ್ಪಣಿಗಳು, ೧೦.ಕೊಲ್ಲಿಪಾಕಿ.

**೫. ಕಾವ್ಯಮೀಮಾಂಸೆ ಕುರಿತ ಲೇಖನ:**

ಕರುಣಾರಸ

**೬. ವ್ಯಕ್ತಿಚಿತ್ರಕ್ಕೆ ಸಂಬಂಧಿಸಿದ ಲೇಖನಗಳು:**

೧. ಕ್ರೈಸ್ತವಾಸಿ ರೆವರೆಂಡ್ ಉತ್ತಂಗಿ ಚೆನ್ನಪ್ಪನವರ ಸ್ಮರಣೆ, ೨. ನಾರಾಯಣ ರಾಮಲಿಂಗ ಬಾಮಣಗಾಂರಕರ, ೩. ಬಸವನಾಳರ ಸಹನಶೀಲತೆ, ೪. ರಾಯರಾಜಗುರು ಕ್ರಿಯಾಶಕ್ತಿ, ೫. ನಮ್ಮ ಬಸವನಾಳರು, ೭. ಸರದಾರ ಎಂ.ಎಸ್.

**೭. ಇತರ ಲೇಖನಗಳು:**

೧. ಕೈಬರಹದ ಗ್ರಂಥಗಳ ಶೋಧನೆಯು, ೨. ಪ್ರಾಣಿಗಳಲ್ಲಿ ಮಾನವನು ಕನಿಷ್ಠನು, ೩. ಯಕ್ಷಪ್ರಶ್ನೆ, ೪. ಧಮ್ಮಪದ.

**೮. ಇಂಗ್ಲಿಷ್ ಲೇಖನಗಳು:**

1. Basaveswara in Sanskrit Literature, 2. Relation between the Chalukya of Badami and Kalyana, 3. Saivism in the Vedic epic and pouranik period, 4. Basaveswara, 5. Studies in Inscriptions, 6. A Broken stone inscription.

ಡಾ. ನಂದೀಮಠ ಅವರ ಮಹತ್ವಪೂರಿತ ಸಂಶೋಧನ ಲೇಖನಗಳು ಹೊಸಬೆಳಕನ್ನು ಚೆಲ್ಲುತ್ತವೆ. ಇವು ಸಂಖ್ಯಾಬಾಹುಳ್ಯವಿಲ್ಲದಿದ್ದರೂ ಅವುಗಳ ಗುಣದಿಂದ ಅಂತಸ್ಸತ್ವದಿಂದ ಮೌಲಿಕವಾಗಿವೆ ಎಂದು ಭಾವಿಸಬಹುದಾಗಿದೆ.

ಡಾ. ನಂದೀಮಠರ ಶಿಕ್ಷಮ, ಸಾಹಿತ್ಯ, ಸಂಸ್ಕೃತಿ, ಸಮಾಜ ಸೇವೆಗಳ ನಿರಂತರ ನಿಸ್ವಾರ್ಥಸೇವೆಗೆ ಸಂದ ಪದವಿ ಪ್ರಶಸ್ತಿಗಳತ್ತ ದೃಷ್ಟಿಯನ್ನು ಹರಿಸುವುದು ಅಗತ್ಯವಾಗಿದೆ.

೧೯೪೦ ಮೇ ತಿಂಗಳಿನಲ್ಲಿ ಕುಂಭಕೋಣಂನಲ್ಲಿ ನಡೆದ ಅಖಿಲ ಭಾರತ ವೀರಶೈವ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಕಾರ್ಯವನ್ನು ನಿರ್ವಹಿಸಿದ್ದಾರೆ.

ಬೇಲೂರಿನಲ್ಲಿ ೧೯೫೨ರಲ್ಲಿ ಜರುಗಿದ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಅವರು ವ್ಯಕ್ತಪಡಿಸಿದ ವಿಚಾರಗಳು ಮನನೀಯವಾಗಿವೆ.

ಶೈಕ್ಷಣಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಅವರು ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ೧೯೫೪ ರಿಂದ ೧೯೫೬ರ ವರೆಗೆ ಮುಂಬಯಿ ವಿಧಾನ ಪರಿಷತ್ತಿಗೆ ಆಯ್ಕೆ ಮಾಡಲಾಗಿತ್ತು.

೧೯೫೮ ರಿಂದ ೧೯೬೨ ರವರೆಗೆ ಮೈಸೂರು ವಿಧಾನ ಪರಿಷತ್ತಿನ ಸದಸ್ಯರಾಗಿ ನೇಮಕ ಮಾಡಲಾಗಿತ್ತು.

ಡಾ. ನಂದೀಮಠರ ಪ್ರಕಾಂಡ ಪಾಂಡಿತ್ಯವನ್ನೂ ಶಿಕ್ಷಣ ಸೇವೆಯನ್ನೂ ಗುರುತಿಸಿ ಕರ್ನಾಟಕ ವಿಶ್ವವಿದ್ಯಾಲಯ ಅವರಿಗೆ ಅಕ್ಟೋಬರ್ ೧೯೭೫ರಲ್ಲಿ ಡಿ.ಲಿಟ್ ಗೌರವ ಪದವಿಯನ್ನಿತ್ತು ಗೌರವಿಸಿತು.

ಶಿಕ್ಷಣ ಕ್ಷೇತ್ರದಲ್ಲಿ ಡಾ. ನಂದೀಮಠರು ಸಲ್ಲಿಸಿದ ಸೇವೆಗಾಗಿ ರಾಜ್ಯ ಸರಕಾರದ 'ಸಾರ್ವಜನಿಕ ಸೇವಾ ಪ್ರಶಸ್ತಿ'ಯನ್ನಿತ್ತು ಗೌರವಿಸಲಾಯಿತು.

ಮುಂಬಯಿ ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರಾಗಿ, ಸಂಸ್ಕೃತ ಮಂಡಳಿಯ ಸದಸ್ಯರಾಗಿ, ಕನ್ನಡ ಅಭ್ಯಾಸ ಮಂಡಲಿಯ ಅಧ್ಯಕ್ಷರಾಗಿ ೧೯೩೪ ರಿಂದ ೧೯೫೫ ರವರೆಗೆ ಕಾರ್ಯನಿರ್ವಹಿಸಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯದ ಸೆನೆಟ್, ಅಕೆಡೆಮಿಕ್ ಕೌನ್ಸಿಲ್ ಸದಸ್ಯರಾಗಿಯೂ ಸಂಸ್ಕೃತ ಪಾಳಿ ಪ್ರಾಕೃತ ಮಂಡಳಿಗಳ ಅಧ್ಯಕ್ಷರಾಗಿಯೂ ಇದ್ದರು.

ಡಾ. ನಂದೀಮಠರು ಅನೇಕ ವಿದ್ಯಾಸಂಸ್ಥೆಗಳಿಗೆ ನಾನಾ ರೀತಿಯಲ್ಲಿ ಸೇವೆ ಸಲ್ಲಿಸಿದ್ದಾರೆ. ಆ ಪಟ್ಟಿ ಇಂತಿದೆ:

೧೯೪೨-೧೯೫೧ ಪುಣೆಯ ಭಂಡಾರಕರ ಪ್ರಾಚ್ಯಸಂಶೋಧನ ಸಂಸ್ಥೆಯ ರೆಗ್ಯುಲೇಷನ್ ಕೌನ್ಸಿಲ್ ಸದಸ್ಯ.

೧೯೪೨-೧೯೫೬ ಪುಣೆಯ ಡೆಕ್ಕನ್ ಕಾಲೇಜಿನ ಸ್ನಾತಕೋತ್ತರ ಮತ್ತು ಸಂಶೋಧನ ಸಂಸ್ಥೆಯ ಸದಸ್ಯ.

೧೯೩೮-೧೯೪೮ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ಕಾರ್ಯಾಧ್ಯಕ್ಷ.

೧೯೫೦-೧೯೬೭ ಮೈಸೂರು ಪ್ರಾಚ್ಯಸಂಶೋಧನ ಸಂಸ್ಥೆಯ ಸಲಹಾ ಮಂಡಲಿಯ ಸದಸ್ಯ.

೧೯೪೮-೧೯೫೭ ಮುಂಬಯಿ ಸರಕಾರದ ಮುಂಬಯಿ ಗೆಝೆಟಿಯರ್ ಪರಿಷ್ಕರಣ ಸಮಿತಿ ಸದಸ್ಯ.

೧೯೫೮-೧೯೬೮ ನವಮೈಸೂರ್ ಗೆಝೆಟಿಯರ್ ಪರಿಷ್ಕರಣ ಸಮಿತಿ ಸದಸ್ಯ

೧೯೫೮-೧೯೬೮ ಮೈಸೂರು ಸರಕಾರದ ವಿಶ್ವಕೋಶ ಸಮಿತಿ ಸದಸ್ಯ.

೧೯೬೨-೧೯೬೮ ಮೈಸೂರು ಸರಕಾರದ "ಕರ್ನಾಟಕ ಥ್ರೂ ದಿ ಏಜಸ್" ಸಂಪುಟದ ಸದಸ್ಯ.

೧೯೫೪-೧೯೬೬ ಕರ್ನಾಟಕ ವಿಶ್ವವಿದ್ಯಾಲಯ ಪತ್ರಿಕೆಯ ಸದಸ್ಯ.

೧೯೪೬-೧೯೪೭ ಕರ್ನಾಟಕ ವಿಶ್ವವಿದ್ಯಾಲಯ ಸ್ಥಾಪನೆಗಾಗಿ ರಚಿತಗೊಂಡ ನ್ಯಾಯಮೂರ್ತಿ ಲೋಕೂರ ಸಮಿತಿಯ ಸದಸ್ಯ.

೧೯೫೬-೧೯೬೬ ಮೈಸೂರು ರಾಜ್ಯ ಶಿಕ್ಷಣ ಸಲಹಾ ಮಂಡಳಿಯ ಸದಸ್ಯ.

೧೯೫೮-೧೯೫೯ ಮೈಸೂರು ಸರಕಾರದ ಶಿಕ್ಷಣ ಪರಿಷ್ಕರಣ ಸಮಿತಿಸ ಸದಸ್ಯ.

೧೯೫೮ ಡಾ. ಲಕ್ಷ್ಮಣಸ್ವಾಮಿ ಮೊದಲಿಯಾರ್ ಅವರ ಅಧ್ಯಕ್ಷತೆಯಲ್ಲಿಯ ವಿಶ್ವವಿದ್ಯಾಲಯ ಪರಿಷ್ಕರಣ ಸಮಿತಿ ಸದಸ್ಯ.

೧೯೬೬-೧೯೬೮ ಮೈಸೂರು ರಾಜ್ಯ ಸಾಹಿತ್ಯ ಅಕಾಡೆಮಿ ಸದಸ್ಯ.

೧೯೬೬-೧೯೬೮ ನವದಿಲ್ಲಿಯ ಕೌನ್ಸಿಲ್ ಆಫ್ ಇಂಡಿಯನ್ ಕಲ್ಚರ್ ಸದಸ್ಯ.

೧೯೪೬-೧೯೫೬ ಮುಂಬಯಿ ಸರ್ಕಾರದ ಕನ್ನಡ ಪಠ್ಯಪುಸ್ತಕ ಸಮಿತಿ ಸದಸ್ಯ.

೧೯೪೬-೧೯೫೦ ಮುಂಬಯಿ ಸರ್ಕಾರದ ಮಾಧ್ಯಮಿಕ ಶಿಕ್ಷಣ ಮಂಡಳಿ ಸದಸ್ಯ.

೧೯೫೮-೧೯೬೪ ಮೈಸೂರು ಸರಕಾರದ ಕನ್ನಡ ಪಠ್ಯಪುಸ್ತಕ ಸಮಿತಿ ಸದಸ್ಯ.

೧೯೫೮-೧೯೬೭ ಮೈಸೂರು ಸರಕಾರದ ಮಾಧ್ಯಮಿಕ ಶಿಕ್ಷಣ ಸಮಿತಿಯ ಸದಸ್ಯ.

ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಉತ್ತರ ಕರ್ನಾಟಕದ ಸಂಪ್ರದಾಯಸ್ಥ ವೀರಶೈವ ಕುಟುಂಬದಲ್ಲಿ ಜನಿಸಿದ ನಂದೀಮಠರು ತಮ್ಮ ಅಸಾಧಾರಣ ಪ್ರತಿಭೆಯಿಂದಲೂ ನಿರಂತರ ವ್ಯಾಸಂಗದಿಂದಲೂ ಪ್ರಕಾಂಡ ಪಂಡಿತರಾದರು. ಶಿಕ್ಷಣರಂಗವನ್ನು ಪ್ರವೇಶಿಸಿದ ಶ್ರೀಯುತರು ನಾಡುನುಡಿಗಳ ಪರಮಾರಾಧಕರಾಗಿ ಶಿಕ್ಷಣತಜ್ಞರಾಗಿ ಶೈಕ್ಷಣಿಕವಾಗಿ ಹಿಂದುಳಿದಿದ್ದ ಉತ್ತರ ಕರ್ನಾಟಕದ ಬೆಳಗಾವಿ ಧಾರವಾಡ ಬಾಗಲಕೋಟೆಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನೂ ಶಾಲಾಕಾಲೇಜುಗಳನ್ನೂ ಸ್ಥಾಪಿಸಿ ಅಲ್ಲಿಯ ಜನತೆಯ ಆರಾಧ್ಯಮೂರ್ತಿಯಾಗಿದ್ದಾರೆ. ಎಪ್ಪತ್ತಮೂರು ವರ್ಷಗಳ ಜೀವಿತಾವಧಿಯಲ್ಲಿ 'ನ ಭೂತೋ ನ ಭವಿಷ್ಯತಿ' ಎಂಬಂತಹ ಲೋಕೋತ್ತರ ಕಾರ್ಯಗಳನ್ನು ಮಾಡಿ ತಮ್ಮ ಹೆಸರನ್ನು ಚಿರಸ್ಥಾಯಿಗೊಳಿಸಿದ್ದಾರೆ.

■

# ಬಳ್ಳಾರಿ ಪ್ರಾಂತದ ಕೆಲವು ಕನ್ನಡ ಗತಕವಿಗಳು

ಬಳ್ಳಾರಿ ಪ್ರಾಂತವು ತನ್ನದೇ ಆದ ಒಂದು ವೈಶಿಷ್ಟ್ಯದಿಂದ ಕೂಡಿದೆ. ಇದಕ್ಕೆ ವಿಜಯನಗರಕ್ಕಿಂತಲೂ ಪ್ರಾಚೀನತೆ ಇದೆ. ಭಕ್ತಿಮುಕ್ತಿಗಳಿಗೆ ಕೇಂದ್ರವಾದ ಪಂಪಾವಿರೂಪಾಕ್ಷ ನೆಲಸಿರುವುದು ಈ ಪವಿತ್ರ ನಾಡಿನಲ್ಲಿ. ಪತಿತರನ್ನು ಪಾವನ ಮಾಡುವ ತುಂಗಭದ್ರೆ ಪ್ರವಹಿಸುವುದು ಇಲ್ಲಿಯೇ. ಇಂತಹ ಸ್ವಾಭಾವಿಕ ರಮಣೀಯ ಪ್ರಕೃತಿ ಸೌಂದರ್ಯವು ಹಲವಾರು ಕವಿಗಳನ್ನು ತನ್ನೆಡೆಗೆ ಸೆಳೆದುಕೊಂಡದ್ದರಲ್ಲಿ ಆಶ್ಚರ್ಯವೇನಿಲ್ಲ. ಕವಿಗಳಿಗೆ ಸ್ಫೂರ್ತಿಯನ್ನೇ ಅಲ್ಲದೆ ಶಾಂತಿ, ದಾಂತಿ, ತುಷ್ಟಿ, ಪುಷ್ಟಿಗಳನ್ನೂ ದಯಪಾಲಿಸಿತು. ಪಂಪಾವಿರೂಪಾಕ್ಷನ ಸಾನಿಧ್ಯದಲ್ಲೇ ನೆಲಸಿ ಮುಕ್ತರಾದ ಕವಿಗಳೂ ಉಂಟು. ಅವರಲ್ಲಿ ಭಕ್ತಕವಿ ಹರಿಹರ ಮತ್ತು ಆತನ ಶಿಷ್ಯ ರಾಘವಾಂಕ ಪ್ರಮುಖರು.

ವಿಜಯನಗರ ಸಾಮ್ರಾಜ್ಯ ಸ್ಥಾಪಿತವಾದ ಮೇಲೆ ಬಳ್ಳಾರಿಯೂ ಅದರಲ್ಲಿ ವಿಲೀನವಾಯಿತು. ಆದುದರಿಂದ ಬಳ್ಳಾರಿಯ ಕವಿಗಳು ವಿಜಯನಗರದ ಕವಿಗಳೂ ಹೌದು. ಪ್ರಸ್ತುತ ಲೇಖನದಲ್ಲಿ ಈ ಬಳ್ಳಾರಿ ಪ್ರಾಂತದ ಕವಿಗಳ ಕೇವಲ ಪರಿಚಯವನ್ನು ಮಾತ್ರ ಮಾಡಿಕೊಡಲಾಗಿದೆ. ಅವರ ಸಮಗ್ರ ಚರಿತ್ರೆಯನ್ನಾಗಲಿ, ಕಾವ್ಯಗಳ ವಿಮರ್ಶೆಯನ್ನಾಗಲಿ ಮಾಡುವುದಕ್ಕೆ ಇಲ್ಲಿ ತೊಡಗಿಲ್ಲ.

### ಹಂಪೆಯ ಮಾದಿರಾಜ
(ಕ್ರಿ.ಶ. ಸು. ೧೧೦೦)

ರಾಘವಾಂಕನು ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಈತನನ್ನು "ಸುಕವಿ" ಎಂದು ಹೇಳುವುದರಿಂದ ಇವನು ಕವಿಯಾಗಿದ್ದಿರಬೇಕು. ಆ ಗ್ರಂಥದಲ್ಲಿ ಕೊಟ್ಟಿರುವ ಗುರುಪರಂಪರೆಯಂತೆ ಈತನು ಹರೀಶ್ವರ (ಸು.೧೧೬೫) ತಂದೆಯ ಗುರುವಿನ ಗುರುವಾದುದರಿಂದ ಸುಮಾರು ೧೧೦೦ರಲ್ಲಿ ಇದ್ದಿರಬಹುದು. ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

### ಹರೀಶ್ವರ
(ಕ್ರಿ.ಶ. ಸು. ೧೧೬೫)

ಈತನು ಗಿರಿಜಾಕಲ್ಯಾಣ, ಪಂಪಾಶತಕ, ಶಿವಗಣದ ರಗಳೆಗಳು, ಮುಡಿಗೆಯ ಅಷ್ಟಕ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಅಲ್ಲದೆ ರಕ್ಷಾಶತಕ, ಶಿವಾಕ್ಷರ ಮಾಲೆ ಎಂಬ ಗ್ರಂಥಗಳನ್ನೂ ರಚಿಸಿರುವಂತೆ ತಿಳಿಯಬರುತ್ತದೆ. ಶಿವಾಕ್ಷರ ಮಾಲೆ ನಮಗೆ ದೊರೆತಿಲ್ಲ.

ಇವನು ವೀರಶೈವಕವಿ; ನರಸಿಂಹ ಬಲ್ಲಾಳನ (೧೧೪೧-೧೧೭೩) ಆಳಿಕೆಯಲ್ಲಿ ಹಳೆಯಬೀಡಿನಲ್ಲಿ 'ಕರಣಿಕ ಕುಲತಿಲಕ'ನಾಗಿದ್ದನು. ಈತನ ಗುರು ಹಂಪೆಯ ಮಾಯಿದೇವ; ಇವನ ಸೋದರಳಿಯ ರಾಘವಾಂಕ. ಈತನ ಕಾಲದಲ್ಲಿ ಕೆರೆಯ ಪದ್ಮರಸನು ನರಸಿಂಹಬಲ್ಲಾಳನಲ್ಲಿ ಮಂತ್ರಿಯಾಗಿದ್ದನು; ಈ ದೊರೆಯ ಮಗನಾದ ಬಿಟ್ಟಿ ಬಲ್ಲಾಳನು

ಯುವರಾಜನಾಗಿದ್ದನು. ನರಸಿಂಹಬಲ್ಲಾಳನು ತನ್ನ ಕರಣಿಕನಾದ ಈತನನ್ನು ಲೆಕ್ಕವನ್ನು ಕೇಳಿದಾಗ, ಈತನು ಕಡಿತವನ್ನು ಬಿಟ್ಟು ಕೈಗಳನ್ನು ಒರಸಲು, ದೊರೆ ಅದೇನೆಂದು ಕೇಳಲಾಗಿ– ಪಂಪಾವಿರೂಪಾಕ್ಷನಾಲಯದಲ್ಲಿ ಆರತಿಯನ್ನು ಎತ್ತಿದಾಗ ಅದರ ಸೆಕೆಹತ್ತಿ ಮೇಲ್ಕಟ್ಟಿನ ಬಟ್ಟೆ ಭುಗಿಲೆಂದು ಉರಿವುದನ್ನು ಕಂಡು ಕೈಯಿಂದ ಒರಸಿ ಆರಿಸಿದೆನು –ಎಂದು ಹೇಳಿದಂತೆಯೂ; ದೊರೆ ಆ ಮಾತನ್ನು ನಂಬದೆ ವಿರೂಪಾಕ್ಷನಾಲಯಕ್ಕೆ ಒಬ್ಬ ದೂತನನ್ನು ಕಳುಹಿ ಹರೀಶ್ವರನು ಹೇಳಿದುದು ನಿಜವೆಂದು ತಿಳಿದು ಆಶ್ಚರ್ಯಪಟ್ಟು ಈತನನ್ನು ವಿರೂಪಾಕ್ಷಾಲಯದಲ್ಲಿ ಬರೆದುಕೊಂಡಿಹುದೆಂದು ಕಳುಹಿದಂತೆಯೂ; ಪದ್ಮರಸನು ಕಾಶಿಗೆ ಹೋಗುವಾಗ ಪಂಪೆಗೆ ಬಂದು ಈತನನ್ನು ನೋಡಿ– 'ಉಮಾವರಂ ನಿಮ್ಮ ನಿಂದಿಗೆಂಟನೆಯ ದಿನಕೆ ತನ್ನೊಳ್ ನೆರಪಲಿರ್ದಪಂ, ಅಂತಜೆಂ ನೀಮಿಗಳೊರೆವ ಮಹಾಕಾವ್ಯಮಂ ಅನಿತಜೊಳ್ ಪಾರವೆಯ್ದಿಪುದು' ಎಂದು ಹೇಳಿ ಹೋದಂತೆಯೂ; ತನ್ನ ಸೋದರಳಿಯನಾದ ರಾಘವನು ಗತಿಸಿದ ಎಂಟು ದಿನಕ್ಕೆ ಈತನು ಪಂಪಾವಿರೂಪಾಕ್ಷ ಲಿಂಗದೊಳಗೆ ಅಡಗಿದಂತೆಯೂ ಚೆನ್ನಬಸವಪುರಾಣ ಪದ್ಮರಾಜ ಪುರಾಣಗಳಿಂದ ತಿಳಿಯಬರುತ್ತದೆ.

ಈತನಿಗೆ ಹರಿದೇವ, ಹರಿಹರ, ಹರಿಗ, ಹರಿ, ಹರಿಯಣ್ಣ ಪಂಡಿತ, ಹಂಪೆಯ ಹರೀಶ್ವರ ಎಂಬ ಹೆಸರುಗಳುಂಟು. 'ಪರಮಾನಂದಾಬ್ಧಿ ಪಂಪಾಪುರದರಸ ವಿರೂಪಾಕ್ಷ ಸಾಕ್ಷಾತ್ಸುಪುತ್ರಂ' ಎಂದು ಹೇಳಿಕೊಂಡಿದ್ದಾನೆ. ಹಂಪೆಯ ವಿರೂಪಾಕ್ಷನನ್ನೇ ತನ್ನ ಗ್ರಂಥಗಳಲ್ಲಿ ವಿಶೇಷವಾಗಿ ಕೊಂಡಾಡಿದ್ದಾನೆ.

ಈತನನ್ನು ಪ್ರಾಯಶಃ ಎಲ್ಲಾ ವೀರಶೈವ ಕವಿಗಳೂ ಸ್ತುತಿಸಿದ್ದಾರೆ. ಅವರಲ್ಲಿ ಇವನೇ ಪ್ರಬಲನಾದ ಪೂರ್ವಕವಿ ಎನ್ನಬಹುದು.

### ರಾಘವಾಂಕ

### (ಕ್ರಿ.ಶ. ಸು. ೧೧೬೫)

ಈತನು ಹರಿಶ್ಚಂದ್ರ ಕಾವ್ಯ, ಸೋಮನಾಥ ಚರಿತೆ, ಸಿದ್ಧರಾಮ ಪುರಾಣ, ವೀರೇಶ್ವರ ಚರಿತೆ, ಶರಭ ಚಾರಿತ್ರ, ಹರಿಹರ ಮಹತ್ವ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಕೊನೆಯ ಎರಡು ಗ್ರಂಥಗಳು ದೊರೆತಿಲ್ಲ. ಆದರೂ ಇವು ರಾಘವಾಂಕ ಕೃತವೆಂದು ಸಿದ್ಧನಂಜೇಶನ (ಸು.೧೬೫೦) ರಾಘವಾಂಕ ಚಾರಿತ್ರದಿಂದ ತಿಳಿಯಬರುತ್ತದೆ. ಅಲ್ಲದೆ ಈತನು ಹರಿಶ್ಚಂದ್ರ ಕಾವ್ಯವನ್ನು ರಚಿಸಿ ನರಸ್ತುತಿ ಮಾಡಿದುದರಿಂದ ಈತನ ಸೋದರಮಾವನೂ ಗುರುವೂ ಆದ ಹರೀಶ್ವರನು ಕೋಪಗೊಂಡು ಇವನ ಐದುಹಲ್ಲುಗಳನ್ನು ಮುರಿದು ಕಳೆದು ಇವನಿಂದ ಐದುಶೈವಕೃತಿಗಳನ್ನು ಮಾಡಿಸಿ ಮರಳಿ ಹಲ್ಲುಗಳನ್ನು ಕೊಟ್ಟನೆಂದು ಪದ್ಮರಾಜಪುರಾಣ, ಭೈರವೇಶ್ವರನ ಕಾವ್ಯದ ಕಥಾಸೂತ್ರ ರತ್ನಾಕರಗಳಿಂದ ತಿಳಿದುಬರುತ್ತದೆ. ಇವನ ವಿಷಯವಾಗಿ ರಾಘವಾಂಕ ಚಾರಿತ್ರವೆಂಬ ಗ್ರಂಥವು ಹುಟ್ಟಿದೆ.

ಇವನ ಬಂಧವು ಪ್ರೌಢವಾಗಿಯೂ ಅರ್ಥಗಾಂಭೀರ್ಯವುಳ್ಳುದಾಗಿಯೂ ದೇಶ್ಯಪದಭೂಯಿಷ್ಠವಾಗಿಯೂ ಇದೆ. ಷಟ್ಪದೀಗ್ರಂಥಗಳನ್ನು ಬರೆವುದಕ್ಕೆ ಈತನೇ ಆದಿಕವಿಯೆಂದು ವೀರಶೈವರ ಗ್ರಂಥಗಳಲ್ಲಿ ಹೇಳಿದೆ. ಇದು ಚರ್ಚಾಸ್ಪದವಾದ ವಿಷಯವು. ಈತನ ಗ್ರಂಥಗಳಲ್ಲಿ ಶಬ್ದಮಣಿದರ್ಪಣಾದಿ ವ್ಯಾಕರಣ ಪ್ರಕ್ರಿಯೆಗಳಿಗೆ ವಿರೋಧವಾದ, ಆಗ್ಗೆ ವ್ಯವಹಾರದಲ್ಲಿದ್ದಿರಬಹುದಾದ ಹಲವು ಪ್ರಯೋಗಗಳು ದೊರೆಯುತ್ತವೆ.

### ಮಧುರ

### (ಕ್ರಿ.ಶ. ಸು. ೧೩೮೫)

ಈತನು ಧರ್ಮನಾಥ ಪುರಾಣವನ್ನೂ ಗುಮ್ಮಟಸ್ತುತಿರೂಪವಾದ ಒಂದು ಅಷ್ಟಕವನ್ನೂ ಬರೆದಿದ್ದಾನೆ. ಇವನು ಜೈನಕವಿ; ವಾಜಿವಂಶಕ್ಕೆ ಸೇರಿದವನು. ಭಾರದ್ವಾಜ ಗೋತ್ರದವನು. ಇವನ ತಂದೆ ವಿಷ್ಣು, ತಾಯಿ ನಾಗಾಂಬಿಕೆ, ಪೋಷಕ

ಬುಕ್ಕರಾಜಸುತ ಹರಿಹರರಾಯನ ಪ್ರಧಾನನಾದ ಮುದ್ದದಂಡೇಶ. "ಭೂನಾಥಾಸ್ಥಾನ ಚೂಡಾಮಣಿ" ಎಂಬುದರಿಂದ ಈತನು ಹರಿಹರನ ಆಸ್ಥಾನಕವಿಯಾಗಿದ್ದಿರಬೇಕು.

ಬುಕ್ಕರಾಜನ ಮಗನಾದ ಹರಿಹರರಾಯನು ೧೩೭೭ ರಿಂದ ೧೪೦೪ ರವರೆಗೆ ಆಳಿದುದಾಗಿ ತಿಳಿವುದರಿಂದ ಆ ರಾಜನ ದಂಡಾಧಿಪನಲ್ಲಿ ಆಶ್ರಿತನಾಗಿದ್ದ ಈ ಕವಿ ಸುಮಾರು ೧೩೮೫ರಲ್ಲಿ ಇದ್ದಿರಬಹುದು.

ಈತನಿಗೆ ಕಲಾವಿಲಾಸ, ಕವಿರಾಜ ಕಲಾವಿಲಾಸ, ಕವಿಮಾಧವ, ಮಧುರಮಾಧವ, ಸರಸಕವಿರಸಾಲ ವಸಂತ, ಭಾರತೀಮಾಲಸಕೇಳೀರಾಜಹಂಸ, ವಿಶ್ವವಿದ್ಯಾಸಮುದಯಸುಮನಸ್ಸಂಚರಚ್ಚಂಚರೀಕ ಎಂಬ ಬಿರುದುಗಳಿದ್ದಂತೆ ತೋರುತ್ತದೆ.

ಪೂರ್ವಕವಿಗಳಲ್ಲಿ ಪಂಪ, ಪೊನ್ನ, ರನ್ನ, ನಾಗಚಂದ್ರ, ನೇಮಿಚಂದ್ರ, ಜನ್ನ ಇವರನ್ನು ಸ್ತುತಿಸಿದ್ದಾನೆ. ಅಲ್ಲದೆ ತನ್ನ ಕವಿತಾಚಾತುರಿಯನ್ನು ಹೇಳುವ ಈ ಪದ್ಯದಲ್ಲಿ ಶ್ಲೇಷೆಯಿಂದ ಜನ್ನ, ರನ್ನ, ಪುಷ್ಪದಂತ, ಗಜಾಂಕುಶ, ಮನಸಿಜ, ಶ್ರೀವಿಜಯ, ಸುಜನೋತ್ತಂಸ, ಯಶಶ್ಚಂದ್ರ, ನೇಮಿಚಂದ್ರ ಇವರುಗಳ ಹೆಸರನ್ನೂ ಹೇಳಿದ್ದಾನೆ. ಇವನನ್ನು ಮೂರನೆಯ ಮಂಗರಸ ಮೊದಲಾದ ಕವಿಗಳು ಸ್ತುತಿಸಿದ್ದಾರೆ.

## ದೇಪರಾಜ

**(ಕ್ರಿ.ಶ. ಸು. ೧೪೧೦)**

ಈತನು ಸೊಬಗಿನ ಸೋನೆ, ಅಮರುಕ ಈ ಗ್ರಂಥಗಳನ್ನು ಬರೆದಿದ್ದಾನೆ. ಇವನು ವಿಜಯನಗರದ ರಾಜವಂಶಕ್ಕೆ ಸೇರಿದವನು. 'ಸಂಗಮೇಂದ್ರಕುಲದಿಂಗಡಲಿಗೆ ನೆಱೆದಿಂಗಳೆನಿಪ ಕಂಪಸುತನು: ಕಂಪಮಹೀಪತಿಕುಲರತ್ನಾಲಯ ರಾಕಾಮೃತರುಚಿ' ಎಂದು ಹೇಳಿಕೊಂಡಿದ್ದಾನೆ. ವಿಜಯನಗರದ ರಾಜರ ಮೂಲಪುರುಷನಾದ ಸಂಗಮನಿಗೆ ಕಂಪ ಎಂಬ ಮಗನಿದ್ದನು. ಈ ಕಂಪನ ತಮ್ಮನಾದ ಬುಕ್ಕರಾಯನಿಗೂ (೧೩೫೩-೧೩೭೭) ಕಂಪ ಎಂಬ ಒಬ್ಬ ಮಗನಿದ್ದನು. ಕವಿ ಈ ಎರಡನೆಯ ಕಂಪನ ಮಗನಾಗಿರಬಹುದೆಂದು ತೋರುತ್ತದೆ. ಹಾಗಿದ್ದ ಪಕ್ಷದಲ್ಲಿ ಇವನ ಕಾಲವು ಸುಮಾರು ೧೪೧೦ ಆಗಬಹುದು. ತ್ರ್ಯಂಬಕದೇವನಿಂದ ಕನ್ನಡ ಚಿತ್ರಾಶುಕವಿತ್ವವನ್ನು ಕಲಿತಂತೆ ಹೇಳುತ್ತಾನೆ. ಒಂದು ಕಡೆ "ಸುರಭುಜವನಿಪುರಪ್ರಭುಮಾಯಿ ಭೂವರಸೂನು ದೇವೇಂದ್ರ ಕೇಳ್" ಎಂದು ಸಂಬೋಧಿಸಿದ್ದಾನೆ. ಈ ದೇವೇಂದ್ರನಾರೋ ತಿಳಿಯದು.

ಪೂರ್ವಕವಿಗಳಲ್ಲಿ ವಾಲ್ಮೀಕಿ, ಕಾಳಿದಾಸ, ಬಾಣ ಇವರುಗಳನ್ನು ಸ್ಮರಿಸಿದ್ದಾನೆ.

## ಮಹಾಲಿಂಗದೇವ

**(ಕ್ರಿ.ಶ. ಸು. ೧೪೨೫)**

ಈತನು ಏಕೋತ್ತರಸ್ಥಲ, ಪ್ರಭುದೇವರ ಷಟ್ಸ್ಥಲಜ್ಞಾನ ಚಾರಿತ್ರ ವಚನದ ಟೀಕೆ ಇವುಗಳನ್ನು ಬರೆದಿದ್ದಾನೆ.

ಇವನು ವೀರಶೈವ ಕವಿ. ಇವನ ಶಿಷ್ಯ ಕುಮಾರ ಬಂಕನಾಥ. ಅವನ ಕರಜಾತ ಜಕ್ಕಣಾರ್ಯ. ಈ ಜಕ್ಕಣಾರ್ಯನು ಪ್ರೌಢದೇವರಾಯನಲ್ಲಿ (೧೪೧೯-೧೪೪೬) ದಂಡೇಶನಾಗಿದ್ದಂತೆ ತಿಳಿಯುತ್ತದೆ. ಇವನಿಗೋಸ್ಕರ ಮಹಾಲಿಂಗದೇವನು ಮೇಲೆ ಹೇಳಿದ ಗ್ರಂಥಗಳನ್ನು ಬರೆದುದಾಗಿ ತಿಳಿವುದರಿಂದ ಈತನ ಕಾಲವು ಸುಮಾರು ೧೪೨೫ ಆಗಬಹುದು. ಇವನಿಗೆ "ಪುಲಿಗೆರೆಯ ಪುರವರಾಧೀಶ್ವರ, ಅಪೂರ್ವಸ್ವಯಂಭು ಪ್ರಸನ್ನ ಚೆನ್ನದಕ್ಷಿಣ ಶ್ರೀಸೋಮನಾಥದೇವರ ದಿವ್ಯ ಶ್ರೀಪಾದಪದ್ಮಾರಾಧಕ, ತ್ರಿಕಾಂಡನಿಷ್ಠ, ಪರಮವೀರಶೈವಾಗಮಾಚಾರ್ಯ" ಎಂಬ ವಿಶೇಷಣಗಳು ಹೇಳಿವೆ. ಇವನಿಗೆ ವಾರಾಣಸೀಂದ್ರ ಎಂಬ ಹೆಸರೂ ಇದ್ದಂತೆ ತೋರುತ್ತದೆ.

## ಲಕ್ಕಣ್ಣ ದಂಡೇಶ
(ಕ್ರಿ.ಶ. ೧೪೨೮)

ಈತನು ಶಿವತತ್ವಚಿಂತಾಮಣಿಯನ್ನು ಬರೆದಿದ್ದಾನೆ. ಇವನು ವೀರಶೈವ ಕವಿ. ಮೂರುರಾಯರ ಗಂಡ, ಗಜವೇಂಟೆಕಾರ ಎಂಬ ಬಿರುದುಗಳುಳ್ಳ ದೇವರಾಯನಲ್ಲಿ ತಾನು ಮಹಾಪ್ರಧಾನನಾಗಿಯೂ ಅವನಿಗೆ ಆಪ್ತಮಿತ್ರನಾಗಿಯೂ ಅವನ ರಾಜ್ಯಾಭ್ಯುದಯಕ್ಕೆ ಕಾರಣಭೂತನಾಗಿಯೂ ಇದ್ದಂತೆ ತನ್ನ ಕಾವ್ಯದಲ್ಲಿ ಹೇಳಿಕೊಂಡಿದ್ದಾನೆ.

ಈ ದೊರೆ ೧೪೧೯ ರಿಂದ ೧೪೪೬ ರವರೆಗೆ ಆಳಿದ ವಿಜಯನಗರದ ರಾಜನಾದ ಪ್ರೌಢದೇವರಾಯನು. ಈತನಲ್ಲಿ ಕವಿ ಅಧಿಕಾರಿಯಾಗಿದ್ದ ವಿಷಯವು ಕೆಲವು ಶಾಸನಗಳಲ್ಲಿಯೂ ಹೇಳಿದೆ. ಕವಿಗೆ ಲಕ್ಕಣಾಮಾತ್ಯ, ಲಕ್ಕಣ್ಣ ಒಡೆಯ ಎಂಬ ಹೆಸರುಗಳೂ ಉಂಟು.

ಸಿದ್ಧನಂಜೇಶನು (ಸು. ೧೬೫೦) ತನ್ನ ಗುರುರಾಜಚಾರಿತ್ರದ ಈ ಕವಿಯನ್ನು ಸ್ಮರಿಸಿ ಇವನ ಗ್ರಂಥದಿಂದಲೂ ವಿಷಯಗಳನ್ನು ಸಂಗ್ರಹಿಸಿದಂತೆ ಹೇಳುತ್ತಾನೆ.

## ಕುಮಾರ ಬಂಕನಾಥ
(ಕ್ರಿ.ಶ. ಸು. ೧೪೩೦)

ಈತನು ಷಟ್ಸ್ಥಲೋಪದೇಶ, ಪ್ರಭುದೇವರ ಟೀಕಿನ ವಚನ ಇವುಗಳನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಮಹಾಲಿಂಗದೇವನ (ಸು.೧೪೨೫) ಶಿಷ್ಯನು; ವಿಜಯನಗರದ ದೊರೆ ದೇವರಾಯನಲ್ಲಿ (೧೪೧೯-೧೪೪೬) ದಂಡನಾಥನಾಗಿದ್ದ ಜಕ್ಕಣಾರ್ಯನ ಗುರು. ಇವನ ಕಾಲವು ಸುಮಾರು ೧೪೩೦ ಆಗಬಹುದು.

ಈತನ ಗ್ರಂಥಗಳು ಬಹಳಮಟ್ಟಿಗೆ ಮಹಾಲಿಂಗದೇವನ ಗ್ರಂಥಗಳನ್ನು ಹೋಲುತ್ತವೆ.

## ಜಕ್ಕಣಾರ್ಯ
(ಕ್ರಿ.ಶ ಸು. ೧೪೩೦)

ಈತನು ನೂರೊಂದು ಸ್ಥಲವನ್ನು ಎಂದರೆ ಏಕೋತ್ತರಶತಸ್ಥಲವನ್ನು ಬರೆದಿದ್ದಾನೆ. ಇವನು ವೀರಶೈವ ಕವಿ; ಮಹಾಲಿಂಗದೇವನ (ಸು. ೧೪೨೫) ಶಿಷ್ಯನಾದ ಕುಮಾರಬಂಕನಾಥನ ಕರಜಾತನು. ಇವನಿಗೆ ಜಕ್ಕಣ್ಣ, ಜಕ್ಕಪ್ಪ ಎಂಬ ಹೆಸರೂ ಉಂಟು; 'ಭಕ್ತಿ ಭಂಡಾರಿ' ಎಂಬ ಬಿರುದಿದ್ದಂತೆ ತಿಳಿಯುತ್ತದೆ. ಇವನು ವಿಜಯನಗರದ ಪ್ರೌಢದೇವರಾಯನಲ್ಲಿ (೧೪೧೯-೧೪೪೬) ದಂಡನಾಯಕನಾಗಿದ್ದನು. ಇವನ ಕಾಲವು ಸುಮಾರು ೧೪೩೦ ಆಗಬಹುದು. ಮಹಾಲಿಂಗದೇವನು ಈತನ ಉಪದೇಶಾರ್ಥವಾಗಿ ಎರಡು ಗ್ರಂಥಗಳನ್ನು ಬರೆದ ಸಂಗತಿ ಹಿಂದೆಯೇ ತಿಳಿಸಿದೆ. ಕಲ್ಲಮಠದ ಪ್ರಭುದೇವ, ಪ್ರಭುಲಿಂಗಲೀಲಾಕರ್ತೃ ಚಾಮರಸ, ಕರಸ್ಥಲದ ನಾಗದೇವ, ವೀರಣ್ಣೊಡೆಯ ಮುಂತಾದ ವಿರಕ್ತರು ಈತನ ಸಮಕಾಲದವರಾಗಿದ್ದಂತೆ ತಿಳಿಯುತ್ತದೆ. ಇವನು ವೀರಶೈವ ಗ್ರಂಥಗಳ ರಚನೆಗಾಗಿ ಅಪರಿಮಿತವಾದ ದ್ರವ್ಯವನ್ನು ವೆಚ್ಚಮಾಡಿದಂತೆ ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಪುರಾಣದಲ್ಲಿ (೧೫೩೦) ಹೇಳಿದೆ.

## ಚಾಮರಸ
(ಕ್ರಿ.ಶ. ಸು. ೧೪೩೦)

ಈತನು ಪ್ರಭುಲಿಂಗಲೀಲೆಯನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಆರಾಧ್ಯ ಬ್ರಾಹ್ಮಣನು; ಜಕ್ಕಣಾರ್ಯನ ಸಮಕಾಲದವನು. ಪ್ರೌಢದೇವರಾಯನ (೧೪೧೯-೧೪೪೬) ಸಭೆಯಲ್ಲಿ ತನ್ನ ಗ್ರಂಥವನ್ನು ಓದಿ ಮರ್ಯಾದೆಯನ್ನು ಪಡೆದಂತೆ ತಿಳಿವುದರಿಂದ ಈತನ ಕಾಲವು ಸುಮಾರು ೧೪೩೦ ಆಗಬಹುದು. ಪ್ರೌಢದೇವರಾಯನ ಕಾಲದಲ್ಲಿ ವಿಜಯನಗರದಲ್ಲಿದ್ದ ೧೦೧ ವಿರಕ್ತರೊಳಗೆ ಇವನೊಬ್ಬನು ಎಂದು ವೀರಶೈವ ಗ್ರಂಥಗಳಿಂದ ತಿಳಿಯುತ್ತದೆ. ಗುರುರಾಜ ಚಾರಿತ್ರದಲ್ಲಿ (ಸು.೧೬೫೦) ಈತನಿಗೆ ವೀರಶೈವಾಚಾರಸಾರೋದ್ಧಾರ, ಅನ್ಯಮತಕೋಳಾಹಳ ಎಂಬ ವಿಶೇಷಣಗಳು

ಹೇಳಿವೆ. ಕವಿ ಈ ಗ್ರಂಥದಲ್ಲಿ ತನ್ನ ಹೆಸರನ್ನು ಹೇಳಿಕೊಂಡಿಲ್ಲದಿದ್ದರೂ ಇತರ ಗ್ರಂಥಗಳಿಂದ ಇದು ಏತತ್ಕೃತವೆಂಬುದು ವ್ಯಕ್ತವಾಗುತ್ತದೆ. ರಾಘವಾಂಕ ಚಾರಿತ್ರದಲ್ಲಿ ಈತನು ಉದ್ದನೆಯ ವೀರೇಶನಿಂದ ವೀರಶೈವೋಪದೇಶವನ್ನು ಪಡೆದು ಪ್ರಭುಲಿಂಗಲೀಲೆಯನ್ನು ರಚಿಸಿದಂತೆ ಹೇಳಿದೆ.

ಈತನ ವಿಷಯವಾಗಿ ಗುರುರಾಜಚಾರಿತ್ರದಲ್ಲಿ ಹೇಳಿರುವ ಕಥೆಯಂತೆ ಈತನು ಪ್ರೌಢದೇವರಾಯನ ಸಮಕಾಲೀನದವನಾಗುತ್ತಾನೆ. ಅಲ್ಲಿನ ಇತಿಹಾಸವು ನಿಜವಾಗಿದ್ದ ಪಕ್ಷದಲ್ಲಿ ಭಾರತವನ್ನು ಬರೆದ ಕುಮಾರವ್ಯಾಸನು ಚಾಮರಸನ ಭಾವನೆಂದೂ ಪ್ರೌಢದೇವರಾಯನ ಕಾಲದಲ್ಲಿ ಇದ್ದನೆಂದೂ ನಂಬಬೇಕಾಗುತ್ತದೆ.

ಈ ಗ್ರಂಥವು ತೆಲುಗಿನಲ್ಲಿಯೂ ಅರವಿನಲ್ಲಿಯೂ ಭಾಷಾಂತರಮಾಡಲ್ಪಟ್ಟಿದೆ.

### ಕಲ್ಲಮಠದ ಪ್ರಭುದೇವ
### (ಕ್ರಿ.ಶ. ಸು. ೧೪೩೦)

ಈತನು ಲಿಂಗಲೀಲಾವಿಲಾಸ ಚಾರಿತ್ರ, ಪ್ರಭುದೇವರ ಮಂತ್ರಗೋಪ್ಯದ ಟೀಕೆ ಇವುಗಳನ್ನು ಬರೆದಿದ್ದಾನೆ. ಇವನು ವೀರಶೈವಕವಿ; ವಿದ್ಯಾನಗರದ ೧೦೧ ವಿರಕ್ತರಲ್ಲಿ ಒಬ್ಬನು. ಜಕ್ಕಣಾರ್ಯ, ಚಾಮರಸ ಇವರ ಸಮಕಾಲದವನು.

### ಕುಮಾರವ್ಯಾಸ
### (ಕ್ರಿ.ಶ. ಸು. ೧೪೩೦)

ಈತನು ಭಾರತದಲ್ಲಿ ಮೊದಲು ೧೦ ಪರ್ವತಗಳನ್ನು ಬರೆದಿದ್ದಾನೆ. ಇವನು ಬ್ರಾಹ್ಮಣ ಕವಿ. ಮಾಧ್ವನೆಂದು ಕೆಲವರು ಹೇಳುತ್ತಾರೆ. ಇವನ ಸ್ಥಳ ಕೋಳಿವಾಡು ಎಂದೂ, ಇವನ ಪೂರ್ವಿಕರು ಕುಲಕ್ರಮವಾಗಿ ಸೋನಬೋವರೆಂದೂ, ಇವನ ನಿಜವಾದ ಹೆಸರು ನಾರಣಪ್ಪ ಎಂದೂ, ಗದುಗಿನ ಪ್ರಾಂತದ ಜನರಲ್ಲಿ ಪ್ರವಾದವಿದೆ. ಈತನು ಗದುಗಿನ ವೀರನಾರಾಯಣ ದೇವರ ಭಕ್ತನು. ಆ ದೇವರ ಅಂಕಿತದಲ್ಲಿಯೇ ತನ್ನ ಗ್ರಂಥವನ್ನು ಬರೆದಿದ್ದಾನೆ. ವಿಜಯನಗರದ ದೊರೆಯಾದ ಕೃಷ್ಣದೇವರಾಯನ (೧೫೦೯-೧೫೨೯) ಆಳಿಕೆಯ ಆರಂಭದಲ್ಲಿ ಈ ಗ್ರಂಥವು ಹುಟ್ಟಿತೆಂದು ಮೆ॥ರೈಸ್, ಮೆ॥ ಕಿಟ್ಟೆಲ್ ಮುಂತಾದವರು ಬರೆದಿರುವುದನ್ನು ಎಲ್ಲರೂ ಒಪ್ಪಿಕೊಂಡಿರುವಂತೆ ತೋರುತ್ತದೆ. ಈ ಹೇಳಿಕೆಗೆ ಸರಿಯಾದ ಆಧಾರವಿರುವಂತೆ ಕಾಣುವುದಿಲ್ಲ. ತಿಮ್ಮಣ್ಣಕವಿ ಈ ಕೃಷ್ಣದೇವರಾಯನ ಆಜ್ಞಾನುಸಾರವಾಗಿ ಬರೆದಿರುವ ಕೃಷ್ಣರಾಜ ಭಾರತದ ಆದಿಭಾಗದಲ್ಲಿ ಕುಮಾರವ್ಯಾಸನ ಭಾರತವು ಈ ದೊರೆಯ ಆಳಿಕೆಯಲ್ಲಿ ಹುಟ್ಟಿದಂತೆ ಹೇಳಿಲ್ಲ. ತಿಮ್ಮಣ್ಣ ಕವಿಯನ್ನು ಕುರಿತು ದೊರೆ "ಲೇಸೆನಿಸಿ ಮೊದಲಾ ಕುಮಾರವ್ಯಾಸ ದಶಪರ್ವಗಳ ಹೇಟಿದ ಭಾರತ ಉಟಿದ ಪರ್ವಗಳ ನೀ ಸಕಲಜನ ಮೆಚ್ಚುವಂತೆ ಪೇಟು" ಎನ್ನುತ್ತಾನೆ. "ಮೊದಲಾ ಕುಮಾರವ್ಯಾಸ" ಎಂಬುದರಿಂದ ಈ ದೊರೆಯ ಕಾಲಕ್ಕೆ ಹಿಂದೆಯೇ ಆ ಭಾರತವು ಹುಟ್ಟಿರಬೇಕೆಂದು ಊಹಿಸಬಹುದಾಗಿದೆ. ಈ ಊಹೆಯನ್ನು ವೀರಶೈವ ಗ್ರಂಥಗಳಲ್ಲಿ ಕುಮಾರವ್ಯಾಸನ ವಿಷಯವಾಗಿ ಹೇಳಿರುವ ಒಂದು ಇತಿಹಾಸವು ದೃಢೀಕರಿಸುತ್ತದೆ. ಗುರುರಾಜಚಾರಿತ್ರ, ಚೋರಬಸವ ಚರಿತ್ರಗಳಲ್ಲಿ ಕುಮಾರವ್ಯಾಸನು ದೇವರಾಯನ ಆಳಿಕೆಯಲ್ಲಿದ್ದನೆಂದೂ ಪ್ರಭುಲಿಂಗಲೀಲೆಯನ್ನು ಬರೆದ ಚಾಮರಸನ ತಂಗಿಯ ಗಂಡನೆಂದೂ ತಿಳಿಯುತ್ತದೆ. ಈ ಇತಿಹಾಸದ ಪ್ರಕಾರ ಇವನ ಕಾಲವು ಸುಮಾರು ೧೪೩೦ ಆಗುವುದು. ಇದು ಇವನ ನಿಜವಾದ ಕಾಲವೆಂದು ತೋರುತ್ತದೆ.

ಈ ಕವಿಯನ್ನು ಕುಮಾರ ವಾಲ್ಮೀಕಿ, ಲಕ್ಷ್ಮಕವಿ, ಕೋನಯ್ಯ, ಬೊಬ್ಬೂರುರಂಗ ಮೊದಲಾದ ಕವಿಗಳು ಸ್ತುತಿಸಿದ್ದಾರೆ.

### ಕರಸ್ಥಲದ ನಾಗಿದೇವ
### (ಕ್ರಿ.ಶ. ಸು. ೧೪೩೦)

ಇವನು ಒಂದು ತ್ರಿಪದೀಗ್ರಂಥವನ್ನು ಬರೆದಿದ್ದಾನೆ. ಇದಕ್ಕೆ ಕರಸ್ಥಲದ ನಾಗಿದೇವ ತ್ರಿವಿಧಿ ಎಂದು ಹೆಸರು. ಇವನು ವೀರಶೈವ ಕವಿ; ಅಕ್ಕಸಾಲೆಯ ಜಾತಿಯವನು; ಕರಸ್ಥಲದ ವೀರಣ್ಣೊಡೆಯನ ಶಿಷ್ಯನು; ೧೦೧ ವಿರಕ್ತರಲ್ಲಿ ಒಬ್ಬನು.

ಈತನು ಪ್ರೌಢದೇವರಾಯನ (೧೪೧೯-೧೪೪೬) ಕಾಲದಲ್ಲಿದ್ದಂತೆ ಚೆನ್ನಬಸವಪುರಾಣದಲ್ಲಿ ಹೇಳಿದೆ. ಇವನು ಜಕ್ಕಣಾರ್ಯ, ಕಲ್ಲಮಠದ ಪ್ರಭುದೇವ, ಚಾಮರಸ ಇವರು ಸಮಕಾಲದವನು. ಇವನಿಗೆ ಕರಸ್ಥಲದ ನಾಗಲಿಂಗ ಎಂಬ ಹೆಸರೂ ಉಂಟು.

### ಬತ್ತಲೇಶ್ವರ
### (ಕ್ರಿ.ಶ. ಸು. ೧೪೩೦)

ಈತನು ಒಂದು ರಾಮಾಯಣವನ್ನು ಬರೆದಿರುವಂತೆ ತೋರುತ್ತದೆ. ಈತನಿಗೆ ನಿರ್ವಾಣ ನಾಯಕ, ನಿರ್ವಾಣಲಿಂಗ ಎಂಬ ಅಂಕಿತಗಳೂ ಇವೆ. ಇವು ಬತ್ತಲೇಶ್ವರ ಎಂಬುದಕ್ಕೆ ಪರ್ಯಾಯ ಶಬ್ದಗಳಾಗಿರಬಹುದು. ಇವನು ವೀರಶೈವ ಕವಿ. ಗುರುರಾಜ ಚಾರಿತ್ರದಲ್ಲಿ (ಸು. ೧೬೫೦) ದೇವರಾಯನ (೧೪೯೧-೧೪೪೬) ಆಳಿಕೆಯಲ್ಲಿ ಪಂಪಾಪುರದಲ್ಲಿದ್ದ ಕರಸ್ಥಲದ ನಾಗಲಿಂಗ, ವೀರಣ್ಣೊಡೆಯ ಮುಂತಾದ ೧೦೧ ವಿರಕ್ತರ ಗೋಷ್ಠಿಯಲ್ಲಿ ಈತನನ್ನು ಸೇರಿಸಿರುವುದರಿಂದ ಇವನ ಕಾಲವು ಸುಮಾರು ೧೪೩೦ ಆಗಬಹುದು. ಪ್ರಹ್ಲಾದ ಚರಿತ್ರೆಯನ್ನು ಬರೆದ ಚೆನ್ನಿಗನು (ಸು. ೧೭೦೦) ಈತನನ್ನು ಸ್ತುತಿಸಿದ್ದಾನೆ.

### ಚಂದ್ರಕವಿ
### (ಕ್ರಿ.ಶ. ಸು. ೧೪೩೦)

ಈತನು ವಿರೂಪಾಕ್ಷಾಸ್ಥಾನ, ಗುರುಮೂರ್ತಿ ಶಂಕರ ಶತಕ ಇವುಗಳನ್ನು ಬರೆದಿದ್ದಾನೆ. ಇವನು ವೀರಶೈವ ಕವಿ. ಇವನಿಗೆ ಚಂದ್ರಶೇಖರ ಎಂಬ ಹೆಸರೂ ಉಂಟು. ಅಷ್ಟಭಾಷೆಗಳಲ್ಲಿ ಪ್ರವೀಣನಾಗಿದ್ದನೆಂದು ಹೇಳಿದೆ. ಈ ಭಾಷೆಗಳು ಆವುವೋ ತಿಳಿಯದು. ವಿಜಯನಗರದ ದೊರೆಯಾದ ವಿಜಯರಾಯನ ಮಗ ಗಜವೇಂಟೆಕಾರ ಪ್ರೌಢದೇವರಾಯನ (೧೪೧೯-೧೪೪೬) ಮಹಾಪ್ರಧಾನ ಗುರುರಾಯನ ಆಜ್ಞಾನುಸಾರವಾಗಿ ಈ ಗ್ರಂಥಗಳನ್ನು ಬರೆದಂತೆ ಹೇಳುವುದರಿಂದ ಕವಿ ಸುಮಾರು ೧೪೩೦ರಲ್ಲಿ ಇದ್ದಿರಬಹುದು.

### ಸಿದ್ಧಮಲ್ಲಾರ್ಯ
### (ಕ್ರಿ.ಶ. ಸು. ೧೫೦೦)

ಈತನು ದೇವಾಂಗಪುರಾಣವನ್ನು ಬರೆದಿದ್ದಾನೆ. ಇವನು ದೇವಾಂಗದವನು. ಇವನ ಸ್ಥಳ ಹಂಪೆಯಾಗಿರಬಹುದು. ಈತನು ಸುಮಾರು ೧೩೦೦ರಲ್ಲಿ ಇದ್ದಿರಬಹುದೆಂದು ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ ೧೯೨೦ನೆಯ ವರ್ಷದ ೧೭೫ನೆಯ ಪುಟದಲ್ಲಿ ಹೇಳುತ್ತಾರೆ. ಸುಮಾರು ೧೫೦೦ರಲ್ಲಿ ಇದ್ದಿರಬಹುದೆಂದು ನಮಗೆ ತೋರುತ್ತದೆ.

### ತಿಮ್ಮಣ್ಣಕವಿ
### (ಕ್ರಿ.ಶ. ಸು. ೧೫೧೦)

ಈತನು ಭಾರತದ ಉತ್ತರಭಾಗವನ್ನು ಎಂದರೆ ಶಾಂತಿಪರ್ವ ಮೊದಲುಗೊಂಡು ಏಳುಪರ್ವಗಳನ್ನು ಬರೆದಿದ್ದಾನೆ. ಇವನು ಬ್ರಾಹ್ಮಣ ಕವಿ; ಭಾರದ್ವಾಜ ಗೋತ್ರದವನು; ಇವನ ತಂದೆ ಪದವಾಕ್ಯಪ್ರಮಾಣಜ್ಞನಾದ ಭಾನುಕವಿ ಅಥವಾ ಭಾಸ್ಕರ ಕವಿ; ವಿಜಯನಗರದ ರಾಜನಾದ ಕೃಷ್ಣರಾಯನ (೧೫೦೯-೧೫೨೯) ಆಜ್ಞಾನುಸಾರವಾಗಿ ಈ ಗ್ರಂಥವನ್ನು ರಚಿಸಿದಂತೆ ಹೇಳುತ್ತಾನೆ.

ಸಂಧಿಗಳ ಕೊನೆಯಲ್ಲಿ ವೆಂಕಟೇಶದೇವರ ಮತ್ತು ಕೃಷ್ಣರಾಯನ ಅಂಕಿತಗಳಿವೆ. ಗ್ರಂಥಾಂತ್ಯದಲ್ಲಿ- ನರಸನೃಪಸುತ ಕೃಷ್ಣರಾಯಗೆ ವರಯಶವು ನಿಲುವಂತೆ ಪೇಟ್ದಿ ಭಾರತವು -ಎಂದು ಕವಿ ಹೇಳುತ್ತಾನೆ. ಇವನ ಕಾಲವು ಸುಮಾರು ೧೫೧೦ ಆಗಬಹುದು. ಇವನಿಗೆ ಕರ್ಣಾಟಕ ಕವಿಕುಲಸಾರ್ವಭೌಮ ಎಂಬ ಬಿರುದಿದ್ದಂತೆ ತಿಳಿಯುತ್ತದೆ.

## ವ್ಯಾಸರಾಯ

### (ಕ್ರಿಶ. ಸು. ೧೫೨೫)

ಈತನು ಕೀರ್ತನೆಗಳನ್ನು ಬರೆದಿದ್ದಾನೆ. ಇವನು ಮಾಧ್ವಕವಿ. ಸೋಸಲೆಯಲ್ಲಿರುವ ವ್ಯಾಸರಾಯ ಮಠಕ್ಕೆ ಸ್ವಾಮಿಯಾಗಿದ್ದನು. ಈತನ ಗುರು ಬ್ರಹ್ಮಣ್ಯತೀರ್ಥ. ವಿದ್ಯಾಗುರು ಶ್ರೀಪಾದರಾಯ. ವಿಜಯನಗರದ ಕೃಷ್ಣದೇವರಾಯನ (೧೫೦೯-೧೫೨೯) ಕಾಲದಲ್ಲಿ ಈತನು ಇದ್ದಂತೆ ಕೆಲವು ಶಾಸನಗಳಿಂದ ತಿಳಿಯುತ್ತದೆ. ಕುಹುಯೋಗವು ಪ್ರಾಪ್ತವಾದಾಗ ರಾಜನ ಪ್ರಾರ್ಥನಾಸಾರವಾಗಿ ಈತನು ವಿಜಯನಗರದ ಸಿಂಹಾಸನದ ಮೇಲೆ ಕುಳಿತು ಆ ಯೋಗವು ಮುಗಿಯುವವರೆಗೆ ಆಳಿದಂತೆ ಪ್ರತೀತಿಯಿದೆ. ತಿರುಪತಿಯಲ್ಲಿ ಶ್ರೀನಿವಾಸದೇವರಿಗೆ ೧೨ ವರುಷ ಅರ್ಚಕನಾಗಿದ್ದಂತೆ ಹೇಳುತ್ತಾರೆ. ಈತನ ಹಾಡುಗಳಲ್ಲಿ ಕೃಷ್ಣ ಎಂಬ ಅಂಕಿತವಿದೆ.

## ಚಾಟುವಿಠಲನಾಥ

### (ಕ್ರಿಶ. ಸು. ೧೫೩೦)

ಈತನು ಭಾಗವತ, ಭಾರತದಲ್ಲಿ ಸ್ವಲ್ಪ ಭಾಗ ಇವುಗಳನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ. "ಇದು ಸದಾನಂದಾಖ್ಯಯೋಗಿಯ ತೊದಲುನುಡಿ", "ಗೋಪಿನಾಥನು ಮಂಗಳವನೀವನು ಸದಾನಂದಾಖ್ಯಮುನಿವರಗೆ", "ಯೋಗೀಂದ್ರನಖಿಳೋದಿತ ಸದಾನಂದ ಮುದದೊಳಭಿವರ್ಣಿಸಿದಂ" ಎಂಬ ಪದ್ಯಭಾಗಗಳಿಂದ ಕವಿಯ ನಿಜವಾದ ಹೆಸರು ಸದಾನಂದಯೋಗಿ ಎಂದು ತಿಳಿಯುತ್ತದೆ. ಇವನ ಗ್ರಂಥಗಳಲ್ಲಿ ನಿತ್ಯಾತ್ಮ ಎಂಬ ಅಂಕಿತವು ಉಪಯೋಗಿಸಲ್ಪಟ್ಟಿದೆ. ಇವನ ಗುರು ಅಚ್ಯುತಾರಣ್ಯಯತಿ.

ಕುಮಾರವ್ಯಾಸನ ಭಾರತದಲ್ಲಿ ಸೂಕ್ಷ್ಮವಾಗಿ ಹೇಳಿರುವ ಕೆಲವು ಅಂಶಗಳನ್ನು ಈತನು ಆಸ್ತೀಕ ಪೌಲೋಮ ಪರ್ವಗಳಾಗಿ ವಿಸ್ತರಿಸಿ ಬರೆದಿರುವುದರಿಂದ ಅವನ ಕಾಲಕ್ಕಿಂತ (೧೪೩೦) ಈಚೆಯವನು ಎಂದು ತಿಳಿಯಬಹುದಾಗಿದೆ. ಅಲ್ಲದೆ ಈತನ ಕಾವ್ಯದಿಂದ ಈ ಕವಿ ವಿಜಯನಗರದ (ವಿಜಯ ಮಂದಿರ) ಕೃಷ್ಣರಾಯ (೧೫೦೯-೧೫೨೯), ಅಚ್ಯುತರಾಯ (೧೫೩೦-೧೫೪೨) ಇವರುಗಳ ಕಾಲದಲ್ಲಿ ಭಾಗವತವನ್ನು ಬರೆದಿರಬಹುದು ಎಂದು ಊಹಿಸಲು ಅವಕಾಶವಿದೆ. ಈ ಊಹೆಯ ಪ್ರಕಾರ ಕವಿಯ ಕಾಲವು ಸುಮಾರು ೧೫೩೦ ಆಗಬಹುದು. ಇವನಿಗೆ ನಿತ್ಯಾತ್ಮಶುಕಯೋಗಿ ಎಂಬ ಬಿರುದುಂಟು ಎಂದು ಹೇಳುತ್ತಾರೆ.

## ಶಂಕರಕವಿ

### (ಕ್ರಿಶ. ೧೭೬೩)

ಈತನು ನವಮೋಹನ ತರಂಗಿಣಿ ಮತ್ತು ಚೋರಬಸವ ಚರಿತ್ರೆಯನ್ನು ಬರೆದಿದ್ದಾನೆ. ಇವನು ವೀರಶೈವ ಕವಿ. ಕೋಳೂರು ರಾಮೇಶ್ವರನ ಅನುಗ್ರಹದಿಂದ ತನ್ನ ಗ್ರಂಥಗಳನ್ನು ಬರೆದಂತೆ ಹೇಳುವುದರಿಂದ ಇವನ ಸ್ಥಳವು ಕೋಳೂರಾಗಿರಬಹುದು ಎಂದು ತೋರುತ್ತದೆ. ಈ ಕೋಳೂರು ಬಳ್ಳಾರಿಗೆ ಎಂಟು ಮೈಲಿ ದೂರದಲ್ಲಿದೆ ಎಂದು ಆಸ್ಥಾನ ವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ತಿಳಿಸುತ್ತಾರೆ. ತನ್ನ ಗ್ರಂಥವನ್ನು ಶಕ ೧೬೮೫ನೆಯ ಸ್ವಭಾನುವಿನಲ್ಲಿ ಎಂದರೆ ೧೭೬೩ರಲ್ಲಿ ರಚಿಸಿದಂತೆ ಹೇಳುತ್ತಾನೆ. ಪ್ರಭುಲಿಂಗಲೀಲೆಯನ್ನು ಬರೆದ ಚಾಮರಸನ ವಿಷಯವಾಗಿಯೂ ಭಾರತವನ್ನು ಬರೆದ ಕುಮಾರವ್ಯಾಸನ ವಿಷಯವಾಗಿಯೂ ಕವಿ ಕೆಲವು ಹೊಸ ಅಂಶಗಳನ್ನು ಹೇಳಿದ್ದಾನೆ.

ಪೂರ್ವಕವಿಗಳಲ್ಲಿ ಕಾಳಿದಾಸ, ಬಾಣ, ಮಯೂರ, ಭೋಜ, ಪಾಲ್ಕುರಿಕೆ ಸೋಮ, ಹರಿಯರಸ, ಚಾಮರಸ, ರಾಘವ, ಕೆರೆಯಪದ್ಮರಸ ಇವರುಗಳನ್ನು ಸ್ಮರಿಸಿದ್ದಾನೆ.

## ಮುದ್ದುಸಂಗಮುನಿ
### (ಕ್ರಿ.ಶ. ಸು. ೧೮೦೦)

ಈತನು ದೇವಾಂಗಪ್ರಕಾಶಿಕೆಯನ್ನು ಬರೆದಿದ್ದಾನೆ. ಇವನು ದೇವಾಂಗದವನು. ಹಂಪೆಯ ಹೇಮಕೂಟ ಮಠದಲ್ಲಿ ಸ್ವಾಮಿಯಾಗಿದ್ದನು. ಇವನ ಕಾಲವು ಸುಮಾರು ೧೮೦೦ ಆಗಿರಬಹುದು. ಇವನ ಗ್ರಂಥವು ಷಟ್ಪದಿ, ಸೀಸಪದ್ಯ ಇವುಗಳನ್ನು ಒಳಕೊಂಡಿದೆ. ಇದಕ್ಕೆ ಕಾಡಸಿದ್ದಪ್ಪ ಎಂಬವನು ಒಂದು ವ್ಯಾಖ್ಯಾನವನ್ನು ಬರೆದಿದ್ದಾನೆ.

## ಮೈಲಾರದ ಬಸಪ್ಪ
### (ಕ್ರಿ.ಶ. ಸು. ೧೮೦೦)

ಈತನು ಗುರುಕರಣತ್ರಿಪದಿ, ನಿರಾಭಾರಿ ವೀರಶೈವ ಸಿದ್ಧಾಂತ ಇವುಗಳನ್ನು ಬರೆದಿದ್ದಾನೆ. ಇವನು ವೀರಶೈವ ಕವಿ. ಬಳ್ಳಾರಿಗೆ ಸೇರಿದ ಲಿಂಗನಾಯಕನ ಹಳ್ಳಿಯ ಚೆನ್ನವೀರಸ್ವಾಮಿಯ ಕರಜಾತನು. ಇವನ ಕಾಲವು ಸುಮಾರು ೧೮೦೦ ಆಗಬಹುದೆಂದು ಹೇಳುತ್ತಾರೆ.

## ಘನಮಠದಾರ್ಯ
### (ಕ್ರಿ.ಶ. ಸು. ೧೮೩೦)

ಈತನು ಅನುಭವಪದಗಳನ್ನೂ ಕೃಷಿಜ್ಞಾನ ಪ್ರದೀಪಿಕೆಯನ್ನೂ ರಚಿಸಿರುವಂತೆ ತಿಳಿಯುತ್ತದೆ. ಇವನು ವೀರಶೈವ ಕವಿ. ಇವನ ಜನ್ಮಸ್ಥಾನವು ಬಳ್ಳಾರಿ ಜಿಲ್ಲೆಯಾದರೂ ಈತನು ತನ್ನ ಆಯುಷ್ಯವನ್ನು ಹುನಗುಂದದಲ್ಲಿ ಕಳೆದನು. ಇವನು ದೊಡ್ಡ ಪಂಡಿತನೆಂದೂ ಇವನ ಪದಗಳು ಭಕ್ತಿರಸದಿಂದ ಕೂಡಿ ಸೊಗಸಾಗಿವೆಯೆಂದೂ ಹೇಳುತ್ತಾರೆ. ಈತನ ಕಾಲವು ಸುಮಾರು ೧೮೩೦ ಆಗಿರಬಹುದು.

## ರಾಮಭಟ್ಟ

ಈತನು ಕೃಷ್ಣಚರಿತ್ರೆ ಎಂಬ ಗ್ರಂಥವನ್ನು ಬರೆದಿದ್ದಾನೆ. ಈತನು ಬಳ್ಳಾರಿಯಲ್ಲಿದ್ದನು. ಇವನ ಕಾಲ ೧೯ನೆಯ ಶತಮಾನ.

ಮೇಲಿನ ಕವಿಗಳೇ ಅಲ್ಲದೆ ಕ್ರಿ.ಶ. ೧೯೯೯ರಲ್ಲಿದ್ದ ಶ್ರೀಕಂಠಸೂರಿಯು ಬಳ್ಳಾರಿಗೆ ಸೇರಿದ ಕುರುವತ್ತಿಯಲ್ಲಿರುವ ಒಂದು ಶಾಸನವನ್ನು ಬರೆದಿರುವುದಾಗಿಯೂ, ಕ್ರಿ.ಶ. ೧೧೮೬ರಲ್ಲಿದ್ದ ಭಾಸ್ಕರನು ಬಳ್ಳಾರಿ ಜಿಲ್ಲೆಯ ನಂದವರವೆಂಬ ಗ್ರಾಮದಲ್ಲಿರುವ ಒಂದು ಶಾಸನವನ್ನು ಬರೆದಿರುವುದಾಗಿಯೂ ಮತ್ತು ಕ್ರಿ.ಶ. ೧೪೧೦ರಲ್ಲಿದ್ದ ಮಧುರನು ಹಂಪೆಯ ಸಮೀಪದಲ್ಲಿ ಕೃಷ್ಣದೇವಸ್ಥಾನದ ಬಳಿ ಇರುವ ಒಂದು ಶಾಸನವನ್ನು ಬರೆದಂತೆಯೂ ಆಯಾ ಶಾಸನಗಳ ಅಂತ್ಯಭಾಗಗಳಿಂದ ತಿಳಿದುಬರುತ್ತದೆ. ಆದರೆ ಇವರು ಮತ್ತಾವ ಗ್ರಂಥಗಳನ್ನು ಬರೆದಿದ್ದಾರೆಂಬುದು ಗೊತ್ತಾಗಿಲ್ಲ.

ಅಲ್ಲದೆ ಕ್ರಿ.ಶ. ೧೫೪೦ರಲ್ಲಿದ್ದ ಪುರಂದರದಾಸ ಮತ್ತು ಕ್ರಿ.ಶ. ೧೫೫೦ರಲ್ಲಿದ್ದ ಕನಕದಾಸರೂ ಸಹ ವಿಜಯನಗರದಲ್ಲಿಯೇ ತಮ್ಮ ಗ್ರಂಥಗಳನ್ನು ಕಟ್ಟಿ ಹಾಡಿದರು. ಪುರಂದರದಾಸನು ಕೀರ್ತನೆಗಳನ್ನೂ, ಕನಕದಾಸನು ಮೋಹನತರಂಗಿಣಿ, ರಾಮಧಾನ್ಯ ಚರಿತ್ರೆ, ನಳಚರಿತ್ರೆ, ಹರಿಭಕ್ತಸಾರ ಗ್ರಂಥಗಳನ್ನೂ ಬರೆದಿದ್ದಾರೆ.

(ಪ್ರಸ್ತುತ ಲೇಖನವನ್ನು ಕರ್ಣಾಟಕ ಕವಿಚರಿತೆಯ ಆಧಾರದಿಂದ ಸಿದ್ಧಪಡಿಸಲಾಗಿದೆ.)

■

# ಎಂ.ಆರ್.ಶ್ರೀ ಅವರ ವೀರಶೈವ ಪುರಾಣಗಳ ಸಮಾಲೋಚನೆ

"ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಹತ್ತಿರ ಹತ್ತಿರ ನಲವತ್ತು ವರುಷಗಳ ಕಾಲ ದುಡಿದು ತಮ್ಮ ಅಮೂಲ್ಯ ಕೃತಿಗಳಿಂದ ಕನ್ನಡ ಸಾಹಿತ್ಯ ಸಂಪತ್ತನ್ನು ಬೆಳೆಸಿ, ವೀರಶೈವಸಾಹಿತ್ಯ ಕ್ಷೇತ್ರವನ್ನು ವಿಶಾಲಹೃದಯದಿಂದ ಪರಿಶೀಲಿಸಿ ಅನುಪಮವಾದ ಸೇವೆಸಲ್ಲಿಸಿ ತಮ್ಮ ಅವಿಶ್ರಾಂತವಾದ ಕಾರ್ಯತತ್ಪರತೆಯಿಂದಲೂ, ಅಪೂರ್ವ ಸೌಜನ್ಯದಿಂದಲೂ, ಸಾಹಿತಿಗಳ, ವಿದ್ವಜ್ಜನರ, ಹಾಗೆಯೇ ಮಹಾಜನರ ವಿಶ್ವಾಸ ಗೌರವ ಮೆಚ್ಚುಗೆಯನ್ನು ಗಳಿಸಿ, ಆದರ್ಶಶಿಕ್ಷಕರಾಗಿಯೂ, ಮೂವತ್ತಮೂರನೆಯ ಕನ್ನಡಸಾಹಿತ್ಯಸಮ್ಮೇಳನದ ಅಧ್ಯಕ್ಷರಾಗಿಯೂ, ಕಳೆದ ನಾಲ್ಕುವರುಷಗಳಿಂದ ಪರಿಷತ್ತಿನ ಕಾರ್ಯಾಧ್ಯಕ್ಷರಾಗಿಯೂ ಮತ್ತು ಇತರ ಅನೇಕ ವಿಧಗಳಲ್ಲಿಯೂ ಕನ್ನಡ ಜನದ, ಭಾಷೆಯ ಹಿತಕ್ಕಾಗಿ ಶ್ರಮಿಸಿ ಕಣ್ಮರೆಯಾಗಿರುವ ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿಗಳ ನಿಧನದಿಂದ ಕನ್ನಡ ಸಾಹಿತ್ಯ ಪರಿಷತ್ತಿಗೆ, ಹಾಗೆಯೇ ಕನ್ನಡ ನಾಡಿಗೆ ತುಂಬಲಾಗದ ನಷ್ಟವೊದಗಿದೆ" –ಇದು ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ಪರಿಷತ್ತಿನಲ್ಲಿ ೨೪.೯.೧೯೫೩ ರಂದು ನಡೆದ ಸಂತಾಪ ಸೂಚಕ ಸಭೆಯ ನಿರ್ಣಯ. (ಕನ್ನಡ ನುಡಿ, ೧೬–೧೦)

"ಮೂರ್ತಿಗಳು ಶಿವಶರಣರ ವಚನಗಳನ್ನು ನುಡಿಯುತ್ತಿದ್ದ ಧಾಟಿಯೂ ಹಾಗೆಯೇ ಅವರು ಪದ್ಯವನ್ನೋ ಗದ್ಯವನ್ನೋ ನುಡಿದ ರೀತಿಯಿಂದಲೇ ಆ ಪ್ರಬಂಧದ ಅರ್ಥ ಕೇಳುವವರಿಗೆ ಕೂಡಲೇ ವಿಶದಪಡುತ್ತಿತ್ತು. ಸಾವಿರಾರು ವಚನಗಳು ಅವರಿಗೆ ಮುಖಸ್ಥವಾಗಿದ್ದವು. ಅವರು ಇದುವರೆಗೆ ಅಚ್ಚಾಗಿರುವ ಎಲ್ಲ ಹಳಗನ್ನಡ ಕಾವ್ಯಗಳನ್ನೂ ಆಮೂಲಾಗ್ರವಾಗಿ ಓದಿದ್ದುದ್ದು ಮಾತ್ರವಲ್ಲದೆ ಜ್ಞಾಪಕದಲ್ಲಿಯೂ ಇರಿಸಿಕೊಂಡಿದ್ದರು. ಆ ಗ್ರಂಥರಾಶಿಯ ಜೊತೆಗೆ ಇನ್ನೂ ಅಚ್ಚಾಗದಿರುವ ಎಷ್ಟೋ ತಾಳೆಯೋಲೆಯ ಗ್ರಂಥಗಳನ್ನು ನೋಡಿದ್ದರು" ಇದು ಡಿವಿಜಿ ಅವರ ಹೇಳಿಕೆ. (ಜ್ಞಾಪಕ ಚಿತ್ರಶಾಲೆ, ಸಂಪುಟ–೧)

ಕನ್ನಡ ಸಾಹಿತ್ಯದ–ಹಳಗನ್ನಡ ಪ್ರೌಢಸಾಹಿತ್ಯದ ಸವಿಯು ಶ್ರೀನಿವಾಸಮೂರ್ತಿಗಳಿಗೆ ದೊರಕಲು ಏನು ಸಂದರ್ಭ ಒದಗಿತೋ ಸರಿಯಾಗಿ ಗೊತ್ತಿಲ್ಲ. ಕರ್ಮಧರ್ಮಸಂಯೋಗ, ಪೂರ್ವಜನ್ಮಸಂಸ್ಕಾರಗಳೇ ಇರಬೇಕು. ಏಕೆಂದರೆ ಸಾಧಾರಣವಾಗಿ ವಿಜ್ಞಾನಿಗೂ ಸಾಹಿತ್ಯದರ್ಶನಗಳಿಗೂ ತುಂಬದೂರ. ಅನೇಕ ವೇಳೆ ದ್ವೇಷವೇ ಇರುತ್ತದೆ. ಅಂತೂ ಅವರ ಗುರುತಾದಾಗ ಅವರಿಗಿದ್ದ ಹಳಗನ್ನಡ ಹೊಸಗನ್ನಡ ಸಾಹಿತ್ಯದ ನಿಕಟಪರಿಚಯವನ್ನು ನೋಡಿ ನನಗೆ ವಿಸ್ಮಯವಾಯಿತು. ಕನ್ನಡದಲ್ಲಿ ಉಪಾಧ್ಯಾಯನಾಗಿದ್ದ ನನಗೆ ಅಷ್ಟು ವಿಸ್ತಾರವಾದ ಕನ್ನಡ ಸಾಹಿತ್ಯ ಪರಿಚಯವಿಲ್ಲವಲ್ಲಾ ಎಂದು ನಾಚಿಕೆಯಾಯಿತು" –ಇದು ಎ.ಆರ್. ಕೃಷ್ಣಶಾಸ್ತ್ರಿಗಳ ಅಭಿಪ್ರಾಯ. ಈ ಉಲ್ಲೇಖಗಳ ಉದ್ದೇಶವಿಷ್ಟೆ. ಇವರೆಲ್ಲರೂ ಎಂಆರ್‌ಶ್ರೀ ಅವರನ್ನು ತೀರ ಹತ್ತಿರದಿಂದ ಬಲ್ಲವರಾಗಿದ್ದರು. ಅವರ ಪಾಂಡಿತ್ಯವನ್ನು ಸ್ಪಷ್ಟವಾಗಿ ಗುರುತಿಸಬಲ್ಲವರಾಗಿದ್ದರು. ಇವರೆಲ್ಲರ ಏಕಾಭಿಪ್ರಾಯ ಎಂಆರ್‌ಶ್ರೀ ಅವರಿಗಿದ್ದ ಹಳಗನ್ನಡ ಕಾವ್ಯಗಳ ಪರಿಚಯ, ವಚನ ಸಾಹಿತ್ಯದ ಆಳವಾದ ಪ್ರವೇಶ, ಎಲ್ಲಕ್ಕಿಂತ ಮಿಗಿಲಾಗಿ ವೀರಶೈವ ಸಾಹಿತ್ಯದಲ್ಲಿ ಅವರಿಗಿದ್ದ ಅಪಾರ ಅಭಿರುಚಿ –ಇವುಗಳಿಗೆ ಸಂಬಂಧಿಸಿದುದಾಗಿತ್ತು.

ಪ್ರಸ್ತುತ ವೀರಶೈವ ಪುರಾಣಗಳ ಸಮಾಲೋಚನೆಯನ್ನು ಎಂಆರ್‌ಶ್ರೀ ಅವರು ಮಾಡಿರುವ ವಿಧಾನದತ್ತ ಗಮನಹರಿಸೋಣ. ಕರ್ನಾಟಕ ಸಾಹಿತ್ಯ ಚರಿತ್ರೆ (೧೧೫೦-೧೬೦೦) ವೀರಶೈವಪುರಾಣಗಳು ಎಂಬ ಸುದೀರ್ಘವಾದ ಲೇಖನದಲ್ಲಿ ವೀರಶೈವ ಪುರಾಣಗಳ ಉಗಮ, ವಿಕಾಸ, ವೈಶಿಷ್ಟ್ಯಗಳನ್ನು ಸಾಧಾರವಾಗಿ ನಿರೂಪಿಸಿದ್ದಾರೆ. ವೀರಶೈವ ಸಾಹಿತ್ಯದ ಒಂದು ಸಿಂಹಾವಲೋಕನವನ್ನು ಇಲ್ಲಿ ಕಾಣಬಹುದಾಗಿದೆ. ಅವರು ಹೇಳಿರುವ ಕೆಲವು ಆಣಿಮುತ್ತುಗಳು: "ವೀರಶೈವ ಪುರಾಣಗಳ ಕಾಲವನ್ನು ಸುಮಾರು ಕ್ರಿ.ಶ. ೧೩೫೦ ರಿಂದ ೧೬೦೦ರ ವರೆಗೆಂದು ಧಾರಾಳವಾಗಿ ಹೇಳಬಹುದು." ವೀರಶೈವ ಪುರಾಣಗಳಿಂದ ಕರ್ನಾಟಕಕ್ಕೂ ಕರ್ನಾಟಕ ಸಾಹಿತ್ಯಕ್ಕೂ ಮಹೋಪಕಾರವಾಗಿರುತ್ತದೆ." "ವೀರಶೈವ ಪುರಾಣಗಳಿಂದ ಮತ್ತೊಂದು ಉಪಯೋಗವು ಸಾಹಿತ್ಯಕ್ಕೆ ಉಂಟಾಗಿದೆ. ಚಂಪೂಶೈಲಿಯನ್ನು ಬಿಟ್ಟು ಷಟ್ಪದಿಶೈಲಿಯಲ್ಲಿ ಗ್ರಂಥಗಳನ್ನು ರಚಿಸತೊಡಗಿದಾಗ, ಆ ಷಟ್ಪದಿಗಳನ್ನು ಪಳಗಿಸಿಕೊಂಡು ಕ್ರಮಕ್ರಮವಾಗಿ ಉತ್ತಮ ಸ್ಥಿತಿಗೆ ತಂದ ಕೀರ್ತಿಯು ಈ ಪುರಾಣಗಳಿಗೆ ಮುಖ್ಯವಾಗಿ ಸಲ್ಲಬೇಕು. "ವೀರಶೈವ ಪುರಾಣಗಳಿಂದ ಕರ್ನಾಟಕ ಸಾಹಿತ್ಯವು ಅಭಿವೃದ್ಧಿಯಾದುದಲ್ಲದೆ, ಆ ಸಾಹಿತ್ಯವು ಪಂಡಿತ ಪಾಮರರೆಲ್ಲರಿಗೂ ಅನುಕೂಲಿಸುವಂತೆ ಏರ್ಪಟ್ಟಿತು."

'ವೀರಶೈವ ಪುರಾಣ ಲಕ್ಷಣಗಳು' ಎಂಬ ಲೇಖನದಲ್ಲಿ ಎಲ್ಲ ವಿವರಗಳನ್ನು ಕೂಲಂಕಷವಾಗಿ ವಿಶ್ಲೇಷಿಸಿ ವಿಮರ್ಶಿಸಿದ್ದಾರೆ. ಎಂಆರ್‌ಶ್ರೀ ಅವರು ಸುಮಾರು ನಲವತ್ತು ವೀರಶೈವ ಕಾವ್ಯಗಳ ಬಗೆಗೆ ವಿಶ್ಲೇಷಣೆ ಮಾಡಿದಂತೆ ತಿಳಿದುಬರುತ್ತದೆ. ಆದರೆ ಆ ಎಲ್ಲ ಲೇಖನಗಳ ಸಮೀಕ್ಷೆ ಸದ್ಯದಲ್ಲಿ ಸಾಧ್ಯವೂ ಇಲ್ಲ, ಸಾಧುವೂ ಅಲ್ಲ ಎಂದು ಭಾವಿಸಿ ಪ್ರಮುಖವಾಗಿ ಪರ್ವತ ಶಿವಯೋಗಿಯ ಚತುರಾಚಾರ್ಯ ಚಾರಿತ್ರ ಮತ್ತು ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣಗಳಿಗೆ ಈ ಸಮೀಕ್ಷೆಯನ್ನು ಸೀಮಿತಗೊಳಿಸಲಾಗಿದೆ.

ಸಂಪಾದನೆಯ ಪರ್ವತೇಶ ವಿರಚಿತ ಚತುರಾಚಾರ್ಯ ಚಾರಿತ್ರ ವಾರ್ಧಕಷಟ್ಪದಿಯಲ್ಲಿದೆ. ಇದರಲ್ಲಿ ೬ ಕಾಂಡಗಳೂ ೫೪ ಸಂಧಿಗಳೂ ೩೧೮೭ ಪದ್ಯಗಳೂ ಇವೆ. ಹಲವಾರು ದೃಷ್ಟಿಗಳಿಂದ ಇದು ಅತ್ಯಂತಉಪಯುಕ್ತ ವೀರಶೈವ ಕೃತಿಯಾಗಿದೆ. ಇದರಲ್ಲಿ ವೇದ, ಉಪನಿಷತ್ತು, ಕಾಮಿಕಾಗಮ, ವೀರಾಗಮ, ವಾತೂಲ ಪಾರಮೇಶ್ವರ ತಂತ್ರಗಳು, ಲೈಂಗ್ಯಶೈವಗಳು, ಪಾದ್ಮೋತ್ತರ, ಸ್ಕಾಂದ, ಷಟ್ಸ್ಥಲಜ್ಞಾನದೀಪಿಕೆ, ಗುರುಬಸವೇಶ್ವರನ ಷಟ್ಕಾವ್ಯ, ಸಿದ್ಧಾಂತ ಶಿಖಾಮಣಿ, ವಿವೇಕಚಿಂತಾಮಣಿ -ಮೊದಲಾದ ಗ್ರಂಥಗಳಿಂದ ಹಲವಾರು ವಿಷಯಗಳು ಸಂಗ್ರಹಿಸಲ್ಪಟ್ಟಿವೆ. ವೀರಶೈವಾಚಾರ್ಯರ ಚರಿತ್ರೆ ವಿಸ್ತಾರವಾಗಿ ನಿರೂಪಿತವಾಗಿರುವುದು ಈ ಗ್ರಂಥದಲ್ಲಿಯೇ. ಈ ಬೃಹತ್ಕಾವ್ಯ ಇತ್ತೀಚೆಗೆ ತಾನೇ ಪ್ರಕಟವಾಗಿವೆ. ಎಂಆರ್‌ಶ್ರೀ ಅವರ ಕಾಲಕ್ಕೆ ಈ ಕೃತಿ ಪ್ರಕಟವಾಗಿರಲಿಲ್ಲ. ಹಸ್ತಪ್ರತಿಯಿಂದಲೇ ಈ ಬೃಹತ್ಕಾವ್ಯವನ್ನು ವ್ಯಾಸಂಗಮಾಡಿ ವಿಮರ್ಶೆಮಾಡಿರುವುದು ಶ್ರೀಯುತರ ಅಸಾಧಾರಣ ಮೇಧಾಶಕ್ತಿಗೆ ಕುರುಹಾಗಿದೆ. ಹಸ್ತಪ್ರತಿಗಳಿಂದ ಪ್ರಾಚೀನ ಕಾವ್ಯಗಳನ್ನು ವ್ಯಾಸಂಗಮಾಡಿ ವಿಮರ್ಶಿಸಿರುವವರಲ್ಲಿ ನಾನು ಕಂಡಂತೆ ನನ್ನ ಪೂಜ್ಯ ವಿದ್ಯಾಗುರುಗಳಾದ ಡಿ.ಎಲ್. ನರಸಿಂಹಾಚಾರ್ಯರು ಮತ್ತು ಎಂ.ಆರ್. ಶ್ರೀನಿವಾಸಮೂರ್ತಿಯವರು. ಗುರುರಾಜಚಾರಿತ್ರದಲ್ಲಿ ಬರುವ ಆಚಾರ್ಯರಚರಿತ್ರೆಯನ್ನು ಚತುರಾಚಾರ್ಯಚಾರಿತ್ರದಲ್ಲಿ ಬರುವ ಆಚಾರ್ಯರಚರಿತ್ರೆಯನ್ನು ಎಂಆರ್‌ಶ್ರೀ ಅವರು ವಿಮರ್ಶೆಮಾಡಿ ನೋಡಿದ್ದಾರೆ. ಈ ಕಾವ್ಯದ ಸಾರಸರ್ವಸ್ವವನ್ನು ಸಂಕ್ಷೇಪವಾಗಿ ತಿಳಿಸುವುದರ ಜೊತೆಗೆ ಈ ಕಾವ್ಯದಲ್ಲಿ ಪ್ರತಿಪಾದಿತವಾಗಿರುವ ಧಾರ್ಮಿಕ ಸಂಗತಿಗಳನ್ನು ವಿಶ್ಲೇಷಿಸಿದ್ದಾರೆ. ಈ ಕಾವ್ಯದ ಕಡೆಯಲ್ಲಿ "ನಾಲ್ಕು ವೇದಗಳು, ಉಪನಿಷತ್ತುಗಳು ಮೊದಲಾದುವನ್ನು ವೈದಿಕ ವಿರುದ್ಧಮಾಗದ ತೆರದಿ ಪೇಳಿಹುದು ಸುಜನರಾಲಿಸುವುದು; ವೀರಾಗಮ, ವಾತೂಲ, ಪಾರಮೇಶ್ವರ ಮೊದಲಾದ ಆಗಮಗಳಿಂದಗೂ, ಲಿಂಗಪುರಾಣ ಶಿವಪುರಾಣ ಮೊದಲಾದವುಗಳಿಂದಲೂ "ವೀರಶೈವಕ್ಕನುಕೂಲಮಪ್ಪಂದದಿಂ" ಉದ್ಧರಿಸಿದ್ದೇನೆ. ಷಟ್ಸ್ಥಲಜ್ಞಾನದೀಪಿಕೆ, ಷಟ್ಕಾವ್ಯ, ಸಿದ್ಧಾಂತಶಿಖಾಮಣಿ, ನಿಜಗುಣರ ವಿವೇಕಚಿಂತಾಮಣಿಯಿಂದ ವಿಷಯಗಳನ್ನು ತೆಗೆದು ಸರವನ್ನು ಮಾಡಿದ್ದೇನೆ. ಕನ್ನಡ ನುಡಿಯೆಂದು ಬೇಸರಗೊಳ್ಳದಂತೆ ಮುನ್ನುಳ್ಳ ವೇದಾದಿ ಸಮ್ಮತಿ ವಾಕ್ಯವಾಗಿ ಈ ಕೃತಿಯನ್ನು ರಚಿಸಿದ್ದೇನೆ ಎಂದು ಕವಿ ತಿಳಿಸಿದ್ದಾನೆ. ಈ ಕಾವ್ಯ ಒಂದು ಕಡೆ ಶಾಸ್ತ್ರವಿಚಾರಗಳ

ನಿಧಿ ಶರಣರಾನಂದ, ಮತ್ತೊಂದು ಕಡೆ ಲೌಕಿಕರಿಗೆ ರಸಭಾವಗಳ ನಿಧಿ ರಸಿಕರಿಗೆ ಕಾವ್ಯಾನಂದ ಈ ಉಭಯ ಮತಗಳಿಗೂ ಹೊಂದಿಕೆಯಾಗಿ ಬರೆದಿರುತ್ತೇನೆಂದು ಹೇಳಿಕೊಂಡಿದ್ದಾನೆ. ಅದರಲ್ಲಿ ಸತ್ಯಾಂಶವಿದೆ" ಎಂದು ಹೇಳಿರುವುದು ಯಥೋಚಿತವಾಗಿದೆ.

ಗುಬ್ಬಿಯ ಮಲ್ಲಣಾರ್ಯ ವಿರಚಿತ ವೀರಶೈವಾಮೃತ ಮಹಾಪುರಾಣ ಕನ್ನಡ ಸಾಹಿತ್ಯದಲ್ಲಿ ಬಹುದೊಡ್ಡ ಗ್ರಂಥ. ಇದರಲ್ಲಿ ಎಂಟು ಕಾಂಡಗಳು, ನೂರಮೂವತ್ತಾರು ಸಂಧಿಗಳು ಮತ್ತು ಏಳುಸಾವಿರದ ಒಂಭೈನೂರ ಎರಡು ಪದ್ಯಗಳಿವೆ. ಇದರಲ್ಲಿ ಉದ್ಧರಿಸಿರುವ ಸಂಸ್ಕೃತ ಶ್ಲೋಕಗಳು ಎಂಟುನೂರ ಹದಿನೇಳು. ಈ ಬೃಹತ್ ಕೃತಿಯ ಪರಿಚಯವನ್ನು ಸ್ವಲ್ಪಮಟ್ಟಿಗೆ ಮಾಡಿಕೊಡಲು ಪ್ರಯತ್ನಪಟ್ಟಿದೆ ಎಂದು ಎಂಆರ್‌ಶ್ರೀ ಅವರು ಹೇಳಿದ್ದಾರೆ. ಆದರೆ ಇದು ಕೇವಲ ಪರಿಚಯವಲ್ಲದೆ ಒಂದು ವಸ್ತುನಿಷ್ಠ ತೌಲನಿಕ ವಿಮರ್ಶೆಯಾಗಿದೆ ಎಂದು ನಾನು ಭಾವಿಸುತ್ತೇನೆ. ಶಿವತತ್ತ್ವಚಿಂತಾಮಣಿ, ಚೆನ್ನಬಸವಪುರಾಣಗಳನ್ನು ಈ ಪುರಾಣದೊಂದಿಗೆ ಹೋಲಿಸಿ ವಸ್ತುವಿನ್ಯಾಸವನ್ನೂ ಇವರು ಅನುಸರಿಸಿರುವ ಮಾರ್ಗವನ್ನು ಸ್ಪಷ್ಟಪಡಿಸಿದ್ದಾರೆ. ಈ ಮೂರು ಗ್ರಂಥಗಳಲ್ಲಿಯೂ ವೀರಶೈವ ತತ್ತ್ವಬೋಧೆಗೆ ಮತ್ತು ಅದಕ್ಕೆ ಹಿನ್ನೆಲೆಯಾದ ಪರಮೇಶ್ವರನ ಪಂಚವಿಂಶತಿಲೀಲಾಕಥನಕ್ಕೆ ಮುಖ್ಯಸ್ಥಾನ. ಇತರ ವಿಷಯಗಳಿಗೆ ಗೌಣಸ್ಥಾನ.

ಈ ಮಹಾಪುರಾಣದಿಂದ ಸಂದರ್ಭೋಚಿತವಾಗಿ ಉದ್ಧರಿಸಿರುವ ಪದ್ಯಗಳು ಸುಮಾರು ಮೂವತ್ತೈದು.

"ವೀರಶೈವಾಮೃತ ಮಹಾಪುರಾಣ ವೀರಶೈವ ಮಹಾಸಾಗರ. ಅದರಲ್ಲಿ ಪರತತ್ತ್ವಸ್ವರೂಪ, ಸೃಷ್ಟಿಕ್ರಮ, ಅಷ್ಟಾವರಣಗಳು, ಪಂಚವಿಂಶತಿಲೀಲೆಗಳು, ಶಿವಾಧಿಕ್ಯಸ್ಥಾಪನೆ, ಪುರಾಣದೊಳಗಿನ ಉಪಕಥೆಗಳು, ಅದ್ವೈತವೇದಾಂತ ಮತ್ತು ಶೈವಸಿದ್ಧಾಂತಗಳ ವಿವರಣೆಗಳು ಬಸವೇಶ್ವರಾದಿಗಳ ಚರಿತ್ರೆ, ಅರುವತ್ತುಮೂವರು ಪುರಾತನರು, ನೂತನ ಪುರಾತನರು, ವಿರಕ್ತರು, ಆಗಿನ ಕಾಲದ ಇತರ ಶರಣರು – ಅವರ ಪವಾಡಗಳು, ಷಟ್ಸ್ಥಲಾದಿಗಳ ಮತ್ತು ಅವಾಂತರ ಭೇದಗಳ ವಿವರಣೆ, ಹದಿನೆಂಟು ಯುಗಗಳ ರಾಜರು ಮೇರುವೇರಿದ ಕಥೆ –ಇನ್ನೂ ಹಲವು ವಿಚಾರಗಳು ಆ ಸಾಗರದಲ್ಲಿದೆ. ವೀರಶೈವದ ವಿಶ್ವಕೋಶವೆಂದು ಅದನ್ನು ನಾವು ಕರೆಯಬಹುದು."

"ಮಲ್ಲಣಾರ್ಯನ ಪದ್ಯರಚನಾಸಾಮರ್ಥ್ಯ ಅದ್ವಿತೀಯವಾದುದು ಎಂಬುದರಲ್ಲಿ ಸಂದೇಹವಿಲ್ಲ. ಇಂತಹ ದೊಡ್ಡ ಗ್ರಂಥವನ್ನು ರಚಿಸುವಾಗ ಶಬ್ದಭಂಡಾರ ಎಷ್ಟಿದ್ದರೂ ಪುನರುಕ್ತಿಗಳು ಅನಿವಾರ್ಯ. ಶಾಸ್ತ್ರವಿಚಾರ ತುಂಬಿರುವ ಗ್ರಂಥದಲ್ಲಿ ರಸ, ಅಲಂಕಾರ ಮತ್ತು ಭಾವಪರಿಪುಷ್ಟಿಗಳನ್ನು ನಾವು ನಿರೀಕ್ಷಿಸುವುದೂ ಕಾವ್ಯಾಮೃತವೃಷ್ಟಿಯಾಗಿ ಬಾಯಿ ಬಿಟ್ಟುಕೊಂಡಿರುವುದೂ ನ್ಯಾಯವಲ್ಲ" ಈ ಮಹಾ ಪದ್ಯಗ್ರಂಥದಲ್ಲಿ ಮುಂದೆ ಉದಾಹರಿಸುವಂತಹ ಪದ್ಯಗಳೂ ಬರುತ್ತವೆ.

ಇಂ ನಾ ಕರನ್ಯಾಸಮಂ ಕೂರ್ತು ಕೇಳಯ್ಯ
ಓಂ ನಂ ತು ಹಾಂ ಕರದ್ವಾಭ್ಯಾಂ ನಮ ಎನುತ್ತ
ವುಂ ನಾಡೆ ಓಂ ಮಂ ಚ ಹ್ರೀಂ ಕರತಳಭ್ಯಾಂ ನಮ ಎನ್ನುತ್ತ ಓಂ ಶಿಂ ತಥಾ
ಸಾನ್ನಿಧ್ಯ ಹೂಂ ತು ಕರ ಮಧ್ಯಕಾಭ್ಯಾಂ ನಮ
ಶ್ಚಾಂ ಸತ್ಯ ಓಂ ವಾಂ ಚ ಹ್ರೈಂ ಯೆಂಬುದಕ್ಕೆ ಕೇಳ್
ಸಂನಿಹಿತವಪ್ಪ ಕರಪೃಷ್ಠಕಾಭ್ಯಾಂ ನಮ ಎನುತ ಓಂ ಯಂ ಹ್ರೌ ಎನೆ

ಈರೀತಿ ಪದನುಮಾಡುತ್ತಿರುವ ಮಲ್ಲಣಾರ್ಯನ ವಿಷಯದಲ್ಲಿ ಸಹಾನುಭೂತಿ ತೋರಿಸೋಣ. ಇನ್ನು ನೂತನ ಶರಣರು ಮೊದಲಾದವರ ಹೆಸರುಗಳನ್ನು ಹೇಳಬೇಕಾಗಿ ಬಂದಾಗ,

ಆ ತಿಪ್ಪಣಯ್ಯ ಹರಿಯಸಮುದ್ರವಿರುಪಣ್ಣ
ತಾತ ಹೊನ್ನೂರು ತಡಗಿದ ಕಾಯಕದ ವಿರುಪ
ಣಾತಿಶಯ ನಿಡುಗಲ್ಲ ವುದ್ದಪ್ಪ ಗಟ್ಟಿಯಾ ವಿಶ್ವನಾಥಯ್ಯ ಲಿಂಗಾ

ಪ್ರೀತಿ ಮುಳುವಾಗಲೊಳು ರುದ್ರಶೆಟ್ಟಿಯ ಮಲ್ಲ
ನೋತು ಶಿವರಾತ್ರಿಯಯ್ಯಂ ಕಾಕೊಳಲ ಮಸಣ
ಜಾತ ತೋಗೂರ ದೇವಪ್ಪನಾ ಹುಲವಳ್ಳಿಯಾ ರಾಮಣಂ ಬಳಿಕ್ಕಾ

ಹೀಗೆ ಪದ್ಯಗಳನ್ನು ಮಲ್ಲಣಾರ್ಯನು ಬರೆಯಬೇಕಾಗಿದೆ. ಇವುಗಳಲ್ಲೆಲ್ಲ ಏನು ರಸವಿದ್ದೀತು? ಏನು ಭಾವಪಿದ್ದಿತು? ಎಂದು ಹೇಳಿ. "ಆದರೆ ಕಾವ್ಯಾಂಶಗಳು ಈ ಪುರಾಣದಲ್ಲಿ ಇಲ್ಲದೇ ಹೋಗಿಲ್ಲ. ಅವು ಮುಖ್ಯವಾಗಿ ಈಶ್ವರನ ಇಪ್ಪತ್ತೈದುಲೀಲೆಗಳನ್ನು ಕಥಿಸುವಾಗ ದೊರೆಯುತ್ತವೆ" ಎಂದು ಸಮಾಧಾನ ಹೇಳಿದ್ದಾರೆ.

ಪಂಚವಿಂಶತಿಲೀಲೆಗಳಲ್ಲಿ ಜಲಂಧರಹರಲೀಲೆಯನ್ನು ಬಹುವಾಗಿ ಮೆಚ್ಚಿಕೊಂಡಿರುವ ಎಂಆರ್‌ಶ್ರೀ ಅವರು "ಮೇಲಿನ ಕಥನದಲ್ಲಿ ಮಲ್ಲಣಾರ್ಯನು ತೋರಿಸಿರುವ ಕವಿತಾಶಕ್ತಿಯನ್ನು ನೋಡಿದರೆ ಅವನು ಸಾಮಾನ್ಯ ಕವಿಯಲ್ಲ ಎಂಬುದು ತಿಳಿಯುತ್ತದೆ. ಆದರೆ ಶಾಸ್ತ್ರವಿಷಯಗಳನ್ನೆಲ್ಲ ಪದನುಮಾಡುವುದರಲ್ಲಿ ಆ ಶಕ್ತಿಯನ್ನು ಅವನು ಪೋಲು ಮಾಡಿಬಿಟ್ಟಿದ್ದಾನೆ. ಕೈಲಾಸದಲ್ಲಿ ಗಣಪದವಿಯನ್ನೇನೋ ಅವನು ಪಡೆದುಕೊಂಡಿರಬಹುದು. ಚೆನ್ನಬಸವಪುರಾಣವನ್ನು ಓದುವವರು ಅನೇಕರು ದೊರೆಯಬಹುದು. ವೀರಶೈವಾಮೃತ ಪುರಾಣವನ್ನು ಓದುವವರು ಅತಿವಿರಳವೆಂದೇ ನಮಗೆ ತೋರುತ್ತದೆ" ಎಂಬ ಹೇಳಿಕೆ ಬಹುಮಟ್ಟಿಗೆ ಸಾಧುವಾದುದು ಎಂದು ತೋರುತ್ತದೆ.

ಎಂಆರ್‌ಶ್ರೀ ಅವರ ವಿಮರ್ಶಾಲೇಖನಗಳಲ್ಲಿ ಕೆಲವು ಸಾಧಾರವಾಗಿದ್ದರೂ ಅಸಮಗ್ರವಾಗಿವೆ, ಧಾರಾಳವಾದ ಮಾತುಗಳನ್ನಾಡಿದ್ದಾರೆ, ಔದಾರ್ಯದ ಮಾತುಗಳನ್ನಾಡಿದ್ದಾರೆ ಎಂಬ ಅಭಿಪ್ರಾಯಗಳು ವ್ಯಕ್ತವಾಗಿದೆ. ಅನೇಕ ವೀರಶೈವ ಕೃತಿಗಳ ಬಗೆಗೆ ವಿಮರ್ಶೆ ಮಾಡುವಾಗ ಒಂದೆರಡು ಕಡೆ ಈ ಧಾರಾಳದ ಔದಾರ್ಯದ ಮಾತುಗಳು ಬಂದಿದ್ದರೂ ಅವನ್ನು ದೋಷವೆಂದು ಪರಿಗಣಿಸದೆ ಆಯಾ ಕವಿಕೃತಿಗಳ ಬಗೆಗೆ ಎಂಆರ್‌ಶ್ರೀ ಅವರಿಗಿರುವ ವಿಶೇಷ ಒಲವು ಎಂದು ಪರಿಗಣಿಸುವುದೇ ಸೂಕ್ತ ಎಂದು ನಾನಾದರೋ ಭಾವಿಸುತ್ತೇನೆ.

ಎಂಆರ್‌ಶ್ರೀ ಅವರ ಸಮಗ್ರ ಲೇಖನಗಳನ್ನೊಳಗೊಂಡ ಸಾಹಿತ್ಯಾಲೋಕ ಎಂಬ ಗ್ರಂಥದ ಸಂಪಾದಕರ ಮಾತುಗಳು ಇವು: "ಎಂಆರ್‌ಶ್ರೀಯವರ ದುಡಿಮೆ ವಿಶೇಷವಾಗಿ ವೀರಶೈವ ಸಾಹಿತ್ಯದಲ್ಲಿ ನಡೆದಿದೆ; ಆಧುನಿಕ ಸಾಹಿತ್ಯಕ್ಕಿಂತ ಅವರ ಒಲವು ಪ್ರಾಚೀನ ಸಾಹಿತ್ಯದೆಡೆಗೆ; ಅವರು ಸಮರ್ಥರಾದ ಸಂಶೋಧಕರಷ್ಟೇ ಅಲ್ಲದೆ ಸೊಗಸಾದ ವಿಮರ್ಶೆಯನ್ನು ಮಾಡಬಲ್ಲವರಾಗಿದ್ದರು. ಕವಿಕೃತಿಗಳನ್ನು ವಿಮರ್ಶಿಸುವಾಗ ಇಂದು ಪ್ರಚಲಿತವಾಗಿರುವ ತೌಲನಿಕ ಸಾಹಿತ್ಯದ ಮತ್ತು ತೌಲನಿಕ ವಿಮರ್ಶೆಯ ಕಲ್ಪನೆಗಳನ್ನು ಸೂತ್ರಗಳನ್ನೂ ಬಳಸಿಕೊಂಡು ಕವಿಕೃತಿಯನ್ನು ಅವರು ಬೆಲೆಗಟ್ಟುತ್ತಿದ್ದರು. ನಿರಾಯಾಸವೂ ಆಕರ್ಷಕವೂ ಆದ ಅವರ ಶೈಲಿಯಲ್ಲಿ ಹದ ಹಾಳತಗಳಿವೆ; ನಯನವುರುಗಳಿವೆ. ವಿಮರ್ಶ ಬರಹಗಳಲ್ಲಿ ಕಾವ್ಯಗಂಧಿಯಾಗಿ ಚಿಮ್ಮುವ ಅವರ ಗದ್ಯ, ಸಂಶೋಧನ ಬರಹಗಳಲ್ಲಿ ಸಹಜವಾಗಿಯೇ ಶಾಸ್ತ್ರವತ್ತಾದ ಶೈಲಿಯಾಗಿ ಪರಿಣಮಿಸುತ್ತದೆ" –ಈ ಮಾತುಗಳು ಉಚಿತವಾದುವು ಎಂದು ನಾನು ಭಾವಿಸುತ್ತೇನೆ.

■

# ಡೆಪ್ಯುಟಿ ಚನ್ನಬಸಪ್ಪನವರ ವ್ಯಕ್ತಿತ್ವ

**ಕ**ನ್ನಡ ನಾಡು ನುಡಿಗಳ ಸಂವರ್ಧನೆಗಾಗಿ ಅಹರ್ನಿಸಿ ದುಡಿದು ಕೀರ್ತಿಶೇಷರಾದವರಲ್ಲಿ ಚೆನ್ನಬಸಪ್ಪನವರು ಮೊಟ್ಟಮೊದಲಿಗರು. ಅನ್ಯಭಾಷಾಕ್ರಾಂತವಾಗಿದ್ದ ಕನ್ನಡವನ್ನು ಉದ್ಧರಿಸಿದ ಪುಣ್ಯಪುರುಷರು. ಕನ್ನಡ ಪಂಚಾಕ್ಷರಿಯನ್ನು ನಿರಂತರವಾಗಿ ಜಪಿಸಿದ ಪರಮಭಕ್ತರು. ಕನ್ನಡಕ್ಕಾಗಿ ತನುಮನಧನವನ್ನು ಸಮರ್ಪಿಸಿದ ಮಹಾನುಭಾವರು. ತಾವು ಮಾಡಿದ ಕನ್ನಡದ ಕೆಲಸಕ್ಕಾಗಿ ಜಾತಿ ಮತಪಂಥ ಭೇದಗಳಿಲ್ಲದೆ ಸರ್ವರಿಂದಲೂ ಕೊಂಡಾಡಲ್ಪಟ್ಟ ಕಾರಣಪುರುಷರು. ಇಂತಹವರ ನಾಮಸ್ಮರಣೆಮಾಡುವುದು ಒಂದು ಪುಣ್ಯವಿಶೇಷವೆಂದೇ ಭಾವಿಸಬೇಕು.

ಚನ್ನಬಸಪ್ಪನವರು ಹತ್ತೊಂಬತ್ತನೆಯ ಶತಮಾನದಲ್ಲಿ ಜನ್ಮತಳೆದು ನಿರಂತರ ಕಾಯಕದಿಂದ ಮರ್ತ್ಯದ ಮಣಿಹವನ್ನು ಮುಗಿಸಿದವರು. ಇವರ ಕರ್ಮಭೂಮಿ ಉತ್ತರ ಕರ್ನಾಟಕ. ಇವರು ದುಡಿದದ್ದೆಲ್ಲ ಧಾರವಾಡ ಬೆಳಗಾವಿ ಜಿಲ್ಲೆಗಳಲ್ಲಿ. ಇವರ ಕಾಲದಲ್ಲಿ ಧಾರವಾಡ ಪೇಶ್ವೆಯವರ ಆಡಳಿತಕ್ಕೆ ಒಳಪಟ್ಟು ಮರಾಠಿ ಭಾಷೆಯನ್ನು ಕಡ್ಡಾಯವಾಗಿ ಕಲಿಯಬೇಕಾಗಿತ್ತು. ಕ್ರಿ.ಶ. ೧೮೧೮ರವರೆಗೆ ಪೇಶ್ವೆಯವರ ಆಡಳಿತವಿತ್ತು. ಆಮೇಲೆ ಈ ಪ್ರದೇಶ ಆಂಗ್ಲರ ಆಧಿಪತ್ಯಕ್ಕೆ ಒಳಪಟ್ಟಿತು. ಈ ಅವಧಿಯಲ್ಲಿಯೂ ಕೂಡ ಮರಾಠಿಶಿಕ್ಷಣ ಮತ್ತು ಆಡಳಿತಕ್ಷೇತ್ರಗಳನ್ನು ಆಕ್ರಮಿಸಿಕೊಂಡಿತ್ತು. ಮರಾಠಿಭಾಷೆಯನ್ನು ಕಿತ್ತೊಗೆದು ಕನ್ನಡವನ್ನು ಜಾರಿಗೆ ತಂದವರು 'ಕನ್ನಡದ ಹುಲಿ' ಚನ್ನಬಸಪ್ಪನವರು.

ಚನ್ನಬಸಪ್ಪನವರ ಪೂರ್ವಜರು ಬೆಳಗಾವಿ ಜಿಲ್ಲೆಯ ಗೋಕಾಕದವರು. ಆ ಕಾಲಕ್ಕೆ ಆ ಊರಿಗೆ ಗೋಕಾವಿ ಎಂಬ ಹೆಸರೂ ರೂಢಿಯಲ್ಲಿತ್ತು. ವೀರಶೈವ ಮನೆತನದವರಾದ ಇವರು ವೃತ್ತಿಯಿಂದ ವ್ಯಾಪಾರಸ್ಥರು. ಇವರ ಮನೆತನದ ಹೆಸರು "ಧಾರವಾಡ". ಚನ್ನಬಸಪ್ಪನವರ ತಾತಂದಿರು ಅಪ್ಪಯ್ಯಪ್ಪ. ಇವರಿಗೆ ಅಪ್ಪಣ್ಣಪ್ಪ, ಬಸವಲಿಂಗಪ್ಪ ಎಂಬ ಇಬ್ಬರು ಮಕ್ಕಳು. ಇವರಲ್ಲಿ ಬಸವಲಿಂಗಪ್ಪ ಅವರು ಚನ್ನಬಸಪ್ಪನವರ ತಂದೆಯವರು. ಚನ್ನಬಸಪ್ಪನವರ ತಾಯಿ ತಿಪ್ಪವ್ವ. ಈ ದಂಪತಿಗಳಿಗೆ ಇಬ್ಬರು ಗಂಡುಮಕ್ಕಳು. ಅವರಿಬ್ಬರಿಗೂ ಚೆನ್ನಬಸಪ್ಪ ಎಂದೇ ಹೆಸರಿಟ್ಟಿದ್ದರು. ದೊಡ್ಡವರಿಗೆ ದೊಡ್ಡಚನ್ನಬಸಪ್ಪ ಎಂದೂ ಸಣ್ಣವರಿಗೆ ಸಣ್ಣಚನ್ನಬಸಪ್ಪ ಎಂಬ ಹೆಸರುಗಳು ರೂಢಿಗೆ ಬಂದುವು. ಇವರಲ್ಲಿ ದೊಡ್ಡಚನ್ನಬಸಪ್ಪನವರೇ ಪ್ರಸ್ತುತ ಡೆಪ್ಯುಟಿ ಚನ್ನಬಸಪ್ಪನವರು. ಚನ್ನಬಸಪ್ಪನವರ ತಂದೆಯವರು ವ್ಯಾಪಾರದ ನಿಮಿತ್ತವಾಗಿ ಗೋಕಾಕದಿಂದ ಧಾರವಾಡಕ್ಕೆ ಬಂದು ನೆಲಸಿದರು. ಅವರು ಧಾರವಾಡಕ್ಕೆ ಬಂದ ಮೇಲೆಯೇ ಚನ್ನಬಸಪ್ಪನವರ ಜನನವಾದದ್ದು. ಅವರು ಹುಟ್ಟಿದ್ದು ೧.೧೧.೧೮೩೩ರಂದು. ಕರ್ಣಾಟಕ ರಾಜ್ಯೋದಯದ ಸಂಕೇತವಾಗಿಯೇ ಅವರ ಜನನ ನವೆಂಬರ್ ತಿಂಗಳಲ್ಲಿ ಆಯಿತೆಂಬುದು ಕಾಕತಾಳ ನ್ಯಾಯವೇ ಸರಿ.

ಚನ್ನಬಸಪ್ಪನವರಿಗೆ ಆರುವರ್ಷಗಳಾಗುವ ವೇಳೆಗೆ ಅವರ ತಂದೆ ಲಿಂಗೈಕ್ಯರಾದರು. ಇವರ ವಿದ್ಯಾಭ್ಯಾಸದ ಹೊಣೆಗಾರಿಕೆಯೆಲ್ಲ ಅವರ ತಾಯಿಯ ಮೇಲೆ ಬಿದ್ದಿತು. ಅಷ್ಟಾಗಿ ಐಶ್ವರ್ಯವಂತರಲ್ಲದ ಇವರಿಗೆ ಇದು ಕಷ್ಟಸಾಧ್ಯವಾಯಿತು. ಮಹಾಸಾಧ್ವಿ ತಿಪ್ಪಮ್ಮ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ವಿಶೇಷ ಲಕ್ಷ್ಯವನ್ನು ಕೊಟ್ಟಳು. ಸರಕಾರಿ ಶಾಲೆಗಳಿಲ್ಲದ ಅಂದಿನ ಕಾಲದಲ್ಲಿ ಶಿವರುದ್ರಯ್ಯ ಎಂಬ ಮಠದ ಅಯ್ಯನವರ ಶಾಲೆಯಲ್ಲಿಯೇ ವಿದ್ಯಾಭ್ಯಾಸ ಪ್ರಾರಂಭವಾಯಿತು. ಬಾಲ್ಯದಲ್ಲಿ ಚನ್ನಬಸಪ್ಪ ತುಂಬ ತುಂಟ ಮತ್ತು ಹಠಮಾರಿ. ಆದರೆ ಅಷ್ಟೇ ಪ್ರತಿಭಾಶಾಲಿ. ಕನ್ನಡ, ಮರಾಠಿ, ಗಣಿತ ಇವನ್ನು

ಗುರುಗಳು ಚೆನ್ನಾಗಿ ಬೋಧಿಸಿದರು. ಹಳಗನ್ನಡ ಕಾವ್ಯಗಳ ಪಠಣದ ಪ್ರಭಾವ ಚನ್ನಬಸಪ್ಪನ ಮೇಲೆ ತುಂಬ ಪರಿಣಾಮ ಬೀರಿತು. ಕನ್ನಡದ ಬಗೆಗೆ ಆಸ್ಥೆ ಅಭಿಮಾನ ಮೂಡುವಂತಾಯಿತು. ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿದ ಮೇಲೆ ಮುಂದಿನ ವಿದ್ಯಾಭ್ಯಾಸಕ್ಕಾಗಿ ಪುಣೆ ಬೊಂಬಾಯಿ ನಗರಗಳಿಗೆ ಹೋಗಬೇಕಾಗಿತ್ತು. ವಾಹನಸೌಕರ್ಯಗಳಿಲ್ಲದ ಅಂದಿನ ಕಾಲದಲ್ಲಿ ದೂರದ ಪಟ್ಟಣಗಳಿಗೆ ಹೋಗುವುದು ಸಾಹಸದ ಮಾತೇ ಆಗಿತ್ತು. ಇಂಗ್ಲಿಷ್ ಕಲಿಯಲೇಬೇಕೆಂಬ ಚನ್ನಬಸಪ್ಪನವರ ಅದಮ್ಯಉತ್ಸಾಹ ಇದಾವುದಕ್ಕೂ ಅಡ್ಡಿಯುಂಟುಮಾಡಲಿಲ್ಲ. ಆದರೆ ಬಡತನ ಇದಕ್ಕೆ ಅಡ್ಡಿಯಾಗಿತ್ತು. ಒಮ್ಮೆ ತನ್ನ ತಾಯಿಯೊಡನೆ ಮುಂದಿನ ವಿದ್ಯಾಭ್ಯಾಸಕ್ಕಾಗಿ ಪುಣೆಗೆ ಹೋಗುವ ವಿಷಯ ಪ್ರಸ್ತಾಪಮಾಡಿದ. ತಾಯಿಯಿಂದ ಯಾವ ಪ್ರತಿಕ್ರಿಯೆಯು ಬರಲಿಲ್ಲ. ವಿದ್ಯೆ ಕಲಿಯಲೇಬೇಕೆಂಬ ಅಚಲನಿರ್ಧಾರದಿಂದ ಪುಣೆಗೆ ಹೋಗುವ ಧೈರ್ಯವನ್ನು ಮಾಡಿಬಿಟ್ಟನು. ಒಂದು ದಿನ ರಾತ್ರಿ ತನ್ನ ತಾಯಿ ನಿದ್ರೆಹೋದಮೇಲೆ ಆಕೆಯ ಪೆಟ್ಟಿಗೆಯನ್ನು ತೆರೆದು ಅದರಲ್ಲಿ ೩ ರೂ. ೧೦ ಆಣೆಗಳನ್ನು ತೆಗೆದುಕೊಂಡು ಮನೆಯನ್ನು ಬಿಟ್ಟು ಹೊರಟನು. ತನ್ನ ತಂದೆಯ ಊರಾದ ಗೋಕಾಕಿಗೆ ಬಂದು ಬಂಧುಬಾಂಧವರೊಡನೆ ತನ್ನ ವ್ಯಾಸಂಗ ಮುಂದುವರಿಕೆಯ ವಿಷಯವನ್ನು ತಿಳಿಸಿದನು. ಯಾರೂ ಅದಕ್ಕೆ ಪ್ರೋತ್ಸಾಹ ಕೊಡಲಿಲ್ಲ, ಸಹಾಯ ಮಾಡಲಿಲ್ಲ. ಆದರೆ ಅವರ ತಂದೆಯವರ ಸ್ನೇಹಿತರಾಗಿದ್ದ ನಾಗಪ್ಪಗಿರಿಮಾರ ಎಂಬ ಶ್ರೀಮಂತರೊಬ್ಬರು ಆ ಬಾಲಕನ ಧೈರ್ಯ ಸಾಹಸಗಳನ್ನು ಮೆಚ್ಚಿ ೫೦ ರೂ.ಗಳನ್ನು ಕೊಟ್ಟು ಕಳಿಸಿದರು. ಪುಣೆಯನ್ನು ಕಾಲ್ನಡೆಯಲ್ಲೇ ತಲುಪಿದ ಚನ್ನಬಸಪ್ಪನಿಗೆ ಶ್ರೀಮಂತರೂ ಉದಾರಿಗಳೂ ಆದ ಶ್ರೀ ಗೋವಿಂದರಾವ ಮೆಹಂದಳೇಕರ ಎಂಬುವರ ಪರಿಚಯವಾಯಿತು. ಚನ್ನಬಸಪ್ಪನ ಧೈರ್ಯ, ಸಾಹಸ, ಛಲ, ವಿದ್ಯಾರ್ಜನೆಯ ತವಕವನ್ನು ಬಹುವಾಗಿ ಮೆಚ್ಚಿಕೊಂಡ ಶ್ರೀಮಂತರು ಆತನ ವಿದ್ಯಾಭ್ಯಾಸಕ್ಕೆ ಎಲ್ಲ ನೆರವನ್ನೂ ನೀಡಿದರು.

ಪುಣೆಯಲ್ಲಿ ನೆಲಸಿದ ಚನ್ನಬಸಪ್ಪ ತನ್ನ ತಾಯಿಯನ್ನು ಕರೆಸಿಕೊಂಡು ತನ್ನಲ್ಲಿಯೇ ಇರಿಸಿಕೊಂಡು ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಆತನ ಪ್ರತಿಭೆ ಚುರುಕುತನ, ಕರ್ತವ್ಯದಕ್ಷತೆ, ವಿದ್ಯಾಸಕ್ತಿ ಇವು ಎಲ್ಲರಿಗೂ ಮೆಚ್ಚುಗೆಯಾದವಲ್ಲದೆ ಬಡವಿದ್ಯಾರ್ಥಿಗಳ ನಿಧಿಯಿಂದ ಸಹಾಯವೂ ಲಭ್ಯವಾಯಿತು. ಇದರಿಂದ ಸ್ಫೂರ್ತಿಗೊಂಡ ಚನ್ನಬಸಪ್ಪ ಸತತವಾಗಿ ವಿದ್ಯಾವ್ಯಾಸಂಗ ಮಾಡಿದ. ಗಣಿತದಲ್ಲಿ ಆತನಿಗೆ ಅಪಾರ ಆಸಕ್ತಿ. ಹಾಗೆಯೇ ವಿಜ್ಞಾನ ವಿಷಯಗಳಲ್ಲಿಯೂ ಹೆಚ್ಚು ಒಲವನ್ನು ತೋರಿ ಮಾಧ್ಯಮಿಕ ವಿದ್ಯಾಭ್ಯಾಸವನ್ನು ಮುಗಿಸಿದ.

ಮುಂದಿನ ವ್ಯಾಸಂಗಕ್ಕಾಗಿ ಇಂಜಿನಿಯರಿಂಗ್ ಶಾಲೆ ಸೇರಿದ ಚನ್ನಬಸಪ್ಪನಿಗೆ ವಿದ್ಯಾರ್ಥಿವೇತನವೂ ದೊರೆತು ನಿರಾತಂಕವಾಗಿ ವ್ಯಾಸಂಗವನ್ನೂ ಮುಂದುವರಿಸಿ ಉತ್ತಮ ದರ್ಜೆಯಲ್ಲಿ ತೇರ್ಗಡೆ ಹೊಂದಿದರು. ನಿರಂತರವಾದ ಪ್ರಯತ್ನ ಸತತಾಭ್ಯಾಸಗಳಿಂದ ಅವರು ಹಲವಾರು ವಿಷಯಗಳಲ್ಲಿ ಪ್ರಾವೀಣ್ಯವನ್ನು ಪಡೆದರು. ತಾವು ವ್ಯಾಸಂಗ ಮಾಡಿದ ಕಾಲೇಜಿನಲ್ಲಿಯೇ ಅಧ್ಯಾಪಕರಾಗುವ ಸದವಕಾಶವೂ ಪ್ರಾಪ್ತವಾಯಿತು. ಈ ಅವಧಿಯಲ್ಲಿ ಅವರು ವಿದೇಶಕ್ಕೆ ಹೋಗಿ ಹೆಚ್ಚಿನ ತರಬೇತು ಪಡೆದು ಬರುವ ಒಂದು ಸನ್ನಿವೇಶವೂ ಒದಗಿತು. ಇಂಗ್ಲೆಂಡಿನ "ಕುಂಪರ್ಸ್‌ಹಿಲ್" ಎಂಬ ಇಂಜಿನಿಯರಿಂಗ್ ಕಾಲೇಜಿಗೆ ಭಾರತದಿಂದ ಕಳಿಸಬೇಕಾಗಿದ್ದ ಐವರು ಪ್ರತಿಭಾವಂತ ವಿದ್ಯಾರ್ಥಿಗಳಲ್ಲಿ ಚನ್ನಬಸಪ್ಪನವರೂ ಒಬ್ಬರಾಗಿದ್ದರು ಎಂಬುದು ಕನ್ನಡಿಗರೆಲ್ಲರೂ ಹೆಮ್ಮೆಪಡುವ ವಿಷಯವಾಗಿದೆ. ಆದರೆ ದುರ್ದೈವದಿಂದ ಈ ಯೋಜನೆ ಕಾರ್ಯಗತವಾಗಲಿಲ್ಲ.

ಚನ್ನಬಸಪ್ಪನವರು ೧೮೫೫ರಲ್ಲಿ ಧಾರವಾಡಕ್ಕೆ ಹಿಂತಿರುಗಿದರು. ಮೊದಲು ಅಂಚೆ ಇಲಾಖೆಯಲ್ಲಿ ಕೆಲಸಕ್ಕೆ ಸೇರಿಕೊಂಡರು. ಸ್ವಲ್ಪಕಾಲದ ಮೇಲೆ ಅದನ್ನು ಬಿಟ್ಟು ತಮಗೆ ಪ್ರಿಯವಾದ ವಿದ್ಯಾಇಲಾಖೆಯನ್ನು ಸೇರಿದರು. ಕನ್ನಡ ಶಾಲಾ ಶಿಕ್ಷಕರನ್ನು ತರಬೇತು ಮಾಡುವುದಕ್ಕಾಗಿ ೧೮೫೭ರಲ್ಲಿ ಧಾರವಾಡದಲ್ಲಿ ಆರಂಭವಾದ "ನಾರ್ಮಲ್ ಕ್ಲಾಸ್" ಸಂಸ್ಥೆಯ ಮುಖ್ಯಸ್ಥರಾದರು. ೧೮೬೧ರಲ್ಲಿ ಈ ಸಂಸ್ಥೆ ಬೆಳಗಾವಿಗೆ ಸ್ಥಳಾಂತರಗೊಂಡಿತು. ೧೮೬೪ರಲ್ಲಿ ಚನ್ನಬಸಪ್ಪನವರು ಈ ತರಬೇತು ಸಂಸ್ಥೆಯ ಪ್ರಿನ್ಸಿಪಾಲರಾದರು. ೧೮೬೬ರಲ್ಲಿ ಈ "ನಾರ್ಮಲ್ ಕ್ಲಾಸ್" ಟ್ರೈನಿಂಗ್ ಕಾಲೇಜಾಗಿ ಚನ್ನಬಸಪ್ಪನವರೇ ಆ ಕಾಲೇಜಿನ ಪ್ರಪ್ರಥಮ ಪ್ರಿನ್ಸಿಪಾಲರಾದುದು ಹೆಮ್ಮೆಯ ಸಂಗತಿ. ಆದರೆ ಮುಂದಿನ ವರುಷವೇ ಅಂದರೆ ೧೮೬೭ರಲ್ಲಿ ಅವರು ಬೆಳಗಾವಿಯ ಡೆಪ್ಯುಟಿ ಎಜುಕೇಷನಲ್ ಇನ್ಸ್‌ಪೆಕ್ಟರೆಂದು ನೇಮಕಗೊಂಡರು. ೧೮೯೯ರಲ್ಲಿ

ಧಾರವಾಡಕ್ಕೆ ವರ್ಗಾಯಿಸಲ್ಪಟ್ಟರು. ತಮ್ಮ ಕೊನೆಯ ಕಾಲದವರೆಗೂ ಧಾರವಾಡದಲ್ಲಿಯೇ ಸೇವೆಯನ್ನು ಸಲ್ಲಿಸಿ ೪.೧.೧೮೮೧ರಲ್ಲಿ ಕೈಲಾಸವಾಸಿಗಳಾದರು. ಆಗ ಅವರಿಗೆ ಕೇವಲ ೪೭ ವರ್ಷಗಳು ಮಾತ್ರ ಆಗಿದ್ದವು.

ಡೆಪ್ಯುಟಿ ಚನ್ನಬಸಪ್ಪನವರು ನಡೆದು ಬಂದ ದಾರಿಯನ್ನು ಪರಿಶೀಲಿಸಿದವರಿಗೆ ಅವರ ವ್ಯಕ್ತಿತ್ವ ವಿಶಿಷ್ಟವಾದುದು. ಅನನ್ಯವಾದುದು, ಆದರ್ಶಪ್ರಾಯವಾದುದು ಎಂಬ ಅರಿವು ಸಹಜವಾಗಿಯೇ ಮೂಡುತ್ತದೆ. ಅವರ ವ್ಯಕ್ತಿತ್ವಕ್ಕೆ ಮೆರುಗು ಕೊಡುವಂತಹ ಪ್ರಕರಣಗಳನ್ನು ಈಗ ಪರಿಶೀಲಿಸೋಣ.

ಹತ್ತೊಂಬತ್ತನೆಯ ಶತಮಾನದಲ್ಲಿ ಉತ್ತರ ಕರ್ನಾಟಕದಲ್ಲಿ ಕನ್ನಡವನ್ನು ಸುಸ್ಥಿರಗೊಳಿಸಿ ಅದಕ್ಕೆ ಒಂದು ನೆಲೆ ಬೆಲೆಯನ್ನು ತಂದುಕೊಟ್ಟ ಶ್ರೇಯಸ್ಸು ಚನ್ನಬಸಪ್ಪವರಿಗೆ ಸಲ್ಲುತ್ತದೆ. ತಮ್ಮ ಇಡೀ ಜೀವಮಾನವನ್ನೆಲ್ಲ ಶಿಕ್ಷಣಕ್ಷೇತ್ರಕ್ಕೆ ಮೀಸಲಾಗಿಟ್ಟು ನಿಸ್ವಾರ್ಥದಿಂದ ದುಡಿದ ಮಹಾನುಭಾವರು. ಅಸಂಖ್ಯಾತ ಕನ್ನಡ ಶಿಕ್ಷಣ ಶಾಲೆಗಳನ್ನು ಪ್ರಾರಂಭಿಸಿ ಕನ್ನಡದಲ್ಲೇ ಬೋಧನೆಯನ್ನು ಮಾಡುವಂತೆ ಆದೇಶಗಳನ್ನು ಹೊರಡಿಸಿದ ದಿಟ್ಟ ಅಧಿಕಾರಿ ಚನ್ನಬಸಪ್ಪನವರು. ಬಡವಿದ್ಯಾರ್ಥಿಗಳಿಗಾಗಿ ಉಚಿತ ವಿದ್ಯಾರ್ಥಿನಿಲಯವನ್ನು ಪ್ರಪ್ರಥಮವಾಗಿ ಧಾರವಾಡದಲ್ಲಿ ಸ್ಥಾಪಿಸಲು ಕಾರಣೀಭೂತ ರಾದವರು. ಇದರ ನಿರ್ವಹಣೆಗಾಗಿ ತಮ್ಮ ಧನ, ಮನ ಮನೆಗಳನ್ನು ವಿನಿಯೋಗಿಸಿದವರು ಚನ್ನಬಸಪ್ಪನವರು.

ಚನ್ನಬಸಪ್ಪನವರ ವ್ಯಕ್ತಿತ್ವ ಆಕರ್ಷಕವಾದದ್ದು. ನಿಸ್ವಾರ್ಥ ಮನೋಭಾವದಿಂದ ಕೂಡಿದ ಅವರ ಗುಣಶೀಲಗಳಿಗೆ ಮಾರುಹೋದವರು ಅನೇಕ ಮಂದಿ. ಅವರ ಕನ್ನಡದ ಉದ್ಧಾರ ಕಾರ್ಯಕ್ಕೆ ಟೊಂಕಕಟ್ಟಿ ನಿಂತವರು ಹಲವಾರು ಮಂದಿ. ಇವರಲ್ಲಿ ಎಲ್ಲ ಜಾತಿ ಮತ ವರ್ಗದವರನ್ನು ಕಾಣಬಹುದಾಗಿದೆ. ಗಂಗಾಧರ ಮಡಿವಾಳೇಶ್ವರ ತೂರಮರಿ, ವೀರಭದ್ರ ಮಡಿವಾಳೇಶ್ವರ ಪಂಡಿತ, ವೆಂಕಟರಂಗೋಕಟ್ಟಿ, ಶಾಂತವೀರ ರಾಚಿದೇವ ಕಿತ್ತೂರ, ಶೇಷೋ ರಾಮಚಂದ್ರ ತೂರಮರಿ, ಭುಜಂಗರಾವ ಹುಯಿಲಗೋಳ ಇವರೇ ಮೊದಲಾದವರು ಪ್ರಮುಖರು. ಇವರೆಲ್ಲ ಶಿಕ್ಷಣ ಕ್ಷೇತ್ರಕ್ಕೆ ಅಪಾರಸೇವೆಯನ್ನು ಸಲ್ಲಿಸಿದವರು. ಕೆಲವರು ಸಾಹಿತ್ಯಕ್ಷೇತ್ರದಲ್ಲೂ ಹೆಸರು ಮಾಡಿದವರು. ಚನ್ನಬಸಪ್ಪನವರು ಇವರಿಂದ ಕನ್ನಡದಲ್ಲಿ ಶಾಲಾ ಪಠ್ಯಪುಸ್ತಕಗಳನ್ನು ಬರೆಸಿದ್ದಲ್ಲದೆ ತಾವೂ ಸಹ ಗಣಿತದ ಪಠ್ಯಪುಸ್ತಕಗಳನ್ನೂ ಬರೆದಿದ್ದಾರೆ. ಈ ಮೇಲೆ ಉಲ್ಲೇಖಿಸಿದವರೆಲ್ಲಾ ಚನ್ನಬಸಪ್ಪನವರ ಕನ್ನಡಾಭಿಮಾನವನ್ನೂ ನಿಸ್ವಾರ್ಥಸೇವೆಯನ್ನೂ, ಕರ್ತವ್ಯನಿಷ್ಠೆಯನ್ನೂ ಮುಕ್ತಕಂಠದಿಂದ ಸ್ಮರಿಸಿದ್ದಾರೆ. ಇವರಲ್ಲಿ ಕೆಲವರು ಚನ್ನಬಸಪ್ಪನವರ ಶಿಷ್ಯರಾಗಿಯೂ ಇದ್ದರು. ಅಂತಹವರಲ್ಲಿ ಒಬ್ಬರಾದ ತೂರಮರಿ ಶೇಷಗಿರಿರಾಯರು ತಮ್ಮ ಗುರುಗಳನ್ನು ಈ ರೀತಿ ಕೊಂಡಾಡಿದ್ದಾರೆ.

ಕಡುಗುರುಭಕ್ತಿಯಿಂ ತುರುಮರೀತ್ಯುಪನಾಮಕ ರಾಮಚಂದ್ರಜಂ
ಜಡಮತಿ ಕಟ್ಟಿ ಶೇಷಗಿರಿಯೆಂಬುವನೀ ಕೃತಿಗೈದು ಮಾಡಿದಂ
ಬಡವರ ವಿದ್ಯೆಕಾಗಿ ತನುವಿಂ ಮನದಿಂ ಧನದಿಂದೆ ಸಾಹಸಂ
ಬಡುತಿರುವ ಧೀರ ಚನ್ನಬಸವೇಶ್ವರ ದಿವ್ಯರ ಪಾದಭೂಷಣಂ ॥

ಚನ್ನಬಸಪ್ಪನವರು ಶಿಕ್ಷಣತಜ್ಞರಷ್ಟೇ ಅಲ್ಲದೆ ಸ್ವತಃ ಸಾಹಿತಿಗಳೂ ಆಗಿದ್ದರು. ಷೇಕ್ಸಪಿಯರನ ಎರಡು ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿರುವುದು ಸರ್ವವಿದಿತವಾಗಿದೆ. ಹಾಗೆಯೇ ಸಾಹಿತಿಗಳಿಗೆ ಪ್ರೋತ್ಸಾಹ ಕೊಟ್ಟದ್ದು ಜನಜನಿತವಾಗಿದೆ. ರೆವರೆಂಡ್ ಕಿಟ್ಟೆಲ್ ಅವರ ಇಂಗ್ಲಿಷ್ ಕನ್ನಡ ನಿಘಂಟು ರಚನೆಯಲ್ಲಿ ಚನ್ನಬಸಪ್ಪನವರ ಪಾತ್ರ ಬಹುಮುಖ್ಯವಾಗಿತ್ತು. ಅಂತೆಯೇ ಗಂಗಾಧರ ಮಡಿವಾಳೇಶ್ವರ ತುರಮುರಿ ಅವರ "ಕರ್ನಾಟಕ ಶಬ್ದಮಂಜರಿ" ನಿಘಂಟಿನ ರಚನೆಗೆ ಕಾರಣೀಭೂತರಾದವರು. ಇದರ ಪ್ರಕಟಣೆಗೆ ಸರ್ಕಾರದಿಂದ ನಾಲ್ಕುಸಾವಿರ ರೂಪಾಯಿಗಳ ಕೊಡಿಸಿದ ಶ್ರೇಯಸ್ಸು ಇವರಿಗೆ ಸಲ್ಲತಕ್ಕದ್ದಾಗಿದೆ.

ಚನ್ನಬಸಪ್ಪನವರು ತಮ್ಮ ಕರ್ತವ್ಯನಿಷ್ಠೆ ಪ್ರಾಮಾಣಿಕತೆಗಳಿಂದ ತಮ್ಮ ಮೇಲಿನ ಅಧಿಕಾರಿಗಳ ಮೆಚ್ಚುಗೆಗೂ ಪಾತ್ರರಾಗಿದ್ದರು. ರಸೆಲ್ ಎಂಬ ವಿದ್ಯಾಧಿಕಾರಿ ಚನ್ನಬಸಪ್ಪನವರ ಭಾಷಾಪ್ರೇಮ ಕಾರ್ಯಚಟುವಟಿಕೆಗಳನ್ನು ಬಹಳವಾಗಿ ಮೆಚ್ಚಿಕೊಂಡಿದ್ದಾನೆ. ಅವರಿಗೆ ಬೇಕಾದ ಎಲ್ಲ ನೆರವನ್ನೂ ನೀಡಿದ್ದಾನೆ. ಚನ್ನಬಸಪ್ಪನವರು ತೀರಿಕೊಂಡಾಗ ಅಂದಿನ ವಿದ್ಯಾಇಲಾಖೆಯ ಮುಖ್ಯಸ್ಥರು.

"Mr Channabasappa, in whom this department has lost much more than an honest, experienced, able and fealous Inspector died on 4th Jan 1881" ಎಂದು ತಮ್ಮ ಸಂತಾಪವನ್ನು ವ್ಯಕ್ತಪಡಿಸಿದ್ದಾರೆ.

ಚನ್ನಬಸಪ್ಪನವರ ವ್ಯಕ್ತಿತ್ವಕ್ಕೆ, ಭಾಷಾಪ್ರೇಮಕ್ಕೆ ಈ ಮುಂದಿನ ದೃಷ್ಟಾಂತಗಳು ನಿದರ್ಶನವಾಗಿವೆ. ಬೆಳಗಾವಿಯ ಟ್ರೈನಿಂಗ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಶ್ರೀ ಭುಜಂಗರಾವ ಹುಯಿಲಗೋಳರಿಗೆ ಬರೆದ ಸರಕಾರಿ ಪತ್ರ ಇದು.

**ಪ್ರಿಯ ಭುಜಂಗರಾವ್,**

"ಮರಾಠಿಯಲ್ಲಿ ಸಹಿಮಾಡುವುದು ಅವಶ್ಯವಿಲ್ಲವೆಂದು ನಿಮ್ಮ ವಿದ್ಯಾರ್ಥಿಗಳಿಗೆ ತಿಳಿಸಿ ಹೇಳಬೇಕು. ಅವರ ಅಂಕಿತವು ಕನ್ನಡದಲ್ಲಿಯೇ ಇರುವುದು ಅವಶ್ಯವಿದೆ." ೨೨.೮.೧೯೬೮

ನಿಮ್ಮ ಶಾಲೆಯಲ್ಲಿ ಮರಾಠಿಯನ್ನು ಕಲಿಸುವುದು ಅವಶ್ಯವಿಲ್ಲ. ಶಿಕ್ಷಕರ ಯಶಸ್ಸು ಕೇವಲ ಅವರು ಕನ್ನಡವನ್ನು ಹೇಗೆ ಕಲಿಸುವರೆಂಬುದರ ಮೇಲೆಯೇ ಅವಲಂಬಿಸಿರುತ್ತದೆ. ಇದನ್ನು ನಿಮ್ಮ ಎಲ್ಲಾ ವಿದ್ಯಾರ್ಥಿಗಳ ಗಮನಕ್ಕೆ ಸ್ಪಷ್ಟವಾಗಿ ತಂದುಕೊಡಬೇಕು."

ನಿರ್ದಾಕ್ಷಿಣ್ಯ, ನಿಷ್ಪಕ್ಷಪಾತ ಗುಣಗಳು ಚನ್ನಬಸಪ್ಪನವರ ವ್ಯಕ್ತಿತ್ವಕ್ಕೆ ಮೆರುಗುಕೊಟ್ಟಿವೆ. ಶಿಕ್ಷಕರಿಗೆ ಅವರು ಕಳಿಸುತ್ತಿದ್ದ ಆದೇಶಗಳು ಪರಿಪತ್ರಗಳು ಎಚ್ಚರಿಕೆಗಳು ಇದಕ್ಕೆ ನಿದರ್ಶನವಾಗಿವೆ. ಅವರ ಕಾರ್ಯದಕ್ಷತೆಗೆ ಹಿಡಿದ ಕೈಗನ್ನಡಿಗಳಾಗಿವೆ.

ಚನ್ನಬಸಪ್ಪನವರ ನಿಷ್ಠುರತೆಗೆ ಒಂದು ಸಂದರ್ಭವನ್ನು ನೋಡಬಹುದು. ಒಂದು ಶಾಲೆಯ ತಪಾಸಣೆಗೆ ಇವರು ಹೋಗಿದ್ದಾಗ ಇವರ ಮೇಲೆ ಒಂದು ಕವಿತೆಯನ್ನು ರಚಿಸಿದ್ದನ್ನು ಉಪಾಧ್ಯಾಯರು ಹಾಡಿದರು. ಅದನ್ನು ಕೇಳಿದ ಚನ್ನಬಸಪ್ಪನವರು "ನನ್ನ ಮೂಗು ಸಂಪಿಗೆಯ ಹೂವಿನಂತಿದೆ ಎಂದು ನೀವು ಬರೆದಿದ್ದೀರಿ. ಆದರೆ ಅದು ತೊಂಡೆಕಾಯಿಗಿಂತ ದಪ್ಪವಾಗಿದೆ. ಇಂಥ ಸುಳ್ಳು ಸಂಗತಿಗಳನ್ನು ಬರೆದು ಭಾಷೆಯನ್ನು, ನಿಮ್ಮ ಕವಿತಾಸಾಮರ್ಥ್ಯವನ್ನೂ ಅವಮಾನ ಮಾಡಬೇಡಿರಿ. ಅದಕ್ಕಿಂತಲೂ ಮನೆಗೆ ಹೋಗಿ ಒಂದು ಪಾವು ಜೋಳ ಬೀಸಲು ಸಹಾಯಮಾಡಿರಿ. ಅವರ ಶ್ರಮವಾದರೂ ಕಡಿಮೆಯಾಗುತ್ತದೆ" ಎಂದು ಹೇಳಿಬಿಟ್ಟರಂತೆ.

ಚನ್ನಬಸಪ್ಪನವರು ಎಷ್ಟು ಕನ್ನಡ ಪ್ರೇಮಿ, ವಿದ್ಯಾಪ್ರೇಮಿ ಆಗಿದ್ದರೋ ಅಷ್ಟೇ ಸಮಾಜ ಪ್ರೇಮಿಯೂ ಹಿತಚಿಂತಕರೂ ಆಗಿದ್ದರು. ಉಳವಿಯಲ್ಲಿ ನಡೆದ ಒಂದು ಸಮಾರಂಭದಲ್ಲಿ "ಇಷ್ಟು ಜನ ಸೇರಿ ಭೋಜನಸಮಾರಂಭದಲ್ಲಿ ತೊಡಗುವುದರಿಂದ ಉಳವಿಕ್ಷೇತ್ರವನ್ನು ಹೊಲಸುಮಾಡುವುದಲ್ಲದೆ ಬೇರೆ ಏನನ್ನು ಸಾಧಿಸಿದಂತಾಯಿತು? ಅಗತ್ಯವಿಲ್ಲದವರಿಗೆ ಊಟಮಾಡಿಸುವುದು ಹಣದ ಅಪವ್ಯಯ. ಹಾಗೆ ವೆಚ್ಚವಾಗುವ ಹಣವನ್ನು ವೀರಶೈವ ಬಡ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕಾಗಿ ವೆಚ್ಚಮಾಡಬೇಕು. ವಿದ್ಯಾರ್ಥಿನಿಲಯ ಸ್ಥಾಪಿಸಬೇಕು" ಎಂದು ನಿಷ್ಠುರವಾಗಿ ನುಡಿದದ್ದರಿಂದಲೇ ಧಾರವಾಡದಲ್ಲಿ ವಿದ್ಯಾರ್ಥಿನಿಲಯ ಸ್ಥಾಪಿತವಾಯಿತು.

ಕೊನೆಯದಾಗಿ ವಿದ್ವಾಂಸರ ಕೆಲವು ನುಡಿಮುತ್ತುಗಳಿಂದ ಈ ಪ್ರಬಂಧವನ್ನು ಮುಗಿಸುತ್ತೇನೆ. "ಅವರ ಸಾಹಸಗುಣ, ಸತ್‌ಶೀಲ, ವಿದ್ಯಾಪ್ರೇಮ, ನಿಸ್ಪೃಹಸ್ವಭಾವ, ದಯಾಳುಗುಣ, ಇವುಗಳಿಂದಾಗಿ ಚನ್ನಬಸಪ್ಪನವರು ಆ ಕಾಲದ ವರ್ಚಸ್ವೀ ಹಾಗೂ ಜನಪ್ರಿಯ ನಾಯಕರಾಗಿದ್ದರು. ಅವರು ಒಳ್ಳೆಯ ವ್ಯಾಸಂಗಿಗಳೂ ಆಗಿದ್ದರು. ತತ್ವಜ್ಞಾನ, ಶಾಸ್ತ್ರೀಯ ವಿಷಯ ಇವುಗಳ ಕಡೆಗೆ ಹೆಚ್ಚುಗಮನ ಕೊಡುತ್ತಿದ್ದರು. ಅವರ ವ್ಯಕ್ತಿತ್ವ ಮೋಹಕ, ಧ್ವನಿ ಗಂಭೀರ. ಅವರು ಆ ಕಾಲದ ಶ್ರೇಷ್ಠವಾಗ್ಮಿಗಳೂ ಆಗಿದ್ದರು.

"ಪ್ರಭಾವಶಾಲಿ ವ್ಯಕ್ತಿಗಳ ಹೆಸರಿನಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ ವಿಭಾಗಗಳನ್ನು ನಾವು ಇಟ್ಟುಕೊಳ್ಳುವುದಾದರೆ ೧೮೫೬ ರಿಂದ ಮುಂದಿನ ಅರವತ್ತುನಾಲ್ಕು ವರುಷಗಳ ಅವಧಿಯನ್ನು ಡೆಪ್ಯೂಟಿ ಚನ್ನಬಸಪ್ಪನವರ ಯುಗವೆಂದು ಕರೆಯಬೇಕಾಗುತ್ತದೆ." (ಸ.ಸ. ಮಾಳವಾಡ: ಸಾಹಿತ್ಯ ಸಂಗಮ, ಪು. ೨೩೫-೨೩೭.)

"ಡೆಪ್ಟಿಯಾಗಿ ಚನ್ನಬಸಪ್ಪನು ಪ್ರಾಥಮಿಕ ಶಾಲೆಗಳು, ಶಿಕ್ಷಕರು, ಟ್ರೇನಿಂಗ್ ಕಾಲೇಜ್, ಪಠ್ಯಪುಸ್ತಕ ರಚನೆ, ಮುದ್ರಣ ಮುಂತಾದರಲ್ಲಿ ಕನ್ನಡದ ಅಸ್ತಿಭಾರವನ್ನು ಭದ್ರಪಡಿಸಿದ ಮಹಾನುಭಾವನು. ಮುಖ್ಯತಃ ಕನ್ನಡವೆಂದರೆ ಸಂಪೂರ್ಣ ಅಸಡ್ಡೆಯಿರುವ ಕಾಲದಲ್ಲಿ ತನ್ನ ಸಂಪರ್ಕಕ್ಕೆ ಬಂದವರೆಲ್ಲರಿಗೂ ಕನ್ನಡ ದೀಕ್ಷೆಯನ್ನು ಕೊಟ್ಟಿದ್ದುದು ಅವನ ಹೆಚ್ಚುಗಾರಿಕೆಯಾಗಿದೆ. ಅವನು ಹೋದ ಹೋದಲ್ಲಿ ಕನ್ನಡ ಭಾಷೆಯ ಮತ್ತು ಕರ್ನಾಟಕದ ವಿಷಯವಾಗಿ ಜನರಿಗೆ ತಿಳಿಸಿಹೇಳುವ ಯಾವ ಸಂಧಿಯನ್ನು ಕಳೆದುಕೊಳ್ಳುತ್ತಿದ್ದಿಲ್ಲ." (**ಶ್ರೀನಿವಾಸ ಹಾವನೂರ**[೨]: ಹೊಸಗನ್ನಡ ಅರುಣೋದಯ ಪು. ೨೦೦.)

"ಉತ್ತರ ಕರ್ನಾಟಕದಲ್ಲಿ ಶಿಕ್ಷಣಕ್ಷೇತ್ರದಲ್ಲಿ ಕನ್ನಡಕ್ಕೆ ಗೌರವದ ಸ್ಥಾನವನ್ನು ತಂದುಕೊಟ್ಟವರು ಡೆಪ್ಯುಟಿ ಚನ್ನಬಸಪ್ಪನವರು. ಒಂದು ಪ್ರಮುಖ ಅಧಿಕಾರಸ್ಥಾನದಲ್ಲಿದ್ದರೂ ಕನ್ನಡದ ನಿಸ್ಸೀಮ ಆರಾಧಕರಾಗಿದ್ದರು. ಇವರು ಅಧಿಕಾರಕ್ಕೆ ಬರುವ ಮುನ್ನ ಧಾರವಾಡ, ಬೆಳಗಾವಿ ಹಾಗೂ ಬಿಜಾಪುರ ಜಿಲ್ಲೆಗಳಲ್ಲಿ ಇದ್ದು ಒಟ್ಟು ೩೪ ಕನ್ನಡ ಶಾಲೆಗಳ ಸಂಖ್ಯೆಯು, ಇವರು ಹತ್ತು ವರ್ಷದ ಆಳ್ವಿಕೆಯಲ್ಲಿ ೬೬೮ನ್ನು ಮುಟ್ಟಿತು."

"ಚದುರಂಗದಾಟದಲ್ಲಿ ಪ್ರವೀಣರು, ಪ್ರಭಾವೀ ಭಾಷಣಕಾರರು, ಸಾರ್ವಜನಿಕ ಸೇವಾಭಿಲಾಷೆಯುಳ್ಳ ಇವರು ಪ್ರಮುಖ ಸಮಾಜಸುಧಾರಕರೂ ಆಗಿದ್ದರು." (**ವೆಂಕಟೇಶ ಸಾಂಗಲಿ**[೩]: ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ, ಪು. ೪೫.)

"ಲಿಂ. ಡೆಪ್ಯೂಟಿ ಚನ್ನಬಸಪ್ಪನವರು ವೀರಶೈವ ಪುಣ್ಯಪುರುಷರೂ ಹೌದು; ಕನ್ನಡದ ಪುಣ್ಯಪುರುಷರೂ ಹೌದು. ಅನ್ಯಭಾಷೆಗಳ ಆಕ್ರಮಣದಿಂದ ನಾಮಶೇಷವಾಗುತ್ತಲಿದ್ದ ಕನ್ನಡಭಾಷೆಯನ್ನು ಅವರು ಮತ್ತೆ ನಾಡಿನುದ್ದಕ್ಕೂ ಬಿತ್ತಿದರು. ಬೆಳೆದರು. ಅಷ್ಟೇ ಅಲ್ಲ, ಬಿತ್ತಲು ತಿಳಿಸಿದರು. ಬೆಳೆಯಲು ಕಲಿಸಿದರು. ಇದರ ಉದಯದಿಂದ ಕನ್ನಡದ ಸೂರ್ಯನಿಗೆ ಕಣ್ಣು ಮೂಡಿದಂತಾಯಿತು. 'ಲಲಿತವಹ ಕನ್ನಡದ ನುಡಿಯಲಿ ತಿಳಿದು ತನ್ನೊಳು ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೆ' ಎಂಬ ಮಾತು ಕೃತಿಗಿಳಿಯಿತು." (**ಪ್ರಕಾಶಕರು**[೪], ವೀರಶೈವ ಅಧ್ಯಯನ ಸಂಸ್ಥೆ, ಗದಗ, ಪು. ೪೫.)

"ಇಂಥ ಕತ್ತಲೆಯ ಕಾಲದಲ್ಲಿ ಕನ್ನಡದ ನಂದಾದೀವಿಗೆಯನ್ನು ಮತ್ತೆ ಹಚ್ಚಿ, ಅದನ್ನು ಪ್ರಜ್ವಲಿಸುವಂತೆ ಮಾಡಿದ ಕನ್ನಡದ ಆದಿಪುರುಷ, ಕನ್ನಡದ ಹುಲಿ, ಶ್ರೇಷ್ಠಅಧ್ಯಾಪಕ, ಆದರ್ಶ ವಿದ್ಯಾಧಿಕಾರಿ, ಗಣಿತಶಾಸ್ತ್ರಜ್ಞ, ಭಾಷಾವಿಶಾರದ, ಶಿಕ್ಷಣತಜ್ಞ, ಸಮಾಜ ಸೇವಕ ಎಂದು ಹೆಸರು ಗಳಿಸಿದ ಶರಣ ಡೆಪ್ಯೂಟಿ ಚನ್ನಬಸವಪ್ಪನವರು ಕನ್ನಡದ ಅನರ್ಘ್ಯರತ್ನ, ಕಾರ್ಯದಲ್ಲಿ ಆದರ್ಶದಲ್ಲಿ ಘನತೆಯಲ್ಲಿ ಅಷ್ಟೇಕೆ ಕಾಲದಲ್ಲೂ ಅವರು ಮೊಟ್ಟಮೊದಲಿಗರು, ಕೆಚ್ಚೆದೆಯ ಕನ್ನಡಿಗರು. ಕನ್ನಡ ನಾಡು ನುಡಿ ಸಂಸ್ಕೃತಿ, ಸಮಾಜ ಇವುಗಳ ಪುನರುದ್ಧಾರದ ಮೂಲಪುರುಷರು. ಅಂದು ಅವರು ಹಚ್ಚಿದ ಕನ್ನಡ ನಂದಾದೀಪ ಎಂದೆಂದಿಗೂ ನಂದದ ದೀಪ. ಅವರನ್ನು ಸ್ಮರಿಸೋಣ, ಸ್ಮಾರಕ ಮಾಡೋಣ." (**ಮ.ಗು. ಹಂದ್ರಾಳ**[೫]: ಡೆಪ್ಯುಟಿ ಚನ್ನಬಸಪ್ಪನವರು, ಪು. ೬೭.)

"ಅವರು ಆದರ್ಶ ಶಿಕ್ಷಕರೂ ಹೌದು. ಪ್ರತಿಭಾವಂತ ಗಣಿತಜ್ಞರೂ ಅಹುದು, ಸಾರ್ವಜನಿಕ ಕಾರ್ಯಕರ್ತರೂ ಹೌದು. ಉತ್ತರ ಕರ್ನಾಟಕದ ಆಧುನಿಕ ಪ್ರಥಮ ಶಿಕ್ಷಣತಜ್ಞರೂ ಅಹುದು. ನಾಮಾಂಕಿತ ವಾಗ್ಮಿಗಳೂ ಅಹುದು, ಗಂಡುಮಕ್ಕಳ ಸರಕಾರಿ ಟ್ರೇನಿಂಗ್ ಕಾಲೇಜಿನ ಪ್ರಪ್ರಥಮ ಪ್ರಿನ್ಸಿಪಾಲರೂ ಅಹುದು. ಇಂತಪ್ಪ ಶ್ರೀ ಚನ್ನಬಸಪ್ಪನವರ ಆತ್ಮಕ್ಕೆ ದೇವರು ಚಿರಶಾಂತಿಯನ್ನೀಯಲಿ." (**ಶಿಂತ್ರಿ ಬಸಪ್ಪ**[೬]: ಕನ್ನಡ ಪ್ರಾಥಮಿಕ ಶಿಕ್ಷಕ, ಧಾರವಾಡ, ಶರಣ ಸಾಹಿತ್ಯ, ೧೭-೧೨, ಪು. ೬೫೯.)

"ಶ್ರೀ ಚನ್ನಬಸಪ್ಪನವರ ಬಗ್ಗೆ ಕೆಲವು ದಂತಕತೆಗಳು ಧಾರವಾಡ, ಬೆಳಗಾಂ, ಬಿಜಾಪುರ ಜಿಲ್ಲೆಗಳಲ್ಲಿ ರೂಢಿಯಲ್ಲಿವೆ. ಇವರು ಒಮ್ಮೆ ಕೋರ್ಟಿನಲ್ಲಿ ಸಾಕ್ಷಿ ಹೇಳುವ ಸಮಯ ಬಂದಾಗ ದೇವರಾಣೆ ಎಂದು ಹೇಳದೆ, ಸತ್ಯವಾಗಿ ಎಂದು ಮಾತ್ರ ಹೇಳಿದರಂತೆ. ಇವರು ಒಮ್ಮೆ ಶಾಲೆಗಳ ಪರೀಕ್ಷೆಗೆ ಹೋದ ಕಾಲದಲ್ಲಿ ಇವರ ಮೇಲೆ ಕವಿತೆಯನ್ನು ಕಟ್ಟಿ ಹಾಡಿದ ಮಾಸ್ತರನೊಬ್ಬನನ್ನು ಮುಖಸ್ತುತಿಯು ಪಾಪಕರವೆಂದು ಬೋಧಿಸಿದರಂತೆ. ಇನ್ನೊಮ್ಮೆ ಒಬ್ಬ ಶಾಲೆಯ ಮುಖ್ಯೋಪಾಧ್ಯಾಯನು ಇವರ ತಪ್ಪನ್ನು ವಿನಯವಾಗಿ ತೋರಿಸಿಕೊಡಲು ಅದನ್ನು ಕೃತಜ್ಞತೆಯಿಂದ ಒಪ್ಪಿಕೊಂಡರಂತೆ.

ಉತ್ತರಾದಿ ಮಠದ ಸ್ವಾಮಿಗಳು ಧಾರವಾಡಕ್ಕೆ ಬಂದಾಗ ಇವರು ಅವರ ಸನ್ನಿಧಿಯ ಪಂಡಿತರಲ್ಲಿ ವಾದಮಾಡಿ ಆಸ್ತಿಕ್ಯ ನಾಸ್ತಿಕ್ಯಗಳ ಬಗ್ಗೆ ತೀಕ್ಷ್ಣವಾದ ಚರ್ಚೆಯನ್ನು ನಡೆಸಿದರಂತೆ. ಬೆಳಗಾವಿಯಲ್ಲಿ ಇವರು ಪ್ರಾರಂಭಿಸಿದ ಬೋರ್ಡಿಂಗ್ ಸಾಲವನ್ನು ತೀರಿಸುವ ಸಲುವಾಗಿ ತಮ್ಮ ಮನೆಯನ್ನು ಮಾರಿ ಸಾಲಕೊಟ್ಟುಬಿಟ್ಟರಂತೆ. ಧಾರವಾಡದಲ್ಲಿ ಇವರ ಕೈಕೆಳಗಣ ಪುಸ್ತಕಾಲಯದ ಗುಮಾಸ್ತನೊಬ್ಬನು ಹಣವನ್ನು ತುಡುಗುಮಾಡಿ ಓಡಿಹೋದಾಗ ಸರ್ಕಾರದ ಆ ಸಂಸ್ಥೆಗೆ ನಷ್ಟವಾದ ಬಗ್ಗೆ ವ್ಯಸನಪಟ್ಟು ಆ ನಷ್ಟವನ್ನು ತನ್ನ ಸಂಬಳದಿಂದ ಭರ್ತಿಮಾಡಿಕೊಳ್ಳಬೇಕೆಂದು ಸರ್ಕಾರಕ್ಕೆ ಪತ್ರ ಬರೆದರಂತೆ. ಇವರು ಹಲವು ವೀರಶೈವ ಸ್ವಾಮಿಗಳ ಮೆರವಣಿಗೆ ಮೊದಲಾದವುಗಳಿಗೆ ಭಕ್ತರ ಹಣ ಪೋಲಾಗುತ್ತಿದ್ದುದನ್ನು ಕಂಡು ಮರುಗಿ ಅಂತಹ ಸ್ವಾಮಿಗಳಿಗೆ ಈ ಹಣವನ್ನು ಬಡವರ ಸೇವೆಗೆ ವಿನಿಯೋಗಿಸುವಂತೆ ವಿಜ್ಞಾಪಿಸುತ್ತಿದ್ದರಂತೆ. ಹುಬ್ಬಳ್ಳಿ ತಾಲ್ಲೂಕು ಉಣಕಲು ಗ್ರಾಮದ ಹಿಂದುಗಳು ನೂರಾರು ಮನೆಯವರು ಕ್ರೈಸ್ತಧರ್ಮವನ್ನು ಸ್ವೀಕರಿಸುವ ಪ್ರಸಂಗ ಬಂದಿದ್ದಾಗ ಇವರು ಅಲ್ಲಿಗೆ ಹೋಗಿ ಬುದ್ಧಿವಾದವನ್ನು ಹೇಳಿ ಅವರ ವೆಚ್ಚಕ್ಕೆ ಹಣಕಾಸು ಕೊಟ್ಟು ಅವರು ಸ್ವಧರ್ಮದಲ್ಲಿರುವಂತೆ ಬೋಧಿಸಿದರಂತೆ. ಕೆಲವೊಮ್ಮೆ ಜನಗಳಲ್ಲಿ ಕೋಪದಿಂದ ಮಾತನಾಡುತ್ತಿದ್ದುದರಿಂದ ಇವರನ್ನು ಹುಲಿಚನ್ನಬಸಪ್ಪ ಎಂದು ಜನ ಕರೆಯುತ್ತಿದ್ದರಂತೆ." (**ಆಸ್ಥಾನವಿದ್ವಾನ್ ಪಂಡಿತರತ್ನಂ**[೧]: **ಬಿ. ಶಿವಮೂರ್ತಿಶಾಸ್ತ್ರೀ,** ವೀರಶೈವ ಮಹಾಪುರುಷರು (ಭಾಗ-೧), ಪು.೯೦.)

ಡೆಪ್ಯೂಟಿ ಚನ್ನಬಸಪ್ಪನವರು ಜನಿಸಿದ್ದು ೧.೧೧.೧೮೩೩ರಂದು. ಲಿಂಗೈಕ್ಯರಾದದ್ದು ೪.೧.೧೮೮೧ರಂದು. ಕೇವಲ ನಲವತ್ತೇಳು ವರ್ಷಗಳ ಅಲ್ಪಾವಧಿಯಲ್ಲಿ ಮಹತ್ತರವೂ ಲೋಕೋತ್ತರವೂ ಆದ ಕಾರ್ಯಗಳನ್ನು ಸಾಧಿಸಿ ಅಮರರಾಗಿದ್ದಾರೆ, ಪ್ರಾತಃಸ್ಮರಣೀಯರಾಗಿದ್ದಾರೆ. ಇಂತಹವರ ನಾಮಸ್ಮರಣೆ ಮಾಡುವುದೇ ಒಂದು ಪುಣ್ಯವಿಶೇಷವೆಂದೇ ಭಾವಿಸಿದ್ದೇನೆ.

**ಅಡಿಟಿಪ್ಪಣಿಗಳು**

೧. ಡೆಪ್ಯೂಟಿ ಚನ್ನಬಸಪ್ಪ : ಸ.ಸ. ಮಾಳವಾಡ : ಸಾಹಿತ್ಯ ಸಂಗಮ, ಪು. ೨೩೫-೨೩೭, ಜಯಪ್ರಕಾಶನ, ಧಾರವಾಡ, ೧೯೭೦

೨. ಡೆಪ್ಯೂಟಿ ಚನ್ನಬಸಪ್ಪನವರು : ಬಿ. ಶಿವಮೂರ್ತಿಶಾಸ್ತ್ರೀ, ವೀರಶೈವ ಮಹಾಪುರುಷರು, ಭಾಗ-೧, ಪು. ೭೯-೮೧, ಶರಣ ಸಾಹಿತ್ಯ ಕಾರ್ಯಾಲಯ, ರಂಗಸ್ವಾಮಿ ಗುಡಿ ಬೀದಿ, ಬಳೇಪೇಟೆ, ಬೆಂಗಳೂರು-೨, ೧೯೫೩

೩. ಡೆಪ್ಯುಟಿ ಚನ್ನಬಸಪ್ಪ : ಹೊಸಗನ್ನಡ ಅರುಣೋದಯ, ಡಾ. ಶ್ರೀನಿವಾಸ ಹಾವನೂರ, ಪು. ೩೦೦-೩೦೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೪

೪. ಲಿಂಗೈಕ್ಯ ಚನ್ನಬಸಪ್ಪನವರು : ಲೇಖಕ: ಶಿಂತ್ರಿ ಬಸಪ್ಪನವರು ಶರಣ ಸಾಹಿತ್ಯ ಸಂಪುಟ ೧೭, ಸಂಚಿಕೆ ೧೨, ಪು.೬೫೩-೬೫೯, ೧೯೫೫

೫. ಚನ್ನಬಸಪ್ಪ, ಬಸವಲಿಂಗಪ್ಪ, ಧಾರವಾಡ : ವೆಂಕಟೇಶ ಸಾಂಗಲಿ, ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ, ಪು. ೩೭-೪೮, ಉಪಸಾಹಿತ್ಯ ಮಾಲೆ, ಮೈಸೂರು, ೧೯೬೦

೬. ಕನ್ನಡಕ್ಕಾಗಿ ದುಡಿದವರು ಡೆಪ್ಯುಟಿ ಚನ್ನಬಸಪ್ಪನವರು : ಕರ್ಮವೀರ ೩-೧೧, ೧೯೬೮

೭. ಚನ್ನಬಸಪ್ಪಾ, ಬಸವಲಿಂಗಪ್ಪಾ ಧಾರವಾಡ ಇವರ ಚರಿತ್ರೆಯು ಫ.ಗು. ಹಳಕಟ್ಟಿ, ಬಿಜಾಪುರ.

■

## ಕ್ರಾಂತಿ ಕಲ್ಯಾಣ
### -ಒಂದು ವಿಹಂಗಮ ನೋಟ-೧

ವಯೋವೃದ್ಧರೂ, ಜ್ಞಾನವೃದ್ಧರೂ, ಹೆಸರಾಂತ ನಾಟಕಕಾರರೂ, ಪ್ರಖ್ಯಾತ ಕಾದಂಬರಿಕಾರರೂ, ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನಿತರೂ ಆದ ಶ್ರೀಮಾನ್ ಬಿ. ಪುಟ್ಟಸ್ವಾಮಯ್ಯನವರ ಶ್ರೇಷ್ಠ ಕಲಾಕೃತಿ "ಕ್ರಾಂತಿ ಕಲ್ಯಾಣ". ಇದರಲ್ಲಿ ವಿಶ್ವವಿಭೂತಿ ಪುರುಷರಲ್ಲಿ ಒಬ್ಬರಾದ ಬಸವಣ್ಣನವರ ಜೀವನ, ಸಾಧನೆ, ಸಿದ್ಧಿಗಳನ್ನು ನಿರೂಪಿಸಲಾಗಿದೆ.

ಸುಮಾರು ಎಂಟುನೂರು ವರ್ಷಗಳ ಹಿಂದೆ ಬಿಜಾಪುರ ಜಿಲ್ಲೆಯ ಬಾಗೇವಾಡಿಯಲ್ಲಿ ಅವತರಿಸಿದ ಬಸವಣ್ಣನವರು ಲೋಕಕಲ್ಯಾಣಕ್ಕಾಗಿ ಎಸಗಿದ ಮಹತ್ಕಾರ್ಯಗಳು ಚಿರಸ್ಮರಣೀಯವಾದುವು. ಧಾರ್ಮಿಕ, ಸಾಮಾಜಿಕ, ರಾಜಕೀಯ, ಸಾಹಿತ್ಯಿಕ ರಂಗಗಳಲ್ಲಿ ಕ್ರಾಂತಿಯನ್ನು ನವೋದಯವನ್ನೂ ಉಂಟುಮಾಡಿದವರು ಬಸವಣ್ಣನವರು. ಅವರ ಕಾಲದಲ್ಲಿ ಕರ್ನಾಟಕದ ಹಿರಿಮೆ-ಗರಿಮೆಗಳು ಭಾರತಾದ್ಯಂತ ವ್ಯಾಪಿಸಿದವು. ಕರ್ನಾಟಕ ಭಾರತದ ಧಾರ್ಮಿಕ ಕೇಂದ್ರವಾಗಿ ಲಕ್ಷಾಂತರ ಭಕ್ತರನ್ನು ಆಕರ್ಷಿಸಿತು.

ಸಾಹಿತ್ಯಚರಿತ್ರೆಯ ದೃಷ್ಟಿಯಿಂದಲೂ ಹನ್ನೆರಡನೆಯ ಶತಮಾನವು ಗಮನಾರ್ಹವಾದುದು. ಪ್ರೌಢವಾದ ಚಂಪೂಶೈಲಿಯಲ್ಲಿ ರಚಿತವಾಗುತ್ತಿದ್ದ ಅಂದಿನ ಕಾವ್ಯಗಳು ಜನಸಾಮಾನ್ಯರ ನಿಲುವಿಗೆ ಎಟಕುವಂತಿರಲಿಲ್ಲ. ಬಸವಣ್ಣನವರು ರೂಢಿಯ ಆಡುಭಾಷೆಯಲ್ಲಿಯೇ ವಚನಗಳನ್ನು ರಚಿಸಿದ್ದು ಅನೇಕರಿಗೆ ಸ್ಫೂರ್ತಿಯನ್ನು ನೀಡಿತು. ಗಹನವಾದ ಅಧ್ಯಾತ್ಮಿಕ ತತ್ವಗಳನ್ನು ವಚನಗಳ ರೂಪದಲ್ಲಿ ಸುಲಭ ಶೈಲಿಯಲ್ಲಿ ಅವರು ನಿರೂಪಿಸಿದರು.

ಬಸವಣ್ಣನವರನ್ನು ಕುರಿತ ಸಂಗತಿಗಳು ಅವರ ತರುವಾಯದ ಹಲವಾರು ಕಾವ್ಯಗಳಲ್ಲಿ, ಪುರಾಣಗಳಲ್ಲಿ, ಶಾಸನಗಳಲ್ಲಿ ಕಂಡುಬರುತ್ತವೆ. ಅಷ್ಟೇ ಅಲ್ಲವೆ ಬಸವಣ್ಣನವರ ಸಮಕಾಲೀನ ವಚನಕಾರರಿಂದಲೂ, ತರುವಾಯದ ವಚನಕಾರರಿಂದಲೂ ಉಲ್ಲೇಖಿಸಲ್ಪಟ್ಟಿವೆ. ಮಣಿಗವಳ್ಳಿ, ಬಳ್ಳಿಗಾವೆ, ಅರ್ಜುನವಾಡ, ಚೌಡದಾನಪುರ -ಇವೇ ಮೊದಲಾದ ಕಡೆ ಸಿಕ್ಕಿರುವ ಶಾಸನಗಳಲ್ಲಿ ಬಸವಣ್ಣನವರಿಗೆ ಸಂಬಂಧಿಸಿದ ಅನೇಕ ಸಂಗತಿಗಳು ತಿಳಿದುಬರುತ್ತವೆ. ಇಷ್ಟೆಲ್ಲಾ ಸಾಧನ ಸಾಮಗ್ರಿಗಳು ಸಿಕ್ಕಿದರೂ ಕೂಡ ಬಸವಣ್ಣನವರ ಕಾಲ, ದೇಶ, ವರ್ತಮಾನ ಮುಂತಾದ ವಿಷಯಗಳಲ್ಲಿ ವಿದ್ವಾಂಸರಲ್ಲಿ ಏಕಾಭಿಪ್ರಾಯವಿಲ್ಲ.

ಚಾರಿತ್ರಿಕದೃಷ್ಟಿಯಿಂದಲೂ ಬಸವಣ್ಣನವರ ಜೀವನಚರಿತ್ರೆಯನ್ನು ತಿಳಿದುಕೊಳ್ಳುವುದು ಬಹುಮುಖ್ಯವಾದುದು. ಕನ್ನಡನಾಡಿನ ಚರಿತ್ರೆಯಲ್ಲಿ ಕಲ್ಯಾಣದ ಚಾಲುಕ್ಯರ ಹೆಸರು ಉಜ್ವಲವಾದುದು. ಬಸವಣ್ಣನವರು ತಮ್ಮ ಮರ್ತ್ಯದ ಮಣಿಹವನ್ನು ಮುಗಿಸಿದ್ದು ಚಾಲುಕ್ಯಚಕ್ರವರ್ತಿ ನೂರ್ಮಡಿತೈಲಪನ ಆಡಳಿತ ಕಾಲದಲ್ಲಿ; ಕಲಚೂರ್ಯ ಬಿಜ್ಜಳ ದಂಡನಾಯಕನ ಅಧಿಕಾರದ ಅವಧಿಯಲ್ಲಿ.

ಬಸವಣ್ಣನವರ ಬಗೆಗೆ ಈವರೆಗೆ ಸಿಕ್ಕಿರುವ ಎಲ್ಲ ಮಾಹಿತಿಗಳನ್ನು ಬಳಸಿಕೊಂಡು ಐತಿಹಾಸಿಕ ಆಧಾರಗಳ ತಳಹದಿಯ ಮೇಲೆ ರಚಿತವಾಗಿರುವ ಶ್ರೀ ಪುಟ್ಟಸ್ವಾಮಯ್ಯನವರ ಶ್ರೇಷ್ಠಕಾದಂಬರಿ ಉದಯರವಿಯಲ್ಲಿ ಪ್ರಾರಂಭವಾಗಿ

'ರಾಜ್ಯಪಾಲ', 'ಕಲ್ಯಾಣೇಶ್ವರ', 'ನಾಗಬಂಧ', 'ಮುಗಿಯದ ಕನಸು' ಇವುಗಳಲ್ಲಿ ಮುಂದುವರಿದು 'ಕ್ರಾಂತಿಕಲ್ಯಾಣ'ದಲ್ಲಿ ಸಮಾಪ್ತಿಯಾಗುತ್ತದೆ. ಬಸವಣ್ಣನವರ ಜೀವನ ಚರಿತ್ರೆ ಚಿರಪರಿಚಿತವಾದುದು. ಈ ಕಾದಂಬರಿಯ ಸುವರ್ಣಚೌಕಟ್ಟಿನಲ್ಲಿ ಅದು ಹೇಗೆ ಅಡಕವಾಗಿದೆ ಎಂಬುದನ್ನು ಸ್ಥೂಲವಾಗಿ ಇಲ್ಲಿ ಕೊಟ್ಟಿದೆ.

ಬಸವಣ್ಣನವರ ಜನನ, ಬಾಲ್ಯ, ವಿದ್ಯಾಭ್ಯಾಸ, ಗುರುಕುಲವಾಸ ಇವುಗಳು ಯಥಾವತ್ತಾಗಿ ಸಾಗಿದ ಮೇಲೆ ಪ್ರಾಪ್ತವಯಸ್ಕರಾದ ಬಸವಣ್ಣನವರಿಗೆ ಗಂಗಾಂಬಿಕೆಯೊಡನೆ ವಿವಾಹವಾಗುವುದು. ಆಮೇಲೆ ಅವರು ಕಲ್ಯಾಣಕ್ಕೆ ಪ್ರಯಾಣ ಮಾಡಿ ಬಿಜ್ಜಳನಲ್ಲಿ ಕರಣಿಕವೃತ್ತಿಯನ್ನು ಕೈಕೊಳ್ಳುವರು. ನಿಧಿಸಂಶೋಧನೆಯ ಘಟನೆ ಬಸವಣ್ಣನವರಿಗೆ ಅಪಾರಗೌರವವನ್ನೂ ಹಿರಿಮೆಯನ್ನೂ ತಂದುಕೊಡುತ್ತದೆ. ತರುವಾಯ ಅವರು ಬಿಜ್ಜಳನಲ್ಲಿ ಮಂತ್ರಿಪದವಿಯನ್ನು ಅಲಂಕರಿಸುವರು. ಈ ಮಧ್ಯೆ ಬಿಜ್ಜಳ ಮತ್ತು ತೈಲಪರ ಮಧ್ಯೆ ತಲೆದೋರಿದ್ದ ವೈಮನಸ್ಯವನ್ನು ನಿವಾರಿಸಲು ಬಸವಣ್ಣನವರು ನಡೆಸಿದ ಸಂಧಾನದಿಂದ ಅವರ ಅಸಾಮಾನ್ಯ ಶಕ್ತಿಸಾಮರ್ಥ್ಯಗಳನ್ನು ಮೆಚ್ಚಿಕೊಂಡ ಬಿಜ್ಜಳ ಅವರನ್ನು ಬನವಾಸಿಯ ರಾಜ್ಯಪಾಲರನ್ನಾಗಿ ನೇಮಿಸುವನು. ಬಿಜ್ಜಳನ ದುರಾಲೋಚನೆಯನ್ನು ಅರ್ಥಮಾಡಿಕೊಂಡ ಬಸವಣ್ಣನವರು ಚಾಲುಕ್ಯ ರಾಜ್ಯಾಪಹರಣವೇ ಅವನ ಮಹೋದ್ದೇಶವೆಂದು ಅರಿತು ರಾಜ್ಯಪಾಲವೃತ್ತಿಯನ್ನು ತ್ಯಜಿಸುವರು. ತಮ್ಮ ಮಹಾಮನೆಯಲ್ಲಿ ನೆಲೆಸುವರು. ಬಿಜ್ಜಳನು ವೃದ್ಧತೈಲಪನ ಕುಮಾರನನ್ನು ಯುವರಾಜನನ್ನಾಗಿ ಮಾಡದೆ ಅವನ ತಮ್ಮ ಜಗದೇಕಮಲ್ಲನನ್ನು ಹೆಸರಿಗೆ ಮಾತ್ರ ಚಕ್ರವರ್ತಿಯನ್ನಾಗಿ ಮಾಡಿದ ಸಂಗತಿಯನ್ನು ಕೇಳಿದ ತೈಲಪನು ಮರಣಹೊಂದುವನು. ರಾಜಕುಮಾರ ಕೀರ್ತಿವರ್ಮನೂ ಗತಿಸುವನು. ಈ ಸಂದರ್ಭದಲ್ಲಿ ತೈಲಪನ ರಾಣಿ ಕಾಮೇಶ್ವರಿ ಜಗದೇಕಮಲ್ಲನೊಡನೆ ಸೋಗುಹಾಕಿಕೊಂಡು ಕಾಮಕೇಳಿ ನಡೆಸುವಳು. ತೈಲಪನ ನೆಚ್ಚಿನ ಗಣಿಕೆಯರಾಗಿದ್ದ ಪ್ರೇಮಾವತಿ ಮತ್ತು ಪಾಟಲಿಕೆಯರ ಬಲಿದಾನವಾಗುವುದು.

ರಾಜಕೀಯ ಕೃತ್ರಿಮಗಳಿಂದ ಮನನೊಂದ ಬಸವಣ್ಣನವರು ಅನುಭವಮಂಟಪದ ಸ್ಥಾಪನೆ ಮಾಡಿ ಅದರ ಕಾರ್ಯಚಟುವಟಿಕೆಗಳನ್ನು ವಿಸ್ತರಿಸಿದರು. ಚಾಲುಕ್ಯಚಕ್ರಾಧಿಪತ್ಯದ ಆಕ್ರಮಣಕ್ಕಾಗಿ ಹಾತೊರೆಯುತ್ತಿದ್ದ ಬಿಜ್ಜಳನ ಮಹತ್ವಾಕಾಂಕ್ಷೆಯನ್ನು ನಿರ್ಮೂಲಮಾಡಿ ಚಾಲುಕ್ಯ ಅರಸೊತ್ತಿಗೆಯ ಪುನರ್ಪ್ರತಿಷ್ಠಾಪನೆಗಾಗಿ ಕಾಮೇಶ್ವರಿ ಮಹ ತ್ತರವಾದ ಒಳಸಂಚನ್ನು ನಡೆಸುವಳು. ಈ ಮಧ್ಯೆ ಚೆನ್ನಬಸವಣ್ಣನವರ ನೇತೃತ್ವದಲ್ಲಿ ಶಿವಶರಣರು ದೇವಗಿರಿ ಯಾತ್ರೆಯನ್ನು ಕೈಗೊಳ್ಳುವರು. ನಾರಣಕ್ರಮಿತನ ಯಜ್ಞಭಂಗ, ಶೀಲವಂತ ಸರ್ಪದಷ್ಟನಾಗುವುದು, ಕುಸುಮಾವಳಿಯ ಬಲಿದಾನ, ಕರ್ನಾಟಕ ಶಿಲ್ಪವೈಭವದ ವರ್ಣನೆ, ಕೈಲಾಸಗುಹಾಲಯನಿರ್ಮಾಣ ಕುರಿತ ಐತಿಹ್ಯ, ಮಧುವರಸರ ಪುತ್ರಿ ಲಾವಣ್ಯವತಿ ಮತ್ತು ಶೀಲವಂತರ ವಿವಾಹ, ತತ್ಪರಿಣಾಮವಾಗಿ ಶರಣರ ಮೇಲೆ ವರ್ಣಸಂಕರದ ಆಪಾದನೆ, ಅದರ ವಿಚಾರಣೆ, ಕೊನೆಗೆ ಬಸವಣ್ಣನವರು ಕಲ್ಯಾಣ ಬಿಡುವಂತೆ ಬಿಜ್ಜಳ ಆಜ್ಞೆಮಾಡಿದ್ದು, ಅವರು ಕಲ್ಯಾಣವನ್ನು ಬಿಟ್ಟ ಮೇಲೆ ನಡೆದ ಕ್ರಾಂತಿ, ವರ್ಣಸಂಕರದ ಆಪಾದನೆಗಾಗಿ ಹರಳಯ್ಯ, ಮಧುವರಸ, ಶೀಲವಂತರ ಕಗ್ಗೊಲೆ, ಶರಣರ ನಿರ್ಮೂಲಕ್ಕೆ ಬಿಜ್ಜಳ ಸಂಕಲ್ಪಿಸಿದ್ದು, ಕಾಮೇಶ್ವರಿಯೊಡನೆ ಬಿಜ್ಜಳ ಕಾಮಕೇಳಿ ನಡೆಸಿದ್ದು. ಅದರಿಂದಾಗಿ ಕಾಮೇಶ್ವರಿ ದೇಹತ್ಯಾಗ ಮಾಡಿದ್ದು, ಜಗದೇಕಮಲ್ಲ ಬೊಮ್ಮರಸರಿಂದ ಬಿಜ್ಜಳ ವಧೆಯಾದದ್ದು, ಕಲ್ಯಾಣದಿಂದ ಶರಣರು ನಿಷ್ಕ್ರಮಿಸಿದ್ದು ಈ ಎಲ್ಲ ವಾರ್ತೆಗಳನ್ನು ಕೇಳಿ ಬಸವಣ್ಣನವರು ಸಂಗಮನಾಥನಲ್ಲಿ ಐಕ್ಯವಾದದ್ದು, ಮಾಧವನು ಸೈನ್ಯ ಸಮೇತನಾಗಿ ಶರಣರ ಮೇಲೆ ಬಿದ್ದು ಹೋರಾಡಿದ್ದು, ಮಡಿವಾಳ ಮಾಚಿದೇವರ ದಂಡು ಮಾಧವನ ಸೈನ್ಯವನ್ನು ಸದೆಬಡಿದು ಅಟ್ಟಿದ್ದು, ಶರಣರೆಲ್ಲಾ ಉಳಿವಿಗೆ ಪ್ರಯಾಣ ಮಾಡಿದ್ದು –ಇವಿಷ್ಟು ಈ ಕಾದಂಬರಿಯ ಕಥೆ.

ಕ್ರಾಂತಿಕಲ್ಯಾಣದ ಕಥಾವಸ್ತು ಐತಿಹಾಸಿಕವಾದರೂ ಹಲವಾರು ಪ್ರಕರಣಗಳಲ್ಲಿ ಕಾದಂಬರಿಕಾರರು ಕಲ್ಪನೆಯನ್ನು ಆಧರಿಸಿ ಕಥೆಗೆ ಏಕಸೂತ್ರತೆಯನ್ನು ತಂದಿದ್ದಾರೆ. ಬಸವಣ್ಣನವರು ಸ್ವರ್ಣಶಾಸನದ ಅಪೂರ್ವಲಿಪಿಯನ್ನು ಓದಿ, ವ್ಯಾಖ್ಯಾನಿಸಿ ನಿಧಿನಿಕ್ಷಿಪ್ತದ ವಿಚಾರ ತಿಳಿಸಿದ ಪ್ರಸಂಗ, ಶಿಲಾಹೃದಯದ ರಹಸ್ಯಭೇದನದ ಪ್ರಕರಣ ಇವುಗಳಲ್ಲಿ ಬಸವಣ್ಣನವರಿಗೆ ಈ ವಿದ್ಯೆಗಳು ಕರಗತವಾದ ಸನ್ನಿವೇಶಗಳನ್ನು ವಾಸ್ತವಿಕವೋ ಎಂಬಂತೆ ಚಿತ್ರಿಸಲಾಗಿದೆ.

ಬಿಜ್ಜಳನ ತಂಗಿ ನೀಲಲೋಚನೆಗೆ ಬಸವಣ್ಣನವರಲ್ಲಿ ನಿಗೂಢವಾಗಿದ್ದ ಪ್ರೇಮಪ್ರದರ್ಶನದ ಪ್ರಕರಣ, ಬಳ್ಳಿಗಾವೆಯ ಗುಣಗಳ್ಳಯೋಗಿ, ಗಂಗಾಂಬಿಕೆಯ ವಜ್ರದ ಓಲೆಯ ಕಳವಿಗೆ ಬಂದಾಗ ವಿವರಿಸಲ್ಪಟ್ಟಿರುವ ಯೋಗಶಾಸ್ತ್ರ ರಹಸ್ಯದ ಪ್ರಕರಣ, ಸಿಂಗಿರಾಜನ ರಮ್ಯವಾದ ಪೂರ್ವಕಥೆ, ಬ್ರಹ್ಮಶಿವ, ಅಗ್ಗಳ ಇವರ ವಿಶಿಷ್ಟ ಪಾತ್ರ, ಸೋಮೇಶ್ವರ ಸುಂದರವಲ್ಲಿಯರ ಪ್ರೇಮವಿವಾಹ, ಕದಂಬರ ರಾಜಕನ್ನೆಯರಾದ ಮಾಯಾದೇವಿ, ಕುಸುಮಾವಳಿಯರ ದಾರುಣಮಯ ಚಿತ್ರ, ದೇವಗಿರಿಯ ಶಿಲ್ಪಕಲೆಯ ವೈಭವ, ವರ್ಣನೆ -ಇವೇ ಮುಂತಾದ ಪ್ರಕರಣಗಳ ನಿರೂಪಣೆಯಲ್ಲಿ ಕಾದಂಬರಿಗೆ ವಾಸ್ತವಿಕತೆಯನ್ನು ತರಲು ಕಲ್ಪಿಸಿಕೊಂಡಿರುವ ಘಟನೆಗಳು ಕಾದಂಬರಿಕಾರರ ಅಸಾಧಾರಣ ಸಾಮರ್ಥ್ಯಕ್ಕೆ ನಿದರ್ಶನಗಳಂತಿವೆ.

ಬಸವಪೂರ್ವ ಮತ್ತು ಬಸವ ಸಮಕಾಲೀನ ವಚನಕಾರರ ವಚನಗಳನ್ನು ಈ ಕಾದಂಬರಿಯಲ್ಲಿ ಸಮಯೋಚಿತವಾಗಿ ಪೋಣಿಸಿ ಅವುಗಳನ್ನು ಅರ್ಥೈಸಿ ವ್ಯಾಖ್ಯಾನಿಸಿರುವುದು ಕಾದಂಬರಿಯ ಸಂವಿಧಾನ ತಂತ್ರಕ್ಕೆ ಸೊಗಸನ್ನೂ ಯಥಾರ್ಥತೆಯನ್ನು ತಂದಿದೆ. ಅಲ್ಲದೆ ಕಾವ್ಯಪುರಾಣಗಳಲ್ಲಿ ಕಂಡುಬರುವ ಪವಾಡಗಳನ್ನು ವಾಸ್ತವಿಕವೋ ಎಂಬಂತೆ ಸಮೀಚೀನವಾದ ಕಥೆಗಳಿಂದ ನಿರೂಪಿಸಿರುವುದು ಈ ಕಾದಂಬರಿಯ ತಂತ್ರದ ಒಂದು ವೈಶಿಷ್ಟ್ಯ.

ಪ್ರಕೃತ ಕಾದಂಬರಿಕಾರರು ಅಂದಿನ ಯುಗದಲ್ಲಿ ಸಂಭವಿಸಿದ ಎಲ್ಲ ತೆರನ ವಿಪ್ಲವಗಳನ್ನು ವಿಹಂಗಮ ದೃಷ್ಟಿಯಿಂದ ಸಮೀಕ್ಷಿಸಿ, ಬಸವಣ್ಣನವರ ಚರಿತ್ರೆಗೆ ಪ್ರತ್ಯಕ್ಷವಾಗಿ ಅಪ್ರತ್ಯಕ್ಷವಾಗಿ ಸಂಬಂಧಿಸಿದ ಸಂಗತಿಗಳೆಲ್ಲವನ್ನೂ ಏಕಸೂತ್ರಕ್ಕೆ ಅಳವಡಿಸಿ, ಅಲ್ಲಿನ ಘಟನೆಗಳು, ವ್ಯಕ್ತಿಗಳು ಒಂದಕ್ಕೊಂದು ಪ್ರೇರಕವಾಗಿ ಪೂರಕವಾಗಿರುವಂತೆ ಚಿತ್ರಿಸಿದ್ದಾರೆ. ಬಸವ ಯುಗದ ಧಾರ್ಮಿಕ, ಸಾಮಾಜಿಕ, ಆರ್ಥಿಕ, ಸಾಹಿತ್ಯಿಕ, ರಾಜಕೀಯ ಸಂಗತಿಗಳನ್ನು ಕಣ್ಣಿಗೆ ಕಟ್ಟುವಂತೆ ನಿರೂಪಿಸುವ ಕಾದಂಬರಿ ಕ್ರಾಂತಿ ಕಲ್ಯಾಣ. ಅನೇಕ ಕಾವ್ಯ, ಪುರಾಣ, ಇತಿಹಾಸ, ಶಾಸನಗಳಲ್ಲಿ ಹರಿದು ಹಂಚಿಹೋಗಿದ್ದ ಬಸವಣ್ಣನವರ ಚರಿತ್ರೆಯ ಕಥಾವಸ್ತುವನ್ನು ಐತಿಹಾಸಿಕ ದೃಷ್ಟಿಯಿಂದ ಸಂಭಾವ್ಯವೂ, ಸಹಜವೂ, ಸಮೀಚೀನವೂ ಆದ ಅಂಶಗಳನ್ನು ಸಮನ್ವಯಗೊಳಿಸಿ ಕಾದಂಬರಿಯ ಚೌಕಟ್ಟಿಗೆ ಅಳವಡಿಸಿ ತಮ್ಮ ಪ್ರತಿಭಾ ಶ್ರೀಮಂತಿಕೆಯಿಂದ ಹಲವಾರು ಘಟನೆಗಳನ್ನು ಸೃಷ್ಟಿಸಿಕೊಂಡು ರಚಿಸಿರುವ ಕಲ್ಯಾಣಕ್ರಾಂತಿ ಕನ್ನಡ ಐತಿಹಾಸಿಕ ಕಾದಂಬರಿಗಳಲ್ಲಿ ಅಪೂರ್ವವಾದುದು. ಶ್ರೀಮಾನ್ ಜಿ. ಪುಟ್ಟಸ್ವಾಮಯ್ಯನವರ ಅಸಂಖ್ಯ ಕೃತಿಗಳ ಸೌಧಕ್ಕೆ ಸುವರ್ಣ ಕಳಸದಂತಿರುವ ಕ್ರಾಂತಿಕಲ್ಯಾಣ ಕನ್ನಡ ಸಾಹಿತ್ಯಕ್ಕೆ ಒಂದು ವಿಶಿಷ್ಟ ಕೊಡುಗೆಯಾಗಿದೆ.

## ಕ್ರಾಂತಿ ಕಲ್ಯಾಣ-೨

ಕನ್ನಡ ನಾಡಿನ ಚರಿತ್ರೆಯಲ್ಲಿ ಕಲ್ಯಾಣದ ಚಾಲುಕ್ಯರ ಹೆಸರು ಚಿರಸ್ಥಾಯಿ ಯಾದುದು. ಕ್ರಿ.ಶ. ಹನ್ನೆರಡನೆಯ ಶತಮಾನದಲ್ಲಿ ಈ ನಾಡಿನಲ್ಲಿ ಅವತರಿಸಿದ ಬಸವಣ್ಣನವರು ತಮ್ಮ ಮರ್ತ್ಯದ ಮಣಿಹವನ್ನು ಮುಗಿಸಿದ್ದು ಚಾಲುಕ್ಯ ಚಕ್ರವರ್ತಿ ನೂರ್ಮಡಿ ತೈಲಪನ ಕಾಲದಲ್ಲಿ; ಕಲಚೂರಿ ಬಿಜ್ಜಳ ದಂಡನಾಯಕನ ಅಧಿಕಾರದ ಅವಧಿಯಲ್ಲಿ.

ಬಸವಣ್ಣನವರನ್ನು ಕುರಿತ ಚರಿತ್ರೆ ಹಲವಾರು ಕಾವ್ಯಪುರಾಣ ಶಾಸನಗಳಲ್ಲಿ ಕಂಡುಬರುತ್ತದೆ. ಬಸವಣ್ಣನವರ ಸಮಕಾಲೀನ ಮತ್ತು ತರುವಾಯದ ವಚನಕಾರರು; ಮಣಿಗವಳ್ಳಿ, ಬಳ್ಳಿಗಾವೆ, ಅರ್ಜುನವಾಡ, ಚೌಡದಾನಪುರ ಮೊದಲಾದ ಕಡೆ ಸಿಕ್ಕಿರುವ ಶಾಸನಗಳು; ಪುರಾಣ ಚರಿತ್ರೆ ಇತಿಹಾಸ ಇವುಗಳಿಂದ ಬಸವಣ್ಣನವರಿಗೆ ಸಂಬಂಧಿಸಿದ ಅನೇಕ ಸಂಗತಿಗಳು ತಿಳಿದುಬಂದಿವೆ. ಆದರೂ, ಬಸವಣ್ಣನವರ ಕಾಲದೇಶ ವರ್ತಮಾನ ಸಾಧನೆ ಸಿದ್ಧಿ ಮುಂತಾದ ವಿಷಯಗಳಲ್ಲಿ ಏಕಸೂತ್ರತೆ ಕಂಡುಬಂದಿಲ್ಲ. ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಬಸವಣ್ಣನವರ ಬಗೆಗೆ ಸಿಕ್ಕಿರುವ ಎಲ್ಲ ಮೂಲಸಾಮಗ್ರಿಗಳನ್ನೂ ಬಳಸಿಕೊಂಡು ಐತಿಹಾಸಿಕ ಆಧಾರಗಳನ್ನು ಆಧರಿಸಿ ರಚಿತವಾಗಿರುವ ಈ ಬೃಹತ್ ಕಾದಂಬರಿ. 'ಉದಯರವಿ'ಯಿಂದ ಪ್ರಾರಂಭವಾಗಿ 'ರಾಜ್ಯಪಾಲ', 'ಕಲ್ಯಾಣೇಶ್ವರ', 'ನಾಗಬಂಧ', 'ಮುಗಿಯದಕನಸು'ಗಳಲ್ಲಿ ಮುಂದುವರಿದು 'ಕ್ರಾಂತಿಕಲ್ಯಾಣ'ದಲ್ಲಿ ಪರ್ಯವಸಾನವಾಗುತ್ತದೆ. ಈ ಕಾದಂಬರಿಯ ಕಥಾವಸ್ತುವನ್ನು ಸಂಕ್ಷೇಪವಾಗಿ ಹೀಗೆ ನಿರೂಪಿಸಬಹುದು.

ಬಸವಣ್ಣನವರ ಜನನ, ಬಾಲ್ಯ, ವಿದ್ಯಾಭ್ಯಾಸ, ಗುರುಕುಲವಾಸ, ಪ್ರಾಪ್ತವಯಸ್ಕರಾದ ಮೇಲೆ ಗಂಗಾಂಬಿಕೆಯೊಡನೆ ವಿವಾಹ, ಕಲ್ಯಾಣಕ್ಕೆ ಪ್ರಯಾಣ, ಬಿಜ್ಜಳನಲ್ಲಿ ಕರಣಿಕ ವೃತ್ತಿ, ನಿಧಿಸಂಶೋಧನೆ, ಮಂತ್ರಿಪದವಿ, ಬಿಜ್ಜಳ ತೈಲಪರ ನಡುವೆ ತಲೆದೋರಿದ ವೈಮನಸ್ಯ, ಇವರಿಬ್ಬರ ಮಧ್ಯೆ ಬಸವಣ್ಣನವರು ನಡೆಸಿದ ಸಂಧಾನ, ಬಸವಣ್ಣನವರ ಅಸಾಮಾನ್ಯ ಶಕ್ತಿಸಾಮರ್ಥ್ಯಗಳನ್ನು ಮೆಚ್ಚಿಕೊಂಡ ಬಿಜ್ಜಳ ಅವರನ್ನು ಬನವಾಸಿಯ ರಾಜ್ಯಪಾಲನನ್ನಾಗಿ ನೇಮಿಸಿದ್ದು; ಚಾಲುಕ್ಯ ರಾಜ್ಯಾಪಹರಣವೇ ಬಿಜ್ಜಳನ ಮಹೋದ್ದೇಶವೆಂದು ಮನವರಿಕೆಗೊಂಡ ಬಸವಣ್ಣನವರು ರಾಜ್ಯಪಾಲವೃತ್ತಿಯನ್ನು ತ್ಯಜಿಸಿದ್ದು; ಮಹಾಮನೆಯಲ್ಲಿ ನೆಲಸಿದ್ದು, ಬಿಜ್ಜಳನು ತೈಲಪಕುವರನನ್ನು ಯುವರಾಜನನ್ನಾಗಿ ಮಾಡದೆ ಅವನ ತಮ್ಮ ಜಗದೇಕಮಲ್ಲನನ್ನು ಕೇವಲ ಹೆಸರಿಗೆ ಮಾತ್ರ ಚಕ್ರವರ್ತಿಯಾಗಿ ಮಾಡಿದ್ದು; ಈ ಸಂಗತಿಯನ್ನು ಕೇಳಿದ ತೈಲಪನ ಮರಣ; ರಾಜಕುಮಾರ ಕೀರ್ತಿವರ್ಮನ ಸಾವು; ಚಾಲುಕ್ಯ ವಂಶೋದ್ಧಾರಕ್ಕಾಗಿ ತೈಲಪನ ರಾಣಿ ಕಾಮೇಶ್ವರಿ ತೈಲಪನ ತಮ್ಮ ಜಗದೇಕಮಲ್ಲನೊಡನೆ ನಡೆಸಿದ ಕಾಮ ಕೇಳಿ; ತೈಲಪನ ನೆಚ್ಚಿನ ಗಣಿಕೆಯರಾಗಿದ್ದ ಪ್ರೇಮಾವತಿ ಪಾಟಲಿಕೆಯರ ಬಲಿದಾನ, ಬಸವಣ್ಣನವರಿಂದ ಅನುಭವ ಮಂಟಪದ ಸ್ಥಾಪನೆ, ಅದರ ಕಾರ್ಯಚಟುವಟಿಕೆ, ಪ್ರಭಾವ; ಬಿಜ್ಜಳನ ಮಹತ್ವಾಕಾಂಕ್ಷೆ ಚಾಲುಕ್ಯ ಅರಸೊತ್ತಿಗೆಯ ಪುನಃ ಪ್ರತಿಷ್ಠಾಪನೆಗಾಗಿ ಕಾಮೇಶ್ವರಿ ನಡೆಸಿದ ಒಳಸಂಚು, ಚೆನ್ನಬಸವಣ್ಣನವರ ನೇತೃತ್ವದಲ್ಲಿ ಶರಣರು ಕೈಕೊಂಡ ದೇವಗಿರಿಯಾತ್ರೆ, ನಾರಣಕ್ರಮಿತನ ಯಜ್ಞಭಂಗ; ಶೀಲವಂತ ಸರ್ಪದಷ್ಟನಾಗುವುದು; ಕುಸುಮಾವಳಿಯ ಬಲಿದಾನ, ಕರ್ಣಾಟಕ ಶಿಲ್ಪ ವೈಭವದ ವರ್ಣನೆ, ಕೈಲಾಸ ಗುಹಾಲಯದ ನಿರ್ಮಾಣವನ್ನು ಕುರಿತ ಐತಿಹ್ಯ, ಶೀಲವಂತನ ಅಸ್ವಸ್ಥತೆ, ಮಧುವರಸರ ಪುತ್ರಿ ಲಾವಣ್ಯವತಿ ಶೀಲವಂತರ ವಿವಾಹ, ತತ್ಪರಿಣಾಮವಾಗಿ ಶರಣರ ಮೇಲೆ ವರ್ಣಸಂಕರದ ಆಪಾದನೆ, ಅದರ ವಿಚಾರಣೆ, ಬಸವಣ್ಣನವರ ಕಲ್ಯಾಣ ನಿರ್ವಾಸನಕ್ಕೆ ಬಿಜ್ಜಳನ ಆಜ್ಞೆ, ಬಸವಣ್ಣನವರು ನಿರ್ವಾಸಿತರಾದ ಮೇಲೆ ಕಲ್ಯಾಣದಲ್ಲಿ ನಡೆದ ಕ್ರಾಂತಿ; ವರ್ಣಸಂಕರದ ಆಪಾದನೆಗಾಗಿ ಹರಳಯ್ಯ, ಮಧುವರಸ, ಶೀಲವಂತರ ಕಗ್ಗೊಲೆ, ಶರಣರ ನಿರ್ಮೂಲನಕ್ಕೆ ಬಿಜ್ಜಳನ ಸಂಕಲ್ಪ, ಕಾಮೇಶ್ವರಿಯೊಡನೆ ಬಿಜ್ಜಳನ ಕಾಮಕೇಳಿ, ಕಾಮೇಶ್ವರಿಯ ದೇಹತ್ಯಾಗ, ಜಗದೇಕಮಲ್ಲ ಬೊಮ್ಮರಸರಿಂದ ಬಿಜ್ಜಳನ ವಧೆ, ಕಲ್ಯಾಣದಿಂದ ಶರಣರ ನಿಷ್ಕ್ರಮಣ, ಈ ವಾರ್ತೆಗಳನ್ನು ಕೇಳಿ ಬಸವಣ್ಣನವರು ಸಂಗಮನಲ್ಲಿ ಐಕ್ಯವಾದದ್ದು; ಸೈನ್ಯಸಮೇತನಾಗಿ ಶರಣರ ಮೇಲೆ ಬಿದ್ದು ಹೋರಾಟ ನಡೆಸಿದ್ದು; ಮಾಚಿದೇವರ ದಂಡು ಮಾಧವನ ಸೈನ್ಯವನ್ನು ಸದೆದಟ್ಟಿದ್ದು; ಉಳಿವಿಗೆ ಶರಣರ ಪ್ರಯಾಣ.

ಈ ಕಾದಂಬರಿಯ ಕಥಾವಸ್ತು ಐತಿಹಾಸಿಕವಾದರೂ ಹಲವಾರು ಪ್ರಕರಣಗಳಲ್ಲಿ ಕಲ್ಪನೆಯ ನೆರವನ್ನು ನೆಮ್ಮಿ ಕಥೆಗೆ ಏಕಸೂತ್ರತೆಯನ್ನು ತರಲಾಗಿದೆ. ಸ್ವರ್ಣಶಾಸನದ ಅಪೂರ್ವ ಲಿಪಿಯನ್ನು ವ್ಯಾಖ್ಯಾನಿಸಿ ನಿಧಿನಿಕ್ಷಿಪ್ತದ ವಿಚಾರವನ್ನು ತಿಳಿಸಿದ ಪ್ರಸಂಗ, ಶಿಲ್ಪ ಶಿಲಾಹೃದಯ ರಹಸ್ಯಭೇದನದ ಪ್ರಕರಣಗಳಲ್ಲಿ ಬಸವಣ್ಣನವರಿಗೆ ಈ ವಿದ್ಯೆಗಳು ಕರಗತವಾದುದು ಈ ಸಂಬಂಧವಾದ ಪ್ರಕರಣಗಳನ್ನು ಕಲ್ಪಿಸಿ ಈ ಘಟನೆಗಳು ವಾಸ್ತವವೋ ಎಂಬಂತೆ ಚಿತ್ರಿಸಲಾಗಿದೆ. ಬಿಜ್ಜಳನ ತಂಗಿ ನೀಲಲೋಚನೆಗೆ ಬಸವಣ್ಣನವರ ವಿಷಯದಲ್ಲಿ ಗೂಢವಾಗಿದ್ದ ಪ್ರೇಮ ಪ್ರದರ್ಶನದ ಪ್ರಕರಣ, ಬಳ್ಳಿಗಾವೆಯ ಗುಣಗುಳ್ಳಯೋಗಿ ಗಂಗಾಂಬಿಕೆಯ ವಜ್ರದ ಓಲೆಯ ಕಳವಿಗೆ ಬಂದಾಗ ವಿವರಿಸಲ್ಪಟ್ಟಿರುವ ಯೋಗಶಾಸ್ತ್ರ ರಹಸ್ಯ, ಶೂನ್ಯಸಿಂಹಾಸನದ ರಚನೆ, ಆ ಸಂಬಂಧವಾದ ವಿವರಗಳು, ಮಹದೇವಿಯಕ್ಕನ ಪ್ರಕರಣ, ಸಿಂಗಿರಾಜನ ರಮ್ಯಪೂರ್ವ ಕಥೆ, ಬ್ರಹ್ಮಶಿವ, ಅಗ್ಗಳ ಇವರ ವಿಶಿಷ್ಟಪಾತ್ರ, ಸೋಮೇಶ್ವರ ಸುಂದರವಲ್ಲಿಯರ ಪ್ರೇಮವಿವಾಹ, ಕದಂಬ ರಾಜಕನ್ಯೆಯರಾದ ಮಾಯಾದೇವಿ ಕುಸುಮಾವಳಿಯರ ದಾರಣ ಚಿತ್ರ, ದೇವಗಿರಿಯ ಶಿಲ್ಪಕಲೆಯ ವೈಭವ –ಈ ಪ್ರಕರಣಗಳಲ್ಲಿ ಕಾದಂಬರಿಗೆ ವಾಸ್ತುವತೆ ಬರಲು ಕಲ್ಪಿಸಿಕೊಂಡಿರುವ ಘಟನೆಗಳು ಕಾದಂಬರಿಕಾರರ ಅಘಟನಘಟನಾ ಸಾಮರ್ಥ್ಯಕ್ಕೆ ನಿದರ್ಶನಗಳಂತಿವೆ.

ಬಸವಣ್ಣನವರ ಭಕ್ತಿ, ನಿಷ್ಠೆ ಪ್ರಗತಿಪರ ಮನೋಭಾವನೆಗಳು ಎಲ್ಲೆಡೆಗಳಲ್ಲಿಯೂ ಒಂದೇ ತೆರನಾಗಿ ಕಂಡುಬರುತ್ತವೆ. ಸಾಹಿತ್ಯಕ ಧಾರ್ಮಿಕ ಸಾಮಾಜಿಕ ಕ್ಷೇತ್ರಗಳಲ್ಲಿ ಅವರು ಆಚರಣೆಗೆ ತಂದ ಕ್ರಾಂತಿಕಾರಕ ಸುಧಾರಣೆಗಳನ್ನು ಅಂದಿನ

ಕರ್ಮಠರು, ಸಂಪ್ರದಾಯ ಶರಣರು ವಿರೋಧಿಸಿದರು. ಎಲ್ಲಕ್ಕಿಂತ ಮಿಗಿಲಾಗಿ ಬಸವಣ್ಣನವರ ನೇತೃತ್ವದಲ್ಲಿ ನಡೆದ ವರ್ಣಸಂಕರಕ್ಕೆ ಪ್ರಬಲವಾದ ಪ್ರತಿಭಟನೆಯೊದಗಿ ಕಲ್ಯಾಣದಲ್ಲಿ ಕ್ರಾಂತಿಯುಂಟಾಯಿತು. ಈ ಎಲ್ಲ ಅಂಶಗಳನ್ನೂ ಕಾದಂಬರಿಯ ಕಥಾಸೂತ್ರದಲ್ಲಿ ಯಥಾವತ್ತಾಗಿ ಅಳವಡಿಸಿಕೊಳ್ಳಲಾಗಿದೆ.

ಬಸವಪೂರ್ವ ಬಸವಸಮಕಾಲೀನ ವಚನಕಾರರ ವಚನಗಳನ್ನು ಅತ್ಯಂತ ಸಮಯೋಚಿತವಾಗಿ ಪೋಣಿಸಿ ಅವುಗಳನ್ನು ಅರ್ಥೈಸಿ ವ್ಯಾಖ್ಯಾನಿಸಿರುವುದು ಕಾದಂಬರಿಯ ಸಂವಿಧಾನ ತಂತ್ರಕ್ಕೆ ಸೊಗಸನ್ನೂ ಯಥಾರ್ಥತೆಯನ್ನೂ ತಂದಿದೆ.

ಬಸವಣ್ಣನವರಿಗೆ ಸಂಬಂಧಿಸಿದಂತೆ ಕಾವ್ಯಪುರಾಣಗಳಲ್ಲಿ ಕಂಡುಬರುವ ಪವಾಡಗಳನ್ನು ವಾಸ್ತವಿಕವೋ ಎಂಬಂತೆ ಸಮೀಚೀನವಾದ ಕಥೆಗಳಿಂದ ನಿರೂಪಿಸಿ ಈ ಪವಾಡಗಳ ಘಟನೆಗಳು ನಿಜವಾಗಿ ನಡೆದಂತೆಯೇ ಚಿತ್ರಿಸಿರುವುದು ಕಾದಂಬರಿ ತಂತ್ರದ ಒಂದು ವೈಶಿಷ್ಟ್ಯ.

ಕಾದಂಬರಿಕಾರರು ಅಂದಿನ ಯುಗದಲ್ಲಿ ಸಂಭವಿಸಿದ ಎಲ್ಲ ಬಗೆಯ ವಿಪ್ಲವಗಳನ್ನೂ ವಿಹಂಗಮ ದೃಷ್ಟಿಯಿಂದ ಸಮೀಕ್ಷಿಸಿ ಬಸವಣ್ಣನವರ ಚರಿತ್ರೆಗೆ ಪ್ರತ್ಯಕ್ಷವಾಗಿ ಅಪ್ರತ್ಯಕ್ಷವಾಗಿ ಸಂಬಂಧಿಸಿದ ಎಲ್ಲ ಸಂಗತಿಗಳನ್ನೂ ಏಕಸೂತ್ರಕ್ಕೆ ಅಳವಡಿಸಿ, ಇಲ್ಲಿನ ಘಟನೆಗಳು ವ್ಯಕ್ತಿಗಳು ಒಂದಕ್ಕೊಂದು ಪ್ರೇರಕವಾಗಿ ಪೂರಕವಾಗಿರುವಂತೆ ತಮ್ಮ ಅಸಾಧಾರಣ ಪ್ರತಿಭೆಯಿಂದ ಚಿತ್ರಿಸಿದ್ದಾರೆ. ಯಾವ ಅಸಂಗತ ವಿಷಯಗಳ ಕಡೆಗೂ ಗಮನಹರಿಸದೆ ಐತಿಹಾಸಿಕ ಸಂಗತಿಗಳನ್ನೇ ಆಧರಿಸಿ ತಮ್ಮ ಕಲ್ಪನಾಸಾಮರ್ಥ್ಯದಿಂದ ವ್ಯಕ್ತಿಗಾಗಲಿ, ಇತಿಹಾಸಕ್ಕಾಗಲಿ ಅಪಚಾರವಾಗದಂತೆ ನಿರೂಪಿಸಿದ್ದಾರೆ. ಅಂದಿನ ಯುಗದ ಧಾರ್ಮಿಕ, ಸಾಮಾಜಿಕ, ಆರ್ಥಿಕ, ಸಾಹಿತ್ಯಕ, ರಾಜಕೀಯ ಸಂಗತಿಗಳನ್ನು ಕಣ್ಣಿಗೆ ಕಟ್ಟುವಂತೆ ನಿರೂಪಿಸಿರುವ ಕಾದಂಬರಿ ಇದು. ಬಸವಯುಗ ಧರ್ಮವೇ ಇದರಲ್ಲಿ ಪ್ರತಿಪಾದಿತವಾಗಿದೆ. ಹಲವಾರು ಕಾವ್ಯಪುರಾಣ ಇತಿಹಾಸಗಳಲ್ಲಿ ಹರಿದು ಹಂಚಿಹೋಗಿದ್ದ ಬಸವಣ್ಣನವರ ಚರಿತ್ರೆಗೆ ಸಂಬಂಧಿಸಿದ ಕಥಾವಸ್ತುವನ್ನು ಐತಿಹಾಸಿಕ ದೃಷ್ಟಿಯಿಂದ ಸಂಭಾವ್ಯವೂ ಸಹಜವೂ ಸಮೀಚೀನವೂ ಆದವುಗಳನ್ನು ಸಮನ್ವಯಗೊಳಿಸಿ ಕಾದಂಬರಿಯ ಚೌಕಟ್ಟಿಗೆ ಅಳವಡಿಸಿ ತಮ್ಮ ಪ್ರತಿಭಾ ಶ್ರೀಮಂತಿಕೆಯಿಂದ ಹಲವಾರು ಘಟನೆಗಳನ್ನು ಸೃಷ್ಟಿಸಿಕೊಂಡು ರಚಿತವಾಗಿರುವ ಕಲ್ಯಾಣಕ್ರಾಂತಿ ಕನ್ನಡ ಐತಿಹಾಸಿಕ ಕಾದಂಬರಿಗಳಲ್ಲಿ ಅಪೂರ್ವವಾದುದು. ಕನ್ನಡ ಸಾಹಿತ್ಯಕ್ಕೇ ಇದು ಒಂದು ವಿಶಿಷ್ಟವಾದ ಕೊಡುಗೆ.

■

# ಅನುಭವಮಂಟಪದ ಪ್ರಭಾವಲಯ

ಶ್ರೀಬಸವೇಶ್ವರರು ಸ್ಥಾಪಿಸಿದ ಅನುಭವಮಂಟಪವು ಅವರ ಧಾರ್ಮಿಕ ಸಿದ್ಧಿಯ ಶಿಖರದಂತಿದೆ. ಆ ಅನುಭವಮಂಟಪದಲ್ಲಿ ಅಂದಿನ ಶಿವಶರಣರೂ ಶಿವಶರಣೆಯರೂ ಒಟ್ಟುಗೂಡಿ ತಮ್ಮ ಆಚಾರ-ವಿಚಾರಗಳನ್ನೂ ನಡೆನುಡಿಗಳನ್ನೂ ಚರ್ಚಿಸಿ ಮಾರ್ಪಡಿಸಿ ನೇರ್ಪಡಿಸಿಕೊಳ್ಳುತ್ತಿದ್ದರು. ಶಿವಾನುಭವಿಗಳೆಲ್ಲ ಅಲ್ಲಿ ಸೇರಿ ಹೊಸ ಬೆಳಕನ್ನೂ ಪಡೆದುಕೊಳ್ಳುತ್ತಿದ್ದರು. ಆದುದರಿಂದ ಅನುಭವಮಂಟಪ ಅಂದಿನ ಜನತೆಯ ಆಧ್ಯಾತ್ಮಿಕ ವಿಶ್ವವಿದ್ಯಾನಿಲಯದಂತಿತ್ತು. ಆ ಸಂಸ್ಥೆಯ ಅಧ್ಯಕ್ಷರು ಅಲ್ಲಮಪ್ರಭು. ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ, ಮಡಿವಾಳ ಮಾಚಯ್ಯ, ಅಕ್ಕಮಹಾದೇವಿ ಇವರೇ ಮೊದಲಾದವರು ಅನುಭವಮಂಟಪದಲ್ಲಿ ಸೇರುತ್ತಿದ್ದ ಪ್ರಮುಖ ವ್ಯಕ್ತಿಗಳು.

ಶ್ರೀಬಸವೇಶ್ವರರು ಪ್ರಚಾರ ಮಾಡಿದ ವೀರಶೈವ ಧರ್ಮದ ಪ್ರಭಾವಕ್ಕೆ ಅಂದು ಅನೇಕರು ಒಳಗಾದರು. ಅದಕ್ಕೆ ಕಾರಣವೆಂದರೆ ಆ ಧರ್ಮದ ಸುಲಭವಾದ ಬೋಧೆ ಮತ್ತು ಆಚರಣೆ. ಆ ಧರ್ಮ ಅಂದು ವಿಶೇಷ ಜನಪ್ರಿಯವಾಗಿ ವಿಶ್ವಧರ್ಮವಾಗುವಷ್ಟು ಪ್ರಭಾವವನ್ನು ಪಡೆಯಿತು. ಭರತಖಂಡದ ನಾನಾಭಾಗಗಳಿಂದ ಅಸಂಖ್ಯಾತ ಸಾಧಕರು ಬಂದು ಕಲ್ಯಾಣದಲ್ಲಿ ನೆಲಸಿದರು. ಅವರೆಲ್ಲರೂ ಅನುಭವಮಂಟಪದಲ್ಲಿ ಪಾಲ್ಗೊಳ್ಳುತ್ತಿದ್ದರು. ಕಾಶ್ಮೀರದ ಮೋಳಿಗೆ ಮಾರಯ್ಯ, ದಕ್ಷಿಣದ ಸಕಲೇಶ ಮಾದರಸ, ಗುಜರಾತಿನ ಆದಯ್ಯ, ಕಳಿಂಗದ ಮರುಳುಶಂಕರದೇವ, ಆಂಧ್ರದ ಮೈದುನ ರಾಮಯ್ಯ -ಇವರೇ ಮೊದಲಾದವರು ಕರ್ಣಾಟಕದ ಹೊರಗಿನಿಂದ ಬಂದವರಲ್ಲಿ ಪ್ರಮುಖರು. ಇವರಲ್ಲಿ ಕೆಲವರು ರಾಜರಾಗಿದ್ದರು. ಶ್ರೀಸಾಮಾನ್ಯರೇ ಅಲ್ಲದೆ ರಾಜಮಹಾರಾಜರೂ ತಮ್ಮ ಸರ್ವಸ್ವವನ್ನೂ ತ್ಯಜಿಸಿ ಅನುಭವ ಮಂಟಪದಿಂದ ಬೆಳಕು ಪಡೆಯಲು ಕಲ್ಯಾಣಕ್ಕೆ ಬಂದು ನೆಲಸಿದ್ದು ಶ್ರೀಬಸವೇಶ್ವರರು ಘನವಾದ ವ್ಯಕ್ತಿತ್ವಕ್ಕೂ ಅವರ ಜನಪ್ರಿಯತೆಗೂ ದ್ಯೋತಕವಾಗಿದೆ.

ಶ್ರೀಬಸವೇಶ್ವರರು ಲಿಂಗಧಾರಿಗಳೆಲ್ಲರನ್ನೂ ಒಂದೇರೀತಿ ಕಾಣುತ್ತಿದ್ದರು. ಮನುಷ್ಯರು ಹುಟ್ಟಿನಿಂದ ಯಾವ ಕುಲದವರೇ ಆಗಿದ್ದರೂ ಅವರು ಅನುಸರಿಸುತ್ತಿದ್ದ ಆಚರಣೆಗೆ ಮಹತ್ವವನ್ನು ಕೊಡುತ್ತಿದ್ದರು. ಪ್ರಾಚೀನ ವರ್ಣಾಶ್ರಮ ಪದ್ಧತಿಯನ್ನೂ ಸಂಪ್ರದಾಯವನ್ನೂ ಕಿತ್ತೊಗೆದು ಅಂಗದ ಮೇಲೆ ಲಿಂಗವನ್ನು ಧರಿಸಿದವರನ್ನೆಲ್ಲಾ ಒಂದೇ ಧರ್ಮದವರೆಂದೂ ಒಂದೇಕುಲದವರೆಂದೂ ಪರಿಗಣಿಸಿದರು. ಉಚ್ಚನೀಚ ಎಂಬ ಭಾವನೆಗಳನ್ನು ತೊಡೆದುಹಾಕಿದರು. ಕಾಯಕಕ್ಕೆ ಮಹತ್ವವನ್ನು ಕೊಟ್ಟರು. ಆದುದರಿಂದಲೇ ಅನುಭವ ಮಂಟಪದಲ್ಲಿ ವಿವಿಧ ಕಾಯಕಗಳನ್ನು ಕೈಕೊಂಡಿದ್ದ ಸಾಧಕರನ್ನು ಕಾಣಬಹುದು. ಮಡಿವಾಳ ಮಾಚಯ್ಯ, ಮೇದರ ಕೇತಯ್ಯ, ಅಂಬಿಗರ ಚೌಡಯ್ಯ, ಹಡಪದ ಅಪ್ಪಣ್ಣ, ನುಲಿಯ ಚಂದಯ್ಯ -ಇವರೇ ಮೊದಲಾದವರನ್ನು ಹೆಸರಿಸಬಹುದು. ಇವರೆಲ್ಲರೂ ಯಾವ ಭೇದಭಾವನೆಯೂ ಇಲ್ಲದೆ, ಮೇಲುಕೀಳೆಂಬ ತಾರತಮ್ಯವಿಲ್ಲದೆ ಒಟ್ಟಿಗೆ ಅನುಭವ ಮಂಟಪದಲ್ಲಿ ಕುಳಿತು ತಮಗೆ ತಲೆದೋರುತ್ತಿದ್ದ ಸಂದೇಹಗಳನ್ನು ಮುಕ್ತಕಂಠದಿಂದ ಚರ್ಚಿಸಿ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರು.

ಶ್ರೀಬಸವೇಶ್ವರರು ಸಮಾಜದ ಅರ್ಧಅಂಗವಾದ ಮಹಿಳಾ ವರ್ಗಕ್ಕೂ ಸಮಾನ ಸ್ಥಾನಮಾನಗಳನ್ನು ಕಲ್ಪಿಸಿಕೊಟ್ಟರು. ಸ್ತ್ರೀಯರಿಗೂ ಪುರುಷರಂತೆಯೇ ಸಮಾನತೆಯನ್ನು ಒದಗಿಸಿಕೊಟ್ಟರು. ಅನುಭವ ಮಂಟಪದಲ್ಲಿ ಭಾಗವಹಿಸುತ್ತಿದ್ದ

ಅಕ್ಕಮಹಾದೇವಿ, ಮೋಳಿಗೆ ಮಹಾದೇವಿ, ನೀಲಾಂಬೆ, ಮುಕ್ತಾಯಕ್ಕ –ಇವರೇ ಮೊದಲಾದವರು ಇದಕ್ಕೆ ನಿದರ್ಶನವಾಗಿದ್ದಾರೆ.

ಐಹಿಕ ಬಾಳಿನೊಂದಿಗೆ ಪಾರಮಾರ್ಥಿಕ ಸಾಧನೆಯನ್ನು ಸಮನ್ವಯಗೊಳಿಸುವುದು; ನಡೆನುಡಿಗಳ, ಜ್ಞಾನಕ್ರಿಯೆಗಳ, ಸಮನ್ವಯಮಾಡಿಕೊಂಡವರ ಆದರ್ಶವನ್ನು ಸಮಾಜಕ್ಕೆ ಎತ್ತಿತೋರಿಸುವುದು; ಸಾಂಘಿಕ ಜೀವನದ ಮಹತಿಯನ್ನು ಸಾರುವುದು; ವ್ಯಕ್ತಿಯು ತನಗಾದ ಅನುಭವವನ್ನು ಇತರರೊಂದಿಗೆ ಹಂಚಿಕೊಳ್ಳುವುದು; ಅಂತರಂಗ ಬಹಿರಂಗ ಶುದ್ಧಿಯನ್ನು ಸಾಧಿಸಿ, ದಯಾಮೂಲವಾದ ಧರ್ಮವನ್ನು ಸಾರುವುದು –ಇವು ಅನುಭವ ಮಂಟಪದ ಗುರಿಯಾಗಿದ್ದುವು.

ಶಿವನ ಸಾಕ್ಷಾತ್ಕಾರಕ್ಕೆ ಅನುಭಾವವೇ ಮೂಲ ಎಂಬುದನ್ನು ಶ್ರೀಬಸವೇಶ್ವರರು ಬೋಧಿಸಿದರು. ಅದನ್ನೇ ಅವರು:

"ಅನುಭಾವವಿಲ್ಲದವನ ಭಕ್ತಿ ಅನುವಿಂಗೆಬಾರದು
ಅನುಭಾವವಿಲ್ಲದ ಲಿಂಗ ಸಮರಸಸುಖವನ್ನೀಯದು
ಅನುಭಾವವಿಲ್ಲದ ಪ್ರಸಾದ ಪರಿಣಾಮವ ಕೊಡದು
ಅನುಭಾವವಿಲ್ಲದೆ ಅರಿಯಬಾರದು
ತನ್ನಲ್ಲಿ ತಾ ಸನ್ನಿಹಿತವುಳ್ಳರೆ ಶಿವಶರಣರ ಸಂಗವೇತಕ್ಕೆನಲುಂಟೆ
ಕೂಡಲ ಸಂಗಮದೇವಯ್ಯ ನಿಮ್ಮ ಅನುಭಾವವ
ಮಾತಿನ ಮಥನವೆನ್ನಬಹುದೇ"

ಎಂಬ ವಚನದಲ್ಲಿ ಹೇಳಿದ್ದಾರೆ. ಅನುಭಾವ ಎಂದರೆ ಆಧ್ಯಾತ್ಮಿಕ ವಿಚಾರಗಳ ವಿನಿಮಯ, ಮಥನ. ಚೆನ್ನಬಸವಣ್ಣನವರು ಅನುಭಾವವನ್ನು ಕುರಿತು:

"ಭಕ್ತಿಗೆ ಅನುಭಾವವೇ ಬೀಜ ಕಾಣಿರೋ
ಭಕ್ತಿಗೆ ಅನುಭಾವವೇ ಆಗರ ಕಾಣಿರೋ
ಅನುಭಾವವಿಲ್ಲದವನ ಭಕ್ತಿ ಎಳತಟಗೊಳಿಸಿತ್ತು
ಅನುಭಾವವ ಮಾಡುವಲ್ಲಿ ವಿನಯದಿಂದ ಕೇಳದಿದ್ದಡೆ
ಕೂಡಲ ಚೆನ್ನಸಂಗಯ್ಯ ಘೋರ ನರಕದಲ್ಲಿಕ್ಕದೆ ಬಿಡುವನೆ
..........................................................
ಒಂದು ನಿಮಿಷ ನಿಮ್ಮ ಶರಣರ ಅನುಭಾವ ಸಾಲದೆ"

ಎಂದು ಮುಂತಾಗಿ ಹೇಳಿದ್ದಾರೆ. ಇದರಿಂದ ಅನುಭಾವದ ಮಹತ್ವ ವಿದಿತವಾಗುತ್ತದೆ. ವ್ಯಕ್ತಿ ತನ್ನ ಆತ್ಮೋದ್ಧಾರಕ್ಕೆ ಲೋಕಕಲ್ಯಾಣಕ್ಕೆ ಶಾಸ್ತ್ರಪುರಾಣಾದಿಗಳಲ್ಲಿ ವಿದಿತವಾದ ತತ್ವಗಳಿಗಿಂತಲೂ ಅನುಭಾವಕ್ಕೆ ಪ್ರಾಮುಖ್ಯ ಕೊಡಬೇಕೆಂಬುದನ್ನು ಅನುಭವಮಂಟಪದ ಮೂಲಕ ಶ್ರುತಪಡಿಸಲಾಗುತ್ತಿತ್ತು. ಅನುಭವಮಂಟಪದಲ್ಲಿ ಪ್ರಮುಖರಾಗಿದ್ದ ಅಲ್ಲಮಪ್ರಭು, ಚೆನ್ನಬಸವ, ಸಿದ್ಧರಾಮ, ಮಡಿವಾಳ ಮಾಚಯ್ಯ, ಅಕ್ಕಮಹಾದೇವಿ ಇವರ ಸ್ಥಾನ, ಸಾಧನೆ, ಸಿದ್ಧಿಗಳ ನಿದರ್ಶನಗಳ ಮೂಲಕ ಅನುಭವಮಂಟಪದ ಪ್ರಭಾವಲಯದ ಪರಿಚಯವಾಗುವಂತಿದೆ.

## ಅಲ್ಲಮಪ್ರಭು

ಅನುಭವ ಮಂಟಪದ ಶೂನ್ಯಸಿಂಹಾಸನಾಧೀಶ್ವರನಾಗಿ ವೀರಶೈವ ಧರ್ಮಕ್ಕೆ ಮೂರ್ತಸ್ವರೂಪವನ್ನು ಕೊಟ್ಟವನು ಅಲ್ಲಮಪ್ರಭು. ಲೋಕಹಿತದೃಷ್ಟಿ ಮತ್ತು ಪ್ರಖರವಾದ ವೈರಾಗ್ಯ ಆತನಲ್ಲಿ ಮೇಳವಿಸಿದ್ದವು. ಅಲ್ಲಮಪ್ರಭು ಲೋಕಕಲ್ಯಾಣಾರ್ಥವಾಗಿ ನಾಡಿನಾದ್ಯಂತ ಸಂಚರಿಸಿ ಅಂದಿನ ಪ್ರಮುಖ ಸಾಧಕರನ್ನೆಲ್ಲ ಸಂಧಿಸಿ ಅವರಿಗೆ ಜ್ಞಾನೋಪದೇಶವನ್ನು ಮಾಡಿದ ಕಾರಣಪುರುಷ. ಆತನ ಪ್ರಭಾವಕ್ಕೆ ಒಳಗಾದವರೆಲ್ಲ ಕಾಯದ ಕಳವಳವಳಿದು ಭಾವಶುದ್ಧರಾದರು. ಅನುಭವ ಮಂಟಪದಲ್ಲಿ ತೊಳಗಿ ಬೆಳಗಿದ ಜ್ಯೋತಿ ಬಸವಣ್ಣನವರಾದರೆ ಅಲ್ಲಮಪ್ರಭು ಆ ಜ್ಯೋತಿಯ ಪ್ರಭೆ. ಅಲ್ಲಮಪ್ರಭು ಆಧ್ಯಾತ್ಮದ ಅಂತಸ್ಸಾಧನೆಯಾದರೆ ಬಸವಣ್ಣ ಆ ಅಂತಸ್ಸಾಧನೆಯ ಬಹಿರಂಗಜ್ಯೋತಿ.

ಪರಶಿವನ ನಿಜಸ್ವರೂಪನಾದ ಅಲ್ಲಮಪ್ರಭು ಬನವಾಸಿಯ ಬಳ್ಳಿಗಾವೆಯಲ್ಲಿ ನಿರಹಂಕಾರ ಮತ್ತು ಸುಜ್ಞಾನಿಯರಿಗೆ ಮಗನಾಗಿ ಹುಟ್ಟುವನು. ಬಾಲ್ಯದಲ್ಲಿಯೇ ವೇದಾಗಮ ಪುರಾಣ ಶಾಸ್ತ್ರಾದಿ ಚೌಷಷ್ಟಿ ವಿದ್ಯೆಗಳಲ್ಲಿ ಪಾರಂಗತನಾಗುವನು. ಕ್ರಮೇಣ ವೈರಾಗ್ಯವನ್ನು ತಳೆಯುವನು. ವೈರಾಗ್ಯವನ್ನು ತಳೆದ ಅಲ್ಲಮಪ್ರಭು ಲೋಕಹಿತಾರ್ಥವಾಗಿ ದೇಶಪರ್ಯಟನವನ್ನು ಕೈಕೊಳ್ಳುವನು. ಒಂದೆಡೆ ದಾರಿಯಲ್ಲಿ ಚೆಲುವಾಗಿ ತಳಿದ ಕೆಂದಾವರೆಯ ನೈದಿಲುಗೊಳನ ನಾನಾಪರಿಯ ಹೂಗಿಡು ಲತಾಮಂಟಪದ ಒಂದು ತೋಟವನ್ನು ಕಾಣುವನು. ಆ ತೋಟದ ಒಡೆಯ ಗೊಗ್ಗಯ್ಯನೆಂಬುವನು. ಆತನು ಮಹಾಶಿವಭಕ್ತ. ಲೌಕಿಕವಾಗಿ ಮಾಡುವ ತೋಟದ ಕೆಲಸದಿಂದ ಏನೂ ಪ್ರಯೋಜನವಾಗುವುದಿಲ್ಲ; ನಿಜವಾದ ಸುಖಪ್ರಾಪ್ತಿಯಾಗುವುದಿಲ್ಲ; ಅಂತರಂಗದಲ್ಲಿ ನಿಜವಾದ ತೋಟವನ್ನು ಮಾಡಬೇಕು ಎಂಬುದನ್ನು:

"ತನುವ ತೋಟವ ಮಾಡಿ ಮನವ ಗುದ್ದಲಿ ಮಾಡಿ
ಅಗೆದು ಕಳೆದೆನಯ್ಯ ಭ್ರಾಂತಿನ ಬೇರೊಡೆದು
ಸಂಸಾರದ ಹೆಂಟೆಯ ಬಗಿದು ಬಿತ್ತಿದೆನಯ್ಯ ಬ್ರಹ್ಮಬೀಜವ
ಅಖಂಡ ಮಂಡಲವೆಂಬ ಭಾವಿ, ಪವನವೇ ರಾಟಾಳ
ಸುಷುಮ್ನನಾಳದಿಂದವೆ ಉದಕವ ತಿದ್ದಿ
ಬಸವಗಳೈವರು ಹಸಗೆಡಿಸಿಹರೆಂದು
ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ
ಆವಾಗಳೂ ಈ ತೋಟದೊಳಗೆ ಜಾಗರವಿದ್ದು
ಈ ಸಸಿಯ ಸಲಹಿದೆ ಕಾಣಾ ಗೊಹೇಶ್ವರ"

ಈ ರೀತಿ ಆತನಿಗೆ ಬೋಧಿಸುವನು. ತರುವಾಯ ಅಲ್ಲಿಯೇ ಸಮಾಧಿಸ್ಥನಾಗಿದ್ದ ಅನಿಮಿಷಯ್ಯನೆಂಬ ಶಿವಯೋಗಿಯನ್ನು ಗೊಗ್ಗಯ್ಯನಿಗೆ ತೋರಿಸುವನು. ಅಲ್ಲಮಪ್ರಭು ಅನಿಮಿಷಯೋಗಿಯನ್ನು ಗುರುವಾಗಿ ಸ್ವೀಕರಿಸುವನು. ಗುರುವನ್ನು ಕುರಿತು:

"ನೀನೆನಗೆ ಗುರುವಪ್ಪೊಡೆ ನಾನಿನಗೆ ಶಿಷ್ಯನಪ್ಪೊಡೆ
ಎನ್ನ ಕಾಯದ ಕರ್ಮವ ತೊಡೆದು
ಎನ್ನ ಕರಣಾದಿ ಗುಣಂಗಳ ಕಳೆದು
ನೀನೆನ್ನ ಕಾಯದಲ್ಲಿ ಅಡಗಿ ನೀನೆನ್ನ ಪ್ರಾಣದಲ್ಲಿ ಅಡಗಿ
ನೀನೆನ್ನ ಭಾವದಲ್ಲಿ ಅಡಗಿ ನೀನೆನ್ನ ಕರಸ್ಥಲಕೆ ಬಂದು
ಕಾರುಣ್ಯವ ಮಾಡಾ ಗೊಹೇಶ್ವರಾ"

ಎಂದು ಪ್ರಾರ್ಥಿಸುವನು. ಆಗ ಅನಿಮಿಷಯೋಗಿಯ ಕೈಯಲ್ಲಿದ್ದ ಶಿವಲಿಂಗವೂ ಜೀವಕಳೆಯೂ ಅಲ್ಲಮಪ್ರಭುವನ್ನು ಸೇರುವುವು. ಅದೆಲ್ಲವನ್ನೂ ನೋಡುತ್ತಿದ್ದ ಗೊಗ್ಗಯ್ಯ ಅಲ್ಲಮಪ್ರಭುವಿನ ಮಹತ್ವವನ್ನು ಅರಿತುಕೊಂಡು ಆತನಿಂದ ಉಪದೇಶವನ್ನು ಪಡೆಯುವನು.

ಗೊಗ್ಗಯ್ಯನನ್ನು ಬೀಳ್ಕೊಂಡ ಅಲ್ಲಮಪ್ರಭು ತನ್ನ ಪ್ರಯಾಣವನ್ನು ಮುಂದುವರಿಸಿದನು. ಸೋದರ ಅಜಗಣ್ಣ ಲಿಂಗೈಕ್ಯನಾದುದಕ್ಕೆ ದುಃಖತಪ್ತಳಾಗಿದ್ದ ಮುಕ್ತಾಯಕ್ಕ ಅಲ್ಲಮಪ್ರಭುವನ್ನು ಸಂದರ್ಶಿಸುವಳು. ಅಲ್ಲಮಪ್ರಭು ಆಕೆಗೆ ಜೀವದ ಅನಿತ್ಯತೆಯನ್ನು ಬೋಧಿಸಿ ಪರತತ್ವವನ್ನು ಅರುಹುವನು. "ಶರಣಂಗೆ ಮರಣವಿಲ್ಲ, ಅಳಿವಿಲ್ಲ. ನಿನ್ನ ಸೋದರ ಅಜಗಣ್ಣ ಶಿವನಲ್ಲಿ ಐಕ್ಯನಾಗಿ ಶಾಶ್ವತ ಪದವಿಯನ್ನು ಪಡೆದಿದ್ದಾನೆ. ಆತನು ನಿತ್ಯಾತ್ಮ, ಆತನಿಗೆ ಪುನರ್ಜನ್ಮವಿಲ್ಲ" ಎಂದು ಮುಕ್ತಾಯಕ್ಕನಿಗೆ ತಿಳಿಯಹೇಳಿ ಲಿಂಗೈಕ್ಯದ ಸಾಧನೆಯ ಮಾರ್ಗವನ್ನು ತೋರಿಸುವನು.

ಅದಾದ ಮೇಲೆ ಅಲ್ಲಮಪ್ರಭು ಸೊನ್ನಲಾಪುರಕ್ಕೆ ಹೋಗುವನು. ಅಲ್ಲಿ ಕರ್ಮಯೋಗಿ ಸಿದ್ಧರಾಮ ಕಟ್ಟಿಸುತ್ತಿದ್ದ ಕೆರೆ ದೇವಾಲಯಗಳನ್ನು ನೋಡುವನು. ನಿಷ್ಕಾಮಕರ್ಮದ ರೀತಿಯನ್ನರಿಯದ ಸಿದ್ಧರಾಮನಿಗೆ ಉಪದೇಶ ಮಾಡಬೇಕೆಂದು ಯೋಚಿಸಿ, ಮೊದಲು ಸಿದ್ಧರಾಮನ ಗುಡ್ಡರನ್ನು ಕೆಣಕುವನು. ಕೊನೆಗೆ ಅಲ್ಲಮಪ್ರಭು ಸಿದ್ಧರಾಮರಲ್ಲಿ ಮಾತಿಗೆ ಮಾತು

ಬೆಳೆದು ಸಿದ್ಧರಾಮನು ಸಿಟ್ಟಿನಿಂದ ಅಲ್ಲಮಪ್ರಭುವನ್ನು ಭಸ್ಮಮಾಡಲು ಹಣೆಗಣ್ಣನ್ನು ತೆರೆಯುವನು. ಆತನ ಹಣೆಗಣ್ಣಿನ ಜ್ವಾಲೆ ಅಲ್ಲಮಪ್ರಭುವನ್ನು ಏನೂ ಮಾಡಲಾರದಾಯಿತು. ಆತನು ಆ ಜ್ವಾಲೆಯನ್ನು ಅಂಗಾಲಲ್ಲಿ ಅಡಗಿಸಿ ಕೊಂಡುಬಿಟ್ಟನು. ಸಿದ್ಧರಾಮನಿಗೆ ಆಗ ಜ್ಞಾನೋದಯವಾಯಿತು. ತನ್ನನ್ನು ಪರೀಕ್ಷಿಸುವುದಕ್ಕೆ ಬಂದಿರುವವನು ಸಾಮಾನ್ಯನಲ್ಲವೆಂದೂ ತನ್ನನ್ನು ಉದ್ಧಾರ ಮಾಡಲು ಬಂದ ಗುರುವೆಂದೂ ಅರಿತುಕೊಂಡು ಅಲ್ಲಮಪ್ರಭುವಿಗೆ ನಮಸ್ಕಾರ ಮಾಡುವನು. ಅಲ್ಲಮಪ್ರಭು ಸಿದ್ಧರಾಮನಿಗೆ ಹಿರಿಯರು ಕಿರಿಯರು ಎಂಬ ಭೇದಭಾವವಿಲ್ಲದೆ ಸರ್ವರಲ್ಲಿಯೂ ಸಮತಾಭಾವವನ್ನು ಕಾಣಬೇಕೆಂದೂ, ಲೌಕಿಕವಾದ ಕೀರ್ತಿಪ್ರತಿಷ್ಠೆಗಳಿಂದ ಫಲವಿಲ್ಲವೆಂದೂ ತಿಳಿಯಹೇಳಿ, ಶಕ್ತಿಭಕ್ತಿಗಳ ಸಮನ್ವಯವನ್ನು ಉಪದೇಶ ಮಾಡುವನು. ಆಮೇಲೆ ಆತನನ್ನು ಒಡಗೊಂಡು ಕಲ್ಯಾಣಕ್ಕೆ ಹೊರಡುವನು.

ಕಲ್ಯಾಣದಲ್ಲಿ ಶ್ರೀಬಸವೇಶ್ವರರು ಅನುಭವಮಂಟಪವನ್ನು ಸ್ಥಾಪಿಸಿ ಶಿವಾನುಭವ ಗೋಷ್ಠಿಯನ್ನು ನಡೆಸುತ್ತಿದ್ದುದು ಸರಿಯಷ್ಟೆ. ಸದಾ ಜಂಗಮದಾಸೋಹದಲ್ಲಿಯೇ ನಿರತರಾಗಿರುತ್ತಿದ್ದ ಬಸವಣ್ಣನವರು ತಮ್ಮ ಆಡಳಿತದ ಜತೆಗೆ ಅನುಭವಮಂಟಪದ ಕಾರ್ಯಕಲಾಪಗಳನ್ನೂ ನಿರ್ವಹಿಸಬೇಕಾಗಿತ್ತು. ಬಸವಣ್ಣನವರ ಮುಗ್ಧಸ್ವಭಾವ ಸರಳರೀತಿ ಮುಂತಾದವುಗಳ ಸಂಪೂರ್ಣ ಲಾಭವನ್ನು ಪಡೆದುಕೊಳ್ಳುತ್ತಿದ್ದ ವೇಷಧಾರಿಗಳಾದ ಕೆಲವು ಶರಣರು ಉದರಪೋಷಣೆ ಮಾಡಿಕೊಳ್ಳುತ್ತಿದ್ದಂತೆ ಕಂಡುಬರುತ್ತದೆ. ಅಂತಹ ಕಪಟವೇಷಧಾರಿಗಳನ್ನು ನಿರ್ಮೂಲಮಾಡಿ ನಿಷ್ಪಕ್ಷಪಾತವಾಗಿ ನಿಷ್ಠುರವಾಗಿ ವರ್ತಿಸುವ, ಶಿವಾನುಭವದ ಹಿರಿಮೆಯನ್ನು ಸ್ಥಾಪಿಸುವ, ಅನುಭವ ಮಂಟಪದ ಅಧ್ಯಕ್ಷತೆಯನ್ನು ದಕ್ಷತೆಯಿಂದ ನಿರ್ವಹಿಸುವ ಹಿರಿಯ ಜ್ಞಾನಿಗಳೊಬ್ಬರ ಆಗಮನ ಅಂದು ಅತ್ಯವಶ್ಯವಾಗಿತ್ತು. ಅಂತಹ ಪರ್ವಕಾಲದಲ್ಲಿ ಅಲ್ಲಮಪ್ರಭುಗಳು ಕಲ್ಯಾಣಕ್ಕೆ ಬಂದು ಅನುಭವಮಂಟಪದ ಅಧ್ಯಕ್ಷಸ್ಥಾನವನ್ನು ವಹಿಸಿಕೊಳ್ಳುವರು.

ದೇಶದಾದ್ಯಂತ ಹರಡಿಕೊಂಡಿದ್ದ ಬಸವಣ್ಣನವರ ಭಕ್ತಿಯ ಪ್ರಭಾವ ಅಲ್ಲಮಪ್ರಭುವಿಗೂ ವೇದ್ಯವಾಗಿತ್ತು. ಆದರೆ ಬಸವಣ್ಣನವರಲ್ಲಿ ಹುದುಗಿದ್ದ ಸೂಕ್ಷ್ಮವಾದ ಲೋಪದೋಷಗಳನ್ನು ನಿವಾರಿಸುವ ನಿರ್ದಿಷ್ಟ ಗುರಿಯಿಂದ ಅಲ್ಲಮಪ್ರಭು ಕಲ್ಯಾಣಕ್ಕೆ ಬರುತ್ತಾನೆ. ಬಸವಣ್ಣನವರ ಅಸಾಮಾನ್ಯ ವ್ಯಕ್ತಿತ್ವದಿಂದ ಅಸಂಖ್ಯಾತ ಮಹಾಗಣಂಗಳು ಸಮಾವೇಶಗೊಂಡಿದ್ದ ಕಲ್ಯಾಣ ಅಲ್ಲಮಪ್ರಭುವಿಗೆ ಅವಿಮುಕ್ತಕ್ಷೇತ್ರವಾಗಿ ಕಂಡುಬರುತ್ತದೆ. ಬಸವಣ್ಣನವರು ಕೈಕೊಂಡಿದ್ದ ಸಾಮಾಜಿಕ ಧಾರ್ಮಿಕ ವ್ಯವಸ್ಥೆ ಅಲ್ಲಮಪ್ರಭುವಿಗೆ ಬಹಳ ಮೆಚ್ಚುಗೆಯಾಯಿತು. ಬಸವಣ್ಣನವರ ಮಹಾಮನೆಯನ್ನೂ ಅಲ್ಲಿ ನಡೆಯುತ್ತಿದ್ದ ದಾಸೋಹದ ರೀತಿಯನ್ನೂ ಕಂಡ ಅಲ್ಲಮಪ್ರಭು ಸಿದ್ಧರಾಮನಿಗೆ:

"ಮರ್ತ್ಯಲೋಕದ ಮಹಾಮನೆ ಹಾಳಾಗಿ ಹೋಗಬಾರದೆಂದು
ಕರ್ತನಟ್ಟಿದನಯ್ಯ ಒಬ್ಬ ಶಿವಶರಣನ
ಆ ಶರಣ ಬಂದು ಕಲ್ಯಾಣವೆಂಬ ಶಿವಪುರವ ಕೈಲಾಸವ ಮಾಡಿ
ರುದ್ರಗಣ ಪ್ರಮಥಗಣಂಗಳೆಲ್ಲರ ಹಿಡಿತಂದು
ಅಸಂಖ್ಯಾತರೆಂದು ಹೆಸರಿಟ್ಟು ಕರೆದು, ಭಕ್ತಿಯ ಕುಳಸ್ಥಳವ
ಶ್ರುತದೃಷ್ಟ ಪವಾಡವಂ ಮೆರೆದು ತೋರಿ.
ಜಗವರಿಯೆ ಶಿವಾಚಾರದ ಧ್ವಜವನೆತ್ತಿಸಿ ಮರ್ತ್ಯಲೋಕ
ಶಿವಲೋಕವೆರಡಕ್ಕೆ ನಿಚ್ಚಣಿಗೆಯಾದನು.
ಶಿವಶರಣನ ಮನೆಯೊಳಗಿಪ್ಪ ಶಿವಗಣಂಗಳ ತಿಂಥಿಣಿಯ ಕಂಡು
ಎನ್ನ ಮನ ಉಬ್ಬಿ ಕೊಬ್ಬಿ ಓಲಾಡುತ್ತಿರ್ದೆನಯ್ಯ
ನಮ್ಮ ಗೊಹೇಶ್ವರನ ಶರಣ ಸಂಗನ ಬಸವಣ್ಣನ
ದಾಸೋಹದ ಘನವನೇನೆಂದೆನಬಹುದು ನೋಡಾ ಸಿದ್ಧರಾಮಯ್ಯ"

ಎಂದು ಹೇಳುವನು.

ಬಸವಣ್ಣನವರ ಭಕ್ತಿಯನ್ನು ಪುಟಗೊಳಿಸಲು ಸಿದ್ಧರಾಮನೊಡನೆ ಅಲ್ಲಮಪ್ರಭು ಬಸವಣ್ಣನವರ ಮಹಾಮನೆಗೆ ಬಂದಾಗ ಅವರು ಶಿವಪೂಜೆಯಲ್ಲಿ ನಿಮಗ್ನರಾಗಿರುತ್ತಾರೆ. ಪೂಜೆಯನ್ನು ಮುಗಿಸಿಕೊಂಡು ಬರುವುದಾಗಿ ಹಡಪದ

ಅಪ್ಪಣ್ಣನೊಂದಿಗೆ ಅಲ್ಲಮಪ್ರಭುವಿಗೆ ಹೇಳಿಕಳಿಸುವರು. ಬಸವಣ್ಣನವರ ವರ್ತನೆ ಅಲ್ಲಮಪ್ರಭುವಿಗೆ ಅತೃಪ್ತಿಯನ್ನುಂಟು ಮಾಡುತ್ತದೆ. ಜಂಗಮಸ್ವರೂಪಿಯಾದ ತಾನು ಬಂದು ನಿಂತಿದ್ದರೂ ಲಿಂಗಾರ್ಚನೆಯನ್ನು ಬಿಟ್ಟು ಬಾರದಿರುವ ಬಸವಣ್ಣನ ನಿಲವು ಅಲ್ಲಮಪ್ರಭುವಿಗೆ ಒಪ್ಪಿಗೆಯಾಗಲಿಲ್ಲ. ಕೂಡಲೆ ಅವರು ಅಲ್ಲಿಂದ ಹೊರಡಲು ಅಣಿಯಾಗುವರು. ಆ ಸುದ್ದಿಯನ್ನು ತಿಳಿದ ಬಸವಣ್ಣ ತಮ್ಮ ನಿಲವನ್ನು ಇತರರು ಉದಾಸೀನವೆಂದು ಭಾವಿಸುವಂತಾಯಿತಲ್ಲ ಎಂದು ಮರುಗುವರು. ತಮ್ಮ ಅಪರಾಧದ ಅರಿವುಂಟಾಗಿ ಕೂಡಲೆ ಹೊರಬಂದು "ಕೂಡಲಸಂಗಮದೇವಯ್ಯ, ನಿಮ್ಮ ಶ್ರೀಪಾದಕ್ಕೆ ನಮೋ ನಮೋ" ಎಂದು ಅಲ್ಲಮಪ್ರಭುವಿಗೆ ನಮಸ್ಕರಿಸಿ ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುವರು. ಬಸವಣ್ಣನವರ ಮನೋವೇದನೆ ಅಲ್ಲಮಪ್ರಭುವಿಗೆ ಅರ್ಥವಾಗುತ್ತದೆ. ಆದರೆ ಬಸವಣ್ಣನವರ ಪರಿಶುದ್ಧತೆಯನ್ನು ಪ್ರಖರಗೊಳಿಸುವ ಉದ್ದೇಶದಿಂದ ಅವರಿಗೆ ಹಿತೋಪದೇಶಮಾಡುವನು. ಯಾವ ಕಾರಣದಿಂದಲೂ ಭಕ್ತನ ಅವಧಾನ ತಪ್ಪಬಾರದು ಎಂಬುದನ್ನು ತಿಳಿಸುವನು. ಕೀರ್ತಿಗಾಗಿ ಅನೇಕರು ಆಚರಿಸುತ್ತಿದ್ದ ಬಹಿರಂಗಪೂಜೆ ಕೇವಲ ಆಡಂಬರದ ಭಕ್ತಿಯಾಗುತ್ತಿತ್ತು. ಇಂತಹ ಆಡಂಬರ ಬಸವಣ್ಣನವರಲ್ಲಿ ಇರಬಾರದು ಎಂಬುದನ್ನು ಅಪೇಕ್ಷಿಸಿದ ಅಲ್ಲಮಪ್ರಭು:

"ಸೂಳೆ ಹಲಬರನುಳಿದಳೆಂದು ನಿಂದಿಸುವರಿಲ್ಲ ಕೇಳಾ
ಪತಿವ್ರತೆ ತನ್ನ ಪುರುಷನಲ್ಲದೆ ಮತ್ತೊಬ್ಬನ ಮುಖವ ನೋಡಿದರೆ
ಅವಳ ಚಂಡಾಳಗಿತ್ತಿ ಎಂಬರು ಲೋಕವೆಲ್ಲ
ಕೀರ್ತಿವಾರ್ತೆಗೆ ಮಾಡುವ ಭಕ್ತಿ ತಪ್ಪಿದರೆ
ಅದ ಮನಕ್ಕೆ ತರಲಿಲ್ಲ.
ಸಜ್ಜನ ಸದ್ಭಕ್ತನೆಡಹಿದರೆ ಅದ ಸೈರಿಸಬಾರದು ಕೇಳಾ
ನಮ್ಮ ಗುಹೇಶ್ವರ ಲಿಂಗಕ್ಕೆ ಆದಿಯಿಂದಿತ್ತ.
ನೀನೆ ಭಕ್ತನಾದ ಕಾರಣ ಮನನೊಂದಿತ್ತು ಕಾಣಾ ಸಂಗನಬಸವಣ್ಣ"

ಎಂದು ಕಟುವಾಗಿ ಹೇಳುವನು.

ಅಲ್ಲಮಪ್ರಭುವಿಗೂ ಬಸವಣ್ಣನವರಿಗೂ ಪರಸ್ಪರ ವಾದ, ವಿವಾದ, ಜಿಜ್ಞಾಸೆ, ವಿಚಾರ ವಿನಿಮಯ ನಡೆದ ಮೇಲೆ ಬಸವಣ್ಣನವರು ತಮ್ಮ ತಪ್ಪನ್ನು ಒಪ್ಪಿಕೊಂಡು:

"ಡಂಬು ಡಳುಹು ಎನ್ನದಯ್ಯ ಡಂಬಕ ಮನದವ ನಾನಯ್ಯ
ಎನ್ನಲೇನನರಸುವಿರಿ?
ನಿಮ್ಮ ನಂಬಿಯೂ ನಂಬದ ಡಂಬಕ ನಾನು.
ಹಾವ ತೋರಿ ಹವಿಯ ಬೇಡುವಂತೆ
ಎನ್ನ ಭಕ್ತಿ ಕೂಡಲಸಂಗಮದೇವ"

"ಎನಿಸುಕಾಲ ಕಲ್ಲು ನೀರೊಳಗಿರ್ದರೇನು
ನೆನೆದು ಮೃದುವಾಗಬಲ್ಲುದೇ
ಎನಿಸುಕಾಲ ನಿಮ್ಮ ಪೂಜಿಸಿ ಏವೆನಯ್ಯಾ
ಮನದಲ್ಲಿ ದೃಢವಿಲ್ಲದನ್ನಕ್ಕ
ನಿಧಾನವ ಕಾಯ್ದಿರ್ದ ಬೆಂತರನಂತೆ
ಅದರವಿಧಿಯೆನಗಾಯಿತ್ತು ಕೂಡಲ ಸಂಗಮದೇವಾ"

"ಎನ್ನ ತಪ್ಪು ಅನಂತಕೋಟಿ ನಿಮ್ಮ ಸೈರಣೆಗೆ ಲೆಕ್ಕವಿಲ್ಲಾ
ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ದಿಬ್ಯ
ಕೂಡಲ ಸಂಗಮದೇವಯ್ಯಾ,
ನಿಮ್ಮ ಪ್ರಮಥರ ಮುಂದೆ ಕಿನ್ನರಿ ಬೊಮ್ಮಣ್ಣನೆ ಸಾಕ್ಷಿ"

ಈ ರೀತಿ ಪ್ರಾರ್ಥಿಸಿಕೊಳ್ಳುವರು. ಇಂತಹ ವಚನಗಳಿಂದ ಬಸವಣ್ಣನವರ ಪ್ರಾಂಜಲ ಮನಸ್ಸು ನಿರಹಂಕಾರ ಸ್ಪಷ್ಟವಾಗುತ್ತದೆ. ಮತ್ತೆ ಬಸವಣ್ಣನವರು:

"ಒಲೆಹತ್ತಿಯುರಿದೊಡೆ ನಿಲಬಹುದಲ್ಲದೆ
ಧರೆಹತ್ತಿಯುರಿದೊಡೆ ನಿಲಬಾರದು
ಏರಿ ನೀರುಣ್ಬೊಡೆ, ಬೇಲಿ ಕೆಯ್ಯ ಮೇವೊಡೆ
ನಾರಿ ತನ್ನ ಮನೆಯಲ್ಲಿ ಕಳುವೊಡೆ
ತಾಯ ಮೊಲೆವಾಲು ನಂಜಾಗಿ ಕೊಲುವೊಡೆ
ಇನ್ನಾರಿಗೆ ದೂರುವೆ ಕೂಡಲ ಸಂಗಮದೇವಾ"

"ಎನ್ನ ಗತಿಮತಿ ನೀನೇ ಕಂಡಯ್ಯಾ
ಎನ್ನ ಗುರು ಪರಮಗುರು ನೀನೇ ಕಂಡಯ್ಯಾ
ಎನ್ನಂತರಂಗದ ಜ್ಯೋತಿ ನೀನೇ ಕಂಡಯ್ಯಾ
ಕೂಡಲಸಂಗಮದೇವಾ
ನೀನೆ ಎನಗೆ ಗುರು ನಾನೆ ನಿಮ್ಮ ಶಿಷ್ಯನೆಂಬುದ
ನಿಮ್ಮ ಶರಣ ಸಿದ್ಧರಾಮದೇವರು ಬಲ್ಲರು
ಕೃಪೆಮಾಡಾ ಪ್ರಭುವೇ"

ಎಂದು ಪರಿಪರಿಯಾಗಿ ಹಂಬಲಿಸಿ ಬೇಡಿಕೊಳ್ಳುವರು. ಬಸವಣ್ಣ ತಪ್ಪೊಪ್ಪಿಕೊಂಡದ್ದು ಅಲ್ಲಮಪ್ರಭುವಿಗೆ ಬಹಳ ಮೆಚ್ಚುಗೆಯಾಯಿತು. ತಾನು ಮಾಡಿದ ಪರೀಕ್ಷೆ ಲೌಕಿಕವಾಗಿ ಒರೆಗೆ ತಿಕ್ಕಿ ನೋಡುವುದಕ್ಕಾಗಿಯೇ ಹೊರತು ಮತ್ತೇನೂ ಅಲ್ಲ ಎಂಬುದನ್ನು:

"ಮನವ ನೋಡುವೆನೆಂದು ನಿನ್ನನು ಕನಲಿದೆವು ನಾವಿನ್ನೆಬರ
ನಿನಗಿನಿತು ಮುಳಿಸಿನ ಮೊಳಕೆ ಮೈದೋರಿಸದ ಪರಿ ಲೇಸು
ಘನಮಹಿಮ ನೀನಹುದು ಸಮತೆಯ ನೆನಹು ನೆಲಸಿತು"

ಈ ರೀತಿ ತಿಳಿಸುವನು. ಬಸವಣ್ಣನ ನಡೆನುಡಿಗಳು ರೀತಿನೀತಿಗಳು ಅಲ್ಲಮಪ್ರಭುವಿಗೆ ಅತ್ಯಂತ ಆಪ್ಯಾಯಮಾನವಾದುವು. ಬಸವಣ್ಣ ಅಲ್ಲಮಪ್ರಭುವನ್ನು:

"ಆದಿಯನರುಹಿದ ಅನಾದಿಯ ತೋರಿದ
ಇಹವ ಕೆಡಿಸಿದ ಪರವ ನಿಲಿಸಿದ
ಘನವ ತೋರಿದ ಮನವ ಸರಿಸವಿಟ್ಟ
ಅನುವ ತೋರಿ ಆಯತವ ಮಾಡಿ
ತನುವ ಮರೆಸಿ ಮಹವನರುಪಿದ
ಹಿಂದಣ ಪೂರ್ವಾಶ್ರಯವ ಹಿಂದುಮುಂದು ಮಾಡಿ ತೋರಿ
ಮುಂದಣ ಗತಿಯ ಸಂದೇಹವ ಬಿಡಿಸಿದ
ಕೂಡಲ ಸಂಗಮದೇವರಲ್ಲಿ ಪ್ರಭುದೇವರ
ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು"

ಎಂದು ಕೊಂಡಾಡುವನು.

ಬಸವಣ್ಣನವರ ಸಂಪರ್ಕ ಸಾಹಚರ್ಯೆಗಳನ್ನು ಪಡೆದ ಅಲ್ಲಮಪ್ರಭು:

"ಬಸವಣ್ಣ ನಿನ್ನ ಕಂಡ ಎನ್ನ ತನು ಬಯಲಾಯಿತ್ತು
ಬಸವಣ್ಣ ನಿನ್ನ ಮುಟ್ಟಿ ಮುಟ್ಟಿ ಎನ್ನ ಕ್ರೀ ಬಯಲಾಯಿತ್ತು
ಬಸವಣ್ಣ ನಿನ್ನ ನೆನೆನೆನೆದು ಎನ್ನ ಮನ ಬಯಲಾಯಿತ್ತು
ಬಸವಣ್ಣ ನಿನ್ನ ಮಹಾನುಭಾವವ ಕೇಳಿ ಕೇಳಿ ಎನ್ನ ಭವಂ ನಾಸ್ತಿಯಾಯಿತ್ತು
ನಮ್ಮ ಗೊಹೇಶ್ವರ ಲಿಂಗದಲ್ಲಿ ನೀನಜಾತನೆಂಬುದ

ನೆಲೆಮಾಡಿ ಭವಪಾಶಗಳ ಹರಿದಿಪ್ಪೆಯಾಗಿ
ನಿನ್ನ ಸನ್ನಿಧಿಯಿಂದಾನು ಬದುಕಿದೆನು ಕಾಣಾ ಸಂಗನ ಬಸವಣ್ಣ"

"ಬ ಎಂಬಲ್ಲಿ ಎನ್ನ ಭವ ಹರಿಯಿತ್ತು
ಸ ಎಂಬಲ್ಲಿ ಸರ್ವಜ್ಞನಾದೆನು
ವ ಎಂಬಲ್ಲಿ ವಚಿಸುವರೆ ಚೈತನ್ಯಾತ್ಮಕನಾದೆನು
ಇಂತೀ ಬಸವಾಕ್ಷರತ್ರಯ ಎನ್ನ ಸರ್ವಾಂಗದಲ್ಲಿ
ತೊಳಗಿ ಬೆಳಗುವುದ ಕಂಡು ಆನು ನೀನು
ಬಸವಾ ಬಸವಾ ಎನುತಿರ್ದೆವಯ್ಯಾ ಗೊಹೇಶ್ವರ"

ಈ ರೀತಿ ಬಸವಣ್ಣನವರನ್ನು ಮುಕ್ತಕಂಠದಿಂದ ಸ್ತೋತ್ರ ಮಾಡುವನು. ಬಸವಣ್ಣನವರ ಪೂರ್ವಾಪರವನ್ನೂ ಮಹಿಮೆಯನ್ನೂ ಅಲ್ಲಮಪ್ರಭು ಪರಿಪರಿಯಾಗಿ ಬಣ್ಣಿಸುವನು:

"ಆದಿಲಿಂಗ ನಿಮ್ಮಿಂದೆನಗಾಯಿತ್ತು ಬಸವಣ್ಣ
ಅನಾದಿಯ ಜ್ಞಾನಜಂಗಮ ನಿಮ್ಮ ನೆನೆದರೆ ಸಾಧ್ಯವಾಯಿತ್ತು ಬಸವಣ್ಣ
ನಿಮ್ಮ ಕೃಪೆಯಿಂದ ಸರ್ವಾಂಗಲಿಂಗಿಯಾದ ಬಸವಣ್ಣ
ನಿಮ್ಮ ಕಾರುಣ್ಯದೃಷ್ಟಿಯಿಂದ ಪ್ರಾಣಲಿಂಗ ಸಂಬಂಧಿಯಾದ ಬಸವಣ್ಣ
ನಿಮ್ಮ ಸದ್ಬೋಧೆಯಿಂದ ಪರಮ ಜಂಗಮವಾದೆ ಬಸವಣ್ಣ
ಇಂತೀ ಮೊದಲಾದ ಸರ್ವಾಚಾರ ಸಂಪತ್ತು
ನೀನವಗ್ರಹಿಸಿ ಕೊಟ್ಟೆಯೆಂಬುದ ನಿಮ್ಮ ಪ್ರಮಥರೆಲ್ಲರೂ ಬಲ್ಲರು
ನಮ್ಮ ಗೊಹೇಶ್ವರ ಲಿಂಗವು ಸಾಕ್ಷಿಯಾಗಿ
ನಾ ನಿಮ್ಮ ಕರುಣದ ಶಿಶು ಕಾಣಾ ಸಂಗನಬಸವಣ್ಣ"

ಎಂಬ ವಚನದಲ್ಲಿ ಅಲ್ಲಮಪ್ರಭು ಬಸವಣ್ಣನ ಹಿರಿಮೆಯನ್ನು ಸ್ಪಷ್ಟಗೊಳಿಸಿದ್ದಾನೆ.

## ಚೆನ್ನಬಸವಣ್ಣ

ಭಕ್ತಿಗೆ ಬಸವಣ್ಣ ವೈರಾಗ್ಯಕ್ಕೆ ಅಲ್ಲಮಪ್ರಭು ಹೇಗೆ ಪ್ರಸಿದ್ಧರೋ ಹಾಗೆ ಜ್ಞಾನಕ್ಕೆ ಚೆನ್ನಬಸವಣ್ಣ ಪ್ರಸಿದ್ಧ. ಅನುಭವ ಮಂಟಪದ ಸ್ಥಾಪನೆ ಬಸವಣ್ಣನಿಂದಾದರೆ ಅದರ ವ್ಯವಸ್ಥೆ ಮೇಲ್ವಿಚಾರಣೆ ಚೆನ್ನಬಸವಣ್ಣನಿಂದಾಯಿತು. ಬಸವಣ್ಣ ಚೆನ್ನಬಸವಣ್ಣ ಅಲ್ಲಮಪ್ರಭು ಇವರು ಮೂವರೂ ಅನುಭವಮಂಟಪದ ತ್ರಿಮೂರ್ತಿಗಳು; ಭಕ್ತಿಜ್ಞಾನ ವೈರಾಗ್ಯಗಳ ತ್ರಿವೇಣೀಸಂಗಮ. ಈ ಸಂಗಮದಲ್ಲಿ ಮಿಂದ ಶರಣರೆಲ್ಲ ಪುನೀತರಾದರು; ಭವಬಂಧನವನ್ನು ಪರಿಹರಿಸಿಕೊಂಡರು. ಚೆನ್ನಬಸವಣ್ಣ ಬಸವಣ್ಣನಿಗಿಂತ ವಯಸ್ಸಿನಲ್ಲಿ ಕಿರಿಯ. ಆದರೆ ಆತನ ಜ್ಞಾನದ ಹಂತ ಕಿರಿದಾಗಿರಲಿಲ್ಲ. ಚೆನ್ನಬಸವಣ್ಣನನ್ನು ಷಟ್ಸ್ಥಲ ಸಾರ್ವಭೌಮ ಎಂದು ಕರೆಯುತ್ತಾರೆ. ವೀರಶೈವ ಧರ್ಮದ ಪ್ರಕ್ರಿಯೆಗಳನ್ನು ಅಧಿಕೃತವಾಗಿ ಆಚರಣೆಗೆ ತಂದವನು ಆತ. ಆದುದರಿಂದಲೇ ಈ ಷಟ್ಸ್ಥಲಜ್ಞಾನಿ ಚೆನ್ನಬಸವಣ್ಣನಿಗೆ ಅನುಭವಮಂಟಪದಲ್ಲಿ ಹಿರಿದಾದ ಸ್ಥಾನವಿತ್ತು. ಆತನು ದೀಕ್ಷಾಗುರು. ಕರ್ಮಯೋಗಿ ಸಿದ್ಧರಾಮನಿಗೆ ಅಲ್ಲಮಪ್ರಭು ಚೆನ್ನಬಸವಣ್ಣನಿಂದ ದೀಕ್ಷೆಯನ್ನು ಕೊಡಿಸುವನು. ಇದರಿಂದ ಚೆನ್ನಬಸವಣ್ಣನ ಹಿರಿಮೆ ವ್ಯಕ್ತವಾಗುತ್ತದೆ.

ಚೆನ್ನಬಸವಣ್ಣ ಬಸವಣ್ಣನವರ ಹಿರಿಯ ಸೋದರಿಯಾದ ಅಕ್ಕನಾಗಮ್ಮನವರ ಸುಪುತ್ರ; ಬಸವಣ್ಣನವರ ಸೋದರಳಿಯ. ಬಸವಣ್ಣ ಕಲ್ಯಾಣಕ್ಕೆ ಹೋದಾಗ ಅಕ್ಕನಾಗಮ್ಮನೂ ಅಲ್ಲಿಗೆ ಹೋಗುವಳು. ಬಸವಣ್ಣನವರು ಕೈಕೊಳ್ಳುತ್ತಿದ್ದ ಸೇವಾಕಾರ್ಯಗಳಲ್ಲಿ ನೆರವಾಗುತ್ತಿದ್ದಳು. ಚೆನ್ನಬಸವಣ್ಣ ಬಾಲ್ಯದಲ್ಲಿಯೇ ವಿದ್ಯಾಭ್ಯಾಸವನ್ನು ಮುಗಿಸಿ ವೀರಶೈವ ಧರ್ಮದಲ್ಲಿ ಪರಿಣತನಾಗುವನು. ಆ ಧರ್ಮದ ಬಗೆಗೆ ಆತನದು ಅಧಿಕಾರವಾಣಿಯಾಗುವುದು. ಬಸವಣ್ಣ ಚೆನ್ನಬಸವಣ್ಣನಿಗೆ ಶಿಕ್ಷಾಗುರು, ರಕ್ಷಾಗುರು. ಅದನ್ನು ಚೆನ್ನಬಸವಣ್ಣ:

"ಧರೆಯಾಕಾಶವಿಲ್ಲದಂದು ಅನಲ ಪವನ ಜಲ ಕೂರ್ಮರಿಲ್ಲದಂದು
ಚಂದ್ರಸೂರ್ಯರೆಂಬವರು ಕಳೆದೋರದಂದು
ನಿತ್ಯ ನಿಜಲಿಂಗವ ಬಲ್ಲವರಾರಯ್ಯ ನೀವಲ್ಲದೆ
ಮಹಾಘನಕ್ಕೆ ಘನವಾಗಿ ಅಗಮ್ಯಸ್ಥಲದಲ್ಲಿ ನಿಂದು
ಭರಿತರಾಗಿರಬಲ್ಲವರಾರಯ್ಯ ನೀವಲ್ಲದೆ
ನಿಮ್ಮ ಒಕ್ಕುಮಿಕ್ಕ ಶೇಷಪ್ರಸಾದದ ಕಾರುಣ್ಯದ ಶಿಶುವಾಗಿ
ಒಡಲೊಳಗೆ ಇದ್ದಲ್ಲಿ ವಿಭೂತಿಪಟ್ಟವ ಕಟ್ಟಿ
ಹಸ್ತಮಸ್ತಕ ಸಂಯೋಗವ ಮಾಡಿ
ಎನ್ನನುಳುಹಿದರಾರಯ್ಯ ನೀವಲ್ಲದೆ
ಕೂಡಲ ಚೆನ್ನಸಂಗಮ ದೇವರ ಸಾಕ್ಷಿಯಾಗಿ
ನಾನು ನಿಮ್ಮ ಕರುಣದ ಕಂದನೆಂಬುದ
ಮೂರುಲೋಕಬಲ್ಲುದು ಕಾಣಾ ಸಂಗಮ ಬಸವಣ್ಣ"

ಈ ವಚನದಲ್ಲಿ ಸ್ಪಷ್ಟಪಡಿಸಿದ್ದಾನೆ.

ಚೆನ್ನಬಸವಣ್ಣ ಬಸವಣ್ಣನವರನ್ನು ಉಪದೇಶ ಮಾಡಬೇಕೆಂದು ಪ್ರಾರ್ಥಿಸಿಕೊಂಡಾಗ:

"ಹೋಹೋ ನಾನೊಬ್ಬರಿಗೆಯಂ ಉಪದೇಶಮಾಡಲಮ್ಮೆನು
ಮುನ್ನಲಾದವರು ತಮ್ಮಿಂದ ತಾವಾದರು
ಅವರೆಲ್ಲರು ನಿಜಲಿಂಗೈಕ್ಯರು ನಾನೇನುವ ಮಾಡಿತಿಲ್ಲ
ತತ್ತ್ವವ ಹಿಡಿದವರಿಗೆ ತೊತ್ತಾಗಿ ನಡೆವೆನು
ಅಮರಗಣಂಗಳು ಸಾಕ್ಷಿಯಾಗಿ ಕೂಡಲಸಂಗಮದೇವರ ಮುಂದ
ಭಾಷೆ ಪ್ರಸಾದವನಿಕ್ಕಲಮ್ಮೆನಯ್ಯ ಚೆನ್ನಬಸವಣ್ಣ"

ಎಂದು ಉತ್ತರ ಕೊಡುವರು. ಅದನ್ನು ಕೇಳಿದ ಚೆನ್ನಬಸವಣ್ಣ "ನಿಮ್ಮ ಕರುಣದಿಂದ ಅನುಗ್ರಹವನ್ನು ಪಡೆಯುತ್ತೇನೆ. ಅನಾದಿಯಿಂದ ನಾನು ನಿಮ್ಮ ಶಿಷ್ಯ. ನಿಮ್ಮ ತೊತ್ತಿನ ತೊತ್ತು" ಎಂದು ಬಿನ್ನೈಸಿಕೊಳ್ಳುವನು. ಆಗ ಬಸವಣ್ಣ:

"ಆದಿ ಅನಾದಿಯಿಂದತತ್ತ ಮುನ್ನ ಲಿಂಗಜಂಗಮವೆಂಬುದನಾರು
ಬಲ್ಲವರಿಲ್ಲವೆಂದು ಇದರ ಸಕೀಲ ಸಂಬಂಧವ ತಿಳುಹಲೆಂದು
ಮರ್ತ್ಯಕ್ಕೆ ಕಳುಹಿದನು ಶಶಿಧರನು.
ಅಂಗದ ಮೇಲೆ ಲಿಂಗವುಳ್ಳುದೆಲ್ಲವು
ಸಂಗಮನಾಥನಲ್ಲದೆ ಮತ್ತಾರನು ಕಾಣೆ
ಶಿಷ್ಯಂಗೆ ಗುರು ಉಪದೇಶವ ಮಾಡಬೇಕಲ್ಲದೆ
ಗುರುವಿಂಗೆ ಶಿಷ್ಯನನುಗ್ರಹವ ಮಾಡಿದ ಠಾವುಂಟೆ?
ಎನ್ನ ಅರಿವಿನ ಆದಿಗೆ ನೀನೆ ಕರ್ತನೆಂದು ನಾನಿರುತ್ತಿರಲು
ನಿನಗೆ ನಾನಿನ್ನು ಅನುಗ್ರಹವಮಾಡುವ ಪರಿ ಎಂತಯ್ಯ
ಕೂಡಲಸಂಗಮದೇವರ ಸ್ವರೂಪೆಂದು ನಿನ್ನ ಕಂಡಿಪ್ಪೆ
ಕಾಣಾ ಚೆನ್ನಬಸವಣ್ಣ"

"ಗುರುವಿಂಗೆ ನೀನೆ ಕರ್ತ ಜಂಗಮಕ್ಕೆ ನೀನೆ ಕರ್ತ
ಪ್ರಸಾದಕ್ಕೆ ನೀನೆ ಕರ್ತ ಉಪದೇಶಕ್ಕೆ ನೀನೆ ಕರ್ತ
ಕೂಡಲ ಸಂಗಮದೇವರು ಸಾಕ್ಷಿಯಾಗಿ
ಎನಗೆಯೂ ನೀನೆ ಕರ್ತನಾದ ಕಾರಣ
ನಾನು ಬೇಕೆನಲಮ್ಮೆ ಬೇಡಾ ಎನಲಮ್ಮೆನು
ಕಾಣಾ ಚೆನ್ನಬಸವಣ್ಣ"

ಎಂದು ಚೆನ್ನಬಸವಣ್ಣನ ಮಹತ್ತನ್ನು ಕೊಂಡಾಡಿ ಆತನಿಗೆ ಲಿಂಗಾಂಗ ಸಾಮರಸ್ಯದ ಭೇದವನ್ನರುಹುವನು.

ಬಸವಣ್ಣನವರಂತೆ ಚೆನ್ನಬಸವಣ್ಣ ಕೇವಲ ಭಕ್ತಿಯಲ್ಲಿಯೇ ಮುಗ್ಧನಲ್ಲ. ಆತನು ಲಾಂಛನಧಾರಿಗಳನ್ನೆಲ್ಲ ಶಿವಶರಣರೆಂದು ನಂಬುವುದಿಲ್ಲ. ಲಿಂಗಧಾರಿಗಳನ್ನೆಲ್ಲ ನೆಚ್ಚುವುದಿಲ್ಲ:

"ಅಂಗದ ಮೇಲೆ ಲಿಂಗವುಳ್ಳುದೆಲ್ಲಾ ಸಂಗಮನಾಥನೆಂಬ ಭಾವ
ಬಸವಣ್ಣಂಗಾಯಿತಲ್ಲದೆ ಎನಗೆ ಆ ಭಾವವಿಲ್ಲ ನೋಡಾ
ಲಿಂಗೈಕ್ಯ ಶರಣರ ಕಂಡಡೆ ನಂಬಿ ನಚ್ಚಿ
ಅವರ ಪಾದಕ್ಕೆರಗುವುದೆನ್ನ ಮನವು
ಅವರ ಕಂಡಡೆ ಕರುಣಾಮೃತ ಸುರಿವುದೆನಗೆ
ಅವರ ಪಾದಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವ
ಮಾಡುವುದೆನ್ನ ಮನವು ಕೂಡಲ ಚೆನ್ನಸಂಗಮದೇವಾ
ನಿಮ್ಮ ಪ್ರಭುವೆಂಬ ಜಂಗಮವ ಕಂಡು
ಪೂಜಿಸಿ ಪೂಜಿಸಿ ದಣಿಯದೆನ್ನ ಮನವು"

ಎಂದು ವಿವರಿಸಿದ್ದಾನೆ. ಬರಿಯ ಬೋಳುಗಳು ಜಡಜೀವಿಗಳು ವೇಷಧಾರಿಗಳು ಜಂಗಮವಲ್ಲ. ನಿಜವಾದ ಜಂಗಮರು ಹೀಗಿರಬೇಕು ಎನ್ನುತ್ತಾನೆ ಚೆನ್ನಬಸವಣ್ಣ:

"....ನಿರ್ಗಮನವೆ ಜಂಗಮ, ನಿಸ್ಸೀಮವೆ ಜಂಗಮ
ನಿರ್ದೇಹಿಯೆ ಜಂಗಮ ನಿಜೈಕ್ಯವೆ ಜಂಗಮ
ಇಂಥ ಜಂಗಮದ ಸುಳುಹ ಕಾಣದೆ
ಕೂಡಲ ಚೆನ್ನಸಂಗಮದೇವ ತಾನೆ ಜಂಗಮವಾದ"

ಚೆನ್ನಬಸವಣ್ಣ ಆಚಾರವಿಚಾರಗಳ ಸಮನ್ವಯವನ್ನು ಸಾಧಿಸಬೇಕೆಂದು ಹೇಳಿದ್ದಾನೆ. ಷಟ್ಸ್ಥಲಗಳಲ್ಲಿ ಪ್ರಸಾದಿ ಸ್ಥಲಕ್ಕೆ ಅತ್ಯಂತ ಮಹತ್ವವನ್ನು ಕೊಟ್ಟಿದ್ದಾನೆ. ಭಕ್ತ ಕೊಳ್ಳುವುದೆಲ್ಲ ಶಿವನ ಪ್ರಸಾದ. ಅವನು ಕೇವಲ ನಿಮಿತ್ತಮಾತ್ರ. ಇಂತಹ ಅಚ್ಚಪ್ರಸಾದಿ:

"ತನುಮುಟ್ಟದ ಮುನ್ನ ಲಿಂಗಾರ್ಪಿತವ ಮಾಡಬೇಕು
ಶ್ರೋತ್ರ ನೇತ್ರ ಘ್ರಾಣ ಜಿಹ್ವೆ ತ್ವಕ್ಕು ಮುಟ್ಟದ ಮುನ್ನ
ಲಿಂಗಾರ್ಪಿತವ ಮಾಡಬೇಕು.
ಕೂಡಲ ಚೆನ್ನಸಂಗಯ್ಯನಲ್ಲಿ ಪ್ರಸಾದಿಯಾದಡೆ
....ಬಂದ ಪದಾರ್ಥವ ಕೂಡಲ ಚೆನ್ನಸಂಗಯ್ಯಂಗೆ
ಅರ್ಪಿಸಿಕೊಳ್ಳಬಲ್ಲಾತನೇ ಪ್ರಸಾದಿ"

ಹೀಗಿರಬೇಕು ಎಂದು ವಿವರಿಸಿದ್ದಾನೆ.

ಕರ್ಮಯೋಗಿ ಸಿದ್ಧರಾಮನಿಗೆ ದೀಕ್ಷೆಯನ್ನು ಕೊಟ್ಟದ್ದು ಚೆನ್ನಬಸವಣ್ಣ ಮಾಡಿದ ಮಹತ್ಕಾರ್ಯ. ಅಲ್ಲಮಪ್ರಭು ಸಿದ್ಧರಾಮನನ್ನು ಸೊನ್ನಲಿಗೆಯಿಂದ ತಮ್ಮೊಡನೆ ಕಲ್ಯಾಣಕ್ಕೆ ಕರೆತಂದುದು ಸರಿಯಷ್ಟೆ. ಅನುಭವ ಮಂಟಪದಲ್ಲಿ ಸಿದ್ಧರಾಮನ ದೀಕ್ಷೆಯ ಬಗ್ಗೆ ಸಾಕಷ್ಟು ಜಿಜ್ಞಾಸೆ ನಡೆಯಿತು. ಕೊನೆಗೆ ಅಲ್ಲಮಪ್ರಭು ಸಿದ್ಧರಾಮನಿಗೆ ದೀಕ್ಷೆಯನ್ನು ಕೊಡುವಂತೆ ಚೆನ್ನಬಸವಣ್ಣನಿಗೆ ವಿಜ್ಞಾಪಿಸಿಕೊಳ್ಳುವನು. ಅದರಂತೆ ಚೆನ್ನಬಸವಣ್ಣ ಸಿದ್ಧರಾಮನಿಗೆ ಕಾಯ ಪ್ರಾಣ ಮನವೆಂಬ ತ್ರಿವಿಧದಲ್ಲಿ ಇಪ್ಪತ್ತೊಂದು ದೀಕ್ಷೆಯನ್ನೂ ತ್ರಿವಿಧ ಲಿಂಗಧಾರಣೆಯನ್ನೂ ಮಾಡಿಸುವನು. ಪರಮಾನಂದವನ್ನು ಹೊಂದಿದ ಸಿದ್ಧರಾಮ:

"...ಆನು ಚೆನ್ನಬಸವಣ್ಣನ ಕರುಣದಿಂದ
ಅಭ್ಯಾಸಯೋಗವನತಿಗಳೆದು ಶಿವಯೋಗದಲ್ಲಿ ನಿತ್ಯನಾಗಿ
ಭಕ್ತಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನೆಂಬ
ಷಡುಸ್ಥಲಕ್ಕಧಿಕಾರಿಯಾದೆ ನಿನ್ನವರ ಸಲುಗೆಗೆ ಸಂದೆ
ಚೆನ್ನಬಸವಣ್ಣನ ಕೃಪೆ ಎನ್ನನಿಂತು ಮಾಡಿತ್ತು"

"ಶುದ್ಧವನರಿದೆ ಚೆನ್ನಬಸವಣ್ಣ ನಿಮ್ಮಿಂದ
ಸಿದ್ಧವನರಿದೆ ಚೆನ್ನಬಸವಣ್ಣ ನಿಮ್ಮಿಂದ
ಪ್ರಸಿದ್ಧವನರಿದೆ ಚೆನ್ನಬಸವಣ್ಣ ನಿಮ್ಮಿಂದ
ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಚೆನ್ನಬಸವಣ್ಣ ಗುರುವಾಗಿ ಬಂದು
ಎನ್ನ ಜನ್ಮಕರ್ಮವ ನಿವೃತ್ತಿಯ ಮಾಡಿದನಯ್ಯ"

ಎಂದು ಹೇಳಿ ಚೆನ್ನಬಸವಣ್ಣನ ಶ್ರೀಪಾದಗಳಿಗೆ ನಮೋ ನಮೋ ಎಂದು ನಮಸ್ಕರಿಸುವನು.

ಬಸವಣ್ಣ ಚೆನ್ನಬಸವಣ್ಣನ ಬಗೆಗೆ ಹೇಳಿದ ಮಾತುಗಳು ಹೀಗಿವೆ:

"ಎನ್ನ ಕಾಯದ ಕತ್ತಲೆ ಹಿಂಗಿತ್ತು ಚೆನ್ನಬಸವಣ್ಣ
ಇಂದಿನಲ್ಲಿ ಎನ್ನ ತನು ಮನ ಧನ ಲೋಭವಳಿದು ತಲೆವೆಳಗಾಯಿತ್ತು.
ಇಂದಿನಲ್ಲಿ ಎನ್ನನೆಡೆಗೊಂಡ ಅಹಂಕಾರ ನಿರ್ವಯಲಾಯಿತ್ತು.
ಇಂದಿನಲ್ಲಿ ಕೂಡಲಸಂಗಮದೇವರ ತೃಪ್ತಿಯ ತೆರನ
ನೀನು ತೋರಿದೆಯಾಗಿ ನಾನು ಬದುಕಿದೆನು ಕಾಣಾ ಚೆನ್ನಬಸವಣ್ಣ"

ಹೀಗೆಯೇ ಅನುಭವಮಂಟಪದಲ್ಲಿದ್ದ ಶಿವಶರಣರೆಲ್ಲರೂ ಚೆನ್ನಬಸವಣ್ಣನ ಮಹಿಮೆಯನ್ನು ಕೊಂಡಾಡಿದ್ದಾರೆ. ಇಂತಹ ಚೆನ್ನಬಸವಣ್ಣ ಬಸವಣ್ಣನನ್ನು ಪೂಜ್ಯನೆಂದು ಹಿರಿಯನೆಂದು ಗುರುವೆಂದು ಗೌರವಿಸಿದ್ದಾನೆ.

ಚೆನ್ನಬಸವಣ್ಣನ ಜೀವನಚರಿತ್ರೆಯಲ್ಲಿ ಯಾವ ಪವಾಡಗಳೂ ಕಂಡುಬರುವುದಿಲ್ಲ. ಆತನು ಜನರಿಗೆ ಧರ್ಮಬೋಧೆಯನ್ನು ಮಾಡಿ ವಚನಧರ್ಮದ ಮರ್ಮವನ್ನು ತಿಳಿಸಿ ಸಮಾಜವನ್ನು ಉದ್ಧರಿಸಿದನು. ಯಾವುದರಲ್ಲಿಯೂ ದೈನ್ಯವೃತ್ತಿಯನ್ನು ತೋರುವುದು ಆತನ ಸ್ವಭಾವವಾಗಿರಲಿಲ್ಲ. ಎಲ್ಲವನ್ನೂ ಅಧಿಕಾರವಾಣಿಯಿಂದ ಹೇಳುವುದು ಆತನ ಸಂಪ್ರದಾಯವಾಗಿತ್ತು. ವೀರಶೈವಧರ್ಮದ ಜೀವನಾಡಿಯಾದ ಷಟ್ಸ್ಥಲ ಸಿದ್ಧಾಂತವನ್ನು ಕರಗತ ಮಾಡಿಕೊಂಡು, ಅದಕ್ಕೆ ಭದ್ರವಾದ ಬುನಾದಿಯನ್ನು ಹಾಕಿ ಅದನ್ನು ಜನತೆಗೆ ಉಪದೇಶಿಸಿದವನು ಚೆನ್ನಬಸವಣ್ಣ. ಅನುಭವ ಮಂಟಪದಲ್ಲಿ ಧರ್ಮಪ್ರಚಾರ ಕಾರ್ಯವನ್ನೂ ಸಿದ್ಧಾಂತ ಪ್ರತಿಪಾದನೆಯ ಕಾರ್ಯವನ್ನೂ ಅತ್ಯಂತ ಪ್ರಭಾವಯುತವಾಗಿ ಮಾಡಿದವನು ಆತ. ಲೌಕಿಕ ಪಾರಮಾರ್ಥಿಕಗಳೆರಡರಲ್ಲೂ ಸರ್ವಸಮಾನತೆಯಿಂದ ಇರಬೇಕೆಂದು ಒತ್ತಿಹೇಳಿ, ಕಾಯಕ ಮಹತ್ವವನ್ನು ಸಾರಿದನು. ಅಂದಿನ ಸಮಾಜರಚನೆಯ ಕಾರ್ಯದಲ್ಲಿ ಚೆನ್ನಬಸವಣ್ಣ ಮಾಡಿದ ಕಾರ್ಯ ಅದ್ಭುತವಾದುದು. ಧರ್ಮದ ಗೂಢ ಗಹನ ವಿಚಾರಗಳನ್ನು ಸರಳವಾಗಿ ಸುಲಭವಾಗಿ ಮನಮುಟ್ಟುವಂತೆ ಜನತೆಗೆ ಬೋಧಿಸಿದ ಮಹಿಮಾನ್ವಿತ ಚೆನ್ನಬಸವಣ್ಣ. ಭಕ್ತಿಯ ಭರವಸದಲ್ಲಿ ಮೈಮರೆಯುತ್ತಿದ್ದ ಬಸವಣ್ಣನವರನ್ನು ಎಚ್ಚರಿಸಿ ಅವರಿಗೆ ಸಮಯೋಚಿತವಾದ ತಿಳುವಳಿಕೆಯನ್ನು ಕೊಡುತ್ತಿದ್ದನು. ಬಸವಣ್ಣ ಚೆನ್ನಬಸವಣ್ಣನವರ ವ್ಯಕ್ತಿತ್ವದ ಪೂರಕ ಅಂಶಗಳಿಂದಾಗಿ ಅನುಭವಮಂಟಪಕ್ಕೆ ಕಳೆಕಟ್ಟಿದಂತಾಯಿತು.

## ಸಿದ್ಧರಾಮ

ಅನುಭವ ಮಂಟಪದ ಪ್ರಭಾವಲಯದ ಪರಿಸರದಲ್ಲಿ ಕಾಣಿಸಿಕೊಳ್ಳುವ ಮಹಾವ್ಯಕ್ತಿ ಸಿದ್ಧರಾಮ. 'ಸಾಕಾರನಿಷ್ಠೆ ಭೂತಂಗಳೊಳಗನುಕಂಪೆ ತಾನೆ ಪರಬೊಮ್ಮ' ಎಂಬ ಸೂತ್ರವನ್ನು ಹಿಡಿದು ಸಕಲ ಜೀವಾವಳಿಗೆ ಲೇಸನೇ ಬಯಸಿದನು. ತನ್ನ ಜೀವಮಾನವನ್ನೆಲ್ಲಾ ಸಮಾಜೋದ್ಧಾರ ಕಾರ್ಯಕ್ಕಾಗಿಯೇ ಮೀಸಲಾಗಿರಿಸಿ ಕರ್ಮಯೋಗಿ ಎನಿಸಿಕೊಂಡ ಕಾರಣಿಕನಾದ ಸಿದ್ಧರಾಮ ಜನತೆಯನ್ನು ಉದ್ಧರಿಸಿ ಮುಕ್ತಿಯ ಪಥವನ್ನು ತೋರಿದ್ದಾನೆ. ಆತನ ವಚನಗಳು ಆತ್ಮದ ಪರಿಶುದ್ಧತೆಯನ್ನೂ ಕಾಯಕ ಮಹತ್ವವನ್ನೂ ಆಚಾರವಿಚಾರಗಳನ್ನೂ ವ್ಯಕ್ತಪಡಿಸುತ್ತವೆ.

ಸೊನ್ನಲಿಗೆಯಲ್ಲಿದ್ದ ಮುದ್ದುಗೌಡ ಮತ್ತು ಸುಗ್ಗವ್ವೆಯರಿಗೆ ಸಿದ್ಧರಾಮ ಮಗನಾಗಿ ಹುಟ್ಟುವನು. ಬಾಲ್ಯದಿಂದಲೂ ಶ್ರೀಶೈಲದ ಚೆನ್ನಮಲ್ಲಿಕಾರ್ಜುನನಲ್ಲಿಯೇ ಮನನಟ್ಟಿದ್ದ ಸಿದ್ಧರಾಮ ಅಲೌಕಿಕ ಪ್ರವೃತ್ತಿಯುಳ್ಳವನಾಗಿದ್ದನು. ಸೊನ್ನಲಿಗೆಯಲ್ಲಿ

ಪಶುಪಕ್ಷಿ ಕ್ರಿಮಿಕೀಟಾಳಿಗಳು ನೀರ್ಗುಡಿಯೆ ಭವವಳಿವಂತು ಕೆರೆಕಟ್ಟೆ ಭಾವಿಗಳನ್ನು ಅನ್ನಸತ್ರ ಅರವಟ್ಟಿಗೆಗಳನ್ನು ನಿರ್ಮಿಸಿ, ಭೂವಳೆಯದೊಳಗುಳ್ಳ ಸರ್ವಜೀವಾವಳಿಗಳ ಕ್ಷೇಮಚಿಂತನೆ ಮಾಡುತ್ತ ಕರ್ಮಯೋಗಿಯಂತಿದ್ದನು. ಆದರೆ ಈ ಕರ್ಮದ ಭರದಲ್ಲಿ ಅಮೂಲ್ಯವಾದ ಸಂಗತಿಯನ್ನೇ ಮರೆತಿದ್ದನು. ಸಾಕಾರನಿಷ್ಠೆ ಭೂತದಯೆಗಳು ಉತ್ಕೃಷ್ಟವೆಂಬುದೇನೋ ಸರಿ. ಆದರೆ ಅದಕ್ಕೂ ಮೇಲಿನ ಒಂದು ಗತಿಯುಂಟು ಎಂಬ ಅರಿವನ್ನು ಆತನಿಗೆ ಮಾಡಿಕೊಡಬೇಕಾದ ಆವಶ್ಯಕತೆಯಿತ್ತು. ಅಂತಹ ಸಂದರ್ಭದಲ್ಲಿ ಅಲ್ಲಮಪ್ರಭು ಸಿದ್ಧರಾಮನಲ್ಲಿಗೆ ಬರುತ್ತಾನೆ.

ಬೃಹತ್ತಟಾಕ ನಿರ್ಮಾಣಕಾರ್ಯದಲ್ಲಿ ನಿರತನಾಗಿದ್ದ ಸಿದ್ಧರಾಮನಿಗೂ ಅಲ್ಲಮಪ್ರಭುವಿಗೂ ವಾದವಿವಾದಗಳು ನಡೆದು ಅಲ್ಲಮನ ಮಹತ್ವವನ್ನರಿಯದ ಸಿದ್ಧರಾಮ ತನ್ನ ಹಣೆಗಣ್ಣನ್ನು ತೆರೆಯುವನು. ಹಣೆಗಣ್ಣಿನಿಂದ ಬಂದ ಉರಿಯನ್ನು ಅಲ್ಲಮಪ್ರಭು ತನ್ನ ಅಂಗಾಲಿನಲ್ಲಿ ಅಡಗಿಸಿಕೊಂಡದ್ದನ್ನು ನೋಡಿ ಸಿದ್ಧರಾಮನಿಗೆ ಆತನ ಮಹತ್ವದ ಅರಿವಾಗುವುದು. ಸಿದ್ಧರಾಮ ಅಲ್ಲಮಪ್ರಭುವನ್ನು ಹಲವಾರು ಬಗೆಯಲ್ಲಿ ಕರ್ಮದ ಅವಶ್ಯಕತೆಯನ್ನು ಕುರಿತು ಪ್ರಶ್ನಿಸುವನು. ಅದಕ್ಕೆ ಅಲ್ಲಮಪ್ರಭು "ಕರ್ಮಬೇಕು, ಆದರೆ ಸಾಯುವವರೆಗೂ ಸಾಧನೆಯನ್ನೇ ಮಾಡಿದರೆ ಕಾದುವುದು ಯಾವಾಗ? ಕರ್ಮಫಲ ತಾತ್ಕಾಲಿಕವಾಗದೆ ಶಾಶ್ವತವಾಗಬೇಕು. ಅನ್ನವನ್ನಿಕ್ಕಿದರೆ ಮತ್ತೆ ಹಸಿವಾಗುತ್ತದೆ. ಅರವಟ್ಟಿಗೆಯನ್ನಿಟ್ಟು ನೀರು ಕುಡಿಸಿದರೆ ಮತ್ತೆ ನೀರಡಿಕೆಯಾಗುತ್ತದೆ. ಕೆರೆ ಕಟ್ಟಿಸಿದರೆ ಒಮ್ಮೆಲೊಮ್ಮೆ ಒಡೆದು ಹೋಗುತ್ತದೆ. ಆದುದರಿಂದ ತನುವೆಂಬ ಏರಿಗೆ ಮನವೆಂಬ ಕಟ್ಟೆ, ಆಚಾರವೆಂಬ ಸೋಪಾನ, ಪರಮಾನಂದರೆಂಬ ಜಲವ ತುಂಬಿ ಕೆರೆಯ ಕಟ್ಟಬಲ್ಲವನಾರನೂ ಕಾಣೆ. ನಾನು ಕಟ್ಟಿದ ಕೆರೆ ಸ್ಥಿರವಾಯಿತ್ತು ಗುಹೇಶ್ವರಾ ನಿಮ್ಮಾಣೆ" ಎಂದು ತಿಳಿಸುತ್ತಾನೆ. ಯೋಗಿಯಾದ ಸಿದ್ಧರಾಮ ಕಟ್ಟಬೇಕಾದದ್ದು ಇಂತಹ ಕೆರೆಯನ್ನು. ಅದು ತನುವಿನಲ್ಲೇ ಸ್ಥಿರವಾಗಿರಬೇಕಾದ ಕೆರೆ. ಅದರಲ್ಲಿ ಆನಂದದ ಅರವಟ್ಟಿಗೆಯನ್ನಿರಿಸಿ ಆ ಆನಂದದ ಅಮೃತವನ್ನು ಪಾನಮಾಡಿಸಬೇಕು. ಆ ಜಲವನ್ನು ಪಾನ ಮಾಡಿದವರಿಗೆ ಹಸಿವಾಗಲಿ ನೀರಡಿಕೆಯಾಗಲಿ ಇರಕೂಡದು. ವಿಶ್ವವೆಲ್ಲ ಕುಡಿದರೂ ಆ ಕೆರೆ ಬತ್ತಬಾರದು. ಅಂತಹ ಕೆರೆಯನ್ನು ಕಟ್ಟುವುದರಲ್ಲಿ ಮೇಲ್ಮೆಯಿದೆ ಎಂಬ ಪ್ರಭಾಮಯವಾದ ಸಂದೇಶವನ್ನು ಅಲ್ಲಮಪ್ರಭು ಸಿದ್ಧರಾಮನಿಗೆ ಉಪದೇಶಿಸುವನು. ಆ ಸಂದೇಶ ಸಿದ್ಧರಾಮನ ಮನವನ್ನು ಸೂರೆಗೊಳ್ಳುವುದು. ಆತನು "ಇನ್ನು ಆ ಸಾವು ತಪ್ಪುವ ಭೇದವಾವುದು ಮುಕ್ತಿಮಾರ್ಗದ ಹಾದಿಯಾವುದು ನಿತ್ಯನಹ ಪರಿ ಯಾವುದೈ ಗುರುವೆ ಬೋಧಿಸುವುದೆನಗೆ" ಎಂದು ಪ್ರಾರ್ಥಿಸುವನು. ಅದಕ್ಕೆ ಅಲ್ಲಮಪ್ರಭು "ಹಲವು ಮುಖದಲಿ ಹರಿವ ಮನವನು ನಿಲಿಸುವುದು ಲಿಂಗದಲಿ, ಲಿಂಗದ ಹೊಲಬು ತಿಳಿದು, ಪ್ರಾಣಲಿಂಗವನರಿದು ಚೆನ್ನಾಗಿ ತಿಳಿದು ತೃಪ್ತಿಸ್ಥಾನದಲಿ ನಿರ್ಮಳಜ್ಯೋತಿಲಿಂಗವನು ನೆಲೆಗೊಳಿಸಿ ಕಲಿತೊಡೆ ನೀನೆ ಸುಖಿಯೈ ರಾಮ" ಎಂದು ಹೇಳುವನು. ಸಿದ್ಧರಾಮ "ಇಷ್ಟಲಿಂಗವಿಡಿದು ನಿಜಲಿಂಗೈಕ್ಯವ ಕಾಂಬ ಪರಿ ಹೇಗೆ" ಎನ್ನಲು ಅಲ್ಲಮಪ್ರಭು "ಈ ಸೂಕ್ಷ್ಮದ ಸ್ಥಿತಿಯನು ಶ್ರೀಬಸವೇಶ್ವರ ಬಲ್ಲನು. ಆತನ ಕೈಯಲ್ಲಿ ತಿಳುಹಿಸಿಕೊಡಿಸುವೆನು ನಡೆ" ಎಂದು ಕಲ್ಯಾಣಕ್ಕೆ ಕರೆತರುವನು.

ಕಲ್ಯಾಣದಲ್ಲಿ ಬಸವೇಶ್ವರರ ಮಹಾಮನೆ, ಅಲ್ಲಿದ್ದ ಶರಣಸಂದೋಹ, ಅಲ್ಲಿ ನಡೆಯುತ್ತಿದ್ದ ಜ್ಞಾನದಾಸೋಹವನ್ನು ಕಂಡ ಸಿದ್ಧರಾಮನಿಗೆ ಅರಸುತ್ತಿದ್ದ ಬಳ್ಳಿ ಕಾಲಿಗೆ ತೊಡಕಿದಂತೆ ಆಗುವುದು. ಆತನು ಅನುಭವಮಂಟಪವನ್ನು ಪ್ರವೇಶಿಸುತ್ತಲೇ ಅಲ್ಲಮಪ್ರಭುವನ್ನು ಕುರಿತು "ಕರಸ್ಥಲದ ಲಿಂಗದ ನಿಜವ ಬಸವರಾಜದೇವರಿಂದ ಹೇಳಿಸಿಹೆವೆಂದು ಕರೆದುಕೊಂಡು ಬಂದಿರಿ. ಆ ಲಿಂಗದ ನಿಜಮಂ ಎನಗೆ ನಿರೂಪಿಸಿ" ಎಂದು ಕೇಳಿಕೊಳ್ಳುವನು. ಅಲ್ಲಮಪ್ರಭು ಬಸವಣ್ಣನವರಿಗೆ ಈ ಸಂಗತಿಯನ್ನು ತಿಳಿಸುವಂತೆ ಬೆಸಗೊಳ್ಳುವನು. ಆಗ ಸಿದ್ಧರಾಮನ ಅಂಗದ ಮೇಲೆ ಲಿಂಗವಿಲ್ಲದ್ದನ್ನು ಕಂಡು ಬಸವಣ್ಣನವರು ಹೀಗೆನ್ನುವರು: "ಅಂಗ ಲಿಂಗ ಸಂಬಂಧವಿಲ್ಲದಿರ್ದರೆ ಎನ್ನ ಮನ ಒಪ್ಪದು". ಅದನ್ನು ಕೇಳಿದ ಸಿದ್ಧರಾಮ.

"ಬೆಳಗು ಬೆಳಗು ಹಳಚುವಲ್ಲಿ ಕತ್ತಲೆ ಉಳಿಯಬಹುದೆ ಅಯ್ಯಾ?
ಶರಣರು ಶರಣರು ಮಹಾನುಭಾವಗೋಷ್ಠಿಯಂ ಮಾಡುವಲ್ಲಿ
ಸಂಗದೊಳಿರ್ದವರ ಅಜ್ಞಾನವಳಿದು ನಿಜವನೈದುವರಯ್ಯಾ"

ಎಂದು ಉತ್ತರ ಕೊಡುವನು. ಆಗ ಚೆನ್ನಬಸವಣ್ಣ ಅಂಗದ ಮೇಲೆ ಲಿಂಗಸಂಬಂಧವಿಲ್ಲದವರಿಗೆ ಪ್ರಾಣಲಿಂಗಸಂಬಂಧ ವಿಲ್ಲವೆಂಬುದನ್ನು ತಿಳಿಸುವನು. ಅಲ್ಲಮಪ್ರಭುವಿನ ಪ್ರಶ್ನೆ ಹೀಗೆ ಮೂಡಿಬಂದಿತು:

"ಆಕಾಶವನಡರುವಂಗೆ ಅಟ್ಟಗೋಲ ಹಂಗೇಕೊ
ಸಮುದ್ರವ ದಾಂಟುವಂಗೆ ಹರುಗೋಲ ಹಂಗೇಕೊ
ಸೀಮೆಯ ಮೀರಿದ ನಿಸ್ಸೀಮಂಗೆ ಸೀಮೆಯ ಹಂಗೇಕೊ
ಗೊಹೇಶ್ವರಲಿಂಗದಲ್ಲಿ ನಿಸ್ಸೀಮ ಸಿದ್ಧರಾಮಂಗೆ
ಲಿಂಗವೆಂದೇನು ಹೇಳಾ ಚೆನ್ನಬಸವಣ್ಣ"

ಚೆನ್ನಬಸವಣ್ಣ ಅದನ್ನು ಖಂಡಿಸಿ:

"ಆಕಾಶದಲಾಡುವ ಪಟಕ್ಕಾದರು ಮೂಲಸೂತ್ರವಿರಬೇಕು
ಕಲಿಯಾದಡೂ ಕಜ್ಜವಿಲ್ಲದೆಯಾಗದು
ಭೂಮಿಯಿಲ್ಲದೆ ಬಂಡಿ ನಡೆವುದೆ?
ಅಂಗಕ್ಕೆ ಲಿಂಗಸಂಗವಿಲ್ಲದೆ ನಿಸ್ಸಂಗವಾಗಬಾರದು
ಕೂಡಲ ಚೆನ್ನಸಂಗಮದೇವರಲ್ಲಿ ಸಂಗವಿಲ್ಲದೆ
ನಿಸ್ಸಂಗಿಯೆಂದು ನುಡಿಯಬಹುದೆ ಪ್ರಭುವೆ"

ಎಂದು ನುಡಿದನು. ಬಸವಣ್ಣನವರು:

"ಗುರು ತೋರಿದ ಲಿಂಗವು ಮನ ಸಾಹಿತ್ಯವಾಗಿರುತ್ತಿರಲು
ಪವನ ಭೇದದಿಂದ ಅರಿದನೆಂದರೆ ಅದೇ ದ್ರೋಹ"

ಎಂದು ಸ್ಪಷ್ಟಪಡಿಸಿದರು. ಆಗ ಸಿದ್ಧರಾಮ ಲಿಂಗದೀಕ್ಷೆಯನ್ನು ಒಪ್ಪಿಕೊಂಡ. ಚೆನ್ನಬಸವಣ್ಣ ಸಿದ್ಧರಾಮನ ಕಾಯ ಮನ ಪ್ರಾಣವೆಂಬ ತ್ರಿವಿಧದಲ್ಲಿ ಇಪ್ಪತ್ತೊಂದು ದೀಕ್ಷೆಯನ್ನು ಮಾಡಿ ತ್ರಿವಿಧ ಲಿಂಗಧಾರಣವನ್ನು ಸಂಬಂಧಿಸುವರು. ಸಿದ್ಧರಾಮ ಕೃತಜ್ಞತೆಯಿಂದ:

"ಹೆಸರಿಡಬಾರದ ಲಿಂಗವ ಹೆಸರಿಟ್ಟು ಎನ್ನ ಕರಸ್ಥಲಕ್ಕೆ ತಂದು
ಕರತಳಾಮಳಕದಂತೆ ಮಾಡಿ ಎನ್ನ ಕರಸ್ಥಲಕ್ಕೆ
ಕ್ರಿಯಾಲಿಂಗವ ಕೊಟ್ಟ ಶ್ರೀಗುರು ಚೆನ್ನಬಸವಣ್ಣ"

ಎಂದು ಹಾಡುವನು.

ಬಸವಣ್ಣನವರಲ್ಲಿ ಗುರುಭಾವನೆಯನ್ನೂ ವಿಶೇಷ ಗೌರವಾದರಗಳನ್ನೂ ಹೊಂದಿದ್ದ ಸಿದ್ಧರಾಮ ತನುವುಬ್ಬಿ ಮನವುಬ್ಬಿ ಅವರನ್ನು ಕೊಂಡಾಡಿದ್ದಾನೆ:

"ಅಣ್ಣನ ನೋಡಿರೇ ಲೋಕಕ್ಕೆ ಜಗದ ಕಣ್ಣ ಮದವ ಕಳೆದನು
ಮುಕ್ಕಣ್ಣನಿಪ್ಪೆಡೆಯ ತೋರಿದ
ಅಣ್ಣ ಬಸವಣ್ಣ ವಾಙ್ಮನಕ್ಕಗೋಚರ
ಮುಕ್ಕಣ್ಣನವತಾರಂಗಳನು ನಾಟಕವೆಂದರಿದು ಮೆರೆದ
ಸತ್ಯಶುದ್ಧ ನಿರ್ಮಳ ಕೈವಲ್ಯ ವಾಙ್ಮನಕ್ಕಗೋಚರ
ಸತ್ಯಶುದ್ಧ ಬಸವಣ್ಣ"
"ಅಣ್ಣಾ ನಿಮ್ಮಿಂದ ಶುದ್ಧವ ಕಂಡೆ
ಸಿದ್ಧವ ಕಂಡೆ, ಪ್ರಸಿದ್ಧವ ಕಂಡೆ
..........................................
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ
ಎನಗರಿದಪ್ಪುದಿಲ್ಲ ಕಾಣಾ ಬಸವನ ಪ್ರಸಾದದಿಂದ"

ಸಿದ್ಧರಾಮನ ವ್ಯಕ್ತಿತ್ವ ಸ್ಫುಟಗೊಂಡದ್ದು ಪರಿಪೂರ್ಣವಾದದ್ದು ಶ್ರೀಬಸವೇಶ್ವರರ ಸಂಪರ್ಕದಿಂದ ಅನುಭವ ಮಂಟಪದ ಪ್ರಭಾವಲಯದಿಂದ.

## ಮಡಿವಾಳ ಮಾಚಯ್ಯ

ಅನುಭವ ಮಂಟಪದಲ್ಲಿ ಪ್ರಭಾವಶಾಲಿಯಾಗಿ ಬೆಳಗಿದ ಶಿವಶರಣರಲ್ಲಿ ಮಡಿವಾಳ ಮಾಚಯ್ಯ ಪ್ರಮುಖನಾಗಿದ್ದಾನೆ. ಆತನು ಪರಮ ಶಿವಭಕ್ತ, ಅಜೇಯವೀರ. 'ಮಡಿವಾಳ ಕಾಯಕ'ವನ್ನು ಕೈಕೊಂಡು ಅದರಲ್ಲಿಯೇ ತನ್ನ ಜೀವನದ ಸಾರ್ಥಕತೆಯನ್ನು ಕಂಡುಕೊಂಡನು. ಕಲ್ಯಾಣದ ಕ್ರಾಂತಿಯ ನಂತರ ಶಿವಶರಣರನ್ನು ಸುರಕ್ಷಿತವಾಗಿ ಅವರವರ ನೆಲೆಗಳಿಗೆ ಮುಟ್ಟಿಸಿದ ದಿಟ್ಟ ಕಡುಗಲಿ.

ಬಿಜಾಪುರ ಜಿಲ್ಲೆಯ ಹಿಪ್ಪರಗಿ ಮಡಿವಾಳ ಮಾಚಯ್ಯನ ಜನ್ಮಸ್ಥಳ. ಆತನ ತಂದೆ ಪರ್ವತಯ್ಯ. ದೀಕ್ಷೆಯನ್ನು ಕೊಟ್ಟ ಗುರು ಮಲ್ಲಿಕಾರ್ಜುನ. ಹಿಪ್ಪರಗಿಯಲ್ಲಿ ಕಲ್ಲಿನಾಥ ದೇವಾಲಯವಿದೆ. ಮಡಿವಾಳಯ್ಯ ತನ್ನ ವಚನಗಳನ್ನು 'ಕಲಿದೇವರ ದೇವ' ಎಂಬ ಅಂಕಿತದಲ್ಲಿ ಬರೆದಿದ್ದಾನೆ.

ಹಿಪ್ಪರಿಗೆಯ ಸುತ್ತಮುತ್ತಣ ಪ್ರಾಂತದಲ್ಲಿ ಬಸವಣ್ಣನವರ ಪ್ರಭಾವ ಅಂದು ವಿಶೇಷವಾಗಿ ಆವರಿಸಿತ್ತು. ಆ ಪ್ರಭಾವದ ಸುಳಿಗೆ ಸಿಕ್ಕಿದ ಮಡಿವಾಳಯ್ಯ ಬಸವಣ್ಣನವರನ್ನು ಕಾಣಲು ಅವರ ಪರಿಚರ್ಯೆ ಮಾಡಲು ಕಲ್ಯಾಣಕ್ಕೆ ಬರುತ್ತಾನೆ. ಬಸವಣ್ಣನವರ ಮಹಾಮನೆಯ ಶರಣಸಮೂಹದಲ್ಲಿ ಒಬ್ಬನಾಗಿ ಸೇರಿಹೋಗುತ್ತಾನೆ.

ಮಡಿವಾಳ ಮಾಚಯ್ಯನಿಗೆ ತನ್ನ ಕಾಯಕದಲ್ಲಿ ಅತೀವ ನಿಷ್ಠೆಯಿತ್ತು. ಯಾರೂ ಆತನ ಕಾಯಕಕ್ಕೆ ಅಡ್ಡಬರುವಂತಿರಲಿಲ್ಲ. ಪ್ರತಿದಿನ ಪ್ರಾತಃಕಾಲ ಶಿವಶರಣರ ವಸ್ತ್ರಗಳನ್ನು ಮಡಿಮಾಡಿಕೊಂಡು ಬಂದು ಅವರವರಿಗೆ ಒಪ್ಪಿಸುತ್ತಿದ್ದನು. ಅನುಭವಮಂಟಪದಲ್ಲಿ ಭಾಗವಹಿಸಿ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದನು. ಮಾಚಯ್ಯನ ದೃಷ್ಟಿಯಲ್ಲಿ ಕಲ್ಯಾಣ ಹೀಗೆ ಮೂಡಿಬಂದಿದೆ:

"ಹೊಗಬಾರದು ಕಲ್ಯಾಣವನಾರಿಗೆಯು
ಹೊಕ್ಕಡೇನು ಕಲ್ಯಾಣದ ಸ್ಥಾನಮಾನಂಗಳನರಿಯಬಾರದು
ಕಲ್ಯಾಣದ ಕಡೆಯ ಕಾಣಬಾರದು
ಕಲ್ಯಾಣದೊಳಗೆ ಹೊಕ್ಕಹೆನೆಂದು
ಕಲ್ಯಾಣ ಚರಿತ್ರವಾದೆನೆಂದು
ದೇವದಾನವ ಮಾನವರೆಲ್ಲರು ಭಾವಿಸುತ್ತಿರ್ದರು ನೋಡಾ
..................................................
ಆಶೆಗೆಡೆಗುಡದಿಪ್ಪುದೆ ಕಲ್ಯಾಣ
ಸರ್ವಾಂಗವರ್ಣವಳಿದು ಕುಲಮದ ತಲೆದೋರದೆ
ಭಕ್ತಿ ನಿತ್ಯವಾದುದೇ ಕಲ್ಯಾಣ
ಈ ಕಲ್ಯಾಣವೆಂಬ ಮಹಾಘನದೊಳಗೆ
ಬಸವಣ್ಣನು ನಾನು ಕೂಡಿ ಹದುಳಿರ್ದೆವು ಕಾಣಾ ಕಲಿದೇವಯ್ಯಾ"

ಬಸವಣ್ಣನವರಲ್ಲಿ ಮಡಿವಾಳ ಮಾಚಯ್ಯನಿಗೆ ಅಪಾರ ಭಕ್ತಿ ವಿಶ್ವಾಸ:

"ಎತ್ತೆತ್ತ ನೋಡಿದಡೆ ಅತ್ತತ್ತ ಬಸವನೆಂಬ ಬಳ್ಳಿ
ಎತ್ತಿ ನೋಡಿದಡೆ ಲಿಂಗವೆಂಬ ಗೊಂಚಲು
ಒತ್ತಿ ಹಿಂಡಿದಡೆ ಭಕ್ತಿಯೆಂಬ ರಸವಯ್ಯ
ಆಯತವು ಸ್ವಾಯತವು ಸನ್ನಿಹಿತವು ಬಸವಣ್ಣನಿಂದ"

ಈ ರೀತಿ ಬಸವಣ್ಣನವರನ್ನು ಮುಕ್ತಕಂಠದಿಂದ ಹೊಗಳಿದ್ದಾನೆ.

ಬಸವಣ್ಣನವರಿಗಾದರೋ ಮಡಿವಾಳಯ್ಯನಲ್ಲಿ ಅಪಾರವಾದ ಗೌರವ. ಈ ಬಗೆಗೆ ಬಸವಣ್ಣನವರ ವಾಣಿ ಇಂತಿದೆ:

"ಎನ್ನ ಕಾಯವ ಶುದ್ಧವ ಮಾಡಿದಾತ ಮಡಿವಾಳ
ಎನ್ನ ಮನವ ನಿರ್ಮಲ ಮಾಡಿದಾತ ಮಡಿವಾಳ
ಎನ್ನಂತರಂಗವ ಬೆಳಗಿದಾತ ಮಡಿವಾಳ
ಕೂಡಲಸಂಗಮದೇವಾ.
ಎನ್ನ ನಿಮಗೆ ಯೋಗ್ಯನ ಮಾಡಿದಾತ ಮಡಿವಾಳ"

"ಕಲ್ಪಿತವ ಕಳೆದು ಅಕಲ್ಪಿತವ ತಿಳುಹಿದ
ಮನವ ಮಾಣಿಸಿ ಘನವ ನೆಲೆಗೊಳಿಸಿದ
ತನುವ ಕೆಡಿಸಿ ಅನುವ ಸ್ಥಾಪ್ಯವ ಮಾಡಿದ
ಅಂತರಂಗದಲ್ಲಿ ಮಹಾಜ್ಞಾನವ ತುಂಬಿ
ಬಹಿರಂಗದಲ್ಲಿ ಸದಾಚಾರವ ನೆಲೆಗೊಳಿಸಿದ
ನಿಮ್ಮ ನಿಲವನೆನಗೆ ಒರೆದೊರೆದು ಹೇಳಿ ತೋರಿಸಿ
ಎನ್ನ ನಿಮ್ಮ ಶ್ರೀಪಾದಕ್ಕೆ ಯೋಗ್ಯನ ಮಾಡಿದ
ಕೂಡಲ ಸಂಗಮದೇವಯ್ಯ
ನಿಮ್ಮ ಮಹಾಮನೆಯಲ್ಲಿ
ಮಡಿವಾಳನೂ ನಾನೂ ಕೂಡಿ ಸುಖದಲ್ಲಿ ಇದ್ದೆವಯ್ಯಾ"

ಮಡಿವಾಳ ಮಾಚಯ್ಯ ಉತ್ತಮ ಅನುಭಾವಿ ಎಂಬುದು ಆತನ ವಚನಗಳಿಂದ ವ್ಯಕ್ತವಾಗುತ್ತದೆ. ಶಿವಭಕ್ತರಿಗೆ ಹಮ್ಮುಬಿಮ್ಮುಗಳಿರಬಾರದು. ಅವರ ನಡೆನುಡಿಗಳು ಚೊಕ್ಕವಾಗಿರಬೇಕೆಂಬುದನ್ನು ತನ್ನ ವಚನಗಳಲ್ಲಿ ವಿವರವಾಗಿ ತಿಳಿಸಿದ್ದಾನೆ.

ಭಕ್ತನು ಪರಮಾತ್ಮನಲ್ಲಿ ದೃಢವಾದ ಭಕ್ತಿಯುಳ್ಳವನಾಗಿರಬೇಕು. ಇಲ್ಲದಿದ್ದರೆ ಅವನು ಹತ್ತಿರದಲ್ಲಿದ್ದರೂ ಅಗೋಚರನಾಗುತ್ತಾನೆ. ಭಕ್ತಿಯಲ್ಲಿ ವಂಚನೆ ಇರಕೂಡದೆಂಬುದನ್ನು ಆತನು ಈ ವಚನದಲ್ಲಿ ಸ್ಪಷ್ಟಪಡಿಸಿದ್ದಾನೆ:

"ಹುಟ್ಟದ ಬೀಜವಿದ್ದಡೇನು ಧರೆಯೊಳಗೆ
ಅಟ್ಟುಣಬಾರದ ಮಡಕೆಯಿದ್ದಡೇನು ಮನೆಯೊಳಗೆ
ಶಿವ ನಿಮ್ಮ ಮುಟ್ಟದ ಮನವಿದ್ದಡೇನಯ್ಯಾ ತನುವಿನೊಳಗೆ
ಕೆಚ್ಚಲ ಕಚ್ಚಿದ ಉಣ್ಣೆ ಬಲ್ಲುದೆ ಕ್ಷೀರದ ರುಚಿಯನು
ಬಚ್ಚಲೊಳಗಣ ಬಾಲಹುಳು ಬಲ್ಲುದೆ ನಿಚ್ಚಳದ ನೀರಿನನುಭವವ
ನಿಚ್ಚನಿಚ್ಚಲೋದುವ ಗಿಳಿ ಬಲ್ಲುದೆ ತನಗೆ ಬಹ ಬೆಕ್ಕಿನ ಬಾಧೆಯ
ಪುಚ್ಚುಗೊಂಡ ನಾಯಿ ಬಲ್ಲುದೆ ಸಾಕಿದೊಡೆಯನ
ಇದು ಕಾರಣ ಒಡಲ ಪಡೆದರೇನು
ಮಡದಿಯರ ನೆರಹಿದರೇನು
ಒಡವೆಯ ಗಳಿಸಿದರೇನು
ಶಿವನೇ ನಿಮ್ಮನರಿಯದ ಮನುಜನ ಒಡಲೆಂಬುದು ಹೊಲೆ
ಜೋಗಿಯ ಕೆಯ್ಯ ಸೋರೆ ಒಡೆದಂತೆ
ಕಾಣಾ ಕಲಿದೇವರ ದೇವಾ"

ಉಚ್ಚಧ್ಯೇಯ ಸಾಧನೆಯಲ್ಲಿ ತೊಡಗಿದವನಿಗೆ ಎಂಥ ಎಡರು-ತೊಡರುಗಳು ಬಂದರೂ ಅವನು ಜಿಡಬಾರದು. ಲೋಕದ ಜನ ಏನನ್ನು ಹೇಳಿದರೂ ಅದನ್ನು ಗಣನೆಗೆ ತಂದುಕೊಳ್ಳದೆ ತನ್ನ ಕರ್ತವ್ಯದಲ್ಲಿ ನಿರತನಾಗಬೇಕು ಎಂಬ ಆತನ ದೃಷ್ಟಿಯು ಕೆಳಗಣ ವಚನದಲ್ಲಿ ಕಂಡುಬರುತ್ತದೆ:

"ಉಂಡರೆ ಭೂತನೆಂಬರು ಉಣದಿರ್ದಡೆ ಚಕೋರಿಯೆಂಬರು
ಊರೊಳಗಿರ್ದಡೆ ಸಂಸಾರಿಯೆಂಬರು
ಅಡವಿಯೊಳಗಿರ್ದಡೆ ಮರ್ಕಟ ಎಂಬರು
ಮಾತನಾಡಿದರೆ ಪಾಪಕರ್ಮಿ ಎಂಬರು
ಮಾತನಾಡದಿರ್ದಡೆ ಮುಸುಕಕರ್ಮಿ ಎಂಬರು
ಮಲಗದಿರ್ದಡೆ ಚೋರನೆಂಬರು
ಮಲಗಿರ್ದಡೆ ಜಡದೇಹಿಯೆಂಬರು
ಇಂತೀ ವಸುಧೆಯೊಳಗೆ ಎಂಟು ವಿಧವ ಕಳೆಯಲಳವಲ್ಲ ಕಾಣಾ"

ಗುರು ಲಿಂಗ ಜಂಗಮವೇ ಮುಂತಾದುವನ್ನು ಅರಿತಲ್ಲದೆ ಭಕ್ತನಿಗೆ ಪರಮಾತ್ಮನ ದರ್ಶನವಾಗುವುದಿಲ್ಲ. ಅದನ್ನು:

"ಗರಿಯ ಕಟ್ಟದ ಕೋಲು ಗುರಿಯ ತಾಕಬಲ್ಲುದೆ
ಗುರುಲಿಂಗ ಜಂಗಮದ ಪಾದತೀರ್ಥ ಪ್ರಸಾದವನರಿಯದೆ
ಪರಮನ ಕಂಡೆನೆಂಬ ದುರಾಚಾರಿಗಳ ಮುಖವ
ನೋಡಲಾಗದೆಂದಾತ ನಮ್ಮ ಕಲಿದೇವರ ದೇವಯ್ಯಾ"

ಎಂಬ ವಚನದಲ್ಲಿ ನಿರೂಪಿಸಿದ್ದಾನೆ.

ಮನುಷ್ಯನಾಗಿ ಹುಟ್ಟಿದ ಮೇಲೆ ಜ್ಞಾನಿಯಾಗಿರಬೇಕು. ಅದರಲ್ಲೂ ಶಿವಜ್ಞಾನವನ್ನು ಅರಿತವನಾಗಿರಬೇಕು. ಇಲ್ಲದಿದ್ದರೆ ಅವನ ಜನ್ಮ ನಿರರ್ಥಕ ಎಂಬುದನ್ನು ಮಡಿವಾಳಯ್ಯ ವಿವರಿಸಿದ್ದಾನೆ:

"ವಾಯುಗುಣವ ಸರ್ಪಬಲ್ಲುದು
ಮಧುರಗುಣವನಿರುಹೆ ಬಲ್ಲುದು
ಗೋತ್ರದ ಗುಣವ ಕಾಗೆ ಬಲ್ಲುದು
ವೇಳೆಯ ಗುಣವ ಕೋಳಿ ಬಲ್ಲುದು
ಇದು ಕಾರಣ ಮನುಷ್ಯಜನ್ಮದಲ್ಲಿ ಬಂದು
ಶಿವಜ್ಞಾನವನರಿಯದಿದ್ದಡೆ
ಆ ಕಾಗೆ ಕೋಳಿಗಳಿಂದ ಕರಕಷ್ಟ ಕಾಣಾ ಕಲಿದೇವರ ದೇವಾ"

ಸದಾಚಾರ ಸದ್ಭಕ್ತಿಯಿಂದ ಕೂಡಿದ ಭಕ್ತ, ಜಂಗಮರು ಶಂಭುವಿನ ಅವತಾರವೆಂದೂ, ಅವರ ತೊತ್ತಿನ ತೊತ್ತಾಗಿ ತಾನು ಬದುಕಿದೆನೆಂಬುದನ್ನು:

"ಬಕಧ್ಯಾನವನುಳಿದು ರಾಜಹಂಸನ ಹಾಗೆ
ಅಸತ್ಯವನುಳಿದು ಸುಸತ್ಯದಲ್ಲಾಚರಿಸುವ
ಭಕ್ತ ಜಂಗಮವೇ ದ್ವಿತೀಯ ಶಂಭುವೆಂದು
ಅವರಂಗಣವ ಕಾಯ್ದು ಅವರುಟ್ಟುದ ತೊಳೆದು
ಅವರೊಕ್ಕುದ ಕೈಕೊಂಡು ಅವರುಗಳ ಹಾರೈಸಿ
ಅವರ ಕಡೆಬಾಗಿಲ ಕಾಯ್ದು
ಅವರ ತೊತ್ತಿನ ತೊತ್ತಾಗಿ ಬದುಕಿದೆ ಕಾಣಾ
ಕಲಿದೇವರ ದೇವಾ"

ಎಂದು ವಿವರಿಸಿದ್ದಾನೆ.

ಬಿಜ್ಜಳನು ಹರಳಯ್ಯ ಮಧುವರಸರನ್ನು ಕೊಲೆಮಾಡಿಸಿದುದಕ್ಕಾಗಿ ಅಂದು ಕಲ್ಯಾಣದಲ್ಲಿ ಪ್ರಕ್ಷುಬ್ಧ ವಾತಾವರಣ ತಲೆದೋರಿತು. ಆಗ ಶರಣರಿಗುಂಟಾದ ಉಪಟಳವನ್ನು ತಡೆಯುವಲ್ಲಿ ಮಡಿವಾಳ ಮಾಚಯ್ಯ ವೀರತನವನ್ನು ತೋರಿದನು. ಮುಂದೆ ಕಲ್ಯಾಣವನ್ನು ತೊರೆದು ಶಿವಶರಣರೊಂದಿಗೆ ತೊರಗಲ್ಲು ನಾಡನ್ನು ಪ್ರವೇಶಿಸಿದನು. ಅಲ್ಲಿಗೂ ಶಿವಶರಣರನ್ನು

ಅಟ್ಟಿಸಿಕೊಂಡು ಬಂದ ರಾಯಮುರಾರಿಯ ಸೈನ್ಯವನ್ನು ಹಲವಾರು ಕಡೆ ಎದುರಿಸಿ ಹಿಮ್ಮೆಟ್ಟಿಸಿದನು. ಶಿವಶರಣರನ್ನೆಲ್ಲ ಸುರಕ್ಷಿತವಾಗಿ ಉಳವಿಯ ಘೋರಾರಣ್ಯವನ್ನು ತಲುಪಿಸಿದ ಮೇಲೆ ಮಡಿವಾಳಯ್ಯ ತನ್ನ ಸ್ವಗ್ರಾಮಕ್ಕೆ ಹಿಂತಿರುಗಿ ಕಲ್ಲಿನಾಥನಲ್ಲಿ ಐಕ್ಯವಾದನೆಂಬ ಅಂಶ ಆತನ ಚರಿತ್ರೆಯಲ್ಲಿ ಬರುತ್ತದೆ.

ಅನುಭವ ಮಂಟಪದ ಪ್ರಭಾವಲಯದ ಪ್ರಮುಖ ವ್ಯಕ್ತಿಗಳಲ್ಲಿ ಮಡಿವಾಳ ಮಾಚಯ್ಯ ಒಬ್ಬನಾಗಿದ್ದಾನೆ. ವೃತ್ತಿಯಿಂದ ಮಡಿವಾಳನಾದರೂ ಸಾಧನೆಯಿಂದ ಉತ್ತಮ ಅನುಭಾವಿಯೆನಿಸಿಕೊಂಡಿದ್ದಾನೆ. ಆತನು ಬಟ್ಟೆಗಳ ಮೈಲಿಗೆಯನ್ನಷ್ಟೇ ಕಳೆಯಲಿಲ್ಲ; ಜನಮನದ ಮೈಲಿಗೆಯನ್ನೂ ಕಳೆದಿದ್ದಾನೆ; ಅನುಭವಮಂಟಪಕ್ಕೆ ಭೂಷಣಪ್ರಾಯನಾಗಿ ಬೆಳಗಿದ್ದಾನೆ. ಅಂತೆಯೇ ಬಸವಣ್ಣ ಅಲ್ಲಮಪ್ರಭು ಚೆನ್ನಬಸವಣ್ಣ ಮೊದಲಾದವರಿಂದ ಸ್ತುತಿಸಲ್ಪಟ್ಟಿದ್ದಾನೆ. ಕಾಯಕನಿಷ್ಠೆಯ ಕಲಿಯಾಗಿ ಅನುಭವಮಂಟಪದಲ್ಲಿ ಅಚ್ಚಳಿಯದ ಪ್ರಭಾವವನ್ನು ಬೀರಿದ್ದಾನೆ.

## ಅಕ್ಕಮಹಾದೇವಿ

ಅನುಭವಮಂಟಪದಲ್ಲಿ ತನ್ನ ಪ್ರಭಾವವನ್ನು ಸುಸ್ಥಿರಗೊಳಿಸಿ, ಮುಕ್ತಿಯ ಪಥದಲ್ಲಿ ನಡೆದು ಶ್ರೀಶೈಲದ ಚೆನ್ನಮಲ್ಲಿಕಾರ್ಜುನನಲ್ಲಿ ಐಕ್ಯಳಾದ ಮಹಾಶಿವಶರಣೆ ಅಕ್ಕಮಹಾದೇವಿ. ಬಾಲ್ಯದಿಂದಲೇ ಭಕ್ತಿಸಂಪನ್ನಳಾಗಿದ್ದ ಅಕ್ಕಮಹಾದೇವಿ 'ಶರಣಸತಿ ಲಿಂಗಪತಿ' ಎಂಬ ಭಾವದಲ್ಲಿ ಪರಿಪಕ್ವತೆ ಪಡೆದಳು.

ಉಡುತಡಿಯ ಸುಮತಿ ನಿರ್ಮಲೆಯರೆಂಬ ದಂಪತಿಗಳಿಗೆ ಮಗಳಾಗಿ ಹುಟ್ಟಿದ ಅಕ್ಕಮಹಾದೇವಿ ಬಾಲ್ಯದಿಂದಲೇ ಶಿವಭಕ್ತಿಯುಕ್ತಳಾಗಿದ್ದಳು. ಚೆನ್ನಮಲ್ಲಿಕಾರ್ಜುನನನ್ನೇ ತನ್ನ ಆರಾಧ್ಯದೈವವಾಗಿ ಸ್ವೀಕರಿಸಿದಳು. ಆತನೇ ತನಗೆ ಗತಿಮತಿಪತಿ ಎಂದು ಭಾವಿಸಿದಳು. ಯೌವನಕ್ಕೆ ಕಾಲಿಟ್ಟಿದ್ದ ಅಕ್ಕಮಹಾದೇವಿಯನ್ನು ಕುರಿತು ಆಕೆಯ ನೆಂಟರಿಷ್ಟರು ಗೆಳತಿಯರು ಮದುವೆಯ ಪ್ರಸ್ತಾಪವನ್ನು ಮಾಡಿದಾಗ ಕಾರಣಿಕಳಾದ ಅಕ್ಕ:

"ಸಾವಿಲ್ಲದ ಕೇಡಿಲ್ಲದ ಚೆಲುವಂಗಾನೊಲಿದೆನವ್ವ
ಎಡೆಯಿಲ್ಲದ ಕಡೆಯಿಲ್ಲದ ತೆರೆಹಿಲ್ಲದ ಕುರುಹಿಲ್ಲದ
ಚೆಲುವಂಗಾನೊಲಿದೆನವ್ವ
ಭವವಿಲ್ಲದ ಭಯವಿಲ್ಲದ ಚೆಲುವಂಗಾನೊಲಿದೆ
ಕುಲಸೀಮೆಯಿಲ್ಲದ ನಿಸ್ಸೀಮ ಚೆಲುವಂಗಾನೊಲಿದೆ
ಇದುಕಾರಣ ಚೆನ್ನಮಲ್ಲಿಕಾರ್ಜುನ ಚೆಲುವಗಂಡನೆನಗೆ
ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು"

ಎಂದು ಹೇಳುವಳು. ಚೆನ್ನಮಲ್ಲಿಕಾರ್ಜುನನನ್ನು ಕನಸಿನಲ್ಲೇ ಕಾಣುತ್ತಿದ್ದ ಅಕ್ಕಮಹಾದೇವಿ:

"ಕಾಣುತ್ತ ಕಾಣುತ್ತ ಕಂಗಳ ಮುಚ್ಚಿದೆ ನೋಡವ್ವ
ಕೇಳುತ್ತ ಕೇಳುತ್ತ ಮೈಮರೆದೊರಗಿದೆ ನೋಡವ್ವ
ಹಾಸಿದ ಹಾಸಿಗೆಯ ಹಂಗಿಲ್ಲದೆ ಹೋಯಿತ್ತು ಕೇಳವ್ವ
ಚೆನ್ನಮಲ್ಲಿಕಾರ್ಜುನ ದೇವರ ದೇವನು
ಕೂಡುವ ಕೂಟವ ನಾನೇನೆಂದರಿಯದೆ ಮರೆದೆ ಕಾಣವ್ವ"

ಎಂದು ತನಗಾಗುತ್ತಿದ್ದ ಅನುಭವವನ್ನು ವರ್ಣಿಸುವಳು.

ಚೆನ್ನಮಲ್ಲಿಕಾರ್ಜುನನನ್ನು ಕಾಣುವುದು ಸುಲಭಸಾಧ್ಯವಲ್ಲ. ಘೋರಾರಣ್ಯದಲ್ಲಿ ಒಬ್ಬಳೇ ತೊಳಲಬೇಕಾಗುವುದು. ವ್ಯರ್ಥವಾದ ಈ ಸಾಹಸಕ್ಕೆ ಕೈಹಾಕಿ ಕಷ್ಟಪಡಬೇಡ ಎಂದು ಆಕೆಯ ತಂದೆ ತಾಯಿಗಳು ನೆಂಟರಿಷ್ಟರು ಪರಿಪರಿಯಾಗಿ ಬುದ್ಧಿಮಾತನ್ನು ಹೇಳುವರು. ಅದಕ್ಕೆ ಅಕ್ಕ:

"ಹಸಿವಾದಡೆ ಭಿಕ್ಷಾನ್ನಗಳುಂಟು
ತೃಷೆಯಾದಡೆ ಕೆರೆ ಹಳ್ಳಬಾವಿಗಳುಂಟು
ಶಯನಕ್ಕೆ ಹಾಳುದೇಗುಲಗಳುಂಟು
ಚೆನ್ನಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನೆನಗುಂಟು"

ಎಂದು ಅವರಿಗೆ ಉತ್ತರ ಕೊಡುವಳು. ಚೆನ್ನಮಲ್ಲಿಕಾರ್ಜುನನ ಹೊರತು ತನ್ನ ಮನಸ್ಸು ಮತ್ತಾವುದನ್ನೂ ಬಯಸುವುದಿಲ್ಲವೆಂಬುದನ್ನು:

"ಗಿರಿಯಲಲ್ಲದೆ ಹುಲುಮೊರಡಿಯಲಾಡುವುದೆ ನವಿಲು
ಕೊಳನನಲ್ಲದೆ ಕಿರುವಳ್ಳಕ್ಕೆಳಸುವುದೇ ಹಂಸೆ
ಮಾಮರ ತಳಿತಲ್ಲದೆ ಸ್ವರಗೈವುದೇ ಕೋಗಿಲೆ
ಪರಿಮಳವಿಲ್ಲದ ಪುಷ್ಪಕ್ಕೆಳಸುವುದೇ ಭ್ರಮರ
ಎನ್ನದೇವ ಚೆನ್ನಮಲ್ಲಿಕಾರ್ಜುನಗಲ್ಲದೆ
ಅನ್ಯವಿಷಯಕ್ಕೆಳಸುವುದೇ ಎನ್ನ ಮನ"

ಹೀಗೆ ಸ್ಪಷ್ಟಪಡಿಸುವಳು.

ಕಲ್ಯಾಣದಲ್ಲಿ ಬಸವಣ್ಣನವರು ನಡೆಸುತ್ತಿದ್ದ ಶಿವಾನುಭವಗೋಷ್ಠಿಯ ವಿಷಯವನ್ನು ಕೇಳಿ ಅಲ್ಲಿದ್ದ ಅಲ್ಲಮಪ್ರಭು ಚೆನ್ನಬಸವಣ್ಣ ಸಿದ್ಧರಾಮ ಮೊದಲಾದ ಅನುಭಾವಿಗಳ ಸಂದರ್ಶನ ಪಡೆದು ತನ್ನ ಸಾಧನೆಯ ಸಿದ್ಧಿಯ ಹಾದಿಯನ್ನು ಕಂಡುಕೊಳ್ಳುವುದಕ್ಕಾಗಿ ಅಕ್ಕಮಹಾದೇವಿ ಕಲ್ಯಾಣಕ್ಕೆ ಹೊರಡಲು ಅನುವಾಗುವಳು. ಅಕ್ಕನ ಈ ದೃಢನಿರ್ಧಾರವನ್ನು ತಿಳಿದ ಆಕೆಯ ಬಂಧುಬಾಂಧವರು ನವಯೌವನವತಿಯಾದ ನೀನು ಲೋಕದ ಸ್ತುತಿನಿಂದೆಗಳ ಕಡೆ ಲಕ್ಷ್ಯವೀಯ ಬೇಕೆಂದು ಹೇಳುವರು. ಅದಕ್ಕೆ ಅಕ್ಕ ಇಹಲೋಕದಲ್ಲಿ ಜನ್ಮವನ್ನು ತಾಳಿದ ಮೇಲೆ ಸ್ತುತಿನಿಂದೆಗಳು ಬಂದರೆ ಚಿತ್ತಸ್ವಾಸ್ಥ್ಯವನ್ನು ಕಳೆದುಕೊಳ್ಳದೆ ಸಮಾಧಾನದಿಂದಿರಬೇಕು. ಅದಕ್ಕಾಗಿ ಅಂಜಬಾರದು ಅಳುಕಬಾರದು:

"ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದೊಡೆಂತಯ್ಯ
ಸಮುದ್ರದ ತಡಿಯಲ್ಲಿ ಮನೆಯ ಮಾಡಿ ನೊರೆತೆರೆಗಳಿಗಂಜಿದೊಡೆಂತಯ್ಯ
ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದೊಡೆಂತಯ್ಯ
ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯ
ಲೋಕದೊಳಗೆ ಹುಟ್ಟಿರ್ದ ಬಳಿಕ ಸ್ತುತಿನಿಂದೆಗಳು ಬಂದೊಡೆ
ಮನದಲ್ಲಿ ಸಮಾಧಾನಿಯಾಗಿರಬೇಕಯ್ಯ"

ಎಂದು ದಿಟ್ಟತನದಿಂದ ಹೇಳಿದ್ದಾಳೆ.

ದೃಢನಿರ್ಧಾರದಂತೆ ಅಕ್ಕಮಹಾದೇವಿ ಕಲ್ಯಾಣಕ್ಕೆ ಬರುತ್ತಾಳೆ. ಕಲ್ಯಾಣ ಪ್ರವೇಶ ಅಕ್ಕನ ಜೀವನದಲ್ಲಿ ಒಂದು ಮಹತ್ತರವಾದ ಪರಿಣಾಮವನ್ನು ಬೀರಿತು. ಆ ದಿವ್ಯಕ್ಷೇತ್ರದ ಮಹತ್ವವನ್ನು ಕುರಿತು:

"ಕಲ್ಯಾಣವೆಂಬುದಿನ್ನಾರಿಗೂ ಹೊಗಬಾರದು ಅಸಾಧ್ಯವಯ್ಯ
ಆಸೆ ಆಮಿಷವಳಿದಂಗಲ್ಲದೆ ಕಲ್ಯಾಣದತ್ತಲಡಿಯಿಡಬಾರದು
ಒಳಗು ಹೊರಗು ಶುದ್ಧವಾದಂಗಲ್ಲದೆ ಕಲ್ಯಾಣವ ಹೊಗಬಾರದು
ನಾನೆಂಬುದು ಹರಿದವಂಗಲ್ಲದೆ ಕಲ್ಯಾಣವ ಹೊಗಬಾರದು
ಒಳಗು ತಿಳಿದು ಚೆನ್ನಮಲ್ಲಿಕಾರ್ಜುನಂಗೊಲಿದು
ಉಭಯಲಜ್ಜೆಯಳಿದೆನಾಗಿ ಕಲ್ಯಾಣವ ಕಂಡು
ನಮೋ ನಮೋ ಎನುತಿರ್ದೆನು"

ಎಂದು ಭಕ್ತಿಪೂರ್ವಕವಾಗಿ ಸ್ತುತಿಸಿದ್ದಾಳೆ.

ಅನುಭವಮಂಟಪವನ್ನು ಪ್ರವೇಶಿಸಿದ ಕೂಡಲೆ ಅಕ್ಕ ಕಂಡದ್ದು ಅಲ್ಲಮಪ್ರಭುವನ್ನು. ಅವರು ಬಸವಣ್ಣ, ಚೆನ್ನಬಸವಣ್ಣ, ಮಡಿವಾಳ ಮಾಚಯ್ಯ, ಸಿದ್ಧರಾಮ ಮುಂತಾದವರೊಡನೆ ಅನುಭವಗೋಷ್ಠಿಯನ್ನು ನಡೆಸುತ್ತಿದ್ದರು. ಅವರ ಅಕ್ಕಪಕ್ಕಗಳಲ್ಲಿ ಸೊಡ್ಡಳ ಬಾಚರಸ, ಹಡಪದ ಅಪ್ಪಣ್ಣ, ಪಡಿಹಾರಿ ಉತ್ತಣ್ಣ, ಅಕ್ಕನಾಗಮ್ಮ, ಮೋಳಿಗೆಯ ಮಾರಯ್ಯ, ಡೋಹರ ಕಕ್ಕಯ್ಯ, ಕಿನ್ನರಿ ಬೊಮ್ಮಯ್ಯ, ಕನ್ನದ ಮಾರಯ್ಯ, ಕೋಲಶಾಂತಯ್ಯ ಇವರೇ ಮೊದಲಾದ ಅಸಂಖ್ಯಾತ ಶರಣ ಸಮೂಹವಿತ್ತು. ಆ ದಿವ್ಯದೃಶ್ಯವನ್ನು ನೋಡಿದ ಅಕ್ಕ:

"ಅಯ್ಯಾ ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯ
ಅಯ್ಯಾ ನಿಮ್ಮ ಶರಣರು ಇದ್ದ ಪುರವೇ ಕೈಲಾಸವಯ್ಯ
ಅಯ್ಯಾ ನಿಮ್ಮ ಶರಣರು ನಿಂದುದೇ ನಿಜನಿವಾಸ"

ಎಂದು ಸ್ತುತಿಸುವಳು.

ಬಸವಣ್ಣನವರ ಪ್ರಭಾವ ಅಕ್ಕನನ್ನು ಆವರಿಸುತ್ತದೆ. "ಶರಣ ಬಸವಣ್ಣನಿರ್ದ ಕ್ಷೇತ್ರ ಅವಿಮುಕ್ತಕ್ಷೇತ್ರವಾಗಿ ಆನು ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ" ಎನ್ನುವಳು. ಅಂತಹ ಬಸವಣ್ಣನ ಶ್ರೀಪಾದಗಳನ್ನು ಅರಸಿ ಬಯಸಿ ತಪಸ್ಸು ಮಾಡಿದಳು. ಆದರೆ ಅದು ತಾನೊಲಿದ ಕಾಲಕ್ಕಲ್ಲದೆ ಸಾಧ್ಯವಾಗದು, ಶಿವನೊಲಿದಲ್ಲದೆ ಕೈಗೂಡದು. ಚೆನ್ನಮಲ್ಲಿಕಾರ್ಜುನ ಒಲಿದನಾಗಿ ಸಂಗನ ಬಸವಣ್ಣನ ಶ್ರೀಪಾದವ ಕಂಡು ಬದುಕಿದೆನು ಎಂದು ಹೇಳಿಕೊಂಡಿದ್ದಾಳೆ. ಬಸವಣ್ಣನವರಿಗಾದರೋ ಅಕ್ಕನಲ್ಲಿ ಅಷ್ಟೇ ಭಕ್ತಿವಿಶ್ವಾಸಗಳಿದ್ದುವು. ಅವರು ಆಕೆಯನ್ನು 'ಎನ್ನ ಹೆತ್ತತಾಯಿ' ಎಂದು ಸಂಬೋಧಿಸುವರು. ಅಕ್ಕನನ್ನು ಅಲ್ಲಮನಲ್ಲಿಗೆ ಕರೆದೊಯ್ದು ಪರಿಚಯ ಮಾಡಿಕೊಡುತ್ತಾರೆ. ಶೂನ್ಯಸಿಂಹಾಸನಾಧೀಶ್ವರನಾದ ಅಲ್ಲಮನಿಗೆ ತನ್ನ ಜ್ಞಾನದೃಷ್ಟಿಯಿಂದ ಅಕ್ಕನ ಮಹಾತ್ಮ್ಯೆ ತಿಳಿದಿದ್ದರೂ ಅದನ್ನು ಲೋಕಕ್ಕೆ ಪ್ರಕಟಿಸದೆ ಅನುಭವಮಂಟಪಕ್ಕೆ ಸೇರಿಸಿ ಕೊಳ್ಳುವಂತಿರಲಿಲ್ಲ. ಆದುದರಿಂದ ಅಲ್ಲಮನು ಅಕ್ಕನನ್ನು ಕುರಿತು:

"ಉದುಮದದ ಯೌವನವನೊಳಕೊಂಡ ಸತಿ ನೀನು
ಇತ್ತಲೇಕೆ ಬಂದೆಯವ್ವಾ
ನಿನ್ನ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು
ಅಲ್ಲದಿರೆ ತೊಲಗು ತಾಯೆ"

ಎಂದು ನಿಷ್ಠುರವಾಗಿ ನುಡಿಯಲು, ಅಕ್ಕ:

"ಪಚ್ಚೆಯ ನೆಲಗಟ್ಟು ಕನಕದ ತೋರಣ ವಜ್ರದ ಕಂಭ
ಪವಳದ ಚಪ್ಪರವಿಕ್ಕಿ ಮದುವೆಯ ಮಾಡಿದರು
ಕಂಕಣ ಕೈದಾರಗಟ್ಟಿ ಸ್ಥಿರಸೇಸೆಯನಿಟ್ಟು
ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆಯ ಮಾಡಿದರು"

ಎಂದು ಉತ್ತರವನ್ನು ಕೊಡುವಳು. ಹೀಗೆಯೇ ಅಲ್ಲಮನ ಪ್ರಶ್ನೆಗಳಿಗೆಲ್ಲಾ ಅಕ್ಕ ಸಮಂಜಸವಾದ ಉತ್ತರವನ್ನು ಕೊಟ್ಟಳು. ಅಲ್ಲಮನಿಗೆ ಅದು ಒಪ್ಪಿಗೆಯಾಯಿತು. ಕೊನೆಗೆ ಅಲ್ಲಮ:

"ಅಂತರಂಗದ ಪ್ರಭೆ ಬಹಿರಂಗವೆಲ್ಲಾ ತಾನೆಯಾಗಿ
ಗುಹೇಶ್ವರ ಲಿಂಗದಲ್ಲಿ ಸಂದಿಲ್ಲದಿಪ್ಪ
ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ"

ಎಂದು ಅಕ್ಕನಿಗೆ ನಮಸ್ಕರಿಸುವನು. ಬಸವಣ್ಣನವರೂ ಸಹ:

"ಹೆಂಗೂಸಿನಂಗವ ನೋಡಿರೆ ಪುರಾತನರು
ಬಾಲತನದಂಗವ ನೋಡಿರೆ ಪುರಾತನರು

ಬ್ರಹ್ಮವನಾಚರಿಸಿ ತನ್ನ ಮರೆದಿಪ್ಪುದ ನೋಡಿರೆ ಲಿಂಗವಂತರ
ತನ್ನಲ್ಲಿ ತಾನು ನಿಶ್ಚಯವಾಗಿ ಭಾಷೆ ಬೀಸರವೋಗದ
ಇಪ್ಪ ಇರವು ಕೂಡಲ ಸಂಗಮದೇವನಲ್ಲಿ
ನಮ್ಮ ಮಹಾದೇವಿಯಕ್ಕಂಗಾಯಿತ್ತು"

ಎಂದು ಮುಕ್ತಕಂಠದಿಂದ ಹೊಗಳುವರು. ಅಕ್ಕಮಹಾದೇವಿಯಾದರೂ ಬಸವಣ್ಣನವರನ್ನು:

"ಎನ್ನಂಗದಲ್ಲಿ ಆಚಾರವ ತೋರಿದನಯ್ಯ ಬಸವಣ್ಣನು
ಆಚಾರವೇ ಲಿಂಗವೆಂದರುಹಿದನಯ್ಯ ಬಸವಣ್ಣನು
ಎನ್ನ ಪ್ರಾಣದಲ್ಲಿ ಅರುಹ ತೋರಿದನಯ್ಯ ಬಸವಣ್ಣನು
ಅರುಹೇ ಜಂಗಮವೆಂದರುಹಿದನಯ್ಯ ಬಸವಣ್ಣನು
ಚೆನ್ನಮಲ್ಲಿಕಾರ್ಜುನ ಎನ್ನ ಹೆತ್ತ ತಂದೆ
ಸಂಗನ ಬಸವಣ್ಣನು ಎನಗೀ ಕ್ರಮವನರುಹಿದನಯ್ಯಾ"

"ಕಾಮನ ಗೆಲಿದೆನು ಬಸವ ನಿಮ್ಮ ದಯದಿಂದ
ಸೋಮಧರನ ಹಿಡಿತಪ್ಪೆನು ಬಸವ ನಿಮ್ಮ ಕೃಪೆಯಿಂದ
ನಾಮದಲ್ಲಿ ಹೆಂಗೂಸೆಂಬ ಹೆಸರಾದಡೇನು
ಭಾವಿಸಲು ಗಂಡುರೂಪು ಬಸವ ನಿಮ್ಮ ದಯದಿಂದ
ಅತಿಕಾಮಿ ಚೆನ್ನಮಲ್ಲಿಕಾರ್ಜುನಯ್ಯಂಗೆ ತೊಡರನಿಕ್ಕಿ
ಎರಡರಿಯದೆ ಕೂಡಿದೆನು ಬಸವ ನಿಮ್ಮ ಕೃಪೆಯಿಂದ"

ಎಂದು ಮನವುಬ್ಬಿ ಕೊಂಡಾಡುವಳು.

ಕಲ್ಯಾಣದಲ್ಲಿಯ ತನ್ನ ಮಣಿಹ ಮುಗಿದ ತರುವಾಯ ಅಕ್ಕಮಹಾದೇವಿ ಚೆನ್ನಮಲ್ಲಿಕಾರ್ಜುನನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಲೆಂದು ಶ್ರೀಶೈಲದತ್ತ ಪ್ರಯಾಣ ಮಾಡಿದಳು. ಕಲ್ಯಾಣದ ಶರಣ ಸಮೂಹವನ್ನೆಲ್ಲಾ ಬೀಳ್ಕೊಂಡು: 'ನಿಮ್ಮ ಮಂಡೆಗೆ ಹೂವ ತಹೆನಲ್ಲದೆ ಹುಲ್ಲ ತಾರೆನು' ಎಂದು ಹೇಳಿ ಹೊರಡುತ್ತಾಳೆ. ಮಾರ್ಗದಲ್ಲಿನ ಪ್ರಕೃತಿಯ ಚೇತನಾಚೇತನ ಗಳನ್ನೆಲ್ಲಾ ಕುರಿತು:

"ಚಿಲಿಮಿಲಿಯೆಂದೋದುವ ಗಿಳಿಗಳಿರಾ ನೀವು ಕಾಣಿರೇ ನೀವು ಕಾಣಿರೇ
ಸರವರದೊಳಗಾಡುವ ಹಂಸೆಗಳಿರಾ ನೀವು ಕಾಣಿರೇ ನೀವು ಕಾಣಿರೇ
ಸರವೆತ್ತಿಪಾಡುವ ಕೋಗಿಲೆಗಳಿರಾ ನೀವು ಕಾಣಿರೇ ನೀವು ಕಾಣಿರೇ
ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೇ ನೀವು ಕಾಣಿರೇ
ಗಿರಿಗಹ್ವರದೊಳಾಡುವ ನವಿಲುಗಳಿರಾ ನೀವು ಕಾಣಿರೇ ನೀವು ಕಾಣಿರೇ
ಚೆನ್ನಮಲ್ಲಿಕಾರ್ಜುನದೇವನೆಲ್ಲಿದ್ದಾನೆಂಬುದಂ ಬಲ್ಲಡೆ ನೀವು ಹೇಳಿರೆ"

ಎಂದು ಅಂಗಲಾಚಿ ಬೇಡಿಕೊಳ್ಳುವಳು. ತನುಮನವೆಲ್ಲಾ ಚೆನ್ನಮಲ್ಲಿಕಾರ್ಜುನನಿಂದ ಆವರಿಸಲ್ಪಟ್ಟಿದ್ದ ಅಕ್ಕ:

"ವನವೆಲ್ಲ ನೀವೆ ವನದೊಳಗಣ ದೇವತರುವೆಲ್ಲ ನೀವೆ
ತರುವಿನೊಳಾಡುವ ಖಗಮೃಗವೆಲ್ಲ ನೀವೆ
ಚೆನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಮುಖದೋರ"

ಹೀಗೆ ಚನ್ನಮಲ್ಲಿಕಾರ್ಜುನನ ಚಿಂತೆಯಲ್ಲೇ ತಲ್ಲೀನಳಾಗುವಳು. ನಾನಾ ಬಗೆಯಲ್ಲಿ ಪ್ರಾರ್ಥಿಸಿಕೊಳ್ಳುವಳು. ಕೊನೆಗೆ:

"ಹೊಳೆವ ಕೆಂಜೆಡೆಗಳ ಮಣಿಮಕುಟದ ಒಪ್ಪುವ ಸುಲಿಪಲ್ಲ
ನಗೆಮೊಗದ ಕಂಗಳ ಕಾಂತಿಯಿಂ ಈರೇಳುವ ಭುವನಮಂ

ಬೆಳಗುವ ದಿವ್ಯಸ್ವರೂಪನಂ ಕಂಡೆ ನಾನು
ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು
ಗಂಡಗಂಡರನೆಲ್ಲ ಹೆಂಡಹೆಂಡಿರಾಗಿ ಆಳುವ
ಗರುವನ ಕಂಡೆ ನಾನು ಜಗದಾದಿ ಶಕ್ತಿಯೊಳು
ಬೆರಸಿ ಒಡನಾಡುವ ಪರಮಗುರು ಚೆನ್ನಮಲ್ಲಿಕಾರ್ಜುನನ
ನಿಲವ ಕಂಡು ಬದುಕಿದೆನು"

ಎಂದು ದಿವ್ಯಸಾಕ್ಷಾತ್ಕಾರವನ್ನು ಪಡೆದುಕೊಳ್ಳುವಳು. ಕದಳಿಯ ಬನದಲ್ಲಿ ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗುವಳು.

ಅಂತರಂಗದ ವಾಣಿಯಂತಿರುವ ಅಕ್ಕನ ವಚನಗಳಲ್ಲಿ ಸಾಮಾನ್ಯ ಚೇತನವೊಂದು ಸಿದ್ಧಿಯ ಹಂಬಲಿಗಾಗಿ ನಡೆಸುವ ಸಾಧನೆಯ ತೊಳಲಾಟವನ್ನು ಕಾಣಬಹುದು. 'ನಾ ಪ್ರಪಂಚಿನ ಪುತ್ತಳಿ' ಎಂಬ ಭಾವದಿಂದ ಸಾಧನೆಗೆ ತೊಡಗಿದ ಅಕ್ಕ 'ನಾಮದಲಿ ಹೆಂಗೂಸೆಂಬ ಹೆಸರಾದರೇನು ಭಾವಿಸಲು ಗಂಡು ರೂಪು ಬಸವಾ ನಿಮ್ಮ ದಯದಿಂದ' ಎಂಬ ಮಟ್ಟಕ್ಕೇರಿ 'ಚೆನ್ನಮಲ್ಲಿಕಾರ್ಜುನಾ ನಿಮ್ಮಲ್ಲಿ ನೀವಾಗಿ, ನಿಮ್ಮಿಂದ ನಿಮ್ಮ ಮರೆದೆನಯ್ಯಾ' ಎಂಬ ಕೊನೆಯ ಸ್ಥಿತಿಯನ್ನು ತಲುಪಿ ಚೆನ್ನಮಲ್ಲಿಕಾರ್ಜುನನಲ್ಲೇ ಐಕ್ಯವಾಗುವಳು.

ಭಕ್ತಿಯಲ್ಲಿ ಮಧುರಭಾವ ತುಂಬ ಆಪ್ಯಾಯಮಾನವಾದುದು. 'ಶರಣಸತಿ ಲಿಂಗಪತಿ' ಎಂಬ ಭಾವದಿಂದ ಸಾಧನೆಗೆ ತೊಡಗಿದ ಅಕ್ಕ ಚೆನ್ನಮಲ್ಲಿಕಾರ್ಜುನನನ್ನೇ ಆರಾಧ್ಯದೈವವಾಗಿ ಪತಿಯಾಗಿ ಸ್ವೀಕರಿಸಿದಳು. ಲೌಕಿಕವಾದ ಯಾವ ಆಸೆ ಆಮಿಷಗಳಿಗೂ ಆಕೆ ಬಲಿಯಾಗಲಿಲ್ಲ. ಇದರಿಂದ ಆಕೆ ಶ್ರೇಷ್ಠ ಅನುಭಾವಿಯಾದಳು; ದೈವಸಾಕ್ಷಾತ್ಕಾರವನ್ನು ಪಡೆದುಕೊಂಡಳು. ಬಸವಣ್ಣನವರ ಅನುಭವಮಂಟಪದಿಂದ ಅರಳಿದ ಕಮನೀಯ ಕುಸುಮ ಅಕ್ಕಮಹಾದೇವಿ.

ಬಸವಣ್ಣನವರು ಸ್ಥಾಪಿಸಿದ ಅನುಭವ ಮಂಟಪದ ಪ್ರಭಾವಲಯದಲ್ಲಿ ತೊಳಗಿ ಬೆಳಗಿದವರು ಅಲ್ಲಮಪ್ರಭು, ಚೆನ್ನಬಸವಣ್ಣ, ಸಿದ್ಧರಾಮ, ಮಡಿವಾಳ ಮಾಚಯ್ಯ ಮತ್ತು ಅಕ್ಕಮಹಾದೇವಿ. ಅಂದಿನ ಈ ಐವರು ಶ್ರೇಷ್ಠ ಅನುಭಾವಿಗಳು ಅನುಭವ ಮಂಟಪದ ಜ್ಞಾನಜ್ಯೋತಿಗಳಾಗಿ ಶರಣರ ಸಂದೋಹಕ್ಕೆ ದಾರಿದೀಪಗಳಾಗಿ ಕಂಗೊಳಿಸಿದ್ದಾರೆ. ಸಮಾಜೋದ್ಧಾರ ಕಾರ್ಯಕ್ಕೆ ಧರ್ಮಪ್ರಚಾರಕ್ಕೆ ಆಚಾರ್ಯರೆನಿಸಿಕೊಂಡಿದ್ದಾರೆ. ಅವರು ನೀಡಿದ ಸಂದೇಶ ಎಂದೆಂದಿಗೂ ಆದರ್ಶಪ್ರಾಯ ವಾಗಿದೆ. ಎಲ್ಲ ಕಾಲಕ್ಕೂ ಮಾನವನ ಆತ್ಮೋನ್ನತಿಗೆ ಬೆಳಕನ್ನು ನೀಡಬಲ್ಲದಾಗಿದೆ. ಅನುಭವ ಮಂಟಪದ ಪ್ರಭಾವಲಯದಲ್ಲಿ ದೇದೀಪ್ಯಮಾನರಾಗಿ ರಾರಾಜಿಸುತ್ತಿರುವ ಈ ವಿಭೂತಿ ಪುರುಷರು ಚಿರಸ್ಮರಣೀಯರಾಗಿದ್ದಾರೆ. ಅನುಭವ ಮಂಟಪದ ಸ್ಥಾಪನೆ ಬಸವಣ್ಣನವರ ಕೀರ್ತಿಕಲಶ ಸ್ಥಾಪನೆಯಂತಿದೆ.

■

# ಶರಣರ ಪಾರಿಭಾಷಿಕ ಶಬ್ದಗಳು

**ಭ**ರತಖಂಡ ವಿವಿಧ ಧರ್ಮಗಳ ತವರೂರು. ಈ ದೇಶದಲ್ಲಿ ಅನಾದಿ ಕಾಲದಿಂದಲೂ ಭಿನ್ನ ಭಿನ್ನ ಧರ್ಮಗಳ ಉಚ್ಛ್ರಾಯ ಮತ್ತು ಅವನತಿಗಳನ್ನು ಚರಿತ್ರೆಯಲ್ಲಿ ಕಾಣಬಹುದಾಗಿದೆ. ಕರ್ನಾಟಕದಲ್ಲಿ ಶೈವ ಬೌದ್ಧ ಜೈನ ವೈದಿಕ ಧರ್ಮಗಳು ಪ್ರಬಲವಾಗಿದ್ದು ವಿಪುಲ ಸಾಹಿತ್ಯ ಸೃಷ್ಟಿಗೆ ಅವಕಾಶ ಮಾಡಿಕೊಟ್ಟಿವೆ. ಅಸಂಖ್ಯಾತ ಧಾರ್ಮಿಕ ಗ್ರಂಥಗಳು ಸೃಷ್ಟಿಯಾಗಿವೆ. ಆಯಾ ಕಾಲದ ರಾಜರ ಪ್ರಭಾವದಿಂದಲೂ ಪ್ರೋತ್ಸಾಹದಿಂದಲೂ ಈ ಧರ್ಮಗಳು ವ್ಯಾಪಕವಾಗಿ ನಾಡಿನಾದ್ಯಂತ ಪ್ರಚಲಿತವಾದುವು. ಆಯಾ ಧರ್ಮವನ್ನು ಅವಲಂಬಿಸಿದ ಜನ ತಮ್ಮ ಶ್ರದ್ಧೆಯನ್ನೂ ನಿಷ್ಠೆಯನ್ನೂ ಆ ಧರ್ಮಕ್ಕೆ ಮೀಸಲಾಗಿರಿಸಿ ಉದ್ಗ್ರಂಥಗಳನ್ನು ರಚಿಸಿದ್ದಾರೆ.

ಕನ್ನಡ ನಾಡಿನಲ್ಲಿ ಹನ್ನೆರಡನೆಯ ಶತಮಾನದಲ್ಲಿ ವೀರಶೈವ ಧರ್ಮ ಪ್ರವರ್ಧಮಾನಕ್ಕೆ ಬಂದಿತು. ಧರ್ಮವೀರನೂ ಸಮಾಜಸುಧಾರಕನೂ ಆದ ಬಸವಣ್ಣ ಈ ಧರ್ಮ ವ್ಯಾಪಕವೂ ಸಾರ್ವತ್ರಿಕವೂ ಸುಲಭವೂ ಆಗುವಂತೆ ಮಾಡಿ ನೂತನ ಕ್ಷಿತಿಜವನ್ನು ತೆರೆದನು. ಈ ಸುಧಾರಿಸಿದ ಧರ್ಮದಲ್ಲಿ 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ' ಸರ್ವರಿಗೂ ಪ್ರವೇಶವಿತ್ತು. ಜಟಿಲ ಧಾರ್ಮಿಕ ನಿಯಮಗಳನ್ನು ಸಡಿಲಗೊಳಿಸಿದುದರಿಂದ ವೀರಶೈವ ಧರ್ಮ ಸರ್ವಾದರಣೀಯ ವಾಯಿತು. ದೇಶದ ನಾನಾಭಾಗಗಳಿಂದ ಧರ್ಮಪಿಪಾಸುಗಳನ್ನು ಆಕರ್ಷಿಸಿತು. ಹೀಗೆ ನಾನಾ ಜಾತಿಯ ಜನ ಈ ಧರ್ಮವನ್ನು ಅನುಸರಿಸಿ ವಚನಗಳನ್ನು ರಚಿಸಿದರು. ಅವರವರ ಕಾಯಕದ ಪಾರಿಭಾಷಿಕ ಶಬ್ದಗಳೆಲ್ಲಾ ಗ್ರಂಥಸ್ಥವಾದುವು. ಕಾಯಕಕ್ಕೆ ಮಿಗಿಲಾಗಿ ಮಹತ್ವವನ್ನು ಕೊಟ್ಟಿದ್ದ ಬಸವಣ್ಣನವರು ವೀರಶೈವ ಧರ್ಮವನ್ನು ಅನುಸರಿಸಿರುವರು. ತಮ್ಮ ತಮ್ಮ ಕಾಯಕಗಳಲ್ಲೇ ಮುಂದುವರಿದು ಸಾಧನೆಯನ್ನು ಕೈಗೊಳ್ಳುವಂತೆ ಬೋಧಿಸಿದರು. ಅಂಬಿಗರ ಚೌಡಯ್ಯ, ಮೇದರ ಕೇತಯ್ಯ, ಮಾದಾರ ಧೂಳಯ್ಯ, ಹೆಂಡದ ಮಾರಯ್ಯ ಮೊದಲಾದ ವಿವಿಧ ವೃತ್ತಿಯ ಜನ ತಮ್ಮ ವಚನಗಳಲ್ಲಿ ಈ ವೃತ್ತಿಗಳಿಗೆ ಸಂಬಂಧಿಸಿದ ಶಬ್ದಸಂಪತ್ತನ್ನು ಉಳಿಸಿಕೊಟ್ಟಿದ್ದಾರೆ, ಬೆಳೆಸಿಕೊಟ್ಟಿದ್ದಾರೆ. ಈ ವಚನಗಳಿಂದ ಸಾಹಿತ್ಯಕ್ಕೂ ವಿಶೇಷವಾಗಿ ಕೋಶವಿಜ್ಞಾನಕ್ಕೂ ತುಂಬ ಪ್ರಯೋಜನವಾಗಿದೆ. ಸ್ತ್ರೀಯರೂ ಸಹ ವಚನಗಳನ್ನು ರಚಿಸಿ ಕನ್ನಡದ ಶಬ್ದಭಂಡಾರವನ್ನು ತುಂಬಿದ್ದಾರೆ.

ಪ್ರತಿಯೊಂದು ಧರ್ಮಕ್ಕೂ ತನ್ನದೇ ಆದ ಆಚರಣಾವಿಧಿ ಇರುತ್ತದೆ. ಆಯಾ ಧರ್ಮಗಳಲ್ಲಿನ ಶಬ್ದಗಳಿಗೆ ಇತರ ಧಾರ್ಮಿಕ ಶಬ್ದಗಳಿಗಿಂತ ವಿಶಿಷ್ಟಾರ್ಥವಿರುತ್ತದೆ. ಈ ಶಬ್ದಗಳ ಅರ್ಥಗಳನ್ನು ಅರಿಯಬೇಕಾದರೆ ಆ ಧರ್ಮವನ್ನು ಅರಿತುಕೊಳ್ಳುವುದು ಅನಿವಾರ್ಯ. ಹೀಗಾಗಿ ಕೋಶದಲ್ಲಿ ಈ ಎಲ್ಲ ಪಾರಿಭಾಷಿಕ ಶಬ್ದಗಳ ಅರ್ಥವನ್ನೂ ನಿರೂಪಿಸುವುದು ದುಸ್ತರವಾದುದು. ಎಲ್ಲ ಧರ್ಮಗಳಿಗೂ ಸಮಾನವಾದ ಅರ್ಥವಿರುವ ಶಬ್ದಗಳ ವಿಷಯದಲ್ಲಿ ಈ ಸಮಸ್ಯೆ ಉದ್ಭವಿಸುವುದಿಲ್ಲ. ಆದರೆ ಆಯಾ ಧರ್ಮದ ಪ್ರಕ್ರಿಯೆಗಳನ್ನು ವಿವರಿಸುವ ಶಬ್ದಗಳಿಗೆ ಪ್ರತ್ಯೇಕ ಪಾರಿಭಾಷಿಕ ನಿಘಂಟು ಅತ್ಯಾವಶ್ಯಕ.

ಜೈನ ವೀರಶೈವ ವೈದಿಕ ಸಾಹಿತ್ಯಕ್ಕೆ ಸಂಬಂಧಪಟ್ಟ ಧಾರ್ಮಿಕ ಮತ್ತು ದಾರ್ಶನಿಕ ಶಬ್ದಗಳ ಜೊತೆಗೆ ಸಂಗೀತ ನೃತ್ಯ ಶಿಲ್ಪ ಮೊದಲಾದ ವಿವಿಧ ಕಲೆಗಳಿಗೆ ಸಂಬಂಧಿಸಿದ ಪಾರಿಭಾಷಿಕ ಶಬ್ದಗಳೂ, ವ್ಯಾಕರಣ ಛಂದಸ್ಸು ಅಲಂಕಾರ

ತರ್ಕ ವೈದ್ಯ ಜ್ಯೋತಿಷ್ಯ ಕಾಮಶಾಸ್ತ್ರ ಗಣಿತ ಮುಂತಾದ ಶಾಸ್ತ್ರಗಳಿಗೆ ಸಂಬಂಧಿಸಿದ ಶಬ್ದಗಳೂ ಇತರ ವೈಜ್ಞಾನಿಕ ಪಾರಿಭಾಷಿಕ ಶಬ್ದಗಳೂ ನಿಘಂಟಿನಲ್ಲಿ ಸೇರ್ಪಡೆಯಾಗಬೇಕಾಗುತ್ತದೆ. ಸಾಮಾನ್ಯ ಸಾಧಾರಣ ನಿಘಂಟುಗಳಲ್ಲಿ ಈ ಪಾರಿಭಾಷಿಕ ಶಬ್ದಗಳ ಸಮಗ್ರ ಅರ್ಥವನ್ನು ವಿವರಿಸುವುದು ಸಾಧ್ಯವಾಗುವುದಿಲ್ಲ. ಆದುದರಿಂದ ಈ ಒಂದೊಂದು ಧರ್ಮಕ್ಕೂ ವೃತ್ತಿಗೂ ಸಂಬಂಧಿಸಿದ ಕೋಶಗಳ ಅಗತ್ಯ ಬಹಳಷ್ಟಿದೆ.

ವೀರಶೈವಧರ್ಮ ತುಂಬ ಪ್ರಾಚೀನವಾದುದು. ಇದರಲ್ಲಿ ಶಾಸ್ತ್ರಗ್ರಂಥಗಳೂ ಧರ್ಮಗ್ರಂಥಗಳೂ ಸಾಹಿತ್ಯ ಗ್ರಂಥಗಳೂ ಕಂಡುಬರುತ್ತದೆ. ಈ ಎಲ್ಲ ಪ್ರಕಾರಗಳಲ್ಲಿ ಕಂಡುಬರುವ ಪಾರಿಭಾಷಿಕ ಶಬ್ದಗಳನ್ನು ಆಕರಗಳೊಡನೆ ಸಂಗ್ರಹಿಸಿ ವಿವರವಾಗಿ ನಿರೂಪಿಸುವ ನಿಘಂಟು ಸದ್ಯದಲ್ಲಿ ಯಾವುದೂ ಕಂಡುಬರುತ್ತಿಲ್ಲ. ರಾವ್ ಬಹದ್ದೂರ್ ಪಿ.ಜಿ. ಹಳಕಟ್ಟಿಯವರು ಅತ್ಯಂತ ಪರಿಶ್ರಮದಿಂದ ಸಿದ್ಧಪಡಿಸಿರುವ 'ಶಿವಾನುಭವ ಶಬ್ದಕೋಶ' ಉಪಯುಕ್ತವಾದರೂ ಮೂಲ ಆಕರಗಳ ಅಭಾವದಿಂದ ಈ ಕೋಶದಲ್ಲಿ ನಿರೂಪಿಸಿರುವ ಅರ್ಥಗಳನ್ನು ಮೂಲಗ್ರಂಥಗಳಿಂದ ತಾಳೆನೋಡುವುದು ಸಾಧ್ಯವಿಲ್ಲವಾಗಿದೆ. ಆದುದರಿಂದ ಈ ನಿಘಂಟನ್ನು ಈ ಮೇಲಿನ ದೃಷ್ಟಿಯಿಂದ ನವೀಕರಿಸಿದರೆ ತುಂಬ ಪ್ರಯೋಜನ ವಾಗುವುದರಲ್ಲಿ ಸಂದೇಹವೇ ಇಲ್ಲ.

ಪ್ರಕೃತ ವೀರಶೈವ ಧರ್ಮಕ್ಕೆ ಸಂಬಂಧಿಸಿದ ಸಾಹಿತ್ಯದಲ್ಲಿ ಬಳಕೆಯಾಗಿರುವ ಇತರ ಧರ್ಮಗಳಿಗಿಂತ ಭಿನ್ನವಾದ ಅರ್ಥವನ್ನುಳ್ಳ ಕೆಲವು ಶಬ್ದಗಳನ್ನು ಅವಲೋಕಿಸೋಣ.

**ಗುರು ಲಿಂಗ ಜಂಗಮ:** ಈ ಮೂರು ಶಬ್ದಗಳಿಗೆ ವೀರಶೈವ ಧರ್ಮದಲ್ಲಿ ತುಂಬ ವ್ಯಾಪಕವಾದ ಅರ್ಥವಿದೆ. ರೂಢಿಯಲ್ಲಿ 'ಗುರು' ಶಬ್ದಕ್ಕೆ ಬೋಧಿಸುವವನು, ಉಪದೇಶಿಸುವವನು ಎಂದಿದೆ. ಭಕ್ತನಿಗೆ ದೀಕ್ಷೆಯನ್ನು ಮಾಡಿ ಲಿಂಗಾಂಗಿ ಧರ್ಮದ ಉಪದೇಶವನ್ನು ಮಾಡುವವನು ಗುರು. ಗುರುವನ್ನು ಸಾಕ್ಷಾತ್ ಈಶ್ವರನೆಂದು ಭಾವಿಸಬೇಕು.

ಆವವಂ ಗುರುವಾತನೇ ಶಿವಂ ಬಳಿಕ ಕೂರ್ತಾವವಂ ಶಿವನಾತನೇ ಗುರುವೆನುತ್ತಲಾ
ವಾವ ಪರಿಯಿಂ ನುಡಿದು ನೆನೆದು ನಿಶ್ಚೈಸಿ ಭಕ್ತಿಯ ಮುಕ್ತಿಯೊದವ ಕೊಡುವ
ಯೋಗುರುಸ್ಸಶಿವಃಪ್ರೋಕ್ತೋಯಶ್ಶಿವಸ್ಯಗುರುಸ್ಮೃತಃ
ಭಕ್ತಿ ಮುಕ್ತಿ ಪ್ರದಾತಾಯ ತಸ್ಮೈಶ್ರೀ ಗುರುವೇನಮಃ
ಅಖಂಡಮಂಡಲಾಕಾರಂ ವ್ಯಾಪ್ತಂ ಯೇನ ಚರಾಂ ಚರಂ
ಜಗದ್ವಂದಿತ ಪಾದಾಯ ತಸ್ಮೈಶ್ರೀ ಗುರವೇ ನಮಃ

(ವೀರಶೈವಾಮೃತ ಮಹಾಪುರಾಣ ೧-೧-೧೦) ಗುರು ಶಾಸ್ತ್ರಾಗಮಗಳನ್ನು ಬಲ್ಲವನಾಗಿರಬೇಕು. ಇಲ್ಲದಿದ್ದರೆ ಗುರುಶಿಷ್ಯರಿಬ್ಬರೂ ಭ್ರಷ್ಟರಾಗುತ್ತಾರೆ. ಇದನ್ನೇ ಪ್ರಭುದೇವರು:

ಉಪಚಾರದ ಗುರುವಿಂಗೆ ಉಪಚಾರದ ಶಿಷ್ಯ
ಉಪಚಾರದ ಲಿಂಗ ಉಪಚಾರದ ಜಂಗಮ
ಉಪಚಾರದ ಪ್ರಸಾದವ ಕೊಂಡ ಗುರುವಿಂಗೆ
ಭವದ ಲೆಂಕನಾಗಿ ಅಂಧಕನ ಕೈಯ ಅಂಧಕ ಹಿಡಿದಂತೆ
ಇವರಿಬ್ಬರೂ ಹೊಲಬುಗೆಟ್ಟರು ಕಾಣಾ ಗುಹೇಶ್ವರ

ಎಂದು ಹೇಳಿದ್ದಾರೆ. ಈ ಗುರುಗಳಲ್ಲಿ ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಗುರು ಎಂದು ಮೂರುಪ್ರಭೇದಗಳಿವೆ. ಅಂಗಕ್ಕೆ ಲಿಂಗವನ್ನು ಅನುಗೊಳಿಸಿದವನು ಎಂದರೆ ದೀಕ್ಷೆಯನ್ನು ಕೊಟ್ಟವನು ದೀಕ್ಷಾಗುರು. ಮನಕ್ಕೆ ಜ್ಞಾನವನ್ನು ಅರುಹಿದವನು ಶಿಕ್ಷಾಗುರು, ಅಂಗಾಂಗ ಸಾಮರಸ್ಯದ ಗುಟ್ಟನ್ನು ತಿಳಿಸಿ ಮೋಕ್ಷಮಾರ್ಗವನ್ನು ತೋರುವವನು ಮೋಕ್ಷಗುರು. ಆದ್ದರಿಂದಲೇ ಸರ್ವಜ್ಞ 'ಗುರುವಿನಿಂದಲೆ ಇಹವು ಗುರುವಿನಿಂದಲೆ ಪರವು' ಎಂದು ಹೇಳಿದ್ದಾನೆ. ತನುವ ಕೊಟ್ಟು ಗುರುವನೊಲಿಸಬೇಕು ಎಂದು ವಚನಕಾರರು ಹೇಳಿದ್ದಾರೆ.

ಮಹಾದೇವಿಯಕ್ಕ ಗುರುವಿನ ಮಹತ್ವವನ್ನು ಹೀಗೆ ಬಣ್ಣಿಸಿದ್ದಾಳೆ:

ಗುರುವಿನ ಕರುಣದಿಂದ ಲಿಂಗವ ಕಂಡೆ, ಜಂಗಮವ ಕಂಡೆ
ಗುರುವಿನ ಕರುಣದಿಂದ ಪಾದೋದಕವ ಕಂಡೆ, ಪ್ರಸಾದವ ಕಂಡೆ
ಗುರುವಿನ ಕರುಣದಿಂದ ಸಜ್ಜನ ಸದ್ಭಕ್ತರ ಸದ್ಗೋಷ್ಠಿಯ ಕಂಡೆ
ಚನ್ನಮಲ್ಲಿಕಾರ್ಜುನಯ್ಯ
ನಾ ಹುಟ್ಟಲೊಡನೆ ಶ್ರೀಗುರು ವಿಭೂತಿಯ ಪಟ್ಟವ ಕಟ್ಟಿ
ಲಿಂಗಸ್ವಾಯತನ ಮಾಡಿದನಾಗಿ ಧನ್ಯಳಾದೆನು.

ವಿರಕ್ತ ತೋಂಟದಾರ್ಯರು 'ಮನೋವಿಜಯ'ದ ಚಂದ್ರಿಕೆಯಲ್ಲಿ ನಾಲ್ಕು ತೆರದ ಸದ್ಗುರು ಸೇವೆಯೆಂತೆಂದೊಡೆ- ಗುರುವಿಂಗನುಕೂಲವೃತ್ತಿಯೆ ಆಪ್ತನೆನಿಪುದು. ಗುರುಪಾದ ಪ್ರಕ್ಷಾಳನಾಧಿಕವೆ ಅಂಗವೆನಿಪುದು. ಗುರುವಿನ ಗೃಹಕ್ಷೇತ್ರಾದಿ ರಕ್ಷಣವೆ ಸ್ಥಾನವೆನಿಪುದು. ಶ್ರೀಗುರು ಸಾಕ್ಷಾತ್ಕಾರ ಶಿವನೆಂಬ ವಿಶ್ವಾಸವೆ ಸದ್ಭಾವವೆನಿಸುವುದು ಎಂದಿದ್ದಾರೆ (೨-೨೧ ಟೀಕು) ಆದ್ದರಿಂದ ಗುರು ಮುನಿದರೆ ಹರನೂ ಕಾಯಲಾರ.

**ಲಿಂಗ:** ದೀಕ್ಷಾಕಾಲದಲ್ಲಿ ಗುರು ಶಿಷ್ಯನಿಗೆ ಮಂತ್ರೋಪದೇಶಪೂರ್ವಕವಾಗಿ ಬಾಹ್ಯಾಚರಣೆಗಾಗಿ ಕೊಡುವ ಲಾಂಛನ. ಲಿಂಗವೆಂದರೆ ಸಚ್ಚಿದಾನಂದ ಸ್ವರೂಪನಾದ ಪರಮೇಶ್ವರ. ಅಚೇತನ ವಸ್ತುಗಳಿಂದ ಮಾಡಿದುದು ಲಿಂಗವಲ್ಲ. "ಆಕಾಶದೋಪಾದಿಯಿಂದಲಾಪೂರ್ಣಂ ನಿರಾಕಾರನ್ಯೆ ದೇಹಪಾದಂಗಳಿಲ್ಲದನಲಾ ಕೇಳ್ವುದೆನಗೆ ಪೋದಪೆನು ಬಂದಪೆನೆಂಬುದುಂ ಹಸಿವು ನೀರಡಿಕೆಯಾ ಆಕರಣೆಯಿಲ್ಲನಂತರದಲ್ಲಿ ಶಿವನಖಿಳ ಲೋಕದೊಳ್ ಬೆಳಗುವ ನಿಜಪ್ರಕಾಶಾಂಗನ್ಯೆ ಶ್ರೀಕೇವಲಂ ಲಿಂಗಂ"; "ಲಿಂಗವೇ ಶಂಭುವೆಂದರಿ"; "ಆಕಾಶವೇ ಲಿಂಗವೆಂಬರೈ".

ಶಿವೋಸ್ತಿ ಸಚ್ಚಿದಾನಂದಃ ಪರಿಪೂರ್ಣೋ ನಿರಂಜನಃ ।
ಅಕಾರಣಮಕಾರ್ಯಂಚ ಮನೋ ವಾಚಾಮಗೋಚರಂ ॥
ಪರಂ ಗೂಢಂ ಶರೀರಸ್ಥಂ ಲಿಂಗಕ್ಷೇತ್ರಮನಾದಿವತ್ ।
ಯಥಾದಿಮೈಶ್ವರ್ಯಂ ತೇಜಸ್ತಲ್ಲಿಂಗಂ ಪಂಚಸಜ್ಞಿತಂ ॥

(ವೀರಶೈವಾಮೃತ ಮಹಾಪುರಾಣ ೧.೩.೧೮,೨೩). 'ನಿರ್ವಾಚ್ಯಪದ ಸರ್ವತೋರ್ಕೆಗಾಸ್ಪದಮಪ್ಪುದಾಗಿ ಘನಲಿಂಗವೆಂದು ಉದಿಸಿತ್ತು ನಾಮಂ' ವೇದಂಗಳಂತೆ ಪೇಳ್ವುದರಿಂದ ಅನಿರ್ವಾಚ್ಯ ಸ್ವರೂಪಮಾದ ಬ್ರಹ್ಮಂ ಸಕಲ ಪ್ರಪಂಚಕ್ಕಧಿಷ್ಠಾನಮಾಗಿ:

ಲೀಯತೇ ಗಮ್ಯತೇ ಯತ್ರಯೇನ ಸರ್ವಂ ಚರಾಚರಂ
ತದೇ ತಲ್ಲಿಂಗಮಿತ್ಯುಕ್ತಂ ಲಿಂಗಶಬ್ದಾರ್ಥವೇದಿಭಿಃ

ಎಂದು ಪೇಳಲ್ಪಡೆದ ಯೋಗಯುಕ್ತಮಾದಾ ಲಿಂಗ ಶಬ್ದದಿಂ ಪ್ರತಿಪಾದಮಾದ ಪರಶಿವತತ್ತ್ವಮೆಸೆದುದು (ಮನೋವಿಜಯ ೩-೩, ಟೀಕು). ಲಿಂಗದಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಎಂದು ಮೂರು ತೆರ. ಇವುಗಳ ಆಚರಣಾ ಕ್ರಮವನ್ನು "ತನುಶುದ್ಧನಾಗಿ ಇಷ್ಟಲಿಂಗವ ಪೂಜಿಸಬೇಕು; ಮನಶುದ್ಧನಾಗಿ ಪ್ರಾಣಲಿಂಗವ ಧ್ಯಾನಿಸಬೇಕು; ಭಾವಶುದ್ಧನಾಗಿ ಭಾವಲಿಂಗವ ಭಾವಿಸಬೇಕು" ಎಂದು ಚನ್ನಬಸವಣ್ಣನವರ ವಚನಗಳಲ್ಲಿ (೧೪೪೮) ಹೇಳಿದೆ. "ವಚನಕಾರರು ಈ ಲಿಂಗವಿಕಾಸದ ಬಗ್ಗೆ ತಮ್ಮ ವಿಚಾರಗಳನ್ನು ಷಟ್‌ಸ್ಥಲಕ್ಕೆ ಅನುಸರಿಸಿ ಹೇಳುತ್ತಾರೆ. ಆದ್ದರಿಂದ ಲಿಂಗದಲ್ಲಿ ಅವರು ಆರು ವಿಭಾಗಗಳನ್ನು ಮಾಡುತ್ತಾರೆ. ಅವು ಯಾವುವೆಂದರೆ- (೧) ಆಚಾರಲಿಂಗ, (೨) ಗುರುಲಿಂಗ, (೩) ಶಿವಲಿಂಗ, (೪) ಜಂಗಮಲಿಂಗ, (೫) ಪ್ರಸಾದಲಿಂಗ, (೬) ಮಹಾಲಿಂಗ" (ಶಿವಾನುಭವಕೋಶ, ಪು.೧೦)

ಮನವ ಕೊಟ್ಟು ಲಿಂಗವನೊಲಿಸಬೇಕು ಎಂದು ವಚನಕಾರರು ಹೇಳಿದ್ದಾರೆ. ಈ ಆರು ಲಿಂಗಗಳಲ್ಲಿಯೂ ಒಂದೊಂದರಲ್ಲಿಯೂ ತ್ರಿವಿಧಗಳನ್ನು ಚೆನ್ನಬಸವಣ್ಣನವರು ಈ ವಚನದಲ್ಲಿ ವಿವರಿಸಿದ್ದಾರೆ.

(೧) **ಆಚಾರಲಿಂಗ ತ್ರಿವಿಧ :** ಸದಾಚಾರ, ನಿಯತಾಚಾರ, ಗಣಾಚಾರ. ಎಲ್ಲ ಜನವಹುದೆಂಬುದೆ ಸದಾಚಾರ. ಹಿಡಿದ ವ್ರತನಿಯಮವ ಬಿಡದಿಹುದೆ ನಿಯತಾಚಾರ. ಶಿವನಿಂದೆಯ ಕೇಳದಿಹುದೆ ಗಣಾಚಾರ.

(೨) **ಗುರುಲಿಂಗ ತ್ರಿವಿಧ :** ದೀಕ್ಷೆ, ಶಿಕ್ಷೆ, ಸ್ವಾನುಭಾವ. ದೀಕ್ಷೆಯೆಂದಡೆ ಗುರು, ಶಿಕ್ಷೆಯೆಂದಡೆ ಜಂಗಮ. ಸ್ವಾನುಭಾವವೆಂದಡೆ ತನ್ನ ತಾನರಿವುದು.

(೩) **ಶಿವಲಿಂಗ ತ್ರಿವಿಧ :** ಇಷ್ಟಲಿಂಗ, ಪ್ರಾಣಲಿಂಗ, ತೃಪ್ತಿಲಿಂಗ. ಶ್ರೀಗುರು ಕರಸ್ಥಲದಲ್ಲಿ ಅನುಗ್ರಹವ ಮಾಡಿ ಕೊಟ್ಟುದೀಗ ಇಷ್ಟಲಿಂಗ. ತನುಗುಣನಾಸ್ತಿಯಾದುದೆ ಪ್ರಾಣಲಿಂಗ. ಜಾಗ್ರತ್‌ಸ್ವಪ್ನ ಸುಷುಪ್ತಿಯಲ್ಲಿ ಲಿಂಗವಲ್ಲದೆ ಪೆಱತೊಂದನಱಿಯದಿಪ್ಪುದೆ ತೃಪ್ತಿಲಿಂಗ.

(೪) **ಜಂಗಮಲಿಂಗ ತ್ರಿವಿಧ :** ಸ್ವಯ, ಚರ, ಪರ, ಸ್ವಯವೆಂದಡೆ ತಾನು. ಚರವೆಂದಡೆ ಲಾಂಛನ ಮುಂತಾಗಿ ಚರಿಸುವುದು. ಪರವೆಂದಡೆ ಅಳಿವು ಮುಂತಾಗಿ ಚರಿಸುವುದು.

(೫) **ಪ್ರಸಾದಲಿಂಗ ತ್ರಿವಿಧ :** ಶುದ್ಧ, ಸಿದ್ಧ, ಪ್ರಸಿದ್ಧ. ಶುದ್ಧವೆಂದಡೆ ಗುರುಮುಖದಿಂದ ಮಲತ್ರಯವ ಕಳೆದುಳಿದ ಶೇಷ. ಸಿದ್ಧವೆಂದಡೆ ಲಿಂಗಮುಖದಿಂದ ಕರಣಮಥನಂಗಳ ಕಳೆದುಳಿದ ಶೇಷ. ಪ್ರಸಿದ್ಧವೆಂದಡೆ ಜಂಗಮ ಮುಖದಿಂದ ಸರ್ವಚೈತನ್ಯಾತ್ಮಕ ತಾನೆಯಾಗಿ ಖಂಡಿತವಳಿದುಳಿದ ಶೇಷ.

(೬) **ಮಹಾಲಿಂಗ ತ್ರಿವಿಧ :** ಪಿಂಡಜ, ಅಂಡಜ, ಬಿಂದುಜ. ಪಿಂಡಜವೆಂದಡೆ ಘಟಾಕಾಶ; ಅಂಡಜವೆಂದಡೆ ಬ್ರಹ್ಮಾಂಡ; ಬಿಂದುಜವೆಂದಡೆ ಮಹಾಕಾಶ. ಇಂತು ಲಿಂಗಸ್ಥಲ ಆರಕ್ಕುಂ ಹದಿನೆಂಟು ಸ್ಥಲವಾಯಿತ್ತು (ಚನ್ನಬಸವಣ್ಣನವರ ವಚನಗಳು ೧೧೧)

**ಜಂಗಮ:** "ಭಕ್ತನನ್ನು ಭವಸಾಗರದಿಂದ ದಾಟಿಸುವ, ಗಮ್ಯಸ್ಥಾನಕ್ಕೆ ಕೊಂಡೊಯ್ಯುವ ಮಹಾತ್ಮನೇ ಜಂಗಮ" (ವಚನ ಧರ್ಮಸಾರ, ಪುಟ ೧೨೫); ಜಂಗಮನು ಅಂಗವಿಕಾರಗಳನ್ನು ದೂರಮಾಡಿ, ಷಟ್‌ಸ್ಥಲಾಚರಣೆಯುಳ್ಳವನಾಗಿ ಶಿವತತ್ತ್ವವನ್ನೊಳಗೊಂಡು ಆಚರಿಸುತ್ತಾನೆ. ಅವನು ಭಾವದಲ್ಲಿ ಲಿಂಗಪರಿಪೂರ್ಣನು, ಲಿಂಗಚೈತನ್ಯನು, ಅನುಭಾವಿಯು, ಆನಂದಸ್ವರೂಪನು ಆಗಿರುತ್ತಾನೆ. ಜಂಗಮವು ಮೂರುವಿಧ ಶರೀರಗಳ ಮೇಲೆಯೂ ಪರಿಣಾಮ ಮಾಡುತ್ತಾನೆ. ಅನುಕ್ರಮವಾಗಿ ಕ್ರಿಯಾಜಂಗಮ, ಜ್ಞಾನಜಂಗಮ, ಮಹಾಜ್ಞಾನಜಂಗಮ ಎಂಬ ಹೆಸರುಗಳು ಉಂಟಾಗುತ್ತವೆ. (ಶಿವಾನುಭವ ಶಬ್ದಕೋಶ, ೧೦೨); ಆ ಶಿವನೆ ಜಂಗಮಾಕಾರದೊಳು ಪುಟ್ಟಿದನು. ಪಂಚಮುದ್ರಾದಿ ಭೂಷಣವನಾಂತು ಪಿಂಗದೀ ಲೋಕಕ್ಕೆ ಕರ್ತನಾಗುತ್ತಲಾ ಜಂಗಮಂ ಮೆರೆವನೆಂಬುದು ತಥ್ಯ; ಆವನೊರ್ವಂ ಸರ್ವಲೋಕಾಪಕಾರಕ್ಕೆ ದೇವಾದಿದೇವ ಪರಮೇಶ್ವರಂ ಚರಿಸುತ್ತಲೋವಿ ನಿಂದಿರುತಿರ್ಪನಾತನೇ ಜಂಗಮ (ವೀರಶೈವಾಮೃತ ಮಹಾಪುರಾಣ, ೧-೨-೨೬, ೨೭); ವೀರಾಗಮದಲ್ಲಿ ಜಂಗಮದ ಲಕ್ಷಣವನ್ನು ಹೀಗೆ ಹೇಳಿದೆ:

ಜಕಾರಾಜ್ಜನಿತಾ ಪೃಥ್ವೀ ಗಕಾರಾಕಾಶಮುದ್ಭವಂ
ಮಕಾರಾನ್ಮರ್ತ್ಯಲೋಕಶ್ಚ ಜಂಗಮೋ ಜಗದೀಶ್ವರಃ ॥ ೧೪ ॥
ಸತ್ವರೂಪಂ ಜಕಾರಂಚ ಚಿತ್ಸ್ವರೂಪಂ ಗಕಾರಕಂ
ಆನಂದತ್ವಂ ಮಕಾರಂಚ ನಿತ್ಯಮಾನೇನ ಜಂಗಮಂ ॥ ೧೭ ॥
ಜಕಾರಂ ಜನನಂ ನಾಸ್ತಿ ಗಕಾರಂ ಗಮನಂ ನಹಿ
ಮಕಾರಂ ಮರಣಂ ನಾಸ್ತಿ ತಸ್ಯ ಜಂಗಮ ಲಕ್ಷಣಂ ॥ ೧೮ ॥

ಅಲ್ಲಮಪ್ರಭುದೇವರು ಜಂಗಮದ ಲಕ್ಷಣವನ್ನೂ ಜಂಗಮರಿಗೆ ಕೊಟ್ಟಿರುವ ಮಹತ್ವ ಸ್ಥಾನವನ್ನೂ ಈ ವಚನಗಳಲ್ಲಿ ನೋಡಬಹುದು. "ಜಂಗಮಕ್ಕೆ ಲಕ್ಷಣವಾವುದೆಂದರೆ ಲಿಂಗರೂಪಾಗಿ ಪಾದಾರ್ಚನೆಯ ಮಾಡಿಸಿಕೊಳ್ಳಬೇಕು. ಭಕ್ತನಿಗೆ ಲಕ್ಷಣವಾವುದೆಂದರೆ ಭೃತ್ಯನಾಗಿ ಪಾದಾರ್ಚನೆಯ ಮಾಡಬೇಕು. ಜಂಗಮವು ಲಿಂಗರೂಪವಹ ವಿವರವೆಂತೆಂದಡೆ

ಮಾತಿನಲ್ಲಿ ನಾನು ಲಿಂಗರೂಪೆಂದಡೆ ಹರಿಯದು; ತನುಮನಧನತ್ರಯಗಳಂ ಹಿಡಿಯದೆ ಮಾಡಿಸಿಕೊಂಬುದೀಗ ಜಂಗಮಕ್ಕೆ ಲಕ್ಷಣವು" (ಅಲ್ಲಮನ ವಚನಚಂದ್ರಿಕೆ, ೭೭೭); ಎನ್ನ ನೇತ್ರದಾಹಾರವನು ಜಂಗಮಕ್ಕೆ ನೋಡಿಸಿದಲ್ಲದೆ ನಾನು ನೋಡಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನ ಶ್ರೋತ್ರದಾಹಾರವನು ಜಂಗಮಕ್ಕೆ ಕೇಳಿಸಿದಲ್ಲದೆ ನಾನು ಕೇಳಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನ ಘ್ರಾಣದಾಹಾರವನು ಜಂಗಮಕ್ಕೆ ವಾಸಿಸಿದಲ್ಲದೆ ನಾನು ವಾಸಿಸಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನ ಜಿಹ್ವೆಯಾಹಾರವನು ಜಂಗಮಕ್ಕೆ ಊಡಿಸಿದಲ್ಲದೆ ನಾನು ಭಂಜಿಸಿದೆನಾದಡೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನ ಸ್ಪರ್ಶದಾಹಾರವನು ಜಂಗಮಕ್ಕೆ ಮುಟ್ಟಿಸಿದಲ್ಲದೆ ನಾನು ಮುಟ್ಟಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಮಜ್ಜನವನು ಜಂಗಮಕ್ಕೆ ಮಾಡಿಸಿದಲ್ಲದೆ ನಾನು ಮಜ್ಜನವ ಮಾಡಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ವಸ್ತ್ರ ಕಪ್ಪಡವನು ಜಂಗಮಕ್ಕೆ ಹೊದಿಸಿದಲ್ಲದೆ ನಾನು ಹೊದ್ದೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಸ್ತ್ರೀಯನು ಜಂಗಮಕ್ಕೆ ಸಂಯೋಗವ ಮಾಡಿಸಿದಲ್ಲದೆ ನಾನು ಸ್ತ್ರೀಯ ಸಂಯೋಗವ ಮಾಡಿದೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಮಂಚ ಸುಪ್ಪತ್ತಿಗೆಯ ಜಂಗಮಕ್ಕೆ ಕೊಡದೆ ನಾನು ಮಂಚ ಸುಪ್ಪತ್ತಿಗೆಯ ಮೇಲೆ ಮಲಗಿದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಗದ್ದುಗೆಯನ್ನು ಜಂಗಮಕ್ಕೆ ಕೊಡದೆ ನಾನು ಕುಳಿತೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಗೃಹವನು ಜಂಗಮಕ್ಕೆ ಕೊಡದೆ ನಾನು ಆನೆ ಕುದುರೆ ದಂಡಿಗೆಯನೇರಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರವ ಸತ್ತಿಗೆ ಚಾಮರಂಗಳನು ಜಂಗಮಕ್ಕೆ ಕೊಡದೆ ನಾನೇ ಉಪಚರಿಸಿಕೊಂಡಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ಚರಣರಕ್ಷೆಯನು ಜಂಗಮಕ್ಕೆ ಮೆಟ್ಟಿಸದೆ ನಾನು ಮೆಟ್ಟಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಎನ್ನಂಗದಾಹಾರ ದೇಹವನೊತ್ತಿಸಿಕೊಂಬಲ್ಲಿ ಜಂಗಮಕ್ಕೊತ್ತಿಸದೆ ನಾನು ಒತ್ತಿಸಿಕೊಂಡೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಇಂತೀ ಹದಿನಾರು ತೆರನ ಭಕ್ತಿಯನು ಜಂಗಮಕ್ಕೆ ಮಾಡುವಲ್ಲಿ ಅದರೊಳಗೆ ಒಂದನಾದರೂ ನಾನು ವಂಚಿಸಿ ಭೋಗಿಸಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಇಂತೀ ಪ್ರಕಾರದಲ್ಲಿ ಜಂಗಮ ಲಿಂಗವನರ್ಚಿಸಿ, ಪೂಜಿಸಿ ಪಾದೋದಕ ಪ್ರಸಾದವ ಕೊಂಬ ಸದ್ಭಕ್ತಂಗೆ ಗುರುವುಂಟು, ಲಿಂಗವುಂಟು, ಜಂಗಮವುಂಟು, ಪಾದೋದಕವುಂಟು, ಪ್ರಸಾದವುಂಟು, ಆಚಾರವುಂಟು, ಸದ್ಭಕ್ತಿಯುಂಟು. ಈ ಕ್ರಮದಲ್ಲಿ ಜಂಗಮಕರ್ಪಿಸದೆ ಪೂಜಿಸದೆ ತನ್ನ ಸಂಸಾರದೊಡನೆ ಒಡಲ ಹೊರೆವವಂಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪಾದೋದಕವಿಲ್ಲ, ಪ್ರಸಾದವಿಲ್ಲ, ಅವನು ಅವಿಚಾರಿ, ಅವನು ಅಶ್ರೇಷ್ಠ, ಅವನು ಅಪೂಜ್ಯ, ಅವನು ಭವಿ, ಅವನು ರೋಗಿ, ಅವನು ದರ್ಪಕ ಮತ್ತು ಅವನು ಪಂಚಮಹಾಪಾತಕನಯ್ಯ ಗುಹೇಶ್ವರ (ಅಲ್ಲಮನ ವಚನ ಚಂದ್ರಿಕೆ, ೭೩೦)

ಜಂಗಮವೆ ಲಿಂಗವೆನಗೆ ಜಂಗಮವೆ ಪ್ರಾಣವೆನಗೆ
ಕೂಡಲಸಂಗಮದೇವಯ್ಯಾ ಎನಗೆಯೂ ನಿನಗೆಯೂ
ಜಂಗಮಪ್ರಸಾದವೇ ಪ್ರಾಣ (ಬಸವಣ್ಣನವರ ವಚನಗಳು, ೮೪೫)

ಜಂಗಮವೆನ್ನ ಪ್ರಾಣ ಜಂಗಮವೆನ್ನ ಜೀವ
ಜಂಗಮವೆನ್ನ ಪುಣ್ಯದ ಫಲ ಜಂಗಮವೆನ್ನ ನಿಧಿ ನಿಧಾನ
ಜಂಗಮವೆನ್ನ ಹರುಷದ ಮೇರೆ ಚನ್ನಮಲ್ಲಿಕಾರ್ಜುನಾ
ಜಂಗಮದ ತಿಂಥಿಣಿಯಲ್ಲಿ ಓಲಾಡುವೆನು (ಮಹಾದೇವಿಯಕ್ಕನ ವಚನಗಳು, ೧೬೮)

**ಅಚ್ಚಪ್ರಸಾದಿ:** ಅಚ್ಚಪ್ರಸಾದಿಯು ಗುರುವು ಬೋಧಿಸಿದಂಥ ಆಚರಣೆಯ ಮರ್ಮವನ್ನು ತಿಳಿದು ವ್ರತಾಚರಣೆಗೆ ಏನೂ ತಪ್ಪುತಡೆಗಳಿಲ್ಲದ ಹಾಗೆ ಆಚರಿಸುತ್ತಾನೆ. (ಶಿವಾನುಭವ ಶಬ್ದಕೋಶ, ೧೧೮) ಆದಿಯಿಲ್ಲದಿದ್ದಡೆ ಲಿಂಗಪ್ರಸಾದಿಯೆಂಬೆ, ವ್ಯಾಧಿಯಿಲ್ಲದಿದ್ದಡೆ ಜಂಗಮ ಪ್ರಸಾದಿಯೆಂಬೆ; ಲೌಕಿಕವ ಸೋಂಕದಿದ್ದಡೆ ಸಮಯಪ್ರಸಾದಿಯೆಂಬೆ. ಇಂತೀ ತ್ರಿವಿಧ ಪ್ರಸಾದಸಂಬಂಧಿಯಾದಾತನ ಅಚ್ಚಪ್ರಸಾದಿಯೆಂಬೆನು ಕಾಣಾ ಗುಹೇಶ್ವರ (ಅಲ್ಲಮ ವಚನ ಚಂದ್ರಿಕೆ, ೧೬೭);

ಅಚ್ಚಪ್ರಸಾದಿ, ನಿಚ್ಚಪ್ರಸಾದಿ, ಸಮಯಪ್ರಸಾದಿಗಳ ವಿವರ; ಗುರು ಮೊದಲು ಆಚರಿಸುವಂತಹ ಮರ್ಮವನು ತಿಳಿದು ಶಿವಸಂಸ್ಕಾರವನ್ನು ಹೊಂದಿ ನಡೆ ಎಂದು ಅತಿಮೋಹನದಿಂದ ಸಮಸ್ತಮರ್ಮವನು ತಿಳುಹಿ ಓಡಿದ ವ್ರತಾಚರಣೆಗೆ ಸಂದು ಇಲ್ಲದ ಹಾಗೆ ಅಪಮೃತ್ಯು ಬಂದು ಸೋಂಕದ ಹಾಗೆ ಪ್ರಮಥ ಕೃಪಾಕಟಾಕ್ಷದಿಂದ ನಡೆದು ಹೋಗುವವರು; ಅವರೇ ಅಚ್ಚಪ್ರಸಾದಿಗಳು (ಚೆನ್ನಬಸವಣ್ಣನವರ ವಚನಗಳು, ೭೬೪)

**ಅಮಳೈಕ್ಯ, ಅಮಳೋಕ್ಯ:** ಶಬ್ದಗಳು ವೀರಶೈವ ಸಾಹಿತ್ಯದಲ್ಲಿ ಸಾಕಷ್ಟು ಪ್ರಚಲಿತವಾಗಿದೆ. ಇದಕ್ಕೆ ಮೂರು ಅರ್ಥಗಳಿವೆ: (೧) ಇಷ್ಟಲಿಂಗವನ್ನು ಧರಿಸುವ ಆರುಸ್ಥಳಗಳಲ್ಲಿ ಇದು ಒಂದು; "ಕಕ್ಷದಲಿ ವಿಧಿಯು ಧರಿಸಿಹನು ಕರಪೀಠದೊಳು ಪಕ್ಷಿವಾಹನನು ಪಿಡಿದಿಹನು ಸದಾಶಿವಂ ಧರಿಸಿಕೊಂಡಿಪ್ಪನಮಳೈಕ್ಯದಲ್ಲಿ" (ಪ್ರೌಢರಾಯನ ಕಾವ್ಯ, ೮-೩). "ಕಂಕುಳೆಂಬುದು ಕವುಚಿನ ತವರು ಮನೆ. ಕರಸ್ಥಲವೆಂಬುದು ಕೈಕೆಟ್ಟ ಹುಣ್ಣು. ಅಮಳೋಕ್ಯರೆಂಬುದು ಬಾಯ ಬಗದಳ. ಅಂಗಸೋಂಕೆಂಬುದು ಪಾಪದ ತವರ್ಮನೆ. ಉತ್ತಮಾಂಗವೆಂಬುದು ನೆತ್ತಿಯ ಮೃತ್ಯು, ಕಂಠವೆಂಬುದು ಗಂಟಲಗಾಣ. ಮತ್ತೆ ಗುಹೇಶ್ವರನ ಮಾತು ನಿನಗೇಕೆಲವೋ" (ಅಲ್ಲಮನ ವಚನ ಚಂದ್ರಿಕೆ, ೪೭೪); ಅಮಳೋಕ್ಯದಲ್ಲಿ ಲಿಂಗವ ಧರಿಸಿದ ಮತ್ತೆ ತುತ್ತಿನ ನಿಶ್ಚಯವ ಬಿಟ್ಟಿರಬೇಕು (ಮೋಳಿಗೆ ಮಾರಯ್ಯನ ವಚನಗಳು, ೫೫೨) (೨)ದವಡೆಯಲ್ಲಿ ಲಿಂಗವನು ಧರಿಸುವವನು; ಲಿಂಗದಮಳೈಕ್ಯರುಂ ಲಿಂಗಜೀವಾಹಿತರು ನೆನೆದು ಲಿಂಗವ ಬರಿಸಿಯೇ ಲಿಂಗಪೂಜೆಯ ಮಾಡಿ (ಶಿವತತ್ತ್ವಚಿಂತಾಮಣಿ, ೩೧-೨೪), (೩) ಬಾಯಲ್ಲಿ ಲಿಂಗವನ್ನಿಟ್ಟುಕೊಂಡಿರುವ ಸ್ಥಿತಿ ಸುರುಚಿರದ ಶೀಲವಂತಯ್ಯಗಳ ಅರಮನೆಗೆ ಚರಮೂರ್ತಿಯಮಳೋಕ್ಯದಿಂ ಬಂದು ಲಿಂಗಮಂ ಕರಕೆ ತಾರೆನೆ (ಗುರುರಾಜ ಚಾರಿತ್ರ್ಯ, ೮-೯೨)

**ಪಾದೋದಕ:** ಅಷ್ಟಾವರಣಗಳಲ್ಲಿ ಒಂದು. ಇದು ಬಹುಮುಖ್ಯವಾದುದು. ಲೌಕಿಕಾರ್ಥದಲ್ಲಿ ಪಾದೋದಕವೆಂದರೆ ಕಾಲುತೊಳೆದ ನೀರು. ಜಂಗಮರ ಪಾದ ತೊಳೆದ ನೀರು. ಆದರೆ ಇದರ ಮಹತ್ವವನ್ನೂ, ಪಾದೋದಕವನ್ನು ಕೊಳ್ಳುವ ವಿಧಾನವನ್ನೂ ಚೆನ್ನಬಸವಣ್ಣನವರು ಸುದೀರ್ಘವಾಗಿ, ವಿವರವಾಗಿ ಹೇಳಿದ್ದಾರೆ; ಗುರುಪಾದೋದಕ, ಜಂಗಮಪಾದೋದಕ, ದೀಕ್ಷಾಪಾದೋದಕ, ಶಿಕ್ಷಾಪಾದೋದಕ, ಜ್ಞಾನಪಾದೋದಕ ಎಂಬ ಬಗೆಗಳಿವೆ. ಕರುಣಜಲವೇ ಗುರುಪಾದೋದಕ. ವಿನಯಜಲವೇ ಲಿಂಗಪಾದೋದಕ. ಸಮತಾಜಲವೇ ಜಂಗಮಪಾದೋದಕ, ಗುರುಪಾದೋದಕದಿಂದ ಸಂಚಿತಕರ್ಮನಾಸ್ತಿ. ಲಿಂಗಪಾದೋದಕದಿಂದ ಪ್ರಾರಬ್ಧಕರ್ಮನಾಸ್ತಿ. ಜಂಗಮಪಾದೋದಕದಿಂದ ಆಗಾಮಿಕಕರ್ಮನಾಸ್ತಿ. ಇಂತೀ ತ್ರಿವಿಧೋದಕದಲ್ಲಿ ತ್ರಿವಿಧ ಕರ್ಮನಾಸ್ತಿ (ಚೆನ್ನಬಸವಣ್ಣನವರ ವಚನಗಳು, ೧೬೬)

ಲಿಂಗೋದಕ, ಪಾದೋದಕ, ಪ್ರಸಾದೋದಕವೆಂದು ತ್ರಿವಿಧ.
ಲಿಂಗೋದಕವೆಂಬುದು ಶಿವಸಂಸ್ಕಾರದಿಂದಾದುದು
ಪಾದೋದಕವೆಂಬುದು ಲಿಂಗಕ್ಕೆ ಮಜ್ಜನಕ್ಕೆರೆದುದು
ಪ್ರಸಾದಲೋಕವೆಂಬುದು ಲಿಂಗವಾರೋಗಿಸಿದ ಬಳಿಕ ಸಿತಾಳಂಗೊಟ್ಟುದು
ಲಿಂಗೋದಕದಲ್ಲಿ ಲಿಂಗಕ್ಕೆ ಪಾಕಪ್ರಯತ್ನ, ಮಜ್ಜನಕ್ಕೆರೆವುದು
ಪಾದೋದಕದಲ್ಲಿ ಮುಖಪ್ರಕ್ಷಾಳನವ ಮಾಡುವುದು ಶಿರಸ್ಸಿನ ಮೇಲೆ
ತಳಿದುಕೊಂಬುದು ಪ್ರಸಾದೋದಕವನಾರೋಗಿಸುವುದು.

(ಚೆನ್ನಬಸವಣ್ಣನವರ ವಚನಗಳು, ೧೭೧)

ಜ್ಞಾನಪಾದೋದಕದಲ್ಲಿ ಮೂರು ಸಂಬಂಧವಾಗುವುವು. ಅದೆಂತೆಂದಡೆ: ಮಹಾಂತನ ಪಾದವನು ಪಡೆದು ಕೊಂಬಂತಹ ಭಕ್ತನು ಆ ಮಹೇಶ್ವರನ ಉನ್ನತಾಸನದಲ್ಲಿ ಮೂರ್ತಗೊಳಿಸಿ ಪಾದಪ್ರಕ್ಷಾಲನೆಯ ಮಾಡಿದ ನಂತರದಲ್ಲಿ ದೀಕ್ಷಾಪಾದೋದಕವ ಮಾಡಿ ಶುಭ್ರವಸ್ತ್ರದಿಂದ ದ್ರವವ ತೆಗೆದು, ಅಷ್ಟವಿಧಾರ್ಚನೆಯಿಂದ ಲಿಂಗಪೂಜೆಯ ಮಾಡಿಸಿ ಮರಳಿ ತಾನು:

ಚೈತನ್ಯಂ ಶಾಶ್ವತಂ ಶಾಂತಂ ವ್ಯೋಮಾತೀತಂ ನಿರಂಜನಂ ।
ನಾದಬಿಂದು ಕಲಾತೀತಂ ತಸ್ಮೈ ಶ್ರೀಗುರವೇ ನಮಃ ॥

ಎಂದು ಅಷ್ಟಾಂಗಯುಕ್ತನಾಗಿ ವಂದನಂಗೈದು ಪಾದಪೂಜೆಗೆ ಅಪ್ಪಣೆಯ ತೆಗೆದುಕೊಂಡು ಅವರ ಸಮ್ಮುಖದಲ್ಲಿ ಗದ್ದುಗೆಯ ಹಾಕಿಕೊಂಡು, ಅದರ ಮೇಲೆ ಮೂರ್ತವ ಮಾಡಿಕೊಂಡು ತನ್ನ ಲಿಂಗವ ನಿರೀಕ್ಷಿಸಿ, ವಾಮಹಸ್ತದಲ್ಲಿ ನಿರಂಜನ ಪ್ರಣವವ ನಿಲಿಸಿ, ಪೂಜೆಯ ಮಾಡಿ, ಆಮೇಲೆ ಜಂಗಮದ ಪಾದವ ಹಿಡಿದು ಪೂಜೆಯ ಮಾಡಿ ಆ ಪೂಜೆಯನಿಳುಹಿ, ಅದೇ ಉದಕದ ಪಾತ್ರೆಯಲ್ಲಿ ಶಿಕ್ಷಾಪಾದೋದಕವ ಮಾಡಿ, ಪಾದದ್ರವವ ತೆಗೆದು ಐದಂಗುಲಿಗಳಲ್ಲಿ ಪಂಚಾಕ್ಷರವ ಲೇಖನವ ಮಾಡಿ, ಮಧ್ಯದಲ್ಲಿ ಮೂಲಪ್ರಣವವ ಬರೆದು, ಅಷ್ಟಾವಿಧಾರ್ಚನೆ ಷೋಡಶೋಪಚಾರದಿಂದ ಪೂಜೆಯ ಮಾಡಬೇಕಾದಡೆ, ಶಿವಧರ್ಮೋತ್ತರೇ

ಲಿಂಗಾರ್ಪಿತ ಪ್ರಸಾದಂಚ ನ ದದ್ಯಾಚ್ಚರಲಿಂಗಕೇ ।
ಚರಾರ್ಪಿತ ಪ್ರಸಾದಂಚ ದದ್ಯಾಲ್ಲಿಂಗಾಯ ವೈಶುಭಂ ॥

ಶಿವರಹಸ್ಯೇ:

ಅನಾದಿ ಜಂಗಮಶ್ಚೈವ ಆದಿಲಿಂಗಸ್ಥಲಂ ಭವೇತ್ ।
ಅನಾದಿ ಜಂಗಮಾಯ್ಯೈವಂ ಇಷ್ಟೋಚ್ಛಿಷ್ಟಂತು ಕಿಲ್ಬಿಷಂ ॥

ಎಂಬುದಾಗಿ ಲಿಂಗಕ್ಕೆ ತೋರಿ ಪಾದವ ಪೂಜಿಸಲಾಗದು. ಅದೆಂತೆಂದಡೆ: ಗುರುವಿಗೂ ಲಿಂಗಕ್ಕೂ ಚೈತನ್ಯಸ್ವರೂಪ ಜಂಗಮವಾದ ಕಾರಣ ಆ ಜಂಗಮದ ಪ್ರಸಾದವ ಲಿಂಗಕ್ಕೆ ತೋರಬೇಕಲ್ಲದೆ ಲಿಂಗಪ್ರಸಾದವ ಪಾದಕ್ಕೆ ತೋರಲಾಗದು; ಅದೇನು ಕಾರಣವೆಂದಡೆ: ಗುರುಲಿಂಗ ಜಂಗಮಕ್ಕೆ ಅನಾದಿ ಜಂಗಮವೇ ಚೈತನ್ಯ ಸ್ವರೂಪವಾದ ಕಾರಣ ಆ ಜಂಗಮವೇ ಮುಖ್ಯಸ್ವರೂಪ. ಇಂತಪ್ಪ ಜಂಗಮವಾದವೇ ಪರಬ್ರಹ್ಮಕ್ಕೆ ಆಧಾರವಾಗಿಪ್ಪುದು. ಅವ ಪಾದವ ಬಿಟ್ಟು ಪರವ ಕಂಡುದಿಲ್ಲವೆಂದು ಶ್ರುತಿಗಳು ಪೊಗಳುತಿರ್ದ ಕಾರಣ, ಇಂತಪ್ಪ ಚರಮೂರ್ತಿಯ ಪಾದವನ್ನು ಅಷ್ಟಾವಿಧಾರ್ಚನೆ ಷೋಡಶೋಪಚಾರದಿಂದ ಅರ್ಚಿಸಿದಂತಹುದೆ ಲಿಂಗಪೂಜೆ. ಆಮೇಲೆ ಆ ಮೂರ್ತಿಯ ಹಿಮ್ಮಡ ಸೋಕುವಂತೆ ಹಸ್ತವ ಮಡಗಿ, ಲಲಾಟವ ಮುಟ್ಟಿ ನಮಸ್ಕರಿಸಿ, ಆ ಪೂಜೆಯನಿಳುಹಿ, ಆ ಶಿಕ್ಷಾಪಾದೋದಕವನು ಬಲದಂಗುಷ್ಠದ ಮೇಲೆ ಷಡಕ್ಷರ ಮಂತ್ರವ ಆರುವೇಳೆ ಸ್ಮರಿಸುತ್ತ ನೀಡಿ ಅಲ್ಲಿ ಇಷ್ಟಲಿಂಗವೆಂದು ಭಾವಿಸಿ, ಎಡದಂಗುಷ್ಠದ ಮೇಲೆ ಪಂಚಾಕ್ಷರೀಮಂತ್ರವ ಐದುವೇಳೆ ಸ್ಮರಿಸುತ್ತ ನೀಡಿ, ಅಲ್ಲಿ ಪ್ರಾಣಲಿಂಗವೆಂದು ಭಾವಿಸಿ, ಮಧ್ಯದಲ್ಲಿ ಓಂ ಬಸವಾಯ ನಮಃ ಎಂದು ವೇಳೆ ಒಂದು ಪುಷ್ಪವ ಧರಿಸಿ, ಸ್ಮರಿಸುತ್ತ ನೀಡಿ, ಅಲ್ಲಿ ಭಾವಲಿಂಗವೆಂದು ಭಾವಿಸಿ, ನೀಡಿದ ಉದಕವೇ ಬಟ್ಟಲಲಿ ನಿಂದು ಮಹಾತ್ಪಾದವೆಂದೆನಿಸುವುದು. ಆ ಮಹಾತ್ಪಾದದಲ್ಲಿ ದ್ರವವ ತೆಗೆದು ಮತ್ತೆ ಪೂಜಿಸಬೇಕಾದಡೆ, ಬಹುಪುಷ್ಪವ ಧರಿಸದೆ ಒಂದೇ ಪುಷ್ಪವ ಧರಿಸಬೇಕು. ಅದೇನು ಕಾರಣವೆಂದಡೆ: ಪಶ್ಚಿಮ ಚಕ್ರದಲ್ಲಿ ಸಂಬಂಧವಾದ ನಿರಂಜನ ಜಂಗಮಕ್ಕೆ ಏಕದಳವನ್ನುಳ್ಳ ಒಂದೇ ಪುಷ್ಪವು ಮುಖ್ಯವಾದ ಕಾರಣ, ಏಕ ಕುಸುಮವನೆ ಧರಿಸಿ ಪೂಜೆಯ ಮಾಡಿ ನಮಸ್ಕರಿಸುವುದೇ ಜಂಗಮ ಪೂಜೆ. ಆ ಪೂಜೆಯ ತೆಗೆದ ಶಿಷ್ಯನು ಶರಣಾರ್ಥಿ ಸ್ವಾಮೀ ಎಂದು ಬಟ್ಟಲವನೆತ್ತಿ ಕೊಟ್ಟಲ್ಲಿ, ಕರ್ತೃವಾದ ಜಂಗಮವು ಆ ಬಟ್ಟಲಲ್ಲಿರ್ದ ತೀರ್ಥವನು ತಮ್ಮ ಪಂಚಾಂಗುಲಿಗಳೆ ಪಂಚಪ್ರಣವವೆಂದು ಭಾವಿಸಿ, ಮೂಲಮಂತ್ರದಿಂದ ಮೂರುವೇಳೆ ಪ್ರದಕ್ಷಿಣವ ಮಾಡಿ ನಮಸ್ಕರಿಸಿ, ಲಿಂಗದ ಮಸ್ತಕದ ಮೇಲೆ ಮೂರು ವೇಳೆ ಚತುರಂಗಲ ಪ್ರಮಾಣಿನಲ್ಲಿ ಲಿಂಗವ ಮುಟ್ಟದೆ ನೀಡಿ, ಆ ಪಂಚಾಂಗುಲಿಗಳ ತಮ್ಮ ಜಿಹ್ವೆಯಲ್ಲಿ ಸ್ವೀಕರಿಸುವಲ್ಲಿ ಗುರುಪಾದೋದಕವೆನಿಸುವುದು; ಅದೇ ದೀಕ್ಷಾಪಾದೋದಕ. ತಾವು ಲಿಂಗವನೆತ್ತಿ ಸಲಿಸಿದುದೇ ಲಿಂಗಪಾದೋದಕವೆನಿಸುವುದು; ಅದೇ ಶಿಕ್ಷಾಪಾದೋದಕ, ಬಟ್ಟಲನೆತ್ತಿ ಸಲ್ಲಿಸಿದಲ್ಲಿ ಜಂಗಮ ಪಾದೋದಕವೆನಿಸುವುದು; ಅದೇ ಜ್ಞಾನಪಾದೋದಕ. ಈ ರೀತಿಯಲ್ಲಿ ಮಾಹೇಶ್ವರನು ಸಲಿಸಿದ ಬಳಿಕ ಶರಣಾರ್ಥಿ ಎಂದು ಶಿಷ್ಯೋತ್ತಮನು ಎದ್ದು;

ಲಲಾಟಂ ಚ ಭುಜದ್ವಂದ್ವಂ ಪಾಣಿಯುಗ್ಮಮುರಸ್ತದಾ ।
ಅಂಗುಷ್ಠಯುಗಲಂ ಪ್ರೋಕ್ತಂ ಪ್ರಣಾಮೋಷ್ಟಾಂಗಮುಚ್ಯತೇ ॥

ಎಂದು ಭೃತ್ಯೋಪಚಾರಗಳಿಂದ ಪ್ರಣತಿಂಗೈದು ಅಪ್ಪಣೆಯ ಪಡೆದುಕೊಂಡು ಬಂದು, ಆ ಜಂಗಮದ ಮರ್ಯಾದೆಯಲ್ಲಿಯೆ ತಾನು ಸ್ವೀಕರಿಸುವುದು. ಇದೇ ರೀತಿಯಲ್ಲಿ ಗುರುಶಿಷ್ಯರಿರ್ವರು ಸಮರಸಭಾವದಿಂದ ಸೇವನೆ ಮಾಡಿದಲ್ಲಿ ಆ ಶಿಷ್ಯೋತ್ತಮನೇ ನಿಜಶಿಷ್ಯನಾದ ಕಾರಣ, ಗುರುವೇ ಶಿಷ್ಯ, ಶಿಷ್ಯನೇ ಗುರು. ಈ ಎರಡರ ಮರ್ಮವು ಆದ ಬಗೆ ಹೇಗೆಂದಡೆ: ಆ ಶಿಷ್ಯನು ಪಡೆದುಕೊಂಡ ಪಾದೋದಕವ ಈ ಗುರುಭಕ್ತಿ ಮುಖದಿಂದ ತೆಗೆದುಕೊಂಡಲ್ಲಿ ಗುರುವೇ ಶಿಷ್ಯನಾಗಿಪ್ಪನು. ಆ ಗುರುಸೇವನೆಯ ಮಾಡಿ ಉಳಿದ ಉದಕವ ಶಿಷ್ಯ ಭಕ್ತಿಭಾವದಿಂದ ಸೇವನೆ ಮಾಡಿದಲ್ಲಿಗೆ ತಚ್ಛಿಷ್ಯನಾದನು. ಈ ಮರ್ಮವ ತಿಳಿದು ಗುರುಶಿಷ್ಯರೀರ್ವರು ಸಲಿಸಿದ ಬಳಿಕ ಕೆಲವು ಭಕ್ತಮಾಹೇಶ್ವರರು ಸಲ್ಲಿಸುವುದು. ಇನ್ನು ನಿಚ್ಚಪ್ರಸಾದಿಗಳಿಗೆ, ಸಮಯ ಪ್ರಸಾದಿಗಳಿಗೆ ಆಯಾಯ ತತ್ಕಾಲದಲ್ಲಿ ತ್ರಿವಿಧೋದಕವಾಗಿಪ್ಪುದು; ಇದೇ ಆಚರಣೆ. ಇದನರಿಯದಾಚರಿಸುವವರಿಗೆ ನಿಮ್ಮ ನಿಲವರಿಯಬಾರದು ಕಾಣಾ, ಕೂಡಲ ಚೆನ್ನಸಂಗಮದೇವಾ (ಚೆನ್ನಬಸವಣ್ಣನವರ ವಚನಗಳು, ೧೭೫); ಪಾದೋದಕ: ಗುರುಲಿಂಗ ಜಂಗಮಗಳು ತನ್ನಲ್ಲಿ ಒಳಕೊಳ್ಳುವ ರೀತಿಯನ್ನು ಅರುಹಿಸಿಕೊಡುವ ಕ್ರಿಯೆಯು ಇದಾಗಿದೆ. ಇದು ಸಂಪೂರ್ಣ ಭಾವನಾಮಯವಾದ ವಿಧಿಯು. ಇಂಥ ಈ ಪಾದೋದಕವು ಕೇವಲ ನೀರು ಅಲ್ಲ. ಅದು ಚಿತ್‌ಸ್ವರೂಪವಾಗಿರುತ್ತದೆಂದು ತಿಳಿಯಬೇಕು. ಇದನ್ನು ಭಾವನಾಪ್ರಧಾನವಾಗಿ ಮತ್ತು ಅದರ ಮರ್ಮವನ್ನು ತಿಳಿದು ಆಚರಿಸಿದ್ದಾದರೆ ಅದು ಭಕ್ತಜಂಗಮರ ಸರ್ವಾಂಗವನ್ನು ಛೇದಿಸುತ್ತದೆ. ಈ ಪಾದೋದಕದ ಮೂಲಕ ಭಕ್ತನು ಗುರುಲಿಂಗಜಂಗಮಗಳನ್ನು ಹೊಂದಿ ಸರ್ವಾಂಗಲಿಂಗಿಯಾಗುತ್ತಾನೆ; ದಶವಿಧ ಪಾದೋದಕಗಳು: ಇವು ಗುರುಪಾದೋದಕ, ಲಿಂಗಪಾದೋದಕ, ಜಂಗಮಪಾದೋದಕ, ಸ್ಪರ್ಶನೋದಕ, ಅವಧಾನೋದಕ, ಆಪ್ಯಾಯನೋದಕ, ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕ, ಸತ್ಯೋದಕ ಎಂದು ಹತ್ತು ಇರುತ್ತದೆ. (ಶಿವಾನುಭವ ಶಬ್ದಕೋಶ, ಪು. ೧೧೮, ೧೧೧)

ಶರಣರ ಪಾರಿಭಾಷಿಕ ಶಬ್ದಗಳಲ್ಲಿ ಕೆಲವನ್ನು ವಚನಕಾರರ ಮತ್ತು ಇತರ ವೀರಶೈವ ಕಾವ್ಯಗಳಿಂದ ಸಾಧಾರಣವಾಗಿ ನಿರೂಪಿಸಲಾಯಿತು. ಈ ಪಾರಿಭಾಷಿಕ ಶಬ್ದಗಳಿಗಿರುವ ಸೂಕ್ಷ್ಮಾತಿಸೂಕ್ಷ್ಮ ಅರ್ಥವನ್ನೂ, ಅವುಗಳ ಆಚರಣಾ ವಿಧಾನವನ್ನೂ ಅವಲೋಕಿಸಿದ್ದಾಯಿತು. ಇದೇ ರೀತಿ ಎಲ್ಲ ಪಾರಿಭಾಷಿಕ ಶಬ್ದಗಳನ್ನೂ ಸಂಗ್ರಹಿಸಿ ಅವುಗಳಿಗಿರುವ ಸಮಗ್ರವಾದ ಅರ್ಥಗಳೆಲ್ಲವನ್ನೂ ವಿವರವಾಗಿ ನಿರೂಪಿಸುವ ಒಂದು ಪಾರಿಭಾಷಿಕ ಕೋಶದ ಅಗತ್ಯ ಬಹಳವಾಗಿದೆ.

■

# ಭಾರತದಲ್ಲಿ ಭಕ್ತಿಪಂಥ : ವೀರಶೈವ ಶರಣರು

**ಭಾ**ರತದ ಭಕ್ತಿಪಂಥಕ್ಕೆ ವೀರಶೈವ ಶರಣರ ಕೊಡುಗೆ ಅಲ್ಪವಾದುದೇನಲ್ಲ. ಭಕ್ತಿಪಂಥದಲ್ಲಿ ಹಲವಾರು ಪ್ರಭೇದಗಳಿವೆ. ಅವುಗಳಲ್ಲಿ ಮುಖ್ಯವಾದುವು ಶೈವ ಮತ್ತು ವೈಷ್ಣವ ಪಂಥಗಳು.

ಶೈವ ಅಥವಾ ಶಿವಭಕ್ತಿಪಂಥವು ಅತ್ಯಂತ ಪ್ರಾಚೀನವಾದುದು, ವ್ಯಾಪಕವಾದುದು. ಇದರಲ್ಲಿ ಪಾಶುಪತ, ಕಾಳಾಮುಖ, ಲಕುಲೀಶ, ಮಾಹೇಶ್ವರ, ಶೈವ, ವೀರಶೈವ ಇವೇ ಮೊದಲಾದ ಪ್ರಭೇದಗಳಿವೆ. ಮಧ್ಯಯುಗದಲ್ಲಿ ನಾಯನಾರರಿಂದಲೂ ಶೈವಾಚಾರ್ಯರಿಂದಲೂ, ಪ್ರತಿಪಾದಿತವಾದ ಶಿವಭಕ್ತಿತತ್ವವು ಕನ್ನಡನಾಡಿನಲ್ಲಿ ಕ್ರಿ.ಶ. ೧೧ ಮತ್ತು ೧೨ನೆಯ ಶತಮಾನಗಳಲ್ಲಿ ಮತ್ತಷ್ಟು ವಿಕಾಸಹೊಂದಿ ವೀರಶೈವ ಧರ್ಮವಾಗಿ ಪ್ರಚಾರಕ್ಕೆ ಬಂದಿತು.

ಶಿವಸಾಕ್ಷಾತ್ಕಾರವೇ ವೀರಶೈವಧರ್ಮದ ಅಂತಿಮ ಗುರಿ. ಭಕ್ತಿವಿಶಿಷ್ಟನಾದ ಜೀವನು ಶಕ್ತಿವಿಶಿಷ್ಟನಾದ ಶಿವನೊಡನೆ ನಡೆಸುವ ಸಾಮರಸ್ಯವೇ ಜೀವನದ ಪರಮೋದ್ದೇಶ. ಇದನ್ನು ಶಕ್ತಿವಿಶಿಷ್ಟಾದ್ವೈತ ಎಂದು ಕರೆಯುತ್ತಾರೆ.

ದ್ವಿವಿಧವಾದ ಶಕ್ತಿಗಳಿಂದ ಕೂಡಿದ ಜೀವಬ್ರಹ್ಮರ ಅದ್ವೈತವೇ ಶಕ್ತಿವಿಶಿಷ್ಟಾದ್ವೈತ. ಲಿಂಗಾಂಗ ಸಾಮರಸ್ಯವನ್ನು ಪಡೆಯುವುದಕ್ಕೆ ವೀರಶೈವರು ಅನುಸರಿಸುವ ಮಾರ್ಗ ಷಟ್ಸ್ಥಲಸಿದ್ಧಾಂತ. ಸಾಧಕನು ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಈ ಆರು ಸೋಪಾನಗಳನ್ನೇರಿ ತನ್ನ ಅಂತಿಮ ಗುರಿಯನ್ನು ಕಂಡುಕೊಳ್ಳಬೇಕು. ವೀರಶೈವ ಶರಣರ ದೃಷ್ಟಿಯಲ್ಲಿ ಭಕ್ತಿಗೆ–ಅನನ್ಯಭಕ್ತಿಗೆ ಪ್ರಥಮಸ್ಥಾನ. ಈ ಭಕ್ತಿಯು ಷಟ್ಸ್ಥಲಗಳನ್ನು ಆಶ್ರಯಿಸುತ್ತದೆ. ಅದರಲ್ಲಿ ಸಮರಸಭಕ್ತಿ, ಅನುಭಾವಭಕ್ತಿ, ಅವಧಾನಭಕ್ತಿ, ನೈಷ್ಠಿಕಭಕ್ತಿ, ಸದ್ಭಕ್ತಿ ಅಥವಾ ಶ್ರದ್ಧಾಭಕ್ತಿ ಎಂಬ ಆರು ಪ್ರಭೇದಗಳಿವೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶಿವಶರಣ ವಚನಕಾರರು ತಲೆದೋರಿದ ೧೧ ಮತ್ತು ೧೨ನೆಯ ಶತಮಾನಗಳು ಒಂದು ನೂತನ ವಿಕ್ರಮವನ್ನೇ ಸ್ಥಾಪಿಸಿವೆ. ಈ ವಿಷಯವನ್ನು ಪ್ರಸ್ತಾಪಿಸುವುದಕ್ಕೆ ಮೊದಲು ಅಂದಿನ ಪರಿಸ್ಥಿತಿಗಳನ್ನು ಸ್ವಲ್ಪಮಟ್ಟಿಗೆ ಅರಿತುಕೊಳ್ಳುವುದು ಅವಶ್ಯಕ.

ವಚನಕಾರರ ಕಾಲಕ್ಕಾಗಲೇ ವೇದೋಪನಿಷತ್ತುಗಳ ಕಾಲದ ಆರ್ಯಧರ್ಮವು ಸ್ವಾಭಾವಿಕವಾದ ಏರಿಳಿತಗಳಿಗೆ ಸಿಕ್ಕಿ ಕ್ಷೀಣದೆಸೆಗೆ ಬಂದಿದ್ದಿತು. ಪೌರಾಣಿಕ ಕಾಲದಲ್ಲಿ ಪ್ರಚಾರಕ್ಕೆ ಬಂದಿದ್ದ ಚತುರ್ವರ್ಣಗಳು ಬಹಳ ಕಾಲದವರೆಗೆ ತಮ್ಮ ಜನಾನುರಾಗವನ್ನುಳಿಸಿಕೊಳ್ಳಲಾಗಲಿಲ್ಲ. ಮತಧರ್ಮಗಳು ಹೆಚ್ಚು ಗ್ರಾಂಥಿಕವಾಗಿದ್ದುವು. ತತ್ವಜ್ಞಾನವು ಜನಸಾಮಾನ್ಯಕ್ಕೆ ತಿಳಿಯದ ಸಂಸ್ಕೃತ ಭಾಷೆಯ ಮಡಿಲಲ್ಲಿ ಪ್ರಚಾರಕ್ಕೆ ಬಂದಿತ್ತು. ಹಿಂದೂ ಸಮಾಜದಲ್ಲಿನ ವಿಭಿನ್ನ ಧರ್ಮಪಂಥಗಳ ಅಂತಃಕಲಹದಿಂದ ಪರಿಸ್ಥಿತಿ ಹದಗೆಟ್ಟು ಜನರು ಅಸಮಾಧಾನಗೊಂಡಿದ್ದರು. ಹೀಗೆ ವೈದಿಕಧರ್ಮವು ಖಿಲವಾಗುತ್ತಿದ್ದ ಕಾಲದಲ್ಲಿ ಜೈನ ಬೌದ್ಧಮತಗಳು ತಲೆದೋರಿದುವು. ಅಹಿಂಸಾಪ್ರಧಾನವಾದ ಜೈನಮತವು ಸ್ವಲ್ಪಕಾಲ ಪ್ರವರ್ಧಮಾನ ವಾಗಿದ್ದರೂ ಕ್ರಮೇಣ ಅದು ವೈದಿಕಧರ್ಮದ ಮುಂದೆ ಸ್ಪರ್ಧಿಸಲಾರದೆ ಹೋಯಿತು. ಜ್ಞಾನಪ್ರಧಾನವಾದ ಬೌದ್ಧಮತ ನಮ್ಮ ದೇಶದಲ್ಲಿ ನೆಲೆಯಾಗಿ ನಿಲ್ಲಲಿಲ್ಲ. ಜೈನಬೌದ್ಧಮತಗಳು ನಮ್ಮ ದೇಶದಲ್ಲಿ ಸ್ಥಿರವಾಗಿ ನಿಲ್ಲಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಬಸವೇಶ್ವರ ಮೊದಲಾದ ಶಿವಶರಣರು ವರ್ಣಾಶ್ರಮಧರ್ಮಗಳ ಸಂಕೋಲೆಗಳಿಗೆ ಸಿಲುಕದಿದ್ದ ವೀರಶೈವ ಮತವನ್ನು ಪುನರುಜ್ಜೀವನಗೊಳಿಸಿ ಸಮತಾಭಾವದ ಉನ್ನತ ಸಾಮಾಜಿಕ ನೀತಿಯನ್ನು ಪ್ರತಿಪಾದಿಸಿ ಅಂಧಕಾರದಲ್ಲಿ ತೊಳಲುತ್ತಿದ್ದ ಜನತೆಗೆ ಧರ್ಮಮಾರ್ಗವನ್ನು ತೋರಿದರು. ಈ ನೂತನ ಧರ್ಮ ವಿಶೇಷವಾಗಿ ದಕ್ಷಿಣ ಭಾರತದಲ್ಲಿ ಜನಪ್ರಿಯತೆಯನ್ನು

ಗಳಿಸಿತು. ಕನ್ನಡ ನಾಡಿನಲ್ಲಿ ಜನ್ಮವೆತ್ತಿದ ಅಸಂಖ್ಯಾತ ಶಿವಶರಣೆಯರು ಈ ವೀರಶೈವ ಧರ್ಮವನ್ನು ಅವಲಂಬಿಸಿ ಅದನ್ನು ಪ್ರವರ್ಧಮಾನಕ್ಕೆ ತಂದರು. ಅವರಲ್ಲಿ ಅನೇಕರು ಭಿನ್ನ ಭಿನ್ನ ಧರ್ಮ ಮತ್ತು ಕಾಯಕಗಳಿಗೆ ಸೇರಿದ್ದವರು. ಅವರಿಗೆ ವೀರಶೈವಧರ್ಮದಲ್ಲಿದ್ದ ಭಕ್ತಿನಿಷ್ಠೆಗಳು ಅಪಾರ, ಅನಂತ.

ವಚನಕಾರರಲ್ಲಿ ಭಕ್ತಿಭಂಡಾರಿ ಬಸವಣ್ಣ, ಆತ್ಮಜ್ಞಾನಿ ಅಲ್ಲಮಪ್ರಭು, ಜ್ಞಾನಯೋಗಿ ಚೆನ್ನಬಸವಣ್ಣ, ಕರ್ಮಯೋಗಿ ಸಿದ್ಧರಾಮ, ಶರಣಸತಿ ಲಿಂಗಪತಿ ಅಕ್ಕಮಹಾದೇವಿ ಇವರೇ ಮೊದಲಾದವರು ಅತ್ಯಂತ ಪ್ರಸಿದ್ಧರು. ಬಸವಣ್ಣನವರಿಗಿಂತ ಹಿಂದೆಯೇ ದೇವರ ದಾಸಿಮಯ್ಯ, ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಕೆಂಭಾವಿ ಭೋಗಣ್ಣ ಮೊದಲಾದ ವಚನಕಾರರು ಜನ್ಮವೆತ್ತಿದ್ದರು. ಇವರ ತರುವಾಯ ಮೋಳಿಗೆ ಮಾರಯ್ಯ, ಅಂಬಿಗರ ಚೌಡಯ್ಯ, ಅಜಗಣ್ಣ, ಆದಯ್ಯ, ಹಡಪದ ಅಪ್ಪಣ್ಣ, ಗಜೇಶ ಮಸಣಯ್ಯ, ಬಿಬ್ಬಿ ಬಾಚಯ್ಯ, ಏಲೇಶ್ವರ ಕೇತಯ್ಯ, ಮಹಾದೇವಿ, ಬಿಜ್ಜಳದೇವಿ, ಕಾಳವ್ವೆ, ನೀಲಮ್ಮ ಮೊದಲಾದ ಅಸಂಖ್ಯಾತ ವಚನಕಾರ ವಚನಕಾರ್ತಿಯರು ವೀರಶೈವ ಧರ್ಮವನ್ನು ಅನುಸರಿಸಿ ಆತ್ಮೋದ್ಧಾರವನ್ನು ಪಡೆದುಕೊಂಡಿದ್ದಾರೆ.

**೧. ಭಕ್ತಿ ಭಂಡಾರಿ ಬಸವಣ್ಣ:**

ಮೋಕ್ಷಸಂಪಾದನೆಗೆ ಭಕ್ತಿಯೇ ಸರಿಯಾದ ಮಾರ್ಗವೆಂದು ನಂಬಿದ್ದರು. ಈಶ್ವರನು ಭಕ್ತಿಗೆ ಒಲಿಯುವಂತೆ ಯಜ್ಞಯಾಗಾದಿ ಕಾರ್ಯಗಳಿಗೆ ಒಲಿಯುವುದಿಲ್ಲವೆಂದು ತಿಳಿದಿದ್ದರು. ವೇದಾದಿಗಳೂ ಈಶ್ವರನಿಗೆ ದೂರವೆಂದು ಅವರು ಭಾವಿಸಿದ್ದರು. ಶ್ರೀ ಬಸವೇಶ್ವರರು:

ನಾದಪ್ರಿಯ ಶಿವನೆಂಬರು ನಾದಪ್ರಿಯ ಶಿವನಲ್ಲಯ್ಯ
ವೇದಪ್ರಿಯ ಶಿವನೆಂಬರು ವೇದಪ್ರಿಯ ಶಿವನಲ್ಲಯ್ಯ
ನಾದವ ಮಾಡಿದ ರಾವಣಂಗೆ ಅರೆಯಾಯುಷ್ಯವಾಯಿತ್ತು
ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು
ನಾದಪ್ರಿಯನೂ ಅಲ್ಲ ವೇದಪ್ರಿಯನೂ ಅಲ್ಲ
ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ.

ಎಂದು ಹೇಳಿದ್ದಾರೆ. ಅಲ್ಲದೆ ಕೂಡಲಸಂಗಮದೇವನನ್ನು ಕುರಿತು:

ಅಯ್ಯಾ ಅಯ್ಯಾ ಎಂದು ಕರೆಯುತ್ತಲಿದ್ದೇನೆ
ಅಯ್ಯಾ ಅಯ್ಯಾ ಎಂದು ಒರಲುತ್ತಲಿದ್ದೇನೆ
ಓ ಎನ್ನಲಾಗದೇ ಅಯ್ಯಾ?
ಆಗಳೂ ನಿಮ್ಮುವ ಕರೆಯುತ್ತಲಿದ್ದೇನೆ
ಮೌನವೇ ಕೂಡಲಸಂಗಮದೇವಾ?

ಈ ರೀತಿ ಅಂಗಲಾಚಿ ದೈನ್ಯದಿಂದ ಬೇಡಿಕೊಂಡಿದ್ದಾರೆ. ಬಸವಣ್ಣನವರು ಒಳ್ಳೆಯ ಅನುಭಾವಿಗಳಾಗಿದ್ದರು. ಈಶನ ಸಾನ್ನಿಧ್ಯವನ್ನು ಬಯಸುವವರು ಶೀಲವಂತರಾಗಿರಬೇಕೆಂಬುದನ್ನು:

ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ
ಮುನಿಯ ಬೇಡ ಅನ್ಯರಿಗೆ ಅಸಹ್ಯಪಡಬೇಡ
ತನ್ನ ಬಣ್ಣಿಸಬೇಡ ಇದಿರ ಹಳಿಯಲು ಬೇಡ
ಇದೇ ಅಂತರಂಗಶುದ್ಧಿ ಇದೇ ಬಹಿರಂಗಶುದ್ಧಿ
ಇದೇ ನಮ್ಮ ಕೂಡಲಸಂಗಮದೇವರ ಒಲಿಸುವ ಪರಿ.

ಎಂದು ಹೇಳಿದ್ದಾರೆ. ಅಲ್ಲದೆ ಅವರು ಧರ್ಮದ ಸಾರಸರ್ವಸ್ವವನ್ನು ದಯೆಯಲ್ಲಿಯೇ ಕಂಡವರು.

ದಯವಿಲ್ಲದ ಧರ್ಮವದೇವುದಯ್ಯಾ
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ
ದಯವೇ ಧರ್ಮದ ಮೂಲವಯ್ಯ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ

ಎಂದಿದ್ದಾರೆ ಬಸವಣ್ಣನವರು.

ದೇವನೊಬ್ಬ ನಾಮ ಹಲವು
ಪರಮ ಪತಿವ್ರತೆಗೆ ಗಂಡನೊಬ್ಬ
ಮತ್ತೊಂದಕ್ಕೆರಗಿದರೆ ಕಿರಿ ಮೂಗ ಕೊಯ್ವನು
ಹಲವು ದೈವದ ಎಂಜಲ ತಿಂಬುವರನೊಲ್ಲನಯ್ಯ
ಕೂಡಲಸಂಗಮದೇವಾ

ಎಂಬ ಈ ವಚನದಿಂದ ಅವರು ಸರ್ವಧರ್ಮಸಮನ್ವಯಕ್ಕೆ ದಾರಿಮಾಡಿಕೊಟ್ಟಿದ್ದಾರೆ.

**೨. ಆತ್ಮಜ್ಞಾನಿ ಅಲ್ಲಮಪ್ರಭು:**

ಭಕ್ತಿಯುಕ್ತಿಯನಾರು ಬಲ್ಲರು
ಬಲ್ಲವರನಾರನೂ ಕಾಣೆ
ತನ್ನ ಮಱೆದು ಇದಿರ ಹಱೆದು ಇರಬಲ್ಲಡೆ ಆತ ಭಕ್ತ
ಆ ಭಕ್ತಂಗೆ ಶಿವನೊಲಿವ
ನುಡಿಯಲ್ಲಿ ಭಕ್ತಿಯನಾಡಿ ನಡೆಯಿಲ್ಲದಿದ್ದರೆ
ಕಡೆಮುಟ್ಟ ಶಿವನೊಲಿವುದು ಹುಸಿ
ಮಱೆದು ಕೋಪದುರಿಯನುಗುಳಿ
ಅಱೆದು ಬಂದೆಱಗಿದೆನೆಂಬ ನುಡಿಗೆ ಒಲಿವನೇ
ನಮ್ಮ ಗುಹೇಶ್ವರಲಿಂಗವು.

ಈ ರೀತಿ ಪ್ರಶ್ನಿಸಿದ್ದಾರೆ ಅಲ್ಲಮಪ್ರಭುದೇವರು.

**೩. ಕರ್ಮಯೋಗಿ ಸಿದ್ಧರಾಮ:**

ಪರಮಾತ್ಮನು ಕೇವಲ ಭಕ್ತಿಪ್ರಿಯನೆಂಬುದನ್ನು ಸಿದ್ಧರಾಮೇಶ್ವರರು:

ತನ್ನನಱಿಸಿ ಬಪ್ಪವರ ತಾನಱಿಸಿ ಬಪ್ಪ ನೋಡಾ
ಎನ್ನದೇವನು ಎಲ್ಲಿದ್ದನಲ್ಲಿಗೆ ಹೋಗಿ ಬಾರಾ ಎಂದು
ಮನದೊಳಗೆ ಅಚ್ಚೊತ್ತಿಕೊಂಬನು
ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ
ದೇವಪ್ರಿಯನಲ್ಲ ನೀನು ಶಾಸ್ತ್ರಪ್ರಿಯನಲ್ಲ ನೀನು
ನಾದಪ್ರಿಯನಲ್ಲ ನೀನು ಸ್ತೋತ್ರಪ್ರಿಯನಲ್ಲ ನೀನು
ಕ್ರೀಪ್ರಿಯನಲ್ಲ ನೀನು ಯುಕ್ತಿಪ್ರಿಯನಲ್ಲ ನೀನು
ನೀನು ಇವೆಲ್ಲಕಸಾಧ್ಯ ಕಂಡಯ್ಯಾ ನೀನು ಭಕ್ತಿಪ್ರಿಯನೆಂದು
ಮರೆಹೊಕ್ಕೆ ಕಾಯಯ್ಯಾ ಎನ್ನನು ಕಪಿಲಸಿದ್ಧಮಲ್ಲಿಕಾರ್ಜುನಾ

ಎಂಬ ವಚನಗಳಲ್ಲಿ ತನ್ನ ಹೃದ್ಗತವನ್ನು ಸಿದ್ಧರಾಮ ಶಿವಯೋಗಿಯು ಸ್ಪಷ್ಟಪಡಿಸಿದ್ದಾನೆ.

**೪. ಜ್ಞಾನಯೋಗಿ ಚೆನ್ನಬಸವಣ್ಣ:**

ಭಕ್ತಿಯ ರೀತಿಯನ್ನು ಭಕ್ತನ ನೀತಿಯನ್ನು ಈ ರೀತಿ ವಿವರಿಸಿದ್ದಾನೆ ಚೆನ್ನಬಸವಣ್ಣನು.

ದಾಸಿಯರ ಸಂಗ ಕಸನೀರ ಹೊರಿಸಿತ್ತು
ವೇಶಿಯರ ಸಂಗ ಎಂಜಲವ ತಿನಿಸಿತ್ತು
ಪರಸ್ತ್ರೀಯರ ಸಂಗ ಮಹಾಪಾತಕವ ತಂದಿತ್ತು
ಈ ತ್ರಿವಿಧನಾಸ್ತಿಯಲ್ಲದೆ ಭಕ್ತನಲ್ಲ
ಭಕ್ತಿ ಇಲ್ಲದೆ ಮುಕ್ತಿಗೆ ಸಲ್ಲ ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ
ಭಕ್ತನು ತಾನು ತಾನಾಗಿರಬೇಕು
ಸಕಲ ಪ್ರಾಣಿಗಳ ತನ್ನಂತೆ ಕಾಣಬೇಕು

ಮನಧನವ ಗುರುಲಿಂಗ ಜಂಗಮಕ್ಕೆ ಸವೆಯಿಸಬೇಕು
ಅಪಾತ್ರದಾನವ ಮಾಡಲಾಗದು
ಸಕಲೇಂದ್ರಿಯಗಳ ತನ್ನ ವಶವ ಮಾಡಬೇಕು
ಇದೇ ಮೊದಲಲ್ಲಿ ದೇಹ ಶೌಚ ನೋಡಾ
ಲಿಂಗವ ಪೂಜಿಸಿ ಪ್ರಸಾದವಂ ಪಡೆವಡೆ
ಇದೇ ಸಾಧನ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ

ಎಂದಿದ್ದಾರೆ ಚೆನ್ನಬಸವಣ್ಣನವರು.

**೫. ಮಹಾಶರಣೆ ಅಕ್ಕಮಹಾದೇವಿ:**

ತನ್ನ ನಿಷ್ಠೆಯನ್ನು ಲೋಕವಿರಕ್ತಿಯನ್ನು ಅಕ್ಕ ಹೀಗೆ ಹಾಡಿದ್ದಾಳೆ:

ಗಿರಿಯಲ್ಲಲ್ಲದೆ ಹುಲ್ಲುಮೊರಡಿಯಲ್ಲಾಡುವುದೇ ನವಿಲು?
ಕೊಳದಲ್ಲಲ್ಲದೆ ಕಿಱುವಳ್ಳಕ್ಕೆಳಸುವುದೇ ಹಂಸೆ?
ಮಾಮರ ತಳಿತಲ್ಲದೆ ಸ್ವರಗೈವುದೇ ಕೋಗಿಲೆ?
ಪರಿಮಳವಿಲ್ಲದೆ ಪುಷ್ಪಕ್ಕೆಳಸುವುದೇ ಭ್ರಮರ?
ಎನ್ನ ದೇವ ಚೆನ್ನಮಲ್ಲಿಕಾರ್ಜುನಂಗಲ್ಲದೆ
ಅನ್ಯಕ್ಕೆಳಸುವುದೆ ಎನ್ನ ಮನ ಹೇಳಿರೇ ಕೆಳದಿಯರಿರಾ

ಕಾಯ ಕರ್‍ರನೆ ಕಂದಿದರೇನಯ್ಯಾ?
ಕಾಯ ಮಿರ್‍ರನೆ ಮಿಂಚಿದರೇನಯ್ಯ?
ಚೆನ್ನಮಲ್ಲಿಕಾರ್ಜುನದೇವಂಗೊಲಿದ
ಕಾಯವೇನಾದರೆ ನಿಮಗೇನಯ್ಯಾ

ಈ ವಚನಗಳಲ್ಲಿ ನಿರೂಪಿಸಿದ್ದಾಳೆ ತನ್ನ ಘನತಮ ವೈರಾಗ್ಯವನ್ನು ಅಕ್ಕಮಹಾದೇವಿ.

ಮೇಲೆ ಉದಾಹರಿಸಿದ ವಚನಗಳಿಂದ ಶಿವಶರಣರ ಭಕ್ತಿ, ನಿಷ್ಠೆ ಅನನ್ಯ ಶರಣಾಗತಿ ಇವು ವ್ಯಕ್ತವಾಗುತ್ತವೆ. ಇದರಂತೆಯೇ ಉಳಿದೆಲ್ಲ ವಚನಕಾರರೂ ಭಕ್ತಿಗೆ ಪ್ರಥಮಸ್ಥಾನವನ್ನು ಕೊಟ್ಟಿದ್ದಾರೆ. ವಚನಕಾರರ ಕಾಲವನ್ನು ವೀರಶೈವ ಸಾಹಿತ್ಯ ಚರಿತ್ರೆಯಲ್ಲಿ ಪ್ರಥಮಘಟ್ಟವೆಂದು ಹೇಳಬಹುದು. ಇವರಾದ ಮೇಲೆ ಕ್ರಿ.ಶ. ೧೩ ರಿಂದ ೧೫ನೆಯ ಶತಮಾನದವರೆಗೆ ಪಾಲ್ಕುರಿಕೆ ಸೋಮನಾಥ, ಭಕ್ತಶಿರೋಮಣಿ ಹರಿಹರ, ರಾಘವಾಂಕ, ಕೆರೆಯ ಪದ್ಮರಸ, ಲಕ್ಕಣ್ಣ, ಜಕ್ಕಣ್ಣ, ಚಾಮರಸ, ಕುಮಾರ ಬಂಕನಾಥ, ಮಗ್ಗೆಯ ಮಾಯಿದೇವ ಮುಂತಾದವರು ಕನ್ನಡ ಮತ್ತು ಸಂಸ್ಕೃತದಲ್ಲಿ ಗ್ರಂಥಗಳನ್ನು ರಚಿಸಿದರು. ಈ ಕಾಲವನ್ನು ಎರಡನೆಯ ಘಟ್ಟವೆನ್ನಬಹುದು. ಇನ್ನು ಕೊನೆಯದಾಗಿ ಕ್ರಿ.ಶ. ೧೬ ಮತ್ತು ೧೭ನೆಯ ಶತಮಾನಗಳಲ್ಲಿ ತೋಂಟದ ಸಿದ್ಧೇಶ್ವರ, ಬೋಳಬಸವೇಶ್ವರ, ಚೆನ್ನಂಜೇದೇವ, ವಿರಕ್ತ ತೋಂಟದಾರ್ಯ, ಗುಮ್ಮಳಾಪುರದ ಸಿದ್ಧವೀರ, ಗುಬ್ಬಿಯ ಮಲ್ಲಣಾರ್ಯ, ಹಂಪೆಯ ವಿರೂಪಾಕ್ಷ ಪಂಡಿತ ಮುಂತಾದವರು ಗ್ರಂಥಗಳನ್ನು ರಚಿಸಿ ದಕ್ಷಿಣ ದೇಶದಲ್ಲೆಲ್ಲಾ ವೀರಶೈವ ಧರ್ಮವನ್ನು ಪ್ರಸಾರ ಮಾಡಿದರು. ವೀರಶೈವ ಸಾಹಿತ್ಯ ಚರಿತ್ರೆಯಲ್ಲಿ ಇದನ್ನು ಮೂರನೆಯ ಘಟ್ಟ ಎನ್ನಬಹುದು.

ಭಕ್ತಿಪಂಥಕ್ಕೆ ತವರುಮನೆಯಾಗಿರುವ ದಕ್ಷಿಣ ಭಾರತದಲ್ಲಿ ತಲೆದೋರಿದ ಈ ವೀರಶೈವಧರ್ಮವು ಭಕ್ತಿಗೆ ಅಗ್ರಸ್ಥಾನವನ್ನು ಕೊಟ್ಟಿದೆ. ಜಾತಿ ಮತ್ತು ವರ್ಣಾಶ್ರಮ ತಾರತಮ್ಯ ವ್ಯತ್ಯಾಸಗಳಿಗೆ ಅವಕಾಶವಿಲ್ಲದಿರುವುದು ಸ್ತ್ರೀ ಸ್ವಾತಂತ್ರ್ಯ, ಭಕ್ತಿಪ್ರಾಧಾನ್ಯ, ಕಾಯಕದ ಮಹತ್ವ, ಹರಿಜನೋದ್ಧಾರ, ದೇಶಭಾಷೆಗಳಲ್ಲಿ, ಸುಲಭ ಶೈಲಿಯಲ್ಲಿ ನೀತಿಬೋಧೆ ಮಾಡಿದುದು –ಇವು ವೀರಶೈವಧರ್ಮದ ವೈಶಿಷ್ಟ್ಯಗಳಾಗಿವೆ.

■

# ಸಂಪಾದನ ವಿಭಾಗದ ನೂರು ಕೃತಿಗಳು

**ಬಿ.**ಎಲ್. ರೈಸ್ ಅವರ ನೇತೃತ್ವದಲ್ಲಿ ಕ್ರಿ.ಶ. ೧೮೮೪ರಲ್ಲಿ ಸ್ಥಾಪಿತವಾದ ಮೈಸೂರು ಪುರಾತತ್ವಇಲಾಖೆಯ ಅಂಗವಾಗಿ ಹಸ್ತಪ್ರತಿಗಳ ಸಂಗ್ರಹ ಮತ್ತು ಸಂರಕ್ಷಣೆಯ ಕಾರ್ಯ ಪ್ರಾರಂಭವಾಯಿತು ಎನ್ನಬಹುದು. ರೈಸ್ ಅವರು ಪ್ರಾರಂಭಿಸಿದ ಬಿಬ್ಲಿಯೋಥಿಕ್ ಕರ್ಣಾಟಿಕ ಮಾಲೆಯ ಮೂಲಕ ಕರ್ಣಾಟಕ ಭಾಷಾಭೂಷಣಂ (೧೮೮೪), ಕರ್ಣಾಟಕ ಶಬ್ದಾನುಶಾಸನಂ (೧೮೯೦), ಪಂಪರಾಮಾಯಣ (೧೮೯೨), ಪಂಪಭಾರತ (೧೮೯೮), ಕವಿರಾಜಮಾರ್ಗ (೧೮೯೮) ಮತ್ತು ಕಾವ್ಯಾವಲೋಕನಂ ಇವೇ ಮೊದಲಾದ ಕೃತಿಗಳು ಪ್ರಕಟವಾದುವು.

ಬಿ.ಎಲ್. ರೈಸ್ ಅವರ ತರುವಾಯ ಆರ್. ನರಸಿಂಹಾಚಾರ್ ಅವರು ಪ್ರಾಚ್ಯವಿದ್ಯಾಸಂಶೋಧನಾಲಯದ ಪ್ರಕಟಣಕಾರ್ಯವನ್ನು ಮುಂದುವರಿಸಿದರು. 'ಕಾವ್ಯಾವಲೋಕನಂ' ಆರ್. ನರಸಿಂಹಾಚಾರ್ಯರ ಗ್ರಂಥಸಂಪಾದನ ಸಾಮರ್ಥ್ಯಕ್ಕೆ ಉತ್ತಮ ನಿದರ್ಶನವಾಗಿದೆ. ಆರ್. ಶಾಮಾಶಾಸ್ತ್ರಿಗಳು ಕಂಠೀರವ ನರಸರಾಜ ವಿಜಯವನ್ನು ಎ.ಆರ್. ಕೃಷ್ಣಶಾಸ್ತ್ರಿಗಳು ಧರ್ಮಾಮೃತ ಮತ್ತು ಕೆಳದಿನೃಪ ವಿಜಯವನ್ನು ಪ್ರಕಟಿಸಿದರು.

ಬಿ.ಎಂ. ಶ್ರೀಕಂಠಯ್ಯ, ಟಿ.ಎಸ್. ವೆಂಕಣ್ಣಯ್ಯ, ಡಿ. ಶ್ರೀನಿವಾಸಾಚಾರ್ಯ ಮತ್ತು ತೀ.ನಂ.ಶ್ರೀ. ಇವರನ್ನು ಒಳಗೊಂಡ ಕುಮಾರವ್ಯಾಸಭಾರತ ಪರಿಷ್ಕರಣ ಸಮಿತಿ ಯುದ್ಧಪಂಚಕವನ್ನು ಸಮರ್ಥವಾಗಿ ಪರಿಷ್ಕರಿಸಿತು. ಜಾತಕತಿಲಕ, ಸಿಂಗರಾಜಪುರಾಣ, ಶಿವತತ್ತ್ವಚಿಂತಾಮಣಿ ಮೊದಲಾದ ನಲವತ್ತು ಮಹತ್ವದ ಗ್ರಂಥಗಳು ಪ್ರಾಚ್ಯವಿದ್ಯಾ ಸಂಶೋಧನಾಲಯದಿಂದ ಪ್ರಕಟವಾದುವು.

ಕನ್ನಡ ಅಧ್ಯಯನಕ್ಕೆ ಸಂಬಂಧಿಸಿದ ಚಟುವಟಿಕೆಗಳೆಲ್ಲವನ್ನೂ ಕೇಂದ್ರೀಕರಿಸುವ ದೃಷ್ಟಿಯಿಂದ ೧೯೬೬ರ ಕೊನೆಯಲ್ಲಿ ಪ್ರಾಚ್ಯವಿದ್ಯಾಸಂಶೋಧನಾಲಯದ ಕನ್ನಡ ವಿಭಾಗವನ್ನು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ವಿಲೀನಗೊಳಿಸಲಾಯಿತು. ಡಾ. ಡಿ. ಜವರೇಗೌಡ, ಶ್ರೀ ಎಚ್. ದೇವೀರಪ್ಪನವರು ಈ ಕಾರ್ಯವನ್ನು ಸುಸೂತ್ರವಾಗಿ ನೆರವೇರಿಸಿದರು. ತರುವಾಯ ಬಂದ ಡಾ. ಹಾ.ಮಾ. ನಾಯಕ ಮತ್ತು ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರು ವಿಶೇಷ ಆಸ್ಥೆಯನ್ನು ತಾಳಿ ಈ ವಿಭಾಗಕ್ಕೆ ಎಲ್ಲ ನೆರವನ್ನು ನೀಡುತ್ತ ಬಂದಿದ್ದಾರೆ.

ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಚ್ಯಕಾವ್ಯ ಮಾಲೆಯ ಅಂಗವಾಗಿ ೧೯೬೬ ರಿಂದ ೧೯೮೬ರ ನಡುವಣ ಇಪ್ಪತ್ತು ವರ್ಷಗಳಲ್ಲಿ ನೂರುಕೃತಿಗಳು ಪ್ರಕಟವಾಗಿ ಇಂದು ನೂರೊಂದನೆಯ ಕೃತಿ ಬಿಡುಗಡೆಯಾಗಲಿದೆ. ಜೈನ, ಬ್ರಾಹ್ಮಣ, ವೀರಶೈವ ಧರ್ಮಕ್ಕೆ ಸೇರಿದ ಅನೇಕ ಅಪ್ರಕಟಿತ ಕೃತಿಗಳು ಪ್ರಾಚ್ಯಕಾವ್ಯಮಾಲೆಯಲ್ಲಿ ಪ್ರಕಟವಾಗಿವೆ. ಜೊತೆಗೆ ಹಲವಾರು ಶಾಸ್ತ್ರಗ್ರಂಥಗಳೂ ಹೊರಬಂದಿವೆ. ಪ್ರಾಚ್ಯಸಂಶೋಧನಾಲಯದಿಂದ ಪ್ರಕಟವಾಗಿದ್ದ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯ ನಾಲ್ಕು ಸಂಪುಟಗಳ ಜೊತೆಗೆ ಮತ್ತೆ ಐದು ಸಂಪುಟಗಳನ್ನು ಸಿದ್ಧಪಡಿಸಿ ಪ್ರಕಟಿಸಲಾಗಿದೆ. ಇವುಗಳಿಂದ ಅಧ್ಯಯನ ಸಂಸ್ಥೆಯಲ್ಲಿನ ಎಲ್ಲ ಹಸ್ತಪ್ರತಿಗಳ ಒಂದು ನೈಜಸ್ವರೂಪವನ್ನು ಕಾಣಬಹುದಾಗಿದೆ.

ಛಂದಸ್ಸಿನ ದೃಷ್ಟಿಯಿಂದ ಚಂಪು ತ್ರಿಪದಿ ಷಟ್ಪದಿ ಸಾಂಗತ್ಯ ಗದ್ಯ ರಗಳೆ ಕೃತಿಗಳು ಈ ಪ್ರಕಟಣೆಗಳಲ್ಲಿ ಸೇರಿವೆ. ವಸ್ತುವಿನ ದೃಷ್ಟಿಯಿಂದ ಜೈನಶಾಸ್ತ್ರ ಪರಿಭಾಷೆಯನ್ನು ವಿವರವಾಗಿ ವಿವೇಚಿಸಿರುವ 'ಪದಾರ್ಥ ಸಾರ'ದ ಎರಡು ಸಂಪುಟಗಳು ಮತ್ತು 'ದ್ವಾದಶಾನುಪ್ರೇಕ್ಷೆ' ಪ್ರಕಟವಾಗಿವೆ.

ಜೈನತೀರ್ಥಂಕರರ ಚರಿತ್ರೆಯನ್ನು ಬಿತ್ತರಿಸುವ ಎರಡನೆಯ ನಾಗವರ್ಮನ 'ವರ್ಧಮಾನ ಪುರಾಣ', ಬಾಹುಬಲಿ ಪಂಡಿತನ 'ಧರ್ಮನಾಥ ಪುರಾಣ', ಬಂಧುವರ್ಮನ 'ಹರಿವಂಶಾಭ್ಯುದಯ', ಮಹಾಬಲಕವಿಯ 'ನೇಮಿನಾಥ ಪುರಾಣ' ಎಂಬ ಚಂಪೂಕಾವ್ಯಗಳೂ ಪಿರಿಯಾಪಟ್ಟಣದ ದೊಡ್ಡಯ್ಯನ ಸಾಂಗತ್ಯ ಕೃತಿ 'ಚಂದ್ರಪ್ರಭ ಚರಿತೆ' ನಿಟ್ಟೂರು ದೊಡ್ಡಣಾಂಕನ ಭಾಮಿನಿ ಷಟ್ಪದಿ ಕೃತಿ 'ಚಂದ್ರಪ್ರಭ ಚರಿತೆ' ಮತ್ತು ಸಂಕಿಷಟ್ಟದ ಚಿಕ್ಕಪದ್ಮಣ್ಣಸೆಟ್ಟಿಯ ಸಾಂಗತ್ಯ ಕೃತಿ 'ಅನಂಥನಾಥ ಚರಿತೆ'ಗಳೂ ಪ್ರಕಟವಾಗಿವೆ. ಜೈನತೀರ್ಥಂಕರರ ಪುರಾಣಗಳು ಚಂಪುವಿನಿಂದ ಷಟ್ಪದಿ ಮತ್ತು ಸಾಂಗತ್ಯ ಪ್ರಕಾರಗಳಿಗೆ ಬಂದಾಗ ಆಗುವ ಪರಿಣಾಮ ಮತ್ತು ಪ್ರಯೋಜನಗಳ ಅಧ್ಯಯನಕ್ಕೆ ಈ ಕೃತಿಗಳ ಪ್ರಕಟಣೆಯಿಂದ ನೆರವಾಗಿದೆ.

ಎರಡನೆಯ ನಾಗವರ್ಮನ ವರ್ಧಮಾನ ಪುರಾಣದಿಂದ ಈವರೆಗೆ ಉಪಲಬ್ಧವಿಲ್ಲದ ಶೀ ವಿಜಯನ ರಘುವಂಶ ಪುರಾಣ, ನಾಗವರ್ಮನ ವತ್ಸರಾಜಚರಿತೆ, ನಾಗದೇವನ ಸುಲೋಚನಾ ಚರಿತೆ ಈ ಕೃತಿಗಳ ಉಲ್ಲೇಖ ದೊರೆತಿದೆ. ಬಾಹುಬಲಿ ಪಂಡಿತನ ಧರ್ಮನಾಥ ಪುರಾಣದಿಂದ ಆತನು ಸಂಸ್ಕೃತದಲ್ಲಿ ಗುಮ್ಮಟನಾಥ ಚರಿತೆಯನ್ನು ಬರೆದಿರುವುದಾಗಿ ತಿಳಿದುಬರುತ್ತದೆ. ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಈ ಸಂಗತಿಗಳು ಮಹತ್ವಪೂರಿತವಾದುವು.

ಜೈನಧರ್ಮದ ಸನತ್ಕುಮಾರಚರಿತೆ, ಜೀವಂಧರ ಚರಿತೆ, ಸುಕುಮಾರ ಚರಿತೆ, ಅನಂತಕುಮಾರಿ ಚರಿತೆ, ವಿಜಯ ಕುಮಾರಿ ಚರಿತೆಗಳು ಶಾಸ್ತ್ರೀಯವಾಗಿ ಸಂಪಾದಿತವಾಗಿ ಮೊದಲಬಾರಿಗೆ ಪ್ರಕಟವಾಗಿವೆ. ವಿಜಯಕುಮಾರಿ ಚರಿತೆಯಲ್ಲಿ ಜೈನರು ಕಂಡ ಬಸವಣ್ಣನ ಇತಿವೃತ್ತಗಳಿವೆ. ಭಾರತೀಯ ಕಥಾಸಾಹಿತ್ಯದೊಡನೆ ಜೈನಕಥಾಸಾಹಿತ್ಯದ ತುಲನಾತ್ಮಕ ಅಧ್ಯಯನಕ್ಕೆ ಪುಣ್ಯಾಸ್ರವ ಮತ್ತು ಧರ್ಮಪರೀಕ್ಷೆಯ ಪ್ರಕಟಣೆಗಳು ತುಂಬ ನೆರವಾಗುತ್ತವೆ.

ಕಲ್ಯಾಣಕೀರ್ತಿಯ ಸಮಗ್ರ ಕೃತಿಗಳ ಸಂಪುಟ, ಸುವಿಚಾರಚರಿತೆ ಮತ್ತು ಜ್ಞಾನಭಾಸ್ಕರ ಚರಿತೆಗಳು ಒಬ್ಬ ಕವಿಯ ಎಲ್ಲ ಕೃತಿಗಳು ಒಂದೇ ಕಡೆ ಲಭ್ಯವಾಗಲು ಕಾರಣವಾಗಿವೆ. ಮಾಣಿಕಸ್ವಾಮಿಯ ಚರಿತೆ ಕೊಲ್ಲಿಪಾಕದಲ್ಲಿ ಆದೀಶ್ವರನ ಪ್ರತಿಷ್ಠಾಪನೆಯಾದ ಸಂಗತಿಯನ್ನು ಕುರಿತದ್ದಾಗಿದೆ.

ಶೈವ ವೈಷ್ಣವ ಪುರಾಣಗಳು ಭಾರತ ಭಾಗವತ ಮತ್ತು ರಾಮಾಯಣಗಳನ್ನು ಆಧರಿಸಿ ರಚಿತವಾದ ಅನೇಕ ಕೃತಿಗಳು ಈ ಮಾಲೆಯಿಂದ ಪ್ರಕಟವಾಗಿವೆ. ರುಕ್ಮಾಂಗದ ಚರಿತ್ರೆ, ದಶಾವತಾರ ಚರಿತೆ, ನಳಚಂಪು, ವಿಷ್ಣುಪುರಾಣದ ಎರಡು ಸಂಪುಟಗಳನ್ನು ಹೆಸರಿಸಬಹುದು. ಪಶ್ಚಿಮರಂಗಕ್ಷೇತ್ರ ಮಾಹಾತ್ಮ್ಯಂ, ವೆಂಕಟಗಿರಿ ಮಾಹಾತ್ಮ್ಯಂ, ಯಾದವಗಿರಿ ಮಾಹಾತ್ಮ್ಯಂ, ಶ್ರೀರಂಗಮಾಹಾತ್ಮ್ಯಂ, ನಂದಿಮಾಹಾತ್ಮ್ಯಂ –ಈ ಕೃತಿಗಳು ಆ ಕಾಲದಲ್ಲಿ ಜನತೆ ಮಾಹಾತ್ಮ್ಯೆಗಳ ಬಗೆಗೆ ತೋರುತ್ತಿದ್ದ ಒಲವಿನ ದ್ಯೋತಕವಾಗಿದೆ.

ಈ ಬಗೆಯ ಸಾಹಿತ್ಯದಲ್ಲಿ 'ಸಹ್ಯಾದ್ರಿಖಂಡ'ದ ಪ್ರಕಟಣೆ ತುಂಬ ಮಹತ್ವದ್ದಾಗಿದೆ. ಇದು ಸಹ್ಯಾದ್ರಿ ಪರ್ವತಶ್ರೇಣಿಯ ತೀರ್ಥಕ್ಷೇತ್ರಗಳು ಮತ್ತು ಉತ್ತರ ಕನ್ನಡ ಜಿಲ್ಲೆ, ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿದ ಪ್ರಸಿದ್ಧವಾದ ಸಪ್ತಕ್ಷೇತ್ರಗಳ ವಿವರಗಳನ್ನೂ ನೀಡುತ್ತದೆ. ಹರಿಹರ ಸಾಮರಸ್ಯವನ್ನೂ ಸಾರುತ್ತಿದೆ. ಸ್ಥಳಪುರಾಣ, ದಂತಕಥೆ, ವದಂತಿಗಳಿಂದ ಕೂಡಿದ ಈ ಮಾಹಾತ್ಮ್ಯಗಳು ಸ್ಥಳನಾಮಗಳನ್ನು ಅಧ್ಯಯನ ಮಾಡುವವರಿಗೆ ಮಹತ್ವದ ದಾಖಲೆಗಳನ್ನು ಒದಗಿಸಿಕೊಡುತ್ತವೆ. ಜಾಯಗೊಂಡನ ಕುವಲಯಾನಂದದ ಮೂಲಕ ಪರಿಚಿತವಾಗಿದ್ದ ಸುಕುಮಾರ ಭಾರತಿಯ ಚಾಯಣಭಾರತವು ಕೂಡ ಈ ಮಾಲೆಯಿಂದಲೇ ಪ್ರಕಟವಾಗಿದೆ.

ವೀರಶೈವಸಾಹಿತ್ಯ ಕೃತಿಗಳಲ್ಲಿ ಕೋಲಶಾಂತಯ್ಯ ಮತ್ತು ಮಧುವಯ್ಯಗಳ ವಚನಗಳು, ಬಿಬ್ಬಿಬಾಚಯ್ಯ ಮತ್ತು ಮೆರೆಮಿಂಡಯ್ಯಗಳ ವಚನಗಳು, ಹರಿಹರನ ಐದು ರಗಳೆಗಳು ಪ್ರಕಟವಾಗಿವೆ. ವಚನ ಸಾಹಿತ್ಯದ ಪರಿಷ್ಕರಣ ಮತ್ತು ಪ್ರಕಟಣೆಗಳಿಗೆ ಕರ್ಣಾಟಕ ವಿಶ್ವವಿದ್ಯಾಲಯದ ವಚನವಾಙ್ಮಯ ವಿಶೇಷ ವ್ಯವಸ್ಥೆ ಮಾಡಿರುವುದರಿಂದ ಆ ಕಾರ್ಯವನ್ನು ಅಷ್ಟಾಗಿ ಮುಂದುವರಿಸಲಿಲ್ಲ.

ವೀರಶೈವಸಿದ್ಧಾಂತವನ್ನು ಕುರಿತಂತೆ ದೀಕ್ಷಾಬೋಧೆ, ಷಟ್ಸ್ಥಲತಿಲಕ, ಅನುಭವ ಮುಕುರ ಮತ್ತು ಆರಾಧ್ಯ ಚಾರಿತ್ರ್ಯಗಳು ಹೊರಬಂದಿವೆ. ಕನ್ನಡದಲ್ಲಿ ವೀರಶೈವ ಸಿದ್ಧಾಂತ ಮತ್ತು ಅಧ್ಯಯನಗಳಿಗೆ ಈ ಕೃತಿಗಳು ಆಕರ ಗ್ರಂಥಗಳಾಗಿವೆ.

ಸಾನಂದಚರಿತೆ, ಅಬ್ಬಲೂರು ಚರಿತೆ, ಸಾನಂದಗಣೇಶ ಸಾಂಗತ್ಯ, ಪುರಾತನರ ಚರಿತೆ, ನಿಜಲಿಂಗ ಚಿಕ್ಕಯ್ಯನ ಸಾಂಗತ್ಯ, ನನ್ನಯ್ಯಗಳ ಚಾರಿತ್ರ, ಎಲ್ಲಾ ಪುರಾತನರ ಪುರಾಣ, ಬಸವಶಿಖಾಮಣಿ, ನನ್ನಯ್ಯ ಚಾರಿತ್ರ, ಏಕೋರಾಮೇಶ್ವರ ಪುರಾಣ, ಬಸವೇಶ್ವರನ ಕಾವ್ಯ, ನವಮುಗ್ಧಲೀಲೆ ಮತ್ತು ಬಸವ ಪುರಾಣದ ಕಥಾಸಾಗರ ಇವೇ ಮೊದಲಾದ ಕೃತಿಗಳು ವೀರಶೈವ ಮಹಾಪುರುಷರ ಜೀವಿತದ ವಿವರಗಳು ಅಧ್ಯಯನಕ್ಕೆ ನೆರವಾಗುತ್ತವೆ.

ಗುರುಲಿಂಗಜಂಗಮಚಾರಿತ್ರ ಎಂಬ ಸಾಂಗತ್ಯಗ್ರಂಥ ಹದಿನಾರನೆಯ ಶತಮಾನದಲ್ಲಿ ಮೈಸೂರು ಜಿಲ್ಲೆಯ ವೀರಶೈವದ ಸ್ಥಿತಿಗತಿಗಳನ್ನು ಅರಿಯಲು ಸಹಾಯಕವಾಗುತ್ತದೆ. ಕ್ರಿ.ಶ. ೧೭೨೦ರ ಇಮ್ಮಡಿ ಗುರುಸಿದ್ಧ ರಚಿಸಿರುವ ಹಾಲಾಸ್ಯಪುರಾಣ ತಮಿಳುನಾಡಿನ ಮಧುರೆ ಮೀನಾಕ್ಷಿಸುಂದರರ ಅರವತ್ತು ನಾಲ್ಕುಲೀಲೆಗಳನ್ನು ಚಿತ್ರಿಸುತ್ತದೆ. ಕನ್ನಡ ಚಂಪುಪ್ರಕಾರದಲ್ಲಿ ಇದು ಒಂದು ಬೃಹತ್ಕೃತಿ. ಕನ್ನಡ ಛಂದಸ್ಸಿನ ಚರಿತ್ರೆಯ ದೃಷ್ಟಿಯಿಂದ ಈ ಕೃತಿಗೆ ಮಹತ್ವದ ಸ್ಥಾನವಿದೆ. ೧೪೫ಕ್ಕೂ ಹೆಚ್ಚು ಛಂದೋರೂಪಗಳನ್ನು ಬಳಸಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ. ಈವರೆಗೆ ಎಲ್ಲೂ ಉಲ್ಲೇಖವಾಗದ ಮುಡಿಗೊಂಡ ಅಪ್ಪಾಜಿ ಕವಿಯಿಂದ ರಚಿತವಾದ ಗಿರಿಜಾರಮಣ ವಿಲಾಸ ಎಂಬ ಚಂಪೂಕಾವ್ಯ ಅತ್ಯಂತ ರೋಚಕವಾಗಿದೆ.

ಕನ್ನಡ ಸಾಹಿತ್ಯದ ಲಕ್ಷಣಗ್ರಂಥವಾದ ನಾಗವರ್ಮನ ಕಾವ್ಯಾವಲೋಕನ ಈ ಮಾಲೆಯಲ್ಲಿ ಮರುಮುದ್ರಣಗೊಂಡಿದೆ. ಸಾಳ್ವನ ರಸರತ್ನಾಕರವೂ ಇಲ್ಲಿಂದಲೇ ಪ್ರಕಟವಾಗಿದೆ. ಶಬ್ದಮಣಿದರ್ಪಣಗಳಲ್ಲಿ ವಿಶಿಷ್ಟವಾದ ಹೈದರಾಬಾದ್ ಪ್ರತಿಯನ್ನು ಆಧರಿಸಿ ಪರಿಷ್ಕರಣಗೊಂಡ ಶಬ್ದಮಣಿದರ್ಪಣದ ಆವೃತ್ತಿ ಹೆಸರಿಸತಕ್ಕುದಾಗಿದೆ. ಸಂಕಲನ ಗ್ರಂಥಗಳಲ್ಲಿ ಪ್ರಮುಖವಾದ ಸೂಕ್ತಿಸುಧಾರ್ಣವ ಪ್ರಾಚ್ಯಕಾವ್ಯಮಾಲೆಯಿಂದ ಮರುಮುದ್ರಣಗೊಂಡಿದೆ.

ಸಾಹಿತ್ಯ ಕೃತಿಗಳನ್ನೇ ಅಲ್ಲದೆ ಶಾಸ್ತ್ರಗ್ರಂಥಗಳನ್ನು ಸಂಪಾದಿಸುವಲ್ಲಿಯೂ ಈ ಮಾಲೆ ಕ್ರಮಿಸಿದೆ. ಅತ್ಯಂತ ಬೇಡಿಕೆಯುಳ್ಳ ಸೌಂದರ್ಯಲಹರೀ ಜಾತಕತಿಲಕಗಳು ಕೆಲವಾರು ಮುದ್ರಣಗಳನ್ನು ಕಂಡಿವೆ. ಮಂಗರಸನ ಸೂಪಶಾಸ್ತ್ರ ಎಂಬ ಪಾಕಶಾಸ್ತ್ರಗ್ರಂಥ ಹೊಸಗನ್ನಡ ಗದ್ಯಾನುವಾದದೊಂದಿಗೆ ಹೊರಬಂದಿದೆ. ಸಕಲವೈದ್ಯಸಂಹಿತಾಸಾರಾರ್ಣವ ಒಂದು ಆಯುರ್ವೇದ ಗ್ರಂಥ, ಜನವಶ್ಯ ಕಾಮಶಾಸ್ತ್ರದ ಗ್ರಂಥ. ಯೋಗರತ್ನಾಕರ ಅಷ್ಟಾಂಗಯೋಗಕ್ಕೆ ಸಂಬಂಧಿಸಿದುದು. ಸುಜ್ಞಾನಚಿಂತಾಮಣಿ ವೀರಶೈವ ಯೋಗಪರಿಭಾಷೆಯನ್ನು ವಿವೇಚಿಸುತ್ತದೆ. ಇವೆಲ್ಲ ಈ ಮಾಲೆಯ ಪ್ರಮುಖ ಪ್ರಕಟಣೆಗಳು.

ವೈವಿಧ್ಯ ಮತ್ತು ವೈಶಿಷ್ಟ್ಯಗಳಿಂದ ಕೂಡಿದ ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಕಾವ್ಯಮಾಲೆಯ ನೂರೊಂದನೆಯ ಪ್ರಕಟಣೆಯಾಗಿ ಸಂಪಾದನೆಯ ಪರ್ವತೇಶ ವಿರಚಿತ ಚತುರಾಚಾರ್ಯ ಚಾರಿತ್ರ ಇಂದು ಬಿಡುಗಡೆಯಾಗುವುದು ಹೆಮ್ಮೆಯ ಸಂಗತಿಯಾಗಿದೆ. ಚತುರಾಚಾರ್ಯ ಚಾರಿತ್ರ ಕನ್ನಡ ಸಾಹಿತ್ಯದ ವಾರ್ಧಕ ಷಟ್ಪದಿ ಕಾವ್ಯಗಳಲ್ಲಿ ಗ್ರಂಥ ಪ್ರಮಾಣದಿಂದ ನಾಲ್ಕನೆಯ ಬೃಹತ್ಕೃತಿಯಾಗಿದೆ. ಇದರಲ್ಲಿ ಆರು ಕಾಂಡಗಳೂ ೫೪ ಸಂಧಿಗಳೂ ೩೧೮೭ ಪದ್ಯಗಳೂ ಇವೆ. ಚತುರ್ವೇದಗಳು, ಉಪನಿಷತ್ತುಗಳು, ವಾತೂಲ ಪಾರಮೇಶ್ವರ ಮೊದಲಾದ ಆಗಮಗಳು ಲಿಂಗಪುರಾಣ, ಶಿವಪುರಾಣ, ಷಟ್ಸ್ಥಲಜ್ಞಾನದೀಪಿಕೆ, ಸಿದ್ಧಾಂತ ಶಿಖಾಮಣಿ, ಗುರುಬಸವನ ಸಪ್ತಕಾವ್ಯಗಳೇ ಮೊದಲಾದ ಕೃತಿಗಳಿಂದ ಈ ಗ್ರಂಥಕ್ಕೆ ವಿಷಯ ಸಂಗ್ರಹವಾಗಿದೆ. ಇದರಲ್ಲಿ ರೇಣುಕ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯರ ಚರಿತ್ರೆಗಳು ನಿರೂಪಿತವಾಗಿದೆ. ಈ ಪ್ರೌಢಗ್ರಂಥ ಶಾಸ್ತ್ರವಿಚಾರಗಳ ನಿಧಿಯಾದುದರಿಂದ ಶರಣರಿಗೆ ಶಾಸ್ತ್ರಾನಂದವನ್ನೂ ರಸಭಾವಗಳ ನಿಧಿಯಾದುದರಿಂದ ರಸಿಕರಿಗೆ ಕಾವ್ಯಾನಂದವನ್ನೂ ಉಂಟುಮಾಡುತ್ತದೆ.

ಈ ಮಾಲೆಯ ವರ್ಧಮಾನಪುರಾಣಕ್ಕೆ ರಾಜ್ಯಸಾಹಿತ್ಯ ಅಕಾಡೆಮಿ ಬಹುಮಾನ, ದೇವರಾಜ ಬಹಾದ್ದೂರ್ ಬಹುಮಾನ ಮತ್ತು ಮೈಸೂರು ವಿಶ್ವವಿದ್ಯಾನಿಲಯದ ತೀನಂಶ್ರೀಕಂಠಯ್ಯ ಸ್ಮಾರಕ ಬಹುಮಾನಗಳು ಲಭಿಸಿವೆ. ಸೂಪಶಾಸ್ತ್ರ, ಧರ್ಮನಾಥಪುರಾಣ, ಜನವಶ್ಯ, ನನ್ನಯ್ಯ ಚಾರಿತ್ರಗಳಿಗೆ ರಾಜ್ಯ ಸಾಹಿತ್ಯಅಕಾಡೆಮಿಯ ಬಹುಮಾನಗಳು ಪ್ರಾಪ್ತವಾಗಿವೆ. ಹೀಗೆ ಗುಣಮಟ್ಟವನ್ನು ಕಾಪಾಡಿಕೊಂಡಿರುವ ಈ ಮಾಲೆಯ ಪುಸ್ತಕಗಳು ಕರ್ನಾಟಕ ವಿಶ್ವವಿದ್ಯಾನಿಲಯಗಳಲ್ಲಿ ಪಠ್ಯಪುಸ್ತಕಗಳಾಗಿ ನಿಯೋಜಿತವಾಗಿವೆ.

ಬಿ.ಎಲ್. ರೈಸ್, ಆರ್. ನರಸಿಂಹಾಚಾರ್, ಎ.ಆರ್. ಕೃಷ್ಣಶಾಸ್ತ್ರಿ, ಡಿ.ಎಲ್. ನರಸಿಂಹಾಚಾರ್, ಎಚ್.ಆರ್. ರಂಗಸ್ವಾಮಿ ಅಯ್ಯಂಗಾರ್, ಎಚ್. ದೇವೀರಪ್ಪ ಈ ಮೊದಲಾದ ಮಹನೀಯರ ಸೇವಾಪರಂಪರೆಯನ್ನು ಹೊಂದಿರುವ ಪ್ರಾಕ್ಕಾವ್ಯಮಾಲೆ ಕರ್ಣಾಟಕದಲ್ಲಿ ಗ್ರಂಥಸಂಪಾದನೆಗೆ ಒಂದು ಭದ್ರವಾದ ನೆಲೆಗಟ್ಟನ್ನು ಹಾಕಿದೆ. ಮುಂದಿನ ಪೀಳಿಗೆ ಈ ಪರಂಪರೆಯನ್ನು ಯಶಸ್ವಿಯಾಗಿ ಮುಂದುವರಿಸಿಕೊಂಡು ಹೋಗುವುದೆಂಬ ಆತ್ಮವಿಶ್ವಾಸವನ್ನು ತಾಳಿದ್ದೇನೆ. ಪ್ರಾಕ್ಕಾವ್ಯಮಾಲೆಯ ಈ ನೂರೊಂದು ಕೃತಿಗಳ ಪ್ರಕಟಣೆಗೆ ನೆರವಾದ ಹಿಂದಿನ ಹಿರಿಯರ ಇಂದಿನ ಸಹೋದ್ಯೋಗಿಗಳ ನೆರವನ್ನು ಅತ್ಯಂತ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಸಂಪಾದನೆಯ ವಿಭಾಗ ಕ್ಷಿಪ್ರದಲ್ಲೇ ತನ್ನ ಇನ್ನೂರನೆಯ ಕೃತಿಯ ಬಿಡುಗಡೆಯ ದಿನವನ್ನೂ ಕಾಣಲಿ ಎಂದು ಹಾರೈಸುತ್ತೇನೆ.

## ಪ್ರಾಚ್ಯಕಾವ್ಯಮಾಲೆ

೧. ಪದಾರ್ಥಸಾರ (ಭಾಗ-೧) : ಸಂ. ಎಂ.ಸಿ. ಪದ್ಮನಾಭಶರ್ಮ, ೧೯೬೯ ಬೆಲೆ: ೩೦ (೩೫), ಪು.೨೪+೩೧+೪೪೦
೨. ದ್ರೋಣಪರ್ವ : ಸಂ. ಎನ್. ಅನಂತರಂಗಾಚಾರ್, ೧೯೬೮. ೧೯೭೧, ಬೆಲೆ: ರೂ. ೪.೫೦, ಪು. ೪+೩೦೧
೩. ಕರ್ಣಪರ್ವ : ಸಂ. ಎನ್. ಅನಂತರಂಗಾಚಾರ್, ೧೯೭೦, ಬೆಲೆ: ರೂ. ೬.೦೦, ಪು. ೧೨+೩೦೦
೪. ಸೂಪಶಾಸ್ತ್ರ : ಸಂ. ಎಸ್.ಎನ್. ಕೃಷ್ಣಜೋಯಿಸ್, ೧೯೬೯, ಬೆಲೆ: ರೂ. ೮.೨೫ (೧೦.೫೦), ಪು.೫೬+೩೦೮
೫. ಸೊಬಗಿನ ಸೋನೆ : ಸಂ. ಬಿ.ಎಸ್. ಸಣ್ಣಯ್ಯ, ೧೯೭೦, ಬೆಲೆ: ರೂ. ೧೧.೫೦, ಪು. ೪+೫೪+೪೪೫
೬ ಬಸವರಾಜ ಚಾರಿತ್ರ (ಸಿಂಗಿರಾಜ ಪುರಾಣ) : ಸಂ. ಎಚ್. ದೇವೀರಪ್ಪ, ೧೯೭೦, ಬೆಲೆ: ರೂ. ೧೦.೦೦ (೧೫.೦೦), ಪು. ೮೬+೪೯೦
೭ ಕೋಲಶಾಂತಯ್ಯ ಮತ್ತು ಮಧುವಯ್ಯಗಳ ವಚನಗಳು : ಸಂ. ಬಿ.ಎಸ್. ಸಣ್ಣಯ್ಯ, ೧೯೭೦, ಬೆಲೆ: ರೂ.೩.೦೦ (೬.೦೦), ಪು. ೩೨+೯೦
೮. ಸನುತ್ಕುಮಾರ ಚರಿತೆ : ಸಂ. ಜಿ.ಜಿ. ಮಂಜುನಾಥನ್, ೧೯೭೦, ಬೆಲೆ: ರೂ. ೬.೦೦ (೧೦.೦೦), ಪು.೧೨+೪೦+೨೨೪
೯. ಶಲ್ಯಗದಾಪರ್ವಗಳು : ಸಂ. ಎನ್. ಅನಂತರಂಗಾಚಾರ್, ೧೯೭೦, ಬೆಲೆ: ರೂ. ೫.೦೦ (೯.೦೦), ಪು.೧೦+೧೯೬
೧೦. ಅರಿವಿನ ಮಾರಿತಂದೆ ವಚನಗಳು : ಸಂ. ಬಿ.ಎಸ್. ಸಣ್ಣಯ್ಯ, ೧೯೭೧, ಬೆಲೆ: ರೂ. ೨.೫೦ (೫.೦೦), ಪು. ೧೬+೧೦೪
೧೧. ನಳಚಂಪು : ಸಂ. ರಂಗಸ್ವಾಮಿ ಅಯ್ಯಂಗಾರ್, ಎಚ್.ಎನ್. ಕೃಷ್ಣಜೋಯಿಸ್, ೧೯೭೧, ಬೆಲೆ: ರೂ. ೫.೦೦ (೮.೦೦) xLii+೧೪೬
೧೨. ಶಿವಲೆಂಕ ಮಂಚಣ್ಣ ಮತ್ತು ಡಕ್ಕೆಯ ಬೊಮ್ಮಣ್ಣಗಳ ವಚನಗಳು : ಸಂ. ಬಿ.ಎಸ್. ಸಣ್ಣಯ್ಯ, ೧೯೭೧, ಬೆಲೆ: ರೂ. ೨.೫೦ (೫.೦೦), ಪು. ೩೦+೯
೧೩. ಸಭಾಪರ್ವ : ಸಂ. ಎನ್. ಬಸಪ್ಪ, ೧೯೭೧, ಬೆಲೆ: ರೂ. ೯.೦೦ (೧೬.೦೦), ಪು. ೮+೭೦+೩೪೩
೧೪. ವಿಷ್ಣುಪುರಾಣ : ಸಂ. ಎಸ್.ಎನ್. ಕೃಷ್ಣಜೋಯಿಸ್, ೧೯೭೧, ಬೆಲೆ: ರೂ. ೧೧.೫೦, ಪು. ೫೮+೪೬೩
೧೫. ಬಿಬ್ಬಿಬಾಚಯ್ಯ ಮತ್ತು ಮೆರೆಮಿಂಡಯ್ಯಗಳ ವಚನಗಳು : ಸಂ. ಬಿ.ಎಸ್. ಸಣ್ಣಯ್ಯ, ೧೯೭೧, ಬೆಲೆ: ರೂ.೨.೫೦ (೫.೦೦), ಪು. ೨೫+೯೬
೧೬. ಕಂಠೀರವ ನರಸರಾಜ ವಿಜಯ : ಸಂ. ಆರ್. ಶಾಮಶಾಸ್ತ್ರಿ, ೧೯೭೧, ಬೆಲೆ: ರೂ. ೧೨.೦೦, ಪು.೧೮+೫೦೧
೧೭. ಸೌಂದರ್ಯ ಲಹರಿ : ಸಂ. ಎಸ್. ನಾರಾಯಣಸ್ವಾಮಿಶಾಸ್ತ್ರಿ, ೧೯೭೨, ಬೆಲೆ: ರೂ. ೭.೦೦, ಪು. ೩೨+೨೦೨
೧೮. ಆದಿಪರ್ವ : ಸಂ. ಕೆ.ಆರ್. ಶೇಷಗಿರಿ, ೧೯೭೨, ಬೆಲೆ: ರೂ. ೭.೦೦ (೧೨.೫೦), ಪು. ೧೦+Lii+೨೬೪

೧೯. ರಸರತ್ನಾಕರ : ಸಂ. ಎಚ್.ಕೆ. ನರಸಿಂಹೇಗೌಡ, ೧೯೭೨, ಬೆಲೆ: ರೂ. ೫.೦೦ (೯.೦೦), ಪು. ೩೬+೧೫೮

೨೦. ಕರಸ್ಥಲ ನಾಗಲಿಂಗನ ಚರಿತ್ರೆ : ಸಂ. ಕೆ.ಆರ್. ಶೇಷಗಿರಿ, ೧೯೭೨, ಬೆಲೆ: ರೂ. ೬.೦೦ (೧೦.೦೦), ಪು. xLii+೨೦೮

೨೧. ಅನಂಥನಾಥ ಪುರಾಣ : ಸಂ. ಎಂ.ಸಿ. ಪದ್ಮನಾಭಶರ್ಮ, ೧೯೭೨, ಬೆಲೆ: ರೂ. ೮.೦೦ (೧೫.೦೦), ಪು. ೩೦+೩೪೩

೨೨. ಮದನಮೋಹಿನಿಯ ಕಥೆ : ಸಂ. ಬಿ.ಎಸ್. ಸಣ್ಣಯ್ಯ, ೧೯೭೨, ಬೆಲೆ: ರೂ. ೪.೦೦, ಪು. ೨೮+೧೫೧

೨೩. ಸೂಕ್ತಿಸುಧಾರ್ಣವ : ಸಂ. ಎನ್. ಅನಂತರಂಗಾಚಾರ್, ೧೯೭೨, ಬೆಲೆ: ರೂ. ೧೨.೦೦ (೨೦.೦೦), ಪು. ೩೨+೪೨೮

೨೪. ದೀಕ್ಷಾಬೋಧೆ : ಸಂ. ಎಸ್. ಬಸಪ್ಪ, ೧೯೭೨, ಬೆಲೆ: ರೂ. ೪.೦೦ (೮.೦೦), ಪು. xL+೧೩೬

೨೫. ಗುರುಭಕ್ತ ಚಾರಿತ್ರ : ಸಂ. ಕೆ.ಆರ್. ಶೇಷಗಿರಿ, ೧೯೭೨, ಬೆಲೆ: ರೂ. ೫.೦೦ (೮.೦೦), ೩೯+೧೯೦

೨೬. ಪದಾರ್ಥಸಾರ (ಭಾಗ-೨) : ಸಂ. ಎಂ.ಸಿ. ಪದ್ಮನಾಭಶರ್ಮ, ೧೯೭೨, ಬೆಲೆ: ರೂ. ೨೫.೦೦, ಪು. ೨೨+೪೪೧+೬೮೬

೨೭. ಹರಿಹರನ ಐದು ರಗಳೆಗಳು : ಸಂ. ಎಂ.ಎಸ್. ಲೀಲಾವತಿ, ೧೯೭೩, ಬೆಲೆ: ರೂ. ೩.೦೦ (೬.೦೦), ಪು. ೩೨+೮೯

೨೮. ಅಬ್ಬಲೂರು ಚರಿತೆ : ಸಂ. ಎನ್. ಬಸವಾರಾಧ್ಯ, ೧೯೭೩, ಬೆಲೆ: ರೂ. ೫.೦೦ (೧೦.೦೦), ಪು. xlii+೧೬೮

೨೯. ಕುಮಾರ ಕಾಳಗ : ಸಂ. ಕೆ. ರಾಘವೇಂದ್ರರಾವ್, ೧೯೭೩, ಬೆಲೆ: ರೂ. ೩.೫೦, ಪು. xliv+೭೦

೩೦. ಕೆಳದಿನೃಪ ವಿಜಯಂ : ಸಂ. ಆರ್. ಶಾಮಶಾಸ್ತ್ರಿ, ೧೯೭೩, ಬೆಲೆ: ರೂ. ೬.೦೦, ಪು. ೨೬+೧೯೩

೩೧. ಉದ್ಯೋಗಸಾರ : ಸಂ. ಎನ್. ಬಸವಾರಾಧ್ಯ, ಬೆಲೆ: ರೂ. ೩.೦೦, ಪು. ೨೦+೭೬

೩೨. ಗುರುಬೋಧಾಮೃತಂ : ಸಂ. ಡಿ. ಸಿದ್ಧಲಿಂಗಯ್ಯ, ಪಿ. ಮರಿಬಸವಾರಾಧ್ಯ, ೧೯೭೪, ಬೆಲೆ: ೪.೫೦, ಪು.೩೮+೧೫೬

೩೩. ವರ್ಧಮಾನ ಪುರಾಣಂ : ಸಂ. ಬಿ.ಎಸ್. ಸಣ್ಣಯ್ಯ, ೧೯೭೪, ಬೆಲೆ: ರೂ. ೧೦.೦೦, ಪು. lviii+೩೩೨

೩೪. ಹರಿವಂಶಾಭ್ಯುದಯಂ : ಸಂ. ಬಿ.ಎಸ್. ಸಣ್ಣಯ್ಯ, ೧೯೭೪, ಬೆಲೆ: ರೂ. ೧೫.೦೦, ಪು. ೬+೩೭೪

೩೫. ವಿರಾಟಪರ್ವ : ಸಂ. ಎಸ್.ಎನ್. ಕೃಷ್ಣಜೋಯಿಸ್, ೧೯೭೫, ಬೆಲೆ: ರೂ. ೧೮.೦೦, ಪು. ೧೦೨+೩೯೬

೩೬. ಜನವಶ್ಯ : ಸಂ. ಜಿ.ಜಿ. ಮಂಜುನಾಥನ್ : ೧೯೭೪, ಬೆಲೆ: ರೂ. ೯.೦೦, ಪು. ೩೨+೨೮೪

೩೭. ದ್ವಾದಶಾನುಪ್ರೇಕ್ಷೆ : ಸಂ. ಕೆ.ಆರ್. ಶೇಷಗಿರಿ, ೧೯೭೫. ಬೆಲೆ: ರೂ. ೧೨.೦೦, ಪು. ೫೧+೩೨೦

೩೮. ಹಾಲಾಸ್ಯಪುರಾಣಂ : ಸಂ. ಜಿ.ಜಿ. ಮಂಜುನಾಥನ್, ೧೯೭೫, ಬೆಲೆ: ರೂ. ೨೪, ಪು. ೧೬+೭೮+೮೭೧

೩೯. ಧರ್ಮನಾಥಪುರಾಣ : ಸಂ. ಎನ್. ಬಸವಾರಾಧ್ಯ, ೧೯೭೫, ಬೆಲೆ: ರೂ. ೨೧.೦೦, ಪು. ೩೬+೬೧೬

೪೦. ಸಾನಂದ ಚರಿತೆ : ಸಂ. ಎಸ್. ಬಸಪ್ಪ, ೧೯೭೫, ಬೆಲೆ: ರೂ. ೧೫.೦೦, ಪು. ೨೨+೩೨೦

೪೧. ಜೀವಂಧರ ಚರಿತ್ರೆ : ಸಂ. ಜಿ.ಜಿ. ಮಂಜುನಾಥನ್, ೧೯೭೬, ಬೆಲೆ: ರೂ. ೬.೦೦, ಪು. xliv+೧೫೬

೪೨. ಯೋಗರತ್ನಾಕರ : ಸಂ. ಜಿ.ಜಿ. ಮಂಜುನಾಥನ್, ೧೯೭೬, ಬೆಲೆ: ರೂ. ೪.೦೦, ಪು. ೨೮+೧೦೨

೪೩. ಸಾನಂದ ಗಣೇಶ ಸಾಂಗತ್ಯ : ಸಂ. ಡಿ. ವಿಜಯ, ಆರ್.ಎನ್. ವಿಜಯಲಕ್ಷ್ಮಿ, ೧೯೭೬, ಬೆಲೆ: ರೂ. ೫.೦೦, ಪು. ೨೦+೧೨೪

೪೪. ಕಲ್ಯಾಣಕೀರ್ತಿಯ ಕೃತಿಗಳು : ಸಂ. ಹ.ಕ. ರಾಜೇಗೌಡ, ೧೯೭೬, ಬೆಲೆ: ರೂ. ೧೫.೦೦, ಪು. ೬೭+೪೨೨

೪೫. ಪುರಾತನರ ಚರಿತೆ : ಸಂ. ವೈ.ಸಿ. ಭಾನುಮತಿ, ೧೯೭೬, ಬೆಲೆ: ರೂ. ೪.೦೦, ಪು. ೫೨+೧೦೮

೪೬. ಅರಣ್ಯಪರ್ವ : ಸಂ. ಸಿ.ಪಿ. ಕೃಷ್ಣಕುಮಾರ್, ೧೯೭೬, ಬೆಲೆ: ರೂ. ೧.೦೦, ಪು. xcvi+೩೬೨
೪೭. ಬಸವೇಶ್ವರ ಪುರಾಣದ ಕಥಾಸಾಗರ : ಸಂ. ಎಸ್. ಉಮಾಪತಿ, ಬೆಲೆ: ರೂ. ೯.೦೦, ಪು. ೨೦+೨೬೦
೪೮. ಜಗನ್ನಾಥವಿಜಯಂ : ಸಂ. ಡಾ. ಆರ್. ಶಾಮಶಾಸ್ತ್ರಿ, ೧೯೭೬, ಬೆಲೆ: ರೂ. ೧೨.೦೦, ಪು. ೨೪+೪೬೪
೪೯. ರುಕ್ಮಾಂಗದ ಚರಿತ್ರೆ : ಸಂ. ಕೆ.ಆರ್. ಶೇಷಗಿರಿ, ೧೯೭೬, ಬೆಲೆ: ರೂ. ೭.೫೦, ಪು. ೫೬+೨೩೪
೫೦. ಜಾತಕತಿಲಕಂ : ಸಂ. ಎಸ್.ಎನ್. ಕೃಷ್ಣಜೋಯಿಸ್, ೧೯೭೭, ಬೆಲೆ: ರೂ. ೯.೦೦, ಪು. ೩೭+೪೦೩+೮
೫೧. ಶಬ್ದಮಣಿದರ್ಪಣಂ : ಪ್ರೊ. ಡಿ.ಕೆ. ಭೀಮಸೇನರಾವ್, ೧೯೭೭, ಬೆಲೆ: ರೂ. ೧೫.೦೦, ಪು. ೧೨೦+೩೮೪
೫೨. ಪುಣ್ಯಾಸ್ರವ : ಸಂ. ಪ್ರೊ, ಡಿ. ಜವರೇಗೌಡ, ೧೯೭೭, ಬೆಲೆ: ರೂ. ೨೦.೦೦, ಪು. ೧೨+೨೧೨+೫೦೬
೫೩. ನೇಮಿನಾಥ ಪುರಾಣಂ : ಸಂ. ಬಿ.ಎಸ್. ಸಣ್ಣಯ್ಯ, ೧೯೭೭, ಬೆಲೆ: ರೂ. ೧೫.೦೦, ಪು. ೩೪+೫೦೬
೫೪. ಶ್ರೀಪಾಲ ಚರಿತೆ : ಸಂ. ಹ.ಕ. ರಾಜೇಗೌಡ, ೧೯೭೭, ಬೆಲೆ: ರೂ. ೧೫.೦೦, ಪು. ೩೪+೫೭೨
೫೫. ಸುಜ್ಞಾನ ಚಿಂತಾಮಣಿ : ಸಂ. ಜಿ.ಜಿ. ಮಂಜುನಾಥನ್, ೧೯೭೭, ಬೆಲೆ: ರೂ. ೫.೫೦, ಪು. ೧೨+೨೬+೧೩೬
೫೬. ನಿಜಲಿಂಗ ಚಿಕ್ಕಯ್ಯನ ಸಾಂಗತ್ಯ : ಸಂ. ವೈ.ಸಿ. ಭಾನುಮತಿ, ೧೯೭೮, ಬೆಲೆ: ರೂ. ೫.೫೦, ಪು. ೩೨+೧೧೨
೫೭. ದಶಾವತಾರ ಚರಿತ್ರೆ : ಸಂ. ವೈ.ಸಿ. ಭಾನುಮತಿ, ೧೯೭೬, ಬೆಲೆ: ರೂ. ೧೨.೦೦, ಪು. ೨೮+೨೯೯
೫೮. ಯಾದವಗಿರಿ ಮಹಾತ್ಮ್ಯ : ಸಂ. ಎಂ.ಪಿ. ಮಂಜಪ್ಪಶೆಟ್ಟಿ, ೧೯೭೮, ಬೆಲೆ: ರೂ. ೧೨.೦೦, ೧೨+೫೬+೩೦೨
೫೯. ನನ್ನಯ್ಯಗಳ ಚಾರಿತ್ರ : ಸಂ. ಜಿ.ಜಿ. ಮಂಜುನಾಥನ್, ೧೯೭೮, ಬೆಲೆ: ರೂ. ೧೫.೦೦, ಪು. ೧೨+೬೪+೩೬೪
೬೦. ಸುವಿಚಾರಚರಿತೆ ಮತ್ತು ಜ್ಞಾನಭಾಸ್ಕರ ಚರಿತೆ : ಸಂ. ಹ.ಕ. ರಾಜೇಗೌಡ, ೧೯೭೮, ಬೆಲೆ: ರೂ. ೬.೦೦. ಪು. ೩೨+೧೩೪
೬೧. ನನ್ನಯ್ಯ ಚಾರಿತ್ರ : ಸಂ. ಎಂ.ಪಿ. ಮಂಜಪ್ಪಶೆಟ್ಟಿ, ೧೯೭೮, ಬೆಲೆ: ರೂ. ೧೨.೦೦, ಪು. ೫೨+೩೨೦
೬೨. ಅನುಭವ ಮುಕುರ : ಸಂ. ಕೆ.ಆರ್. ಶೇಷಗಿರಿ, ೧೯೭೯, ಬೆಲೆ: ರೂ. ೧೦.೦೦, ಪು. ೧೬+೩೬+೨೫೨
೬೩. ರುಕ್ಮಾಂಗದ ಚರಿತೆ : ಸಂ. ಕೆ.ಆರ್. ಶೇಷಗಿರಿ, ೧೯೭೯, ಬೆಲೆ: ರೂ. ೮.೦೦, ಪು. ೫೨+೧೬೦
೬೪. ಷಟ್ಸ್ಥಲ ತಿಲಕ : ಸಂ. ವೈ.ಸಿ. ಭಾನುಮತಿ, ೧೯೭೯, ಬೆಲೆ: ರೂ. ೧೦.೦೦, ಪು. ೬೪+೨೬೦
೬೫. ಕೋಡಗದ ಮಾರಯ್ಯನ ಚರಿತ್ರೆ : ಸಂ. ಹ.ಕ. ರಾಜೇಗೌಡ, ೧೯೭೯, ಬೆಲೆ: ರೂ. ೫.೦೦, ಪು. ೩೬+೮೧
೬೬. ಚಂದ್ರಪ್ರಭ ಚರಿತೆ : ಸಂ. ಜಿ.ಜಿ. ಮಂಜುನಾಥನ್, ೧೯೮೦, ಬೆಲೆ: ರೂ. ೧೫.೦೦, ಪು. ೧೨+೫೬+೪೭೭
೬೭. ಪಶ್ಚಿಮರಂಗಕ್ಷೇತ್ರ ಮಾಹಾತ್ಮ್ಯಂ ಮತ್ತು ಚಿಕ್ಕದೇವರಾಜ ವಂಶಾವಳಿ : ಸಂ. ಎಂ.ಪಿ. ಮಂಜಪ್ಪಶೆಟ್ಟಿ, ೧೯೮೦, ಬೆಲೆ: ರೂ. ೮.೦೦, ಪು. xlvi+೧೦೪
೬೮. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ (ಸಂ.೫) : ಸಂ. ಬಿ.ಎಸ್. ಸಣ್ಣಯ್ಯ, ೧೯೮೦, ಬೆಲೆ: ರೂ.೨೫.೦೦, ಪು. ೧೨+೫೮೫
೬೯. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ (ಸಂ.೬) : ಸಂ. ಬಿ.ಎಸ್. ಸಣ್ಣಯ್ಯ, ೧೯೮೦, ಬೆಲೆ: ರೂ.೨೫.೦೦, ಪು. ೧೨+೬೩೧
೭೦. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ (ಸಂ.೭) : ಸಂ. ಬಿ.ಎಸ್. ಸಣ್ಣಯ್ಯ, ೧೯೮೦, ಬೆಲೆ: ರೂ.೨೬.೦೦, ಪು. ೧೨+೬೬೫
೭೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ (ಸಂ.೮) : ಸಂ. ಬಿ.ಎಸ್. ಸಣ್ಣಯ್ಯ, ೧೯೮೦, ಬೆಲೆ: ರೂ.೨೨.೦೦, ಪು. ೧೨+೫೨೪
೭೨. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ (ಸಂ.೯) : ಸಂ. ಬಿ.ಎಸ್. ಸಣ್ಣಯ್ಯ, ೧೯೮೧. ಬೆಲೆ: ರೂ.೨೦.೦೦, ಪು. ೧೨+೪೪೯

೭೩. ವೆಂಕಟಗಿರಿ ಮಾಹಾತ್ಮ್ಯಂ : ಸಂ. ಎಂ.ಪಿ. ಮಂಜಪ್ಪಶೆಟ್ಟಿ, ೧೯೮೦, ಬೆಲೆ: ರೂ. ೬.೦೦, ಪು. ೧೨+೪೦+೧೨೮
೭೪. ವಿಷ್ಣುಪುರಾಣ (ಭಾಗ–೨) : ಸಂ. ಬಿ.ವಿ. ನರಸಿಂಹಾಚಾರ್, ೧೯೮೦, ಬೆಲೆ: ರೂ. ೧೮.೦೦, ಪು. ೨೮+೬೪೩
೭೫. ಆರಾಧ್ಯ ಚಾರಿತ್ರ : ಸಂ. ಎನ್. ಬಸವಾರಾಧ್ಯ, ೧೯೮೧, ಬೆಲೆ: ರೂ. ೩೬.೦೦, ಪು. ೮+೯೬೮
೭೬. ಶ್ರೀರಂಗ ಮಹಾತ್ಮ್ಯಂ : ಸಂ. ಎಂ.ಪಿ. ಮಂಜಪ್ಪಶೆಟ್ಟಿ, ೧೯೮೧, ಬೆಲೆ: ರೂ. ೪.೦೦, ಪು. ೮+೧೦೪
೭೭. ನಂದಿಮಾಹಾತ್ಮ್ಯಂ : ಸಂ. ಜಿ.ಜಿ. ಮಂಜುನಾಥನ್, ೧೯೮೧, ಬೆಲೆ: ರೂ. ೧೮.೦೦, ಪು. ೧೨+೮೪+೩೬೮
೭೮. ಕೃಷ್ಣಾರ್ಜುನರ ಕಾಳಗ : ಸಂ. ಕೆ.ಆರ್. ಶೇಷಗಿರಿ, ೧೯೮೧, ಬೆಲೆ: ರೂ. ೨೦.೦೦, ಪು. ೨೭+೫೩೦
೭೯. ಅನಂತನಾಥ ಚರಿತೆ : ಸಂ. ವೈ.ಸಿ. ಭಾನುಮತಿ, ೧೯೮೧, ಬೆಲೆ: ರೂ. ೧೮.೦೦, ಪು. ೫೨+೩೯೬
೮೦. ವಿಜಯಕುಮಾರಿ ಚರಿತೆ : ಸಂ. ವೈ.ಸಿ. ಭಾನುಮತಿ, ೧೯೮೧, ಬೆಲೆ: ರೂ. ೧೨.೦೦, ಪು. ೮೨+೨೩೨
೮೧. ಬಸವೇಶ್ವರನ ಕಾವ್ಯ : ಸಂ. ಹ.ಕ. ರಾಜೇಗೌಡ, ೧೯೮೨, ಬೆಲೆ: ರೂ. ೧೫.೦೦, ಪು. ೩೦+೩೧೪
೮೨. ಮಾಣಿಕಸ್ವಾಮಿಚರಿತೆ : ಸಂ. ಜಿ.ಜಿ. ಮಂಜುನಾಥನ್, ೧೯೮೨, ಬೆಲೆ: ರೂ. ೮.೦೦, ಪು. xlii+೮೬
೮೩. ಧರ್ಮಪರೀಕ್ಷೆ : ಡಾ. ಕೆ. ರಾಘವೇಂದ್ರರಾವ್, ೧೯೮೨, ಬೆಲೆ: ರೂ. ೧೬.೦೦, ಪು. ೧೬+೩೪+೨೦೦
೮೪. ಸಮ್ಯಕ್ತ್ವ ಕೌಮುದಿ : ಸಂ. ಎಂ.ಪಿ. ಮಂಜಪ್ಪಶೆಟ್ಟಿ, ೧೯೮೨, ಬೆಲೆ: ರೂ. ೧೫.೦೦, ಪು. ೫೫+೧೯೬
೮೫. ನವಮುಗ್ಧಲೀಲೆ : ಸಂ. ಎನ್. ಬಸವಾರಾಧ್ಯ, ೧೯೮೨, ಬೆಲೆ: ರೂ. ೭.೫೦, ಪು. ೩೦+೮೪
೮೬. ಗಿರಿಜಾ ಕಲ್ಯಾಣಗಳು : ಸಂ. ಜಿ.ಜಿ. ಮಂಜುನಾಥನ್, ೧೯೮೩, ಬೆಲೆ: ರೂ. ೯.೦೦, ಪು. ೪೩+೧೧೨
೮೭. ಸಕಲವೈದ್ಯ ಸಂಹಿತಾಸಾರಾರ್ಣವ (ಸಂಪುಟ–೨) : ಸಂ. ಬಿ.ಎಸ್. ಸಣ್ಣಯ್ಯ, ೧೯೮೪, ಬೆಲೆ: ರೂ. ೪೫.೦೦, ಪು. ೨೦+೬೭೫
೮೮. ಚೆಲುವಾಂಬೆ ಕೃತಿಗಳು : ಸಂ. ಎಂ.ಪಿ. ಮಂಜಪ್ಪಶೆಟ್ಟಿ, ೧೯೮೪, ಬೆಲೆ: ರೂ. ೨೪.೦೦, ಪು. ೬೪+೩೮೮
೮೯. ಸಹ್ಯಾದ್ರಿಖಂಡ : ಸಂ. ವೈ.ಸಿ. ಭಾನುಮತಿ, ೧೯೮೪, ಬೆಲೆ: ರೂ. ೫೦.೦೦, ಪು. ೧೮+೧೭೦+೬೮೬+೯
೯೦. ಸುಕುಮಾರಚರಿತೆ : ಸಂ. ವೈ.ಸಿ. ಬಾನುಮತಿ, ೧೯೮೪, ಬೆಲೆ: ರೂ. ೧೫.೦೦, ಪು. ೧೨+೧೭೬
೯೧. ಅನಂತಕುಮಾರಚರಿತೆ : ಸಂ. ಜಿ.ಜಿ. ಮಂಜುನಾಥನ್, ೧೯೮೪, ಬೆಲೆ: ರೂ. ೬.೦೦, ಪು. ೩೨+೫೮
೯೨. ಎಲ್ಲ ಪುರಾತನರ ಪುರಾಣ : ಸಂ. ಎಂ.ಪಿ. ಮಂಜಪ್ಪಶೆಟ್ಟಿ, ೧೯೮೫, ಬೆಲೆ: ರೂ. ೯.೦೦, ಪು. ೧೦+೨೪+೭೦
೯೩. ಬಸವಶಿಖಾಮಣಿ : ಸಂ. ಬಿ.ಎಸ್. ಸಣ್ಣಯ್ಯ, ೧೯೮೫, ಬೆಲೆ: ರೂ. ೧೫.೦೦, ಪು. ೧೦+೧೬+೧೨೧
೯೪. ಗಿರಿಜಾರಮಣವಿಲಾಸ : ಸಂ. ಜಿ.ಜಿ. ಮಂಜುನಾಥನ್, ೧೯೮೫, ಬೆಲೆ: ರೂ. ೧೫.೦೦, ಪು. ೧೦+೧೪೬+೧೨೩
೯೫. ಚಂದ್ರಪ್ರಭ ಚರಿತ್ರೆ : ಸಂ. ಜಿ.ಜಿ. ಮಂಜುನಾಥನ್, ೧೯೮೫, ಬೆಲೆ: ರೂ. ೪೦.೦೦, ಪು. ೫೨+೬೩೨
೯೬. ಗುರುಲಿಂಗ ಜಂಗಮ ಚಾರಿತ್ರ : ಸಂ. ಜಿ.ಜಿ. ಮಂಜುನಾಥನ್, ೧೯೮೫, ಬೆಲೆ: ರೂ. ೧೨.೦೦, ಪು. ೧೨+೪೨+೮೩
೯೭. ಗುರುದತ್ತ ಚರಿತ್ರೆ : ಸಂ. ಎಂ.ಪಿ. ಮಂಜಪ್ಪಶೆಟ್ಟಿ, ೧೯೮೫, ಬೆಲೆ: ರೂ. ೯.೦೦, ಪು. ೨೮+೧೮೪
೯೮. ವೀರಭದ್ರಲೀಲಾರತ್ನ : ಸಂ. ಕೆ.ಆರ್. ಶೇಷಗಿರಿ, ೧೯೮೫, ಬೆಲೆ: ರೂ. ೨೧.೦೦, ಪು. ೬೪+೨೩೨
೯೯. ಏಕೋರಾಮೇಶ್ವರ ಪುರಾಣ : ಸಂ. ವೈ.ಸಿ. ಭಾನುಮತಿ, ೧೯೭೫, ಬೆಲೆ: ರೂ. ೩೬.೦೦, ಪು. ೮+೬೦+೩೮೪
೧೦೦. ಮಹಾಭಾರತ ಯುದ್ಧಪಂಚಕ (ಚಾಯಣ ಭಾರತ) : ಸಂ. ಪ್ರೊ. ಡಿ.ಕೆ. ಭೀಮಸೇನರಾವ್, ಡಾ. ಕೆ. ರಾಘವೇಂದ್ರರಾವ್, ೧೯೮೫, ಬೆಲೆ: ರೂ. ೩೦.೦೦, ಪು. ೧೦+೩೫+೨೧೮

■

# ಸ್ವಾತಂತ್ರ್ಯಾನಂತರದ ಕನ್ನಡ ಸಂಶೋಧನ ಸಾಹಿತ್ಯ

**ಭ**ರತಖಂಡವು ಸ್ವಾತಂತ್ರ್ಯವನ್ನು ಪಡೆದ ಮೇಲೆ ದೇಶದ ಪ್ರಜಾಸಮೂಹವು ಅಭೂತಪೂರ್ವ ಅಮಿತಾನಂದವನ್ನು ಹೊಂದಿತು. ಸ್ವಾತಂತ್ರ್ಯದ ಹೊನಲಿನಲ್ಲಿ ದೇಶದಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳು ರೂಪುಗೊಂಡವು. ಜನತೆಯಲ್ಲಿ ಹಿಂದೆಂದೂ ಕಾಣದ ಉತ್ಸಾಹ, ಸಂತೋಷಗಳು ಕಳೆಗೊಂಡವು. ಸಾಹಿತ್ಯ, ಸಂಗೀತ, ಲಲಿತಕಲೆಗಳಿಗೆ ಪ್ರಜಾಸರ್ಕಾರ ಮತ್ತು ಜನತೆಯಿಂದ ಸಾಕಷ್ಟು ಮನ್ನಣೆಯೂ ಪ್ರಶಸ್ತಿಗಳೂ ದೊರೆತುವು. ಪ್ರಕೃತ ಕನ್ನಡ ಸಾಹಿತ್ಯದಲ್ಲಿ ಸ್ವಾತಂತ್ರ್ಯಾನಂತರ ಹೊರಬಿದ್ದ ಸಂಶೋಧನ ಸಾಹಿತ್ಯವನ್ನು ಕುರಿತು ಯಥಾಮತಿಯಾಗಿ ಇಲ್ಲಿ ವಿವೇಚಿಸಲಾಗಿದೆ.

**೧. ಸರ್ಕಾರದ ಆಶ್ರಯದಿಂದ ಹೊರಬಂದ ಗ್ರಂಥಗಳು:**

ಕರ್ಣಾಟಕದಲ್ಲಿ ಸಂಶೋಧನ ಸಾಹಿತ್ಯಕ್ಕೆ ಮೀಸಲಾಗಿರುವುವುಗಳಲ್ಲಿ ಮೈಸೂರಿನ ಪ್ರಾಚ್ಯಕೋಶಾಗಾರ, ಪ್ರಸಾರಾಂಗ ಶಾಖೆ, ಧಾರವಾಡದ ಪ್ರಸಾರಾಂಗ ಶಾಖೆ, ಇತ್ತೀಚೆಗೆ ಸ್ಥಾಪಿತವಾದ ಸಾಹಿತ್ಯ ಮತ್ತು ಸಂಸ್ಕೃತಿ ವಿದ್ಯಾಭಿವೃದ್ಧಿ ಇಲಾಖೆ –ಇವು ಮುಖ್ಯವಾದುವು. ಮೈಸೂರಿನಲ್ಲಿಯ ಪ್ರಾಚ್ಯಕೋಶಾಗಾರವು ಮೊದಲಿನಿಂದಲೂ ಸಂಶೋಧನ ಸಾಹಿತ್ಯ ಪ್ರಕಟನೆಯಲ್ಲಿಯೇ ತೊಡಗಿದೆ. ಗ್ರಂಥಸಂಸ್ಕರಣ, ಸಂಪಾದನ, ಸಂಶೋಧನೆಗಳೇ ಈ ಸಂಸ್ಥೆಯಿಂದ ಆಗುತ್ತಿರುವ ಕೆಲಸ. ಸ್ವಾತಂತ್ರ್ಯಾನಂತರ ಈ ಸಂಸ್ಥೆಯಿಂದ ಸಂಶೋಧಿತವಾದ ಕನ್ನಡ ಗ್ರಂಥಗಳು:

(೧) ಸಿಂಗಿರಾಜಪುರಾಣ (೨) ತೊರವೆರಾಮಾಯಣ (೩) ಶಿವತತ್ವಚಿಂತಾಮಣಿ (೪) ಕುಮಾರರಾಮ ಸಾಂಗತ್ಯ (೫) ಕುಮಾರವ್ಯಾಸ ಭಾರತ (೬) ಜಾತಕ ತಿಲಕ (೭) ಕನ್ನಡ ಹಸ್ತಪ್ರತಿಗಳ ವಿವರಣಾತ್ಮಕ ಗ್ರಂಥಸೂಚಿ ಇವೇ ಮುಂತಾದುವು ಮುಖ್ಯವಾದುವು. ಇವುಗಳಲ್ಲಿ ಕೆಲವು ಮೊದಲ ಬಾರಿಗೆ ಸಂಶೋಧಿತವಾಗಿ ಪ್ರಕಟವಾಗಿವೆ.

೨. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ ಶಾಖೆಯು ಸ್ವಾತಂತ್ರ್ಯಾನಂತರ ಹಲವಾರು ಉತ್ಕೃಷ್ಟ ಗ್ರಂಥಗಳನ್ನು ಹೆಸರಾಂತ ಲೇಖಕರಿಂದಲೂ ಸಂಶೋಧಕರಿಂದಲೂ ಬರೆಸಿ ಪ್ರಕಟಿಸಿದೆ. ಅಲ್ಲದೆ ಪ್ರಚಾರೋಪನ್ಯಾಸ ಮಾಲೆಯಿಂದ ಹಲವಾರು ಕಿರುಹೊತ್ತಗೆಗಳನ್ನೂ ವಿವಿಧ ವಿಷಯಗಳ ಮೇಲೆ ಬರೆಸಿದೆ.

೩. ಧಾರವಾಡದ ಪ್ರಸಾರಾಂಗ ಶಾಖೆಯು ಸಾಹಿತ್ಯ, ವಿಜ್ಞಾನ, ರಾಜಕೀಯ, ಸಾಮಾಜಿಕ, ಆರ್ಥಿಕ ವಿಷಯಗಳ ಮೇಲೆ ಅನೇಕ ಕಿರುಹೊತ್ತಗೆಗಳನ್ನು ಬರೆಸಿ ಪ್ರಕಟಿಸಿದೆ. ಅದೇ ಧಾರವಾಡದ ಪ್ರಾಚ್ಯವಿದ್ಯಾಸಂಸ್ಥೆಯಿಂದ ಮೊದಲ ಬಾರಿಗೆ ಕೆಲವು ಗ್ರಂಥಗಳು ಸಂಶೋಧಿತವಾಗಿ ಪ್ರಕಟವಾಗಿವೆ. ಅವುಗಳಲ್ಲಿ ಬ್ರಹ್ಮಶಿವನ "ಸಮಯ ಪರೀಕ್ಷೆ" ಹೆಸರಿಸುವಂತಹುದು. ಇದೇ ಅಲ್ಲದೆ ಕರ್ನಾಟಕ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಕೆಲವು ಗ್ರಂಥಗಳು ಪುನರ್ ಸಂಸ್ಕರಣಗೊಂಡು ಹೊರಬಿದ್ದಿವೆ. ಅವುಗಳಲ್ಲಿ "ಸೋಮನಾಥ ಚಾರಿತ್ರ", "ರಾಜಶೇಖರ ವಿಲಾಸ" ಬಹು ಮುಖ್ಯವಾದುವು.

ಮೈಸೂರು ಸರ್ಕಾರದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಶಾಖೆಯು ಕೆಲವಾರು ಗ್ರಂಥಗಳ ಜನಪ್ರಿಯ ಆವೃತ್ತಿಗಳನ್ನು ಹೊರತಂದಿವೆ. ಅವುಗಳಲ್ಲಿ ಜೈಮಿನಿ ಭಾರತ, ಹರಿಶ್ಚಂದ್ರಕಾವ್ಯ, ಸರ್ವಜ್ಞವಚನಗಳು ಮತ್ತು ಕುಮಾರವ್ಯಾಸ ಭಾರತ ಮೊದಲಾದುವು ಗಮನಾರ್ಹವಾದುವು. ಇವೇ ಅಲ್ಲದೆ ರಾಮಾಯಣ, ಉಪನಿಷತ್ತು, ವೇದಾಂತ ಮುಂತಾದ ವಿಷಯಗಳ ಮೇಲೂ ಗ್ರಂಥಗಳನ್ನು ಬರೆಸಿ ಪ್ರಕಟಿಸಿದೆ.

ಸರ್ಕಾರದಿಂದ ಪೋಷಿತವಾದ ಈ ಮೇಲಿನ ಸಂಸ್ಥೆಗಳೇ ಅಲ್ಲದೆ ಸ್ವತಂತ್ರ ಸಂಸ್ಥೆಗಳೂ, ವ್ಯಕ್ತಿಗಳೂ ಅನೇಕ ಗ್ರಂಥಗಳನ್ನು ಹೊರತಂದಿದ್ದಾರೆ. ಅವುಗಳಲ್ಲಿ ಧಾರವಾಡದ ಮುರುಘಾಮಠದ ವತಿಯಿಂದ ಬಹುಸಂಖ್ಯಾತ ಗ್ರಂಥಗಳು ಹೊರಬಿದ್ದಿವೆ. ಅವುಗಳಲ್ಲಿ ರಾಘವಾಂಕ ಚಾರಿತ್ರ, ಗುರುರಾಜ ಚಾರಿತ್ರ ಇವುಗಳನ್ನು ಮೊದಲಬಾರಿಗೆ ಹೊರತಂದ ಕೀರ್ತಿ ಶ್ರೀಮಠಕ್ಕೆ ಸಲ್ಲಬೇಕಾಗಿದೆ. ಅಲ್ಲದೆ ಪದ್ಮರಾಜ ಪುರಾಣ, ಬಸವಪುರಾಣಗಳ ಪುನರ್ ಸಂಸ್ಕರಣಗಳನ್ನೂ ಮಾಡಿದೆ. ಇವೇ ಅಲ್ಲದೆ ಮತ್ತೂ ಕೆಲವು ಗ್ರಂಥಗಳನ್ನೂ ಪ್ರಕಟಿಸಿದೆ.

ಕನ್ನಡ ಸಾಹಿತ್ಯ ಪರಿಷತ್ತು ಅನೇಕ ಪ್ರಾಚೀನ ಗ್ರಂಥಗಳನ್ನೂ ಅರ್ವಾಚೀನ ಕೃತಿಗಳನ್ನೂ ಹೊರತಂದಿದೆ. ಚೇರಮಕಾವ್ಯ, ಉದ್ಭಟದೇವಚರಿತೆ, ಈ ಅಪ್ರಕಟಿತ ಕಾವ್ಯಗಳನ್ನು ಪ್ರಕಟಿಸಿದ ಕೀರ್ತಿ ಈ ಸಂಸ್ಥೆಗೇ ಸಲ್ಲಬೇಕಾಗಿದೆ. ಅಲ್ಲದೆ ಕರ್ನಾಟ ಕವಿಚರಿತೆ, ಸೋಮೇಶ್ವರ ಶತಕ, ತ್ರಿಪುರದಹನ ಸಾಂಗತ್ಯ, ಉದ್ದಾಲೀಕನ ಕಥೆ ಮುಂತಾದ ಗ್ರಂಥಗಳ ಪುನರ್ ಮುದ್ರಣಗಳನ್ನು ಮಾಡಿದೆ. ಇದರ ಜೊತೆಗೆ ಹರಿದಾಸ ಸಾಹಿತ್ಯ, ಗಮಕ ಕಾವ್ಯಮಂಜರಿಯೇ ಮೊದಲಾದ ಶಾಸ್ತ್ರೀಯ ಗ್ರಂಥಗಳನ್ನೂ ಪ್ರಕಟಿಸಿದೆ.

ಮೈಸೂರಿನ ಜೈನಪ್ರಚಾರ ಸಂಘದಿಂದ ಅಜಿತಪುರಾಣ, ಯಶೋಧರ ಚರಿತೆ ಮೊದಲಾದ ಅನೇಕ ಕೃತಿಗಳು ಹೊರಬಂದಿವೆ. ಇಲ್ಲಿಯ ಜನಪದ ಸಾಹಿತ್ಯ ಅಕಾಡೆಮಿಯವರು ಜನಪದ ಸಾಹಿತ್ಯವನ್ನು ವಿಶೇಷವಾಗಿ ಹೊರತಂದಿದ್ದಾರೆ. ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯವರು ಜನಪ್ರಿಯ ವಾಲ್ಮೀಕಿ ರಾಮಾಯಣ, ಜೈಮಿನಿ ಭಾರತ, ಹರಿಶ್ಚಂದ್ರ ಸಾಂಗತ್ಯ, ಬಸವೇಶ್ವರ ವಚನ ಸಂಗ್ರಹ, ಸರ್ವಜ್ಞವಚನ ಸಂಗ್ರಹವೇ ಮೊದಲಾದ ಅಸಂಖ್ಯಾತ ಕೃತಿಗಳನ್ನು ಪ್ರಕಟಿಸಿದ್ದಾರೆ. ಇವರೇ ಅಲ್ಲದೆ ಅನೇಕ ಸ್ವತಂತ್ರ ಪುಸ್ತಕ ಪ್ರಕಟನಕಾರರು ಪುರಾತನ, ನೂತನ ಗ್ರಂಥಗಳನ್ನೂ ಅಚ್ಚುಪಡಿಸಿದ್ದಾರೆ. ಅವುಗಳಲ್ಲಿ ಶಾರದಾಮಂದಿರ, ಉಷಾಪ್ರಕಟನಾಲಯ, ಕಾವ್ಯಾಲಯ, ಮನೋಹರ ಗ್ರಂಥಭಂಡಾರ, ಲಲಿತ ಸಾಹಿತ್ಯಮಾಲೆ, ಮಿಂಚಿನಬಳ್ಳಿ, ಪ್ರಾಚ್ಯಕಾವ್ಯ ಪ್ರಕಾಶ ಮಾಲೆ –ಇವರೇ ಮುಂತಾದವರು ನೂರಾರು ಗ್ರಂಥಗಳನ್ನು ಪ್ರಕಟಿಸಿದ್ದಾರೆ.

ಮದ್ರಾಸಿನ ಓರಿಯೆಂಟಲ್ ಲೈಬ್ರರಿಯವರೂ ಅನೇಕ ಅಪ್ರಕಟಿತ ಕೃತಿಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ವೆಂಕಮಾತ್ಯನ ರಾಮಾಯಣ, ವಿಷ್ಣುಪುರಾಣ, ಮಂಗರಾಜ ನಿಘಂಟು, ತ್ರಿಭುವನ ತಿಲಕ, ವೈದ್ಯಸಾರ ಮತ್ತು ಪಾರ್ಶ್ವನಾಥ ಪುರಾಣ ಹೆಸರಿಸತಕ್ಕವು.

ಹಲವಾರು ವಿದ್ವಾಂಸರು ಸ್ವತಂತ್ರವಾಗಿಯೇ ತಮ್ಮ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಈ ಮೇಲಿನ ಪಟ್ಟಿಯಲ್ಲಿ ಎಲ್ಲ ಸಂಘ ಸಂಸ್ಥೆಗಳೂ, ಪ್ರಕಾಶಕರೂ, ಸ್ವತಂತ್ರ ವ್ಯಕ್ತಿಗಳೂ ಸೇರಿಲ್ಲ. ಕೆಲವನ್ನು ಮಾತ್ರ ಇಲ್ಲಿ ಉದಾಹರಿಸಲಾಗಿದೆ. ಸ್ವಾತಂತ್ರ್ಯೋತ್ತರದಲ್ಲಿ ಕನ್ನಡ ಸಾಹಿತ್ಯವು ಅನೇಕ ಪ್ರಾಕಾರಗಳಲ್ಲಿ ಮುನ್ನಡೆದಿದೆ. ಕಾದಂಬರಿ, ಸಣ್ಣಕಥೆ, ಕವಿತೆ ಮುಂತಾದ ಕ್ಷೇತ್ರಗಳಲ್ಲಿ ಒಂದು ಹೊಸ ಮೈಲಿಗಲ್ಲೇ ಸ್ಥಾಪಿತವಾಗಿದೆ. ಸ್ವಾತಂತ್ರ್ಯ ಬಂದ ಮೇಲೆ ಕನ್ನಡ ಜನ ನವಚೇತನವನ್ನೂ ಸ್ಫೂರ್ತಿಯನ್ನೂ ಪಡೆದು ಕನ್ನಡ ಸಾಹಿತ್ಯದ ಸರ್ವಾಂಗೀಣ ಪ್ರಗತಿಗೆ ಕಾರಣರಾಗಿದ್ದಾರೆ. ಇದು ಒಂದು ಶುಭಸೂಚನೆ ಎಂಬುದರಲ್ಲಿ ಸಂದೇಹವಿಲ್ಲ.

■

# ವಚನ ವ್ಯಾಖ್ಯಾನ

ಬಸವ ಸಮಿತಿಯ ಮನೆಯಿಂದ ಮನೆಗೆ : 'ಅರಿವಿನ ಮನೆ' ವಚನಶ್ರಾವಣದ ಕಾರ್ಯಕ್ರಮದಲ್ಲಿ ನನಗೆ ನೀಡಲಾದ ಮಡಿವಾಳ ಮಾಚಯ್ಯನವರ:

ನಾವು ಶರಣರೆಂದು ಒಪ್ಪವಿಟ್ಟು ನುಡಿವ ಅಣ್ಣಗಳಿರಾ
ನೀವು ಶರಣರಾದ ಭೇದವ ಹೇಳಿರಿ ಅರಿಯದಿರ್ದಡೆ ಕೇಳಿರಿ
ತನುವಿನ ಕಾಂಕ್ಷೆಯ ಸುಟ್ಟುರುಹಿ ಮನದ ಲಜ್ಜೆಯ ಮರೆದು
ಭಾವದ ಕ್ರಿಯೆಯ ಹೊಟ್ಟು ಮಾಡಿ ತೂರಿ
ಸದ್ಭಕ್ತಿಯ ನಿಜನೈಷ್ಠೆಯ ತಿಳಿದು
ಸತಿಸುತರಿಗೆ ಸದಾಚಾರ ಸನ್ಮಾರ್ಗವ ತೋರಿ
ನಿರ್ವಂಚಕದಿಂದ ಅರಿದಾಚರಿಸಬಲ್ಲಾತನೇ
ಅಚ್ಚಶರಣ ನೋಡಾ ಕಲಿದೇವರದೇವಾ.

ಈ ವಚನವನ್ನು ವ್ಯಾಖ್ಯಾನ ಮಾಡುವುದಕ್ಕೆ ಮೊದಲು ಕೆಲವು ಸಂಗತಿಗಳನ್ನು ನಿರೂಪಿಸುವುದು ಅಗತ್ಯವಾಗಿದೆ, ಅನಿವಾರ್ಯವಾಗಿದೆ.

ವಚನಪಿತಾಮಹ ಡಾ. ಫ.ಗು. ಹಳಕಟ್ಟಿ ಅವರು ಶಿವಾನುಭವ ಗ್ರಂಥಮಾಲೆಯ ಐವತ್ತನೆಯ ಪುಷ್ಪವಾಗಿ ಮಡಿವಾಳ ಮಾಚಿದೇವನ ವಚನಗಳು ಎಂಬ ಶೀರ್ಷಿಕೆಯಲ್ಲಿ ಒಂದುನೂರು ವಚನಗಳನ್ನು ವಿವರಣೆಯೊಂದಿಗೆ ೧೯೩೯ರಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ. ಇದಾದ ಮೇಲೆ ನನ್ನ ಮಿತ್ರರಾದ ದಾವಣಗೆರೆಯ ಪ್ರೊ. ಎಸ್. ಉಮಾಪತಿ ಅವರು ಮಡಿವಾಳಯ್ಯನ ವಚನಗಳು ಎಂಬ ಹೆಸರಿನಲ್ಲಿ ३४४ ವಚನಗಳನ್ನು ಸಂಪಾದಿಸಿ ೧೯೭३ರಲ್ಲಿ ಪ್ರಕಟಿಸಿದ್ದಾರೆ. ತರುವಾಯ ಧಾರವಾಡದ ಡಾ. ಚೆನ್ನಕ್ಕ ಎಲಿಗಾರ ಅವರು ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ವೀರಶೈವ ಅಧ್ಯಯನಸಂಸ್ಥೆಯಿಂದ ಮಡಿವಾಳ ಮಾಚಿದೇವರ ವಚನಗಳು ಎಂಬ ಅಂಕಿತದಿಂದ ೪೭೭ ವಚನಗಳನ್ನು ಸಂಪಾದಿಸಿ ೧೯೮೭ರಲ್ಲಿ ಹೊರತಂದಿದ್ದಾರೆ. ಕರ್ನಾಟಕ ಸರಕಾರ ಪ್ರಕಟಿಸಿರುವ ಸಮಗ್ರವಚನ ಸಂಪುಟಗಳಲ್ಲಿ ಮಡಿವಾಳ ಮಾಚಯ್ಯನ ३४३ ವಚನಗಳು ಸೇರ್ಪಡೆಯಾಗಿವೆ.

ಈವರೆಗೆ ಉಪಲಬ್ಧವಾಗಿರುವ ಮಡಿವಾಳಯ್ಯಗಳ ವಚನ ಸಂಖ್ಯೆ ೧೯೩೯ರಲ್ಲಿ ೧೦೦, ೧೯೭३ರಲ್ಲಿ ३४४, ೧೯೮೭ರಲ್ಲಿ ೪೭೭. ವಚನಕಾರರ ವಚನ ಪ್ರಮಾಣವನ್ನು ನೀಡುವ ಸಿದ್ಧರಾಮರ ವಚನವಿದು:

ಅಲ್ಲಯ್ಯಗಳ ವಚನ ಎರಡೆಂಬತ್ತು ಕೋಟಿ
ಅಪ್ಪಯ್ಯಗಳ ವಚನ ನಾಲ್ಕುಲಕ್ಷದ ಮೂವತ್ತಾರುಸಾಸಿರ
ಎಮ್ಮಯ್ಯಗಳ ವಚನ ವಚನಕ್ಕೊಂದು
ನೀಲಮ್ಮನ ವಚನ ಲಕ್ಷದ ಹನ್ನೊಂದುಸಾಸಿರ
ಗಂಗಾಂಬಿಕೆಯ ವಚನ ಲಕ್ಷದ ಎಂಟುಸಾಸಿರ
ಎಮ್ಮಕ್ಕ ನಾಗಾಯಿಯ ವಚನ ಮೂರುಲಕ್ಷದ ತೊಂಬತ್ತಾರುಸಾಸಿರ
ಮಡಿವಾಳಣ್ಣನ ವಚನ ಮೂರುಕೋಟಿಮುನ್ನೂರು

ಹಡಪದಯ್ಯಗಳ ವಚನ ಹನ್ನೊಂದುಸಾಸಿರ
ಮರುಳಸಿದ್ಧನ ವಚನ ಅರುವತ್ತೆಂಟು ಸಾಸಿರ
ಇಂತಪ್ಪ ವಚನ ರಚನೆಯ ಬಿಟ್ಟು ಹುಡಿಮಣ್ಣು ಹೊಯ್ಯದೆ ಮಾಬನೆ
ಕುತ್ಸಿತ ಕಾವ್ಯಾಲಂಕಾರ ನೋಡುವರ ನೋಡಿ
ಮಹಾದೇವ ಕಪಿಲಸಿದ್ಧಮಲ್ಲಿಕಾರ್ಜುನ. ೧೦೭

(ಶ್ರೀ ಸಿದ್ಧರಾಮೇಶ್ವರ ವಚನಗಳು: ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೬೮, ಸಂಪಾದಕರು: ಡಾ. ಆರ್.ಸಿ. ಹಿರೇಮಠ)

ವಚನಕಾರರಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆಯ ವಚನಗಳನ್ನು ಬರೆದಿರುವವರಲ್ಲಿ 'ಅಲ್ಲಯ್ಯಗಳ ವಚನ ಎರಡೆಂಬತ್ತು ಕೋಟಿ'. ಮೊದಲನೆಯದಾದರೆ 'ಮಡಿವಾಳಣ್ಣನ ವಚನ ಮೂರುಕೋಟಿ ಮುನ್ನೂರು' ಎರಡನೆಯವರಾಗುತ್ತಾರೆ. ಈ ಸಂಬಂಧವಾಗಿ ಮಡಿವಾಳಯ್ಯನ ವಚನಗಳ ಪ್ರಥಮ ಸಂಪಾದಕರಾದ ಡಾ. ಫ.ಗು. ಹಳಕಟ್ಟಿ ಅವರ ಪ್ರಸ್ತಾವನೆಯ ನುಡಿಗಳು: "ಮಡಿವಾಳ ಮಾಚಿದೇವನ ವಚನಗಳುಳ್ಳ ಗ್ರಂಥವು ನಮಗೆ ಇನ್ನೂ ಉಪಲಬ್ಧವಾಗಿರುವುದಿಲ್ಲ. ಆದರೆ ಅವು ಅನೇಕ ವಚನಸಂಗ್ರಹ ಗ್ರಂಥಗಳಲ್ಲಿ ಉಪಲಬ್ಧವಿರುತ್ತವೆ. ಅವುಗಳನ್ನು ನಾವು ಆಯ್ದು ಒತ್ತಟ್ಟಿಗೆ ಸೇರಿಸಿ ವಿಷಯಾನುಸಾರವಾಗಿ ಹೊಂದಿಸಿ ಈ ಗ್ರಂಥವನ್ನು ರಚಿಸಿರುತ್ತೇವೆ. ಪುರಾತನ ವಚನಕಾರರ ವಚನಗಳು ಬಹುಶಃ ಇಡಿಯಾಗಿ ಒತ್ತಟ್ಟಿಗೆ ದೊರಕುವುದಿಲ್ಲ. ಆದುದರಿಂದ ಅವುಗಳನ್ನು ಮೇಲೆಹೇಳಿದಂತೆ ಸಂಗ್ರಹಿಸಿ ಗ್ರಂಥಗಳನ್ನು ರಚಿಸಬೇಕಾಗುತ್ತದೆ. ಇವೆಲ್ಲವುಗಳ ಅಂತರಾರ್ಥವಿಷ್ಟೆ. ಮಡಿವಾಳ ಮಾಚಿದೇವರ ವಚನಗಳ ಸಂಖ್ಯಾಪ್ರಮಾಣವನ್ನು ಸಂಶೋಧಿಸಿ ಕಂಡುಹಿಡಿಯಬೇಕಾಗಿದೆ."

ಮಡಿವಾಳ ಮಾಚಯ್ಯನ ಜೀವನಚರಿತ್ರೆ ಸರ್ವವಿದಿತವಾದುದು. ಹನ್ನೆರಡನೆಯ ಶತಮಾನದ ಅತ್ಯಂತ ಪ್ರಭಾವಶಾಲಿ ಮತ್ತು ಕ್ರಾಂತಿಕಾರಿ ವಚನಕಾರರಲ್ಲಿ ಈತನ ಹೆಸರು ಚಿರಂತನವಾಗಿ ನಿಲ್ಲುವಂತಹುದು. ಈತನ ತರುವಾಯದ ಅನೇಕ ಕೃತಿಗಳಲ್ಲಿ ಈತನ ಇತಿವೃತ್ತಗಳು, ಸಾಧನೆ ಸಿದ್ಧಿಗಳು ಬಿತ್ತರಗೊಂಡಿವೆ. ಅಷ್ಟೇಅಲ್ಲ ಈತನನ್ನು ಕುರಿತು ಕೃತಿಗಳೂ ರಚಿತವಾಗಿವೆ. ಶೂನ್ಯಸಂಪಾದನೆಗಳಲ್ಲಿ 'ಮಡಿವಾಳಯ್ಯನಗಳ ಸಂಪಾದನೆ' ಎಂಬ ವಿಭಾಗವನ್ನೇ ಕೊಡಲಾಗಿದೆ. ಈತನ ಅನೇಕ ವಚನಗಳು ಅವುಗಳಲ್ಲಿ ಸೇರ್ಪಡೆಯಾಗಿವೆ. ಜೊತೆಗೆ ಸಕಲಪುರಾತನರ ವಚನಗಳು, ಪರಮಮೂಲಜ್ಞಾನ ಷಟ್ಸ್ಥಲದ ವಚನಗಳು, ಶೀಲಸಂಪಾದನೆ, ಷಟ್ಪ್ರಕಾರ ಸಂಗ್ರಹ, ವಿಶೇಷಾನುಭವ ಷಟ್ಸ್ಥಲದ ವಚನಗಳು, ಚಿದ್ವೈಶ್ವರ್ಯ ಚಿದಾಭರಣ, ಶರಣಚಾರಿತ್ರದ ವಚನಗಳು, ಪ್ರಸಾದಿಸ್ಥಲದ ವಚನಗಳು, ಬ್ರಹ್ಮಾದ್ವೈತ ಸಿದ್ಧಾಂತ, ಷಟ್ಸ್ಥಲಾಭರಣ, ಏಕೋತ್ತರ ಶತಸ್ಥಲ, ಭಕ್ತ್ಯಾನಂದಸುಧಾರ್ಣವ, ಶಿವಯೋಗ ಚಿಂತಾಮಣಿ, ವಿರತಾಚರಣೆಯ ಶರಣಸಂಬಂಧದ ವಚನಗಳು, ಬಸವಸ್ತೋತ್ರದ ವಚನಗಳು, ಲಿಂಗಲೀಲಾವಿಲಾಸ ಚಾರಿತ್ರ, ಪ್ರಭುಲಿಂಗಲೀಲೆ, ಮಿಶ್ರಸ್ತೋತ್ರದ ವಚನಗಳು, ಆಚರಣೆಯ ಸಂಬಂಧದ ವಚನಗಳು, ವೀರಶೈವ ಚಿಂತಾಮಣಿ, ಮುಕ್ತಿಕಂಠಾಭರಣ, ಶ್ರೀಮದ್ವೀರಶೈವ ನಿಜಾಚರಣೆಯ ವಚನಗಳು, ಲಿಂಗಚಿದಾಮೃತಬೋಧೆ, ಸಂಪಾದನೆಯ ಬೋಳಬಸವೇಶ್ವರದೇವರು ಸೇರಿಸಿದ ಷಟ್ಸ್ಥಲ ಬ್ರಹ್ಮಾನಂದ ವಿರಕ್ತ ಚಾರಿತ್ರ್ಯ, ಸಂಪಾದನೆಯ ವಚನಗಳು, ವಚನ ಶಾಸ್ತ್ರಸಾರ ಇವೇ ಮೊದಲಾದ ಸಂಕಲನ ಗ್ರಂಥಗಳಲ್ಲಿ ಮಡಿವಾಳ ಮಾಚಯ್ಯನವರ ವಚನಗಳು ಸಮಾವೇಶಗೊಂಡಿವೆ.

ಮಡಿವಾಳ ಮಾಚಯ್ಯನ ಜೀವನಚರಿತ್ರೆ ಮತ್ತು ಇತಿವೃತ್ತಗಳು ಅನೇಕ ಪ್ರಾಚೀನ ಕೃತಿಗಳಲ್ಲಿ ಕಂಡುಬರುತ್ತವೆ. ಅವು ಇಂತಿವೆ: ಭೀಮಕವಿಯ ಬಸವಪುರಾಣ, ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರ, ಲಕ್ಕಣ್ಣದಂಡೇಶನ ಶಿವತತ್ವಚಿಂತಾಮಣಿ, ಸಂಪಾದನೆಯ ಪರ್ವತೇಶನ ಚತುರಾಚಾರ್ಯ ಪುರಾಣ, ಚನ್ನಪ್ಪ ಕವಿಯ ಶರಣಲೀಲಾಮೃತ, ಉತ್ತರದೇಶದ ಬಸವಲಿಂಗನ ಕಥಾಸಾಗರ, ಕುಮಾರ ಪದ್ಮರಸನ ಸಾನಂದಪುರಾಣ, ಎಳಂದೂರು ಹರೀಶ್ವರನ ಪ್ರಭುದೇವರಪುರಾಣ, ಪಾಲ್ಕುರಿಕೆ ಸೋಮನಾಥನ ಸೋಮೇಶ್ವರಪುರಾಣ, ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣ, ಸಿದ್ಧನಂಜೇಶನ ಗುರುರಾಜಚಾರಿತ್ರ, ಪಂಚಯ್ಯನ ಭಕ್ತಿರಸಸೋನೆ, ಅಜ್ಞಾತಕವಿಗಳ ಮಡಿವಾಳಯ್ಯಗಳ ಚರಿತ್ರೆ, ಮಡಿವಾಳಯ್ಯನ ಸಾಂಗತ್ಯ, ಹಳಕಟ್ಟಿ ಅವರ ಅಮರಗಣಾಧೀಶ್ವರರ ಚರಿತ್ರೆ, ಸಿದ್ಧಯ್ಯಪುರಾಣಿಕರ ಅವರ ಶರಣಚರಿತಾಮೃತ, ಮಾ.ನಂ. ನಂಜಪ್ಪನವರ ಮಾಚಿದೇವ ಚರಿತಾಮೃತ, ಜಚನಿ ಅವರ ರಜಕರತ್ನ ಮಾಚಿತಂದೆ, ಮಡಿವಾಳಯ್ಯಗಳ ತಾರಾವಳಿ.

ಮೇಲಿನ ಎಲ್ಲ ಕಾವ್ಯಪುರಾಣಗಳ ಸಾಕ್ಷ್ಯಾಧಾರಗಳಿಂದ ಹೊರಹೊಮ್ಮುವ ಮಡಿವಾಳ ಮಾಚಯ್ಯಗಳ ಜೀವನ ವೃತ್ತಾಂತಗಳು ಇಷ್ಟೆ:

ಬಿಜ್ಜಳನು ಕಲ್ಯಾಣದಲ್ಲಿ ಒಮ್ಮೆ ಒಡ್ಡೋಲಗದಲ್ಲಿದ್ದಾಗ ಬಸವಣ್ಣನವರು ಅತ್ಯಂತ ಶುಭ್ರವಾದ ವಲ್ಲಿಯನ್ನು ಹೊದ್ದು ಒಡ್ಡೋಲಗಕ್ಕೆ ಬಂದಾಗ ಅಲ್ಲಿದ್ದವರೆಲ್ಲ ಅದನ್ನೇ ನಿಟ್ಟಿಸುತ್ತಿದ್ದರು. ಬಿಜ್ಜಳ ಇಂಥ ಕಾರ್ಯಮಾಡಿದವರನ್ನು ತನಗೆ ತೋರಿಸುವಂತೆಯೂ ತನ್ನ ಅರ್ಧರಾಜ್ಯವನ್ನೇ ಅವರಿಗೆ ಕೊಡುವುದಾಗಿಯೂ ತಿಳಿಸುವನು. ಅದಕ್ಕೆ ಬಸವಣ್ಣ ಮಡಿವಾಳಯ್ಯನ ಕಾಯಕನಿಷ್ಠೆಯನ್ನು ವಿವರಿಸಿ ಈ ಲೌಕಿಕ ಲಾಭಲೋಭಗಳಿಗೆ ಆತನು ಮಣಿಯುವುದಿಲ್ಲ ಎಂದು ಸ್ಪಷ್ಟಪಡಿಸಿದನು. ಆದರೂ ಕೊಂಡೆಯರ ಮಾತಿಗೆ ಕಿವಿಗೊಟ್ಟ ಬಿಜ್ಜಳ ಆತನನ್ನು ಕರೆಸುವಂತೆ ಕೇಳಿಕೊಳ್ಳುವನು. ಬಿಜ್ಜಳ ಮಡಿವಾಳ ಮಾಚಯ್ಯನನ್ನು ಕರೆತರಲು ಅಂಗಹೀನರ ಪಡೆಯನ್ನು ಕಳಿಸುವನು. ಅವರೆಲ್ಲ ಮಡಿವಾಳ ಮಾಚಯ್ಯನನ್ನು ಕಂಡು ತಮ್ಮ ಅಂಗಹೀನತೆಯನ್ನು ಕಳೆದುಕೊಂಡು ರಾಜನಲ್ಲಿಗೆ ಬಂದು ಎಲ್ಲ ಸಂಗತಿಯನ್ನೂ ತಿಳಿಸುವರು. ಬಿಜ್ಜಳ ಕಳಿಸಿದ ಬಟ್ಟೆಯ ಗಂಟನ್ನು ಮಡಿಮಾಡಲು ನಿರಾಕರಿಸಿದ ಮಾಚಯ್ಯ ಅದನ್ನು ತನ್ನ ಕಿಡಿಗಣ್ಣಿನಿಂದ ಸುಟ್ಟುರುಹಿದ. ಕುಪಿತನಾದ ಬಿಜ್ಜಳ ಮಡಿವಾಳಯ್ಯನನ್ನು ಹಿಡಿತರಲು ಸೈನ್ಯವನ್ನೇ ಕಳಿಸಿದ. ಆ ಸೈನ್ಯವನ್ನೆಲ್ಲಾ ಮಡಿವಾಳಯ್ಯ ಹೊಡೆದೋಡಿಸಿದ. ಇದರಿಂದ ಭಯಭೀತನಾದ ಬಿಜ್ಜಳ ಬಸವಣ್ಣನವರನ್ನು ಮೊರೆಹೋಗಲು ಬಸವಣ್ಣ ರಾಜನನ್ನು ಮಾಚಯ್ಯನಲ್ಲಿಗೆ ಕರೆದೊಯ್ದು ತಾನು ಮಾಡಿದ ಅಕಾರ್ಯಕ್ಕಾಗಿ ಕ್ಷಮೆ ಯಾಚಿಸುವಂತೆ ಮಾಡಿದನು. ಶರಣರೊಡನೆ ಹಗೆತನವನ್ನು ಮಾಡಬಾರದೆಂದು ಬಿಜ್ಜಳನಿಗೆ ತಿಳಿವಳಿಕೆ ನೀಡಿ ಸತ್ತ ಸೈನ್ಯವನ್ನೆಲ್ಲಾ ಬದುಕಿಸಿ ಕಳಿಸಿಕೊಟ್ಟನು.

ಮಡಿವಾಳಯ್ಯ ತನ್ನ ಕಾಯಕದಿಂದಲೇ ಜೀವನದ ಸಾರ್ಥಕತೆಯನ್ನು ಕಂಡುಕೊಂಡವನು. ಈತನು ಪರಮಶಿವಭಕ್ತನಷ್ಟೇ ಅಲ್ಲದೆ ಅಜೇಯವೀರನೂ ಆಗಿದ್ದನು. ಕಲ್ಯಾಣದಲ್ಲಿ ನಡೆದ ಕ್ರಾಂತಿಯ ನಂತರ ಅಳುದುಳಿದ ಶಿವಶರಣರನ್ನು ಸುರಕ್ಷಿತವಾಗಿ ಅವರವರ ನೆಲೆಗಳಿಗೆ ಮುಟ್ಟಿಸಿದ ದಿಟ್ಟಕಡುಗಲಿ ಮಡಿವಾಳ ಮಾಚಯ್ಯ. ಬಸವಣ್ಣ, ಪ್ರಭುದೇವರೇ ಮೊದಲಾದವರಿಂದ ಸಂಸ್ತುತ್ಯನಾದ ಮಾಚಯ್ಯ ಆದರ್ಶವ್ಯಕ್ತಿಯಾಗಿ ಮೆರೆದಿದ್ದಾನೆ: ಬಸವಣ್ಣನವರು ಆತನನ್ನು ಸ್ತುತಿಸಿದ ಪರಿ:

ಎನ್ನ ಕಾಯವ ಶುದ್ಧಮಾಡಿದಾತ ಮಡಿವಾಳ
ಎನ್ನ ಮನವ ನಿರ್ಮಲಮಾಡಿದಾತ ಮಡಿವಾಳ
ಎನ್ನಂತರಂಗವ ಬೆಳಗಿದಾತ ಮಡಿವಾಳ
ಎನ್ನ ಬಹಿರಂಗವ ಬಿಡಿಸಿದಾತ ಮಡಿವಾಳ
ಕೂಡಲಸಂಗಮದೇವಾ
ಎನ್ನ ನಿಮಗೆ ಯೋಗ್ಯನ ಮಾಡಿದಾತ ಮಡಿವಾಳ.

ಅಲ್ಲಮಪ್ರಭುದೇವರ ಒಂದು ವಚನ:

ಆದಿಯ ಕಂಡೆ ಅನಾದಿಯ ಕಂಡೆ
ಘನವ ಕಂಡೆ ಮನವ ಕಂಡೆ
ಅನುವ ಕಂಡೆ ಆಯತ ಸ್ವಾಯತ ಸನ್ನಿಹಿತವ ಕಂಡೆ
ಗೊಹೇಶ್ವರಲಿಂಗದಲ್ಲಿ ಬಸವೇಶ್ವರನ ಕೃಪೆಯಿಂದ
ನಿನ್ನ ಕಂಡೆ ಕಾಣಾ ಮಡಿವಾಳ ಮಾಚಯ್ಯ.

ಬಸವಣ್ಣನವರ ಬಗೆಗೆ ಮಾಚಯ್ಯನ ಮನೋಭಾವನೆ ಇದು:

ಬಸವಣ್ಣನ ನಡೆ ಪರುಷ ಬಸವಣ್ಣನ ನುಡಿ ಪರುಷ
ಬಸವಣ್ಣನ ದೃಷ್ಟಿ ಪರುಷ ಬಸವಣ್ಣನ ಹಸ್ತ ಪರುಷ
ಬಸವಣ್ಣನ ಭಾವ ಪರುಷ ಬಸವಣ್ಣನ ಮನ ಪರುಷ
ಬಸವಣ್ಣನ ನೆನೆವುದೇ ಲಿಂಗಾರ್ಚನೆ ಬಸವಣ್ಣನ ನೆನೆವುದೇ
ಪರತತ್ವ, ಬಸವಣ್ಣನ ನೆನೆವುದೇ ಕಲ್ಯಾಣವೆನಗೆ
ಕಲಿದೇವಯ್ಯ ನಿಮ್ಮ ಶರಣ ಬಸವಣ್ಣನಿಂತಹ
ಮಹಿಮ ನೋಡಯ್ಯ.

ಇಂದಿನ ವಿವೇಚನೆಗೆ ಒಳಪಡಿಸಿರುವ ವಚನ:

ನಾವು ಶರಣರೆಂದು ಒಪ್ಪವಿಟ್ಟು ನುಡಿವ ಅಣ್ಣಗಳಿರಾ
ನೀವು ಶರಣರಾದ ಭೇದವ ಹೇಳಾ ಅರಿಯದಿರ್ದಡೆ ಕೇಳಿರಿ
ತನುವಿನ ಕಾಂಕ್ಷೆಯ ಸುಟ್ಟುರುಹಿ ಮನದ ಲಜ್ಜೆಯ ಮರೆದು
ಭಾವದ ಕ್ರಿಯೆಯ ಹೊಟ್ಟುಮಾಡಿ ತೂರಿ
ಸದ್ಭಕ್ತಿಯ ನಿಜನಿಷ್ಠೆಯ ತಿಳಿದು ಸತಿಸುತರಿಗೆ
ಸದಾಚಾರ ಸನ್ಮಾರ್ಗವ ತೋರಿ ನಿರ್ವಂಚಕದಿಂದ
ಅರಿದಾಚರಿಸಬಲ್ಲಾತನೇ ಅಚ್ಚಶರಣ ನೋಡಾ ಕಲಿದೇವರದೇವಾ.

ಈ ವಚನದ ವ್ಯಾಖ್ಯಾನಕ್ಕೆ ತೊಡಗುವ ಮೊದಲು ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿ ಅವರು ನೀಡಿರುವ ವಿವರಣೆಯನ್ನು ನೋಡೋಣ: ಅವರು ನೈತಿಕ ವರ್ತನೆ ಎಂಬ ವಿಭಾಗವನ್ನು ಮಾಡಿಕೊಂಡು ಅದರಲ್ಲಿ ಈ ವಚನವನ್ನು ಸೇರಿಸಿ ಈ ರೀತಿ ವಿವರಣೆಯನ್ನು ನೀಡಿದ್ದಾರೆ: "ಈ ವಚನದಲ್ಲಿ ಮಾಚಿದೇವನು ಭಕ್ತಿಯಿಂದ ನಡೆಯಬೇಕೆಂದು ಹೇಳುತ್ತಾನೆ. ಇದಾದರೂ ನೈತಿಕಾಚರಣೆಯಲ್ಲಿ ಬರುತ್ತದೆ. ಆದರೆ ಭಕ್ತಿಯಿಂದ ನಡೆಯುವುದೆಂದರೆ ಮೂಢಶ್ರದ್ಧೆಯುಳ್ಳವರಾಗಿರುವುದಲ್ಲ. ನಿಷ್ಠೆ ಎಂದರೆ ದೃಢವಾದ ಭಕ್ತಿಯ ನಿಜತ್ವವನ್ನು ಅರಿದು ಆಚರಿಸಬೇಕೆಂದು ಅವನು ಇಲ್ಲಿ ಹೇಳುತ್ತಾನೆ. ಆದುದರಿಂದ ಭಕ್ತಿಯುಳ್ಳವನು ಇಂತಹ ಅರಿವುಳ್ಳವನಾಗಿರಬೇಕು. ಪ್ರಪಂಚದಲ್ಲಿ ಸತಿಸುತಾದಿಗಳು ಮೋಹವನ್ನುಂಟುಮಾಡುವರೆಂದು ಬಗೆದು ಅನೇಕರು ಅವರನ್ನು ತ್ಯಜಿಸಿ ಬಿಟ್ಟವರುಂಟು ಅಥವಾ ಅವರನ್ನು ದುರ್ಲಕ್ಷಿಸುತ್ತಾರೆ. ಈ ತೆರದ ವೃತ್ತಿಯುಳ್ಳವರು ಹಿಂದೂಸಮಾಜದಲ್ಲಿ ಬಹುಜನರು ದೊರೆಯುತ್ತಾರೆ. ಆದರೆ ವಚನಕಾರರ ಮಾರ್ಗವು ಇದಲ್ಲ. ಮಡಿವಾಳ ಮಾಚಿದೇವನು ಈ ವಚನದಲ್ಲಿ ಭಕ್ತನು ಸತಿಸುತರಿಗೆ ಸದಾಚಾರವನ್ನು ತೋರಿಸಬೇಕು ಎಂದು ಅವನ ಕರ್ತವ್ಯವನ್ನು ಹೇಳಿದ್ದಾನೆ. ಇದು ಲಕ್ಷಿಸತಕ್ಕ ವಿಷಯವಾಗಿದೆ."

ಈ ವಚನದಲ್ಲಿ ಮಡಿವಾಳ ಮಾಚಯ್ಯನವರು ಅಚ್ಚಶರಣ ಎಂತಿರಬೇಕು. ಆತನ ಆಚಾರವಿಚಾರಗಳು ಹೇಗಿರಬೇಕು ಎಂಬುದನ್ನು ಸ್ಪಷ್ಟಪಡಿಸುತ್ತಾನೆ. ವೀರಶೈವಧರ್ಮದಲ್ಲಿ ಶರಣ ಶಬ್ದಕ್ಕೆ ೧. ಷಟ್ಸ್ಥಲಗಳಲ್ಲಿ ಒಂದು, ೨. ಷಟ್ಸ್ಥಲಗಳಲ್ಲಿ ಐದನೆಯದಾದ ಶರಣಸ್ಥಲವನ್ನು ಸಾಧಿಸಿದವನು, ೩. ಶಿವನನ್ನು ಭಕ್ತಿಯಿಂದ ಆರಾಧಿಸುವವನು. ಶಿವಭಕ್ತ ೪. ಮಹಾಲಿಂಗ ಎಂಬ ಅರ್ಥಗಳಿವೆ. ನಾವು ಶರಣರು ಎಂದು ಅಚ್ಚುಕಟ್ಟಾಗಿ ಹೇಳುವ ಮಹನೀಯರೆ ನೀವು ಹೇಗೆ ಶರಣರು ಶಿವಭಕ್ತರು ಎನಿಸಿಕೊಂಡಿರಿ ಎಂಬುದನ್ನು ತಿಳಿಸಿ. ಗೊತ್ತಿಲ್ಲದಿದ್ದರೆ ಕೇಳಿ. ದೇಹದ ಆಸೆ-ಆಕಾಂಕ್ಷೆಗಳನ್ನು ಸುಟ್ಟು ಬೂದಿಮಾಡಿ ಮನಸ್ಸಿನ ನಾಚಿಕೆಯ ಮರೆತು, ಪೂಜೆ ವ್ರತ ಮುಂತಾದ ಆಚರಣೆಗಳಿಗೆ ಸಂಬಂಧಿಸಿದ ಕಟ್ಟಳೆ ವಿಧಾನಗಳಿಗೆ ತಿಲಾಂಜಲಿಯನ್ನು ನೀಡಿ, ಇವನ್ನು ಗಾಳಿಗೆ ತೂರಿಬಿಟ್ಟು, ಸದ್ಭಕ್ತಿಯಲ್ಲಿ ಅಚಲವಾದ ನಂಬಿಕೆಯನ್ನು ತಳೆದು, ಹೆಂಡತಿ ಮಕ್ಕಳಿಗೆ ಒಳ್ಳೆಯ ಆಚರಣೆಯನ್ನು ಮಾರ್ಗವನ್ನು ತೋರಿಸಿಕೊಟ್ಟು ಪರಿಶುದ್ಧವಾದ ಮನಸ್ಸಿನಿಂದ ನಡೆಯುವವನೇ ನಿಜವಾದ ಶರಣ, ಶಿವಭಕ್ತ ಎನ್ನಿಸಿಕೊಳ್ಳುತ್ತಾನೆ.

ಈ ವಚನದ ಅಂತರಾರ್ಥವಿಷ್ಟೆ: ಶರಣರು ಪರಮ ಶಿವಭಕ್ತರಾಗಿದ್ದುಕೊಂಡು ಗುರುಲಿಂಗ ಜಂಗಮದಲ್ಲಿ ನಿಷ್ಠೆಯುಳ್ಳವರಾಗಿರಬೇಕು. ಕಾಯಕ ದಾಸೋಹಗಳಲ್ಲಿ ಶ್ರದ್ಧೆಯುಳ್ಳವರಾಗಿರಬೇಕು. ಅರ್ಥರಹಿತ ಸಂಪ್ರದಾಯಗಳ ವಿರುದ್ಧ ಸಾಮಾಜಿಕ ಅಸಮಾನತೆಯ ವಿರುದ್ಧ ಪ್ರತಿಭಟಿಸುವ ಮನೋಭಾವವುಳ್ಳವರಾಗಿರಬೇಕು. ಏಕದೇವೋಪಾಸಕರಾದ ಶರಣರು ಲೌಕಿಕವಾದ ಎಲ್ಲ ಆಸೆ-ಆಕಾಂಕ್ಷೆಗಳನ್ನೂ ತೊರೆದು ಸತಿಸುತಾದಿಗಳಿಗೂ ಭಕ್ತರಿಗೂ ಸದಾಚಾರ ಸನ್ಮಾರ್ಗವನ್ನು ತೋರುವವರಾಗಿರಬೇಕು. 'ಅರಿತರೆ ಶರಣ ಮರೆತರೆ ಮಾನವ' ಎಂಬಂತೆ ಕೇವಲ ಮಾನವನಾಗಿ ಅರ್ಥರಹಿತ ಬಾಳುವೆ ಮಾಡುವುದಕ್ಕಿಂತ ಅಚ್ಚ ಶರಣನೆನಿಸಿಕೊಂಡು ಸಾರ್ಥಕಜೀವನ ನಡೆಸಿ ಮುಕ್ತಿಯನ್ನು ಪಡೆದುಕೊಳ್ಳಬೇಕು ಎಂಬುದೇ ಈ ವಚನದ ಸಾರಸರ್ವಸ್ವ ಎಂದು ಭಾವಿಸಬಹುದಾಗಿದೆ.

■

# ವಚನ ಚಿಂತನ–೨೦

ಅಗ್ನಿ ರಜ್ಜುವಿನಿಂದ ಕಟ್ಟುವಡೆವುದೆ
ಸೂರ್ಯನ ಕತ್ತಲೆ ಬಾಧಿಸಲಾಪವೆ ಅಯ್ಯಾ
ಆಕಾಶವು ರಜಧೂಮಗಳಿಂದ ಮಲಿನವಹುದೆ ಅಯ್ಯಾ
ನಿಮ್ಮನರಿದ ಶಿವಯೋಗಿಗೆ ಸಂಸಾರ ಬಂಧಿಸಬಲ್ಲುದೆ ಹೇಳಾ
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ?  –ಸ್ವತಂತ್ರ ಸಿದ್ಧಲಿಂಗೇಶ್ವರ

ಹನ್ನೆರಡನೆಯ ಶತಮಾನದಲ್ಲಿ ಬಸವೇಶ್ವರರ ನೇತೃತ್ವದಲ್ಲಿ ಅಸಂಖ್ಯಾತ ವಚನಕಾರರು ಅಪಾರ ವಚನರಾಶಿಯನ್ನೇ ಸೃಷ್ಟಿಸಿರುವುದು ಸರ್ವವಿದಿತವಾದುದು. ಕಲ್ಯಾಣಕ್ರಾಂತಿಯಾದ ಮೇಲೆ ಸುಮಾರು ಮೂರುಶತಮಾನಗಳ ಕಾಲ ವಚನಕಾರರು ಕಂಡುಬಾರದಿರುವುದು ದುರ್ದೈವದ ಸಂಗತಿ. ಆದರೆ ನಾಡಿನ ಪುಣ್ಯವೋ ಎಂಬಂತೆ ಹದಿನೈದನೆಯ ಶತಮಾನದಲ್ಲಿ ತೋಂಟದ ಸಿದ್ಧಲಿಂಗೇಶ್ವರರ ನೇತೃತ್ವದಲ್ಲಿ ಕೆಲವಾರು ವಚನಕಾರರು ಅವತರಿಸಿದರು. ಅವರಲ್ಲಿ ಸ್ವತಂತ್ರ ಸಿದ್ಧಲಿಂಗೇಶ್ವರರು ಮತ್ತು ಘನಲಿಂಗಿದೇವರು ಪ್ರಮುಖರು. ಪ್ರಸ್ತುತ ಸ್ವತಂತ್ರ ಸಿದ್ಧಲಿಂಗೇಶ್ವರ ವಚನ ಚಿಂತನಕ್ಕೆ ಮೊದಲು ಅವರ ಇತಿವೃತ್ತಗಳನ್ನು ಅರಿತು ಕೊಳ್ಳುವುದು ಅಗತ್ಯವೂ ಅನಿವಾರ್ಯವೂ ಆಗಿದೆ.

ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯಸಮೂಹದಲ್ಲಿ ಸ್ವತಂತ್ರ ಸಿದ್ಧಲಿಂಗೇಶ್ವರರ ಹೆಸರು ಉಲ್ಲೇಖಗೊಂಡಿಲ್ಲ. ಆದರೆ ಗುಮ್ಮಳಾಪುರದ ಸಿದ್ಧಲಿಂಗೇಶ್ವರ, ಸಿದ್ಧಲಿಂಗೇಶ್ವರ, ದೊಡ್ಡಸಿದ್ಧಲಿಂಗೇಶ್ವರ ಎಂಬ ಮೂರು ಹೆಸರುಗಳು ಕಂಡು ಬರುತ್ತವೆ. ಚೆನ್ನಬಸವಪುರಾಣದಲ್ಲಿ ಉಕ್ತವಾಗಿರುವ ದೊಡ್ಡಸಿದ್ಧಲಿಂಗೇಶ್ವರರೇ ಸ್ವತಂತ್ರ ಸಿದ್ಧಲಿಂಗೇಶ್ವರರಾಗಿರಬಹುದೆಂದು ಕರ್ನಾಟಕ ಕವಿಚರಿತಕಾರರೂ ಇತರ ವಿದ್ವಾಂಸರೂ ಅಭಿಪ್ರಾಯಪಟ್ಟಿದ್ದಾರೆ. "ಸ್ವತಂತ್ರ ಸಿದ್ಧಲಿಂಗೇಶ್ವರನ ಕೃತಿಗಳು" ಇದರ ಸಂಪಾದಕರಾದ ಸಾಹಿತ್ಯ ವಿದ್ವಾನ್ ಡಾ. ಎಚ್.ಪಿ. ಮಲ್ಲೇದೇವರು "ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯಪರಂಪರೆಯಲ್ಲಿ ಸಿದ್ಧಲಿಂಗೇಶ್ವರ, ದೊಡ್ಡ ಸಿದ್ಧಲಿಂಗೇಶ್ವರ, (ಗುರು ದೊಡ್ಡ ಸಿದ್ಧೇಶ), ಗುಮ್ಮಳಾಪುರದ ವರ ಸಿದ್ಧಲಿಂಗೇಶ್ವರ (ಗುಮ್ಮಳಾಪುರವ ಸಿದ್ಧಲಿಂಗೇಶ, ಗುಮ್ಮಳಾಪುರದ ಸಿದ್ಧಲಿಂಗದೇವರು) ಈ ರೀತಿಯಾಗಿ 'ಸಿದ್ಧಲಿಂಗೇಶ' ಎಂಬ ಅಭಿಧಾನಹೊಂದಿವ ಮೂವರು ವಿರತರು ಬರುವರು. ಅವರಲ್ಲಿ ಗುಮ್ಮಳಾಪುರದ ಸಿದ್ಧಲಿಂಗೇಶ್ವರರನ್ನು ಬಿಟ್ಟರೆ ಉಳಿದ ಇಬ್ಬರು ವಿರತರು 'ಸಿದ್ಧಲಿಂಗೇಶ್ವರರು' ಮತ್ತು 'ದೊಡ್ಡಸಿದ್ಧಲಿಂಗೇಶ್ವರರು'. ಈ ಇಬ್ಬರಲ್ಲಿ ಸ್ವತಂತ್ರ ಸಿದ್ಧಲಿಂಗೇಶ್ವರರು ಯಾರಿರಬೇಕೆಂಬುವನ್ನು ವಿಮರ್ಶಿಸಿ ನಿರ್ಧರಿಸಬೇಕಾಗುವುದು. ಪ್ರೊ. ಸಿ. ಮಹಾದೇವಪ್ಪ ಅವರು 'ಸಿದ್ಧಲಿಂಗೇಶ್ವರ' ಇವರೇ ಸ್ವತಂತ್ರ ಸಿದ್ಧಲಿಂಗೇಶ್ವರರಿರಬೇಕೆಂದು ಊಹಿಸಿರುವರು. ಆದರೆ ಗುರುದೊಡ್ಡಸಿದ್ಧಲಿಂಗೇಶ್ವರರೇ ಸ್ವತಂತ್ರ ಸಿದ್ಧಲಿಂಗೇಶ್ವರರಿರಬೇಕೆಂದು ಈ ಕೆಳಗಣ ಕಾರಣಗಳಿಂದ ನಿರ್ಧರಿಸಬಹುದು.

ಸ್ವತಂತ್ರ ಸಿದ್ಧಲಿಂಗೇಶ್ವರರ ಸಮಕಾಲೀನರಾಗಿ ಅವರ ಲೋಕೋತ್ತರ ವ್ಯಕ್ತಿತ್ವ ಮತ್ತು ಅನುಭಾವಪೂರ್ಣ ವಚನಗಳಿಗೆ ಮಾರುಹೋಗಿ ವ್ಯಾಖ್ಯಾನ ಬರೆದ ಶ್ರೀ ಚೆನ್ನದೇವರು ತಮ್ಮ 'ಮುಕ್ತ್ಯಂಗನಾಕಂಠಮಾಲೆ'ಯ ಕೊನೆಯಲ್ಲಿ ಹೇಳಿದ ಪದ್ಯದ ಆರಂಭದಲ್ಲಿ "ದಯೆಯಿಂ ಶ್ರೀಗುರು ಸಿದ್ಧಲಿಂಗಯತಿವರ್ಯಂ" ಎಂದು ಅವರ ಬಗೆಗೆ 'ಶ್ರೀಗುರು' ಮತ್ತು

'ಯತಿವರ್ಯ' ಎಂಬುದಾಗಿ ಹೇಳಿರುವುದರಿಂದ ಇದು ವ್ಯಾಖ್ಯಾನಕಾರರ ಪೂಜ್ಯಭಾವನೆಯನ್ನು ವ್ಯಕ್ತಪಡಿಸುವುದಲ್ಲದೆ ಸ್ವತಂತ್ರ ಸಿದ್ಧಲಿಂಗೇಶ್ವರರು ಹಿರಿಯರೂ ಮಹಾನುಭಾವಿಗಳೂ ಆಗಿ ಅಸದೃಶ ವ್ಯಕ್ತಿತ್ವ ಹೊಂದಿ ದೊಡ್ಡವರಾಗಿದ್ದರೆಂದೂ ತಿಳಿದುಬರುವುದು. 'ಜಂಗಮ ರಗಳೆ'ಯಲ್ಲಿ ಬರುವ 'ಇಂತೀ ಜಂಗಮದಿರವಂ ಸಂತಸದಿ ಪೇಳ್ದ ಸಿದ್ಧಲಿಂಗೇಶ್ವರನ' ಎಂಬ ವಾಕ್ಯವು ಇದರ ಕರ್ತೃ ಸಿದ್ಧಲಿಂಗೇಶ್ವರ ಎಂಬುದನ್ನು ಖಚಿತವಾಗಿ ಹೇಳುವುದು. ಆದರೆ ವಿರಕ್ತ ತೋಂಟದಾರ್ಯ ಮತ್ತಿತರ ಕವಿಗಳು ಪ್ರಾಯಶಃ ವಯಸ್ಸಿನಲ್ಲಿ ಅನುಭಾವದಲ್ಲಿ ಹಿರಿಯರಾದ ಅವರನ್ನು ಇತರರಿಂದ ಪ್ರತ್ಯೇಕಿಸಲು 'ದೊಡ್ಡಸಿದ್ಧಲಿಂಗೇಶ', 'ಗುರುದೊಡ್ಡಸಿದ್ಧೇಶ' ಮೊದಲಾಗಿ ಅತ್ಯಂತ ಗೌರವಪೂರ್ವಕವಾಗಿ ಹೇಳಿರುವರು.

ವಿರಕ್ತ ತೋಂಟದಾರ್ಯರ 'ಸಿದ್ಧೇಶ್ವರ ಪುರಾಣ'ದಲ್ಲಿ ಬರುವ:

ಒಡಲೊಳತಿಧವಳಭಸಿತವ ಪೂಸಿ ಮಿಗೆ ಕಾಂತಿ
ವಡೆದ ಪೀತಾಂಬರವ ಪೊದೆದು ರುದ್ರಾಕ್ಷಿಗಳ
ಸಡಗರದೊಳಾಂತು ನಿಸ್ಪೃಹತೆಯಿಂದೆಸೆದು ರಂಜಿಸುವ ಯೋಗೀಶನಾರೆ
ಕೆಡೆಯೊದೆದು ಸಂಚಿತಾದಿಗಳನೆಲ್ಲವ ಹುಟ್ಟು
ಗೆಡಿಸಿ ದೃಢವೈರಾಗ್ಯದಿಂದೆಸೆದನಾರತಂ
ಮೃಡಸದೃಶನೆನಿಪ ಗುರು ದೊಡ್ಡಸಿದ್ಧೇಶನೇ ಕಾಣೆ ಬಡನಡುವ ಚಲುವೆ. ೧೫-೪೨

ಆ ಗುರುದೊಡ್ಡಸಿದ್ಧೇಶನ ವರ್ಣನೆಯನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡು ಸ್ವತಂತ್ರ ಸಿದ್ಧಲಿಂಗೇಶ್ವರರ ಸಮಗ್ರ ವಚನಗಳನ್ನು ಅಧ್ಯಯನ ಮಾಡಿ ಇದರ ಕರ್ತೃ ಹೇಗಿದ್ದಿರಬೇಕೆಂಬುದನ್ನು ಊಹಿಸಿದಾಗ ಗುರುದೊಡ್ಡಸಿದ್ಧೇಶನ ಬಗೆಗೆ ಕವಿ ಶಬ್ದಚಿತ್ರಕೊಟ್ಟಿರುವುದು ಯಥಾರ್ಥವಾಗಿದೆಯೆಂದು ವ್ಯಕ್ತವಾಗುವುದು. ಸ್ವತಂತ್ರ ಸಿದ್ಧಲಿಂಗೇಶ್ವರರ ಸಮಾಧಿಯು ಪರಮಪವಿತ್ರ ಜಾಗ್ರತ ಸ್ಥಾನವಾಗಿ ಅಘಟಿತ ಘಟನೆಗಳನ್ನೆಸಗಿ, ಇಂದಿಗೂ ನಿಜಭಕ್ತರ ಅಭೀಪ್ಸೆಗಳನ್ನು ಕರುಣಿಸುತ್ತಿರುವುದರಿಂದ ಅವರು "ಮೃಡಸದೃಶರು" ಎಂದು ಹೇಳಬಹುದು. ಸಿದ್ಧಲಿಂಗೇಶ್ವರ ಎಂಬುದಕ್ಕೆ ಬದಲಾಗಿ 'ಸಿದ್ಧೇಶ್ವರ' ಎಂಬ ಪದವನ್ನು ವಿರಕ್ತ ತೋಂಟದಾರ್ಯರು ಉಪಯೋಗಿಸಿದ್ದಾರೆ. ಇದು ಅವರು 'ಸಿದ್ಧೇಶ್ವರ ಪುರಾಣ'ದ ಹೆಸರಿನಿಂದಲೇ ಖಚಿತವಾಗುವುದು. ಆದುದರಿಂದ ವಿರಕ್ತ ತೋಂಟದಾರ್ಯರ 'ಗುರು ದೊಡ್ಡಸಿದ್ಧೇಶ' ಶ್ರೀ ಚನ್ನದೇವರ 'ಶ್ರೀ ಗುರುಸಿದ್ಧಲಿಂಗ ಯತಿವರ್ಯ', ವಿರೂಪಾಕ್ಷ ಪಂಡಿತನ 'ದೊಡ್ಡಸಿದ್ಧಲಿಂಗೇಶ್ವರ' ಈ ಮೂವರು ಒಬ್ಬರೇ. ಅವರೇ ಸ್ವತಂತ್ರ ಸಿದ್ಧಲಿಂಗೇಶ್ವರರೆಂದು ಹೇಳಬಹುದು." (ಸ್ವತಂತ್ರ ಸಿದ್ಧಲಿಂಗೇಶ್ವರನ ಕೃತಿಗಳು; ಪ್ರಸ್ತಾವನೆ ಪು. ೮-೯, ಸಂಪಾದಕರು: ಡಾ. ಎಚ್.ಪಿ. ಮಲ್ಲೇದೇವರು)

ಸ್ವತಂತ್ರ ಸಿದ್ಧಲಿಂಗೇಶ್ವರರ ಕಾಲ ದೇಶ ವರ್ತಮಾನಗಳ ಬಗೆಗೆ ಖಚಿತವಾಗಿ ಏನೂ ತಿಳಿದುಬಂದಿಲ್ಲ. ಈ ವಿಷಯವನ್ನು ಇವರ ಕೃತಿಗಳ ಸಂಪಾದಕರೇ ಸ್ಪಷ್ಟಪಡಿಸಿದ್ದಾರೆ. "ಸ್ವತಂತ್ರ ಸಿದ್ಧಲಿಂಗೇಶ್ವರರ ಜೀವನ ಚರಿತೆಯ ಬಗೆಗೆ ಯಾವ ಕೃತಿಗಳೂ ಲಭ್ಯವಿಲ್ಲದಿರುವುದರಿಂದ ಇವರ ಸಾಧನಾಕ್ಷೇತ್ರವಾದ ಗಜರಾಜಗಿರಿಯ ಸುತ್ತಮುತ್ತಣ ಪ್ರದೇಶದಲ್ಲಿ ವಾಸವಾಗಿರುವ ಇವರ ಶಿಷ್ಯರಿಗೆ ಪರಂಪರೆಯಿಂದ ಸ್ವತಂತ್ರ ಸಿದ್ಧಲಿಂಗೇಶ್ವರರ ಬಗೆಗೆ ಗೊತ್ತಿರುವ ವಿಷಯಗಳನ್ನೇ ಸಂಗ್ರಹಿಸಿ ಇವರ ಚರಿತ್ರೆಯನ್ನು ಬರೆಯಲು ಯತ್ನಿಸಲಾಗಿದೆ.

ಸ್ವತಂತ್ರ ಸಿದ್ಧಲಿಂಗೇಶ್ವರ ಜನ್ಮಸ್ಥಳ ವಾಣಿಜ್ಯಪುರವೆಂದೂ, ಇವರು ಷಟ್ಸ್ಥಲಚಕ್ರವರ್ತಿಗಳೂ ಶಿವಯೋಗ ಸಿದ್ಧರೂ ಆದ ಎಡೆಯೂರು ತೋಂಟದ ಸಿದ್ಧಲಿಂಗೇಶ್ವರರ ಪರಮ ಶಿಷ್ಯರೆಂದೂ ತಿಳಿದುಬರುವುದು. ಈ ಅಂಶಗಳ ಬಗೆಗೆ ಬೆಳಕು ಬೀರುವ ಐತಿಹಾಸಿಕ ಆಧಾರಗಳು ಇನ್ನೂ ಲಭ್ಯವಾಗಬೇಕಾಗಿವೆ." (ಸ್ವತಂತ್ರ ಸಿದ್ಧಲಿಂಗೇಶ್ವರನ ಕೃತಿಗಳು, ಪ್ರಸ್ತಾವನೆ ಪು. ೩-೪)

ವಾಣಿಜ್ಯಪುರಕ್ಕೆ ಹರದನಹಳ್ಳಿ ಎಂಬ ಪರ್ಯಾಯ ನಾಮವೂ ಉಂಟು. ಈ ಊರಿನ ಬಗೆಗೆ ಜನಜನಿತವಾದ ಕಥೆಯೊಂದಿದೆ. ಮಧುರೆಗೆ ವ್ಯಾಪಾರಕ್ಕೆಂದು ಹೊರಟ ವರ್ತಕರು ಕಾಡಿನಲ್ಲಿ ಬೀಡುಬಿಟ್ಟು ಅಡುಗೆಗೆ ಯತ್ನಿಸಿದಾಗ

ಅಡಿಗೆಗೆ ಇಟ್ಟಿದ್ದ 'ಲಿಂಗ'ದ ಕಲ್ಲಿನಿಂದ ಅಮೃತವೊಸರುವ ಲಿಂಗವನ್ನು ಕಂಡು ಅಲ್ಲಿಯೇ ಅಮೃತೇಶ್ವರವೆಂಬ ದೇವಾಲಯವನ್ನು ಕಟ್ಟಿಸಿದರೆಂದೂ ಅದೇ ಕಾಲಾನಂತರದಲ್ಲಿ ವಾಣಿಜ್ಯಪುರ ಅಥವಾ ಹರದನಹಳ್ಳಿ ಎಂಬ ಹೆಸರನ್ನು ಪಡೆಯಿತೆಂದೂ ಪ್ರತೀತಿಯಿದೆ.

ಸ್ವತಂತ್ರ ಸಿದ್ಧಲಿಂಗೇಶ್ವರರು "ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ" ಎಂಬ ಅಂಕಿತದಲ್ಲಿ ವಚನಗಳನ್ನು ರಚಿಸಿದ್ದಾರೆ. ಪ್ರಕೃತ ಅವರ ೪೩೦ ವಚನಗಳು ಸಂಪಾದಿತವಾಗಿ ಪ್ರಕಟವಾಗಿವೆ. ಈ ವಚನಗಳು ಷಟ್ಸ್ಥಲಸಿದ್ಧಾಂತರನ್ನು ಪ್ರತಿಪಾದಿಸುತ್ತವೆ. ಇವರ ಮತ್ತೊಂದು ಕೃತಿ ಮುಕ್ತ್ಯಾಂಗನಾ ಕಂಠಮಾಲೆ. ಇದರಲ್ಲಿ ಸ್ವತಂತ್ರ ಸಿದ್ಧಲಿಂಗೇಶ್ವರರ ೨೧ ಆಯ್ದ ವಚನಗಳಿವೆ. ಈ ವಚನಗಳಿಗೆ ವ್ಯಾಖ್ಯಾನವನ್ನು ಬರೆಯುತ್ತ ಹೀಗೆ ಹೇಳಿಕೊಂಡಿದ್ದಾನೆ:

"ವೇದಾಗಮಶಾಸ್ತ್ರ ವಿಶಾರದನಾದ ತಾರಕಾದ್ಯನೇಕೋಪದೇಶಕರ್ತೃವಾದ ಪಿಂಡಮಧ್ಯದಿ ನಾದ ಬಿಂದು ಕಳೆಗಳಂ ತೋರುವಲ್ಲಿ ಕುಶಲನಾದ ಮಂತ್ರಯೋಗದಲ್ಲಿ ಮನವುಳ್ಳಾತನಾದ ಲಯಯೋಗದಲ್ಲಿ ಲಲಿತನಾದ ಹಠಯೋಗದಲ್ಲಿ ಪಯತರನಾದ ರಾಜಯೋಗದಲ್ಲಿ ವಿರಾಜಮಾನನಾದ ಶಿವಯೋಗದಲ್ಲಿ ಸಂಪನ್ನನಾದ ಷಟ್ಸ್ಥಲಚಕ್ರೇಶ್ವರನಾದ ಸ್ವತಂತ್ರ ಸಿದ್ಧಲಿಂಗೇಶ್ವನು ತಮ್ಮ ವಂಶೀಭೂತರಾದ ಶರಣಗಣಂಗಳು ಅರಿದಾಚರಿಸಿ ನಿತ್ಯಸುಖಿಗಳಾಗಲೆಂದು ತಮ್ಮ ನಿಜಾನುಭವದ ವಚನಾಮೃತ ಶರಧಿಯೊಳಗನರ್ಘ್ಯವಾದ ರತ್ನಂಗಳನೆ ತೆಗೆದು ಸರಂಗೊಳಿಸಿದ ವಚನಗಳಲ್ಲಿ ಮುಕ್ತ್ಯಾಂಗನಾ ಕಂಠಮಾಲೆ ಎನಲೊಪ್ಪುವ ವಚನಂಗಳೊಳಗೆ ಅತ್ಯಂತ ಗೋಪ್ಯವಾದ ವಚನಂಗಳನೆ ತೆಗೆದು ಮುಮುಕ್ಷು ಜನಂಗಳ ಹೃದಯಾಂತರಾಳವನೆ ತೊಳಗಿ ಬೆಳಗಲೆಂದು ಕನ್ನಡಸಿ ಪೇಳ್ವೆನ್."

ಜಂಗಮ ರಗಳೆ ಸ್ವತಂತ್ರ ಸಿದ್ಧಲಿಂಗೇಶ್ವರರ ಮೂರನೆಯ ಕೃತಿ. ಇದು ಒಂದು ಕಿರುಕೃತಿ. ಜಂಗಮ ಮಹತ್ವವನ್ನು ಸಾರುವುದೇ ಈ ಕಿರುಕೃತಿಯ ಮೂಲ ಮತ್ತು ಚೂಲ. ಈ ಕೃತಿಯ ಅಂತ್ಯದಲ್ಲಿ, "ಜಂಗಮವೆ ಗುರುವೆನಗೆ ಜಂಗಮವೆ ಪರವೆನಗೆ ಜಂಗಮವೆ ಪತಿಯೆನಗೆ ರಕ್ಷಿಸಲೆ ಜಂಗಮವೆ" ಎಂದಿದೆ.

ಇಂತೀ ಜಂಗಮದಿರವಂ
ಸಂತಸದಿಂ ಪೇಳ್ದ ಸಿದ್ಧಲಿಂಗೇಶ್ವರನ
ಸಂತತ ಬರೆದೋದಿದಗಂ
ಚಿಂತಿಸಿದುದನೀವನವಗೆ ಗುರುಬಸವೇಶಂ ॥

ಸ್ವತಂತ್ರ ಸಿದ್ಧಲಿಂಗೇಶ್ವರರ ವಚನಗಳನ್ನು ಪರಿಶೀಲಿಸಿದಾಗ ಬಸವಾದಿ ಪ್ರಮಥರ ವಚನಗಳ ಪ್ರಭಾವ ದಟ್ಟವಾಗಿ ಆಗಿರುವುದನ್ನು ನಾವು ವಿಶೇಷವಾಗಿ ಕಾಣಬಹುದಾಗಿದೆ. ಕೆಲವು ಸಾಹಿತ್ಯ ಚರಿತ್ರಕಾರರು "ಸಾಹಿತ್ಯ ದೃಷ್ಟಿಯಿಂದ ಈತನ ಯಾವ ಗ್ರಂಥವೂ ಗಮನಾರ್ಹವಾಗಿಲ್ಲ. ವಚನಗಳಲ್ಲಿ ಇರಬೇಕಾದ ಸರಳತೆಯೇನೋ ಇದೆ. ಆದರೆ ಸಂಗ್ರಹಗುಣ ನಿಶಿತತೆಗಳು ಇಲ್ಲ. ಬರವಣಿಗೆಯು ವಿಷಯ ಗರ್ಭಿತವಾಗಿದ್ದರೂ ಸಾರವತ್ತಾಗಿಲ್ಲ." (ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ, ತ.ಸು. ಶಾಮರಾಯ, ಮೇ ರಾಜೇಶ್ವರಯ್ಯ, ಪು.೫೫೬) "ಈತನ ಕವಿತಾಶಕ್ತಿಯನ್ನು ತಿಳಿಯಲು ಹೆಚ್ಚಿನ ಆಧಾರಗಳು ಬೇಕು." (ಕನ್ನಡ ಸಾಹಿತ್ಯ ಚರಿತ್ರೆ, ರಂ.ಶ್ರೀ. ಮುಗಳಿ, ಪು. ೨೯೮) ಎಂದು ಹೇಳಿರುವ ಅಭಿಪ್ರಾಯ ಸಾಧುವಲ್ಲ ಎಂದೇ ಹೇಳಬೇಕಾಗಿದೆ. ವಿಶ್ವದ ಮಹಾಕವಿಗಳನ್ನು ಸಾಲಾಗಿ ನಿಲ್ಲಿಸಿದರೆ ಒಬ್ಬರ ಕೈ ಮತ್ತೊಬ್ಬರ ಜೇಬಿನಲ್ಲಿ ಎಂಬ ನಾಣ್ಣುಡಿಯನ್ನು ಈ ಸಂದರ್ಭದಲ್ಲಿ ನೆನೆಯಬೇಕಾಗಿದೆ.

ಸ್ವತಂತ್ರ ಸಿದ್ಧಲಿಂಗೇಶ್ವರರಿಗೆ ಪ್ರಾಚೀನ ವಚನಕಾರರ ಬಗೆಗೆ ಅಪಾರ ಶ್ರದ್ಧೆ ಭಕ್ತಿ ಗೌರವಗಳಿರುವುದು ಅವರ ವಚನಗಳಲ್ಲಿ ಸುವ್ಯಕ್ತವಾಗಿದೆ. ಅಂತೆಯೇ ತೋಂಟದ ಸಿದ್ಧಲಿಂಗೇಶ್ವರರ ಪ್ರಭಾವವೂ ಗಾಢವಾಗಿದೆ. ಒಂದೆರಡು ದೃಷ್ಟಾಂತಗಳಿಂದ ಇದನ್ನು ಸ್ಪಷ್ಟಪಡಿಸಬಹುದಾಗಿದೆ. ಬಸವಣ್ಣನವರ,

ಎತ್ತೆತ್ತ ನೋಡಿದಡತ್ತತ್ತ ನೀನೆ ದೇವಾ
ಸಕಲ ವಿಸ್ತಾರದ ರೂಹು ನೀನೆ ದೇವಾ
ವಿಶ್ವತೋ ಚಕ್ಷು ನೀನೆ ದೇವಾ
ವಿಶ್ವತೋ ಮುಖ ನೀನೆ ದೇವಾ
ವಿಶ್ವತೋ ಬಾಹು ನೀನೆ ದೇವಾ
ವಿಶ್ವತೋ ಪಾದ ನೀನೆ ದೇವಾ ಕೂಡಲಸಂಗಮದೇವಾ

ಈ ವಚನ ಸ್ವತಂತ್ರ ಸಿದ್ಧಲಿಂಗೇಶ್ವರರಲ್ಲಿ,

ಎಲ್ಲೆಲ್ಲಿ ನೋಡಿದಡಲ್ಲಲ್ಲಿ ನೀನೆ ದೇವಾ
ಪಿಂಡಾಂಡಂಗಳೊಳಗೆಲ್ಲಾ ನೀನೆ ದೇವಾ
ಮಹದಾಕಾಶರೂಪ ನಿರುಪರಾಧಿಕ ಪರಂಜ್ಯೋತಿ ನೀನೆ ದೇವಾ
ಉಪಮಾತೀತ ವಾಙ್ಮನಕ್ಕಗೋಚರ ನೀನೆ ದೇವಾ
ಸ್ವಾನುಭೂತಿ ಸ್ವರೂಪ ಶರಣಜನಮನೋವಲ್ಲಭ ನೀನೆ
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ (೩೬೩)

ಈ ರೀತಿ ವ್ಯಕ್ತವಾಗಿದೆ. ಅಲ್ಲಮಪ್ರಭುದೇವರ,

ಕಾಯದ ಕಳವಳವ ಗೆಲಿದಡೇನೋ ಮಾಯದ ತಲೆಯನರಿಯದನ್ನಕ್ಕರ
ಮಾಯೆಯ ತಲೆಯನರಿದಡೇನೋ ಜ್ಞಾನದ ನೆಲೆಯನರಿಯದನ್ನಕ್ಕರ?
ಜ್ಞಾನದ ನೆಲೆಯನರಿದಡೇನೋ ತಾನು ತಾನಾಗದನ್ನಕ್ಕರ?
ತಾನು ತಾನಾದ ಶರಣನ ನಿಲವಿಂಗೆ ಒಂದುದಾರಿ ಮೇರೆಯುಂಟೆ?

ಈ ವಚನ, ಸ್ವತಂತ್ರ ಸಿದ್ಧಲಿಂಗೇಶ್ವರರಲ್ಲಿ,

ಕಾಯದ ಕಳವಳವ ಗೆಲಲರಿಯದವರು
ಮಾಯಾಪಾಶದಲ್ಲಿ ಬಂಧವಡೆದ ಸಂಸಾರಿಗಳಹರಲ್ಲದೆ
ಅವರು ಜ್ಞಾನಿಗಳಾಗಲರಿಯರು
ಅವರಿಗಿನ್ನೆಂದಿಗೆ ಮುಕ್ತಿಯಹುದೋ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರ

ಎಂದು ರೂಪುಗೊಂಡಿದೆ. ಈ ತೆರನ ಅನೇಕ ಸಾದೃಶ್ಯಗಳನ್ನು ನಾವು ಕಾಣಬಹುದಾಗಿದೆ.

ಸ್ವತಂತ್ರ ಸಿದ್ಧಲಿಂಗೇಶ್ವರರು ಉತ್ತಮ ವಚನಕಾರರು, ಶ್ರೇಷ್ಠ ಅನುಭಾವಿಗಳು, ಷಟ್ಸ್ಥಲ ಸಿದ್ಧಾಂತ ಪ್ರತಿಪಾದಕರು. ಇದಕ್ಕೆ ಒಂದೆರಡು ವಚನಗಳನ್ನು ಉದಾಹರಿಸಬಹುದು.

ಲೌಕಿಕದ ತೊಳಲಾಟವನ್ನು ಎಷ್ಟು ಸಹಜ ಸುಂದರವಾಗಿ ವರ್ಣಿಸಿದ್ದಾರೆ ನೋಡಿ:

ಮನವಿದೊಮ್ಮೆ ಪ್ರಪಂಚದತ್ತ ಹರಿವುದು; ಒಮ್ಮೆ ಪರಮಾರ್ಥದತ್ತ ತಿರುಗುವುದು
ಒಂದ ಹಿಡಿಸಿ ಒಂದ ಬಿಡಿಸುವುದು
ಇಂತೀ ಸಂದೇಹವನಿಕ್ಕಿ ದಂದುಗಗೊಳಿಸಿ ಮುಂದುಗೆಡಸಿ ಕಾಡುತ್ತಿದೆ
ಈ ಮನದ ಮರುಳುತನವ ಬಿಡಿಸಿ
ನಿಮ್ಮ ಶ್ರೀಪಾದದಲ್ಲಿರಿಸೆನ್ನ ನಿಜಗುರುಸ್ವತಂತ್ರಸಿದ್ಧಲಿಂಗೇಶ್ವರ (೩೭)

ಷಟ್ಸ್ಥಲಕ್ಕೆ ಸಂಬಂಧಿಸಿದ ವಚನ ಇಂತಿದೆ:

ಕಕ್ಷೆಯಲ್ಲಿ ಲಿಂಗವ ಧರಿಸಿಕೊಂಡಾತ ಭಕ್ತನು
ಕರಸ್ಥಲದಲ್ಲಿ ಲಿಂಗವ ಧರಿಸಿಕೊಂಡಾತ ಮಾಹೇಶ್ವರನು
ಉತ್ತಮಾಂಗದಲ್ಲಿ ಲಿಂಗವ ಧರಿಸಿಕೊಂಡಾತ ಪ್ರಸಾದಿ

ಉರಸಜ್ಜೆಯಲ್ಲಿ ಲಿಂಗವ ಧರಿಸಿಕೊಂಡಾತ ಪ್ರಾಣಲಿಂಗಿ
ಕಂಠಸಜ್ಜೆಯಲ್ಲಿ ಲಿಂಗವ ಧರಿಸಿಕೊಂಡಾತ ಶರಣ
ಅಮಳೈಕ್ಯದಲ್ಲಿ ಲಿಂಗವ ಧರಿಸಿಕೊಂಡಾತ ಐಕ್ಯ
ಇಂತೀ ಷಡುಸ್ಥಲದವರೆಲ್ಲ ಲಿಂಗವ ಧರಿಸಿ
ನಿತ್ಯಲಿಂಗಾಂಗ ಸಂಬಂಧಿಗಳಾಗಿ ಲಿಂಗಾವಧಾನಿಗಳಾಗಿರ್ದರಯ್ಯಾ
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ ನಿಮ್ಮ ಶರಣರು (೭೦)

ಪ್ರಸ್ತುತ ಚಿಂತನ ಮಾಡಬೇಕಾಗಿರುವ ವಚನ:

ಅಗ್ನಿ ರಜ್ಜುವಿನಿಂದ ಕಟ್ಟುವಡೆವುದೆ;
ಸೂರ್ಯನ ಕತ್ತಲೆ ಬಾಧಿಸಲಾಪವೆ ಅಯ್ಯಾ?
ಆಕಾಶವು ರಜಧೂಮಗಳಿಂದ ಮಲಿನವಹುದೆ ಅಯ್ಯ
ನಿಮ್ಮನರಿದ ಶಿವಯೋಗಿಗೆ ಸಂಸಾರ ಬಂಧಿಸಬಲ್ಲುದೆ ಹೇಳಾ
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ?

ಈ ವಚನಕ್ಕೆ ಅಲ್ಲಮಪ್ರಭುದೇವರ ಸಂವಾದಿಯಾದ ಒಂದು ಬೆಡಗಿನ ವಚನ ಕಂಡುಬರುತ್ತದೆ:

ಅಗ್ನಿ ಮುಟ್ಟಲು ತೃಣ ಭಸ್ಮವಾದುದನೆಲ್ಲರೂ ಬಲ್ಲರು
ತೃಣದೊಳಗೆ ಅಗ್ನಿ ಉಂಟೆಂಬುದ ತಿಳಿದುನೋಡಿರೇ
ಅಗ್ನಿ ಜಲವ ನುಂಗಿತ್ತು ಜಲ ಅಗ್ನಿಯ ನುಂಗಿತ್ತು
ಪೃಥ್ವಿಯೆಲ್ಲವ ನುಂಗಿತ್ತು ಆಕಾಶವನೆಯ್ದೆ ನುಂಗಿತ್ತು
ಅರಿದೆನೆಂಬ ಜಡರುಗಳು ನೀವು ತಿಳಿದು ನೋಡಿರೇ
ತಿಳಿಯಬಲ್ಲದೆ ಗುಹೇಶ್ವರನ ನಿಲವು ತಾನೆ (೨೬೮)

ಇದರ ಟೀಕು: ಅಗ್ನಿ ಮುಟ್ಟದ ಮುನ್ನ ತೃಣದೊಳಗೆ ಅಗ್ನಿಯು ಮಂದಾಗ್ನಿಯಾಗಿ ವಿಶ್ರಮಿಸಿರುವುದು. ಹಾಗೆಯೇ ಲಿಂಗ ಮುಟ್ಟಿದ ಮೇಲೆಯೇ ಅಂಗವು ಲಿಂಗವೆಂಬುದು ಮಾತಲ್ಲ. ಅದೇನು ಕಾರಣವೆಂದರೆ ಲಿಂಗ ಮುಟ್ಟದ ಮುನ್ನವೆ ಅಂಗದೊಳಗೆ ಲಿಂಗವಿದ್ದುದಾಗಿ ಲಿಂಗ ಸೋಂಕಿದ ಆ ಅಂಗವು ಲಿಂಗವೆ ಆಯಿತು. ಅನಂತರ ಜ್ಞಾನಾಗ್ನಿಯು ಮನವನವಗ್ರಹಿಸಿ ಆ ಮನವೇ ಜ್ಞಾನಾಗ್ನಿಯನ್ನವಗ್ರಹಿಸಿತು. ಆ ನಿಜದ ನಿಲವು ತನುತ್ರಯವನ್ನೂ ನುಂಗಿತು, ಆತ್ಮತತ್ವವನ್ನೂ ಅವಗ್ರಹಿಸಿತು. ಜಡರಿಗಿದರಿಯಲಾಗದು. ಇದೇ ನಿಜತತ್ವ, ಇದನ್ನರಿತವನೇ ಶರಣ. ಇದೇ ಅರ್ಥದ ದೇವರದಾಸಿಮಯ್ಯನ ವಚನವೊಂದು ಹೀಗಿದೆ:

ಅಗ್ನಿ ಸುಡಲಲ್ಲದೆ ಸುಳಿಯಲರಿಯದು
ವಾಯು ಸುಳಿವುದಲ್ಲದೆ ಸುಡಲರಿಯದು
ಆ ಅಗ್ನಿ ವಾಯುವ ಕೂಡಿದಲ್ಲದೆ ಅಡಿ ಇಡಲರಿಯದು
ಈ ಪರಿಯಂತೆ ನರರರಿವರೆ ಕ್ರಿಯಾಜ್ಞಾನಭೇದವ ರಾಮನಾಥಾ

ಪ್ರಸ್ತುತ ವಚನದ ಪಾಠಾಂತರಗಳು ಹೀಗಿವೆ:

ಅಗ್ನಿ ರಜ್ಜುವಿನಿಂದ ಕಟ್ಟುವಡೆವುದೆ?
ಸೂರ್ಯನ ಕತ್ತಲೆ ಬಾಧಿಸಲಾಪವೆ ಅಯ್ಯಾ?
ಆಕಾಶವು ರಜಧೂಮಗಳಿಂದ ಮಲಿನವಹುದೆ ಅಯ್ಯ?
ನಿಮ್ಮನರಿವ ಶಿವಯೋಗಿಗೆ ಸಂಸಾಸ ಬಂಧಿಸಬಲ್ಲುದೆ ಹೇಳಾ
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ? (ವಚನ ಸಾಹಿತ್ಯ ಸಂಗ್ರಹ, ಪು.೪೭೮, ವ.೧೮೫)

(ಸ್ವತಂತ್ರ ಸಿದ್ಧಲಿಂಗೇಶ್ವರರ ೨೦ ವಚನಗಳು ಈ ಸಂಕಲನದಲ್ಲಿ ಸೇರ್ಪಡೆಯಾಗಿವೆ.)

ಅಗ್ನಿ ರಜ್ಜುವಿನಿಂದ ಕಟ್ಟುವಡೆವುದೆ ಅಯ್ಯ?
ಸೂರ್ಯನ ಕತ್ತಲೆ ಬಾಧಿಸಲಾರ್ಪುದೆ ಅಯ್ಯ?
ಆಕಾಶವು ರಜಧೂಮ್ರಗಳಿಂದ ಮಲಿನವಹುದೆ ಅಯ್ಯ?
ನಿಮ್ಮನಜಿದ ಶಿವಯೋಗಿಗೆ ಸಂಸಾರ ಬಂಧಿಸಬಲ್ಲುದೆ ಹೇಳಾ
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ?

(ವಚನಶಾಸ್ತ್ರಸಾರ, ಭಾಗ-೧: ಪು.೫೮೪, ವ.೨೨೩೬)

(ಸ್ವತಂತ್ರ ಸಿದ್ಧಲಿಂಗೇಶ್ವರರ ೧೧೨ ವಚನಗಳನ್ನು ಈ ಸಂಕಲನದಲ್ಲಿ ಆಯ್ದುಕೊಂಡಿದೆ.)

ಅಗ್ನಿ ರಜ್ಜುವಿನಿಂದ ಕಟ್ಟುವಡೆವುದೆ?
ಸೂರ್ಯನ ಕತ್ತಲೆ ಬಾಧಿಸಲಾಪುದೆ ಅಯ್ಯಾ?
ಆಕಾಶವು ರಜಧೂಮಗಳಿಂದ ಮಲಿನವಹುದೆ ಅಯ್ಯಾ?
ನಿಮ್ಮನರಿಯದ ಶಿವಯೋಗಿಗೆ ಸಂಸಾರ ಬಂಧಿಸಬಲ್ಲುದೆ! ಹೇಳಾ
ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರ.

(ಸ್ವತಂತ್ರಸಿದ್ಧಲಿಂಗೇಶ್ವರನ ಕೃತಿಗಳು, ಪು.೫೭, ವ.೧೪೪)

ಸ್ವತಂತ್ರಸಿದ್ಧಲಿಂಗೇಶ್ವರರ ಮತ್ತೊಂದು ವಚನ ಇದೇ ಅಭಿಪ್ರಾಯವನ್ನು ಹೊಂದಿದೆ:

ಬಿಸಜತಂತುವಿನ ಶೃಂಖಲದಿಂದ ಮದಗಜ ಬಂಧವಡೆಯ ಬಲ್ಲುದೆ?
ತಱಗೆಲೆ ಮುಸುಕಿದಡೆ ದಾವಾನಲ ಕೆಡಬಲ್ಲುದೆ?
ಮಂಜಿನ ಪೌಜು ಸೂರ್ಯನ ಮುತ್ತಬಲ್ಲುದೆ?
ನಿಮ್ಮನೆಱಿದಾತಂಗೆ ಪುಣ್ಯ ಪಾಪಕರ್ಮ ಲೇಪಿಸಬಲ್ಲವೆ?
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ.

ಈ ಎರಡು ವಚನಗಳ ಅಂತರಾರ್ಥ ಒಂದೇ ಆಗಿದ್ದರೂ ನನಗೆ ವಹಿಸಲಾಗಿರುವ ವಚನದ ಚಿಂತನಕ್ಕೆ ನನ್ನ ದೃಷ್ಟಿಯನ್ನು ಕೇಂದ್ರೀಕರಿಸುತ್ತೇನೆ.

ಅಗ್ನಿ ರಜ್ಜುವಿನಿಂದ ಕಟ್ಟುವಡೆವುದೆ ಅಯ್ಯ
ಸೂರ್ಯನ ಕತ್ತಲೆ ಬಾಧಿಸಲಾರ್ಪುದೆ ಅಯ್ಯ
ಆಕಾಶವು ರಜ ಧೂಮ್ರಗಳಿಂದ ಮಲಿನವಹುದೆ ಅಯ್ಯ
ನಿಮ್ಮನಜಿದ ಶಿವಯೋಗಿಗೆ ಸಂಸಾರ ಬಂಧಿಸಬಲ್ಲುದೆ ಹೇಳಾ
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

ಇದು ಶುದ್ಧವಾದ ವಚನಪಾಠವೆಂದು ನಾನು ಭಾವಿಸಿದ್ದೇನೆ. ಈ ವಚನವನ್ನು ಎರಡು ರೀತಿ ವ್ಯಾಖ್ಯಾನಿಸಬಹುದಾಗಿದೆ. ಒಂದು ಲೌಕಿಕಾರ್ಥ ಎಂದರೆ ವಾಚ್ಯಾರ್ಥ. ಮತ್ತೊಂದು ಪಾರಮಾರ್ಥಿಕಾರ್ಥ ಎಂದರೆ ದ್ವಂದ್ವಾರ್ಥ. ಅಗ್ನಿ ರಜ್ಜುವಿನಿಂದ ಕಟ್ಟುವಡೆವುದೆ ಅಯ್ಯ ಎಂದರೆ ಬೆಂಕಿಯನ್ನು ಹಗ್ಗದಿಂದ ಬಂಧಿಸುವುದಾಗಲಿ ಕಟ್ಟಿಹಾಕುವುದಾಗಲಿ ಸಾಧ್ಯವೆ? ಹಾಗೆಯೇ ಸೂರ್ಯನ ಕತ್ತಲೆ ಬಾಧಿಸಲಾರ್ಪುದೆ ಅಯ್ಯ; ಸೂರ್ಯನನ್ನು ಕತ್ತಲೆ ಹಿಂಸಿಸುವುದು ಸಾಧ್ಯವೆ? ಆಕಾಶವು ರಜಧೂಮ್ರಗಳಿಂದ ಮಲಿನವಹುದೆ ಅಯ್ಯ. ಆಕಾಶವು ಧೂಳು ಮತ್ತು ಹೊಗೆಯಿಂದ ಮಲಿನವಾಗುತ್ತದೆಯೆ? ಕೊಳಕಾಗುತ್ತದೆಯೆ? ನಿಮ್ಮನಜಿದ ಶಿವಯೋಗಿಗೆ ಸಂಸಾರ ಬಂಧಿಸಬಲ್ಲುದೆ ಹೇಳಾ? ನಿಮ್ಮನ್ನು ತಿಳಿದುಕೊಂಡ ಅರ್ಥಮಾಡಿಕೊಂಡ ಶಿವಯೋಗಿಯನ್ನು ಸಂಸಾರ ಬಂಧಿಸಲು ಸಾಧ್ಯವೆ? ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ. ಇದರ ತಾತ್ಪರ್ಯವಿಷ್ಟೆ: ಬೆಂಕಿಯನ್ನು ಹಗ್ಗದಿಂದ ಕಟ್ಟಿಹಾಕುವುದು ಅಸಾಧ್ಯ, ಅಸಂಭವ. ಹೀಗೆಯೇ ಸೂರ್ಯನನ್ನು ಕತ್ತಲೆ ಬಾಧಿಸುವುದು ಸಾಧ್ಯವಿಲ್ಲದ ಮಾತು. ಸೂರ್ಯನನ್ನು ಹಿಂಸಿಸುವ ಸಾಮರ್ಥ್ಯ ಕತ್ತಲೆಗೆ ಇಲ್ಲ. ಆಕಾಶವನ್ನು ಧೂಳು ಹೊಗೆ ತುಂಬಿಕೊಂಡು ಮಲಿನ ಮಾಡುವುದು, ಕೊಳಕು ಮಾಡುವುದು ಎಂತಾದರೂ ಸಾಧ್ಯವೆ? ನಿಜಗುರು

ಸ್ವತಂತ್ರ ಸಿದ್ಧಲಿಂಗೇಶ್ವರರನ್ನು ಅರಿತುಕೊಂಡ ಶಿವಯೋಗಿಯನ್ನು ಸಂಸಾರದ ಕ್ಲೇಶಪಾಶಗಳು ಬಂಧಿಸುವುದು ಸಾಧ್ಯವಿಲ್ಲದ ಮಾತು. ನಿಮ್ಮನ್ನು ಅರಿತುಕೊಂಡ ಶಿವಯೋಗಿಯನ್ನು ಲೌಕಿಕ ವಿಮುಖನನ್ನಾಗಿ ಮಾಡುವುದು ಸಾಧ್ಯವೆ ಎಂದು ಪ್ರಶ್ನಿಸಿದ್ದಾರೆ. ಇದರ ಮತ್ತೊಂದು ವ್ಯಾಖ್ಯಾನವನ್ನು ಹೀಗೆ ಮಾಡಬಹುದು: ಅಗ್ನಿಯ ಸ್ವಭಾವ ಸುಡುವುದು. ರಜ್ಜುವಿನ ಸ್ವಭಾವ ಸುಡಿಸಿಕೊಳ್ಳುವುದು. ಈ ಸುಡಿಸಿಕೊಳ್ಳುವ ವಸ್ತುವಿನಿಂದ ಸುಡುವ ವಸ್ತುವನ್ನು ಕಟ್ಟಿಹಾಕುವುದು ಸಾಧ್ಯವೆ? ಸೂರ್ಯನ ಕ್ರಿಯೆ ಕತ್ತಲೆಯನ್ನು ದೂರ ಮಾಡುವುದು. ಈ ಕತ್ತಲೆ ಸೂರ್ಯನಿಗೆ ಅಡ್ಡಬಂದು ಓಂಸಿಸುವುದು ಸಾಧ್ಯವೆ? ಆಕಾಶವು ಲೋಕವಿಸ್ತಾರವಾದುದು. ಈ ಅನಂತವಾದ ಆಕಾಶವನ್ನು ಧೂಳು ಹೊಗೆಗಳಿಂದ ಮಲಿನ ಮಾಡುವುದು ಅಪವಿತ್ರ ಮಾಡುವುದು ಸಾಧ್ಯವೆ? ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನನ್ನು ಅರಿತುಕೊಂಡ ಶಿವಯೋಗಿಯನ್ನು ಸಂಸಾರಬಂಧನಕ್ಕೆ ಒಳಪಡಿಸುವುದು ಸಾಧ್ಯವೆ? –ಇವೆಲ್ಲವೂ ಅಸಂಭವನೀಯಗಳು.

ಇನ್ನು ಪಾರಮಾರ್ಥಿಕ ಅರ್ಥ ಏನಿರಬಹುದೆಂಬುದನ್ನು ನೋಡೋಣ: ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನನ್ನು ಅರಿತುಕೊಂಡ ಶಿವಯೋಗಿಗೆ ಸಂಸಾರ ಬಂಧಿಸಬಲ್ಲುದೆ ಎಂಬುದು ಬೀಜಸೂತ್ರ. ಈ ಶಿವಯೋಗಿ ಅಗ್ನಿಯಿದ್ದಂತೆ, ಸೂರ್ಯನಿದ್ದಂತೆ, ಆಕಾಶವಿದ್ದಂತೆ. ರಜ್ಜು, ಕತ್ತಲೆ, ರಜಧೂಮ್ರಗಳು ಸಂಸಾರವಿದ್ದಂತೆ. ಈ ಸಂಸಾರಸಾಗರದಲ್ಲಿ ಇವೆಲ್ಲ ತುಂಬಿಹೋಗಿವೆ. ಶಿವಯೋಗಿ ಇವುಗಳಿಂದ ಬಂಧಮುಕ್ತನಾಗಿದ್ದಾನೆ. ರಜ್ಜು ಅಗ್ನಿಯನ್ನು ಸ್ಪರ್ಶಿಸಿದರೆ ಸುಟ್ಟು ಭಸ್ಮವಾಗುತ್ತದೆ. ಕತ್ತಲೆ ಸೂರ್ಯನ ಮುಂದೆ ನಿರ್ನಾಮವಾಗುತ್ತದೆ. ರಜಧೂಮ್ರಗಳು ಆಕಾಶವನ್ನು ಸೇರಿ ಹೇಳಹೆಸರಿಲ್ಲ ದಂತಾಗುತ್ತದೆ. ಶಿವಯೋಗಿಯನ್ನು ಇವು ಯಾವುವೂ ಕಾಡಲಾರವು; ಹತ್ತಿರ ಸುಳಿಯಲಾರವು. ಆತನು ಇವೆಲ್ಲವನ್ನೂ ಮೆಟ್ಟಿ ನಿಂತಿದ್ದಾನೆ. ಈ ಲೌಕಿಕ ಕ್ಲೇಶಗಳೆಲ್ಲ ಕ್ಷಾತ್ರಿಕ ಬಲವಿದ್ದಂತೆ ಶಿವಯೋಗಿಯದು ಬ್ರಹ್ಮತೇಜೋಬಲ. ಆದುದರಿಂದ ಶಿವಯೋಗಿಯಾದವನನ್ನು ಯಾವ ಕ್ಲೇಶ ಕಾರ್ಪಣ್ಯಗಳಾಗಲಿ ಕಟ್ಟುಕಟ್ಟಲೆಗಳಾಗಲಿ ಬಂಧನಗಳಾಗಲಿ ತಡೆಯುವುದು ಅಸಂಭವ, ಅಸಾಧ್ಯ ಎಂಬುದು ಇದರ ಪಾರಮರ್ಥಿಕಾರ್ಥ, ಧ್ವನ್ಯಾರ್ಥ, ಗೂಢಾರ್ಥ.

ಅಗ್ನಿ, ಸೂರ್ಯ, ಆಕಾಶ, ಸಂಸಾರ –ಇವಕ್ಕೆಲ್ಲ ವಿಶೇಷವಾದ ಪಾರಿಭಾಷಿಕ ಅರ್ಥಗಳೂ ಬೆಡಗಿನ ವ್ಯಾಖ್ಯಾನಗಳೂ ಇರುವುದು ಕಂಡುಬರುವುದು. ಅವುಗಳನ್ನೆಲ್ಲ ಇಲ್ಲಿ ವಿಶ್ಲೇಷಿಸುವುದು ಅನಗತ್ಯವೆಂದು ಭಾವಿಸಿದ್ದೇನೆ. ಏಕೆಂದರೆ ಇಂದಿನ ಚಿಂತನದ ವಚನ ಬೆಡಗಿನ ವಚನವಲ್ಲ.

ಅಪಾರವಾದ ವಚನಸಾಹಿತ್ಯವು ಅನರ್ಘ್ಯ ರತ್ನಗಳನ್ನು ಒಳಗೊಂಡಿದೆ. 'ದೇವನೊಬ್ಬ ನಾಮ ಹಲವು'; 'ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯ'; 'ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ'; 'ಹೊನ್ನು ಮಾಯೆ ಎಂಬರು, ಹೆಣ್ಣು ಮಾಯೆ ಎಂಬರು, ಮಣ್ಣು ಮಾಯೆ ಎಂಬರು'; 'ದಯವಿಲ್ಲದ ಧರ್ಮವಾವುದಯ್ಯ'; 'ಲೋಕದ ಡೊಂಕ ನೀವೇಕೆ ತಿದ್ದುವಿರಿ' ಇವೇ ಮೊದಲಾದ ವಚನಗಳು ಎಲ್ಲ ಕಾಲಕ್ಕೂ ಎಲ್ಲ ಧರ್ಮಗಳಿಗೂ ಅನ್ವಯವಾಗುವಂತಹವು. ಸಾರ್ವತ್ರಿಕ ಮೌಲ್ಯಗಳುಳ್ಳ ಸುವರ್ಣನಾಣ್ಯಗಳು. ಈ ಸುವರ್ಣ ನಾಣ್ಯಗಳನ್ನು ಯಥಾಶಕ್ತಿಯಾಗಿ ಸಂಚಯಿಸಿಕೊಂಡು ಜೀವನ ಯಾತ್ರೆಯನ್ನು ಕೈಕೊಂಡರೆ ನಿಶ್ಚಿತ ಗುರಿಯನ್ನು ಮುಟ್ಟುವುದು ಸಾಧ್ಯವೆಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ.

■

# ಕನ್ನಡ ಕಾವ್ಯಗಳಲ್ಲಿ ಸಂಪ್ರದಾಯ ಮತ್ತು ಪ್ರತಿಭಟನೆ

**ಸಂ**ಪ್ರದಾಯವೆಂದರೆ ಹಿಂದಿನಿಂದ ನಡೆದು ಬಂದಿರುವ ಒಂದು ರೂಢಿ, ಪದ್ಧತಿ. ಇದನ್ನು ಯಾವುದೋ ಒಂದು ವಿಶಿಷ್ಟ ಪಂಗಡ ನಿರ್ಮಿಸುತ್ತದೆ. ಅಲ್ಲಿಂದ ಮುಂದಕ್ಕೆ ಈ ಸಂಪ್ರದಾಯ ಪರಂಪರಾನುಗತವಾಗಿ ನಡೆದುಕೊಂಡು ಬರುತ್ತದೆ. ಜನಸಾಮಾನ್ಯಕ್ಕೆ ಇದರ ಅನುಸರಣೆ ಕಷ್ಟವಾದಾಗ, ಕ್ಲಿಷ್ಟವಾದಾಗ, ಇದಕ್ಕೆ ಪ್ರತಿಭಟನೆ ಕಂಡುಬರುತ್ತದೆ. ಆಗ ಹಿಂದಿನದಕ್ಕಿಂತ ಭಿನ್ನವಾದ ಒಂದು ನೂತನವರ್ಗ ತಲೆದೋರುತ್ತದೆ. ಈ ಕ್ರಮ ಸೃಷ್ಟಿಯಲ್ಲಿ ಹೇಗೋ ಹಾಗೆಯೇ ಸಾಹಿತ್ಯ ಕ್ಷೇತ್ರದಲ್ಲಿಯೂ ಉಂಟಾಗುವುದು ಅನಿವಾರ್ಯವಾಗುತ್ತದೆ.

ಒಂದುಸಾವಿರ ವರ್ಷಗಳಿಗಿಂತ ಹೆಚ್ಚು ಪ್ರಾಚೀನತೆಯುಳ್ಳ ಕನ್ನಡ ಸಾಹಿತ್ಯದಲ್ಲಿ ಈ ಸಂಪ್ರದಾಯ ಒಂದು ವಿಶಿಷ್ಟಪಾತ್ರವನ್ನು ನಿರ್ವಹಿಸಿದೆ. ಹನ್ನೆರಡನೆಯ ಶತಮಾನದವರೆಗೆ ರಚಿತವಾದ ಕಾವ್ಯಗಳೆಲ್ಲ ಪ್ರಾಚೀನ ಸಂಪ್ರದಾಯವನ್ನು ಸಂಪೂರ್ಣವಾಗಿ ಅನುಸರಿಸಿಕೊಂಡು ಬಂದಿವೆ. ಅಂದಿನ ರಾಜ ಮಹಾರಾಜರು ಕವಿಗಳಿಗೆ ಆಶ್ರಯವನ್ನು ಕೊಟ್ಟು ಅವರಿಂದ ಕೃತಿರಚನೆ ಮಾಡಿಸುತ್ತಿದ್ದರು. ಅದರಂತೆ ಆ ಕವಿಗಳು ತಮ್ಮ ಕೃತಿಗಳನ್ನು ರಾಜಾಸ್ಥಾನಕ್ಕೆ ಯೋಗ್ಯವಾಗುವಂತೆ ಪಂಡಿತಮಂಡಲಿಗೆ ಮೆಚ್ಚುಗೆಯಾಗುವಂತೆ ರಚಿಸುವುದು ಅನಿವಾರ್ಯವಾಗಿತ್ತು. ಸಂಸ್ಕೃತ ಭೂಯಿಷ್ಠವಾದ ಪ್ರೌಢ ಚಂಪೂಕೃತಿಗಳು ಜನಸಾಮಾನ್ಯಕ್ಕೆ ದುರವಗಾಹವಾದುವು. ಅದರ ಫಲವಾಗಿಯೇ ಹನ್ನೆರಡನೆಯ ಶತಮಾನದಲ್ಲಿ ಈ ಸಂಪ್ರದಾಯಕ್ಕೆ ತೀವ್ರವಾದ ಪ್ರತಿಭಟನೆಯುಂಟಾಯಿತು.

ಪ್ರಾಚೀನ ಸಂಪ್ರದಾಯದಂತೆ ಅಷ್ಟಾದಶ ವರ್ಣನೆಗಳು ಕಾವ್ಯಕ್ಕೆ ಅತ್ಯವಶ್ಯವಾದ ಅಂಗಗಳಾಗಿದ್ದುವು. ಕಾವ್ಯದ ಕಥಾವಸ್ತುವನ್ನು ಪುರಾಣೇತಿಹಾಸಗಳಿಂದಾಗಲಿ ಪ್ರಸಿದ್ಧವಾದ ಗ್ರಂಥಗಳಿಂದಾಗಲಿ ತೆಗೆದುಕೊಳ್ಳುವುದು ರೂಢಿಯಾಗಿತ್ತು. ಕವಿಸಮಯ ಅಲಂಕಾರಗಳು ಕಾವ್ಯದಲ್ಲೆಲ್ಲ ವಿಜೃಂಭಿಸುತ್ತಿದ್ದುವು. ಕಾವ್ಯದಲ್ಲಿ ಅನಿವಾರ್ಯವಾಗಿ ಇರಬೇಕಾಗಿದ್ದ ಅಷ್ಟಾದಶವರ್ಣನೆಗಳು ಇವು:

"ವಾರಿಧಿ ಪರ್ವತಂ ಪುರಮಧೀಶ್ವರನುದ್ವಹನಂ ಕುಮಾರನಂ
ಭೋರುಹವೈರಿಮಿತ್ರರುದಯಂ ಋತುನಂದನಮಂಬುಸೀಧುಕಾಂ
ತಾರತಿ ಚಿಂತೆ ಮಂತ್ರ ಚರಯಾನ ವಿರೋಧಿಜಯಂಗಳೆಂಬಿವಂ
ಸೂರಿಗಳಂಗಮೆಂದು ಕೃತಿಯೊಳ್ ಪದಿನೆಂಟುಮನೆಯ್ದೆ ಬಣ್ಣಿಪರ್"

ಈ ಹದಿನೆಂಟು ವರ್ಣನೆಗಳನ್ನು ಸಂಪ್ರದಾಯ ಶರಣರಾದ ಕವಿಗಳು ತಪ್ಪದೆ ಉಳಿಸಿಕೊಂಡು ಬಂದಿದ್ದಾರೆ. ಇವು ಇಲ್ಲದ ಕಾವ್ಯಗಳು ಕಾವ್ಯಗಳೇ ಅಲ್ಲ ಎಂಬುದು ಅಂದಿನ ಮಂದಿಯ ಮನೀಷಿಗಳ ಅಭಿಮತವಾಗಿತ್ತು. ಅಂದಿನ ಕಾವ್ಯಗಳು ಎಷ್ಟರಮಟ್ಟಿಗೆ ಸಂಸ್ಕೃತ ಭೂಯಿಷ್ಠವಾಗಿರುತ್ತಿದ್ದುವು ಎಂಬುದಕ್ಕೆ ಒಂದು ಉದಾಹರಣೆಯನ್ನು ನೋಡಬಹುದು:

"ಗಂಭೀರಸ್ಫಾರವೇಳಾಬಹಳಪರಿವೃತೋಲ್ಲೋಲಕಲ್ಲೋಲಮಾಲಾ
ರಂಭ ಪ್ರೋಡ್ಡೀನಫೇನ ಪ್ರಬಳಜಲಚರೋಲ್ಲುಂಠಪಾಠೀನ ಶುಂಭ
ತ್ಕುಂಭೀರಾಭೀಳನಕ್ರಪ್ರಕರಕಮಠನೀರೇಭರತ್ನಪ್ರವಾಳೋ
ಜ್ಜೃಂಭತ್ಪ್ರೋದ್ಭಾಸಿವೀಚೀನಿಚಯಘನಘನಾರಾವರೌದ್ರಂಸಮುದ್ರಂ ॥"

ಇದು ಸಮುದ್ರದ ವರ್ಣನೆ. ಕನ್ನಡ ಕಾವ್ಯದಲ್ಲಿ ಬಂದಿರುವ ಸಮುದ್ರದ ವರ್ಣನೆ.

ಹನ್ನೊಂದನೆಯ ಶತಮಾನದ ಕೊನೆ ಮತ್ತು ಹನ್ನೆರಡನೆಯ ಶತಮಾನದ ಆದಿಯಲ್ಲಿ ಸಂಪ್ರದಾಯಕ್ಕೆ ಪ್ರತಿಭಟನೆಯುಂಟಾಯಿತು. ಬ್ರಹ್ಮಶಿವ, ನಯಸೇನ, ವೃತ್ತವಿಲಾಸ ಇವರು ಪ್ರಾಚೀನ ಸಂಪ್ರದಾಯದಿಂದ ಹೊರಚ್ಚಾಗಿ ನಿಂತರು. ಅನ್ಯಮತವಿಡಂಬನೆಯಲ್ಲಿ ತೊಡಗಿದರು. ಇವರ ಕಾಲಕ್ಕಾಗಲೇ ಕನ್ನಡಕಾವ್ಯಗಳಲ್ಲಿ ಕನ್ನಡ ಸಂಸ್ಕೃತ ಪದಗಳ ಕಲಬೆರಕೆಯುಂಟಾಗಿತ್ತು. ಆದ್ದರಿಂದಲೇ ನಯಸೇನ:

"ಪೊಸಗನ್ನಡದಿಂ ವ್ಯಾವ
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ
ತಿಸಿ ಕೂಡಲಾರದಕ್ಕಟ
ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ॥"

"ಸಕ್ಕದಮಂ ಪೇಳ್ವೊಡೆ ನೆರೆ
ಸಕ್ಕದಮಂ ಪೇಳ್ಗೆ ಸುದ್ದಗನ್ನಡದೊಳ್ ತಂ ।
ದಿಕ್ಕುವುದೇ ಸಕ್ಕದಮಂ
ತುಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ ॥"

ಈ ರೀತಿ ಪ್ರಶ್ನಿಸಿದ್ದಾನೆ.

ಇದಾದ ಮೇಲೆ ಹನ್ನೆರಡನೆಯ ಶತಮಾನದಲ್ಲಿ ಈ ಸಂಪ್ರದಾಯಕ್ಕೆ ಪ್ರಬಲವಾದ ಪ್ರತಿಭಟನೆಯುಂಟಾಗಿ ಅದು ಒಂದು ಹೊಸ ಹಾದಿಯನ್ನೇ ಹಿಡಿಯಿತು. ಇದಕ್ಕೆ ಅಂದಿನ ರಾಜಕೀಯ, ಸಾಮಾಜಿಕ, ಧಾರ್ಮಿಕ ಸ್ಥಿತಿಗತಿಗಳೇ ಕಾರಣವಾಗಿದ್ದುವು. ಹಿಂದಿನ ವ್ಯಾಕರಣ ಛಂದಸ್ಸುಗಳ ನಿಯಮಗಳು ಸಡಿಲವಾದುವು. ಇದರ ಫಲವಾಗಿ ಅನೇಕ ವಚನಕಾರರು ಸುಲಭವಾದ ಸರಳವಾದ ಶೈಲಿಯಲ್ಲಿ ವಚನಗಳನ್ನು ರಚಿಸಿದರು. ಜನಸಾಮಾನ್ಯಕ್ಕೆ ಈ ವಚನ ಸಾಹಿತ್ಯ ಸುಲಭವಾಗಿ ಅರ್ಥವಾಗುವಂತಾಯಿತು. ಉದಾಹರಣೆಗೆ ವಚನಕಾರರಲ್ಲಿ ಅಗ್ರೇಶ್ವರನಾದ ಬಸವೇಶ್ವರನ ಒಂದು ವಚನ ನೋಡಬಹುದು.

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ,
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ,
ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ;
ಇದೇ ಕೂಡಲ ಸಂಗಮದೇವನೊಲಿಸುವ ಪರಿ."

ಗಂಡಸರ ಮಾತಂತಿರಲಿ ಹೆಂಗಸರೂ ಕೂಡ ವಚನಗಳನ್ನು ರಚಿಸಿದುದು ಅಂದಿನ ಒಂದು ವೈಶಿಷ್ಟ್ಯ. ಈ ಸುಮಾರಿಗೆ ಹುಟ್ಟಿಕೊಂಡ ಮತ್ತೊಬ್ಬ ಭಕ್ತಕವಿ ಹರಿಹರ ಕನ್ನಡ ಸಾಹಿತ್ಯದಲ್ಲಿ ಒಂದು ಕ್ರಾಂತಿಯನ್ನೇ ಮಾಡಿದನು. ಭಾಷೆ, ವಿಷಯ, ಛಂದಸ್ಸು ಇವುಗಳಲ್ಲಿ ಒಂದು ಹೊಸಮಾರ್ಗವನ್ನೇ ತೆರೆದನು. "ರಗಳೆ" ಛಂದಸ್ಸಿನಲ್ಲಿ ತನ್ನ ಕಾವ್ಯಗಳನ್ನು ಬರೆದು "ರಗಳೆಯ ಕವಿ" ಎಂಬ ಬಿರುದನ್ನು ಪಡೆದನು. ಅಲ್ಲದೆ ಹಿಂದಿನಿಂದ ಬಂದಿದ್ದ ಱಳಕುಳಕ್ಷಳಗಳನ್ನು ಪ್ರಾಸಸ್ಥಾನದಲ್ಲಿ ನೋಡಬೇಡ ಎಂದು ಘಂಟಾಘೋಷವಾಗಿ ಸಾರಿದನು.

"ನೋಡುವೊಡೊಂದಕ್ಕರಮದು
ಮಾಡುವೊಡುಚ್ಚರಣೆಗರಿದು ಮೂಱುಂ ತೆಱನಂ ।
ಕೂಡೆ ಕವಿತತಿ ವಿಚಾರಿಸ
ಬೇಡದಱಿಂ ಱಱಕುಳಕ್ಷಳಂಗಳನಿದಱೊಳ್ ॥"

ಜೈನಕವಿಗಳು ಸಾಮಾನ್ಯವಾಗಿ ತಮ್ಮ ಮತಪ್ರಚಾರಕ್ಕಾಗಿ, ಆಶ್ರಯದಾತ ಪ್ರಭುವಿನ ಪ್ರಶಂಸೆಗಾಗಿ, ಪಂಡಿತ ಮಂಡಳಿಯ ಮೆಚ್ಚುಗೆಗಾಗಿ ತಮ್ಮ ಕಾವ್ಯಗಳನ್ನು ಬರೆಯುತ್ತಿದ್ದುದು ಸಂಪ್ರದಾಯವಾಗಿತ್ತು. ಆದರೆ ಹರಿಹರನಾದರೋ ಈ ಸಂಪ್ರದಾಯವನ್ನು ಕಿತ್ತೊಗೆದು: "ಮನುಜರ ಮೇಲೆ ಸಾವವರ ಮೇಲೆ ಕನಿಷ್ಪರ ಮೇಲೆ ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದು ಮೇಣ್ ಅನವರತಂ ಪೊಗಳ್ದು ಕೆಡಬೇಡಲೆ ಮಾನವ" ಎಂದು ಜನತೆಯನ್ನು ಎಚ್ಚರಿಸಿದ್ದಾನೆ. ಈತನಂತೆಯೇ ರಾಘವಾಂಕನೂ ಕೂಡ ತನ್ನ ಕೃತಿಗಳನ್ನೆಲ್ಲಾ ಷಟ್ಪದಿಗಳಲ್ಲೇ ರಚಿಸಿ ಸಂಪ್ರದಾಯದಲ್ಲಿ ಒಂದು ಹೊಸದಾಖಲೆಯನ್ನು ಸ್ಥಾಪಿಸಿದನು.

ಹರಿಹರ ರಾಘವಾಂಕರಾದ ಮೇಲೆ ಬಂದ ಆಂಡಯ್ಯ ಎಂಬ ಕವಿ ತನ್ನ 'ಕಬ್ಬಿಗರ ಕಾವ'ದಲ್ಲಿ ಸಂಸ್ಕೃತ ಶಬ್ದಗಳನ್ನೇ ಬಳಸುವುದಿಲ್ಲವೆಂದು ಪ್ರತಿಜ್ಞೆ ಮಾಡಿ ದೇಶ್ಯ ತದ್ಭವ ಶಬ್ದಗಳಿಂದಲೇ ತನ್ನ ಕಾವ್ಯವನ್ನು ರಚಿಸಿದನು. ಆ ತರುವಾಯ ಬಂದ ಕವಿಗಳಲ್ಲಿ ಕುಮಾರವ್ಯಾಸ, ಲಕ್ಷ್ಮೀಶ ಮೊದಲಾದವರು ತಮ್ಮ ಕಾವ್ಯಗಳಲ್ಲಿ ದೇಶ್ಯ ಶಬ್ದಗಳ ಜೊತೆಗೆ ಅನ್ಯದೇಶ್ಯ ಶಬ್ದಗಳನ್ನೂ ವಿಪುಲವಾಗಿ ಬಳಸಿದರು. ಲಕ್ಷ್ಮೀಶನಾದರೋ ತನ್ನ ಕಾವ್ಯದ ಬಗ್ಗೆ "ವಿನೂತನ ಕವಿತೆಯೆಂದು ಕುಂದಿಟ್ಟು ಜರೆದೊಡೆ ಪೇಳ್ದವನೊಳಾವುದೂಣೆಯಂ" ಎಂದು ಪ್ರಶ್ನಿಸಿದ್ದಾನೆ. ಇವರಾದ ಮೇಲೆ ಬಂದ ರತ್ನಾಕರವರ್ಣಿ, ಗೋವಿಂದವೈದ್ಯ ಮೊದಲಾದ ಸಾಂಗತ್ಯಕಾರರು ತಮ್ಮ ದೇಶೀಯತನವನ್ನು ಉಳಿಸಿಕೊಂಡು ಬಂದರು.

ಹದಿನಾರು ಹದಿನೇಳನೆಯ ಶತಮಾನಗಳಲ್ಲಿ ದಾಸಪಂಥ ತಲೆಯೆತ್ತಿ ಪ್ರಾಚೀನ ಸಂಪ್ರದಾಯ ಮಾರ್ಗವನ್ನೇ ಬದಿಗೊತ್ತಿತ್ತು ವೇದಾಗಮ ಪುರಾಣಗಳಲ್ಲಿ ಅಡಗಿದ್ದ ಗಹನಗೂಢ ತತ್ತ್ವಗಳನ್ನು ದಾಸರು ತಮ್ಮ ಕೀರ್ತನೆ, ಪದ, ಸುಳಾದಿ, ಹಾಡುಗಳ ಮೂಲಕ ಕರ್ಣಾಟಕದ ಮನೆಮನೆಗೆ ತಲುಪಿದರು. ಕರ್ಣಾಟಕ ಸಂಗೀತ ಪರಂಪರೆಗೆ ಸ್ಥಿರವಾದ ಬುನಾದಿಯನ್ನು ಹಾಕಿದರು. ಇವರಲ್ಲಿ ಪುರಂದರದಾಸ, ಕನಕದಾಸರು ಸುಪ್ರಸಿದ್ಧರು.

ಈ ಮಧ್ಯೆ ಹದಿನಾರನೆಯ ಶತಮಾನದಲ್ಲಿ ಚಂಪೂಮಾರ್ಗ ಮತ್ತೊಮ್ಮೆ ಪ್ರಾಚುರ್ಯಕ್ಕೆ ಬಂದಿತು. ಈ ಶತಮಾನದ ಧೀಮಂತ ಕವಿ ಷಡಕ್ಷರದೇವ ತನ್ನ ಕೃತಿಗಳನ್ನು ಸಂಸ್ಕೃತ ಭೂಯಿಷ್ಠವಾದ ಪ್ರೌಢಚಂಪೂಶೈಲಿಯಲ್ಲಿ ರಚಿಸಿದನು. ಈತನ ಪ್ರೌಢಶೈಲಿಗೆ ರಾಜಶೇಖರವಿಳಾಸದ ಒಂದು ಪದ್ಯವನ್ನು ನೋಡಬಹುದು.

ಅಂಭಃಕುಂಭೀನಕುಂಭೀನಸಮಕರಮಹಾಕೂರ್ಮಕೀರ್ಣೋರ್ಮಿಮಾಲಾ
ಜೃಂಭದ್ದಂಭೋಳಿ ಹಸ್ತೌಹತ ಚಕಿತಗತಕ್ಷ್ಮಾದ್ರವಿಸ್ಫಾರ ವಿದ್ಯು-
ತ್ಸಂಭಿನ್ನಾಂಭೋಭ್ಯುದುದ್ಯತ್ತಟಚಟುಳಚಳನ್ಮೀನ ಫೇನ ಪ್ರತಾನಂ
ಶುಂಭದ್ಗಂಭೀರಿಮಂ ರಂಜಿಸಿದುದಮಮದತ್ತೇಂದ್ರಭದ್ರಂ ಸಮುದ್ರಂ

ಇದು ಸಮುದ್ರ ವರ್ಣನೆ. ಇಲ್ಲಿ ಸಮುದ್ರ ಎಂಬುದನ್ನು ಬಿಟ್ಟು ಸುಲಭವಾಗಿ ಮತ್ತೇನೂ ಅರ್ಥವಾಗುವಂತೆಯೇ ಇಲ್ಲ.

ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನಗಳಲ್ಲಿ ಇಂಗ್ಲಿಷ್ ಸಾಹಿತ್ಯದ ಪರಿಚಯ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ಒಂದು ಹೊಸದೃಷ್ಟಿಯುಂಟಾಗಿ ಹೊಸಹಾದಿ ನಿರ್ಮಾಣವಾಯಿತು. ಪ್ರಾಚೀನಸಂಪ್ರದಾಯ ಕೊನೆಗೊಂಡಿತು. ನೂತನಸಂಪ್ರದಾಯ ಅಸ್ತಿತ್ವಕ್ಕೆ ಬಂದಿತು.

ಕನ್ನಡ ಕಾವ್ಯಗಳಿಗೆ ಪ್ರಾಸ ಅನಿವಾರ್ಯವಾದ ಅಪರಿಹಾರ್ಯವಾದ ಅಂಗ. ಪ್ರಾಸವಿಲ್ಲದ ಕಾವ್ಯ ಕಾವ್ಯವೇ ಅಲ್ಲ. ಅದನ್ನು ಬರೆದವನು ಕವಿಯೇ ಅಲ್ಲ ಎಂಬ ಅಭಿಪ್ರಾಯ ಪ್ರಾಚೀನರಲ್ಲಿ ಬೇರೂರಿತ್ತು. "ಪ್ರಾಸವಿಲ್ಲದ ಹಾಡು ತಾಸು

ಹಾಡಿದರೇನು?" ಎಂದು ದಾಸರು ಕೂಡ ಮೂಗುಮುರಿದಿದ್ದಾರೆ. ಇದಕ್ಕೆ ಪ್ರತಿಭಟನೆಯೋ ಎನ್ನುವಂತೆ "ಪ್ರಾಸಕ್ಕೆ ದಾಸರಾಗಿ ಭಾವಕ್ಕೆ ಸಾವು ತಂದರು" ಎಂಬ ಹೊಸಪಂಥ ಹುಟ್ಟಿಕೊಂಡಿತು. ಈ ಪ್ರಾಸ ನಿಯಮವನ್ನು ಉಲ್ಲಂಘಿಸಿದ ಆಧುನಿಕರಲ್ಲಿ ಶ್ರೀ ಗೋವಿಂದ ಪೈಗಳವರೇ ಮೊದಲಿಗರು. ಅವರು ಪ್ರಾಸದ ಬಗ್ಗೆ "ಕನ್ನಡಕ್ಕೆ ಪ್ರಾಸವೇನೂ ವೇದವಾಕ್ಯವೂ ಅಲ್ಲ, ಶಾಶ್ವತವೂ ಅಲ್ಲ. ಅದನ್ನು ಬೇಕಾದಂತೆ ಬೇಕಾದಾಗ ಬಿಟ್ಟುಬಿಡಬಹುದು. ಆತ ಏವ ಕಾಲಕ್ಕೆ ತಕ್ಕಂತೆ ರಚನೆಯನ್ನೇ ಅಲ್ಲ ಛಂದಸ್ಸನ್ನೂ ಕೂಡ ತನಗೆ ಬೇಕಾದಂತೆ ಮಾರ್ಪಡಿಸಿಯೂ ನೇರ್ಪಡಿಸಿಯೂಕೊಳ್ಳಲಿಕ್ಕೆ ಕವಿಗೆ ಅಧಿಕಾರವಿದೆ. ಬೇಕಾದವರು ಈ ಹೊಸಹಾದಿ ಹಿಡಿಯಲಿ. ಬೇಡದವರು ಹಳೆಯ ಹಾದಿಯಲ್ಲಿಯೇ ನಡೆಯಲಿ. ಮತ್ತು ಇಂದು ಒಬ್ಬನೇ ನಡೆವ ಮೇಕೆದಾರಿಯೇ ಮುಂದೆ ತೇರು ಎಳೆವ ಹೆದ್ದಾರಿ" ಎಂದು ಒಂದು ಕಡೆ ಹೇಳಿದ್ದಾರೆ.

ಶತಮಾನಗಳ ಸಂಪ್ರದಾಯವನ್ನು ಹಳೆಯತನವನ್ನು ಕಿತ್ತೊಗೆಯಲು ಕನ್ನಡದ ಅಂತರಂಗದಲ್ಲಿಯೂ ಪ್ರತಿಭಟನೆ ಕ್ರಾಂತಿ ನಡೆಯುತ್ತಲೇ ಇತ್ತು. ಈ ದಿಸೆಯಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಹೊಸ ವಿಕ್ರಮವನ್ನು ಸ್ಥಾಪಿಸಿದವರು ದಿವಂಗತ ಬಿ.ಎಂ. ಶ್ರೀಕಂಠಯ್ಯನವರು. ಅವರ ಇಂಗ್ಲಿಷ್ ಗೀತೆಗಳು ಆಧುನಿಕ ಕನ್ನಡ ಕಾವ್ಯ ಪ್ರಪಂಚಕ್ಕೆ ಹೊಸದೊಂದು ಹೆದ್ದಾರಿಯನ್ನು ನಿರ್ಮಿಸಿತು.

ಕನ್ನಡ ಕಾವ್ಯಪ್ರಪಂಚದಲ್ಲಿ ಹೊಸಮಾರ್ಗವು ತೆರೆದು ಸುಮಾರು ಅರ್ಧಶತಮಾನವಾಯಿತು. ಭಾಷೆ, ವಿಷಯ, ಛಂದಸ್ಸು ಇವುಗಳ ಪರಿವರ್ತನೆ ಕನ್ನಡಿಗರಿಗೆ ಒಗ್ಗಬೇಕಾದರೆ ಸಹಜವಾಗಿ ಕೆಲಕಾಲ ಕಳೆಯಬೇಕಾಗುತ್ತದೆ. "ಕಾವ್ಯರಮಣಿ ಪಾಂಡಿತ್ಯದ ಸಿಂಹಾಸನದಿಂದ ಇಳಿದು ಜನಮಧ್ಯದಲ್ಲಿ ವಿಹರಿಸಬೇಕಾದರೆ ಆಕೆ ಹೊಸಗನ್ನಡದ ಉಡುಗೆಯನ್ನೇ ಧರಿಸಬೇಕು. ಹೊಸಗನ್ನಡದಲ್ಲಿ ಕ್ಲಿಷ್ಟವಾದ ಸಂಸ್ಕೃತ ಪದಗಳಿಗೂ ಆಡಂಬರದ ಸಮಾಸಗಳಿಗೂ ಅವಕಾಶವಿಲ್ಲ. ಲೋಕದಲ್ಲಿ ಪರಮಪ್ರಿಯವಾದ ವಸ್ತುಗಳು ಕೂಡ ತಮ್ಮ ಕಾಲ ಕಳೆದ ಮೇಲೆ ಗತಿಸಲೇಬೇಕು" ಎಂಬ ಆಚಾರ್ಯ ತೀನಂಶ್ರೀ ಅವರು ನುಡಿ ಯಥಾರ್ಥವಾದುದು.

ಕಾಲಕ್ರಮದಲ್ಲಿ ಪ್ರಾಚೀನ ಸಂಪ್ರದಾಯ ಹೊಸಪ್ರತಿಭಟನೆಗೆ ಎಡೆಮಾಡಿಕೊಟ್ಟಿತು. ಹಳತು ಹೊಸದಕ್ಕೆ ನಾಂದಿಯಾಯಿತು. ಇದರಿಂದ ಕನ್ನಡ ಸಾಹಿತ್ಯ ಸರ್ವಾಂಗ ಪರಿಪೂರ್ಣವಾಯಿತು; ಈ ಪರಿವರ್ತನೆ ಕಾಲದೃಷ್ಟಿಯಿಂದ ಅನಿವಾರ್ಯವಾಯಿತು. ಇದು ಸೃಷ್ಟಿಯ ನಿಯಮ ಎನ್ನಬಹುದು.

**(ಆಕಾಶವಾಣಿ ಕೃಪೆಯಿಂದ)**



# ‘ಮಾಣಿಕ್ಯ ದೀಪ್ತಿ’
# ಪ್ರೊ. ಬಿ.ಎಂ. ಹಿರೇಮಠ

**ಪ್ರೊ.** ಬಿ.ಎಂ. ಹಿರೇಮಠ ಅವರು ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳದ ಶ್ರೀಮತಿ ಗಂಗಮ್ಮ ವೀರಪ್ಪ ಸಿನಿವಾರ ಮಹಾವಿದ್ಯಾಲಯದಲ್ಲಿ ಸುಮಾರು ಮೂವತ್ತು ವರ್ಷಗಳಿಂದ ಕನ್ನಡ ಪ್ರಾಧ್ಯಾಪಕರಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಶ್ರೀಯುತರು ತಮ್ಮ ದೀರ್ಘಾವಧಿಯ ವ್ಯಾಸಂಗದ ಫಲವಾಗಿ “ಮಾಣಿಕ್ಯದೀಪ್ತಿ” ಎಂಬ ಹೆಸರಿನಿಂದ ೯೬೩ ವಚನಗಳನ್ನು ಬರೆದಿದ್ದಾರೆ. ಇವರು ನಿಬ್ಬೆರಗು, ಘನಮಹಿಮ ಘನಮಠ ಶಿವಯೋಗಿ, ಸಜ್ಜಲಗುಡ್ಡದ ಶರಣಮ್ಮ ಎಂಬ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯಲೋಕದಲ್ಲಿ ಚಿರಪರಿಚಿತರಾಗಿದ್ದಾರೆ.

ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ನಡೆದ ವಚನಕ್ರಾಂತಿ ಇತಿಹಾಸದಲ್ಲಿ ಒಂದು ದಾಖಲೆಯನ್ನು ಸ್ಥಾಪಿಸಿದೆ. ಜಗಜ್ಯೋತಿ ಬಸವೇಶ್ವರರ ನೇತೃತ್ವದಲ್ಲಿ ನಡೆದ ಈ ಚಳವಳಿಯಲ್ಲಿ ಅಸಂಖ್ಯಾತ ಶರಣರು ತಮ್ಮ ಅನುಭವಗಳನ್ನು ವಚನಗಳ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ. ಬಡವ–ಬಲ್ಲಿದರೆನ್ನದೆ ಉಚ್ಚನೀಚ ಎಂಬ ಭೇದಭಾವವಿಲ್ಲದೆ ಅಂದಿನ ಶರಣರೆಲ್ಲರೂ ಅನುಭವ ಮಂಟಪದ ಪ್ರಭಾವಲಯದಲ್ಲಿ ತಮ್ಮ ಸಾಧನೆ ಸಿದ್ಧಿಗಳನ್ನು ಪಡೆದುಕೊಂಡಿದ್ದಾರೆ. ತಾವು ಕಂಡುಂಡ ಅನುಭವಗಳನ್ನು ಅಚ್ಚಕನ್ನಡದಲ್ಲಿ ವಚನಗಳ ರೂಪದಲ್ಲಿ ಹೊರಗೆಡವಿದ್ದಾರೆ. ಅಂದು ಪ್ರಾರಂಭವಾದ ವಚನರಚನಾಕಾರ್ಯ ಅವ್ಯಾಹತವಾಗಿ ನಿರಂತರವಾಗಿ ನಡೆದುಕೊಂಡು ಬಂದಿದೆ.

ಹನ್ನೆರಡನೆಯ ಶತಮಾನದ ವಚನ ಸಾಹಿತ್ಯ ಮೊದಲನೆಯ ಘಟ್ಟದ್ದಾದರೆ ಹದಿನೈದನೆಯ ಶತಮಾನದ ವಚನ ಸಾಹಿತ್ಯ ಎರಡನೆಯ ಘಟ್ಟದ್ದು. ಮೂರನೆಯ ಘಟ್ಟ ಇಪ್ಪತ್ತನೆಯ ಶತಮಾನದ್ದು. ಅಂದಿನಿಂದ ಇಂದಿನವರೆಗೆ ಜೀವಂತವಾಗಿರುವ ವಚನ ಸಾಹಿತ್ಯಕ್ಕೆ ಆಧುನಿಕ ವಚನಕಾರರೂ ಸೇರ್ಪಡೆಯಾಗುತ್ತಾರೆ. ಈ ಆಧುನಿಕ ವಚನಕಾರರೆಲ್ಲ ಬಸವಾದಿ ಪ್ರಮಥರ ಮಾರ್ಗದಲ್ಲೇ ಕ್ರಮಿಸಿರುವುದನ್ನು ಕಾಣಬಹುದಾಗಿದೆ. ಪ್ರೊ. ಎಸ್.ವಿ. ಪರಮೇಶ್ವರಭಟ್ಟ, ಜೀರಿಗೆಕಟ್ಟೆ ಬಸಪ್ಪ, ಡಾ. ಸಿದ್ಧಯ್ಯ ಪುರಾಣಿಕ, ಶ್ರೀ ಮಹದೇವ ಬಣಕಾರ, ಟಿ.ಎನ್. ಮಹದೇವಯ್ಯ, ಅನ್ನದಾನಯ್ಯ ಪುರಾಣಿಕ, ಡಾ. ಸಿ.ಪಿ. ಕೃಷ್ಣಕುಮಾರ –ಇವರೇ ಮೊದಲಾದವರು ಈ ಕ್ಷೇತ್ರದಲ್ಲಿ ಗಣನೀಯವಾದ ಕಾರ್ಯವನ್ನು ಮಾಡಿದ್ದಾರೆ. ಆಧುನಿಕ ವಚನಕಾರರು ಆಧ್ಯಾತ್ಮಿಕದ ಜೊತೆಗೆ ಲೋಕಾನುಭವಗಳನ್ನೂ ಪ್ರಸ್ತುತ ವಿದ್ಯಮಾನಗಳನ್ನೂ ತಮ್ಮ ವಚನಗಳಲ್ಲಿ ನಿರೂಪಿಸಿದ್ದಾರೆ. ಪ್ರೊ. ಬಿ.ಎಂ. ಹಿರೇಮಠ ಅವರೂ ಈ ಪರಂಪರೆಗೆ ಸೇರ್ಪಡೆಯಾಗುತ್ತಾರೆ.

ಆಧುನಿಕ ವಚನಕಾರರಿಗೆ ಸ್ಫೂರ್ತಿ ಮತ್ತು ಪ್ರೇರಣೆ ನೀಡಿದವರು ಪ್ರಾಚೀನ ವಚನಕಾರರು ಎಂಬುದು ನಿರ್ವಿವಾದವಾದುದು. ಅನೇಕ ಪ್ರಾಚೀನ ವಚನಕಾರರ ಅನುಭವ ಅನುಭಾವಗಳನ್ನು ವಸ್ತುವಿಷಯಗಳನ್ನು ಯಥಾವತ್ತಾಗಿ ಆಧುನಿಕ ವಚನಕಾರರು ತಮ್ಮ ವಚನಗಳಲ್ಲಿ ಪಡಿಮೂಡಿಸಿರುವುದನ್ನು ಕಾಣಬಹುದಾಗಿದೆ. ಪ್ರೊ. ಬಿ.ಎಂ. ಹಿರೇಮಠ ಅವರ ವಚನಗಳಲ್ಲೂ ಪ್ರಾಚೀನ ವಚನಕಾರರ ಪ್ರಭಾವ ದಟ್ಟವಾಗಿ ಕವಿದಿರುವುದನ್ನು ಕಾಣಬಹುದಾಗಿದೆ.

ಪ್ರಸ್ತುತ "ಮಾಣಿಕ್ಯದೀಪ್ತಿ"ಯಲ್ಲಿನ ಅನೇಕ ವಚನಗಳು ಪ್ರಾಚೀನ ವಚನಗಳ ಪಡಿನೆರಳೋ ಎಂಬಂತಿವೆ. ಈ ಸಂಕಲನದ:

"ಆದಿ ಅನಾದಿ ಇಲ್ಲದಂದು, ಧರೆ ಆಕಾಶ ಇಲ್ಲದಂದು" (ವಚನ ೨)

"ಆದಿ ಅನಾದಿಗಳಿಂದಾಚೆ, ಆಕಾಶ ಪಾತಾಳಗಳಿಂದಾಚೆ" (ವಚನ ೮)

ಈ ವಚನಗಳು ಇದೇ ರೀತಿ ಪ್ರಾರಂಭವಾಗುವ ಮಡಿವಾಳ ಮಾಚಯ್ಯವರ ವಚನಗಳನ್ನು:

"ಮನೆ ದೊಡ್ಡದಾದರೇನು, ಮನದೊಡ್ಡದಾಗನ್ನಕ್ಕ" (ವಚನ ೨೨)

"ನಾಳೆ ಮಾಡುವ ಕಾರ್ಯವನು, ಇಂದೆ ಮಾಡಿದರೆ ಒಳ್ಳೆಯದಯ್ಯ" (ವಚನ ೧೩೦)

ಈ ವಚನಗಳು ಬಸವಣ್ಣನವರ ವಚನಗಳನ್ನೂ ಆಧರಿಸಿದಂತಿವೆ. ಪ್ರೊ. ಬಿ.ಎಂ. ಹಿರೇಮಠ ಅವರು ಪ್ರಾಚೀನ ವಚನ ಸಾಹಿತ್ಯವನ್ನು ಆಳವಾಗಿ ಅಭ್ಯಸಿಸಿರುವುದರಿಂದ ಆ ವಚನಗಳ ಪದ, ಪದಪುಂಜ, ವಾಕ್ಯಗಳು ಅವರ ಅರಿವಿಲ್ಲದಂತೆಯೇ ಅವರ ವಚನಗಳಲ್ಲಿ ಸೇರಿಹೋಗಿವೆ.

ವಚನಗಳನ್ನು ಪ್ರಸ್ತುತ ವಿದ್ಯಮಾನಗಳಿಗೆ ಸಮೀಕರಿಸಿರುವುದು "ಮಾಣಿಕ್ಯದೀಪ್ತಿ"ಯ ವೈಶಿಷ್ಟ್ಯವಾಗಿದೆ. ಧಾರ್ಮಿಕ, ಲೌಕಿಕ, ಶೈಕ್ಷಣಿಕ, ರಾಜಕೀಯ ಇವೇ ಮೊದಲಾದ ಪ್ರಸ್ತುತ ವಿದ್ಯಮಾನಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುವುದು, ದೇಶದಲ್ಲಿ ಇಂದು ತಾಂಡವವಾಡುತ್ತಿರುವ ಅನಾಚಾರ, ಅತ್ಯಾಚಾರ, ಭ್ರಷ್ಟಾಚಾರಗಳನ್ನು ದಿಟ್ಟತನದಿಂದ ಬಯಲಿಗೆಳೆದಿರುವುದು. ಲೌಕಿಕ ಲಾಭಲೋಭಗಳಿಗೆ ಮರುಳಾಗಿರುವ ಮಾನವ ಪಾರಮಾರ್ಥಿಕದತ್ತ ನಿರ್ಲಕ್ಷ್ಯನಾಗಿರುವುದನ್ನು ಕಂಡು ಪರಿತಪಿಸಿರುವುದು! ದೃಷ್ಟಾಂತಕ್ಕಾಗಿ ಕೆಲವು ವಚನಗಳನ್ನು ನೋಡಬಹುದು:

ಕೆಲವರು ಕಾವಿಕಾಷಾಯ ಧರಿಸಿ । ಕಳ್ಳತನ ಕೈಗೊಂಡಿರುವರಯ್ಯ
ಹಲವರು ಖಾದಿ ವೇಷಹಾಕಿ । ಖದೀಮ ವೃತ್ತಿಯಲಿ ತೊಡಗಿರುವರಯ್ಯ
ಅನೇಕರು ಖಾಕಿ ಬಟ್ಟೆಯನ್ನುಟ್ಟು । ಕಪಟಕಾರ್ಯಕ್ಕಿಳಿದಿರುವರಯ್ಯ
ರಕ್ಷಣೆಯ ಈ ಲಾಂಛನಗಳಲ್ಲಿ ಇಂತಹ
ಕಾಯಕ ನಡೆದರೆ ಯಾರನ್ನು ನಂಬುವುದಯ್ಯ ಗುರುದೊಡ್ಡಬಸವ ॥ (ವಚನ ೧೯)

ಸಮಾಜರಕ್ಷಕರೇ ಭಕ್ಷಕರಾದರೆ ನಂಬುವುದಾದರೂ ಯಾರನ್ನು ಎಂದು ಪ್ರಶ್ನಿಸಿದ್ದಾರೆ. ಇದೇ ವಿಷಯವನ್ನು ೫೬ನೆಯ ವಚನದಲ್ಲಿ ಮತ್ತಷ್ಟು ಸ್ಪಷ್ಟಪಡಿಸಲಾಗಿದೆ.

ರಾಜಕೀಯದ ಕಟುಸತ್ಯವನ್ನು ನಿರೂಪಿಸುವ:

ಹರ ಮುನಿದರೂ ಜೀವಿಸಬಹುದು । ಗುರು ಮುನಿದರೂ ಬದುಕಬಹುದು
ರಾಜಕಾರಣಿ ಮುನಿದರೆ ನಿಮಿಷವೂ
ಬದುಕಲಸಾಧ್ಯ ಇಂದಿನದಿನಗಳಲ್ಲಿ ಗುರುದೊಡ್ಡಬಸವ ॥ (ವಚನ ೨೬)

ಈ ವಚನ ಅತ್ಯಂತ ಪ್ರಸ್ತುತವಾಗಿದೆ. ಇಂದಿನ ಪರಿಸ್ಥಿತಿಗೆ ಹಿಡಿದ ಕೈಗನ್ನಡಿಯಾಗಿದೆ.

ದೇವನೊಬ್ಬ ನಾಮ ಹಲವು ಎಂಬ ತತ್ವವನ್ನು ಪ್ರತಿಪಾದಿಸುವ ನಮ್ಮ ದೇಶದ ಇಂದಿನ ಜ್ವಲಂತ ಧಾರ್ಮಿಕ ಸಮಸ್ಯೆಗಳನ್ನು ವಿಶ್ಲೇಷಿಸುವ ಈ ವಚನ ಈ ಎಲ್ಲ ವಿದ್ಯಮಾನಗಳ ಒಂದು ನೈಜಚಿತ್ರವನ್ನು ನೀಡುತ್ತದೆ.

ಮಂದಿರ ಕೆಡವಿ ಮಸೀದಿ ಕಟ್ಟುವಾಗ । ರಹೀಮ ದರ್ಶನ ನೀಡಿದನೇನಯ್ಯ
ಮಸೀದಿ ಕೆಡವಿ ಮಂದಿರ ಕಟ್ಟುವಾಗ । ರಾಮದರ್ಶನ ನೀಡಿದನೇನಯ್ಯ
ಚರ್ಚುಗಳಲಿ ಬಾಂಬು ಸ್ಫೋಟಿಸಿದಾಗ । ಏಸುಸ್ವಾಮಿ ಸತ್ತುಹೋದನೇನಯ್ಯ
ಮಂದಿರ ಮಸೀದಿ ಚರ್ಚುಗಳಿಗೆ ಹೊಡೆದಾಡಿ

ಸಮಾಜದ ಸ್ವಾಸ್ಥ ಕೆಡಿಸುವ ಕೇಡಿಗರು
ನಿಮ್ಮನೆತ್ತ ಬಲ್ಲರು ಗುರುದೊಡ್ಡಬಸವ (ವಚನ ೪೫)

ಸ್ವಾತಂತ್ರ್ಯಾನಂತರ ದೇಶದಲ್ಲಿ ನಡೆಯುತ್ತಿರುವ ಚುನಾವಣೆಗಳ ವಿಧಿವಿಧಾನಗಳನ್ನೂ ರೀತಿನೀತಿಗಳನ್ನೂ ಅತ್ಯಂತ ಸಮರ್ಪಕವಾಗಿ ಸತ್ಯಸ್ಯಸತ್ಯವಾಗಿ ನಿರೂಪಿಸುವ ವಚನ ಇಂತಿದೆ:

ಮಹಾಚುನಾವಣೆ ಹಣಾಹಣಿ । ನಿಂತವರ ಖಣಿಪಿಣಿ
ಹಣವಿದ್ದರೆ ಜನ । ಜನವಿದ್ದರೆ ಬಲ
ಬಲವಿದ್ದರೆ ಹೋರಾಟ । ಹೋರಾಟವಿದ್ದರೆ ಓಟು
ಮದ್ಯಮಾಂಸ ಪಾರ್ಟಿ ಚಲ್ಲಾಟ । ಮೋಸ ವಂಚನೆ ಗೂಂಡಾಗಿರಿ
ಹೆಚ್ಚಿದಷ್ಟು ಹೆಚ್ಚಿನ ಮತಗಳು । ಜಾತಿಬಲವಿದ್ದರೆ ಅತ್ಯಧಿಕಮತ
ಗೆಲ್ಲುವರೆ ಗಾಂಧಿತತ್ವದಲಿ ನಿಂತವರು?
ವಿಜಯಿಗಳಾಗುವರೆ ಶಾಸ್ತ್ರೀದಾರಿಯಲಿ ನಡೆದವರು?
ಜಯಸುವರೆ ಜಯಪ್ರಕಾಶರ ತತ್ವದಲಿ ಸಾಗಿದವರು?
ಜಯಸಿದರೆ ಅದು ಅಪಾಯವಯ್ಯ । ಗುರುದೊಡ್ಡಬಸವ
'ಕಿಸಕಾ ಲಾಠಿ ಉಸಕಾ ಭೈಂಸ್'
ಎಂಬುವುದು ನ್ಯಾಯವೇನಯ್ಯ (ವಚನ ೬೨)

ವೀರಶೈವಧರ್ಮದಲ್ಲಿ ಅಷ್ಟಾವರಣಗಳು ಅತ್ಯಂತ ಮಹತ್ವಪೂರಿತವಾದುವು. ಈ ಅಷ್ಟಾವರಣಗಳ ಒಂದು ಲೌಕಿಕ ವಿಶ್ಲೇಷಣೆಯನ್ನು ನೀಡುವ ವಚನ ವಿಶಿಷ್ಟವಾಗಿದೆ, ವಿನೂತನವಾಗಿದೆ:

ಅರಿವೇ ಗುರು । ಸರ್ವರ ಕಲ್ಯಾಣವೆ ಲಿಂಗ
ಕ್ರಿಯಾಶೀಲ ಸಮಾಜವೆ ಜಂಗಮ
ಸರ್ವರ ಶಾಂತಿಯೆ ಮಂತ್ರ । ಸರ್ವರ ಏಳ್ಗೆಯೆ ಪಾದೋದಕ
ಸರ್ವರ ಆನಂದವೆ ಪ್ರಸಾದ । ಸರ್ವರ ಸಮಾನತೆಯೆ ವಿಭೂತಿ
ಸರ್ವರ ಹಿತವೆ ರುದ್ರಾಕ್ಷಿ । ಈ ಅಷ್ಟಾವರಣಗಳು
ಗುರುದೊಡ್ಡಬಸವ । ಎಲ್ಲರ ಉಸಿರಾಗಿರಲಿ

ಇಂದಿನ ರೈತರ ಸ್ಥಿತಿಗತಿಗಳನ್ನೂ ಸಂಕಷ್ಟಗಳನ್ನೂ ಮನಸ್ಸಿಗೆ ನಾಟುವಂತೆ ಚಿತ್ರಿಸಿರುವ:

ರೈತ ಬಿತ್ತುವುದು ಸಾಲವನ್ನು । ಬೆಳೆಯುವುದು ಬಡ್ಡಿಯನ್ನು
ಕೊಯ್ಯುವುದು ಸಂಕಟವನ್ನು । ರಾಶಿ ಮಾಡುವುದು ನೋವನ್ನು
ಉಣ್ಣುವುದು ಸಾಲವನ್ನು
ಕಷ್ಟಜೀವಿಯ ಕರ್ಮಕತೆಯಿದು । ಗುರುದೊಡ್ಡಬಸವ (ವಚನ ೧೨೩)

ಈ ವಚನದಲ್ಲಿ ರೈತರ ದಾರುಣಸ್ಥಿತಿ ಕಣ್ಣಿಗೆ ಕಟ್ಟುವಂತಿದೆ.

ಭಾರತರಾಷ್ಟ್ರ ಜಾತ್ಯಾತೀತವೆಂದು ಸಾರಿಕೊಂಡಿದೆ. ಈ ಜಾತ್ಯಾತೀತ ದೇಶದಲ್ಲಿ ಜಾತಿ ಎಲ್ಲ ಕ್ಷೇತ್ರಗಳನ್ನೂ ಹೇಗೆ ಆವರಿಸಿಕೊಂಡಿದೆ ಎಂಬುದನ್ನು:

ನಮ್ಮದು ಜಾತ್ಯಾತೀತ ರಾಷ್ಟ್ರವಾದರು । ಜಾತಿಯದೆ ಪ್ರಾಬಲ್ಯ
ಶಾಲೆಗೆ ಹೆಸರಚ್ಚುವಾಗ ನೌಕರಿ ಪಡೆಯುವಾಗ
ಸರ್ಕಾರಿ ಅರ್ಜಿ ಕರೆಯುವಾಗ, ಜನಗಣತಿ ನಡೆಯುವಾಗ
ಹೆಣ್ಣು ಗಂಡು ಸಂಬಂಧ ಬೆಳೆಸುವಾಗ, ಸಮಾಜ ಕಟ್ಟುವಾಗ
ಓದು ಪಡೆಯುವಾಗ, ಅಧಿಕಾರ ಹಿಡಿಯುವಾಗ
ಎಲ್ಲೆಂದರಲ್ಲಿ ಜಾತಿ ಇಲ್ಲದ ಜಾಗವೆ । ಇಲ್ಲವಯ್ಯ ಗುರುದೊಡ್ಡಬಸವ ॥ (ವಚನ ೧೪೯)

ಈ ವಚನದಲ್ಲಿ ವಿಡಂಬಿಸಿದ್ದಾರೆ.

"ನುಡಿದರೆ ಮುತ್ತಿನ ಹಾರದಂತಿರಬೇಕು । ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು"

ಎಂಬ ಬಸವಣ್ಣನವರ ವಚನದ "ಮಾಣಿಕ್ಯದೀಪ್ತಿ" ಎಂಬ ಸಾರವತ್ತಾದ ಸೂಕ್ತಿಯನ್ನು ತಮ್ಮ ವಚನ ಸಂಕಲನದ ಶಿರೋನಾಮೆಯನ್ನಾಗಿ ಸ್ವೀಕರಿಸಿದ ಡಾ. ಬಿ.ಎಂ. ಹಿರೇಮಠ ಅವರು ಅದನ್ನು ಸಾರ್ಥಕಪಡಿಸಿದ್ದಾರೆ. ೧೯೩ ವಚನಗಳ ಈ ಸಂಕಲನದಲ್ಲಿ ದೇಶದ ಎಲ್ಲ ವಿದ್ಯಮಾನಗಳನ್ನೂ ಸಮಾಜದ ಎಲ್ಲ ಸಂಗತಿಗಳನ್ನೂ ಪರಿಣಾಮಕಾರಿಯಾಗಿ ಪ್ರತಿಪಾದಿಸಿದ್ದಾರೆ. ಈ ಸಂಕಲನದ ಪ್ರತಿಯೊಂದು ವಚನವೂ ಇಂದಿನ ಒಂದಲ್ಲ ಒಂದು ವಿಷಯವನ್ನು ಕುರಿತದ್ದೇ ಆದರೂ ಇವೆಲ್ಲಕ್ಕೂ ಮೂಲಕಾರಣಗಳನ್ನು ಅನ್ವೇಷಿಸುವತ್ತ ಓದುಗರ ಆಸಕ್ತಿಯನ್ನೂ ಕುತೂಹಲವನ್ನೂ ಕೆರಳಿಸುತ್ತದೆ. ಮಾನವನ ಕರ್ತವ್ಯಗಳೇನು? ಇಂದಿನ ಅನಿಷ್ಟಗಳಿಗೆ ಅನರ್ಥಗಳಿಗೆ ಕಾರಣವೇನು, ಕಾರಣರಾರು, ಇವುಗಳ ಪರಿಹಾರೋಪಾಯಗಳೇನು ಎಂದು ತಮ್ಮ ಇಷ್ಟದೈವವಾದ ಗುರುದೊಡ್ಡಬಸವರನ್ನು ಮೊರೆಹೋಗಿದ್ದಾರೆ ಈ ವಚನಕಾರರು.

ವಚನಕಾರರು ತಮ್ಮ ಇಷ್ಟದೈವವನ್ನು ತಮ್ಮ ವಚನಗಳ ಅಂಕಿತವನ್ನಾಗಿ ಬಳಸಿಕೊಂಡಿರುವುದು ಒಂದು ಸಂಪ್ರದಾಯವಾಗಿದೆ. ಪ್ರಸ್ತುತ ವಚನಕಾರರ "ಗುರುದೊಡ್ಡಬಸವ" ಅಂಕಿತದ ಹಿನ್ನೆಲೆ ಇಂತಿದೆ. ಈ ದೊಡ್ಡಬಸವಾರ್ಯರು ಹತ್ತೊಂಬತ್ತನೆಯ ಶತಮಾನದಲ್ಲಿ ಬಾಳಿ ಬೆಳಗಿದ ಮಹಾತಪಸ್ವಿಗಳು. ಬಸವಾದಿ ಪ್ರಮಥರಂತೆ ಅನ್ಯಮತಸ್ಥರಿಗೆ ಲಿಂಗದೀಕ್ಷೆಯನ್ನು ಮಾಡಿ ಅವರನ್ನು ಶರಣರನ್ನಾಗಿ ಮಾಡಿದ ಮಹಾಮಹಿಮರು. ಅನ್ಯಮತದ ಶರಣಮ್ಮನಿಗೆ ಲಿಂಗದೀಕ್ಷೆಯನ್ನು ಮಾಡಿದರು. ಆಕೆ ಮಹಾಶರಣೆಯಾಗಿ ಶಿವಯೋಗವನ್ನು ಸಾಕಾರ ಮಾಡಿಕೊಂಡು ಲೋಕೋತ್ತರವಾಗಿ ಬಾಳಿ ತನ್ನ ಬದುಕನ್ನು ಸಾರ್ಥಕಪಡಿಸಿಕೊಂಡವಳು. ಅಂತಹ ದೊಡ್ಡ ಬಸವಾರ್ಯರ ಪ್ರಭಾವಕ್ಕೆ ಮಣಿದ ಹಿರೇಮಠ ಅವರು "ಗುರುದೊಡ್ಡಬಸವ" ಎಂಬ ವಚನಾಂಕಿತವನ್ನು ಸ್ವೀಕರಿಸಿರುವುದು ಅರ್ಥಪೂರ್ಣವಾಗಿದೆ.

ಮಾನವ ಮೌಲ್ಯಗಳೆಲ್ಲ ಕುಸಿದುಬಿದ್ದು ವಿನಾಶದ ಅಂಚಿಗೆ ಸಾಗುತ್ತಿರುವ ಇಂದಿನ ಪರ್ವಕಾಲದಲ್ಲಿ 'ಮಾಣಿಕ್ಯದೀಪ್ತಿ'ಯ ವಚನಗಳು ಭಕ್ತಿಮುಕ್ತಿಪ್ರದಾಯಕವಾಗಿವೆ. ದೇಶದ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ರಾಜಕೀಯ ಮುಂತಾದ ಎಲ್ಲ ಸಂಗತಿಗಳನ್ನೂ ವಿದ್ಯಮಾನಗಳನ್ನೂ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿ ಲೌಕಿಕದಿಂದ ಪಾರಮಾರ್ಥಿಕದತ್ತ ಮನಃಪರಿವರ್ತನೆ ಮಾಡುವಲ್ಲಿ ಈ ವಚನಗಳು ಸಹಕಾರಿಯಾಗಬಲ್ಲುವು ಎಂದು ಭಾವಿಸಬಹುದಾಗಿದೆ. ಪ್ರೊ.ಬಿ.ಎಂ. ಹಿರೇಮಠ ಅವರ ದೀರ್ಘಕಾಲದ ವ್ಯಾಸಂಗದ ಫಲವಾಗಿ ಹೊರಬಂದಿರುವ "ಮಾಣಿಕ್ಯದೀಪ್ತಿ" ತನ್ನ ಸಾರ್ಥಕತೆಯನ್ನು ಸಾಕಾರಗೊಳಿಸಿದೆ ಎಂಬ ಭರವಸೆಯನ್ನು ತಾಳಬಹುದಾಗಿದೆ.

■

# ನಿಶ್ಚಿಂತಾತ್ಮ ವಿರಚಿತ "ವೀರಭದ್ರ ವಿಜಯ"

ಶ್ರೀಮಾನ್ ಡಿ. ಸಿದ್ಧಗಂಗಯ್ಯನವರಿಂದ ಸಂಪಾದಿತವಾಗಿ ಪ್ರಕಟವಾಗುತ್ತಿರುವ ನಿಶ್ಚಿಂತಾತ್ಮ ವಿರಚಿತ ವೀರಭದ್ರ ವಿಜಯಕ್ಕೆ ನಾಂದಿತೋರಣ ಕಟ್ಟುವುದಕ್ಕೆ ನನಗೆ ತುಂಬ ಸಂತೋಷವೆನಿಸಿದೆ. ಈ ಕಾವ್ಯ ಮೊದಲಭಾರಿಗೆ ಪ್ರಕಟ ವಾಗುತ್ತಿರುವುದು ನನಗೆ ಅತೀವ ಆನಂದವನ್ನುಂಟುಮಾಡಿದೆ.

ಪರಶಿವನ ಪಂಚವಿಂಶತಿಲೀಲೆಗಳಲ್ಲಿ ಒಂದಾದ ವೀರಭದ್ರಲೀಲೆಯನ್ನು ಕುರಿತು ಭರತಖಂಡದ ವಿವಿಧ ಭಾಷೆಗಳಲ್ಲಿ ಹಲವಾರು ಕಾವ್ಯಗಳು ರಚಿತವಾಗಿವೆ. ವೀರಭದ್ರನ ಕಲ್ಪನೆ, ಆರಾಧನೆ ಈ ದೇಶದಲ್ಲಿ ಪ್ರಾಚೀನ ಕಾಲದಿಂದಲೂ ನಡೆದು ಕೊಂಡು ಬಂದಿದೆ. ಕರ್ನಾಟಕದಲ್ಲಂತೂ ವೀರಭದ್ರನ ಸ್ಥಾಪನೆ, ಪ್ರತಿಷ್ಠಾಪನೆ, ಆರಾಧನೆ ಅತ್ಯಂತ ವ್ಯಾಪಕವಾಗಿದೆ. ಸರ್ವೇಸಾಮಾನ್ಯವಾಗಿ ಪ್ರತಿಯೊಂದು ಗ್ರಾಮದಲ್ಲಿಯೂ ವೀರಭದ್ರನ ದೇವಾಲಯವನ್ನು ಕಾಣಬಹುದಾಗಿದೆ. ಇದರ ಸಂಕೇತವಿಷ್ಟೇ: ದುಷ್ಟಶಿಕ್ಷಣ, ಶಿಷ್ಟಸಂರಕ್ಷಣ. ಈ ಹಿನ್ನೆಲೆಯಲ್ಲಿ ನಮ್ಮ ಜನ ವೀರಭದ್ರನಲ್ಲಿ ಅಪಾರ ಭಕ್ತಿಶ್ರದ್ಧೆ ಗೌರವಗಳನ್ನು ತೋರಿ ಆರಾಧಿಸಿಕೊಂಡು ಬರುತ್ತಿದ್ದಾರೆ. ಅವರ ಈ ಅಚಲನಂಬಿಕೆಯೇ ಈ ವ್ಯಾಪಕವಾದ ಆರಾಧನೆಗೆ ಮೂಲಕಾರಣವಾಗಿದೆ.

ವೀರಭದ್ರನ ಕಥೆ ಪ್ರಾಚೀನ ಪುರಾಣಗಳಲ್ಲಿಯೂ ಕಾವ್ಯಗಳಲ್ಲಿಯೂ ಕಂಡುಬರುತ್ತದೆ. ವೀರಭದ್ರನ ಕಲ್ಪನೆ ಕಥೆ ಆಯಾ ದೇಶಭಾಷೆಗಳಲ್ಲಿ ಕಾವ್ಯರೂಪದಲ್ಲಿ ಹೊರಬಂದಿದೆ. ಕನ್ನಡಸಾಹಿತ್ಯದಲ್ಲಿ ಹರಿಹರನಿಂದಲೇ ವೀರಭದ್ರನ ಕಥೆ ಕಾವ್ಯರೂಪದಲ್ಲಿ ಬರಲು ಪ್ರಾರಂಭವಾಯಿತು. ಸದ್ಯಕ್ಕೆ ಆತನ ವೀರಭದ್ರ ದೇವರ ರಗಳೆಯೇ ಮೊದಲ ಕೃತಿ ಎನ್ನಬಹುದಾಗಿದೆ. ಅದಾದ ಮೇಲೆ ಕ್ರಿ.ಶ. ೧೫೩೦ರಲ್ಲಿದ್ದ ವೀರಭದ್ರರಾಜನ ವೀರಭದ್ರವಿಜಯವೆಂಬ ಚಂಪೂಕೃತಿ, ತರುವಾಯ ಸು. ೧೭೦೦ರಲ್ಲಿದ್ದ ನಿಶ್ಚಿಂತಾತ್ಮನ ವೀರಭದ್ರ ವಿಜಯವೆಂಬ ಭಾಮಿನೀ ಷಟ್ಪದಿಯ ಕೃತಿ, ಇದೇ ಕಾಲಕ್ಕೆ ಸೇರಿರಬಹುದಾದ ಶಾಂತವೀರನ ವೀರಭದ್ರಲೀಲಾಮೃತವೆಂಬ ಸಾಂಗತ್ಯ ಕೃತಿ, ಸುಮಾರು ೧೭೦೦ರಲ್ಲಿದ್ದಿರಬಹುದಾದ ಸೋಮನ ವೀರಭದ್ರನ ಸಾಂಗತ್ಯ ಎಂಬ ಕೃತಿ, ಆಮೇಲೆ ೧೮೫೦ರಲ್ಲಿದ್ದ ಲಿಂಗರಾಜನ ವೀರಭದ್ರ ಶತಕ –ಇವು ಕಂಡುಬರುತ್ತವೆ. ಅಲ್ಲದೆ ವೀರಭದ್ರ ತಾರಾವಳಿ ಎಂಬ ಹಾಡುಗಳೂ, ವೀರಭದ್ರ ದೇವರ ಖಡ್ಗ ಎಂಬ ಗದ್ಯಕೃತಿಯೂ ಉಪಲಬ್ಧವಿದೆ. ಆದರೆ ಈ ಕಾವ್ಯಗಳ ಕರ್ತೃವಾಗಲಿ ಕಾಲವಾಗಲಿ ತಿಳಿದುಬಂದಿಲ್ಲ. ಪ್ರಾಚೀನ ಕಾವ್ಯಗಳಾದ ಗುಬ್ಬಿಯ ಮಲ್ಲಣ್ಣನ ವೀರಶೈವಾಮೃತ ಮಹಾಪುರಾಣ, ಪಾಲ್ಕುರಿಕೆ ಸೋಮನಾಥನ ಸೋಮೇಶ್ವರ ಪುರಾಣ, ಉತ್ತರದೇಶದ ಬಸವಲಿಂಗನ ಬಸವೇಶ್ವರ ಪುರಾಣದ ಕಥಾಸಾಗರ, ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ, ಬಸವೇಶ್ವರ ಷಟ್ಸ್ಥಲವಚನ ಕಥಾಸಾಗರ –ಇವುಗಳಲ್ಲಿಯೂ ವೀರಭದ್ರನ ಕಥೆ, ಪ್ರಸಂಗ, ಮಾಹಿತಿ ಕಂಡುಬರುತ್ತವೆ. ಒಟ್ಟಿನಲ್ಲಿ ವೀರಭದ್ರನ ಆರಾಧನೆ, ಸಂಕೀರ್ತನೆ, ನಾಮಸ್ಮರಣೆ ಒಂದಿಲ್ಲೊಂದು ರೂಪದಲ್ಲಿ ಇಂದಿಗೂ ಪ್ರಚಾರದಲ್ಲಿರುವುದು ನಿರ್ವಿವಾದ ಸಂಗತಿ.

ಪ್ರಸ್ತುತ ನಿಶ್ಚಿಂತಾತ್ಮನ ವೀರಭದ್ರ ವಿಜಯ ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿದೆ. ಇದರಲ್ಲಿ ೯ ಅಧ್ಯಾಯಗಳೂ ೮೦೦ ಪದ್ಯಗಳೂ ಇರುವುದಾಗಿಯೂ ಇದರ ಕಾಲ ಸು. ೧೭೫೦ ಆಗಿರಬಹುದೆಂದೂ ಕರ್ಣಾಟಕ ಕವಿಚರಿತೆಕಾರರು ಅಭಿಪ್ರಾಯಪಟ್ಟಿದ್ದಾರೆ. ನಿಶ್ಚಿಂತಾತ್ಮ ತನ್ನ ಕಾವ್ಯದಲ್ಲಿ ಯಾವ ಪೂರ್ವಕವಿಗಳನ್ನೂ ಸ್ಮರಿಸಿಲ್ಲ. ತರುವಾಯದ ಕವಿಗಳಾರೂ ನಿಶ್ಚಿಂತಾತ್ಮನ ಹೆಸರನ್ನೂ ಹೇಳಿಲ್ಲ. ಆದ್ದರಿಂದ ಈತನ ಕಾಲವನ್ನು ನಿರ್ಧರಿಸುವುದು ಸದ್ಯದಲ್ಲಿ ಸಾಧ್ಯವಿಲ್ಲದಾಗಿದೆ. ಗ್ರಂಥದ ಸಂಧಿ, ಪದ್ಯಸಂಖ್ಯೆಗಳ ವ್ಯತ್ಯಾಸವಾಗಿವೆ. ಕೆಲವು ಹಸ್ತಪ್ರತಿಗಳಲ್ಲಿ ಹತ್ತುಸಂಧಿಗಳೂ ಸುಮಾರು ಆರುನೂರ ಇಪ್ಪತ್ತೈದು ಪದ್ಯಗಳೂ ಕಂಡುಬರುತ್ತವೆ. ಈ ಎಲ್ಲ ವಿಷಯಗಳನ್ನು ಈ ಕೃತಿಯ ಸಂಪಾದಕರು ವಿವೇಚಿಸಿದ್ದಾರೆ. ಈ ಕಾವ್ಯದ ಕರ್ತೃ ನಿಶ್ಚಿಂತಾತ್ಮನೆಂದೂ, ವೀರಶೈವ ಧರ್ಮಕ್ಕೆ ಸೇರಿದವನೆಂದೂ, ಈತನಿಗೆ ವೀರಶೈವದ ತಿರುಳ ಋಣಸಂಪನ್ನ, ಪರಮಯತಿ ಎಂಬ ಬಿರುದುಗಳಿದ್ದಂತೆಯೂ ಸ್ಪಷ್ಟವಾಗುತ್ತದೆ. ಕವಿ ತನ್ನ ಕಾವ್ಯವನ್ನು ವೀರಭದ್ರ ವಿಜಯ, ವೀರೇಶ ವಿಜಯ ಎಂದೂ ಕರೆದಿದ್ದಾನೆ. ಕೆಲವು ಹಸ್ತಪ್ರತಿಗಳಲ್ಲಿ ಇದನ್ನು ವೀರಭದ್ರ ಲೀಲಾವಿಜಯ ಎಂದೂ ಕರೆಯಲಾಗಿದೆ.

ಪ್ರಾಚೀನ ಕಾವ್ಯಗಳನ್ನು ಸಂಪಾದಿಸಿ ಪ್ರಕಟಿಸುವುದು ತುಂಬ ದುಸ್ತರವಾದ ಕಾರ್ಯ. ಪ್ರತಿಭೆ ವಿದ್ವತ್ತು ಮೇಳವಿಸಿರುವ ವಿದ್ವಾಂಸರು ಕೈಗೊಳ್ಳಬೇಕಾದ ಕಾರ್ಯ. ಶ್ರೀ ಡಿ. ಸಿದ್ಧಗಂಗಯ್ಯನವರು ಸಂಪಾದನ ಕ್ಷೇತ್ರಕ್ಕೆ ಹೊಸಬರೇನೂ ಅಲ್ಲ. ಅವರು ಸಂಪಾದಿಸಿರುವ ಕೆಲವು ಪ್ರಾಚೀನ ಕಾವ್ಯಗಳು ಈಗಾಗಲೇ ಬೆಳಕು ಕಂಡಿವೆ. ವೀರಭದ್ರ ವಿಜಯವನ್ನು ಶ್ರೀಯುತರು ಅತ್ಯಂತ ಪ್ರಯಾಸದಿಂದ ಶಾಸ್ತ್ರೀಯವಾಗಿ ಸಂಪಾದಿಸಿದ್ದಾರೆ. ಕವಿ ಕಾವ್ಯ ವಿಷಯವನ್ನು ಕುರಿತು ಸಮಗ್ರವಾಗಿ ವಿವೇಚಿಸಿದ್ದಾರೆ. ಈವರೆಗೂ ಅಪ್ರಕಟಿತವಾಗಿದ್ದ ಈ ಪ್ರಾಚೀನ ಕಾವ್ಯವನ್ನು ಹೊರತಂದು ಕನ್ನಡಿಗರಿಗೆ ಮಹೋಪಕಾರವನ್ನು ಮಾಡಿರುವ ಶ್ರೀಯುತರನ್ನು ನಾನು ಅಭಿನಂದಿಸುತ್ತೇನೆ. ಇವರಿಂದ ಇನ್ನೂ ಕೆಲವು ಪ್ರಾಚೀನ ಕಾವ್ಯಗಳು ಬೆಳಕು ಕಾಣುವಂತಾಗಲಿ ಎಂದು ಹಾರೈಸುತ್ತೇನೆ.



# ಮಂಗರಸ ವಿರಚಿತ ಶ್ರೀಪಾಲಚರಿತೆ

**ಕ**ನ್ನಡ ಸಾಹಿತ್ಯಕ್ಕೆ ಜೈನಕವಿಗಳ ಕೊಡುಗೆ ವಿಶಿಷ್ಟವಾದುದು. ಗುಣದಲ್ಲಿಯೂ ಗಾತ್ರದಲ್ಲಿಯೂ ಮಿಗಿಲಾದ ಕೃತಿಗಳನ್ನು ರಚಿಸಿದವರಲ್ಲಿ ಜೈನರೇ ಮೊದಲಿಗರು. ಪಂಪ ಪೊನ್ನ ರನ್ನ ಇವರು ರತ್ನತ್ರಯರೆಂದೂ ಜಿನಸಮಯದೀಪಕರೆಂದೂ ಪರಿಕೀರ್ತಿತರಾಗಿದ್ದಾರೆ. ಪೊನ್ನ ರನ್ನ ಜನ್ನ ಇವರು ಕವಿಚಕ್ರವರ್ತಿಗಳೆಂದೂ ಖ್ಯಾತಿವೆತ್ತಿದ್ದಾರೆ. ಇವರೆಲ್ಲರೂ ತಮ್ಮ ಕೃತಿಗಳಲ್ಲಿ ಧರ್ಮವನ್ನೂ ಕಾವ್ಯಧರ್ಮವನ್ನೂ ಮೆರೆದಿದ್ದಾರೆ. ಈ ಪರಂಪರೆಗೆ ಸೇರಿದವನು ಕ್ರಿ.ಶ. ೧೫೦೮ರಲ್ಲಿದ್ದ ಮೂರನೆಯ ಮಂಗರಸ.

ಮಂಗರಸ ಜೈನಕವಿ. ಈತನ ಪಿತಾಮಹ ಮಾಧವ. ತಂದೆ ಕಲ್ಲಹಳ್ಳಿಯ ವಿಜಯ ಭೂಪಾಲ. ತಾಯಿ ದೇವಿಲೆ. ಗುರು ಚಿಕ್ಕಪ್ರಭೇಂದು. ಈತನಿಗೆ ಪ್ರಭುರಾಜ, ಪ್ರಭುಕುಲ ರತ್ನದೀಪ ಎಂಬ ಬಿರುದುಗಳಿದ್ದಂತೆ ತಿಳಿದು ಬರುತ್ತದೆ. ಈತನು ಹಲವಾರು ಪ್ರಾಚೀನ ಕವಿಗಳನ್ನು ಸ್ಮರಿಸಿದ್ದಾನೆ. ಮಂಗರಸ ಕಲ್ಲಹಳ್ಳಿಯ ರಾಜನಾಗಿದ್ದನೆಂದೂ ಪರಮಜಿನಭಕ್ತನಾಗಿದ್ದನೆಂದೂ ಈತನ ಕಾವ್ಯದಿಂದಲೇ ತಿಳಿದುಬರುತ್ತದೆ. ಈತನ ಪೂರ್ವಜರೂ ಸಹ ರಾಜಪರಂಪರೆಗೆ ಸೇರಿದ್ದರು ಎಂಬುದಕ್ಕೆ ಕಾವ್ಯ ಮತ್ತು ಶಾಸನಾಧಾರಗಳು ಸಿಕ್ಕುತ್ತವೆ. ಈ ಸಂಬಂಧವಾಗಿ ಹಲವಾರು ಐತಿಹ್ಯಗಳೂ ಹುಟ್ಟಿಕೊಂಡಿವೆ.

ಮಂಗರಸ ಶ್ರೀಪಾಲಚರಿತೆಯ ಆದಿಯಲ್ಲಿ ವೀರನಾಥ, ಸಿದ್ಧಾದಿಗಳು, ನವಕೋಟಿ ತಪಸ್ವಿಗಳು, ಸುಭದ್ರ, ಪೂಜ್ಯಪಾದ, ಭದ್ರಬಾಹು, ಬಾಹುಬಲಿ, ಗೌತಮ, ಗುಣಭದ್ರ, ಕವಿಪರಮೇಷ್ಠಿ ಇವರೇ ಮೊದಲಾದವರನ್ನು ಭಕ್ತಿಯಿಂದ ಸ್ಮರಿಸಿದ್ದಾನೆ. ಶ್ರೀಪಾಲಚರಿತೆ ಸಾಂಗತ್ಯದಲ್ಲಿದೆ. ಇದರಲ್ಲಿ ೧೪ ಸಂಧಿಗಳೂ ೧೫೨೭ ಪದ್ಯಗಳೂ ಇವೆ. ಪುಂಡರೀಕಿಣೀಪುರದ ದೊರೆಯಾದ ಗುಣಪಾಲನ ಮಗ ಶ್ರೀಪಾಲನ ಕಥೆಯನ್ನು ಈ ಕೃತಿಯಲ್ಲಿ ಬಿತ್ತರಿಸಲಾಗಿದೆ. ಕವಿ–

ಎಲ್ಲರನು ಮೆಚ್ಚಿಸುವರೆ ನಾ ಪೇಳ್ದು
ದಿಲ್ಲ ನಿರ್ವಾಣವಲ್ಲಭೆಗೆ
ಬಲ್ಲಹನಾದ ಮಹಾತ್ಮನ ಕಥೆಯಿದ
ನುಲ್ಲಸದಿಂ ಕೇಳಿ ಜನರು

ಎಂದು ತನ್ನ ಕಾವ್ಯದ ಪ್ರಾರಂಭದಲ್ಲಿ ಹೇಳಿದ್ದಾನೆ ಮತ್ತು ಈ ಕಾವ್ಯದ ಉತ್ಕೃಷ್ಟತೆಯನ್ನು–

ಇದು ಭಾವಕಜನಕರ್ಣವಿಭೂಷಣ
ಮಿದು ರಸಿಕರ ಚಿತ್ತದೆಱಕ
ಇದು ವಾಣೀಮುಖ ಮಾಣಿಕ್ಯಮುಕುರ ಮ
ತ್ತಿದು ಶೃಂಗಾರಸುಧಾಬ್ಧಿ

ಹೀಗೆ ಹೇಳಿಕೊಂಡಿದ್ದಾನೆ. ಈತನು ವರ್ಣನೆಗಳಲ್ಲಿ ಪ್ರಾಚೀನ ಸಂಪ್ರದಾಯವನ್ನೇ ಅನುಸರಿಸಿದ್ದರೂ ಹಲವಾರೆಡೆ ತನ್ನ ಪಾಂಡಿತ್ಯವನ್ನೂ ಪ್ರತಿಭೆಯನ್ನೂ ಪ್ರದರ್ಶಿಸಿದ್ದಾನೆ.

ಮಂಗರಸ ಜಯನೃಪಕಾವ್ಯ, ಪ್ರಭಂಜನಚರಿತೆ, ಶ್ರೀಪಾಲಚರಿತೆ, ನೇಮಜಿನೇಶ ಸಂಗತಿ, ಸಮ್ಯಕ್ತ್ವಕೌಮುದಿ, ಸೂಪಶಾಸ್ತ್ರ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಪ್ರಭಂಜನಚರಿತೆ ಇನ್ನೂ ಅಚ್ಚಾಗಿಲ್ಲ.

ಮಂಗರಸ ಷಟ್ಪದಿಯಲ್ಲೂ ಕೃತಿಗಳನ್ನು ರಚಿಸಬಲ್ಲ; ಸಾಂಗತ್ಯದಲ್ಲೂ ಕೃತಿಗಳನ್ನು ರಚಿಸಬಲ್ಲ. ಲೌಕಿಕ–ಆಗಮಿಕ ಕಾವ್ಯಗಳನ್ನೂ ಬರೆಯಬಲ್ಲ; ಶಾಸ್ತ್ರವಿಷಯವನ್ನೂ ಪ್ರತಿಪಾದಿಸಬಲ್ಲ. ಈತನ ಸೂಪಶಾಸ್ತ್ರ ಕನ್ನಡ ಸಾಹಿತ್ಯದ ಒಂದು ವಿಶಿಷ್ಟ ಕೃತಿ. ಈ ಎಲ್ಲ ದೃಷ್ಟಿಗಳಿಂದ ಮಂಗರಸ ವೈವಿಧ್ಯಪೂರ್ಣನಾದ ಕವಿಯಾಗಿದ್ದಾನೆ.

ಮಂಗರಸ ಮತ್ತು ಆತನ ಕೃತಿಗಳ ಬಗ್ಗೆ ಆಕರ ಸಂಶೋಧನೆ ತೌಲನಿಕ ಅಧ್ಯಯನ ನಡೆಸುವವರಿಗೆ ಶ್ರೀಪಾಲ ಚರಿತೆಯ ಪ್ರಕಟಣೆಯಿಂದ ಹೆಚ್ಚು ಪ್ರಯೋಜನವಾಗಬಹುದೆಂದು ನಿರೀಕ್ಷಿಸಲಾಗಿದೆ. ■

# ಚೆನ್ನುಡಿಗನ್ನಡಿ : ಮಳಲಕೆರೆ ಗುರುಮೂರ್ತಿ

ಶ್ರೀ ಮಳಲಕೆರೆ ಗುರುಮೂರ್ತಿಯವರು ಈ ಕೃತಿಯಲ್ಲಿ ಧರ್ಮ, ಸಮಾಜ, ಸಂಸ್ಕೃತಿಗಳಿಗೆ ಸಂಬಂಧಿಸಿದಂತೆ ತಮ್ಮ ಅನುಭವಗಳನ್ನೂ ಅಭಿಪ್ರಾಯಗಳನ್ನೂ ತ್ರಿಪದಿಗಳ ಮೂಲಕ ಅಭಿವ್ಯಕ್ತಪಡಿಸಿದ್ದಾರೆ. ಸೂಕ್ತಿಗನ್ನಡಿ ಮತ್ತು ವಚನಗನ್ನಡಿ ಎಂಬ ಎರಡು ವಿಭಾಗಗಳಲ್ಲಿ, ಇಪ್ಪತ್ತು ಒಳವಿಭಾಗಗಳಲ್ಲಿ ಒಂದು ಸಾವಿರದ ಐದು ತ್ರಿಪದಿಗಳಲ್ಲಿ ತಮ್ಮ ಅನಿಸಿಕೆಗಳನ್ನು ಹರಿಯಬಿಟ್ಟಿದ್ದಾರೆ. "ಸಿದ್ಧಲಿಂಗ" ಎಂಬ ಅಂಕಿತದಲ್ಲಿ ಈ ಇಪ್ಪತ್ತು ವಿಭಾಗಗಳಲ್ಲಿ ಹಲವಾರು ವಿಷಯಗಳ ಬಗೆಗೆ ತಮ್ಮ ಅನುಭವಗಳನ್ನು ಹಂಚಿಕೊಂಡಿದ್ದಾರೆ. ಪ್ರಸ್ತುತ ವಿದ್ಯಮಾನಗಳನ್ನು ಕುರಿತೂ ಅಲ್ಲಲ್ಲಿ ಪ್ರಸ್ತಾಪಮಾಡಿದ್ದಾರೆ. ಹೀಗಾಗಿ ಈ ಕೃತಿಯಲ್ಲಿ ಪ್ರಚಲಿತವಾಗಿರುವ ಎಲ್ಲ ಸಂಗತಿಗಳೂ ಸೇರ್ಪಡೆಯಾಗಿವೆ.

ವಚನಕಾರರು ಖಂಡಿಸಿರುವ ಮೂಢನಂಬಿಕೆಗಳು ಪ್ರತಿಪಾದಿಸಿರುವ ಗಾಢನಂಬಿಕೆಗಳು; ದೈವ, ಧರ್ಮದ ಬಗೆಗಿನ ವಿವೇಚನೆ –ಇವೇ ಮೊದಲಾದ ಸಂಗತಿಗಳನ್ನು ಈ ಕೃತಿಯಲ್ಲಿ ವಿಶೇಷವಾಗಿ ಕಾಣಬಹುದಾಗಿದೆ. ಅನೇಕ ಪ್ರಾಚೀನ ವಚನಗಳು ತ್ರಿಪದಿರೂಪದಲ್ಲಿ ಇಲ್ಲಿ ಮೈವೆತ್ತಿರುವುದನ್ನು ಗಮನಿಸಬಹುದು. ಲೌಕಿಕ, ಪಾರಮಾರ್ಥಿಕ ವಿಷಯಗಳನ್ನು ನಿರೂಪಿಸುವ ತ್ರಿಪದಿಗಳೂ ಇದರಲ್ಲಿ ಸಮಾವೇಶ ಗೊಂಡಿವೆ.

ತ್ರಿಪದಿಯು ಕನ್ನಡ ಸಾಹಿತ್ಯದ ಅತ್ಯಂತ ಪ್ರಾಚೀನ ಛಂದೋಪ್ರಕಾರಗಳಲ್ಲಿ ಒಂದಾಗಿದೆ. ಈ ಪ್ರಕಾರದಲ್ಲಿ ರಚಿತವಾಗಿರುವ ಕೃತಿಗಳು ಕನ್ನಡ ಸಾಹಿತ್ಯದಲ್ಲಿ ವಿರಳವೆಂದೇ ಹೇಳಬಹುದು. ಸರ್ವಜ್ಞನ ವಚನಗಳು ಈ ದಿಕ್ಕಿನಲ್ಲಿ ಮೈಲಿಗಲ್ಲಾಗಿವೆ. ಇಲ್ಲಿಯ ಪ್ರತಿಯೊಂದು ತ್ರಿಪದಿಯೂ ಸ್ವತಂತ್ರವಾಗಿದ್ದು ಒಂದೊಂದು ವಿಷಯವನ್ನು ತಿಳಿಯಪಡಿಸುತ್ತದೆ. ಇವು ಬಿಡಿ ಮುಕ್ತಕಗಳಿದ್ದಂತೆ. ಅಂಶಗಣ ಸಂಘಟಿತವಾದ ಈ ಹಾಡುಗಬ್ಬದಲ್ಲಿ ಜಾನಪದದ ಸೊಗಡನ್ನು ಕಾಣಬಹುದಾಗಿದೆ. ಇಂತಹ ಅಪೂರ್ವಸಾಹಿತ್ಯಪ್ರಕಾರದಲ್ಲಿ ಇವರು ಅಸಂಖ್ಯಾತ ಅನುಭವಗಳನ್ನು ಜ್ವಲಂತವಾಗಿ ನಿರೂಪಿಸಿದ್ದಾರೆ. ಇದಕ್ಕೆ ದೃಷ್ಟಾಂತವಾಗಿ:

ಮಾವಿಲ್ಲದಿಹ ತೋಟ ಹೂವಿಲ್ಲದಿಹ ಪೂಜೆ
ತಾವರೆಯು ಇರದ ಕೊಳ ಕುವರರಿಲ್ಲದ ಬಾಳು
ಯಾವ ಸುಖವೀಯುವುದೊ ಸಿದ್ಧಲಿಂಗ

ಯತಿ ಕೆಡುಗು ಸಂಗದಲಿ ಪತಿ ಕೆಡುಗು ನಡತೆಯಲಿ
ಮತಿ ಕೆಡುಗು ಕುಡಿತದಲಿ ಸುತ ಕೆಡುಗು ಮುದ್ದಿನಲಿ
ಗತಿ ಕೆಡುಗು ಹಿತವಪ್ಪೆ ಸಿದ್ಧಲಿಂಗ

ಈ ತ್ರಿಪದಿಗಳನ್ನು ನೋಡಬಹುದಾಗಿದೆ. ಈ ತೆರನ ಅನೇಕ ಪದ್ಯಗಳನ್ನು ಈ ಕೃತಿಯ ಉದ್ದಕ್ಕೂ ನೋಡಬಹುದಾಗಿದೆ. ಈ ಕೃತಿಯ ಅಂತ್ಯದಲ್ಲಿ ಕೃತಿಕಾರರು ಹೇಳಿಕೊಂಡಿರುವ ಆಶೋತ್ತರ ಪದ್ಯಗಳಿವು:

ಸಾವಿರದ ನುಡಿಗಳನು ಸಾವಿರವನಿತ್ತಿಹೆನು
ಸಾವರಿಸಿ ಬಹ ಮುನ್ನ ಸಾವರಿಸಿ ಕೆಲವನ್ನ
ಈವ ಆಸೆಯ ಹೊತ್ತು ಸಿದ್ಧಲಿಂಗ

ತೊತ್ತಾಗಿ ಹಿರಿಯರಿಗೆ ಮತ್ತೊಮ್ಮೆ ನಮಿಸುವೆನು
ಮುತ್ತುಗಳು ನಿಮ್ಮವಿವು ಗತ್ತುಗಾರಿಕೆ ಎನದು
ನೆತ್ತಿಗಿಡಿ ವರಹಸ್ತ ಸಿದ್ಧಲಿಂಗ

ಹೀಗೆ ಶ್ರೀ ಮಳಲಕೆರೆ ಗುರುಮೂರ್ತಿ ಅವರು ಭಾವಪರವಶರಾಗಿ ಮನಬಂದಂತೆ ಈ ತ್ರಿಪದಿಗಳನ್ನು ಹಾಡಿಕೊಂಡು ಹೋಗಿದ್ದಾರೆ. ಅವರು ಒಮ್ಮೆಯೂ ಹಿಂತಿರುಗಿ ನೋಡಿದಂತೆ ಭಾಸವಾಗುವುದಿಲ್ಲ. ಹೀಗಾಗಿ ಒಂದೇ ವಿಷಯಕ್ಕೆ ಸಂಬಂಧಿಸಿದ ಪದ್ಯಗಳಲ್ಲಿ ಅಭಿಪ್ರಾಯಗಳು ಪುನರುಕ್ತವಾಗಿವೆ. ವಿಷಯ ವಿಂಗಡಣೆಯಲ್ಲಿ ನಿಯತಕ್ರಮ ಕಂಡುಬರುವುದಿಲ್ಲ. ಒಂದು ವಿಭಾಗದ ಪದ್ಯ ಮತ್ತೊಂದು ವಿಭಾಗದಲ್ಲಿ ಕಂಡುಬಂದಿದೆ.

ಸರಳವಾದ ಸುಲಭವಾದ ಶೈಲಿಯಲ್ಲಿ ರಚಿತವಾಗಿರುವ ಈ ಪದ್ಯಗಳಲ್ಲಿ ಅಲ್ಲಲ್ಲಿ ಪದದೋಷಗಳೂ ಸಂಧಿದೋಷಗಳೂ ಎಡತಾಕಿವೆ. ಇಷ್ಟಾದರೂ ತನ್ಮಯತೆಯಿಂದ, ಭಕ್ತಿ, ಶ್ರದ್ಧೆ, ನಿಷ್ಠೆಗಳಿಂದ ಮೈತಾಳಿರುವ ಈ "ಚೆನ್ನುಡಿಗನ್ನಡಿ" ಸಹೃದಯರ ಜನಸಾಮಾನ್ಯರ ಮನವನ್ನು ಮುಟ್ಟಬಲ್ಲುದು ಎಂದು ಭಾವಿಸಬಹುದಾಗಿದೆ.



# ಚಿತ್ರಕರ್ಮಶಾಸ್ತ್ರ : ಜಿ. ಜ್ಞಾನಾನಂದ

**ಸಂ**ಕೃತಿ ಸಾಹಿತ್ಯ ಪ್ರಸಾರ ಸಮಿತಿ, ಕೆಜಿಎಫ್ ಅವರು ಶ್ರೀ ಬ್ರಾಹ್ಮೀಯ ಚಿತ್ರಕರ್ಮಶಾಸ್ತ್ರಂ ಎಂಬ ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ ಐದುಸಂಪುಟಗಳನ್ನು ಪ್ರಕಟಿಸಿ ಕನ್ನಡ ಜನತೆಗೆ ಮಹೋಪಕಾರವನ್ನು ಮಾಡಿದ್ದಾರೆ. ಈ ಐದು ಸಂಪುಟಗಳನ್ನು ಸಂಪಾದಿಸಿದ ಶ್ರೀ ಜಿ. ಜ್ಞಾನಾನಂದ ಅವರನ್ನೂ ಈ ಸಂಪುಟಗಳನ್ನು ಪ್ರಕಟಿಸಿದ ಸಂಕೃತಿ ಸಾಹಿತ್ಯ ಪ್ರಸಾರ ಸಮಿತಿಯವರನ್ನು ನಾನು ಪ್ರಪ್ರಥಮವಾಗಿ ಅಭಿನಂದಿಸುತ್ತೇವೆ.

ಕನ್ನಡ ಸಾಹಿತ್ಯದಲ್ಲಿ ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ ಕೃತಿಗಳು ಅತ್ಯಂತ ವಿರಳ. ಇಲ್ಲವೆಂದಲೂ ಈ ಮಾತು ಸಲ್ಲುತ್ತದೆ. ೧೯೯೮ರಲ್ಲಿ ಶ್ರೀಜ್ಞಾನಾನಂದ ಅವರು ಸಂಪಾದಿಸಿ ಪ್ರಕಟಿಸಿರುವ 'ಶ್ರೀ ಕಾಶ್ಯಪ ಶಿಲ್ಪಶಾಸ್ತ್ರಂ' ಕೃತಿಯ ಉತ್ತರಾರ್ಧವು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ಪ್ರಕಟವಾಗಿರುವುದು ಸಂತೋಷದ ಸಂಗತಿ. ಆದರೆ ಇದರ ಪೂರ್ವಾರ್ಧವು ಇನ್ನೂ ಪ್ರಕಟವಾಗಬೇಕಾಗಿದೆ. ಸದ್ಯಕ್ಕೆ ಇದೇ ಕನ್ನಡದ ಮೊದಲ ಶಿಲ್ಪಶಾಸ್ತ್ರ ಕೃತಿಯೆಂದು ಭಾವಿಸಬಹುದಾಗಿದೆ.

ಶ್ರೀ ಬ್ರಾಹ್ಮೀಯ ಶಿಲ್ಪಚಿತ್ರಕರ್ಮಶಾಸ್ತ್ರದ ಎರಡು ಓಲೆಗರಿ ಪ್ರತಿಗಳು ತಮಿಳುನಾಡಿನ ಪ್ರಾಚ್ಯಾಗಾರದಲ್ಲಿದ್ದು ಅವು ಖಿಲವಾಗುವ ಸ್ಥಿತಿಯಲ್ಲಿ ಅಸಂಪೂರ್ಣವಾಗಿ ಲಭ್ಯವಾಗಿವೆ. ತಂಜಾವೂರಿನ ಸರಸ್ವತಿ ಮಹಲ್ ಲೈಬ್ರರಿ ಅವರು ಈ ಶಾಸ್ತ್ರವನ್ನು ಶಾಲೆಗಳಲ್ಲಿ ಬೋಧಿಸಲು ನೆರವಾಗಲೆಂದು ೧೯೭೦ರಲ್ಲಿ ಈ ಮೂಲಸಂಸ್ಕೃತಕೃತಿಯನ್ನು ಗ್ರಂಥಲಿಪಿಯಲ್ಲಿ ತಮಿಳುಭಾಷೆಯಲ್ಲಿ ತಾತ್ಪರ್ಯದೊಂದಿಗೆ ಪ್ರಕಟಿಸಿದ್ದಾರೆ.

ಪ್ರಸ್ತುತ ಶ್ರೀ ಬ್ರಾಹ್ಮೀಯ ಚಿತ್ರಕರ್ಮಶಾಸ್ತ್ರದ ಮೂಲಗ್ರಂಥವು ನಾಲ್ಕು ಕಾಂಡಗಳಲ್ಲಿ ಇಪ್ಪತ್ತಮೂರು ಅಧ್ಯಾಯಗಳನ್ನು ಒಳಕೊಂಡಿದೆ. ಮೊದಲನೆಯ ಪ್ರಾದುರ್ಭವ ಕಾಂಡದಲ್ಲಿ ದಶಾವತಾರಕ್ಕೆ ಸಂಬಂಧಿಸಿದ ಹತ್ತು ಅಧ್ಯಾಯಗಳಿವೆ. ಇದು ವಿಸ್ತಾರಗೊಂಡು ಪ್ರಕೃತ ಮೂರುಸಂಪುಟಗಳಾಗಿವೆ. ಇವುಗಳಲ್ಲಿ ವಿಷ್ಣುವಿನ ಅವತಾರ ಮೂರ್ತಿಗಳು, ಮೌಳಿಮೂರ್ತಿಗಳು, ಆಯುಧಲಕ್ಷಣ, ಹಸ್ತಮುದ್ರೆಗಳು ಇವೇ ಮೊದಲಾದುವನ್ನು ಸಮಗ್ರವಾಗಿ ವಿವರಿಸಿರುವುದರಿಂದ ಇದು ಒಂದು ಕೈಪಿಡಿಯಂತಿದೆ.

ನಾಲ್ಕನೆಯ ಸಂಪುಟದ ಆಲಯಾಧಿಕರಣ ಕಾಂಡದಲ್ಲಿ ಗರ್ಭಗುಡಿಯ ಸಂಪೂರ್ಣ ವಿವರಗಳು ನಿರೂಪಿತವಾಗಿವೆ. ವೈಷ್ಣವದೇವಾಲಯಗಳ ವಿವಿಧ ಪ್ರಾಕಾರಗಳಲ್ಲಿ ಇರಬಹುದಾದ ಮೂರ್ತಿಗಳ ಪೂರ್ಣವಿವರ ದೊರೆಯುತ್ತದೆ.

ಐದನೆಯ ಸಂಪುಟದಲ್ಲಿ ಮಾನಾಧಿಕರಣಕಾಂಡದಲ್ಲಿ ಪ್ರತಿಮಾ ಮಾನಲಕ್ಷಣಗಳ ವಿವರಣೆ ಇದೆ. ಉತ್ತಮ ದಶಕಾಲ, ಮಧ್ಯಮ ದಶಕಾಲ, ಸ್ತ್ರೀಮಾನ, ಸಾಧಾರಣ ಮೂರ್ತಿಗಳು, ವೈಷ್ಣವ ಮೂರ್ತಿಗಳು ಇವುಗಳಿಗೆ ಸಂಬಂಧಿಸಿದ ವಿವರಗಳನ್ನು ಬಿತ್ತರಿಸಲಾಗಿದೆ.

ಶ್ರೀ ಬ್ರಾಹ್ಮೀಯ ಚಿತ್ರಕರ್ಮಶಾಸ್ತ್ರಂ ಸಂಪುಟಗಳ ಸಂಪಾದಕರಾದ ಶ್ರೀ ಜಿ. ಜ್ಞಾನಾನಂದ ಅವರು ಅತ್ಯಂತ ಪರಿಶ್ರಮದಿಂದ ಅಪಾರವಾದ ಅಭ್ಯಾಸದಿಂದ ಈ ಸಂಪುಟಗಳನ್ನು ಪ್ರಕಟಿಸಿ ಕನ್ನಡಿಗರ ಅಭಿಮಾನಕ್ಕೆ ಪಾತ್ರರಾಗಿದ್ದಾರೆ. ಶ್ರೀಯುತರು ಇವುಗಳಿಗೆ ನೀಡಿರುವ ತಾತ್ಪರ್ಯವು ಇವುಗಳನ್ನು ಅರ್ಥಮಾಡಿಕೊಳ್ಳಲು ಅತ್ಯಂತ ಸಹಕಾರಿಯಾಗಿದೆ. ಪುರಾಣಗಳಲ್ಲಿ ಸಂಹಿತೆಗಳಲ್ಲಿ ನಿರೂಪಿತವಾಗಿರುವ ಮಾಹಿತಿಯನ್ನು ವಿಶೇಷ ವಿವರವಾಗಿ ಒದಗಿಸಿರುವುದು ಅವರ ಆಳವಾದ ಅಭ್ಯಾಸಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಕನ್ನಡ ಸಾಹಿತ್ಯದಲ್ಲಿ ವಿರಳವಾಗಿರುವ ಅಪರೂಪವಾಗಿರುವ ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ ಈ ಅಮೂಲ್ಯ ಕೃತಿಗಳನ್ನು ಅತ್ಯಂತ ಪರಿಶ್ರಮದಿಂದ ಸಂಪಾದಿಸಿದ ಶ್ರೀ ಜಿ. ಜ್ಞಾನಾನಂದ ಅವರನ್ನೂ ಈ ಸಂಪುಟಗಳ ಪ್ರಕಟನೆಗೆ ನೆರವಾದ ಸಂಕೃತಿ ಸಾಹಿತ್ಯ ಪ್ರಸಾರ ಸಮಿತಿಯ ಎಲ್ಲ ಪದಾಧಿಕಾರಿಗಳನ್ನೂ ನಾನು ಅಭಿಮಾನದಿಂದ ವಂದಿಸುತ್ತೇನೆ. ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿಗಳು ಈ ಸಂಪುಟಗಳ ಪ್ರಕಟನೆಗೆ ಎಲ್ಲ ತೆರನಾದ ಸಹಾಯವನ್ನೂ ಅಗತ್ಯವಾಗಿ ನೀಡಬೇಕು, ನೀಡುತ್ತವೆ ಎಂಬ ವಿಶ್ವಾಸವನ್ನು ವ್ಯಕ್ತಪಡಿಸಿ ಈ ಸಂಪುಟಗಳ ಸಂಪಾದಕರನ್ನು ಮತ್ತೊಮ್ಮೆ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಈ ಸಂಪುಟಗಳಲ್ಲಿನ ಅಸಂಖ್ಯಾತ ಚಿತ್ರಗಳು ಇವುಗಳ ಮೌಲ್ಯಗಳನ್ನು ಹೆಚ್ಚಿಸಿವೆ ಎಂಬುದರಲ್ಲಿ ಎರಡುಮಾತಿಲ್ಲ.

# ಸಮಾಯೋಗ : ಶ್ರೀ ಷಣ್ಮುಖಯ್ಯ ಅಕ್ಕೂರಮಠ

ಶ್ರೀ ಷಣ್ಮುಖಯ್ಯ ಅಕ್ಕೂರಮಠ ಅವರ ಸಮಾಯೋಗ ಲೇಖನ ಸಂಕಲನಕ್ಕೆ ನಾಂದಿತೋರಣವನ್ನು ಕಟ್ಟಲು ನನಗೆ ತುಂಬ ಸಂತೋಷವೆನಿಸಿದೆ. ಚತುರ್ಭಾಷಾವಿಶಾರದರಾದ ಶ್ರೀಯುತರು ಸಂದರ್ಭೋಚಿತವಾಗಿ ಬರೆದ ಇಪ್ಪತ್ತು ಲೇಖನಗಳು ಇದರಲ್ಲಿ ಸಮಾವೇಶಗೊಂಡಿವೆ. ಐದು ಭಾಗಗಳಲ್ಲಿ ಹರಡಿನಿಂತಿರುವ ಈ ಲೇಖನಗಳು ವೈವಿಧ್ಯಪೂರ್ಣವೂ ವೈಶಿಷ್ಟ್ಯಪೂರ್ಣವೂ ಆಗಿವೆ. ಧರ್ಮ ಸಾಹಿತ್ಯ ಸಂಸ್ಕೃತಿಗಳ ತ್ರಿವೇಣಿ ಸಂಗಮವನ್ನು ಇಲ್ಲಿ ಕಾಣಬಹುದಾಗಿದೆ. ಇಲ್ಲಿಯ ಬಹುಮಟ್ಟಿನ ಲೇಖನಗಳು ವೀರಶೈವಧರ್ಮ ಮತ್ತು ಸಂಸ್ಕೃತಿಗೆ ಸಂಬಂಧಿಸಿದವು ಗಳಾಗಿವೆ.

ಈ ಸಂಕಲನದ 'ಭಾರತೀಯರಲ್ಲಿ ವೈಚಾರಿಕ ಪ್ರಜ್ಞೆ', 'ಟಿಬೇಟಿನಲ್ಲಿ ಭಾರತೀಯ ಸಾಹಿತ್ಯ ಮತ್ತು ಕಲೆ' ಈ ಎರಡು ಲೇಖನಗಳು ರಾಹುಲ ಸಾಂಕೃತ್ಯಾಯನ ಅವರ ಹಿಂದಿ ಲೇಖನಗಳ ಅನುವಾದಗಳು. ಇವನ್ನು ಬಿಟ್ಟು ಉಳಿದ ಹದಿನೆಂಟು ಲೇಖನಗಳು ಸಂಶೋಧನಾತ್ಮಕವಾದುವು. ಪ್ರತಿಯೊಂದು ಲೇಖನದ ಸಿದ್ಧತೆಗೂ ಶ್ರೀಯುತರು ಪರಿಶೀಲಿಸಿದ ಆಕರಗ್ರಂಥಗಳ ಪಟ್ಟಿಯ ಜೊತೆಗೆ ಸಂದರ್ಭೋಚಿತವಾಗಿ ಆಕರಗ್ರಂಥಗಳಿಂದ ಉದ್ಧರಣೆಗಳನ್ನೂ ಕೊಟ್ಟಿದ್ದಾರೆ. ದೃಷ್ಟಾಂತಕ್ಕಾಗಿ ಒಂದೆರಡು ಲೇಖನಗಳನ್ನು ಪರಿಶೀಲಿಸಬಹುದು: "ವೀರಶೈವ ಸಂಸ್ಕಾರಗಳು" ಲೇಖನದಲ್ಲಿ ಜನನದಿಂದ ಮರಣದವರೆಗೆ ವೀರಶೈವರು ಅನುಸರಿಸಬೇಕಾದ ಹನ್ನೆರಡು ಸಂಸ್ಕಾರಗಳನ್ನು ಸಾಧಾರವಾಗಿ ನಿರೂಪಿಸಲಾಗಿದೆ. "ಶಿವಾಗಮಗಳಲ್ಲಿ ವೀರಶೈವಧರ್ಮ ಮತ್ತು ಸಂಸ್ಕೃತಿ"ಯಲ್ಲಿ ಈವರೆಗೆ ಉಪಲಬ್ಧವಾದ ಆಗಮಗಳಿಂದ ವೀರಶೈವಧರ್ಮ ಮತ್ತು ಸಂಸ್ಕೃತಿಯನ್ನು ಚಿತ್ರಿಸಲು ಯತ್ನಿಸಿದ್ದಾರೆ. ವೀರಶೈವಸಿದ್ಧಾಂತಕ್ಕೆ ಅಡಿಗಲ್ಲಿನಂತಿರುವ ಶಿವಾಗಮಗಳು ಸಮಗ್ರವಾಗಿ ಲಭ್ಯವಾದಾಗ ಈ ಧರ್ಮ ಮತ್ತು ಸಂಸ್ಕೃತಿಯ ಬಗ್ಗೆ ಮಹತ್ತರವಾದ ಸಂಗತಿಗಳು ಪ್ರಾಪ್ತವಾಗಬಹುದು ಎಂಬ ನಂಬಿಕೆ ಸಹಜವಾದುದು. 'ಮಠಗಳ ಪರಿಕಲ್ಪನೆ' ಅತ್ಯಂತ ಉಪಯುಕ್ತವಾದ ಲೇಖನ. ವೇದ, ಸಂಹಿತೆ, ಗೀತೆ, ಸ್ಮೃತಿ -ಇವೇ ಮೊದಲಾದವುಗಳಲ್ಲಿನ ಮಾಹಿತಿಯನ್ನು ಉದ್ಧರಿಸಿದ್ದಾರೆ, ಉಲ್ಲೇಖಿಸಿದ್ದಾರೆ. ಬೌದ್ಧಮಠಗಳು, ಜೈನಮಠಗಳು, ಹಿಂದೂಮಠಗಳು ಇವುಗಳ ಒಂದು ಸ್ಥೂಲ ಚಿತ್ರವನ್ನು ನೀಡಿದ್ದಾರೆ.

ಜಾಗತಿಕ ಭಕ್ತಿಪಂಥದ ನೆಲೆಯಲ್ಲಿ ಸಮಾಜಕಾರ್ಯ ಒಂದು ಸಂಶೋಧನಾತ್ಮಕ ಲೇಖನ. ಭರತಖಂಡದಲ್ಲಿ ಭಕ್ತಿಯ ಉಗಮ ಮತ್ತು ವಿಕಾಸವನ್ನು ವೇದಾಗಮ ಪುರಾಣೋಪನಿಷತ್ತುಗಳ ಆಧಾರದಿಂದ ವಿವೇಚಿಸಲಾಗಿದೆ. ಭಾರತದ ಭಕ್ತಿಪಂಥಗಳ ಒಂದು ಸಂಕ್ಷಿಪ್ತ ಚಿತ್ರಣವನ್ನೂ ಕೊಡಲಾಗಿದೆ.

'ಸಮಾಯೋಗ' ಸಂಕಲನದಲ್ಲಿನ ಲೇಖನಗಳನ್ನು ಸಮಗ್ರವಾಗಿ ಸಮೀಕ್ಷಿಸಿದಾಗ ಷಣ್ಮುಖಯ್ಯ ಅಕ್ಕೂರಮಠ ಅವರ ವ್ಯಾಪಕವಾದ ವ್ಯಾಸಂಗ ಎದ್ದುಕಾಣುತ್ತದೆ. ಸಾಧಾರವಾಗಿ ನಿರೂಪಿತವಾಗಿರುವ ಈ ಲೇಖನಗಳಲ್ಲಿ ಲೇಖಕರ ಅಭಿಪ್ರಾಯ ಮತ್ತು ತೀರ್ಮಾನಗಳು ಒಮ್ಮೊಮ್ಮೆ ಒಪ್ಪಿಗೆಯಾಗದಿದ್ದರೂ ಅವರು ಕೊಟ್ಟಿರುವ ಸಾಕ್ಷ್ಯಾಧಾರಗಳನ್ನೂ ಆಕರಗಳನ್ನೂ ನಿರಾಕರಿಸುವಂತಿಲ್ಲ. ಲೇಖಕರ ಪ್ರಾಮಾಣಿಕತೆಯನ್ನು ಅಲ್ಲಗಳೆಯುವಂತಿಲ್ಲ. ಬಹುಪರಿಶ್ರಮದಿಂದ ಸತತಾಭ್ಯಾಸ ಪ್ರಯತ್ನದಿಂದ ಮೂಡಿಬಂದಿರುವ ಈ ಲೇಖನಗಳು ಈ ದಿಸೆಯಲ್ಲಿ ವ್ಯಾಸಂಗ ಮಾಡುವವರಿಗೆ ತುಂಬ ಉಪಯುಕ್ತವಾಗುವುದರಲ್ಲಿ ಸಂದೇಹವಿಲ್ಲ. ಲೇಖಕರ ಈ ಸಂಶೋಧನ ಪ್ರವೃತ್ತಿ ನಿರಂತರವಾಗಿ ಮುಂದುವರಿಯಲಿ ಎಂದೂ ಈ ಸಂಕಲನದ ವಿಶಿಷ್ಟ, ವಿನೂತನ, ವೈವಿಧ್ಯಮಯ ಲೇಖನಗಳು ವಿದ್ವಾಂಸರ ಅವಲೋಕನೆಗೆ ಒಳಗಾಗಲಿ ಎಂದೂ ಹಾರೈಸುತ್ತೇನೆ.

■

# ಗ್ರಾಮೀಣ ಜೀವನ : ಸಿ. ಬಸಪ್ಪ

'ಗ್ರಾಮೀಣ ಜೀವನ' ಎಂಬ ಈ ಕೃತಿಯನ್ನು ನಿವೃತ್ತ ಕನ್ನಡ ಪ್ರಾಧ್ಯಾಪಕರಾದ ಶ್ರೀ ಸಿ. ಬಸಪ್ಪ ಅವರು ಬರೆದಿದ್ದಾರೆ. ಶ್ರೀಯುತರು ತಮ್ಮ ಊರಾದ ತುಮಕೂರು ಜಿಲ್ಲೆಯ ಕೋಳಾಲವನ್ನು ಕೇಂದ್ರೀಕರಿಸಿಕೊಂಡು ಈ ಕೃತಿಯನ್ನು ಬರೆದಿದ್ದಾರೆ. ಹಳ್ಳಿಯಲ್ಲಿ ವ್ಯಾಸಂಗಮಾಡಿ ಆ ಮೇಲೆ ಪಟ್ಟಣವನ್ನು ಸೇರಿ ಅಲ್ಲೇ ಸೇವೆಯನ್ನು ಸಲ್ಲಿಸಿ ಹಳ್ಳಿಗೆ ಬಂದಾಗ ತಮ್ಮ ಬಂಧು ಬಾಂಧವರೂ, ತಮ್ಮ ಸಹಪಾಠಿಗಳಾಗಿದ್ದವರೂ ಮತ್ತು ತಮಗೆ ಪರಿಚಿತರಾಗಿದ್ದವರೂ. ಇವರೇ ಮೊದಲಾದವರ ಇತಿವೃತ್ತಗಳನ್ನೂ ಆ ಹಳ್ಳಿಯ ಆಗುಹೋಗುಗಳನ್ನೂ ಮನಮುಟ್ಟುವಂತೆ ಚಿತ್ರಿಸಿದ್ದಾರೆ.

ಭರತಖಂಡ ಬಹಳಕಾಲದಿಂದ "ಹಳ್ಳಿಗಳ ನಾಡು" ಎಂಬ ಖ್ಯಾತಿಗೆ ಭಾಜನವಾಗಿದೆ. ಅಂತೆಯೇ "ಹಳ್ಳಿಯಿಂದ ಡಿಲ್ಲಿ" ಎಂಬ ಗಾದೆಯೂ ಪ್ರಚಲಿತವಾಗಿದೆ. ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯಾನಂತರವೂ ಹಳ್ಳಿಗಳು ತಮ್ಮ ಸ್ವಂತಿಕೆಯನ್ನೂ ಪ್ರಾಬಲ್ಯವನ್ನೂ ಮೆರೆದಿವೆ. ಆದರೂ ಹಳ್ಳಿಯವನು ದಡ್ಡ ಹಳ್ಳಿಗಮಾರ್ ಎಂಬ ನುಡಿಗಟ್ಟುಗಳು ಬಳಕೆಯಲ್ಲಿವೆ. ಈ ಹೇಳಿಕೆಗಳು ಎಂತಾದರೂ ಇರಲಿ, ಹಳ್ಳಿಗಳೇ ಪಟ್ಟಣಗಳ ಜೀವನಾಡಿ ಎಂಬುದಂತೂ ಸತ್ಯ.

ಜನತೆಗೆ ಆಹಾರ ಪದಾರ್ಥಗಳನ್ನೂ ದವಸಧಾನ್ಯಗಳನ್ನೂ ಬೆಳೆದು ಕೊಡುವವನು ರೈತ. ಆತನ ವಾಸ ಹಳ್ಳಿ ಅಥವಾ ಗ್ರಾಮ. ಕೃಷಿಗೆ ಯೋಗ್ಯವಾದ ಭೂಮಿ ಗ್ರಾಮಾಂತರ ಪ್ರದೇಶಗಳದ್ದು. ಕಷ್ಟಪಟ್ಟು ಉತ್ತುಬಿತ್ತಿ ಬೆಳೆಯನ್ನು ಬೆಳೆದು ಕೊಡುವವನು ರೈತ, ಕೃಷಿಕ, ಅನ್ನದಾತ. ವರ್ಷವಿಡೀ ನಿರಂತರವಾಗಿ ದುಡಿಯುವವನು ರೈತ. ಈತನಿಗೆ ವಿದ್ಯಾಭ್ಯಾಸ ಮಾಡುವುದಕ್ಕೆ ಸಮಯ ಕಡಮೆ; ಅವಕಾಶವೂ ಕಡಮೆ. ಒಂದುವೇಳೆ ವಿದ್ಯಾಭ್ಯಾಸಮಾಡಲು ಅವಕಾಶ ಅನುಕೂಲಗಳಿದ್ದರೂ ಅನಿವಾರ್ಯಕಾರಣಗಳಿಂದ ಅವನ್ನು ಪಡೆದುಕೊಳ್ಳದ ಎಷ್ಟೋ ಜನ ಬೇರೆ ಕಸಬುಗಳನ್ನು ಮಾಡಿಕೊಳ್ಳುತ್ತಾ ಗ್ರಾಮಗಳಲ್ಲೇ ಉಳಿದುಕೊಂಡು ಬಿಡುತ್ತಾರೆ.

ಗ್ರಾಮೀಣ ಭಾಗದ ಮತ್ತೊಂದು ವಿಷಯವೆಂದರೆ ಅಲ್ಲಿಯ ಪರಂಪರವಾದ ಕೈಗಾರಿಕೆಗಳು, ಆಧುನಿಕ ವ್ಯವಸಾಯ ಪದ್ಧತಿ, ಕೈಗಾರಿಕಾ ಪದ್ಧತಿ ಗ್ರಾಮಗಳನ್ನು ಪ್ರವೇಶಿಸುವುದಕ್ಕೆ ಮೊದಲೇ ಅಲ್ಲಿದ್ದ ಪ್ರಾಚೀನ ಪರಂಪರಾಗತವಾದ ಪದ್ಧತಿಗಳು. ಅವುಗಳಲ್ಲಿ ಕುಂಬಾರಿಕೆ ಮತ್ತು ಸುಣ್ಣತಯಾರಿಕೆ ವಿಧಾನಗಳು, ಮಡಿಕೆಗಳನ್ನುತಯಾರಿಸುತ್ತಿದ್ದ ವಿಧಿವಿಧಾನಗಳನ್ನು ಧಾನ್ಯಗಳನ್ನು ರಕ್ಷಿಸಲು ಹರವಿ, ಗುಡಾಣಗಳ ಚಿತ್ರಗಳನ್ನು ಕಣ್ಣಿಗೆ ಕಟ್ಟುವಂತೆ ವಿವರಿಸಿದ್ದಾರೆ. ಅಂತೆಯೇ ಮನೆಯ ಕಟ್ಟಡಕ್ಕೆ ಅಗತ್ಯವಾದ ಸುಣ್ಣವನ್ನು ತಯಾರಿಸುವ ಸುಣ್ಣದ ಗೂಡಿನ ಚಿತ್ರವನ್ನು ಬಿಡಿಸಿದ್ದಾರೆ. ಅಂತೆಯೇ ಇಂದು ನೆಲೆ ಇಲ್ಲದ ನೆಯ್ಗೆ ಕೆಲಸದ ಬಗ್ಗೆಯೂ ತಿಳಿಸಿದ್ದಾರೆ.

ಗ್ರಾಮದಲ್ಲಿ ನಡೆದ ಬೇಟೆಯ ಪ್ರಕರಣದಲ್ಲಿ ಆ ಗ್ರಾಮದ ಎರಡು ಪಕ್ಷಗಳ ಮಧ್ಯೆ ನಡೆದ ಹೊಡೆದಾಟ, ಬಡಿದಾಟ, ಕೊಲೆ ಪ್ರಸಂಗಗಳನ್ನು ಕಂಡರಿಸಿದ್ದಾರೆ. ಗ್ರಾಮಗಳಲ್ಲಿ ಕದ್ದುಮುಚ್ಚಿ ನಡೆಯುತ್ತಿದ್ದ ಕಾಮಪ್ರಸಂಗಗಳನ್ನು ಪ್ರೇಮಪ್ರಸಂಗಗಳನ್ನು ಯಥಾವತ್ತಾಗಿ ಚಿತ್ರಿಸಿದ್ದಾರೆ.

ಪ್ರಾಚೀನ ಗ್ರಾಮೀಣಜೀವನವನ್ನು ಇಂದಿನ ಪ್ರೌಢ ಮತ್ತು ಕಾಲೇಜು ವಿದ್ಯಾರ್ಥಿಗಳು ತಿಳಿದುಕೊಳ್ಳುವುದು ಹಲವಾರು ದೃಷ್ಟಿಗಳಿಂದ ಅಗತ್ಯವೂ ಅನಿವಾರ್ಯವೂ ಹೌದು. ಈ ದೃಷ್ಟಿಯಿಂದ 'ಗ್ರಾಮೀಣ ಜೀವನ' ವಿದ್ಯಾರ್ಥಿಗಳಿಗೆ ದಾರಿದೀಪವಾಗುವುದರಲ್ಲಿ ಸಂಶಯವಿಲ್ಲ ಎನ್ನಬಹುದು.

ಹಳ್ಳಿಗಳಲ್ಲಿ ರೈತ ಕೃಷಿಕ ನಿರಂತರವಾಗಿ ಕಾಯಕವನ್ನು ಮಾಡುತ್ತಾ ಈ ದೇಶವನ್ನು ಸುಭಿಕ್ಷವನ್ನಾಗಿಸುತ್ತಾನೆ. ಅಷ್ಟೇಅಲ್ಲದೆ ಗ್ರಾಮೀಣಕೈಗಾರಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಂಡಿರುತ್ತಾನೆ. ಆಧುನಿಕ ವ್ಯವಸಾಯ ಪದ್ಧತಿ, ಕೈಗಾರಿಕಾ ರೀತಿ ಹಳ್ಳಿಗಳನ್ನು ಪ್ರವೇಶಿಸುವುದಕ್ಕಿಂತ ಮೊದಲೇ ಪರಂಪರಾಗತವಾಗಿ ಬಂದ ಇವೇ ಪದ್ಧತಿಯನ್ನೇ ಅನುಸರಿಸಿಕೊಂಡು ಬರುತ್ತಿದ್ದಾನೆ. ಗ್ರಾಮೀಣ ಭಾಗದ ರೈತವರ್ಗವೇ ಮೊದಲಾದವರು ಪರಮ ಪ್ರಾಮಾಣಿಕರೂ ಅತ್ಯಂತ ದೈವಭಕ್ತರೂ ಬಹುವಾಗಿ ದೈವನಿಷ್ಠರೂ ಆಗಿರುತ್ತಾರೆ. ಭಾರತ ಸ್ವಾತಂತ್ರ್ಯಾನಂತರ ಗ್ರಾಮೀಣ ಜನಜೀವನ ವಿಕಾಸವಾಯಿತು, ಪ್ರಕಾಶವಾಯಿತು.

ಇಪ್ಪತ್ತೊಂದನೆಯ ಶತಮಾನದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಯುಗದಲ್ಲಿ ಗ್ರಾಮೀಣ ಜನತೆ ತಮ್ಮ ಪರಂಪರಾ ಪದ್ಧತಿಗಳನ್ನು ವಿಚಾರಗಳನ್ನು ಸಾಮಾಜಿಕ ಸಂಪ್ರದಾಯಗಳನ್ನು ಮಾರ್ಪಡಿಸಿಕೊಳ್ಳುತ್ತ ನೇರ್ಪಡಿಸಿಕೊಳ್ಳುತ್ತಿದ್ದಾರೆ. ಈ ಪರಿವರ್ತನೆ ಶರವೇಗದಲ್ಲಿ ನಡೆಯುತ್ತಿದೆ. ಈ ಪರ್ವಕಾಲದಲ್ಲಿ ನಮ್ಮ ನಾಡಿನ ಪ್ರೌಢ ಮತ್ತು ಕಾಲೇಜಿನ ವಿದ್ಯಾರ್ಥಿಗಳು ಗ್ರಾಮೀಣ ಜೀವನದ ಮಾಹಿತಿಯನ್ನು ಪಡೆದುಕೊಳ್ಳುವುದು ಅವಶ್ಯ ಎಂದು ನಾನು ಭಾವಿಸಿದ್ದೇನೆ. ಈ ಕೃತಿಯ ಲೇಖಕರು ತಮ್ಮ ಗ್ರಾಮದ ಮಾಹಿತಿಗಳನ್ನು ತಾವು ಕಂಡಂತೆ ಸಹಜವಾಗಿ ಚಿತ್ರಿಸಿದ್ದಾರೆ. ಈ ಗ್ರಾಮೀಣ ಭಾಗದಲ್ಲಿ ಆಚಾರ-ವಿಚಾರಗಳನ್ನು, ಸಾಮಾಜಿಕ ಸಂಸ್ಕೃತಿ, ಸಾಹಿತ್ಯಿಕ ವಿವರಗಳನ್ನು ಲೌಕಿಕ ಮತ್ತು ಧಾರ್ಮಿಕ ಸಂಗತಿಗಳನ್ನು ಪ್ರಾಚೀನ ಭಾರತೀಯ ಸಂಸ್ಕೃತಿ ನಿಹಿತವಾಗಿರುವುದು ಈ ಗ್ರಾಮೀಣ ಭಾಗಗಳಲ್ಲೇ.

ಗ್ರಾಮೀಣಜನತೆ ಪಟ್ಟಣಿಗರ ಜೀವನಾಡಿ. ಹಳ್ಳಿಗಳ ಜನ ವ್ಯವಸಾಯ ಇನ್ನಿತರ ಕೃಷಿಕಾರ್ಯಗಳಲ್ಲೇ ನಿರತರಾಗಿ ದೇಶಕ್ಕೆ ಅಗತ್ಯವಾದ ದವಸಧಾನ್ಯಗಳನ್ನು ಉತ್ಪಾದಿಸುತ್ತಾರೆ. ಆದ್ದರಿಂದಲೇ ರೈತರನ್ನು ಈ ನಾಡಿ ಬೆನ್ನುಮೂಳೆ ಎಂದು ಕರೆಯುತ್ತಾರೆ. ಅಷ್ಟೇ ಅಲ್ಲ ಆತನನ್ನು ಅನ್ನದಾತನೆಂದೂ ಗೌರವಿಸುತ್ತಾರೆ.



# ಆಧುನಿಕ ವಚನ ಸಂಕಲನ : ಬಿ.ಎಂ. ಪುಟ್ಟೇಗೌಡ

ಹನ್ನೆರಡನೆಯ ಶತಮಾನದಲ್ಲಿ ಜಗಜ್ಯೋತಿ ಬಸವೇಶ್ವರರ ನೇತೃತ್ವದಲ್ಲಿ ನಡೆದ ಧಾರ್ಮಿಕಕ್ರಾಂತಿ ವಚನಸಾಹಿತ್ಯದ ಉಗಮಕ್ಕೆ ನಾಂದಿಯಾಯಿತು. ಆತ್ಮೋದ್ಧಾರ ಮಾರ್ಗದ ಜೊತೆಗೆ ಅಂದಿನ ಸಮಾಜದಲ್ಲಿ ನಡೆಯುತ್ತಿದ್ದ ಅನಾಚಾರ, ಅತ್ಯಾಚಾರ, ಮೇಲುಕೀಳು ಭಾವನೆಗಳ ನಿರಾಕರಣೆಗಳನ್ನು ವ್ಯಾಪಕವಾಗಿ ಖಂಡಿಸಲಾಯಿತು. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಮೋಸ, ವಂಚನೆ ಸುಲಿಗೆಗಳ ಪ್ರತಿಭಟನೆ ಎಲ್ಲೆಲ್ಲೂ ಕಂಡುಬರುತ್ತಿತ್ತು. ಅಂಧಶ್ರದ್ಧೆ ಮೂಢನಂಬಿಕೆಗಳನ್ನು ಅರ್ಥವಿಲ್ಲದ ಸಂಪ್ರದಾಯಗಳನ್ನು ಬಸವಣ್ಣನವರು ತೀವ್ರವಾಗಿ ಖಂಡಿಸಿದರು. ಜಾತಿ, ಮತ, ಪಂಥಗಳ ಭೇದಭಾವವಿಲ್ಲದೆ ಯಾವ ವೃತ್ತಿಯವರಾದರೂ ಅನುಸರಿಸಬಹುದಾದ ವೀರಶೈವಧರ್ಮವನ್ನು ಜಾರಿಗೆ ತಂದರು. ಈ ಪ್ರಭಾವಕ್ಕೆ ಒಳಗಾದವರಲ್ಲಿ ಕೇವಲ ಪುರುಷರಷ್ಟೇ ಅಲ್ಲದೆ ಸ್ತ್ರೀಯರೂ ಭಾಗವಹಿಸಿ ತಮ್ಮ ಅನುಭವಗಳನ್ನು ವಚನಗಳಲ್ಲಿ ನಿರೂಪಿಸಿದುದು ವಿಶಿಷ್ಟವಾದುದು.

ಬಸವಣ್ಣನವರಿಂದ ಪ್ರಾರಂಭವಾದ ಈ ವಚನರಚನಾಕ್ರಮ ಕೆಲಕಾಲ ಕುಂಠಿತವಾದರೂ ತರುವಾಯ ಮತ್ತೆ ಜಾಗೃತವಾಯಿತು. ಹದಿನೈದನೆಯ ಶತಮಾನದ ವಚನಸಾಹಿತ್ಯ ತೋಂಟದ ಸಿದ್ಧಲಿಂಗಯತಿಗಳಿಂದ ಅತ್ಯಂತ ಪ್ರಭಾವವನ್ನು ಪಡೆಯಿತು. ಅದಾದಮೇಲೆ ಕಾಲಕಾಲಕ್ಕೆ ಕೆಲವು ವಚನಕಾರರು ಉದ್ಭವಿಸಿ ವಚನಸಾಹಿತ್ಯವನ್ನು ಜೀವಂತವಾಗಿರಿಸುವುದಕ್ಕೆ ಕಾರಣೀಭೂತರಾದರು. ಇಪ್ಪತ್ತನೆಯ ಶತಮಾನದಲ್ಲಿ ಅನೇಕ ವಚನಕಾರರು ವಚನಸಾಹಿತ್ಯ ಪ್ರಕಾರಕ್ಕೆ ಮಾರುಹೋಗಿ ಅಸಂಖ್ಯಾತ ವಚನಗಳನ್ನು ರಚಿಸಿರುವುದನ್ನು ಕಾಣಬಹುದಾಗಿದೆ. ಈ ಪ್ರಭಾವಗಳಿಗೆ ಒಳಗಾದವರಲ್ಲಿ ಪ್ರಸ್ತುತ ವಚನಸಂಕಲನಕಾರರ ಶ್ರೀ ಬಿ.ಎಂ. ಪುಟ್ಟೇಗೌಡರೂ ಒಬ್ಬರು. ಈ ಆಧುನಿಕ ವಚನಕಾರರಿಗೆ ಕಾರಕವೂ ಪ್ರೇರಕವೂ ಪೂರಕವೂ ಆದುದು ಪ್ರಾಚೀನ ವಚನಸಾಹಿತ್ಯ ಎಂಬುದು ನಿರ್ವಿವಾದವಾದುದು. ಇವರೆಲ್ಲರೂ ಪ್ರಾಚೀನ ವಚನ ಸಾಹಿತ್ಯದಿಂದ ಸ್ಫೂರ್ತಿ ಮತ್ತು ಪ್ರೇರಣೆ ಪಡೆದಿರುವುದು ಸತ್ಯದ ಸಂಗತಿಯಾಗಿದೆ. ಅಷ್ಟೇಏಕೆ ಅನೇಕ ಆಧುನಿಕ ವಚನಕಾರರು ಪ್ರಾಚೀನ ವಚನಕಾರರ ಅನುಭವಗಳನ್ನು, ವಸ್ತುವಿಷಯಗಳನ್ನು ಯಥಾವತ್ತಾಗಿ ತಮ್ಮ ವಚನಗಳಲ್ಲಿ ಅನುಸರಿಸಿರುವುದು ನಿಜಸಂಗತಿಯಾಗಿದೆ.

ಪ್ರಾಚೀನವಚನಕಾರರು ಪ್ರಮುಖವಾಗಿ ಆಧ್ಯಾತ್ಮಿಕತೆಗೆ ಹೆಚ್ಚು ಒತ್ತನ್ನು ಕೊಟ್ಟವರು, ಈ ಆಧುನಿಕ ವಚನಕಾರರಾದರೋ ಆಧ್ಯಾತ್ಮಿಕದ ಜೊತೆಗೆ ಲೋಕಾನುಭವಗಳನ್ನೂ ಪ್ರಸ್ತುತ ವಿದ್ಯಮಾನಗಳನ್ನೂ ನಿರೂಪಿಸಿರುವುದು ಇವುಗಳ ವೈಶಿಷ್ಟ್ಯವಾಗಿದೆ. ಈ ಆಧುನಿಕ ವಚನಗಳಲ್ಲಿ ಧಾರ್ಮಿಕದ ಜೊತೆಗೆ ಲೌಕಿಕ, ಶೈಕ್ಷಣಿಕ, ರಾಜಕೀಯ, ಸಾಮಾಜಿಕಸಂಗತಿಗಳನ್ನು ಸಮೀಕರಿಸಿರುವುದು ಗಮನಾರ್ಹವಾದುದು. ಜೊತೆಗೆ ಇಂದು ರಾಷ್ಟ್ರದಲ್ಲಿ ತಾಂಡವವಾಡುತ್ತಿರುವ ಅನಾಚಾರ, ಅತ್ಯಾಚಾರ, ಭ್ರಷ್ಟಾಚಾರಗಳನ್ನು ಕಣ್ಣಿಗೆ ಕಟ್ಟುವಂತೆ ದಿಟ್ಟತನದಿಂದ ಬಯಲಿಗೆಳೆದಿರುವುದು ಆಧುನಿಕ ವಚನಸಾಹಿತ್ಯದ ವೈಶಿಷ್ಟ್ಯವಾಗಿದೆ.

ಪ್ರಸ್ತುತ ವಚನಕಾರರಾದ ಶ್ರೀ ಬಿ.ಎಂ. ಪುಟ್ಟೇಗೌಡರು ಮಲೆನಾಡಿನಿಂದ ಬೆಂಗಳೂರಿಗೆ ಬಂದು ನೆಲಸಿದ ಶ್ರೀಯುತರು ವೃತ್ತಿಯಿಂದ ವಕೀಲರು. ವಕೀಲವೃತ್ತಿಯ ಜೊತೆಗೆ ರಾಜಕೀಯವನ್ನು ಪ್ರವೇಶಿಸಿ ತಮ್ಮ ಅನುಪಮ

ಸಾಮಾಜಿಕ ಸೇವೆಯಿಂದ ಬೆಂಗಳೂರು ನಗರಪಾಲಿಕೆಯ ಮಹಾಪೌರರೂ ಆಗಿ ವಿಶಿಷ್ಟಕಾರ್ಯಗಳನ್ನು ಮಾಡಿದ್ದಾರೆ. ಶ್ರೀ ಪುಟ್ಟೇಗೌಡರ ಕನ್ನಡಪ್ರೇಮ ಅಸಾಧಾರಣವಾದುದು. ಶ್ರೀಯುತರು ಮಹಾಪೌರರಾಗಿದ್ದಾಗ ಅಂದು ಬಳಕೆಯಲ್ಲಿದ್ದ ಅನೇಕ ಇಂಗ್ಲಿಷ್‌ಹೆಸರುಗಳನ್ನು ಸಾರ್ಥಕವಾಗಿ ಕನ್ನಡೀಕರಿಸಿ ಬಳಕೆಗೆ ತಂದುದು ಇವರ ಕನ್ನಡ ಪ್ರೇಮಕ್ಕೆ ಸಾಕ್ಷೀಭೂತವಾಗಿದೆ. ಮೇಯರ್ ಎಂಬ ಶಿರೋನಾಮೆಯನ್ನು 'ಮಹಾಪೌರ' ಎಂದು ಬಳಕೆಗೆ ತಂದುದು ಇವರ ಕೀರ್ತಿಗೆ ಕಳಶವಿಟ್ಟಂತಾಗಿದೆ. ಶ್ರೀಯುತರು ತಮ್ಮ ಆಡಳಿತಾನುಭವಗಳನ್ನು ವಚನಗಳ ಮೂಲಕ ಅಭಿವ್ಯಕ್ತಗೊಳಿಸಿರುವುದು ಇವರ ಸಾಹಿತ್ಯಾಭಿರುಚಿಗೆ ದ್ಯೋತಕವಾಗಿದೆ. ಬಿ.ಎಂ. ಪುಟ್ಟೇಗೌಡರು ಈಗಾಗಲೇ 'ವಿಶ್ವಚೇತನ', 'ಕನ್ನಡ ನಗರ ಸುಂದರ ನಗರ' ಎಂಬ ಕವನ ಸಂಕಲನಗಳನ್ನು ಬರೆದು ಪ್ರಕಟಿಸಿದ್ದಾರೆ. ಜೊತೆಗೆ "ಬಿವೆಂಪು ವಚನಗಳು" ಎಂಬ ವಚನಸಂಕಲನವನ್ನು ಹೊರತಂದಿದ್ದಾರೆ.

ಪ್ರಸ್ತುತ ಮುನ್ನೂರು ವಚನಗಳ ಸಂಕಲನವನ್ನು ಹೊರತರುತ್ತಿರುವುದು ಶ್ರೀಯುತರ ಅದಮ್ಯ ಉತ್ಸಾಹಕ್ಕೆ ಹಿಡಿದ ಕನ್ನಡಿಯಾಗಿದೆ. ಈ ವಚನಗಳ ಅಂಕಿತ 'ಓ ತಂದೆ ಶಿವಾ'. ಈ ವಚನಗಳು ಪ್ರತಿಪಾದಿಸುವ ವಿಷಯಗಳು ವೈವಿಧ್ಯಮಯವಾಗಿವೆ, ವೈಶಿಷ್ಟ್ಯಪೂರ್ಣವಾಗಿವೆ. ತಮ್ಮ ಅಪಾರ ಲೋಕಾನುಭವದಿಂದ ತಾವು ಕಂಡ ವಿಷಯಗಳನ್ನು ಕಂಡಂತೆಯೇ ವಚನಗಳಲ್ಲಿ ಕಂಡರಿಸಿದ್ದಾರೆ. ವಚನೋದ್ದೇಶ ಶಿವಶರಣರ ಜಾತಿಮತಗಳ ಪರಿಕಲ್ಪನೆ ಮೂಢನಂಬಿಕೆಗಳ ನಿರಾಕರಣೆಯನ್ನು ಸಾರವತ್ತಾಗಿ ಚಿತ್ರಿಸಿದ್ದಾರೆ.

ತಮ್ಮ ಅನಿಸಿಕೆಗಳನ್ನು

ನನಗೇನೇ ಬರಲಿ ಬಿಡಲಿ
ನನ್ನ ಮನದಾಳದನಿಸಿಕೆಗಳ ಹಾಳೆಯಲಿ
ಇಳಿಸೆನ್ನ ಮನವ ಹಗುರ
ಮಾಡಿಕೊಳ್ಳುವುದರಲುಂಟು
ನನಗಾನಂದ ನಾನದಕೆ ಬರೆದಿರುವೆ ವಚನಗಳ ರೀತಿಯಲಿ
ಸರಿಯಿದ್ದರೆ ಸ್ವೀಕರಿಸಿ ತಪ್ಪಿದ್ದರೆ ತಳ್ಳಿಬಿಡಿ
ಓ ತಂದೆ ಶಿವಾ.

ಈ ಬಗೆಯಾಗಿ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಅಂತೆಯೇ ಜೀವನದ ಉದಾತ್ತತೆಯನ್ನು, ಕಾಶಿಯ ಒಂದು ನೈಜ ಚಿತ್ರಣವನ್ನೂ ರಾಮಮಂದಿರದ ಪರಿಕಲ್ಪನೆಯನ್ನೂ ಜ್ಯೋತಿಷ್ಯಶಾಸ್ತ್ರದ ವಿಡಂಬನೆಯನ್ನು ದುಡಿಮೆ, ಕಾಯಕನಿಷ್ಠೆ, ಆಸೆ ಆಕಾಂಕ್ಷೆಗಳು, ಹಣ ಗುಣಗಳ ತಾರತಮ್ಯ, ರಾಜಕೀಯ ವಿಡಂಬನೆ, ನ್ಯಾಯಾನ್ಯಾಯಗಳ ವಿವೇಚನೆ, ರಾಮಾಯಣ, ಮಹಾಭಾರತಗಳ ವ್ಯಾಖ್ಯಾನ, ಧರ್ಮದೈವಮಾನವ ಸಂಬಂಧಗಳು, ಪ್ರಕೃತಿ ಪರಿಸರ ಕಾಳಜಿ –ಇವೇ ಮೊದಲಾದ ಹಿಂದಿನ–ಇಂದಿನ ಜ್ವಲಂತ ಸಮಸ್ಯೆಗಳನ್ನು ತಮ್ಮದೇ ಆದ ರೀತಿಯಲ್ಲಿ ವಿಶ್ಲೇಷಿಸಿದ್ದಾರೆ. ಉದಾಹರಣೆಗೆ ಈ ವಚನಗಳನ್ನು ನೋಡಬಹುದು.

ಅಂದು ಬಸವ ಇಂದು ಕುವೆಂಪು
ಕಂದಾಚಾರದ ಕಡುವೈರಿಗಳಾದರಯ್ಯ
ಮೂಢನಂಬಿಕೆಗಳ ಬೇಟೆಯಾಡಿದರಯ್ಯ
ಜಾತೀಯತೆಯ ಜಾಡಿಸಿದರಯ್ಯ
ಮಾನವೀಯತೆಯ ಮಾನ್ಯ ಮಾಡಿದರಯ್ಯ
ವಿಶ್ವಮಾನವ ಸಂದೇಶವ ಸಾರಿದರಯ್ಯ
ವಿಶ್ವಮಾನವರಾದರಯ್ಯ
ವಿಶ್ವಮಾನವರನನುಸರಿಸಿರಯ್ಯ
ಓ ತಂದೆ ಶಿವಾ.

ಲೋಕೋಕ್ತಿಗಳನ್ನು ಗಾದೆಗಳನ್ನೂ ಪುಟ್ಟೇಗೌಡರು ಸಂದರ್ಭೋಚಿತವಾಗಿ ತಮ್ಮ ವಚನಗಳಲ್ಲಿ ತೋರಿದ್ದಾರೆ.

ಆಳು ಮಾಡುವುದು ಹಾಳು
ಮಗ ಮಾಡುವುದು ಮಧ್ಯಮ
ತಾನು ಮಾಡುವುದುತ್ತಮವೆಂದರಯ್ಯ
ಆಳರಿತು ಕೆಲಸ ಮಾಡುವನೇನಯ್ಯ
ಮಾಡುವುದು ತನದೆಂದು ತಿಳಿವನೇನಯ್ಯ
ಮಗ ಮಾಡುವುದು ನಡುವಿನಲಿ
ಬಿಡದೆ ಮುಗಿಸುವ ಹೊಣೆಗಾರಿಕೆಯುಂಟೇನಯ್ಯ
ಜವಾಬ್ದಾರಿಯರಿತು ತಾ ಮಾಡುವ
ಕೆಲಸವದಕುತ್ತಮವೆಂದರಯ್ಯ
ಓ ತಂದೆ ಶಿವಾ

ಈ ತೆರದ ಮತ್ತೊಂದು ವಚನ ಇಂತಿದೆ:

ಮಾತು ಮನೆ ಕೆಡಿಸಿತು
ತೂತುಮಡಕೆ ಒಲೆ ಕೆಡಿಸಿತೆಂದರಯ್ಯ
ಮಾತಿನ ಮೈಮರೆತು ಕಾಯಕವ
ಕಡೆಗಣಿಸದಿರಯ್ಯ
ಸಲ್ಲದ ಸೊಲ್ಲುಗಳಿಂದನ್ಯರ
ಮನ ನೋಯಿಸದಿರಯ್ಯ
ಅವಶ್ಯವಿರದ ಅರ್ಥವಿರದ
ಮಾತುಗಳನಾಡದಿರಯ್ಯ
ಮಿತಿಯಿರಲಿ ಮಾತಿಗೆ
ದುಡಿಮೆಯಿರಲಿ ದೇಹಕೆ
ಓ ತಂದೆ ಶಿವಾ

ಶ್ರೀ ಬಿ.ಎಂ. ಪುಟ್ಟೇಗೌಡರ ಈ ವಚನ ಸಂಕಲನದಲ್ಲಿ ದೈವ, ಧರ್ಮ, ಪ್ರಕೃತಿ, ಜೀವನ, ದುಡಿಮೆ, ಕಾಯಕ ಮೊದಲಾದ ಅನೇಕ ಸಂಗತಿಗಳನ್ನು ಕುರಿತಾದ ವಚನಗಳಿವೆ. ತಾವು ಕಂಡುಂಡು ಅನುಭವಿಸಿದ ಎಲ್ಲ ವಿಷಯಗಳನ್ನೂ ಕಣ್ಣಿಗೆ ಕಟ್ಟುವಂತೆ ಮನವರಿಕೆಯಾಗುವಂತೆ ನಿರೂಪಿಸಿರುವುದು ಈ ವಚನಕಾರರ ವೈಶಿಷ್ಟ್ಯವಾಗಿದೆ. ಈ ವಚನಗಳನ್ನು ಓದಿದಾಗ ಇವುಗಳ ರಚನೆಯಲ್ಲಿ ಯಾವುದೇ ಒಂದು ಕ್ರಮವನ್ನು ಅನುಸರಿಸಿದಂತೆ ಕಂಡುಬರುವುದಿಲ್ಲ. ಹಿಂದೊಮ್ಮೆ ಹೇಳಿದ ವಿಷಯವನ್ನೇ ಮುಂದೆ ಮತ್ತೊಮ್ಮೆ ಹೇಳಿರುವುದನ್ನು ಕಾಣಬಹುದಾಗಿದೆ. ಈ ವಚನಗಳು ಕಲಸುಮೇಲೋಗರ ದಂತಿವೆ. ಒಂದು ಕ್ರಮಬದ್ಧ ರೀತಿಯಲ್ಲಿ ಪ್ರತಿಯೊಂದು ವಿಷಯಕ್ಕೂ ಸಂಬಂಧಿಸಿದ ವಚನಗಳನ್ನು ಆಯಾಯ ಸ್ಥಲದಲ್ಲೇ ನಿರೂಪಿಸಿದ್ದರೆ ಮತ್ತಷ್ಟು ಪರಿಣಾಮಕಾರಿಯಾಗುತ್ತಿದ್ದುವು ಎಂದು ಭಾವಿಸಬಹುದಾಗಿದೆ. ಇದು ಎಂತಾದರೂ ಇರಲಿ. ಶ್ರೀ ಬಿ.ಎಂ. ಪುಟ್ಟೇಗೌಡರು ಲೌಕಿಕದಲ್ಲಿ ಕಂಡದ್ದನ್ನು ಪಾರಮಾರ್ಥಿಕ ದೃಷ್ಟಿಯಿಂದ ಪರಿಭಾವಿಸಿದ್ದಾರೆ. ಲೌಕಿಕ ಪಾರಮಾರ್ಥಿಕಗಳ ಸಮನ್ವಯತೆಯನ್ನು ಸಾಧಿಸುವತ್ತ ಕ್ರಮಿಸಿರುವುದು ಸ್ತುತ್ಯವಾದುದು. ಕವಿಯಾಗಿ, ವಚನಕಾರರಾಗಿ ಶ್ರೀಯುತರು ತಮ್ಮ ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳುವುದಕ್ಕೆ ಪ್ರಯತ್ನಿಸಿದ್ದಾರೆ. ಇಲ್ಲಿಯ ಬಾಳು ಹಸನಾಗಿರಬೇಕು. ತನ್ಮೂಲಕ ಮುಂದಿನ ಬಾಳನ್ನು ಹಸನುಮಾಡಿಕೊಳ್ಳಬಹುದು ಎಂಬ ನಂಬಿಕೆಯುಳ್ಳವರಾಗಿದ್ದಾರೆ. ಶ್ರೀಯುತರ ಈ ನಿಸ್ವಾರ್ಥ ಸಾಹಿತ್ಯಸೇವೆ ನಿರಂತರವಾಗಲಿ, ಜನತೆ ಶ್ರೀಯುತರ ಸಾಹಿತ್ಯವನ್ನು ಸಹೃದಯತೆಯಿಂದ ಸ್ವೀಕರಿಸಲಿ. ಈ ಆಧುನಿಕ ವಚನಕಾರರಿಗೆ ಎಲ್ಲ ಶ್ರೇಯಸ್ಸು, ಪ್ರೇಯಸ್ಸು ಲಭ್ಯವಾಗಲಿ ಎಂದು ಹಾರೈಸುತ್ತೇನೆ.

■

# ನಮ್ಮ ನಾಡು

ಬರೆದವರು: ರೇ. ಸಿದ್ಧಪ್ಪ, ಪ್ರಕಾಶಕರು: ಉಷಾಸಾಹಿತ್ಯ ಮಾಲೆ, ಮೈಸೂರು, ಕ್ರೌನ್ ಪುಟ ೧೦೨, ಬೆಲೆ: ೧–೨೫.
ಪುಸ್ತಕ ಪ್ರಪಂಚ : ಸಂಪುಟ–೬, ಸಂಚಿಕೆ–೯, ಏಪ್ರಿಲ್ ೧೯೫೨, ಪುಟ ೫೩–೫೪

ಶ್ರೀಯುತರು 'ಭಾರತದ ನಿರ್ಮಾಪಕರು' ಎಂಬ ಪುಸ್ತಕವನ್ನು ಬರೆದು ಕನ್ನಡಿಗರಿಗೆ ಪರಿಚಿತರಾಗಿದ್ದಾರೆ. ಈಗ 'ನಮ್ಮ ನಾಡು' ಎಂಬ ಪುಸ್ತಕವನ್ನು ಕನ್ನಡನಾಡಿಗೆ ಸಂಬಂಧಿಸಿದಂತೆ ಬರೆದಿರುತ್ತಾರೆ. ಕನ್ನಡ ನಾಡು, ಭಾಷೆ, ಸಾಹಿತ್ಯ, ಸಂಸ್ಕೃತಿ ಮತ್ತು ಕರ್ಣಾಟಕ ಏಕೀಕರಣ ಇವೇ ಮೊದಲಾದ ವಿಚಾರಗಳ ಮೇಲೆ ಹಲವಾರು ಪುಸ್ತಕಗಳೂ, ಲೇಖನಗಳೂ ಈಗಾಗಲೇ ಹೊರಬಿದ್ದಿವೆ. ಅವುಗಳ ಸಮುದಾಯಕ್ಕೆ 'ನಮ್ಮ ನಾಡು' ಸೇರತಕ್ಕದ್ದಾಗಿದೆ. ಇದು ಶ್ರೀ ಮೀನು ಮಸಾನಿಯವರ 'ಅವರ್ ಇಂಡಿಯಾ' ಪುಸ್ತಕದ ಮಾದರಿಯಲ್ಲಿದೆ. ಆದರೆ ಈ ಪುಸ್ತಕದಲ್ಲಿರುವ ವಿಷಯಗಳು ಕರ್ಣಾಟಕಕ್ಕೆ ಮಾತ್ರ ಸಂಬಂಧಿಸಿವೆ.

ಈ ಪುಸ್ತಕದಲ್ಲಿ ನಮ್ಮ ನಾಡು, ನಮ್ಮ ನಾಡಿನ ಸಂಪತ್ತು, ನಮ್ಮ ನಾಡಿನ ಸ್ಥಿತಿಗತಿಗಳು, ನಾವು ಬಡವರೇಕೆ, ವ್ಯವಸಾಯ ಮತ್ತು ರೈತರು, ಧನಬಲ, ಅರಣ್ಯ ಸಂಪತ್ತು, ಭೂಗರ್ಭನಿಧಿ, ಗ್ರಾಮ ಮತ್ತು ಗೃಹಕೈಗಾರಿಕೆಗಳು, ದೊಡ್ಡಕೈಗಾರಿಕೆಗಳು, ಮಲೆನಾಡಿನ ಅಭಿವೃದ್ಧಿ, ಗ್ರಾಮಾಭಿವೃದ್ಧಿ, ಸಮಾಜ ಸೌಲಭ್ಯಗಳು ಮತ್ತು ಕನ್ನಡನಾಡು ಎಂಬ ಶಿರೋನಾಮಗಳಿಂದ ಕೂಡಿದ ಭಾಗಗಳಿವೆ. ಪ್ರತಿಯೊಂದು ಭಾಗದಲ್ಲೂ ಅದಕ್ಕೆ ಸಂಬಂಧಪಟ್ಟ ವಿಷಯಗಳನ್ನು ಅಂಕಿಅಂಶಗಳಿಂದ ವಿವರಿಸಿರುತ್ತಾರೆ ಮತ್ತು ಈ ಅಂಕಿ ಅಂಶಗಳನ್ನು ಇತರ ದೇಶಗಳೊಡನೆ ಹೋಲಿಸಿ, ನಮ್ಮ ದೇಶ ಹೇಗೆ ಏಕೆ ಹಿಂದುಳಿದಿದೆ ಎಂಬುದನ್ನು ತೋರಿಸಿಕೊಟ್ಟಿರುತ್ತಾರೆ. ಇದರ ಭಾಷೆ ಸರಳವಾಗಿಯೂ ತಿಳಿಯಾಗಿಯೂ ಇದೆ. ಶ್ರೀಯುತರು ಗ್ರಂಥದ ಪ್ರಾರಂಭದಲ್ಲಿ ತಿಳಿಸಿರುವಂತೆ ಇದು ಜನಸಾಮಾನ್ಯರಿಗೂ, ಬಾಲಕ ಬಾಲಕಿಯರಿಗೂ ಹೆಚ್ಚು ಪ್ರಯೋಜನ ಉಳ್ಳದ್ದಾಗಿದೆ. ಗ್ರಂಥದಲ್ಲಿ ಹಲವಾರು ಕಡೆ ಒಂದೇ ಅಭಿಪ್ರಾಯ ಬರುವ ವಾಕ್ಯಗಳನ್ನೂ ಪದಗಳನ್ನೂ ಉಪಯೋಗಿಸಿರುತ್ತಾರೆ. ಇವನ್ನು ಸಾಮಾನ್ಯ ಜನಕ್ಕೆ ತಿಳಿಯಲೋಸುಗವೇ ಉಪಯೋಗಿಸಿರಬೇಕು. ಒಟ್ಟಿನಲ್ಲಿ ಈ ಪುಸ್ತಕದಿಂದ ಅನೇಕ ಉಪಯುಕ್ತ ವಿಷಯಗಳು ತಿಳಿದುಬರುತ್ತವೆ. 'ನಮ್ಮ ನಾಡು' ಕರ್ಣಾಟಕದ ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ವಿಚಾರಗಳ ಸಾಮಾನ್ಯ ಪರಿಚಯ ಮಾಡಿಕೊಡುವ ಒಂದು ಕೈಗನ್ನಡಿಯಂತಿದೆ.

## ಮಂದಾರಮಾಲೆ (ಕಥಾಸಂಕಲನ)

ಪುಸ್ತಕ ಪ್ರಪಂಚ ಸಂಪುಟ-೮, ಸಂಚಿಕೆ-೯, ಏಪ್ರಿಲ್ ೧೯೫೪, ಪುಟ ೪೨-೪೩. ಸಂಪಾದಕರು: ಶ್ರೀ ಕುಲವರ್ಮ ಬಾಲಕೃಷ್ಣ ಪೆರಡಾಲಕರ್ ಮುಂಜಾಡೆ, ದ.ಕ., ಬೆಲೆ: ರೂ. ಒಂದು ರೂಪಾಯಿ.

---

ಮಂದಾರಮಾಲೆ ಒಂದು ಕಥಾಸಂಕಲನ. ಇದರಲ್ಲಿ 'ವಿಮತಾ', 'ಹಾರ ಕದ್ದವರಾರು', 'ಆ ರಾತ್ರಿ', 'ಅಪ್ಪನಾಗಲಿಲ್ಲ', 'ಕತ್ತಲೆಯಿಂದ ಬೆಳಕಿಗೆ', 'ತಪ್ಪಿಗೆ ಶಿಕ್ಷೆ', 'ಮಾತುಕತೆ', 'ಧ್ಯೇಯವಾದಿ', 'ಸೇಡು', 'ಮುಂದೇನು' ಎಂಬ ಹತ್ತು ಸಣ್ಣಕತೆಗಳಿವೆ. ಬೇರೆ ಬೇರೆ ಲೇಖಕರ ಕಥೆಗಳಿವು. ಈ ಕಥಾಸಂಕಲನಕ್ಕೆ ಸುಪ್ರಸಿದ್ಧ ಕಾದಂಬರಿಕಾರರಾದ ಶ್ರೀ ಶಿವರಾಮ ಕಾರಂತರು ಮುನ್ನುಡಿಯನ್ನು ಬರೆದಿದ್ದಾರೆ. ಅದರಲ್ಲಿ "ವಿಷಯಕ್ಕಾಗಿ ಮಾತಿರಬೇಕೇ ಹೊರತು ಮಾತಿನ ಚಾಪಲ್ಯಕ್ಕಾಗಿ ವಿಷಯವನ್ನು ಬಳಸುವುದಲ್ಲ. ಕತೆಗಾರನೋ ಕವಿಯೋ ಆಗಬೇಕೆಂದು ಬಯಸುವಾತ ಮೊದಲು ಹೇಳಬೇಕಾದ ಅನುಭವವನ್ನು ಗಳಿಸಿಕೊಳ್ಳಬೇಕು. ಆಂತರ್ಯದಲ್ಲಿ ಅವುಗಳ ಒತ್ತಡ ತುಂಬಿದ್ದರೆ ಮಾತು ಸಹಜವಾಗಿ ಬಂದೀತು. ಮಾತಿನಲ್ಲಿ ತಪ್ಪಿದ್ದರೂ ಬಲ್ಲವರು ತಿದ್ದಿಕೊಡಬಹುದು. ಮಾತಿಗೆ ಗುರಿಯಾಗುವ ವಸ್ತು ಮಾತ್ರ ತಮ್ಮ ಅನುಭವದ ಸತ್ಯಕ್ಕೆ ಸಿಲುಕಿದ್ದಾದರೆ ಆಗ ಮಾತ್ರ ಉತ್ತಮಸಾಹಿತ್ಯ ಹೊರಟೀತು. ಕಥಾವಸ್ತುವಿರಲಿ, ವ್ಯಕ್ತಿಯೊಬ್ಬನ ಶೀಲದ ಚಿತ್ರಣವಿರಲಿ ಅವನ್ನು ಬರಿಯ ಊಹೆಯಿಂದ ತುಂಬಿಸಿಕೊಳ್ಳುತ್ತೇವೆಂದು ಹೊರಟರೆ ಅದು ತಪ್ಪುದಾರಿಯಾದೀತು. ಇಲ್ಲಿನ ಪ್ರತಿಯೊಂದು ಬರಹದಲ್ಲೂ ಹಾದಿತಪ್ಪಿದ್ದನ್ನು ಕಾಣುತ್ತೇವೆ" ಎಂಬ ಅನುಭವ ಸತ್ಯವನ್ನು ವ್ಯಕ್ತಪಡಿಸಿದ್ದಾರೆ. ಇದು ಎಷ್ಟರಮಟ್ಟಿಗೆ ಸತ್ಯ ಎಂಬುದು ಈ ಸಂಕಲನ ಓದಿದಾಗ ಅನುಭವಕ್ಕೆ ಬರುತ್ತದೆ.

ಕಾದಂಬರಿ ಮತ್ತು ಸಣ್ಣಕಥೆಗಳ ಬೆಳವಣಿಗೆ ದಿನದಿನವೂ ಅಭಿವೃದ್ಧಿಯಾಗುತ್ತಿದೆ. ಈ ದಶಕವಂತೂ ನೂರಾರು ಕಾದಂಬರಿಗಳನ್ನು ಕಂಡಿತು. ಸಣ್ಣಕಥೆಗಳ ಬೆಳಸು ಕಾದಂಬರಿಯಷ್ಟು ಹೆಚ್ಚಿಲ್ಲದಿದ್ದರೂ ಅವಕ್ಕೂ ಇಂದು ಬರಗಾಲವಿಲ್ಲ.

ಸಮಾಜ ಸ್ವಾರ್ಥಪರರಿಂದ ತುಂಬಿದೆ. ಈ ಸ್ವಾರ್ಥಿಗಳು ಮತ್ತೊಬ್ಬರ ಪ್ರಾಣವನ್ನೇ ಬಲಿಯಾಗಿ ಒಡ್ಡಿ ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುತ್ತಾರೆ. ಇದರ ಚಿತ್ರವನ್ನು 'ವಿಮತಾ' ಎಂಬ ಕಥೆಯಲ್ಲಿ ಕಾಣಬಹುದು. ಹೊನ್ನಮ್ಮನೆಂಬ ತರುಣಿಯನ್ನು ಹಣವಂತನಾದ ವೃದ್ಧ ಚಂದ್ರಯ್ಯನಿಗೆ ವಿವಾಹ ಮಾಡಿಸಿ ಆತನಿಂದ ಐದು ಸಾವಿರ ರೂಪಾಯಿಗಳನ್ನು ಸ್ವಾರ್ಥಿಯಾದ ಗೋವಿಂದ ಗಿಟ್ಟಿಸುತ್ತಾನೆ. ಚಂದ್ರಯ್ಯ ವೃದ್ಧನಷ್ಟೇ ಅಲ್ಲ; ರೋಗಿಯೂ ಹೌದು. ಈ ಕೊರಗಿನಲ್ಲಿಯೇ ಹೊನ್ನಮ್ಮ ನರಳಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಇಲ್ಲಿನ ಕಥೆಗಳಲ್ಲಿ ಒಂದೆರಡು ಕಥೆಗಳನ್ನು ಬಿಟ್ಟು ಉಳಿದುವೆಲ್ಲ ಧನಿ ಮತ್ತು ಜೀತದಾಳು ಇವರ ವಿಷಯಕ್ಕೆ ಸಂಬಂಧಪಟ್ಟವು. ಧನಿಯ ಹಿಂಸೆಗೆ ಈಡಾಗಿ ಅವನ ದೆಸೆಯಿಂದ ದೀನರು ಅನುಭವಿಸುವ ಕಷ್ಟಪರಂಪರೆಗಳ ರೂಪರೇಖೆಗಳನ್ನು ಇಲ್ಲಿ ಕಾಣುತ್ತೇವೆ. ಧನಿ ಧನಮದದಿಂದ ಕೊಬ್ಬಿ ಜೀತದಾಳಿನ ಜೀವವನ್ನು ಹೀರುತ್ತಿರುವುದರ, ಕಾಮುಕತನದಿಂದ ಆಳು ಮಗನ ಮಡದಿಯನ್ನು ಪಡೆಯಲು ಅನುಸರಿಸುವ ಚಿತ್ರವಿಚಿತ್ರ ಮಾರ್ಗಗಳ ನೈಜಚಿತ್ರಣವನ್ನು ಇಲ್ಲಿ ಕಾಣುತ್ತೇವೆ. ಇದಕ್ಕೆ ಉತ್ತಮ ಉದಾಹರಣೆಗಳೆಂದರೆ 'ಆ ರಾತ್ರಿ', 'ಸೇಡು', 'ಹಾರ ಕದ್ದವರಾರು' ಎಂಬ ಕಥೆಗಳು.

ಈ ಕಥೆಗಳಲ್ಲಿ ಕೆಲವು ಸಾಕಷ್ಟು ಪುಷ್ಟಿಗೊಂಡಿಲ್ಲ. 'ಹಾರ ಕದ್ದವರಾರು' ಎಂಬ ಕಥೆಯಲ್ಲಿ ಚಿಕ್ಕ ಧನಿ ಗೋವಿಂದ ಹಾರವನ್ನು ಕದ್ದು ತನ್ನ ಜೀತದಾಳು ಸುಬ್ಬನಿಗೆ ನಿಶ್ಚಿತವಾಗಿದ್ದ ಭಾಗಿಗೆ ಕೊಟ್ಟು, ಸುಬ್ಬನ ಮೇಲೆ ಕಳ್ಳತನದ ಅಪವಾದವನ್ನು ಹೊರಿಸಿ ಎರಡು ಜೀವಗಳ ದುರಂತಕ್ಕೆ ಕಾರಣನಾಗುತ್ತಾನೆ. ಇದರಲ್ಲಿ ಚಿಕ್ಕ ಧನಿ ಗೋವಿಂದ ಚಿನ್ನದ ಹಾರವನ್ನು ಕದ್ದು ಭಾಗಿಗೆ ಕೊಟ್ಟದ್ದಾದರೂ ಏಕೆ? ಕೊನೆಯಲ್ಲಿ ಭಾಗಿ ಚಿನ್ನದ ಹಾರವನ್ನು ತಂದು ಗೋವಿಂದನ ಅಣ್ಣನ ಮುಂದಿರಿಸಿ "ಇವರೇ ನನಗೆ ಈ ಹಾರವನ್ನು ಕೊಟ್ಟವರು" ಎಂದು ಗೋವಿಂದನನ್ನು ತೋರಿಸುತ್ತಾಳೆ. ಬಹುಶಃ ಇದರಿಂದಲೇ ಎಲ್ಲವನ್ನೂ ಊಹಿಸಿಕೊಳ್ಳಬೇಕಾಗುತ್ತದೆ.

ಇಲ್ಲಿನ ಕಥೆಗಳಲ್ಲಿ ವೈವಿಧ್ಯವಿಲ್ಲ. ಭಾಷೆಯೂ ಅಷ್ಟೇನೂ ಉತ್ತಮವಾಗಿಲ್ಲ. ಇದು ಒಂದು ಮಧ್ಯಮವರ್ಗದ ಸಂಕಲನ. ಇದರ ಮುದ್ರಣ ಅಷ್ಟಾಗಿ ಮನ ಒಪ್ಪುವಂತಿಲ್ಲ. ಹಿರಿಯರಾದ ಶ್ರೀ ಶಿವರಾಮ ಕಾರಂತರ ಉಪದೇಶವನ್ನು ಅನುಷ್ಠಾನಕ್ಕೆ ತಂದು ಉತ್ತಮ ಸಾಹಿತ್ಯ ಸೃಷ್ಟಿಗೆ ಈ ಪೆರಡಾಲದ ಮಿತ್ರರು ಮಾರ್ಗದರ್ಶಕರಾಗಲಿ.



# ಕಲ್ಯಾಣಿ

ಲೇಖಕರು: ಕುಮಾರ ವೆಂಕಣ್ಣ, ಪ್ರಕಾಶಕರು: ಶಾರದಾ ಪ್ರಕಣಾಲಯ, ಅರಳೇಪೇಟೆ, ಬೆಂಗಳೂರು–೨, ಕ್ರೌನ್ ಪುಟ ೩೩೪, ಬೆಲೆ: ಎರಡೂವರೆ ರೂಪಾಯಿ. ಪುಸ್ತಕ ಪ್ರಪಂಚ : ಸಂಪುಟ–೮, ಸಂಚಿಕೆ–೧೧, ಜೂನ್ ೧೯೫೪, ಪುಟ ೫೬–೫೮

---

**'ಕಲ್ಯಾಣಿ'** ಒಂದು ಕಾದಂಬರಿ. ನಾಟ್ಯಸರಸ್ವತಿಯಾಗಿ ಚಿತ್ರರಂಗವನ್ನು ಪ್ರವೇಶಿಸಿದ ಕಲ್ಯಾಣಿಯ ಜೀವನಚರಿತ್ರೆ ಇಲ್ಲಿ ಚಿತ್ರಿತವಾಗಿದೆ. ಬಾಲ್ಯದಲ್ಲಿಯೇ ಕಲಾಮಂಡಲವನ್ನು ಸೇರಿದ ಕಲ್ಯಾಣಿ ನೃತ್ಯ ಮತ್ತು ಸಂಗೀತಗಳಲ್ಲಿ ಅದ್ವಿತೀಯವಾದ ಪಾಂಡಿತ್ಯವನ್ನು ಪಡೆಯುತ್ತಾಳೆ. ಕಲಾಮಂಡಲದಲ್ಲಿ ಗಾಯನಾಚಾರ್ಯನಾಗಿದ್ದ ಕೃಷ್ಣರಾಯನಲ್ಲಿ ಕಲ್ಯಾಣಿಗೆ ಪ್ರೇಮವುಂಟಾಗುತ್ತದೆ. ಕಲ್ಯಾಣಿ ಕೃಷ್ಣರಾಯರಿಬ್ಬರೂ ಕಲಾಮಂಡಲವನ್ನು ಬಿಟ್ಟು ಮೈಸೂರಿಗೆ ಹೋಗುತ್ತಾರೆ. ಅಲ್ಲಿದ್ದ ಚಿತ್ರಸಂಸ್ಥೆಯಲ್ಲಿ ನೃತ್ಯ ಪ್ರದರ್ಶಿಸಲು ಅವಕಾಶ ಸಿಕ್ಕುತ್ತದೆ. ಇಷ್ಟರಲ್ಲೇ ಕಲ್ಯಾಣಿ ಮತ್ತೊಂದು ಚಿತ್ರಸಂಸ್ಥೆಯಲ್ಲಿಯೂ ಅಭಿನಯಿಸಲು ಒಪ್ಪಿಕೊಳ್ಳುತ್ತಾಳೆ. ಇದರಿಂದ ಕಲ್ಯಾಣಿ ಕೃಷ್ಣರಾಯರಲ್ಲಿ ವೈಮನಸ್ಯ ಮೂಡಿ ಕೃಷ್ಣರಾಯ ಅವಳನ್ನು ಬಿಟ್ಟು ಹೊರಟುಹೋಗುತ್ತಾನೆ. ಕಲ್ಯಾಣಿ ಶ್ರೀಮಂತನೂ ಚಿತ್ರಸಂಸ್ಥೆಯ ಮಾಲೀಕನೂ ಆದ ಪದ್ಮನಾಭನನ್ನು ಕಟ್ಟಿಕೊಂಡು ಸುಖವಾಗಿರುತ್ತಾಳೆ.

ಈ ಕಾದಂಬರಿಯಲ್ಲಿ ಕನ್ನಡ ಚಿತ್ರರಂಗದ ಶೈಸವಾವಸ್ಥೆ, ಚಿತ್ರ ತಯಾರಕರ ಅಶಕ್ತತೆ ಇನೇ ಮೊದಲಾದುವು ಹೃದಯಂಗಮವಾಗಿ ಚಿತ್ರಿತವಾಗಿವೆ. ಚಿತ್ರತಯಾರಿಕೆಯಿಂದ ಲಕ್ಷಾಂತರ ರೂಪಾಯಿ ಲಾಭವನ್ನು ಸಂಪಾದಿಸಬೇಕೆಂದು ಹೊರಟವರು ಜಮೀನ್ದಾರ್ ನಾರಣಪ್ಪ. ಗಿರವಿಅಂಗಡಿ ಬಬೂತ್ ಮಲ್ ಮತ್ತು ಮೋಟಾರ್ ಸರ್ವಿಸ್ ಮಾಲೀಕ ರುದ್ರಪ್ಪ. ಕಲ್ಯಾಣಿಯನ್ನು ಏನಾದರೂ ಮಾಡಿ ತನ್ನ ವಶಮಾಡಿಕೊಳ್ಳಬೇಕೆಂದು ಅವಳಿಗೆ ಮುಖ್ಯಪಾತ್ರವನ್ನು ಕೊಟ್ಟು ಚಿತ್ರಸಂಸ್ಥೆಯನ್ನು ಸ್ಥಾಪಿಸಿದವನು ಪದ್ಮನಾಭ. ಇಲ್ಲಿನ ಚಿತ್ರತಯಾರಕರು ಈ ಎರಡುದೃಷ್ಟಿಗಳನ್ನು ಮಾತ್ರ ಇಟ್ಟುಕೊಂಡು ಚಿತ್ರತಯಾರಿಕೆಗೆ ಕೈಹಾಕಿದಂತೆ ವ್ಯಕ್ತವಾಗುತ್ತದೆ. ಹಣವಂತರು ಸುಂದರ ನಟಿಯರನ್ನು ಪಡೆಯಲೋಸುಗವೇ ಈ ಉದ್ಯಮಕ್ಕೆ ಕೈಹಾಕುತ್ತಾರೆ. ನಿರ್ವಾಹವಿಲ್ಲದೆ ನಟಿಯರು ಅವರಿಗೆ ಬಲಿಯಾಗಬೇಕಾಗುತ್ತದೆ. ಇವೇ ಮುಂತಾದ ವಿಚಾರಗಳು ಈ ಕಾದಂಬರಿಯಲ್ಲಿ ರೂಪುಗೊಂಡಿವೆ. ಅಲ್ಲದೆ ಶ್ರೀಯುತರು ಚಿತ್ರತಯಾರಿಕಾ ವಿಧಾನವನ್ನು ತಮಗಾದ ಅನುಭವದಿಂದ ತಮ್ಮದೇ ಆದ ರೀತಿಯಲ್ಲಿ ವಿವರಿಸಿದ್ದಾರೆ.

ಈ ಕಾದಂಬರಿಯ ನಾಯಕಿ ಕಲ್ಯಾಣಿ. ಇವಳು ನಾಟ್ಯ ಸರಸ್ವತಿಯಾಗಿದ್ದರೂ ಯಾರ ಮನ್ನಣೆಗೂ ಪಾತ್ರಳಾಗುವುದಿಲ್ಲ. ಒಂದು ಸಂಸ್ಥೆಯಲ್ಲಿ ಅಭಿನಯಿಸಲು ಅವಕಾಶ ಸಿಕ್ಕುತ್ತಲೇ ಅದುವರೆಗೂ ಅವಳಲ್ಲಿ ಗುಪ್ತವಾಗಿದ್ದ ಅಹಂಭಾವವು ಹೆಡೆಯೆತ್ತಿ ತಾನೇ ತಾನಾಗಿ ನಿಲ್ಲುತ್ತದೆ. ತನಗೆ ಸರಿಸಮಾನರು ಯಾರೂ ಇಲ್ಲ ಎಂಬುದೇ ಅವಳ ನೀತಿಯಾಗುತ್ತದೆ. ಈ ಧೋರಣೆಯ ಪ್ರವಾಹದಲ್ಲಿ ಅವಳಿಗಾಗಿ ಸರ್ವಸ್ವವನ್ನೂ ತ್ಯಜಿಸಿ ಬಂದಿದ್ದ ಕೃಷ್ಣರಾಯ ಕೊಚ್ಚಿಕೊಂಡು ಹೋಗುತ್ತಾನೆ. ಒಮ್ಮೆಲೇ ಕಲ್ಯಾಣಿಯ ಈ ಬದಲಾವಣೆ ಅಸಹಜ. "ಸಿಹಿಗೆ ಇರುವೆ ಮುತ್ತುವುದು ಅನಿವಾರ್ಯ". ಅಂತೆಯೇ ಉತ್ತಮ

ನಟಿ ಮತ್ತು ಅನುಪಮ ಲಾವಣ್ಯಗಳಿಂದ ಕೂಡಿದ ಕಲ್ಯಾಣಿಯನ್ನು ಅನೇಕರು ಮುತ್ತುತ್ತಾರೆ. ಅಂದಮಾತ್ರಕ್ಕೇ ಆಕೆಯು ಅವರಿಗೆಲ್ಲ ಬಲಿಯಾಗಬೇಕೆಂದಲ್ಲ. ಅವಳ ದೃಷ್ಟಿಯೆಲ್ಲ ಹಣ ಸಂಪಾದಿಸುವುದರಲ್ಲೇ. ಅದಕ್ಕಾಗಿ ಯಾವ ಕೆಲಸ ಮಾಡಿದರೇನಂತೆ! ತನ್ನ ಇನಿಯ ತನ್ನನ್ನು ಬಿಟ್ಟು ಹೋದಾಗಲೂ ಆಕೆಗೆ ಅರಿವಾಗುವುದಿಲ್ಲ. ಇದ್ದ ಒಂದು ಆತಂಕವೂ ನಿವಾರಣೆಯಾಯಿತೆಂದು ಸಮಾಧಾನಪಟ್ಟುಕೊಳ್ಳುತ್ತಾಳೆ. ತನಗೆ ಸುಖವನ್ನುಂಟುಮಾಡಲು ಯಾರಾದರೊಬ್ಬ ಗಂಡಸು ಬೇಕು. ಅವನು ಯಾರಾದರೇನಂತೆ? ಈ ತುಚ್ಛಮನೋಭಾವದಿಂದ ತುಂಬಿದ್ದ ಕಲ್ಯಾಣಿ, ನಿತ್ಯಸುಮಂಗಲಿಯರ ಅಧಿದೇವತೆ, ಜಾರೆಯರ ಗುರುವಾಗುತ್ತಾಳೆ. ಹಣವಂತನಾದವನಿಗೆ ತನ್ನ ದೇಹವನ್ನು ಸಮರ್ಪಿಸಿಬಿಡುತ್ತಾಳೆ. ಚಿತ್ರ ಪ್ರಪಂಚಕ್ಕೆ ಕಾಲಿಟ್ಟ ಮಾತ್ರಕ್ಕೇ ಪಾತಿವ್ರತ್ಯವನ್ನೂ ಶೀಲವನ್ನೂ ಕಳೆದುಕೊಂಡು ಜಾರೆಯರಾಗಬೇಕಾಗಿಲ್ಲ. ನಾಟ್ಯಸರಸ್ವತಿ ಇವನ್ನು ಉಳಿಸಿಕೊಂಡಿದ್ದಲ್ಲಿ ಅವಳು ಪೂಜ್ಯವ್ಯಕ್ತಿಯಾಗುತ್ತಿದ್ದಳು. ಉಳಿದ ಪಾತ್ರಗಳ ನಿರೂಪಣೆ ತಕ್ಕಮಟ್ಟಿಗಿದೆ. ಕಾದಂಬರಿಯಲ್ಲಿ ಹಲವಾರೆಡೆ ಬರುವ ಹಾಡುಗಳು ಬೇಸರ ಹಿಡಿಸುತ್ತವೆ. ಮುದ್ರಣ ಅತೃಪ್ತಿಕರ. ಪುಟ ೨೪೯, ೨೫೧–೨೫೬ ಪುನರಾವರ್ತಿತವಾಗಿವೆ. ಇಷ್ಟೆಲ್ಲ ಲೋಪದೋಷಗಳಿಂದ ಕೂಡಿದ್ದರೂ ಚಿತ್ರರಂಗದಲ್ಲಿ ಅಭಿರುಚಿಯುಳ್ಳವರು ಒಮ್ಮೆ ಓದಬಹುದಾದ ಕಾದಂಬರಿ 'ಕಲ್ಯಾಣಿ'.



## ಏಷಿಯದ ಸಂಪತ್ತು

ಲೇಖಕರು: ಕು.ಶಿ. ಹರಿದಾಸಭಟ್ಟ, ಎಂ.ಎ., ಕ್ರೌನ್ ೧೬೪, ಬೆಲೆ: ೨.೦೦. ಪುಸ್ತಕ ಪ್ರಪಂಚ: ಸಂಪುಟ–೯, ಸಂಚಿಕೆ–೫. ಡಿಸೆಂಬರ್ ೧೯೫೪, ಪುಟ ೪೧–೪೨

ಹಲವಾರು ಉತ್ತಮ ಕೃತಿಗಳನ್ನು ರಚಿಸಿರುವ ಶ್ರೀ ಕು.ಶಿ. ಹರಿದಾಸಭಟ್ಟರು ಕನ್ನಡಿಗರಿಗೆ ಚಿರಪರಿಚಿತರಾಗಿದ್ದಾರೆ. ಅವರ ಇತ್ತೀಚಿನ ಕೃತಿ 'ಏಷಿಯಾದ ಸಂಪತ್ತು'. ಈ ಕೃತಿಯಲ್ಲಿ ಲೇಖಕರು ಏಷಿಯದ ಆರ್ಥಿಕ ಸ್ಥಿತಿಯ ಪರಿಚಯ ಮಾಡಿಕೊಟ್ಟಿದ್ದಾರೆ. ಇದರಲ್ಲಿ 'ಏಷಿಯದ ಸಂಪತ್ತಿನ ಮೂಲ', 'ಏಷಿಯಾದ ರಾಷ್ಟ್ರಗಳ ಕಥೆ', 'ಬೇನೆಯ ರೂಪರೇಖೆ', 'ವರಮಾನ ಮತ್ತು ಉತ್ಪನ್ನ', 'ಆಹಾರ ಮತ್ತು ಕೃಷಿ', 'ಸಾಂಪ್ರದಾಯಿಕ ಉದ್ಯಮಗಳ ಸಮಸ್ಯೆ', 'ಆಧುನಿಕ ಮಹೋದ್ಯಮ', 'ವರಮಾನ ಹೆಚ್ಚಿಸುವ ದಾರಿ', 'ತಾಂತ್ರಿಕ ಪ್ರಗತಿ ಮತ್ತು ಶಿಕ್ಷಣ', 'ಬಂಡವಾಳದ ಹರಿವು', 'ಸೋವಿಯೆಟ್ ಏಷಿಯ', 'ಜಪಾನಿನ ಆರ್ಥಿಕ ವಿಕಾಸ', 'ಅರ್ಥಮಂಡಲದ ಸಂಘಟನೆ' ಎಂಬ ಹದಿಮೂರು ಅಧ್ಯಾಯಗಳಿವೆ.

ಶ್ರೀಯುತರು ಏಷಿಯದ ರಾಜ್ಯಗಳ ಚಾರಿತ್ರಿಕ, ರಾಜಕೀಯ ಮತ್ತು ಮುಖ್ಯವಾಗಿ ಆರ್ಥಿಕ ಅಂಶಗಳನ್ನು ಆಳವಾಗಿ ವ್ಯಾಸಂಗ ಮಾಡಿ ಈ ಅಧಿಕೃತ ಗ್ರಂಥವನ್ನು ಕನ್ನಡಿಗರ ಮುಂದಿಟ್ಟಿದ್ದಾರೆ. ಕೇವಲ ಆರ್ಥಿಕ ಸ್ಥಿತಿಯನ್ನೇ ಚಿತ್ರಿಸಲು ತೊಡಗಿದ್ದರೂ ಚಾರಿತ್ರಿಕ ಮತ್ತು ರಾಜಕೀಯಗಳು ಹಾಸುಹೊಕ್ಕಾಗಿ ಹೆಣೆದುಕೊಂಡಿರುವುದು ಅನಿವಾರ್ಯವಾಗಿದೆ. ಈ ಚಾರಿತ್ರಿಕ ಮತ್ತು ರಾಜಕೀಯಗಳ ವಿವರಣೆಯಿಂದ ಆರ್ಥಿಕ ಸ್ಥಿತಿಯ ಸಂಪೂರ್ಣ ಚಿತ್ರ ಓದುಗರ ಮುಂದೆ ನಿಲ್ಲುತ್ತದೆ. ಏಷಿಯದ ರಾಜ್ಯಗಳನ್ನು ಇತರ ಮುಂದುವರಿದ ರಾಜ್ಯಗಳೊಡನೆ ಹೋಲಿಕೆಮಾಡಿ ಇವು ಯಾವರೀತಿ ಹಿಂದುಳಿದಿವೆ ಎಂಬುದನ್ನು ಅಂಕಿಅಂಶಗಳಿಂದ ಸ್ಪಷ್ಟಪಡಿಸಿದ್ದಾರೆ.

ಏಷಿಯದ ಬೇನೆಯ ರೂಪರೇಖೆಗಳನ್ನೂ ಅವುಗಳ ಪರಿಹಾರೋಪಾಯಗಳನ್ನೂ ಸೂಚಿಸಿದ್ದಾರೆ. ಈ ಪರಿಹಾರೋಪಾಯಗಳು ಗಮನಾರ್ಹವಾದುವು. ಏಷಿಯದ ದಾರಿದ್ರ್ಯಕ್ಕೆ ಹಲವಾರು ಕಾರಣಗಳಿವೆ. ಅವುಗಳಲ್ಲಿ ಹೆಸರಿಸುವಂತಹವು ವಿದೇಶೀಯರ ಆಕ್ರಮಣ, ಸ್ವದೇಶಿಯರ ಆಲಸ್ಯ ಮತ್ತು ಅಜ್ಞಾನ. ದಿನೇ ದಿನೇ ವಿಪುಲವಾಗಿ ಬೆಳೆಯುತ್ತಿರುವ ಜನಸಂಖ್ಯೆ ಇವೇ ಮುಂತಾದ ಕಾರಣಗಳು. ಲೇಖಕರು ಈ ಎಲ್ಲ ಅಂಶಗಳನ್ನೂ ಕೂಲಂಕಷವಾಗಿ ವಿವರಿಸಿ ಸೂಕ್ತಪರಿಹಾರ ಮಾರ್ಗಗಳನ್ನು ಎತ್ತಿತೋರಿಸಿದ್ದಾರೆ.

ಈ ಗ್ರಂಥಕ್ಕೆ ಸುಪ್ರಸಿದ್ಧ ಸಾಹಿತಿಗಳೂ, ಅರ್ಥಶಾಸ್ತ್ರಜ್ಞರೂ ಆದ ಶ್ರೀ ವಿ. ಸೀತಾರಾಮಯ್ಯನವರು ಮುನ್ನುಡಿಯನ್ನು ಬರೆದು ಇದರ ಮೇಲ್ಮೆಯನ್ನು ಮತ್ತಷ್ಟು ಹೆಚ್ಚಿಸಿದ್ದಾರೆ. ಮುನ್ನುಡಿಯಲ್ಲಿನ ಕೆಲವಂಶಗಳು ಉಲ್ಲೇಖಾರ್ಹವಾಗಿವೆ. ಇಂದಿನ ಸ್ಥಿತಿಗೆ ಈ ನಾಡುಗಳನ್ನು ತಂದ ಕಾರಣಗಳೂ, ಪ್ರಭಾವಗಳೂ ಯಾವುವು? ಸ್ಥಿತಿಯ ಸ್ವರೂಪ ಬಲಾಬಲ ಯಾವುವು? ನಾಳೆಗೆ ಏನೇನನ್ನು ಹೇಗೆ ಹೇಗೆ ಮಾಡಬೇಕು? ಒಳಹೊರ ನೆರವಿನ ಮಾರ್ಗಗಳಾವುವು? ಎಂಬುದನ್ನು ಪರ್ಯಾಲೋಚಿಸಿ ಕಾರ್ಯೋನ್ಮುಖವಾಗಬೇಕಾಗಿದೆ ಎಂಬುದರ ಪರಿಚಯ ಬಹುಶಃ ಭಟ್ಟರ ಈ ಪುಸ್ತಕದಲ್ಲಿ ಮೊದಲ

ಸಲ ಆಗುತ್ತಿದೆ. ಹಲವು ಗ್ರಂಥಗಳಿಂದ ವಸ್ತುವನ್ನು ಸಂಗ್ರಹಿಸಿ ತಿಳಿಗನ್ನಡದಲ್ಲಿ ಇದನ್ನು ಬರೆದಿದ್ದಾರೆ. ಇದರ ಪ್ರಯೋಜನವನ್ನು ಕನ್ನಡಿಗರು ಪಡೆದು ಉಪಕೃತರಾಗುತ್ತಾರೆಂದು ನನ್ನ ನಂಬಿಕೆ.

ಸ್ಥಿತಿಯಲ್ಲಿ ಯಾವೆಲ್ಲ ತೊಡಕುಗಳಿವೆಯೆಂದು ಅವರು ಬಲ್ಲರು. ಅವರು ಹೇಳುವುದನ್ನೆಲ್ಲ ಎಲ್ಲರೂ ಒಪ್ಪಲಿ, ಬಿಡಲಿ ಅಭಿಪ್ರಾಯ ಸ್ವಾತಂತ್ರ್ಯ ಎಲ್ಲರಿಗೂ ಉಂಟು. ಅವರು ಕಾಣಿಸುವ ನೋಟ ಎಲ್ಲರ ಗಮನಕ್ಕೂ ಬರಬೇಕು.

ಗ್ರಂಥದಲ್ಲಿ ಸಾಕಷ್ಟು ಚಿತ್ರಗಳಿವೆ. ಇವು ಬಹುಮಟ್ಟಿಗೆ ಉಪಯುಕ್ತವಾಗಿವೆ. ಮುದ್ರಣ ತೃಪ್ತಿಕರವಾಗಿದೆ. ಲೇಖಕರ ಉತ್ತಮ ಶೈಲಿಯಿಂದ ಗ್ರಂಥದ ಯಾವ ಭಾಗವೂ ಬೇಸರಕ್ಕೆ ಎಡೆಗೊಟ್ಟಿಲ್ಲ. ಕನ್ನಡಿಗರೆಲ್ಲರೂ ಆದರದಿಂದ ಸ್ವಾಗತಿಸಿ ಸಂಗ್ರಹಿಸಬೇಕಾದ ಗ್ರಂಥ 'ಏಷಿಯದ ಸಂಪತ್ತು'. ಈ ಉಪಯುಕ್ತ ಕೃತಿ ಉತ್ತಮ ಕಾಗದದ ಮೇಲೆ ಅಚ್ಚಾಗಬೇಕಾಗಿತ್ತು.



# ಹೂವಿನ ಸೆರೆ

ಲೇಖಕರು: ಶ್ರೀ ಕೃ.ನ. ಮೂರ್ತಿ, ಪ್ರಕಾಶಕರು: ವಿಶಾಲ ಸಾಹಿತ್ಯಮಾಲೆ, ಮೈಸೂರು, ಬೆಲೆ: ಉತ್ತಮ ಪ್ರತಿ ಒಂದು ರೂಪಾಯಿ, ಸಾದಾ ಪ್ರತಿ ಹನ್ನೆರಡಾಣೆ. ಪುಸ್ತಕ ಪ್ರಪಂಚ : ಸಂಪುಟ–೮, ಸಂಚಿಕೆ–೧೦, ಮೇ ೧೯೫೪, ಪು.೪೫–೪೬

---

**ಹೂ**ವಿನ ಸೆರೆ ಒಂದು ಸಾಮಾಜಿಕ ಕಾದಂಬರಿ. ಇದು ಈ ಲೇಖಕರ ಮೊದಲ ಕೃತಿ. ಕಾದಂಬರಿಯ ಕಥೆ ತೊಡಕಿಲ್ಲದೆ ಸರಳವಾಗಿದೆ.

ರಾಮಯ್ಯ ಒಬ್ಬ ಸರ್ಕಾರಿ ನೌಕರ. ಸುಂದರಮ್ಮ ಆತನ ಗೃಹಿಣಿ. ಶಾಂತ, ಕುಮುದ, ಇಂದಿರ ಇವರ ಮೂವರು ಹೆಣ್ಣುಮಕ್ಕಳು. ಈ ಕುಟುಂಬಕ್ಕೆ ತಬ್ಬಲಿಯಾದ ಶಾಮ ವಿದ್ಯಾಭ್ಯಾಸ ನಿಮಿತ್ತ ಬಂದು ಸೇರಿದ. ಕ್ರಮೇಣ ಅವನೂ ಕುಟುಂಬಕ್ಕೆ ಸೇರಿದವನೇ ಆಗಿಹೋದ. ಒಮ್ಮೆ ಅವನು ಕಾಯಿಲೆ ಬಿದ್ದಾಗ ರಾಮಯ್ಯ ಸುಂದರಮ್ಮ ಇವರ ಆದರದಿಂದಲೂ ಶಾಂತಳ ಶುಶ್ರೂಷೆಯಿಂದಲೂ ಗುಣಮುಖನಾದ. ಈ ಘಟನೆಯಿಂದ ಶಾಮ, ಶಾಂತ ಇವರ ಮನಸ್ಸು ಹೃದಯಗಳು ತೀರಾ ಸಮೀಪವಾದುವು. ಅಂತೆಯೇ ಪ್ರೇಮಾಂಕುರಾರ್ಪಣವೂ ಆಯಿತು. ಇದು ರಾಮಯ್ಯ ಸುಂದರಮ್ಮನವರಿಗೂ ಗೊತ್ತು. ಆದರೆ ಅವರು ಪ್ರಯಾಸವಿಲ್ಲದೆ ಅಳಿಯ ಸಿಕ್ಕಿದನೆಂದು ಯಾವ ಪ್ರತಿಬಂಧವನ್ನೂ ಮಾಡುವುದಿಲ್ಲ. ಶಾಂತ 'ಇಂಟರ್ ಮೀಡಿಯೇಟ್' ಮುಗಿಸಿ ಅದರ ಜೊತೆಗೆ ಹಿಂದಿ 'ವಿಶಾರದ' ಪರೀಕ್ಷೆಯನ್ನೂ ಮಾಡಿಕೊಂಡಿದ್ದಳು. ಶಾಮನ ವಿದ್ಯಾಭ್ಯಾಸ ನಿರಾತಂಕವಾಗಿ ಮುಂದುವರಿಯಲಿ ಎಂಬ ಉದಾತ್ತ ಮನೋಭಾವದಿಂದ ಈಕೆ ತನ್ನ ಓದನ್ನೇ ನಿಲ್ಲಿಸಿ ಹಿಂದಿ ಶಿಕ್ಷಕಿಯಾಗಿ ಸೇರಿದಳು. ಶಾಮ ವಿದ್ಯಾಭ್ಯಾಸ ಪೂರ್ತಿಗೊಳಿಸಿ ಜೀವನೋಪಾಯ ಹುಡುಕಲು ತೊಡಗಿದ. ಶಾಂತಳ ಮದುವೆ ವಿಷಯವಾಗಿ ರಾಮಯ್ಯ, ಸುಂದರಮ್ಮನವರಿಗೆ ಬಿರುಸಾಗಿ ಮಾತುಕತೆ ನಡೆಯಿತು. ಇದು ಶಾಮನ ಕಿವಿಗೆ ಬಿದ್ದು ಅವನು ಯಾರಿಗೂ ತಿಳಿಯದಂತೆ ಹೊರಟು ಕೊನೆಗೆ ತನ್ನ ಆಪ್ತಮಿತ್ರನಾದ ಪ್ರಸನ್ನನ ಮನೆ ಸೇರಿದ. ಆಮೇಲೆ ರಾಮಯ್ಯನಿಗೂ ಶಾಂತಳಿಗೂ ಬೇರೆ ಬೇರೆ ಪತ್ರವನ್ನು ಬರೆದು ಪ್ರಸನ್ನನೊಡನೆ ಕಳುಹಿಸಿಕೊಟ್ಟ. ಶಾಮನ ಕಾಗದ ಓದಿದ ರಾಮಯ್ಯನವರು ಅವನ ಸಾಮಾನುಗಳನ್ನು ಪ್ರಸನ್ನನೊಡನೆ ಕಳುಹಿಸಿದರು. ಪ್ರಸನ್ನ ಮದುವೆಗೆ ಬೇಕಾದ ಖರ್ಚಿನ ಪಟ್ಟಿಯೊಂದನ್ನು ಸಿದ್ಧಪಡಿಸುವಂತೆ ಸುಂದರಮ್ಮನವರಿಗೆ ಹೇಳಿ ಅಲ್ಲಿಂದ ಹೊರಟ. ಶಾಂತ ತಾಯಿಗೆ ಶಾಮನ ಪತ್ರವನ್ನು ಓದಿ ಹೇಳುವಳು. ಅವರಿಬ್ಬರೂ ಅವನ ಗುಣಗಾನದಲ್ಲಿಯೇ ತಲ್ಲೀನರಾಗುವರು.

ಕಾದಂಬರಿಯ ಕಥೆ ಉತ್ತಮವಾದದ್ದೇ. ಆದರೆ ಅದರ ನಿರೂಪಣೆ ಅಷ್ಟಾಗಿ ಸಮರ್ಪಕವಾಗಿಲ್ಲ. ಇನ್ನು ಪಾತ್ರಗಳ ಪರಿಪೋಷಣೆಯಂತೂ ತೀರಾ ಅತೃಪ್ತಿಕರವಾಗಿದೆ. ಶಾಮ ಕಥಾನಾಯಕನಾಗಿ ಓದುಗರನ್ನು ನಿರಾಶೆಗೊಳಿಸುತ್ತಾನೆ. ಜೀವನದಲ್ಲಿ ಸಂಭವಿಸುವ ಎಡರು–ತೊಡರುಗಳನ್ನು ಎದುರಿಸಲು ಧೈರ್ಯವಿಲ್ಲದೆ ಅನಾವಶ್ಯಕವಾಗಿ ದೈವ, ಧರ್ಮ ವೇದಾಂತ, ಸಮಾಜ ಇವುಗಳ ನಿಂದನೆಗೂ, ಜಿಜ್ಞಾಸೆಗೂ ತೊಡಗುತ್ತಾನೆ. ಇದರಿಂದ ಮೂಲಕಥೆಗೆ ಕಿಂಚಿತ್ ಪ್ರಯೋಜನವೂ ಇಲ್ಲ. ಲೇಖಕರು ಈ ನಿಂದನೆ ಜಿಜ್ಞಾಸೆಗಳಿಗೆ ಕೊಡುವ ಗಮನವನ್ನು ಪಾತ್ರಪರಿಪೋಷಣೆಗೆ ಕೊಟ್ಟಿದ್ದರೆ ಚೆನ್ನಾಗಿತ್ತು.

ಕಥಾನಾಯಕಿ ಶಾಂತಳ ಪಾತ್ರವೂ ಶಾಮನ ಪಾತ್ರದಂತೆಯೇ ಸಪ್ಪೆಯಾಗಿದೆ; ಬೆಪ್ಪಾಗಿದೆ. ರಾಮಯ್ಯ ತಂದೆಯ ಪಾತ್ರದಲ್ಲಿ ತೀರಾ ಅಸಹಾಯಕ ವ್ಯಕ್ತಿಯಾಗಿ ವರ್ತಿಸುತ್ತಾನೆ. ಸ್ವಂತ ಮಗಳ ಮುಂದಿನ ಸುಖವನ್ನೇ ಕಡೆಗಣಿಸಿ ಆಕೆಯನ್ನು ಕೆಲಸಕ್ಕೆ ಹಾಕಿ ತನ್ನ ಸಂಸಾರದ ಹೊರೆಯನ್ನು ಹಗುರ ಮಾಡಿಕೊಳ್ಳಲು ಹಂಚಿಕೆ ಹಾಕುತ್ತಾನೆ. ಇದನ್ನು ತಂದೆ ಎನಿಸಿಕೊಂಡವನು ಎಂದೂ ಮಾಡಲಾರ. ಸದ್ಗೃಹಿಣಿಯಾಗಿ ಸುಂದರಮ್ಮ ಓದುಗರ ಸಹಾನುಭೂತಿಗೂ, ಮೆಚ್ಚುಗೆಗೂ ಪಾತ್ರಳಾಗುತ್ತಾಳೆ. ಪ್ರಸನ್ನನ ಪಾತ್ರ ಚೆನ್ನಾಗಿದೆ.

ಕಥೆ ಮುಗಿದ ಮೇಲೆ 'ಮುಂದೇನು?' ಎಂಬ ಪ್ರಶ್ನೆ ಬಹುಮಟ್ಟಿಗೆ ಏಳಲಾರದೆಂಬುದು ಲೇಖಕರ ತಿಳುವಳಿಕೆ. ಆದರೆ ಓದುಗರಲ್ಲಿ ಈ ಪ್ರಶ್ನೆ ತಾನಾಗಿಯೇ ಮೂಡುತ್ತದೆ. ಈ ವಿಚಾರದಲ್ಲಿ ಲೇಖಕರಿಗೆ ಸ್ಪಷ್ಟಾಭಿಪ್ರಾಯವಿದ್ದಂತೆ ತೋರುವುದಿಲ್ಲ. ಶಾಮನೇನೋ ಪ್ರಸನ್ನನ ಮನೆಗೆ ಹೋದ. ಮುಂದೇನಾದ? ಜೀವನೋಪಾಯವನ್ನೇನಾದರೂ ಕಲ್ಪಿಸಿಕೊಂಡನೇ? ಪ್ರಸನ್ನನೇನಾದರೂ ಇವನಿಗೆ ಜೀವನದಲ್ಲಿ ಒಂದು ದಾರಿ ಕಾಣಿಸಿರಬಹುದೇ? ಇವೇ ಮೊದಲಾದ ಪ್ರಶ್ನೆಗಳು ಪ್ರಶ್ನೆಗಳಾಗಿಯೇ ಉಳಿದಿವೆ.

ಕೊನೆಯದಾಗಿ ಶೈಲಿಯ ವಿಚಾರದಲ್ಲಿ ಒಂದು ಮಾತು. ಕ್ಲಿಷ್ಟಪದಗಳಿಂದ ಕೂಡಿದ ಉದ್ದುದ್ದ ವಾಕ್ಯಗಳನ್ನು ಬರೆದಷ್ಟರಿಂದಲೇ ಯಾರೂ ಉತ್ತಮ ಬರಹಗಾರರಾಗುವುದಿಲ್ಲ. ಅದನ್ನು ಗಮನದಲ್ಲಿರಿಸಿಕೊಂಡು ಲೇಖಕರು ಬರಲಿರುವ ಕೃತಿಗಳನ್ನು ಸಹಜಶೈಲಿಯಲ್ಲಿ ಬರೆದರೆ ಒಳ್ಳೆಯದು. ಪುಸ್ತಕದ ಮುದ್ರಣ ಅಷ್ಟರಲ್ಲೇ ಇದೆ. ಮುದ್ರಾರಾಕ್ಷಸನ ಹಾವಳಿಗೇನೂ ಕೊರತೆಯಿಲ್ಲ. ಲೇಖಕರೇ ಹೇಳಿರುವಂತೆ ಅನ್ನವಾಗುವುದಕ್ಕಿಂತ ಮುಂಚೆ ಗಂಜಿಯುಕ್ಕಲೇ ಬೇಕು; ಉಕ್ಕಿದೆ. ಅದನ್ನು ಆದರದಿಂದ ಸ್ವೀಕರಿಸಬೇಕು. ಉತ್ತಮ ಕೃತಿಗಳು ಸೃಷ್ಟಿಯಾಗುವುದಕ್ಕಿಂತ ಮುಂಚೆ ಇಂತಹ ಕೃತಿಗಳು ರಚನೆಯಾಗಲೇಬೇಕು.



# ಭಾರತೀಯ ಕಥೆಗಳು

ಪುಸ್ತಕ ಪ್ರಪಂಚ ಸಂಪುಟ–೯, ಸಂಚಿಕೆ–೪, ನವೆಂಬರ್ ೧೯೫೪. ಪುಟ ೪೬–೪೭. ಸಂಪಾದಕರು ಮತ್ತು ಪ್ರಕಾಶಕರು: ಶ್ರೀ ಎಂ. ಹರಿದಾಸರಾವ್, ಸರ್ವೋದಯ ಸಾಹಿತ್ಯಮಾಲೆ, ಹುಬ್ಬಳ್ಳಿ. ಕ್ರೌನ್ ಪುಟಗಳು ೧೩೭, ಬೆಲೆ: ರೂ. ೧೦

---

**ಭಾ**ರತೀಯ ಕಥೆಗಳು ಒಂದು ಕಥಾಸಂಕಲನ. ಈ ಸಂಕಲನದಲ್ಲಿ 'ಅಪರಾಧಿ', 'ಅಂದು ಮತ್ತು ಇಂದು', 'ಇಬ್ಬರು ವೈದ್ಯರು', 'ದೊಂಬರಾಟ', 'ಕೊನೆಗಾಲದವರೆಗೆ', 'ಹಸಿವೆಯ ಭೂತ', 'ಕಲಾವಿದನ ಪ್ರತಿಮೆ', 'ಪ್ರತ್ಯಾವರ್ತನ', 'ಹೂ ಅರಳಿತು', 'ಟೈಪಿಸ್ಟ್' ಮತ್ತು 'ವಸಂತನ ಮದುವೆ' ಎಂಬ ಹನ್ನೊಂದು ಕಥೆಗಳಿವೆ. ಇವು ಕ್ರಮವಾಗಿ ಮಲೆಯಾಳಿ, ತಮಿಳು, ಹಿಂದಿ, ಬಂಗಾಲಿ, ಗುಜರಾತಿ, ಉರ್ದು, ಒರಿಯಾ, ಬಂಗಾಲಿ, ತೆಲುಗು, ಅಸ್ಸಾಮಿ ಮತ್ತು ಮರಾಠಿ ಭಾಷೆಗಳಿಂದ ಭಾಷಾಂತರ ಮಾಡಿದುವು.

ಅಪರಾಧಿ, ಡೊಂಬರಾಟ, ಹಸಿವೆಯ ಭೂತ ಈ ಕಥೆಗಳಲ್ಲಿ ದೀನರು ಹೊಟ್ಟೆಪಾಡಿಗಾಗಿ ಪಡುವ ಕಷ್ಟಗಳನ್ನು ಚಿತ್ರಿಸಲಾಗಿದೆ. ತನ್ನ ಧನಿಯಿಂದ ಎರಡು ರೂಪಾಯಿಗೆ ಒಂದು ಸೇರು ಅಕ್ಕಿಯನ್ನು ಕೊಂಡು ಮನೆಗೆ ಹಿಂತಿರುಗುತ್ತಿದ್ದ ನಿರಪರಾಧಿ ಗೋಪಾಲನಾಯರ್ ಪೊಲೀಸಿನವನ ಕೈಗೆ ಸಿಕ್ಕಿ ಅಪರಾಧಿಯಾಗುತ್ತಾನೆ. ಡೊಂಬರಾಟಗಾರನಾದ ವೃದ್ಧ ಮಂತಾಜ್ ಗೇಣುಹೊಟ್ಟೆಗಾಗಿ ತನ್ನ ಮಕ್ಕಳ ಪ್ರಾಣವನ್ನೇ ಪಣವಾಗಿ ಒಡ್ಡಿ, ಬಿಕ್ಕೆಬೇಡಿ ನಿರಾಶನಾಗುತ್ತಾನೆ. ಹಸಿವೆಯ ಭೂತದಲ್ಲಿ ಶಕೀಲಾ ಒಪ್ಪೊತ್ತಿನ ಊಟಕ್ಕಾಗಿ ತನ್ನ ಹಿಂದೂ ಅಕ್ಕನನ್ನು ಬೇಡಿ ಹತಾಶಳಾಗಿ ತಾನೂ ಆಕೆಯ ದುಃಖದಲ್ಲಿ ಒಂದಾಗುತ್ತಾಳೆ.

ಅಂದು ಸಾಮುವೇಲುವಿನ ಮೋಟಾರಿನ ಚಾಲಕನಾಗಿದ್ದ ಪರಂಕುಶಂ ತನ್ನ ಒಡೆಯನನ್ನು ಕ್ಲುಪ್ತವಾದ ಕಾಲಕ್ಕೆ ಕೊಂಡೊಯ್ಯಲು ಒಂದು ನಾಯಿಯ ಪ್ರಾಣವನ್ನು ತೆಗೆದುಕೊಳ್ಳಬೇಕಾಗುತ್ತದೆ. ಇದರಿಂದ ಜುಗುಪ್ಸೆಗೊಂಡು ಕೆಲಸವನ್ನು ಬಿಟ್ಟು ಕೊನೆಗೆ ಉದ್ಯಮದಿಂದ ಶ್ರೀಮಂತನಾಗುತ್ತಾನೆ. ಆಗ ತಾನೇ ಒಂದು ಮೋಟಾರನ್ನೂ ಚಾಲಕನನ್ನೂ ಇಟ್ಟುಕೊಳ್ಳುವನು. ಅಂದು ತಡವಾಗಿ ವಿವಾಹಕ್ಕೆ ಹೊರಟ ಪರಂಕುಶಂ ಚಾಲಕನನ್ನು ಕೈದಾ ಒಂದು ಆಡು ಮತ್ತು ಅದರ ಮರಿಯ ಸಾವಿಗೆ ಕಾರಣನಾಗುತ್ತಾನೆ.

ಇಬ್ಬರು ವೈದ್ಯರು ಎಂಬ ಕಥೆ ಉತ್ತಮದರ್ಜೆಯದು. ಈ ಕಥೆ ನಾಟಕರೂಪದಲ್ಲಿ ಬಾನುಲಿ ಕೇಂದ್ರದಿಂದ ಪ್ರಸಾರವಾಯಿತು. 'ಕೊನೆಗಾಲದವರೆಗೆ', 'ಕಲಾವಿದನ ಪ್ರತಿಮೆ', 'ಪ್ರತ್ಯಾವರ್ತನ', 'ಹೂ ಅರಳಿತು', 'ಟೈಪಿಸ್ಟ್' ಮತ್ತು 'ವಸಂತನ ಮದುವೆ' ಇವು ಮಧ್ಯಮದರ್ಜೆಯ ಕಥೆಗಳು. ಇವು ಮಧ್ಯಮವರ್ಗದವಾದರೂ ವೈವಿಧ್ಯದಿಂದ ಕೂಡಿವೆ.

ಭಾಷಾಂತರ ಒಂದು ಕಲೆ. ಒಂದು ಭಾಷೆಯ ಸಾಹಿತ್ಯವನ್ನು ಮತ್ತೊಂದು ಭಾಷೆಗೆ ತಂದುಕೊಡುವಾಗ ಅದು ಭಾಷಾಂತರವೆಂದು ತೋರ್ಪಡಿಸಿಕೊಳ್ಳದೆ ಆ ಭಾಷೆಯಿಂದಲೇ ಹುಟ್ಟಿದಂತಿರಬೇಕು. ಇಲ್ಲಿನ ಕಥೆಗಳು ಆಯಾ ಭಾಷೆಯ ಉನ್ನತ ದರ್ಜೆಯ ಕಥೆಗಳಲ್ಲ. ಹತ್ತು ಭಾರತೀಯ ಭಾಷೆಗಳಿಂದ ಕಥೆಗಳನ್ನು ಆರಿಸಿಕೊಂಡು ಕನ್ನಡಕ್ಕೆ

ಭಾಷಾಂತರಿಸಿದ್ದಾರೆ. ಇತರ ಭಾಷೆಗಳ ಪರಿಚಯವಿಲ್ಲದವರಿಗೆ ಇದರಿಂದ ಬಹಳ ಪ್ರಯೋಜನವಾಗುತ್ತದೆ. ಉಪಯುಕ್ತವಾದ ಈ ಪ್ರಯೋಗವನ್ನು ಕೈಕೊಂಡ ಸಂಪಾದಕರು ವಂದನಾರ್ಹರು. ಆದರೆ ಇತರ ಭಾಷೆಗಳಲ್ಲಿನ ಉತ್ತಮ ಸಾಹಿತ್ಯವನ್ನು ಕನ್ನಡಕ್ಕೆ ಒದಗಿಸಿದ್ದರೆ ಇದು ಒಂದು ಶ್ರೇಷ್ಠ ಕಥಾಸಂಕಲನವಾಗುತ್ತಿತ್ತು.

ಕನ್ನಡ ಸಾಹಿತ್ಯದಲ್ಲಿ ಇಂದು ಕಂಡುಬರುತ್ತಿರುವುದು ಮಿತಿಮೀರಿ ಬೆಳೆದ ಕಾದಂಬರಿಗಳು. ಇವುಗಳ ಬೆಳಸು ಹೆಚ್ಚಿ ಕಥೆಗಳೂ, ಕಾವ್ಯಗಳೂ ಮೂಲೆಗೆ ಬಿದ್ದಿವೆ. ಸಣ್ಣಕಥೆಗಳ ಕಾಲವೂ ಒಂದಿತ್ತು. ಈಗ ಅದು ಸ್ವಲ್ಪಮಟ್ಟಿಗೆ ಹಿಂದುಳಿದಿದೆ. ಈ ಸಂದಿಗ್ಧ ಸಮಯದಲ್ಲಿ ಹತ್ತು ಭಾರತೀಯ ಭಾಷೆಗಳಿಂದ ಕಥೆಗಳನ್ನು ಆರಿಸಿಕೊಂಡು ಕನ್ನಡಕ್ಕೆ ಭಾಷಾಂತರ ಮಾಡಿದ್ದಾರೆ. ಸಂಪಾದಕರ ದೃಷ್ಟಿ ಮತ್ತು ಪ್ರಯತ್ನ ಸ್ತುತ್ಯವಾದುದು. ಮೊದಲ ಮಾತಿನಲ್ಲಿ ಸಂಪಾದಕರು "ನಮ್ಮ ಭಾರತ ಭೂಮಿಯಲ್ಲಿ ಅನೇಕಾನೇಕ ಭಾಷೆಗಳಿವೆ. ಚಿಕ್ಕ ಕಥೆ, ಕಾದಂಬರಿ, ಕವನ, ಪ್ರಬಂಧ, ಏಕಾಂಕ ನಾಟಕ, ಇತ್ಯಾದಿ ಆಧುನಿಕ ಸಾಹಿತ್ಯವೂ ವಿಶೇಷವಾಗಿದೆ. ಇವುಗಳಲ್ಲದೆ ಹಾಡುಗಬ್ಬ, ಜನಪದ ಸಾಹಿತ್ಯ, ನಾಣ್ನುಡಿಗಳ ಸುಗ್ಗಿ ಪ್ರತಿಯೊಂದು ಭಾಷಾಸಾಹಿತ್ಯದಲ್ಲೂ ಇದೆ. ಇವು ಅನ್ಯಭಾಷೆಗಳಲ್ಲಿ ಬೆಳಕು ಕಂಡುದೇ ಕಡಿಮೆ. ಆಯಾ ಮೂಲಭಾಷೆಯ ಆಳವಾದ ಅಭ್ಯಾಸ ಮಾಡಿದರೆ ಮಾತ್ರ ಆಯಾ ಸಾಹಿತ್ಯದ ದಿಗ್ದರ್ಶನವಾಗಬಹುದು ಮತ್ತು ಅನ್ಯಭಾಷೆಗಳಿಗೆ ಅವುಗಳ ಅಮೂಲ್ಯ ಕೃತಿಗಳನ್ನು ಕಾಣಿಕೆಯಾಗಿ ಕೊಡಬಹುದು" ಎಂದು ಹೇಳಿದ್ದಾರೆ. ಈ ಹೇಳಿಕೆಯಂತೆ ಅನ್ಯಭಾಷೆಗಳ ಆಳವಾದ ವ್ಯಾಸಂಗ ಮಾಡಿ ಕನ್ನಡಕ್ಕೆ ಅಮೂಲ್ಯ ಕೃತಿಗಳನ್ನು ಒದಗಿಸುವುದಕ್ಕೆ ನೆರವಾಗಲಿ ಎಂದು ಹಾರೈಸುತ್ತೇನೆ.



# ರಾಗಿಣಿ (ಸಾಮಾಜಿಕ ಕಾದಂಬರಿ)

ಲೇಖಕರು: ಭಾರತೀಪ್ರಿಯ, ಪ್ರಕಾಶಕರು: ಶಾರದಾ ಪ್ರಕಟನಾಲಯ, ಅರಳೇಪೇಟೆ, ಬೆಂಗಳೂರು-೨, ಕ್ರೌ.ಅ. ಪುಟಗಳು ೨೯೯, ಬೆಲೆ: ರೂ. ೧-೮-೦. [ಪುಸ್ತಕ ಪ್ರಪಂಚ : ಸಂಪುಟ-೯, ಸಂಚಿಕೆ-೧೦, ಮೇ ೧೯೫೫, ಪುಟ ೫೧-೫೩]

'ರಾಗಿಣಿ' ಒಂದು ಸಾಮಾಜಿಕ ಕಾದಂಬರಿ. ಸಣ್ಣಕಥೆಗಳ ಬರವಣಿಗೆಯಲ್ಲಿ ಸಿದ್ಧಹಸ್ತರೆನಿಸಿಕೊಂಡಿರುವ ಭಾರತೀಪ್ರಿಯರು, ಕಾದಂಬರಿಗಳನ್ನು ಬರೆಯುವುದರಲ್ಲೂ ಸಿದ್ಧಹಸ್ತರೆನಿಸಿಕೊಳ್ಳಬಲ್ಲರು ಎಂಬುದಕ್ಕೆ ರಾಗಿಣಿಯೇ ಒಂದು ಉದಾಹರಣೆಯಾಗಿದೆ. ಸಂಗೀತ, ಕಲೆ, ನೃತ್ಯ –ಇತ್ಯಾದಿಗಳನ್ನು ನಿರೂಪಿಸಿರುವ ಹಲವಾರು ಕಾದಂಬರಿಗಳು ಕನ್ನಡದಲ್ಲಿ ಈಗಾಗಲೇ ಪ್ರಕಟವಾಗಿವೆ.

ಭಾರತದೇಶದಲ್ಲಿ ಸಂಗೀತಕ್ಕೆ ಆರ್ಷೇಯಕಾಲದಿಂದ ಎಲ್ಲ ರಾಜಾಸ್ಥಾನಗಳಲ್ಲೂ ವಿಶೇಷ ಮನ್ನಣೆಯಿತ್ತು. ಸಂಗೀತಗಾರರಿಲ್ಲದ ರಾಜಾಸ್ಥಾನವೇ ಬಹುಶಃ ಇದ್ದಿರಲಿಲ್ಲ. ಆದರೆ ಇಂದು ಇದು ಬಹುಮಟ್ಟಿಗೆ ಕಡಮೆಯಾಗಿದೆ. ಸಂಗೀತವನ್ನೂ, ಸಂಗೀತಗಾರರನ್ನೂ ಪ್ರೋತ್ಸಾಹಿಸುವ ಭಾರ ಈಗ ಜನತೆಯ ಮೇಲೆ ಬಿದ್ದಿದೆ. ಜನತೆಯ ಆದರ, ಪ್ರೋತ್ಸಾಹಗಳಿಂದಲೇ ಸಂಗೀತ ಪುನರುಜ್ಜೀವನಗೊಳ್ಳಬೇಕಾಗಿದೆ.

ರಾಗಿಣಿಯಲ್ಲಿ ಓರ್ವ ನಿರ್ಗತಿಕ ಸಂಗೀತಕ್ಕಾಗಿ ತನ್ನ ಜೀವನವನ್ನೇ ಮುಡುಪಾಗಿಟ್ಟು ಅನನ್ಯಭಕ್ತಿಯಿಂದ ಸಂಗೀತವನ್ನು ಅಭ್ಯಸಿಸಿ ಸಿದ್ಧಿಯ ಸೋಪಾನವನ್ನಡರುತ್ತಾನೆ. ಹೊಸರಾಗ, ರಾಗಿಣಿಗಳನ್ನು ಸ್ವತಃ ಸೃಷ್ಟಿಸಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದುಕೊಳ್ಳುತ್ತಾನೆ. ಈ ಕಾದಂಬರಿಯಲ್ಲಿ ಎರಡು ಮುಖಗಳಿವೆ. ನಿರ್ಗತಿಕನಾದ ಕಥಾನಾಯಕ ಮಧುಸೂದನ ಸಂಗೀತದಲ್ಲಿ ತನಗಿದ್ದ ಉತ್ಕಟೇಚ್ಛೆಯನ್ನು ಸಾಧಿಸಲು ಅನೇಕ ಎಡರು-ತೊಡರುಗಳನ್ನು ಅನುಭವಿಸಬೇಕಾಗುತ್ತದೆ. ಒಂದೆರಡು ಸಂಗೀತ ಕಚೇರಿಗಳಲ್ಲಿ ಪ್ರತಿಭಟನೆಯನ್ನು ಎದುರಿಸಬೇಕಾಗುತ್ತದೆ. ಆದರೆ ಇವೆಲ್ಲಕ್ಕೂ ಜಗ್ಗದೆ ತನ್ನ ಕಾರ್ಯವನ್ನು ಸಾಧಿಸಿಕೊಳ್ಳುತ್ತಾನೆ.

ಆಗರ್ಭಶ್ರೀಮಂತರೂ ಉನ್ನತನಿವೃತ್ತ ಅಧಿಕಾರಿಗಳೂ ಕಲಾಭಿಮಾನಿಗಳೂ ಆದ ನಟರಾಜ ಅಯ್ಯರವರ ಮಗಳು ಲಲಿತೆ ಕಾದಂಬರಿಯ ನಾಯಕಿ. ಈಕೆಗೆ ನಾಟ್ಯದಲ್ಲಿ ಗೀಳು ಹೆಚ್ಚು. ಪಂದನಲ್ಲೂರಿನ ಮೀನಾಕ್ಷಿ ಸುಂದರಂ ಪಿಳ್ಳೆಯವರಲ್ಲಿ ಭರಟನಾಟ್ಯವನ್ನು ಕಲಿಯುತ್ತಾಳೆ. ಈ ಭರತನಾಟ್ಯ ಪ್ರವೀಣೆಯನ್ನೂ ಸಂಗೀತ ವಿದ್ವಾಂಸ ಮಧುಸೂದನನನ್ನೂ ವಿಧಿ ಒಂದೆಡೆ ಎಳೆತರುತ್ತದೆ. ಇವರಿಬ್ಬರ ಮಿಳನ ಚಿನ್ನದ ಗುಲಾಬಿಗೆ ಕಂಪನ್ನಿತ್ತಂತಾಗಿದೆ.

ಮದ್ರಾಸಿಗೆ ಸಂಗೀತ ಕಚೇರಿಗಾಗಿ ಹೋದ ಮಧುಸೂದನ ನಟರಾಜ ಅಯ್ಯರವರ ಅತಿಥಿಯಾಗುತ್ತಾನೆ. ಆಗ ಅವನಿಗೆ ನಾಟ್ಯಭಂಗಿಯಲ್ಲಿ ಮೋಹಿಸುತ್ತಿದ್ದ ಲಲಿತಳ ಚಿತ್ರದ ಮೇಲೆ ಗಮನಹರಿದು ಕಣ್ಣುಗಳು ಅಲ್ಲಿಯೇ ಕೀಲಿಸುತ್ತವೆ. ಅಂತೆಯೇ ಮಧುಸೂದನನ ಹಾಡುಗಾರಿಕೆಯ ವಿಷಯವಾಗಿ ನಟರಾಜ ಅಯ್ಯರವರು ಮಗಳಿಗೆ ಪತ್ರ ಬರೆದಾಗ ಅವಳಿಗೆ ಮಧುಸೂದನನನ್ನು ನೋಡಬೇಕೆಂಬ ಹಂಬಲ ಹುಟ್ಟುತ್ತದೆ. ಚಿತ್ರದಲ್ಲಿ ನೋಡಿದ ಲಲಿತಳ ಮೇಲೆ

ಮಧುಸೂದನನಿಗೆ ಅನುರಾಗ ಹುಟ್ಟುವುದು; ಲಲಿತಳ ತಂದೆಯು ಬರೆದ ಪತ್ರದಲ್ಲಿ ಅಪ್ರಾಸಂಗಿಕವಾಗಿ ಬಂದ ಮಧುಸೂದನನ ಬಗ್ಗೆ ಅವಳಲ್ಲಿ ಅನುರಾಗ ಹುಟ್ಟುವುದು ಬಹುಮಟ್ಟಿಗೆ ಅಸಹಜವೆಂದೇ ಹೇಳಬೇಕಾಗುತ್ತದೆ. ಅಂತೆಯೇ ಮಧುಸೂದನನನ್ನು ಬಯಸಿ ಬರಮಾಡಿಕೊಂಡು ಅವನು ಕೈಗೆ ಸಿಕ್ಕದೆ ಹಾರಿಹೋದಾಗ ತನ್ನ ಮೋಹವನ್ನೇ ಅದಕ್ಕೆ ಮೀಸಲು ಕಟ್ಟಿಟ್ಟ ಹೆಣ್ಣು ರೋಷನ್‌ಳ ಈ ವರ್ತನೆಯೂ ಅಸಂಭವವೇ. ಈ ಅರಕೆಗಳಿಂದ ಕೂಡಿದ್ದರೂ ಕಾದಂಬರಿ ಬೇಸರವನ್ನುಂಟುಮಾಡುವುದಿಲ್ಲ.

ನರಹರಿದಾಸರ ಪಾತ್ರ ನಿಜವಾಗಿಯೂ ಆದರ್ಶಪ್ರಾಯವಾಗಿದೆ. 'ತಿರಿತಂದು ಒಬ್ಬನಾ ಕರಕೊಂಡು ಉಣಬೇಕು' ಎಂಬಂತೆ ತಾನು ತಿರಿದರೂ ತನ್ನ ಕೈಲಾದ ಸಹಾಯವನ್ನು ಮತ್ತೊಬ್ಬರಿಗೆ ಮಾಡುವ ದಾನಿ ನರಹರಿದಾಸ ಉದಾತ್ತ ವ್ಯಕ್ತಿ. ಉಳಿದ ಪಾತ್ರಗಳು ಮುಖ್ಯಪಾತ್ರಗಳಿಗೆ ಪೋಷಕವಾಗಿವೆ. ಲೇಖಕರು ಮುನ್ನುಡಿಯಲ್ಲಿ 'ಕಲೆಯ ಹಾದಿ ಹೂವಿನ ಹಾಸಲ್ಲ, ಕಗ್ಗಲ್ಲಿನಿಂದಿಡಿದ ಪೆಡಸುದಾರಿ' ಎಂದು ತಿಳಿದೂ ಅಲ್ಲಿ ನಡೆಯಬೇಕಾದರೆ ಸಾಹಸಬೇಕು. ಆ ಸಾಹಸದೊಡನೆ ಅಷ್ಟೇ ಬಲವತ್ತರವಾದ ನಿರ್ಧಾರವೂ ಬೇಕು. ವಜ್ರಸಂಕಲ್ಪದಿಂದ ಸಾಧಿಸಲಾಗದಿರುವುದು ಯಾವುದೂ ಇಲ್ಲವೆನ್ನುವುದಕ್ಕೆ ಸಿದ್ಧಿಯನ್ನು ಕಂಡ ಕಲಾವಿದರ ಪ್ರತಿಭಾವಂತರ ಜೀವನವೇ ಸಾಕ್ಷಿ.

ಇಂಥ ಒಂದು ಹೋರಾಟ ನಡೆಸಿ ಗೆದ್ದ ಒಬ್ಬ ವ್ಯಕ್ತಿಯ ಕಥೆಯೇ ಈ ಕಾದಂಬರಿಯ ವಸ್ತು. ನಾನು ಈ ಕಾದಂಬರಿಯಲ್ಲಿ ಒಬ್ಬ ಮಹಾವ್ಯಕ್ತಿಯ ಜೀವನವನ್ನು ಚಿತ್ರಿಸುವುದಕ್ಕೆ ಹೊರಟಿಲ್ಲ. ಕೇವಲ ಸಾಮಾನ್ಯನೆನಿಸಿ, ಹತ್ತರಲ್ಲಿ ಹನ್ನೊಂದಾಗಿ ಬಡತನದಲ್ಲಿ ತೊಳಲುತ್ತಿದ್ದ ಒಬ್ಬ ಹುಡುಗ ಆತ್ಮಪ್ರೇರಣೆಗೆ ತಲೆಬಾಗಿ ನಡೆದ ಬಗೆಯನ್ನೂ ಅವನ ಜೀವನ ವಿಕಾಸಗೊಂಡ ರೀತಿಯನ್ನೂ ಗುರುತಿಸಿದ್ದೇನೆ. ಪ್ರತಿಕೂಲ ಸನ್ನಿವೇಶಗಳನ್ನು ಗೆದ್ದು ವ್ಯಕ್ತಿ ಸಾಮಾನ್ಯತೆಯಿಂದ ಅಸಾಮಾನ್ಯತೆಗೆ ಮುಟ್ಟುವುದು ಸಾಧ್ಯವೆಂಬುದನ್ನು ಚಿತ್ರಿಸಲು ಯತ್ನಿಸಿದ್ದೇನೆ. ಮಧುಸೂದನನನ್ನು ಮಹಾವ್ಯಕ್ತಿಯೆಂದಾಗಲಿ ಆದರ್ಶಪುರುಷನೆಂದಾಗಲಿ ಭಾವಿಸದೆ ಧ್ಯೇಯಲಗ್ನನಾದ ಒಬ್ಬ ಸಾಧಕ ಎನ್ನುವುದನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ ಈ ತಥ್ಯ ಮನಸ್ಸಿಗೆ ಬಂದೀತು ಎಂದಿದ್ದಾರೆ. ಅಗ್ಗದ ಅಶ್ಲೀಲ ಕಾದಂಬರಿಗಳೇ ಹೆಚ್ಚಾಗಿ ಹೊರಬರುತ್ತಿರುವ ಇಂದು ರಾಗಿಣಿಯಂತಹ ಒಂದು ಒಳ್ಳೆಯ ಕಾದಂಬರಿಯನ್ನು ಜನತೆಯ ಮುಂದಿಟ್ಟ ಲೇಖಕರು ಅಭಿನಂದನಾರ್ಹರು. ಪುಸ್ತಕದ ಮುದ್ರಣ, ರಕ್ಷಾಪತ್ರದ ರಚನೆ ಅತೃಪ್ತಿಕರವಾಗಿವೆ. (ಪು. ೭, ೮, ೧೧, ೧೨, ೧೩, ೧೪)



# ಚಂಪೂ ಕಾವ್ಯಗಳು

ಲೇಖಕರು: ವಿದ್ವಾನ್ ಕೆ.ಟಿ. ಜೋಶಿ, ಪ್ರಕಾಶಕರು: ಪ್ರತಿಭಾ ಗ್ರಂಥಮಾಲೆ, ಧಾರವಾಡ, ಪ್ರಥಮ ಮುದ್ರಣ : ೧೯೬೪, ಪುಟಗಳು: ೧೨+೧೬೮, ಬೆಲೆ: ರೂ. ೫.೦೦

ಸಾಹಿತ್ಯ ಪ್ರಕಾರಗಳಲ್ಲಿ ಚಂಪೂ ಅತ್ಯಂತ ಪ್ರಾಚೀನವಾದುದು. ಕನ್ನಡದಲ್ಲಿ ಹತ್ತನೆಯ ಶತಮಾನದಿಂದಲೇ ಚಂಪೂಕಾವ್ಯಗಳು ರಚಿತವಾಗಿವೆ. ಸಂಸ್ಕೃತದಲ್ಲಿಯೂ ಸಹ ಇದೇ ಕಾಲದಲ್ಲೇ ಈ ಚಂಪೂ ಕೃತಿಗಳು ಕಂಡುಬರುತ್ತವೆ. ಈ ಚಂಪುವಿನ ಹುಟ್ಟುಬೆಳವಣಿಗೆಗಳ ಬಗೆಗೆ ಈಗಾಗಲೇ ಸಾಕಷ್ಟು ಜಿಜ್ಞಾಸೆ ನಡೆದಿದೆ. ಅಲ್ಲದೆ ಇದು ಕನ್ನಡದಿಂದ ಸಂಸ್ಕೃತಕ್ಕೆ ಹೋಯಿತೆ ಅಥವಾ ಸಂಸ್ಕೃತದಿಂದ ಕನ್ನಡಕ್ಕೆ ಬಂದಿತೆ ಎಂಬ ಬಗ್ಗೆಯೂ ಚರ್ಚೆ ನಡೆದಿದೆ. ಪ್ರಸ್ತುತ ಲೇಖಕರು ಚಂಪು ಕನ್ನಡ ಸಾಹಿತ್ಯದಿಂದಲೇ ಉದಯಿಸಿತು ಎಂದಿದ್ದಾರೆ. ಸದ್ಯದಲ್ಲಿ ಇದು ಅಭಿಪ್ರಾಯದ ಮಾತೇ ಹೊರತು ನಿರ್ಣಾಯಕವಾದುದೇನೂ ಅಲ್ಲ.

ಗದ್ಯಪದ್ಯಾತ್ಮಕವಾದ ಕಾವ್ಯವೇ ಚಂಪೂ. ಕನ್ನಡ ಸಂಸ್ಕೃತ ಲಾಕ್ಷಣಿಕರೆಲ್ಲರೂ ಸಂಪೂರ್ಣವಾಗಿ ಇದನ್ನು ಒಪ್ಪಿದ್ದಾರೆ. ಈ ಎರಡೂ ಭಾಷೆಯ ಅನೇಕ ಉದ್ಗ್ರಂಥಗಳು ಚಂಪುವಿನಲ್ಲೇ ರಚಿತವಾಗಿವೆ. ಚಂಪೂಕೃತಿಗಳ ಪ್ರಾಚುರ್ಯ ಸಂಸ್ಕೃತಕ್ಕಿಂತ ಕನ್ನಡದಲ್ಲೇ ಹೆಚ್ಚು.

ಪ್ರಕೃತ ಗ್ರಂಥದಲ್ಲಿ ವಿದ್ವಾನ್ ಜೋಶಿ ಅವರು ಚಂಪೂ ಕಾವ್ಯದ ಪರಂಪರೆ, ಅದರ ಲಕ್ಷಣ, ಅದರ ಉದ್ದೇಶ, ಅದರ ಕಥಾವಸ್ತು, ಅದರ ಮೂಲ –ಇವೇ ಮೊದಲಾದ ವಿಷಯಗಳನ್ನು ಸಾಧಾರವಾಗಿ ನಿರೂಪಿಸಿದ್ದಾರೆ. ಈ ಗ್ರಂಥದಲ್ಲಿ ಮೂರು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ 'ಸಾಹಿತ್ಯ ಚಿಂತನ'ವನ್ನು ಮಾಡಿದ್ದಾರೆ. ಎರಡನೆಯ ಅಧ್ಯಾಯದಲ್ಲಿ ಸಂಸ್ಕೃತ ಚಂಪೂಕಾವ್ಯಗಳನ್ನು ಕುರಿತು ವಿವೇಚಿಸಿದ್ದಾರೆ. ಮೂರನೆಯ ಅಧ್ಯಾಯದಲ್ಲಿ ಕನ್ನಡ ಚಂಪೂ ಕಾವ್ಯಗಳನ್ನು ಕುರಿತು ವ್ಯಾಖ್ಯಾನಿಸಿದ್ದಾರೆ. ಈ ಕನ್ನಡ ಸಂಸ್ಕೃತ ಚಂಪೂಕೃತಿಗಳನ್ನು ವಿವರವಾಗಿ ಪರಿಚಯ ಮಾಡಿಕೊಟ್ಟಿದ್ದಾರೆ. ಮೊದಲು ಕವಿ ಪರಿಚಯವನ್ನು ಆಮೇಲೆ ಕಥಾವಸ್ತುವನ್ನೂ ಕೊನೆಯಲ್ಲಿ ವಿಮರ್ಶೆಯನ್ನೂ ಮಾಡಿದ್ದಾರೆ. ಸಂಸ್ಕೃತ ಕನ್ನಡ ಪ್ರಮುಖ ಚಂಪೂಕೃತಿಗಳ ಸಮಗ್ರ ಪರಿಚಯವನ್ನು ಸೂಕ್ತ ವಿಮರ್ಶೆಯನ್ನು ವಿದ್ವಾನ್ ಜೋಶಿಯವರು ಸಮುಚಿತವಾಗಿ ಮಾಡಿಕೊಟ್ಟಿದ್ದಾರೆ. ಈ ಎಲ್ಲ ಚಂಪೂಕೃತಿಗಳ ವ್ಯಾಸಂಗದಿಂದ ಸಾರವತ್ತಾದ ಭಾಗಗಳನ್ನೂ ಸಂಗ್ರಹಿಸಿಕೊಟ್ಟಿರುವುದು ತುಂಬಾ ಪ್ರಯೋಜನಕಾರಿಯಾಗಿದೆ. ಈ ಗ್ರಂಥರಚನೆಯಲ್ಲಿ ಶ್ರೀಯುತರ ಅಪಾರವಾದ ಪಾಂಡಿತ್ಯ ಸುವ್ಯಕ್ತವಾಗಿದೆ. ಒಟ್ಟಿನಲ್ಲಿ ಸಂಸ್ಕೃತ ಕನ್ನಡ ಚಂಪೂಕಾವ್ಯಗಳ ಒಂದು ಸಮಗ್ರ ನೋಟವನ್ನು ಈ ಗ್ರಂಥದಲ್ಲಿ ಕಾಣಬಹುದಾಗಿದೆ. ಇಂತಹ ಉಪಯುಕ್ತ ಗ್ರಂಥವನ್ನು ಜನತೆಗೆ ನೀಡಿದ ವಿದ್ವಾನ್ ಜೋಶಿ ಅವರ ಶ್ರಮ ಸಾರ್ಥಕವಾದುದೆಂದು ಭಾವಿಸುತ್ತೇನೆ. ಕನ್ನಡ ಜನತೆ ಈ ಚಂಪೂ ಕಾವ್ಯಗಳು ಗ್ರಂಥದ ಸಂಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳಲಿ ಎಂದು ಹಾರೈಸುತ್ತೇನೆ.

■

# ಕನ್ನಡದಲ್ಲಿ ಷಟ್ಪದಿ ಸಾಹಿತ್ಯ

**ಕನ್ನಡದಲ್ಲಿ ಷಟ್ಪದಿ ಸಾಹಿತ್ಯ:** ಏಳು ಉಪನ್ಯಾಸಗಳು, ವಿವಿಧ ಲೇಖಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೬೫, ಪುಟಗಳು: viii+೨೫೪ ಬೆಲೆ: ರೂ. ೫

ಕರ್ನಾಟಕ ವಿಶ್ವವಿದ್ಯಾಲಯದ ವಿಶೇಷ ವಾಙ್ಮಯ ಪ್ರಸಾರ ಪುಸ್ತಕ ಮಾಲೆಯ ಅಂಗವಾಗಿ ಪ್ರಕಟವಾಗಿರುವ 'ಕನ್ನಡದಲ್ಲಿ ಷಟ್ಪದಿ ಸಾಹಿತ್ಯ' ಎಂಬ ಈ ಗ್ರಂಥದಲ್ಲಿ ಏಳು ಉಪಯುಕ್ತ ಉಪನ್ಯಾಸಗಳಿವೆ. ಅವು– ಷಟ್ಪದಿಯ ಉಗಮ ಮತ್ತು ವಿಕಾಸ, ಹರಿಶ್ಚಂದ್ರ ಕಾವ್ಯ : ಒಂದು ಅಧ್ಯಯನ, ರಾಘವಾಂಕನ ಇತರ ಕೃತಿಗಳು, ಕುಮಾರವ್ಯಾಸ : ಒಂದು ಸಮೀಕ್ಷೆ, ಷಟ್ಪದಿ ರೂಪಕ್ಕೆ ಚಾಮರಸನ ಕೊಡುಗೆ, ಷಟ್ಪದಿ ಛಂದಸ್ಸಿನಲ್ಲಿ ಲಕ್ಷ್ಮೀಶ ಕವಿಯ ಸಾಧನೆ, ಇತರ ಷಟ್ಪದಿ ಗ್ರಂಥಗಳು ಗಮನಾರ್ಹ ಅಂಶಗಳು.

ಮೊದಲನೆಯ ಉಪನ್ಯಾಸ 'ಷಟ್ಪದಿಯ ಉಗಮ ಮತ್ತು ವಿಕಾಸ'ದಲ್ಲಿ ಡಾ. ಎಂ.ಎಂ. ಕಲಬುರ್ಗಿ ಅವರು ಷಟ್ಪದಿಯ ಇತಿಹಾಸವನ್ನೆಲ್ಲಾ ಸಂಶೋಧಕ ದೃಷ್ಟಿಯಿಂದ ಸಂಗ್ರಹಿಸಿ ವಿವೇಚಿಸಿದ್ದಾರೆ. ಈವರೆಗೆ ಈ ಷಟ್ಪದಿಗಳ ಬಗೆಗೆ ಬಂದಿರುವ ಗ್ರಂಥಗಳನ್ನು ಲೇಖನಗಳನ್ನು ಪರಿಶೀಲಿಸಿ ಒಂದು ಸಮುಚಿತವಾದ ಅಭಿಪ್ರಾಯವನ್ನು ಮಂಡಿಸಿದ್ದಾರೆ. ಈ ಲೇಖನದಲ್ಲಿ ಶ್ರೀಯುತರ ಆಳವಾದ ಅಭ್ಯಾಸ ವ್ಯಕ್ತಪಡುತ್ತದೆ. ಇದು ನಿಜಕ್ಕೂ ಒಂದು ಅತ್ಯಂತ ಉಪಯುಕ್ತವಾದ ಲೇಖನ. ಶ್ರೀ ದೇವೇಂದ್ರಕುಮಾರ ಹಕಾರಿ ಅವರ 'ಹರಿಶ್ಚಂದ್ರ ಕಾವ್ಯ : ಒಂದು ಅಧ್ಯಯನ' ಎಂಬ ಸುದೀರ್ಘವಾದ ಲೇಖನದಲ್ಲಿ ಹರಿಶ್ಚಂದ್ರ ಕಾವ್ಯದ ಒಂದು ಸಮಗ್ರ ವಿವೇಚನೆಯನ್ನು ಕಾಣಬಹುದಾಗಿದೆ. ಇನ್ನು ರಾಘವಾಂಕನ ಇತರ ಕೃತಿಗಳು ಎಂಬ ಶ್ರೀ ಬಿ.ವ್ಹಿ. ಮಲ್ಲಾಪುರ ಅವರ ಲೇಖನದಲ್ಲಿ ಸಿದ್ಧರಾಮಚಾರಿತ್ರ, ಸೋಮನಾಥಚಾರಿತ್ರ, ವೀರೇಶಚರಿತೆ, ಶರಭಚಾರಿತ್ರ, ಹರಿಹರ ಮಹತ್ವ –ಈ ಕೃತಿಗಳ ಒಂದು ಸಂಪೂರ್ಣ ಪರಿಚಯವನ್ನು ಮಾಡಿಕೊಡಲಾಗಿದೆ. ಒಂದು ರೀತಿಯಲ್ಲಿ ಇದು ಈ ಕೃತಿಗಳ ಸಾರಾಸಾರ ವಿಮರ್ಶೆಯೂ ಇದ್ದಂತಿದೆ. ಎಚ್.ಎಂ. ಶಂಕರನಾರಾಯಣರಾವ್ ಅವರ ಕುಮಾವ್ಯಾಸ –ಒಂದು ಸಮೀಕ್ಷೆ ಎಂಬ ಲೇಖನದಲ್ಲಿ ಕುಮಾರವ್ಯಾಸ ಭಾರತದ ಜನಪ್ರಿಯತೆಯನ್ನು ಸಾರಿ ವ್ಯಾಸ, ಭಾಸ, ಪಂಪ ಇವರ ಭಾರತಗಳೊಂದಿಗೆ ತುಲನಾತ್ಮಕ ಅಧ್ಯಯನವನ್ನು ಮಾಡಿಕೊಡಲು ಯತ್ನಿಸಲಾಗಿದೆ. 'ಷಟ್ಪದಿರೂಪಕ್ಕೆ ಚಾಮರಸನ ಕೊಡುಗೆ' ಎಂಬ ಗುರುಲಿಂಗ ಕಾಪಸೆ ಅವರು ಕುಮಾರವ್ಯಾಸನ ಸಮಕಾಲೀನನಾಗಿದ್ದಿರಬಹುದಾದ ಚಾಮರಸನ ಪ್ರಭುಲಿಂಗಲೀಲೆಯು ಕನ್ನಡದ Pilgrims Progress ಎಂದಷ್ಟು ಮಾತ್ರಕ್ಕೆ ತೃಪ್ತರಾಗದೆ ಇದು ಅದಕ್ಕಿಂತ ಮಿಗಿಲಾದ ರೂಪಕ ಕಾವ್ಯ ಎಂದಿದ್ದಾರೆ. ಹಲವಾರು ವಿದ್ವಾಂಸರ ಅಭಿಪ್ರಾಯಗಳನ್ನು ಉಲ್ಲೇಖಿಸಿದ್ದಾರೆ. ಷಟ್ಪದಿ ಛಂದಸ್ಸಿನಲ್ಲಿ ಲಕ್ಷ್ಮೀಶ ಕವಿಯ ಸಾಧನೆ ಎಂಬ ಜಿ.ಎಸ್. ಸಿದ್ಧಲಿಂಗಯ್ಯನವರ ಲೇಖನ ವಿಚಾರಪೂರಿತವಾದುದು, ಸಂಶೋಧನಾತ್ಮಕವಾದುದು. ಲಕ್ಷ್ಮೀಶ ಛಂದಸ್ಸಿನಲ್ಲಿ ಸಾಧಿಸಿರುವ ಸಿದ್ಧಿಯನ್ನು ಸಾಧಾರವಾಗಿ ಶ್ರೀಯುತರು ನಿರೂಪಿಸಿದ್ದಾರೆ. ಇವರ ವಿಚಾರಧೋರಣೆ ವಿಷಯ ನಿರೂಪಣೆ ಮನಮುಟ್ಟುವಂತಿವೆ. ಶ್ರೀಯುತರು ಈ ದಿಸೆಯಲ್ಲಿ ಸಾಕಷ್ಟು ಪರಿಶ್ರಮ ನಡೆಸಿರುವುದು ಸ್ಪಷ್ಟವಾಗುತ್ತದೆ. ಕೊನೆಯದಾದ ಇತರ ಷಟ್ಪದಿ ಗ್ರಂಥಗಳ ಗಮನಾರ್ಹ ಅಂಶಗಳು ಎಂಬ

ಕೆ.ಎಂ. ಕೃಷ್ಣರಾವ್ ಅವರ ಲೇಖನದಲ್ಲಿ ಕೆಲವು ಷಟ್ಪದಿ ಕಾವ್ಯಗಳ ಪರಿಚಯವನ್ನು ಮಾಡಿಕೊಡಲಾಗಿದೆ. ಅಲ್ಲದೆ "ಮುಖ್ಯವಾದ ಕೃತಿ-ಕವಿಗಳ ಹೆಸರುಗಳನ್ನು ಮಾತ್ರ ಪಟ್ಟಿಮಾಡಿ ಪ್ರಬಂಧದ ಕೊನೆಯಲ್ಲಿ ಕೊಡಲಾಗಿದೆ" ಎಂದಿದ್ದಾರೆ. ಆದರೆ ಆ ಪಟ್ಟಿ ಕಂಡುಬಂದಿಲ್ಲ. ಮತ್ತು "ಇಲ್ಲಿ ಎಲ್ಲ ಇತರ ಷಟ್ಪದಿಕಾರನರ್ರು ಗಮನಿಸುವುದಾಗಲೀ, ಗಮನಿಸಿದ ಕೆಲವು ಷಟ್ಪದಿಗಳನ್ನು ಪೂರ್ಣವಾಗಿ ವಿಮರ್ಶಿಸುವುದಾಗಲೀ ಸಾಧ್ಯವಾಗಿಲ್ಲವೆಂಬುದು ಸ್ಪಷ್ಟವಾಗಿದೆ ಇದೆ" ಎಂದಿದ್ದಾರೆ. ಆದರೆ ಮತ್ತೆ ಕೆಲವು ಪ್ರಮುಖ ಷಟ್ಪದಿಕಾರರನ್ನು ಅವರ ಕೃತಿಗಳಲ್ಲಿನ ಗಮನಾರ್ಹ ಅಂಶಗಳನ್ನು ವಿವೇಚಿಸಬೇಕಾಗಿತ್ತು ಎನಿಸುತ್ತದೆ. ಅವರಲ್ಲಿ ಭೀಮಕವಿಯ ಬಸವಪುರಾಣ, ಪ್ರಾಸಭೂಷಣ ಪೆಮ್ಮಿಸೆಟ್ಟಿಯ ಗುರುಭಕ್ತಾಂಡಾರಿ ಚಾರಿತ್ರ, ಚೇರಮಾಂಕನ ಚೇರಮಕಾವ್ಯ, ಬಸವಾಂಕನ ಉದ್ಭಟದೇವ ಚರಿತೆ, ನೀಲಕಂಠಾರಾಧ್ಯರ ಆರಾಧ್ಯ ಚಾರಿತ್ರ, ಕೆರೆಯ ಪದ್ಮರಸನ ಪದ್ಮರಾಜ ಪುರಾಣ, ಸಿದ್ಧನಂಜೇಶನ ರಾಘವಾಂಕ ಚಾರಿತ್ರ, ನಾರಾಯಣ ಕವಿಯ ಉತ್ತರ ರಾಮಾಯಣ ನಿಜಕ್ಕೂ ಹೆಸರಿಸತಕ್ಕವುಗಳಾಗಿದ್ದುವು.

'ಕನ್ನಡದಲ್ಲಿ ಷಟ್ಪದಿ ಸಾಹಿತ್ಯ' ಎಂಬ ಅಭಿಧಾನದಿಂದ ಹೊರಬಂದಿರುವ ಈ ಕೃತಿಯಲ್ಲಿ ಕನ್ನಡದಲ್ಲಿನ ಎಲ್ಲ ಷಟ್ಪದಿ ಕಾವ್ಯಗಳು ಒಂದು ಸ್ಥೂಲಪರಿಚಯವಾಗಲಿ ಅಥವಾ ಅವುಗಳ ಒಂದು ರೂಪರೇಖೆಗಳನ್ನಾಗಲಿ ವಿವೇಚಿಸಬೇಕಾಗಿತ್ತು. ಅದು ಬಿಟ್ಟು ಕೇವಲ ಪ್ರಾತಿನಿಧಿಕವಾಗಿ ಕೆಲವು ಷಟ್ಪದಿ ಕೃತಿಗಳನ್ನು ದೀರ್ಘವಾಗಿ ಪರಿಶೀಲಿಸಲಾಗಿದೆ. ಈ ಪ್ರಮುಖ ಷಟ್ಪದಿಕಾರರ ಬಗೆಗೆ ಈಗಾಗಲೇ ಅಪಾರ ಸಾಹಿತ್ಯ ಪ್ರಕಟವಾಗಿರುವುದು ಸರ್ವವೇದ್ಯವಾದುದು. 'ಕನ್ನಡದಲ್ಲಿ ಷಟ್ಪದಿ ಸಾಹಿತ್ಯ' ಎಂಬುದು ಕೇವಲ ಕೆಲವು ಷಟ್ಪದಿ ಕೃತಿಗಳನ್ನು ಪರಿಚಯಿಸಿಕೊಟ್ಟರೂ ಈ ಪ್ರಯತ್ನ ಸ್ವಾಗತಾರ್ಹವಾದುದು. ಅಲ್ಲದೆ ಇದರಲ್ಲಿರುವ ಒಂದೆರಡು ಸಂಶೋಧನಾತ್ಮಕ ಲೇಖನಗಳಿಂದಲೂ ಈ ಕೃತಿ ಪರಿಶೀಲನಾರ್ಹ ಎಂದು ನಾವು ಭಾವಿಸುತ್ತೇವೆ.



# ಪುರಾತನರ ತ್ರಿವಿಧಿ : ನಿಜಗುಣ ಶಿವಯೋಗಿ

ಸಂಪಾದಕರು: ಪಂಡಿತರತ್ನಂ ಪದ್ಮಶ್ರೀ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು, ಪ್ರಕಾಶಕರು: ಶರಣ ಸಾಹಿತ್ಯ ಕಾರ್ಯಾಲಯ, ಬೆಂಗಳೂರು–೨, ತೃತೀಯ ಮುದ್ರಣ ೧೯೬೭, ಪುಟಗಳು ೫+೧೦+೯೩+೪

---

ಕ್ರಿ.ಶ. ಸುಮಾರು ೧೫೦೦ರಲ್ಲಿದ್ದ ನಿಜಗುಣ ಶಿವಯೋಗಿ 'ಪುರಾತನರ ತ್ರಿವಿಧಿ', 'ಕೈವಲ್ಯ ಪದ್ಧತಿ', 'ವಿವೇಕ ಚಿಂತಾಮಣಿ', 'ಪರಮಾರ್ಥ ಪ್ರಕಾಶಿಕೆ', 'ಪರಮಾರ್ಥಗೀತೆ', 'ಅನುಭವಸಾರ', 'ಅನುಭವಬೋಧೆ' ಮೊದಲಾದ ಗ್ರಂಥಗಳನ್ನು ಕನ್ನಡದಲ್ಲಿ ಬರೆದಿದ್ದಾನೆ. ಸಂಸ್ಕೃತದಲ್ಲಿ 'ದರ್ಶನಸಾರಂ', 'ಆತ್ಮತರ್ಕ ಚಿಂತಾಮಣಿ' ಎಂಬ ಗ್ರಂಥಗಳನ್ನು ಬರೆದಂತೆ ಪ್ರತೀತಿಯಿದೆ. ಆದರೆ ಇವು ಉಪಲಬ್ಧವಾಗಿಲ್ಲ. ನಿಜಗುಣ ಶಿವಯೋಗಿ ವೇದಾಂತ ಗ್ರಂಥಗಳನ್ನು, ಯೋಗಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥವನ್ನು ಮತ್ತು ವಿಶ್ವಕೋಶವನ್ನು ರಚಿಸಿರುವುದರಿಂದ ಈತನು ಘನವಿದ್ವಾಂಸನೆಂದು, ವೈರಾಗ್ಯ ಸಂಪನ್ನನೆಂದೂ, ಅಪಾರವಾದ ಪಾಂಡಿತ್ಯ ಹೊಂದಿದ್ದವನೆಂದು ತಿಳಿದುಬರುತ್ತದೆ. ಈತನ ಕೃತಿಗಳಿಂದ ಸ್ವವಿಷಯಗಳಾವುವು ತಿಳಿದುಬಂದಿಲ್ಲ.

ಪ್ರಕೃತ 'ಪುರಾತನರ ತ್ರಿವಿಧಿ'ಯಲ್ಲಿ ೬೩ ಜನ ಪುರಾತನರ ಸಂಕ್ಷಿಪ್ತಚರಿತ್ರೆ ನಿರೂಪಿಸಲಾಗಿದೆ. ಪ್ರತಿಯೊಂದು ತ್ರಿಪದಿ ಪದ್ಯದಲ್ಲೂ ಒಬ್ಬೊಬ್ಬ ಶೈವಸಂತರ ವಿಷಯವನ್ನು ಕವಿ ಸಂಕ್ಷೇಪವಾಗಿ ವಿವರಿಸಿದ್ದಾನೆ. ತಮಿಳು ಪೆರಿಯ ಪುರಾಣದ ಶ್ರೇಷ್ಠ ಶೈವಸಂತರಾದ ೬೩ ಜನ ಪುರಾತನರನ್ನು ಕುರಿತು ಹರಿಹರ ರಗಳೆಗಳನ್ನು ರಚಿಸಿದ್ದಾನೆ. ಆ ಮಾರ್ಗವನ್ನೇ ಅನುಸರಿಸಿ ನಿಜಗುಣ ಶಿವಯೋಗಿ ಈ ಕೃತಿಯನ್ನು ಬರೆದಿದ್ದಾನೆ. ಈ ಗ್ರಂಥದ ಸಂಪಾದಕರು ಅನುಬಂಧವಾಗಿ ಕೊಟ್ಟಿರುವ ಲೇಖನಗಳು ತುಂಬಾ ಉಪಯುಕ್ತವಾಗಿವೆ. ಅಲ್ಲದೆ ನಿಜಗುಣ ಶಿವಯೋಗಿಯ ತಪೋಭೂಮಿಯ ಚಿತ್ರವನ್ನು ಶಂಭುಲಿಂಗ ದೇವಾಲಯದ ಚಿತ್ರವನ್ನು ಕೊಟ್ಟಿದ್ದಾರೆ. ಅನುಬಂಧದಲ್ಲಿ ಕೊಟ್ಟಿರುವ ವಿದ್ವಾಂಸರ ಲೇಖನಗಳು, ಓದುಗರಿಗೆ ಬಹು ಉಪಯುಕ್ತವಾಗಿದೆ. ಗ್ರಂಥದ ಕೊನೆಯಲ್ಲಿ ಶಬ್ದಕೋಶ ಕೊಟ್ಟಿರುವುದು ಗ್ರಂಥಾವಲೋಕನೆಗೆ ಸಹಕಾರಿಯಾಗಿದೆ. ಈ ಕಾವ್ಯದ ಕೆಲವು ಮುದ್ರಣಗಳು ಈ ಹಿಂದೆಯೇ ಆಗಿದ್ದರೂ, ಅಧಿಕೃತವಾದ ಒಂದು ಮುದ್ರಣ ಆವಶ್ಯಕವಾಗಿತ್ತು. ಈ ಕಾರ್ಯ ಮಾಡುವುದರ ಮೂಲಕ ಈ ಗ್ರಂಥದ ಸಂಪಾದಕರು ಅಭಿನಂದನೆಗೆ ಅರ್ಹರಾಗಿದ್ದಾರೆ. ■

# ಬಸವಾದಿ ಗಣಚರಿತ್ರೆ ಮತ್ತು ಗಣವಚನ ಮಂಜರಿ

ಲೇಖಕರು: ಡಾ. ಎಸ್.ಎಂ. ಹುಣಶ್ಯಾಳ, ಪ್ರಕಾಶಕರು: ವಿಜಯ ಪ್ರಕಾಶನ, ರಾಯಚೂರು, ೧೯೬೮, ಪುಟಗಳು: ಕ್ರೌನ್ ಅಷ್ಟದಳಾಕಾರ ೧೩೬+೧೬೦, ಬೆಲೆ: ರೂ. ೩.೦೦

**ಕ**ನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹನ್ನೆರಡನೆಯ ಶತಮಾನ ಹಲವಾರು ದೃಷ್ಟಿಗಳಿಂದ ಪ್ರಮುಖವಾದುದು. ಈ ಶತಮಾನದಲ್ಲಿ ಅವತರಿಸಿದ ಬಸವಣ್ಣ ಸಾಹಿತ್ಯಕ ಧಾರ್ಮಿಕ ಸಾಮಾಜಿಕ ರಂಗಗಳಲ್ಲಿ ಕ್ರಾಂತಿಯನ್ನೆಸಗಿದನು. ಅದರಿಂದ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಹೊಸ ದೃಷ್ಟಿ ಹರಿದು ವಚನಸಾಹಿತ್ಯವೆಂಬ ನೂತನ ಪ್ರಕಾರ ಸೃಷ್ಟಿಯಾಯಿತು. ಬಸವಣ್ಣನ ಹಿರಿಯ ಕಿರಿಯ ಸಮಕಾಲೀನರಾಗಿ ಅಸಂಖ್ಯಾತ ವಚನಕಾರರು ಮೈದೋರಿದರು. ಈ ವಚನಕಾರರು ಸಂಖ್ಯೆಯಲ್ಲಿ ಎಷ್ಟಿರಬಹುದೆಂದು ಇನ್ನೂ ತಿಳಿದುಬಂದಿಲ್ಲ. ಅನೇಕರ ವಚನಗಳು ಇನ್ನೂ ಉಪಲಬ್ಧವಾಗಿಲ್ಲ.

ಪ್ರಕೃತ ಬಸವಾದಿ ಗಣಚರಿತ್ರೆ ಮತ್ತು ಗಣವಚನ ಮಂಜರಿಯಲ್ಲಿ ೧೧೫ ಗಣಾಧೀಶ್ವರರ ವಚನಗಳನ್ನೂ ೩೬ ಗಣಾಧೀಶ್ವರಿಯರ ಕೆಲವು ವಚನಗಳನ್ನೂ ಸಂಪಾದಿಸಲಾಗಿದೆ. ಗ್ರಂಥದ ಪ್ರಾರಂಭದಲ್ಲಿ ಈ ೧೧೫ ಜನ ಗಣಾಧೀಶ್ವರರ ಸಂಕ್ಷಿಪ್ತ ಚರಿತ್ರೆಯನ್ನು ಸಂಗ್ರಹಿಸಿಕೊಡಲಾಗಿದೆ.

ವಚನ ಪಿತಾಮಹ ದಿ. ಡಾ. ಪಿ.ಜಿ. ಹಳಕಟ್ಟಿಯವರು ಈ ದಿಸೆಯಲ್ಲಿ ಅಪಾರ ಶ್ರಮವಹಿಸಿ ಶಿವಶರಣರ ಚರಿತ್ರೆಗಳನ್ನು ಬರೆದಿದ್ದರೆಂಬುದನ್ನೂ ಈ ಸಂದರ್ಭದಲ್ಲಿ ನೆನೆಯಬಹುದು. ಈ ಲೇಖಕರು ಆ ಸಾಹಿತ್ಯವನ್ನು ಬಳಸಿಕೊಳ್ಳುವುದರ ಜೊತೆಗೆ ಸಮಯೋಚಿತವಾಗಿ ವಚನಗಳನ್ನು ಕೋದು ಗಣಾಧೀಶ್ವರರ ಚರಿತೆ ಉಪಯುಕ್ತವಾಗುವಂತೆ ಮಾಡಿದ್ದಾರೆ. ಸಾಹಿತ್ಯಾಭ್ಯಾಸಿಗಳಿಗೆ ಈ ಭಾಗ ತುಂಬಾ ಪ್ರಯೋಜನವಾಗುತ್ತದೆ. ಇಷ್ಟೊಂದು ಜನ ವಚನಕಾರರ ಮಾಹಿತಿ ಒಂದೇ ಕಡೆ ಅವಲೋಕನೆಗೆ ಲಭ್ಯವಾಗಿರುವುದು ಸಂಶೋಧಕರಿಗೆ ಮುಂದಿನ ವ್ಯಾಸಂಗಕ್ಕೆ ನೆರವಾಗುತ್ತದೆ.

ಗಣವಚನಮಂಜರಿ ಭಾಗದಲ್ಲಿ ಈ ಗಣಾಧೀಶ್ವರರ ಕೆಲವು ವಚನಗಳನ್ನು ಕೊಟ್ಟಿದೆ. ಇದು ಒಂದು ಸಂಕಲನ. ಅದಾದ ಮೇಲೆ ಎರಡನೆಯ ಭಾಗದಲ್ಲಿ ಗಣಾಧೀಶ್ವರಿಯರ ಕೆಲವು ವಚನಗಳನ್ನು ಸಂಗ್ರಹಿಸಿದೆ. ಆದರೆ ಈ ಗಣಾಧೀಶ್ವರಿಯರ ಚರಿತ್ರೆಗಳನ್ನು ಕೊಟ್ಟಿಲ್ಲ.

ಪುರಾತನ ವಚನಸಂಕಲನಕಾರ್ಯ ಬಹಳ ಹಿಂದಿನಿಂದ ನಡೆದುಕೊಂಡು ಬಂದಿದೆ. ೧೯೫೫ರಲ್ಲಿ ಶ್ರೀ ಚೆನ್ನಮಲ್ಲಿಕಾರ್ಜುನ ಅವರು ಸಂಪಾದಿಸಿದ ಸರ್ವಪುರಾತನರ ವಚನದಲ್ಲಿ ೯೯ ಜನ ವಚನಕಾರರ ವಚನಗಳನ್ನು ಸಂಪಾದಿಸಿಕೊಡಲಾಗಿದೆ. ಪ್ರಕೃತ ಬಸವಾದಿ ಗಣಚರಿತ್ರೆ ಮತ್ತು ಗಣವಚನ ಮಂಜರಿ ಅದರ ಸಂಗ್ರಹದಂತಿದೆ. ಈ ತೆರನ ಸಂಕಲನಗಳು ಮತ್ತೂ ಕೆಲವು ಇದ್ದಂತೆ ಕಂಡುಬರುತ್ತದೆ. ಶೂನ್ಯಸಂಪಾದನೆಯ ಬೇರೆ ಬೇರೆ ಸಂಕಲಗಳು ಇದ್ದಂತೆ ಈ ಪುರಾತನರ ವಚನಗಳ ಬೇರೆ ಬೇರೆ ಸಂಕಲನಗಳೂ ಇವೆ.

ಈ ಸಂಕಲನಗಳು ಸಾಮಾನ್ಯ ಜನತೆಗೂ, ವಿದ್ವಾಂಸರಿಗೂ ಸಂಶೋಧಕರಿಗೂ ಬಹಳ ಪ್ರಯೋಜನಕಾರಿಯಾದುವು. ಇವುಗಳ ಅವಲೋಕನದಿಂದ ಇಡೀ ವಚನಕಾರರ ಬಗ್ಗೆ ಒಂದು ಸಾಮೂಹಿಕ ದೃಷ್ಟಿ ಹರಿಸಲು ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದ ಈ ಗ್ರಂಥವನ್ನು ಸ್ವಾಗತಿಸಬೇಕಾಗಿದೆ. ಇದರ ಕರ್ತೃಗಳು ಬಹಳ ಪ್ರಯಾಸದಿಂದ ಮಾಹಿತಿಯನ್ನು ಒಟ್ಟುಗೂಡಿಸಿ, ವಚನಗಳನ್ನು ಸಂಪಾದಿಸಿ ಕೊಟ್ಟಿರುವುದು ಸ್ತುತ್ಯ ಕಾರ್ಯ. ವೀರಶೈವ ಸಾಹಿತ್ಯದಲ್ಲಿ ಅತೀವ ಆಸಕ್ತಿಯನ್ನೂ ನಿಷ್ಠೆಯನ್ನೂ ತಳೆದಿರುವ ಡಾ. ಹುಣಶ್ಯಾಳರು ಈ ತೆರನ ಕಾರ್ಯಗಳನ್ನು ಮೇಲಿಂದ ಮೇಲೆ ಕೈಕೊಳ್ಳಲಿ ಎಂದು ಹಾರೈಸುತ್ತೇವೆ. ಜನತೆ ಈ ಗ್ರಂಥದ ಉಪಯೋಗವನ್ನು ಸಂಪೂರ್ಣವಾಗಿ ಪಡೆದುಕೊಳ್ಳಲಿ ಎಂದು ಆಶಿಸುತ್ತೇನೆ. ■

# ಕನ್ನಡ ಪಡೆನುಡಿಗಳ ಕೋಶ

ಸಂಪಾದಕರು: ಟಿ.ವಿ. ವೆಂಕಟರಮಣಯ್ಯ, ಪ್ರಕಾಶಕರು: ಸಮಾಜ ಪುಸ್ತಕಾಲಯ, ಧಾರವಾಡ, ೧೯೬೮, ಪುಟಗಳು: ಕ್ರೌನ್ ೧/೮, ೧೬+೨೮೦, ಬೆಲೆ: ಸಾದಾಪ್ರತಿ ರೂ. ೪.೦೦, ಗಟ್ಟಿಬೈಂಡು: ರೂ.೬.೦೦

ಈ ಗ್ರಂಥದಲ್ಲಿ ಹದಿನಾರು ವಿವಿಧವಿಷಯಗಳಿಗೆ ಸಂಬಂಧಿಸಿದ ಪಡೆನುಡಿಗಳಿವೆ. ಇವನ್ನು ಪ್ರತ್ಯೇಕವಾಗಿ ವಿಂಗಡಿಸಿ ಅಕಾರಾದಿಯಾಗಿ ಕೊಡಲಾಗಿದೆ. ಪಂಪನಿಂದ ಹಿಡಿದು ಆಧುನಿಕ ಲೇಖಕರವರೆಗಿನ ಸಾಹಿತ್ಯ ಪ್ರಕಾರಗಳಿಂದ ಈ ಪಡೆನುಡಿಗಳನ್ನು ಸಂಗ್ರಹಿಸಿದಂತೆ ಸಂಪಾದಕರು ಹೇಳಿಕೊಂಡಿದ್ದಾರೆ.

ಕನ್ನಡ ಕವಿಗಳು ನುಡಿಗಟ್ಟುಗಳನ್ನೂ ಜಾಣ್ಣುಡಿಗಳನ್ನೂ ಯಥೇಚ್ಛವಾಗಿ, ಸಮಯೋಚಿತವಾಗಿ ಹಿಂದಿನಿಂದಲೂ ಬಳಸಿಕೊಂಡು ಬಂದಿದ್ದಾರೆ. ಅನೇಕ ನುಡಿಗಟ್ಟುಗಳೂ, ಜಾಣ್ಣುಡಿಗಳೂ, ಗಾದೆಗಳೂ ಇಂದಿಗೂ ವ್ಯವಹಾರದಲ್ಲಿ ಬಳಕೆಯಲ್ಲಿವೆ. ಈ ತೆರನ ನುಡಿಗಟ್ಟುಗಳು ಗ್ರಂಥದ ರೂಪದಲ್ಲಿ ಒಂದೆಡೆ ಸಂಕಲಿತವಾಗಿರಲಿಲ್ಲ. ಆ ಕೆಲಸವನ್ನೂ ಈ ಗ್ರಂಥದ ಸಂಪಾದಕರು ಮಾಡಿದ್ದಾರೆ. ಮಾನವನ ಜ್ಞಾನವಿಕಾಸಕ್ಕೆ ಈ ತೆರನ ಗ್ರಂಥಗಳ ಅವಲೋಕನ ಅತ್ಯವಶ್ಯ. ಪ್ರಗತಿಗಾಮಿಯಾದ ಭಾಷೆಗೆ ಈ ತೆರನ ನುಡಿಗಟ್ಟುಗಳು ಅನ್ಯಭಾಷೆಗಳಿಂದಲೂ ಸೇರಿಕೊಳ್ಳುತ್ತವೆ; ವಿಶೇಷಾರ್ಥವನ್ನೂ ಪಡೆದುಕೊಳ್ಳುತ್ತವೆ. ಹೀಗೆ ಕನ್ನಡಕ್ಕೂ ಕೆಲವಾರು ನುಡಿಗಟ್ಟುಗಳು ಇತರ ಭಾಷೆಗಳಿಂದ ಬಂದು ಸೇರಿಕೊಂಡಿವೆ.

ಈ ಗ್ರಂಥದ ಸಂಪಾದಕರು ಈ ಕೃತಿಯನ್ನು 'ಪಡೆನುಡಿಗಳ ಕೋಶ' ಎಂದು ಹೆಸರಿಸಿದ್ದಾರೆ. ಆದರೆ ಈ ಪಡೆನುಡಿ ಎಂಬುದರ ಅರ್ಥವೇನೆಂಬುದನ್ನು ಶ್ರೀಯುತರು ಸ್ಪಷ್ಟಪಡಿಸಿಲ್ಲ. ಇಂಗ್ಲೀಷಿನ praverb ಎಂಬುದಕ್ಕೆ ಪಡೆನುಡಿ ಸರಿಯಾದ ಶಬ್ದವಾಗಲಾರದು ಮತ್ತು ಈ ಕೋಶದಲ್ಲಿ ಕೊಟ್ಟಿರುವ ಬಿಡಿಶಬ್ದಗಳು ಪಡೆನುಡಿಗಳು ಎಂದು ಕರೆಸಿಕೊಳ್ಳಲಾರವು. ಒಂದುಶಬ್ದಕ್ಕೆ ಹಲವಾರುಅರ್ಥಗಳು ಇರುವುದು ಸ್ವಾಭಾವಿಕ. ವಾಚ್ಯಾರ್ಥ, ವ್ಯಂಗ್ಯಾರ್ಥ, ಧ್ವನ್ಯಾರ್ಥ ಅಲಂಕಾರಿಕಾರ್ಥಗಳನ್ನೂ ಒಂದುಶಬ್ದ ಸೂಚಿಸಿದಷ್ಟಕ್ಕೇ ಅದು ಪಡೆನುಡಿ ಎನ್ನಿಸಿಕೊಳ್ಳುವುದಿಲ್ಲ. ಇದಕ್ಕೆ ಉದಾಹರಣೆಯಾಗಿ 'ಮಹಾಭಾರತದಿಂದ ಬಂದ ಕೆಲವು ಪಡೆನುಡಿಗಳು' ಎಂಬ ಭಾಗವನ್ನು ನೋಡಬಹುದು. ಹಾಗೆಯೇ ಮತ್ತೆ ಕೆಲವನ್ನು ಪರಿಶೀಲಿಸಬಹುದು.

ಪುಟ ೩– ಮುಗಿಲುಮುಟ್ಟಲು ಹೋಗು (ಹೆಬ್ಬಯಕೆಯಿಂದಿರು) ಮುಗಿಲು ಮುಟ್ಟುವ ನನ್ನ ಹಂಚಿಕೆಗಳೆಲ್ಲವೂ ಹಣದ ಮುಗ್ಗಟ್ಟಿನಿಂದ ಮುಗ್ಗರಿಸಿಬಿಟ್ಟವು. ಈ ಪಡೆನುಡಿಗೆ ಕೊಟ್ಟಿರುವ ಉದಾಹರಣೆಯಲ್ಲಿ ಮುಗಿಲುಮುಟ್ಟು ಎಂದಿಯೇ ಹೊರತು ಮುಗಿಲುಮುಟ್ಟಲುಹೋಗು ಎಂದಿಲ್ಲ. ಇಲ್ಲಿ ಅಲಂಕಾರಿಕವಾಗಿ, ಹೆಚ್ಚಾದ, ಅತಿಯಾದ, ಹಿರಿಯ ಎಂಬರ್ಥಗಳಿವೆಯೇ ಹೊರತು ಮತ್ತೇನೂ ವಿಶೇಷವಿಲ್ಲ. ಹಾಗೆಯೇ ಮುಂದಿನ ಪಡೆನುಡಿ ಮುಗಿಲುಮುಟ್ಟು (ಕಂಠದ ಉಚ್ಚತೆ ಇರು) 'ಮಹಾತ್ಮಾಕೀ ಜೈ' ಎಂಬ ಜನರ ಕೂಗು ಮುಗಿಲುಮುಟ್ಟಿತು. ಇಲ್ಲಿ ಜನರ ಕೂಗು ಆಕಾಶದವರೆಗೂ ಏರಿತು, ಗಟ್ಟಿಯಾಯಿತು ಎಂಬರ್ಥವೇ ಹೊರತು ಕಂಠದ ಉಚ್ಚತೆ ಇರು ಎಂಬರ್ಥವಲ್ಲ.

ಪುಟ ೫– ವಾಯುಸುತ (ಭೀಮ, ಆಂಜನೇಯ) ಈ ಶಬ್ದ ಪಡೆನುಡಿಯೂ ಅಲ್ಲ; ನುಡಿಗಟ್ಟೂ ಅಲ್ಲ. ಭೀಮ, ಆಂಜನೇಯರಿಬ್ಬರೂ ವಾಯುಸುತರೇ. ಇದರಲ್ಲಿ ಯಾವ ವಿಶೇಷಾರ್ಥವೂ ಇಲ್ಲ.

ಪುಟ ೭– ನೀರು ಕೇಳುವ ಹಾಗೆ (ಬಹಳ ತ್ರಾಸವಾಗುವ ಹಾಗೆ) ಮೂರುಸಾವಿರ ಬಡಿದ ನೀರ ಕೇಳವ ತೆರದಿ– ಮಹಾಲಿಂಗಸ್ವಾಮಿ. ಇಲ್ಲಿ ಕೊಟ್ಟಿರುವ ನುಡಿಗಟ್ಟಿಗೂ ಪ್ರಯೋಗಕ್ಕೂ ಏನೇನೂ ಸಂಬಂಧವಿಲ್ಲ.

ಪುಟ ೫೦– ಕೈ ಒಡ್ಡು, ಕೈ ಆನು (ಬೇಡು). ನಿನ್ನ ಕೆಯ್ಯನೊಡ್ಡಿ ಬೇಡಿದಪೆಂ. ಇಲ್ಲಿ ಕೈ ಒಡ್ಡು, ಕೈ ಆನು ಎಂದರೆ ಕೈಯನ್ನು ಮುಂದಕ್ಕೆ ಚಾಚು, ನೀಡು ಎಂದರ್ಥವೇ ಹೊರತು ಬೇಡು ಎಂದರ್ಥವಲ್ಲ. ಪ್ರಯೋಗದಲ್ಲಿ ಕೆಯ್ಯನೊಡ್ಡಿ ಬೇಡಿದಪೆಂ (ಕೆಯ್ಯನ್ನು ಮುಂದಕ್ಕೆ ಚಾಚು ಬೇಡಿಕೊಳ್ಳು) ಎಂದಿರುವುದರಿಂದ, ಇದು ಪಡೆನುಡಿಯಾಗಲಿ, ನುಡಿಗಟ್ಟಾಗಲಿ ಅಲ್ಲ.

ಪುಟ ೯೯– ಬೆನ್ನು (ಯಾವುದೇ ವಸ್ತುವಿನ ಹಿಂಭಾಗ, ಬೆನ್ನಿನಂಥ ಭಾಗ) ಪುಸ್ತಕದ ಬೆನ್ನು, ಹಾಳೆಯ ಬೆನ್ನು – ಇತ್ಯಾದಿ. ಇದು ಯಾವ ರೀತಿಯ ಪಡೆನುಡಿಯೂ ಎನ್ನಿಸಿಕೊಳ್ಳಲಾರದು.

ಪುಟ ೧೯೦– ಒನ್ ವೇ ಟ್ರಾಫಿಕ್ (ಇಬ್ಬರು ಸ್ನೇಹಿತರಲ್ಲಿ ಒಬ್ಬನೇ ಯಾವಾಗಲೂ ಖರ್ಚು ಮಾಡುತ್ತಿರುವುದು). ನಾರಾಯಣನು ಯಾವಾಗಲೂ ಒನ್ ವೇ ಟ್ರಾಫಿಕ್. ಈ ನುಡಿಗಟ್ಟಿಗೆ ಇದೇ ಅರ್ಥವಲ್ಲದೆ ಕೊಟ್ಟ ಹಣ ಪದಾರ್ಥ ಹಿಂತಿರುಗಿ ಬಾರದಿರುವುದು ಎಂಬ ಅರ್ಥವೇ ಹೆಚ್ಚು ಬಳಕೆಯಲ್ಲಿರುವುದು. ಅದನ್ನು ಸೂಚಿಸಬೇಕಿತ್ತು.

ಇಲ್ಲಿ ಉದಾಹರಣೆಗಾಗಿ ಕೆಲವನ್ನು ಮಾತ್ರ ಎತ್ತಿ ತೋರಿಸಿದೆ. ಬಿಡಿ ಶಬ್ದಗಳಿಗೆ ಪಡೆನುಡಿಗಳ ಕೋಶದಲ್ಲಿ ಸ್ಥಾನವಿಲ್ಲ. ಅಲ್ಲದೆ ನುಡಿಗಟ್ಟು ಉದ್ಧರಿಸಿರುವ ಪ್ರಯೋಗಗಳಿಗೆ ಆಕರಗಳಿದ್ದಲ್ಲಿ ಅವನ್ನು ಸೂಚಿಸಿದ್ದರೆ ಹೆಚ್ಚು ಅಧಿಕೃತವೂ, ಪ್ರಯೋಜನವೂ ಆಗುತ್ತಿತ್ತು.

ಕೋಶರಚನೆಯ ಕಾರ್ಯ ಒಬ್ಬ ವ್ಯಕ್ತಿಯಿಂದ ಆಗತಕ್ಕಂಥದ್ದಲ್ಲ ಮತ್ತು ಶಬ್ದಗಳಿಗೂ ನುಡಿಗಟ್ಟುಗಳಿಗೂ ಇರುವ ಎಲ್ಲ ಅರ್ಥಗಳನ್ನು ಸೂಚಿಸುವುದೂ ಸಾಧ್ಯವಿಲ್ಲ. ಹಲವಾರು ಜನ ಕೆಲವಾರು ವರ್ಷ ಶ್ರಮಿಸಿದರೆ ಮಾತ್ರ ಈ ಕೆಲಸ ಸಾಧ್ಯವಾದೀತೇನೊ. ಆದರೂ ಕೂಡ ಏಕಾಭಿಪ್ರಾಯವಾಗಲಿ ಸಂಪೂರ್ಣತೆಯಾಗಲಿ ಸಾಧ್ಯ ಎಂದು ಭಾವಿಸುವುದಕ್ಕೆ ಎಡೆಯಿಲ್ಲ. ಇಷ್ಟೆಲ್ಲ ಕಷ್ಟಗಳಿದ್ದರೂ ಶ್ರೀ ಟಿ.ವಿ. ವೆಂಕಟರಮಣಯ್ಯನವರು ಏಕಾಂಗಿಯಾಗಿ ಈ 'ಪಡೆನುಡಿಗಳ ಕೋಶ' ಸಿದ್ಧಪಡಿಸಿರುವುದು ನಿಜಕ್ಕೂ ಶ್ಲಾಘ್ಯವಾದುದು. ಕೆಲವಾರು ವರ್ಷಗಳ ಪರಿಶ್ರಮದಿಂದ ಸಂಪಾದಿಸಿ ಪ್ರಕಟಿಸಿರುವ ಕೃತಿಯನ್ನು ವಿದ್ವಾಂಸರು ಅವಲೋಕಿಸಿ ಅರ್ಥಗಳಲ್ಲಿ ಕಂಡುಬರುವ ವ್ಯತ್ಯಾಸಗಳನ್ನೂ, ನ್ಯೂನತೆಗಳನ್ನೂ ಈ ಕೋಶದ ಸಂಪಾದಕರಿಗೆ ತಿಳಿಸಿದರೆ ಮುಂದಿನ ಮುದ್ರಣ ಮತ್ತಷ್ಟು ಪರಿಷ್ಕಾರಗೊಳ್ಳುವುದರಲ್ಲಿ ಸಂದೇಹವಿಲ್ಲ.



# ಸಕಲ ಪುರಾತನರ ವಚನಗಳು

ಸಂಪಾದಕರು: ಡಾ. ಆರ್.ಸಿ. ಹಿರೇಮಠ, ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ-೩, ೧೯೭೨, ಪುಟಗಳು xx+೬೫೪+೪೮, ಬೆಲೆ: ರೂ. ೧೮

---

ಬಸವಪೂರ್ವ ಮತ್ತು ಬಸವ ಸಮಕಾಲೀನ ಶರಣರು ಬಸವಣ್ಣನವರ ಮೇಲೆ ವಿಶೇಷ ಪ್ರಭಾವವನ್ನು ಬೀರಿದ್ದಾರೆ. ಜೇಡರ ದಾಸಿಮಯ್ಯ, ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ -ಮೊದಲಾದ ಹಿರಿಯ ಶರಣರನ್ನು ಬಸವಣ್ಣನವರು ಸ್ಮರಿಸಿದ್ದಾರೆ. ಹನ್ನೊಂದನೆಯ ಶತಮಾನದಲ್ಲಿ ಆರಂಭವಾದ ವಚನಸಾಹಿತ್ಯವು ಬಸವೇಶ್ವರರ ಕಾಲಕ್ಕೆ ಕ್ರಾಂತಿಕಾರಕವಾದ ಒಂದು ಭೂಮಿಕೆಯನ್ನು ಸಿದ್ಧಪಡಿಸಿತ್ತು.

ಕಲ್ಯಾಣಕ್ರಾಂತಿಯಾದ ಮೇಲೆ ಶರಣರೆಲ್ಲಾ ಚೆಲ್ಲಾಪಿಲ್ಲಿಯಾಗಿ ಹೋದರು. ಅವರು ರಚಿಸಿದ ಅಪಾರವಾದ ವಚನ ಸಾಹಿತ್ಯದ ಸ್ಥಿತಿಗತಿಗಳೇನಾದವು ಎಂಬುದು ಅಜ್ಞಾತವಾಗಿದೆ. ಬಸವಣ್ಣನವರ ಸಮಕಾಲೀನರಲ್ಲೇ ವಚನಭಂಡಾರಿ ಶಾಂತರಸನೆಂಬುವನು ವಚನಗಳನ್ನು ಪ್ರತಿಮಾಡಿಸುವ, ಸಂಗ್ರಹಿಸುವ ಅಥವಾ ಮತ್ತಾವುದೋ ಈ ತೆರನ ಕಾರ್ಯದಲ್ಲಿ ನಿಯುಕ್ತನಾಗಿದ್ದಂತೆ ಆತನ ಹೆಸರಿನಿಂದಲೇ ಊಹಿಸಲು ಬರುವಂತಿದೆ. ಇತರರೂ ವಚನಗಳನ್ನು ಸಂಗ್ರಹಿಸುವ, ಸಂರಕ್ಷಿಸುವ ಕಾರ್ಯದಲ್ಲಿ ತೊಡಗಿದ್ದಿರಬಹುದು.

'ಶೂನ್ಯಸಂಪಾದನೆ'ಗಳೂ ಇತರ ವಚನಸಂಕಲನಗಳೂ ಇದಕ್ಕೆ ಸಾಕ್ಷಿಯಾಗಿವೆ. ಈ ಸಂಪಾದನೆಗಳ, ಸಂಕಲನಗಳ ಸಂಪಾದಕರು ಯಾವುದೋ ಒಂದು ವಿಶಿಷ್ಟ ಧ್ಯೇಯ ಧೋರಣೆಗಳನ್ನು ಇಟ್ಟುಕೊಂಡು ಅವನ್ನು ಮಾಡಿದಂತೆ ಕಂಡುಬರುತ್ತದೆ. ಇದಕ್ಕೆ ಶಿವಗಣಪ್ರಸಾದಿ ಮಹದೇವಯ್ಯ, ಕೆಂಚವೀರಣ್ಣೊಡೆಯ, ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರುಸಿದ್ಧವೀರಣಾರ್ಯ, ಹಲಗೆಯದೇವರು ಇವರ 'ಶೂನ್ಯಸಂಪಾದನೆ'ಗಳೇ ನಿದರ್ಶನಗಳಾಗಿವೆ. ಇದೇರೀತಿ ಕೇವಲ ವಚನಸಂಕಲನಗಳೂ ಹುಟ್ಟಿಕೊಂಡಿವೆ. ಇವುಗಳಲ್ಲಿ ಸರ್ವಪುರಾತನರ ವಚನಗಳು, ಬೆಡಗಿನ ವಚನಗಳು, ಕಾಲಜ್ಞಾನದ ವಚನಗಳು ಮುಖ್ಯವಾದವು. ಆದರೆ ಈ ವಚನ ಸಂಕಲನಕಾರರ ಕಾಲ ದೇಶ ವರ್ತಮಾನಗಳೇನೂ ತಿಳಿದುಬಂದಿಲ್ಲ. ಇದೇ ತೆರನ ವಚನ ಸಂಕಲನ ಮಾಡಿದವರಲ್ಲಿ "ಗಣಭಾಷಿತ ರತ್ನಮಾಲೆ"ಯ ಗುಬ್ಬಿಯ ಮಲ್ಲಣ್ಣ, 'ಲಿಂಗಲೀಲಾವಿಲಾಸ ಚಾರಿತ್ರ'ದ ಕಲ್ಲುಮಠದ ಪ್ರಭುದೇವರು ಮುಖ್ಯರು.

ಪ್ರಕೃತ 'ಸಕಲ ಪುರಾತನರ ವಚನಗಳಿಗೆ' ಎಲ್ಲಾ ಪುರಾತನರ ವಚನಗಳು, ಸರ್ವಪುರಾತನರ ವಚನಗಳು, ಮೂರುಸಾವಿರ ವಚನಗಳು ಎಂಬ ಬೇರೆ ಹೆಸರುಗಳೂ ಇವೆ. ಈ ಸಕಲ ಪುರಾತನರ ವಚನಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಲಾಗಿದೆ. ಮೊದಲನೆಯ ಗುಂಪಿನಲ್ಲಿ ಶಾಂತಯ್ಯನ ವಚನಗಳಿಂದ ಆರಂಭವಾಗುವ ಸಂಕಲನದಲ್ಲಿ ೨೭ ಜನ ವಚನಕಾರರ ೩,೦೦೦ ವಚನಗಳಿವೆ. ಎರಡನೆಯ ಗುಂಪಿನಲ್ಲಿ ಬಸವಣ್ಣನವರ ವಚನಗಳಿಂದ ಆರಂಭವಾಗುವ ಸಂಕಲನದಲ್ಲಿ ೮೫ ಜನ ವಚನಕಾರರ ೧,೦೦೦ ವಚನಗಳಿವೆ. ಮೂರನೆಯ ಗುಂಪಿನಲ್ಲಿ ಗೊಗ್ಗವ್ವೆಯ ವಚನಗಳಿಂದ ಆರಂಭವಾಗುವ ಸಂಕಲನದಲ್ಲಿ ೧೨೧ ಜನ ವಚನಕಾರರ ೧,೫೦೦ ವಚನಗಳಿವೆ. ಈ ಮೂರೂ ಗುಂಪಿನ

ಸಂಕಲನಗಳಲ್ಲಿ ಒಟ್ಟು ೧೫೨ ಜನ ವಚನಕಾರರ ಸುಮಾರು ೪,೦೦೦ ವಚನಗಳಿವೆ. ಪ್ರಕೃತ 'ಸಕಲ ಪುರಾತನರ ವಚನಗಳು' ಗ್ರಂಥದಲ್ಲೇ ೧೬ ಜನ ವಚನಕಾರರ ೨,೨೯೩ ವಚನಗಳಿವೆ.

ವಚನ ಸಾಹಿತ್ಯ ಪ್ರಕಟನೆಗೇ ಪ್ರತ್ಯೇಕ ವಿಭಾಗವನ್ನು ತೆರೆದು ಮಹತ್ವಪೂರಿತವಾದ ಕಾರ್ಯವನ್ನು ಮಾಡುತ್ತಿರುವ ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಪೀಠವು ಅಭಿನಂದನೀಯವಾದುದು. 'ಸಕಲ ಪುರಾತನರ ವಚನಗಳು' ಪ್ರಕಟವಾಗುವುದಕ್ಕೆ ಮೊದಲೇ ದಿ॥ ಚನ್ನಮಲ್ಲಿಕಾರ್ಜುನ ಅವರು 'ಸರ್ವಪುರಾತನರ ವಚನಗಳು'. ಡಾ. ಎಸ್.ಎಂ. ಹುಣಶ್ಯಾಳ ಅವರು 'ಬಸವಾದಿ ಗಣಚರಿತ್ರೆ ಮತ್ತು ಗಣವಚನ ಮಂಜರಿ' ಇವನ್ನು ಹೊರತಂದಿರುವುದನ್ನು ಸ್ಮರಿಸಬೇಕಾಗಿದೆ.

ಸಕಲ ಪುರಾತನರ ವಚನಗಳ ಮೂರುಗುಂಪುಗಳಲ್ಲಿ ಕೋಲಶಾಂತಯ್ಯನಿಂದ ಆರಂಭವಾಗುವ ೨೭ ಜನ ಶರಣರ ವಚನಗಳಲ್ಲಿ ೧೬ ಜನ ಶರಣರ ವಚನಗಳನ್ನು ಮಾತ್ರ ಆಯ್ದುಕೊಳ್ಳಲಾಗಿದೆ ಎಂದು ಅದರ ಸಂಪಾದಕರು ತಿಳಿಸಿದ್ದಾರೆ. ಆದರೆ ಉಳಿದ ೧೧ ಜನ ಶರಣರ ವಚನಗಳನ್ನು ಬಿಟ್ಟಿರುವುದಕ್ಕೆ ಕಾರಣವನ್ನು ತಿಳಿಸಿಲ್ಲ. ಜೊತೆಗೆ ಇತರ ಗುಂಪಿನ ಕಟ್ಟುಗಳಲ್ಲಿ ಕಂಡುಬರುವ ಈ ೧೬ ಜನ ಶರಣರ ಹೆಚ್ಚಿನ ವಚನಗಳನ್ನೂ ಈ ಸಂಕಲನದಲ್ಲಿ ಸೇರಿಸಿರುವುದಾಗಿ ಹೇಳಿದ್ದಾರೆ. ಆದರೆ ಈ ಕ್ರಮ ಉಚಿತವಾದುದೆಂದು ನಮಗೆ ತೋರುವುದಿಲ್ಲ. ಪ್ರಾಚೀನ ಸಂಕಲನಕಾರರು ಯಾವ ಧ್ಯೇಯ ಧೋರಣೆಗಳನ್ನಿಟ್ಟುಕೊಂಡು ವಚನಕಾರರ ಮತ್ತು ವಚನಗಳ ಸಂಖ್ಯೆಯನ್ನು ನಿರ್ಧರಿಸಿರುವರೋ ಅದನ್ನು ಇಂದು ನಾವು ವ್ಯತ್ಯಾಸ ಮಾಡಿಕೊಳ್ಳುವುದು ಸಮಂಜಸವೆನಿಸುವುದಿಲ್ಲ. ಹಾಗಾದ ಪಕ್ಷದಲ್ಲಿ ಈ ಮೂರೂ ಗುಂಪಿನ ಶರಣರ ವಚನಗಳನ್ನು ಒಂದೇ ಸಂಕಲನದಲ್ಲಿ ಹೊರತರಬಹುದಲ್ಲವೆ?

ಪಾಠಾಂತರಗಳನ್ನು ಸೂಚಿಸಿರುವ ಕ್ರಮ, ಪ್ರತಿಗಳಿಗೆ ಸಂಕೇತಗಳನ್ನು ಕೊಟ್ಟಿರುವ ಕ್ರಮ ಇವನ್ನು ವಿವರಿಸಬೇಕಾಗಿತ್ತು. ಮೂರುಗುಂಪಿನ ವಚನಗಳಲ್ಲಿ ಆಯಾ ಗುಂಪಿನಲ್ಲಿ ಮೊದಲು ಬರುವ ವಚನಕಾರರ ಮೊದಲಕ್ಷರವನ್ನೇ ಸಂಕೇತವನ್ನಾಗಿ ಭಾವಿಸಿಕೊಂಡು ಹಸ್ತಪ್ರತಿಯ ಸಂಖ್ಯೆಯನ್ನು ಅದರ ಮುಂದೆ ಕೊಟ್ಟಂತಿದೆ. ಜೊತೆಗೆ ಪಾಠಾಂತರಗಳನ್ನು ಸೂಚಿಸುವಲ್ಲಿ ವಚನಸಂಖ್ಯೆ ಪಾಠಾಂತರ ಸಂಖ್ಯೆ ಎರಡನ್ನೂ ಕೊಟ್ಟಿದೆ. ಇಲ್ಲಿ ವಚನಸಂಖ್ಯೆಯನ್ನು ಕೊಡುವುದು ಅನವಶ್ಯಕವಾಗಿತ್ತು. ಪುಟ ೬೪೬ರ ಅಡಿಟಿಪ್ಪಣಿಯ ಪಾಠಾಂತರದಲ್ಲಿ ೧ ನಂದಿ (ಗೊ-೪೦) ಎಂದು ಕೊಟ್ಟಿರುವ ಸಂಕೇತ ಯಾವುದು ಎಂಬುದು ಗೊತ್ತಾಗುವುದಿಲ್ಲ. ವಚನಗಳ ಅಕಾರಾದಿಯನ್ನು ಪ್ರತಿಯೊಬ್ಬ ವಚನಕಾರರಿಗೂ ಪ್ರತ್ಯೇಕವಾಗಿ ಕೊಟ್ಟಿದೆ. ಅದಕ್ಕೆ ಬದಲಾಗಿ ಎಲ್ಲ ವಚನಕಾರರಿಗೂ ಒಂದೇ ಅಕಾರಾದಿಯನ್ನು ಕೊಟ್ಟು, ಅವಶ್ಯವೆನಿಸಿದಲ್ಲಿ ಅದರ ಮುಂದೆ ಆಯಾ ವಚನಕಾರರ ವಚನ ಸಂಖ್ಯೆಯನ್ನು ಸೂಚಿಸಬಹುದಾಗಿತ್ತು. ೨,೨೯೩ ವಚನಗಳಿರುವ ಈ ಸಂಕಲನಕ್ಕೆ ಕೇವಲ ಎರಡು ಪುಟಗಳ ಕಠಿಣ ಶಬ್ದಾರ್ಥಕೋಶವನ್ನೂ ಏಳೇ ಏಳು ಪಾರಿಭಾಷಿಕ ಶಬ್ದಗಳ ವಿವರಣೆಯನ್ನೂ ಕೊಟ್ಟಿದೆ. ಇಂತಹ ಗ್ರಂಥಕ್ಕೆ ಒಂದು ಸಮಗ್ರವಾದ ಅರ್ಥಕೋಶವನ್ನೂ ಪಾರಿಭಾಷಿಕ ಕೋಶವನ್ನೂ ಅಗತ್ಯವಾಗಿ ಕೊಡಬೇಕಾಗಿತ್ತು.

ಈ ಗ್ರಂಥಕ್ಕೆ ಚಿಕ್ಕುದಾದರೂ ಚೊಕ್ಕವಾದ ಪೀಠಿಕೆಯನ್ನು ಬರೆದಿದ್ದಾರೆ. ಈವರೆಗೆ ಅಪ್ರಕಟಿತವಾಗಿದ್ದ ಸಕಲ ಪುರಾತನರ ವಚನಗಳನ್ನು ಕೈಗೆತ್ತಿಕೊಂಡರೆ ಕಣ್ಣೊತ್ತಿಕೊಳ್ಳುವಂತೆ ಅಚ್ಚುಮಾಡಿಸಿ ಹೊರತಂದಿರುವ ಸಂಪಾದಕರ ಕಾರ್ಯ ಸ್ತುತ್ಯವಾದುದು.

ಸುಧಾ ವಾರಪತ್ರಿಕೆ, ಸಂಪುಟ-೧೦, ಸಂಚಿಕೆ-೨೭, ೭ ಜುಲೈ ೧೯೭೪

■

# ಪ್ರಾಚೀನ ಹಸ್ತಪ್ರತಿಗಳು

ಮಾನವಿಕ ಕರ್ಣಾಟಕ, ಸಂಪುಟ–೨, ಸಂಚಿಕೆ–೪, ಮೈಸೂರು ವಿಶ್ವವಿದ್ಯಾನಿಲಯ, ೧೯೭೨, ಲೇಖಕರು: ಎಚ್.ಎಲ್.ಎಸ್. ಭಾರತಿ, ಎಂ.ಎ., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೭೧, ಪು. ೭೨+೧೨, ಬೆಲೆ : ೨೫ ಪೈಸೆ

ಧರ್ಮಪ್ರಧಾನವಾದ ಭರತಖಂಡದಲ್ಲಿ ಪ್ರಾಚೀನ ಗ್ರಂಥಗಳಿಗೆ ಅತ್ಯಂತ ಗೌರವವನ್ನು ಸಲ್ಲಿಸಿಕೊಂಡು ಬರಲಾಗಿದೆ. ವೇದ, ಪುರಾಣ, ಆಗಮ, ರಾಮಾಯಣ, ಮಹಾಭಾರತ –ಇವೇ ಮೊದಲಾದ ಪವಿತ್ರಗ್ರಂಥಗಳನ್ನು ನಮ್ಮ ಜನ ಅನನ್ಯಭಕ್ತಿಯಿಂದ ಆರಾಧಿಸಿಕೊಂಡು ಬಂದಿದ್ದಾರೆ.

ಮುದ್ರಣಸೌಲಭ್ಯ ಮಾನವಜನಾಂಗಕ್ಕೆ ಇತ್ತೀಚೆಗೆ ದೊರೆತಿರುವ ಒಂದು ವರ. ಈ ಸೌಲಭ್ಯವಿಲ್ಲದಿದ್ದ ಕಾಲದಲ್ಲಿ ಪ್ರಾಚೀನ ಪವಿತ್ರಗ್ರಂಥಗಳನ್ನು ಕಂಠಪಾಠ ಮಾಡಿಕೊಂಡು ರಕ್ಷಿಸಿಕೊಂಡು ಬರುತ್ತಿದ್ದರು. ಇದು ಸರ್ವರಿಗೂ ಸುಲಭ ಸಾಧ್ಯವಲ್ಲದುದರಿಂದ ಕ್ರಮೇಣ ಕಲ್ಲಿನ ಮೇಲೆ, ಲೋಹದ ಮೇಲೆ, ತಾಳೆಗರಿಗಳ ಮೇಲೆ, ಭೂರ್ಜಪತ್ರದ ಮೇಲೆ ಗ್ರಂಥಗಳನ್ನು ಶಾಸನಗಳನ್ನು ಬರೆಯುತ್ತಿದ್ದರು, ಕೊರೆಯುತ್ತಿದ್ದರು. ಬಹುಕಾಲ ಇವು ನಿಲ್ಲುತ್ತವೆಂದು ಅವರು ಭಾವಿಸಿದ್ದಂತೆ ತೋರುತ್ತದೆ. ಆದರೆ ಆಧುನಿಕ ವೈಜ್ಞಾನಿಕ ಸೌಲಭ್ಯಗಳಿಲ್ಲದಿದ್ದ ಆ ಕಾಲದಲ್ಲಿ ಈ ಪ್ರಾಚೀನ ಗ್ರಂಥಗಳನ್ನು ಬಹುಕಾಲ ರಕ್ಷಿಸುವುದು ದುಸ್ತರದ ಕಾರ್ಯವಾಗುತ್ತಿತ್ತು. ಕ್ರಮೇಣ ಇವು ಹಾಳಾಗುತ್ತಾ ಬರತೊಡಗಿದವು. ಎಷ್ಟೋ ಗ್ರಂಥಗಳು ನಾಮಾವಶೇಷವೂ ಆದವು. ಇದಕ್ಕೆ ಮತ್ತೊಂದು ಕಾರಣವೆಂದರೆ ಈ ಪ್ರಾಚೀನ ಗ್ರಂಥಗಳು ಪವಿತ್ರವೂ ಪೂಜ್ಯವೂ ಆದವು ಎಂಬ ಭಾವನೆಯಿಂದ ಇವು ತಮ್ಮ ಹಿರಿಯರು ತಮಗಾಗಿ ಬಿಟ್ಟು ಹೋಗಿರುವ ಅಮೂಲ್ಯ ಆಸ್ತಿ ಎಂದೂ ಅವರು ಭಾವಿಸಿದ್ದಾರೆ. ಹೀಗಾಗಿ ವರ್ಷಕ್ಕೊಮ್ಮೆಯೋ ಇಮ್ಮೆಯೋ ಇವನ್ನು ಪೂಜಿಸಿ ತೃಪ್ತರಾಗುತ್ತಾರೆ. ಆದರೆ ಇವುಗಳ ಸಂರಕ್ಷಣೆಗೆ ಮಾತ್ರ ಗಮನ ಕೊಟ್ಟಂತಿಲ್ಲ; ಅಷ್ಟೇ ಏಕೆ ಅನೇಕರು ಅವನ್ನು ಹೊರಗೆ ತೆಗೆಯಲೂ ಅಸಮ್ಮತಿಸುತ್ತಾರೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಈ ಹಸ್ತಪ್ರತಿಗಳನ್ನು ಒಂದೆಡೆ ಕೂಡಿಸಿ ಕಾಪಾಡುವುದು ತುಂಬಾ ಕಷ್ಟಕರವಾದುದು. ಇತ್ತೀಚೆಗೆ ಸರ್ಕಾರಗಳು, ಸಂಸ್ಥೆಗಳು ಇವುಗಳ ರಕ್ಷಣೆಗೆ ವ್ಯವಸ್ಥೆಮಾಡಿವೆ. ಕೆಲವು ವಿದ್ಯಾವಂತ ಜನ ವಂಶಪಾರಂಪರ್ಯವಾಗಿ ಬಂದ ಈ ಪ್ರಾಚೀನಕೃತಿಗಳನ್ನು ಸಂಸ್ಥೆಗಳಿಗೆ ಕೊಟ್ಟು ಅವು ಬೆಳಕು ಕಾಣುವಂತೆ ಮಾಡಿದ್ದಾರೆ.

ಪ್ರಕೃತ 'ಪ್ರಾಚೀನ ಹಸ್ತಪ್ರತಿಗಳು' ಕಿರುಹೊತ್ತಿಗೆಯಲ್ಲಿ ಹಸ್ತಪ್ರತಿಗಳ ಸಂಗ್ರಹಣೆ, ಸಂರಕ್ಷಣೆಗಳನ್ನು ಕುರಿತು ಉಪಯುಕ್ತವಾಗಿ ಬರೆಯಲಾಗಿದೆ. ಅಷ್ಟೇ ಅಲ್ಲ ಈ ಹಸ್ತಪ್ರತಿಗಳ 'ಮೈಕ್ರೋ ಫಿಲ್ಮಿಂಗ್' ವಿಷಯವನ್ನೂ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿಗೆ ಸಂಬಂಧಿಸಿದ ವಿವರಗಳನ್ನೂ ನಿರೂಪಿಸಲಾಗಿದೆ. ಜೊತೆಗೆ ಗ್ರಂಥಸಂಪಾದನೆ, ಈ ಕಾರ್ಯದಲ್ಲಿ ಹಸ್ತಪ್ರತಿಗಳಿಂದ ಉಂಟಾಗುವ ಕ್ಲೇಶಗಳು, ಅವುಗಳ ಪರಿಹಾರೋಪಾಯ, ಅಧಿಕೃತ ಸಂಸ್ಕರಣದಲ್ಲಿ ಅನುಸರಿಸಬೇಕಾದ ವಿಧಾನ – ಇವೇ ಮುಂತಾದ ಎಲ್ಲ ಸಂಗತಿಗಳನ್ನು ಅರ್ಥವಾಗುವಂತೆ ತಿಳಿಸಲಾಗಿದೆ. ಇದು ಕಿರುಹೊತ್ತಿಗೆಯಾದರೂ, ಹಸ್ತಪ್ರತಿಗಳಿಗೆ ಸಂಬಂಧಿಸಿದ ಸಮಸ್ತ ವಿವರಗಳನ್ನು ಸಾಧಾರಣವಾಗಿ, ವೈಜ್ಞಾನಿಕವಾಗಿ ವಿವರಿಸಲಾಗಿದೆ. ಒಟ್ಟಿನಲ್ಲಿ ಎಲ್ಲ ದೃಷ್ಟಿಗಳಿಂದಲೂ ಇದು ತುಂಬಾ ಉಪಯುಕ್ತವಾದ ಗ್ರಂಥವಾಗಿದೆ.

■

## ಹರಿಹರೇತರಕೃತ ವಿರೂಪಾಕ್ಷಾಂಕಿತ ಶಿವಶರಣ ಸಂಪುಟ

ಸಂಪಾದಕ: ಎಚ್. ದೇವೀರಪ್ಪ, ಪ್ರಕಾಶಕರು: ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು–೫೬೦೦೫೬, ೧೯೭೩, ಪುಟಗಳು iv+೪೪೬, ಬೆಲೆ: ರೂ. ೧೫.೦೦

## ಮಹಾಕವಿ ಹಂಪೆಯ ಹರಿಹರದೇವಕೃತ ಪುರಾತನರ ರಗಳೆಗಳು

ಸಂಪಾದಕರು: ಡಾ. ಆರ್.ಸಿ. ಹಿರೇಮಠ, ಎಂ.ಎ., ಪಿಎಚ್.ಡಿ., ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೩, ೧೯೭೩, ಪುಟಗಳು Lxiv+೬೭೨, ಬೆಲೆ: ೨೦.೦೦

---

'ಶಿವಶರಣ ಸಂಪುಟ'ದಲ್ಲಿ ೧. ಅತಿಭಕ್ತರು, ೨. ಅಪ್ಪೂತಿ ಅಡಿಯರು, ೩. ಅಮ್ಮವ್ವೆ, ೪. ಅಯ್ಯಡಿಯರು, ೫. ಎಡೆಗಣೆಯರು, ೬. ಕಣಂಬುಲ್ಲ ನಂಬಿಯರು, ೭. ಕಲಿಕಂಪರು, ೮. ಕಲಿಯ ನಾಯನರ್, ೯. ಕಳಚೆಂಗ ಪೆರುಮಾಳೆ, ೧೦. ಕಾರಿನಾಯನಾರ್, ೧೧. ಕುಲಚರೆಯರು, ೧೨. ಕಳಚೆಂಗ ಚೋಳರು, ೧೩. ಕೃತಾಂತರು, ೧೪. ಕೋಲ್ಪುಲಿಯರು, ೧೫. ಗಣನಾಥದೇವರು, ೧೬. ಚಿರುತ್ತೊಣೆಯಾಂಡರು, ೧೭. ಚಿಲುಪುಲಿಯರು, ೧೮. ಚೇರಮನಾಯನಾರ್, ೧೯. ಜಡೆಯ ನಾಯನಾರೆಸ್ಯಜ್ಞಾನ ದೇವಿಯರು, ೨೦. ತಿರುನೀಲಕಂಠಪಾಣರು, ೨೧. ತಿರುಮೂಲದೇವರು, ೨೨. ತಿರುನೀಲನಕ್ಕರು, ೨೩. ತಿಲ್ಲವೇಳಂಧರರು, ೨೪. ದಂಡಿಭಕ್ತರು, ೨೫.ನಮಿನಂದಿಯರು, ೨೬. ನರಸಿಂಗ ಮೊನೆಯರು, ೨೭. ನಿಡುಮಾರದೇವರು, ೨೮. ನೈಸರು, ೨೯. ಪಗಲ್ತೊಣೆಯಾಂಡರು, ೩೦. ಪಾಂಡ್ಯಮಹಾದೇವಿಯರು, ೩೧. ಪೂಸಲಾರು, ೩೨. ಪೆರುಮಳಲೆಯ ಕುರುಂಬರು, ೩೩. ಪೊಯ್ಯಡಿಯರು, ೩೪. ಮನುಚೋಳರು, ೩೫. ಮೂರ್ಖರು, ೩೬. ಮೊನೆಯಿಡುವರು, ೩೭. ವಾಹಿಲ್ಯಭಕ್ತರು, ೩೮. ಶಕ್ತಿನಾಯನಾರ್, ೩೯. ಸಾಂಖ್ಯತೊಂಡರು, ೪೦. ಸಿರಿಯಾಳ, ೪೧. ಸೋಮಾಸಿಮಾರರು, ೪೨. ಹೇರೂರ ಹೆಂಗೂಸು ಎಂಬ ಹರಿಹರೇತರಕೃತ ವಿರೂಪಾಕ್ಷಾಂಕಿತವುಳ್ಳ ನಲವತ್ತೆರಡು ರಗಳೆಗಳು ಪ್ರಕಟವಾಗಿವೆ. ಈ ೪೨ ರಗಳೆಗಳು ಹರಿಹರಕೃತವಲ್ಲವೆಂದೂ ಆದರೆ ವಿರೂಪಾಕ್ಷ ಅಂಕಿತವುಳ್ಳುವೆಂದೂ ಈ ಸಂಪುಟದ ಸಂಪಾದಕರು ತೀರ್ಮಾನಿಸಿದ್ದಾರೆ.

'ಪುರಾತನರ ರಗಳೆಗಳು' ಗ್ರಂಥದಲ್ಲಿ ೧. ತಿರುನೀಲಕಂಠದೇವರ ರಗಳೆ, ೨. ಇಹಃಪಗೆಯಾಂಡರ ರಗಳೆ, ೩. ಇಳೆಯಾಂಡ ಗುಡಿಮಾರರ ರಗಳೆ, ೪. ಸೇದಿರಾಜನ ರಗಳೆ, ೫. ಮೆಚಿಮಿಂಡದೇವರ ರಗಳೆ, ೬. ಅಮರನೀತಿಗಳ ರಗಳೆ, ೭. ನಂಬಿಯಣ್ಣನ ರಗಳೆ, ೮. ಇಚೀಭಕ್ತಯ್ಯನ ರಗಳೆ, ೯. ಏಣಾದಿನಾಥನ ರಗಳೆ, ೧೦. ಕಣ್ಣಪ್ಪನ ರಗಳೆ, ೧೧. ಕೊಂಗುಲಿಯ ಕಲಿಯಾರರ ರಗಳೆ, ೧೨. ಮಾನಕಂಜರ ರಗಳೆ, ೧೩. ಅರಿವಾಳ್ತಾಂಡರ ರಗಳೆ, ೧೪. ಆನಾಯನಾರರ ರಗಳೆ, ೧೫. ಒಲಘಾಂಡಮೂರ್ತಿಗಳ ರಗಳೆ, ೧೬. ನಮಃಶಿವಾಯ ಮುರುಘರ ರಗಳೆ, ೧೭. ರುದ್ರಪಶುಪತಿಗಳ ರಗಳೆ, ೧೮. ತಿರುನಾಳ್ಪೋವರ ರಗಳೆ, ೧೯. ತಿರುಕುಜುಂಪೆ ತೊಂಡರ ರಗಳೆ, ೨೦. ತಂಡೇಶ ಪಿಳ್ಳೆಯರ ರಗಳೆ, ೨೧. ವಾಗೀಶ್ವರದೇವರ ರಗಳೆ, ೨೨. ಕುಲಚ್ಚೆಜೆಯರ ರಗಳೆ, ೨೩. ಕಾರಿಕಾಲಮ್ಮೆಯರ ರಗಳೆ, ೨೪. ಕಲಿಕಾಮದೇವರ ರಗಳೆ, ೨೫. ದಂಡೀಶಭಕ್ತರ ರಗಳೆ, ೨೬. ಸೋಮಾಸಿಮಾರರ ರಗಳೆ, ೨೭. ಚಿಜುತೊಣೆಯಾಂಡರ ರಗಳೆ, ೨೮. ನರಸಿಂಗ ಮೊನೆಯರ ರಗಳೆ, ೨೯. ಅತಿಭಕ್ತರ ರಗಳೆ, ೩೦. ಕಲಿಕಂಪರ ರಗಳೆ, ೩೧. ಕಲಿನಾಯನಾರರ ರಗಳೆ, ೩೨. ಅಯ್ಯಡಿಯರ ರಗಳೆ, ೩೩. ಕಣಂಬುಲ್ಲರ ರಗಳೆ, ೩೪. ಕಡವೂರಕಾರಿಯರ

ರಗಳೆ, ೩೫. ವಾಹಿಲ್ಯರ ರಗಳೆ, ೩೬. ಮೊನೆಯಿಡುವರ ರಗಳೆ, ೩೭. ಎಡೆಗಳೆಯರ ರಗಳೆ, ೩೮. ಪಗಲ್ತೊಣೆಯಾಂಡರ ರಗಳೆ, ೩೯. ಕೊಲ್ಲುಲಿಯಾಂಡರ ರಗಳೆ, ೪೦. ಪೂಶಲಾರ ರಗಳೆ, ೪೧. ಪಾಂಡ್ಯಮಹಾದೇವಿಯರ ರಗಳೆ, ೪೨. ಕಳಚಂಗ ಪೆರುಮಾಳೆಯರ ರಗಳೆ, ೪೩. ನೇಶನ್ನೈನಾರರ ರಗಳೆ, ೪೪. ಕಳಚೆಂಗಚೋಳನ ರಗಳೆ, ೪೫. ಗಣನಾಥನ ರಗಳೆ, ೪೬. ಸಾಂಖ್ಯತೊಂಡರ ರಗಳೆ, ೪೭. ಜಡೆಯನಾಯನ್ನಾರುಯಸ್ಯ ಜ್ಞಾನದೇವಿಯ ರಗಳೆ, ೪೮. ತಿರುನೀಲಕಂಠ ಪಾಣರ ರಗಳೆ -ಎಂಬ ಹರಿಹರಕೃತವೆಂದು ಸಂಪಾದಕರು ನಿರ್ಧರಿಸಿರುವ ನಲವತ್ತೆಂಟು ರಗಳೆಗಳಿವೆ.

ಡಾ. ಹಿರೇಮಲ್ಲೂರು ಈಶ್ವರನ್ ಅವರು ಹರಿಹರನ ಕೃತಿಗಳು (ಒಂದು ಸಂಖ್ಯಾನಿರ್ಣಯ) ಎಂಬ ತಮ್ಮ ಪಿ.ಎಚ್‌ಡಿ ನಿಬಂಧದಲ್ಲಿ ಹರಿಹರನ ರಗಳೆಗಳು ಒಂದುನೂರಾಆರು ಎಂದು ತೀರ್ಮಾನಿಸಿದ್ದಾರೆ.

ಹರಿಹರನ ರಗಳೆಗಳ ಸಂಖ್ಯಾನಿರ್ಣಯದ ಬಗೆಗೆ ಒಮ್ಮತವಿಲ್ಲವೆಂಬುದು ಸ್ಪಷ್ಟವಾಗಿದೆ. ಹರಿಹರನ ರಗಳೆಗಳನ್ನು ಮುಖ್ಯವಾಗಿ ಮೂರುಭಾಗವಾಗಿ ವಿಂಗಡಿಸಬಹುದು. ೧. ಪುರಾತನರ ರಗಳೆಗಳು, ೨. ನೂತನರ ರಗಳೆಗಳು, ೩. ಸಂಕೀರ್ಣ ರಗಳೆಗಳು. ವ್ಯಕ್ತಿನಿಷ್ಠವಾದ ಪುರಾತನರ ಮತ್ತು ನೂತನರ ರಗಳೆಗಳ ಚೌಕಟ್ಟೆಲ್ಲಾ ಒಂದೇ ತೆರನಾಗಿದೆ. ಸಂಕೀರ್ಣರಗಳೆಗಳಲ್ಲಿ ಕೆಲವು ಹರಿಹರನ ಆತ್ಮನಿವೇದನವನ್ನು ಸಾರುವಂತಿವೆ. ಇನ್ನೂ ಕೆಲವು ಆತನ ಭಕ್ತಿಯ ಆಧಿಕ್ಯವನ್ನು ನಿರೂಪಿಸುವಂತಿವೆ. ಉಳಿದ ಕೆಲವು ರಗಳೆಗಳು ಆತನ ಸಾಂಸಾರಿಕ ಜೀವನವನ್ನೊ, ಲೌಕಿಕ ಜೀವನವನ್ನೊ ಚಿತ್ರಿಸುವಂತಿವೆ.

ಹರಿಹರನ ರಗಳೆಗಳನ್ನೂ, ಕೃತಿಗಳನ್ನೂ ಆಳವಾಗಿ ಅಭ್ಯಾಸ ಮಾಡಿರುವ ಶ್ರೀ ಎಚ್. ದೇವೀರಪ್ಪನವರು ಶರಣ ಚರಿತಮಾನಸ ಮತ್ತು ಶಿವಶರಣ ಸಂಪುಟ ಇವುಗಳಲ್ಲಿ ಒಟ್ಟು ೬೬ ರಗಳೆಗಳನ್ನು ಅಚ್ಚುಕಟ್ಟಾಗಿ ಸಂಪಾದಿಸಿ ಪ್ರಕಟಿಸಿದ್ದಾರೆ. ಪ್ರಕೃತ ಶಿವಶರಣ ಸಂಪುಟದಲ್ಲಿರುವ ೩೨ ರಗಳೆಗಳನ್ನು ೫ ತಾಳೆಯೋಲೆಯ ಪ್ರತಿಗಳ ಆಧಾರದಿಂದ ಸಶಾಸ್ತ್ರೀಯವಾಗಿ ಸಂಪಾದಿಸಿದ್ದಾರೆ. ಸುಮಾರು ೧೩೦ ಪುಟಗಳ ಸವಿಸ್ತಾರವಾದ ಪೀಠಿಕೆಯಲ್ಲಿ ಹರಿಹರನ ಕಾಲ ದೇಶ ವರ್ತಮಾನಗಳನ್ನು ತಿಳಿಸಿದ್ದಾರೆ. ಈವರೆಗೆ ಹರಿಹರನ ಮೇಲೆ ಉಪಲಬ್ಧವಾಗಿರುವ ಸಾಹಿತ್ಯವನ್ನೆಲ್ಲಾ ಬಳಸಿಕೊಂಡಿದ್ದಾರೆ. ಕಥಾಸಾರ ಮತ್ತು ವಿಮರ್ಶೆ ಪೀಠಿಕೆಯ ಬಹುಭಾಗವನ್ನು ಆಕ್ರಮಿಸಿಕೊಂಡಿದೆ. ಜೊತೆಗೆ ಅರುವತ್ತುಮೂವರನ್ನು ಕುರಿತು ವಿಚಾರಪೂರ್ಣವಾದ ವಿವೇಚನೆಯನ್ನು ಮಾಡಿದ್ದಾರೆ. ಗ್ರಂಥದ ಕೊನೆಯಲ್ಲಿ ಕೊಟ್ಟಿರುವ ಅನುಬಂಧಗಳು ವಿದ್ವಾಂಸರಿಗೆ ತುಂಬ ಉಪಯುಕ್ತವಾಗಿವೆ.

ಹರಿಹರನ ರಗಳೆಗಳು ಯಾವುವು ಎಂಬುದನ್ನು ಕಂಡುಹಿಡಿಯುವುದಕ್ಕೆ ೧೮ ಲಕ್ಷಣಗಳನ್ನು ಅವರು ಸೂಚಿಸಿದ್ದಾರೆ. ಹರಿಹರ ವಿರಚಿತವಲ್ಲದ ರಗಳೆಗಳನ್ನು ಕಂಡುಹಿಡಿಯುವುದಕ್ಕೆ ೭ ಲಕ್ಷಣಗಳನ್ನು ಕೊಟ್ಟಿದ್ದಾರೆ. ಈ ಲಕ್ಷಣಗಳನ್ನು ಕರಾರುವಾಕ್ಕಾಗಿ ಅನುಸರಿಸಿ ಪ್ರಕೃತ ಶಿವಶರಣಸಂಪುಟದಲ್ಲಿರುವ ೪೨ ರಗಳೆಗಳೂ ಹರಿಹರೇತರಕೃತ ಎಂದು ತೀರ್ಮಾನಿಸಿದ್ದಾರೆ. ಈ ರಗಳೆಗಳು ಹೇಗೆ ಸೃಷ್ಟಿಯಾಗಿ ಮೂಲರಗಳೆಗಳೊಂದಿಗೆ ಸೇರ್ಪಡೆಯಾಗುತ್ತವೆ ಎಂಬುದನ್ನು ಕೃತಿಕರ್ತರು ಮತ್ತು ಕಾಲ ಎಂಬ ವಿಭಾಗದಲ್ಲಿ ತರ್ಕೈಸಿದ್ದಾರೆ. ಒಟ್ಟಿನಲ್ಲಿ ಹರಿಹರನ ರಗಳೆಗಳ ಸಂಪಾದನೆಗೆ ಸಂಸ್ಕರಣಕ್ಕೆ ಪ್ರಕಟನೆಗೆ ಶ್ರೀ ದೇವೀರಪ್ಪನವರು ವಹಿಸಿರುವ ಶ್ರದ್ಧೆ, ನಿಷ್ಠೆ, ತಾಳ್ಮೆ ಮೆಚ್ಚುವಂತಹುವು. ಈ ಸಂಬಂಧವಾಗಿ ಅವರು ದೀರ್ಘಕಾಲ ನಡೆಸಿರುವ ವ್ಯಾಸಂಗವು ಉಪಯುಕ್ತವಷ್ಟೇ ಅಲ್ಲದೆ ಸಫಲವೂ ಆಗಿದೆ.

ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ವಿಭಾಗವು ವೀರಶೈವ ಸಾಹಿತ್ಯ ಸಂಸ್ಕೃತಿಗಳ ಪ್ರಕಟನೆಗೆ ಮಹತ್ತರವಾದ ಸೇವೆಯನ್ನು ಸಲ್ಲಿಸುತ್ತಿರುವುದು ಸರ್ವವೇದ್ಯವಾದುದು. ವಚನಸಾಹಿತ್ಯ ವಿಭಾಗದಿಂದ ವಚನಕಾರರ ವಚನಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸಲಾಗುತ್ತಿದೆ. ಪ್ರಕೃತ ಮಹಾಕವಿ ಹಂಪೆಯ ಹರಿಹರದೇವಕೃತ ಪುರಾತನರ ರಗಳೆಗಳು ಕನ್ನಡ ಅಧ್ಯಯನ ಪೀಠದ ಮತ್ತೊಂದು ಮಹತ್ಕೃತಿ. ಪ್ರಸ್ತಾವನೆಯಲ್ಲಿ ಹರಿಹರನ ಬಗೆಗೆ ಹಲವಾರು ಪ್ರಮುಖ ವಿಷಯಗಳನ್ನು ಪ್ರಸ್ತಾಪಿಸಲಾಗಿದೆ. ಹರಿಹರಕೃತ ರಗಳೆಗಳು ಎಂಬ ಅಧ್ಯಾಯದಲ್ಲಿ ಹರಿಹರಕೃತ ರಗಳೆಗಳಾವುವು? ಭಿನ್ನರಗಳೆಗಳಾವುವು? ಎಂಬ ಸಮಸ್ಯೆಯನ್ನು ಕೂಲಂಕಷವಾಗಿ ಚರ್ಚಿಸಿದ್ದಾರೆ. ಹರಿಹರನ ರಗಳೆಗಳನ್ನು ಕಂಡುಹಿಡಿಯಬೇಕಾದರೆ ಯಾವ ಯಾವ ನಿಯಮಗಳನ್ನು ಅನ್ವಯಿಸಬೇಕು ಎಂದು ಶ್ರೀ ದೇವೀರಪ್ಪನವರು ಸೂಚಿಸಿದ್ದಾರೋ ಅವನ್ನು ಸಕಾರಣವಾಗಿ ವಿವೇಚಿಸಿದ್ದಾರೆ. ರಗಳೆಯ ಆದ್ಯಂತ ಕಂದಪದ್ಯಗಳಲ್ಲಿ 'ಹಂಪೆಯ ವಿರೂಪಾಕ್ಷ', 'ಹಂಪೆಯ

ದೇವ', 'ಹಂಪೆಯ ರಾಯ', 'ಹಂಪೆಯಾಳ್ದ' ಮುಂತಾದ ಅಂಕಿತಗಳು ಇರಬೇಕೆಂಬುದನ್ನು ಸಾಮಾನ್ಯವಾಗಿ ಎಲ್ಲ ವಿಮರ್ಶಕ ಸಂಶೋಧಕರೂ ಒಪ್ಪಿದ ಮಾತು. ಆದಿಯ ಪದ್ಯದಲ್ಲಿ ಆ ರಗಳೆಗೆ ಸಂಬಂಧಪಟ್ಟ ಶರಣನ ಭಕ್ತಿಯ ವಿಶಿಷ್ಟ ಸ್ವರೂಪವನ್ನು ಸೂಚಿಸಿಯೂ ಸೂಚಿಸದೆಯೂ ಆತನನ್ನು ಪಂಪಾವಿರೂಪಾಕ್ಷ ಮೆರೆದನು. ಇಲ್ಲವೆ 'ಆತನ ಕಥೆಯನ್ನು ಅವಧರಿಸು ವಿರೂಪಾಕ್ಷ' ಎಂಬ ಉಲ್ಲೇಖಗಳು ಇರಬೇಕೆಂಬ ನಿಯಮ ತೀರಾ ಶಿಥಿಲವಾಗಿದೆ. ಯಾರಾದರೂ ರಗಳೆಯನ್ನು ಬರೆದು ಆದ್ಯಂತಗಳಲ್ಲಿ ಹೀಗೆ ವಿವರಿಸಬಹುದು., ಅಲ್ಲದೆ ಹರಿಹರನು ಪುರಾತನರಿಗೆ ಮತ್ತು ನೂತನ ಪುರಾತನರಿಗೆ ಸಂಬಂಧಪಡದ 'ಲಿಂಗಾರ್ಚನೆ', 'ಪುಷ್ಪ' ಇತ್ಯಾದಿ ರಗಳೆಗಳನ್ನೂ ಬರೆದಿರುವನು. ಹರಿಹರನ ರಗಳೆಗಳ ಸಾಮಾನ್ಯ ಲಕ್ಷಣಗಳನ್ನು ವಿವರಿಸುವಾಗ ಈ ರಗಳೆಗಳನ್ನು ಗಣನೆಗೆ ತೆಗೆದುಕೊಳ್ಳುವುದು ಲೇಸು. ಹಾಗಿಲ್ಲದೆ ವಿವರಿಸಿದ ಲಕ್ಷಣಗಳು ಸಾರ್ವತ್ರಿಕವೆನಿಸವು. ಮೂರನೆಯ ಲಕ್ಷಣವೂ ಇದೇ ಬಗೆಯಾಗಿದೆ. ನಾಲ್ಕನೆಯ ಮತ್ತು ಐದನೆಯ ಲಕ್ಷಣಗಳು ಇನ್ನೂ ಶಿಥಿಲವಾಗಿವೆ. ಲಲಿತರಗಳೆಯಾದರೆ ರಗಳೆಯ ಕೊನೆಯ ೪ ಪದಗಳನ್ನು 'ಒಪ್ಪಿದಂ' ಎಂಬ ಶಬ್ದದಿಂದ, ಮಂದಾನಿಲ ರಗಳೆಯಾದರೆ 'ಒಪ್ಪಿರ್ದಂ' ಎಂಬ ಶಬ್ದದಿಂದ, ಉತ್ಸಾಹ ರಗಳೆಯಾಗಿದ್ದರೆ 'ಒಪ್ಪುತಿರ್ದನಲ್ಲಿ' ಎಂಬ ಶಬ್ದದಿಂದ ಮುಕ್ತಾಯಗೊಳ್ಳುವುದೆಂದು ಹೇಳಿದ ಮಾತು ಅವರು ಈಗ ನೋಡಿದ ರಗಳೆಗಳಿಗೆ ಅನ್ವಯಿಸುವಂತಿದ್ದರೂ ಸರ್ವತಂತ್ರ ಸ್ವತಂತ್ರವಾಗಿ ಭೋರ್ಗರೆವ ಪ್ರತಿಭೆಯಿಂದ ಕಾವ್ಯ ಬರೆಯುವ ಹರಿಹರನ ರಗಳೆಗಳನ್ನು ಈ ಬಗೆಯ ಚೌಕಟ್ಟಿನ ಬಂಧನದಲ್ಲಿರಿಸುವುದು ಸೂಕ್ತವೆನಿಸದು. ಹೀಗೆ ಶ್ರೀಯುತ ದೇವೀರಪ್ಪನವರು ಹರಿಹರನಲ್ಲವೆಂದು ನಿರ್ಣಯಿಸಿದ ೩೯ ರಗಳೆಗಳಲ್ಲಿ ಕೆಲವನ್ನಾಯ್ದು ಆಂತರಿಕಸತ್ವ, ಕಾವ್ಯಶಕ್ತಿ, ದರ್ಶನ, ಪ್ರಯೋಗಗಳ ದೃಷ್ಟಿಯಿಂದ ಹರಿಹರನವೆಂದು ನಿರ್ಧರಿಸಲಾಗಿದೆ. ಪುರಾತನ ರಗಳೆಗಳಲ್ಲಿ ಹರಿಹರನೆಂದು ನಿಷ್ಕರ್ಷಿಸಲು ಎರಡು ಮಹತ್ವದ ಬಾಹ್ಯಪ್ರಮಾಣಗಳಿವೆ. ಒಂದು ಸುರಂಗಕವಿಯ ತ್ರಿಷಷ್ಠಿ ಪುರಾತನರ ಚಾರಿತ್ರ್ಯ. ಇನ್ನೊಂದು: ವೀರಭದ್ರಕವಿಯ ೬೩ ಪುರಾತನರ ಕಾವ್ಯ.

ಈ ಹೋಲಿಕೆಯಿಂದ ಸುರಂಗನಿಗೆ ಹರಿಹರನ ರಗಳೆಗಳ ಸಂಪೂರ್ಣ ಪರಿಚಯವಿದ್ದಿತೆಂದೂ ಆ ರಗಳೆಗಳ ಪ್ರಭಾವಮುದ್ರೆ ಸುರಂಗನ ಕಾವ್ಯದಲ್ಲಿ ಕಂಡುಬರುತ್ತದೆಂದೂ ಖಚಿತವಾಗುತ್ತದೆ. ಕಥಾಸರಣಿಯಲ್ಲಷ್ಟೇ ಅಲ್ಲ, ಭಾವ, ಕಲ್ಪನೆ, ವಿಚಾರ, ಶಬ್ದ, ವಾಕ್ಯವೃಂದಗಳಲ್ಲಿಯೂ ವಿಶೇಷವಾದ ಪ್ರಭಾವವನ್ನು ಕಾಣಬಹುದೆಂಬುದನ್ನು ೧೭ ರಗಳೆಗಳ ಹೋಲಿಕೆಯಿಂದ ಅರಿತುಕೊಳ್ಳಬಹುದಾಗಿದೆ. ಈ ಹೋಲಿಕೆಯನ್ನು ಮಿಕ್ಕ ೪೬ ರಗಳೆಗಳಿಗೂ ಅನ್ವಯಿಸಿ ಹರಿಹರದೇವನು ೬೩ ಪುರಾತನರ ರಗಳೆಗಳನ್ನು ಬರೆದಿದ್ದನೆಂದು ನಿರ್ಣಯಿಸಬಹುದಾಗಿದೆ ಎಂದು ಹೇಳಿರುವುದನ್ನು ನಾವು ಸಂಪೂರ್ಣವಾಗಿ ಅನುಮೋದಿಸುತ್ತೇವೆ.

ಹರಿಹರ ಕನ್ನಡ ಸಾಹಿತ್ಯದ ಶ್ರೇಷ್ಠ ಕವಿ, ಭಕ್ತಕವಿ, ಕ್ರಾಂತಿಕಾರಕ ಕವಿ. ಪರಮಶಿವಭಕ್ತನೂ ಶೈವಸಾರೋದ್ಧಾರಕನೂ ಆದ ಈತನ ಹೆಸರು ಹಲವಾರು ದೃಷ್ಟಿಗಳಿಂದ ಸಾಹಿತ್ಯ ಚರಿತ್ರೆಯಲ್ಲಿ ಚಿರಂತನವಾಗಿ ಉಳಿಯತಕ್ಕದ್ದಾಗಿದೆ. ಸಮಕಾಲೀನರ ಮೇಲೆ ಬರೆದ ಕೃತಿಗಳು ಜೀವನ ಚರಿತ್ರೆಗಳನ್ನು ಕುರಿತ ಕೃತಿಗಳು ಹರಿಹರನ ವಿಶಿಷ್ಟ ಕೊಡುಗೆಗಳು. ಲಲಿತ ಉತ್ಸಾಹ ಮಂದಾನಿಲರಗಳೆಗಳಲ್ಲಿ ಸಮಗ್ರಕೃತಿಗಳನ್ನು ಮೊದಲಬಾರಿಗೆ ರಚಿಸಿದ ಶ್ರೇಯಸ್ಸು ಹರಿಹರನದು.

ಹರಿಹರನ ರಗಳೆಗಳಲ್ಲಿ ಸುಮಾರು ೪೫ ರಗಳೆಗಳನ್ನು ಮೊದಲಬಾರಿಗೆ ಪ್ರಕಟಿಸಿದವರು ಲಿಂ॥ ಡಾ. ಫ.ಗು. ಹಳಕಟ್ಟಿ ಅವರು. ಅದಾದ ಮೇಲೆ ಚೆನ್ನಮಲ್ಲಿಕಾರ್ಜುನ, ಟಿ.ಎಸ್. ವೆಂಕಣ್ಣಯ್ಯ, ತೀ.ನಂ. ಶ್ರೀಕಂಠಯ್ಯ ಇವರೇ ಮೊದಲಾದವರು ಹರಿಹರನ ಕೆಲವು ರಗಳೆಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಹರಿಹರನ ರಗಳೆಗಳನ್ನು ಸಮಗ್ರವಾಗಿ ಸಂಪಾದಿಸುವುದಕ್ಕೆ ಕೈಹಾಕಿದವರಲ್ಲಿ ಶ್ರೀ ದೇವೀರಪ್ಪನವರೇ ಮೊದಲಿಗರು. ಕರ್ನಾಟಕ ವಿಶ್ವವಿದ್ಯಾಲಯದವರೂ ಇದೇ ಕೆಲಸಕ್ಕೆ ತೊಡಗಿದ್ದಾರೆ. ಒಂದೇ ಕೆಲಸವನ್ನು ಎರಡೂ ವಿಶ್ವವಿದ್ಯಾಲಯಗಳು ಮಾಡುವುದಕ್ಕೆ ಬದಲು ಹರಿಹರನ ಇನ್ನುಳಿದ ರಗಳೆಗಳನ್ನು ಹೊರತಂದಿದ್ದರೆ ಉಪಕಾರವಾಗುತ್ತಿತ್ತು. ಆದರೆ ವಿಭಿನ್ನ ದೃಷ್ಟಿಕೋನಗಳಿಂದ ಕೂಡಿದ ಪ್ರಸ್ತಾವನೆಯನ್ನು ಹೊತ್ತು ಹೊರಬಂದಿರುವ ಶ್ರೀ ಎಚ್. ದೇವೀರಪ್ಪನವರ 'ಶಿವಶರಣ ಸಂಪುಟ'ವನ್ನೂ, 'ಮಹಾಕವಿ ಹಂಪೆಯ ಹರಿಹರದೇವಕೃತ ಪುರಾತನರ ರಗಳೆಗಳು' ಈ ಕೃತಿಯನ್ನು ಕನ್ನಡಿಗರು ಅಭಿಮಾನದಿಂದ ಸ್ವಾಗತಿಸಬೇಕಾಗಿದೆ.

■

## ಜೈಮಿನಿ ಭಾರತ (ಅಶ್ವಮೇಧಿಕ ಪರ್ವ)

ಅನುವಾದಕರು: ಕಡಬದ ನಂಜುಂಡಶಾಸ್ತ್ರಿಗಳು, ಎನ್. ರಂಗನಾಥಶರ್ಮ, ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೧೮, ಮೊದಲನೆಯ ಮುದ್ರಣ ೧೯೭೩, ಪುಟ ೨೧+೪೫೧, ಬೆಲೆ: ರೂ. ೬.೦೦

---

**ಸಂ**ಸ್ಕೃತ ಜೈಮಿನಿ ಭಾರತದ ಕನ್ನಡ ಅನುವಾದವಾದ ಈ ಕೃತಿ ಮೊದಲ ಬಾರಿಗೆ ಗ್ರಂಥರೂಪದಲ್ಲಿ ಹೊರಬರುತ್ತಿದೆ. ಸಂಸ್ಕೃತ ಜೈಮಿನಿ ಭಾರತದ ಅನುವಾದ ಇತರ ಭಾಷೆಗಳಲ್ಲಿಯೂ ಆಗಿದೆ. ಕನ್ನಡದಲ್ಲಿ ಲಕ್ಷ್ಮೀಶನ ಜೈಮಿನಿ ಭಾರತ ತುಂಬಾ ಪ್ರಚಲಿತವಾಗಿದೆ. ಈ ಲಕ್ಷ್ಮೀಶನ ಜೈಮಿನಿ ಭಾರತದ ಗದ್ಯಾನುವಾದವೂ ಈ ಹಿಂದೆಯೇ ಅಚ್ಚಾಗಿದೆ. ಇದನ್ನೆಲ್ಲ ಪರಿಶೀಲಿಸಿದರೆ ಈ ಪ್ರಾಚೀನ ಕಾವ್ಯಗಳು ನಮ್ಮ ದೇಶಭಾಷೆಗಳಲ್ಲಿ ಅನುವಾದಗೊಂಡು ಇಂದಿಗೂ ಪಾರಾಯಣಗೊಳ್ಳುತ್ತಿವೆ. ಇದು ಜನರ ಧಾರ್ಮಿಕ ಮನೋಭಾವನೆಗೆ ಒಂದು ಜೀವಂತ ನಿದರ್ಶನವೆನ್ನಬಹುದು.

ಸಂಸ್ಕೃತದಲ್ಲಿ ಜೈಮಿನಿ ಭಾರತಗಳೆಷ್ಟು? ಅವುಗಳ ಕರ್ತೃಗಳಾರು? ಎಂಬುದು ಸದ್ಯದಲ್ಲಿ ಅಪ್ರಕೃತ. ವ್ಯಾಸಮುನಿಗಳ ಶಿಷ್ಯರಲ್ಲೊಬ್ಬರಾದ ಜೈಮಿನಿಗಳಿಂದ ರಚಿತವಾದ ಮಹಾಭಾರತದ ಅಶ್ವಮೇಧಿಕಪರ್ವ ಮಾತ್ರ ಇಂದು ಉಪಲಬ್ಧವಾಗಿದೆ. ಅದರ ಕನ್ನಡ ಅನುವಾದವೇ ಪ್ರಕೃತ ಗ್ರಂಥ. ಪ್ರಾಚೀನ ಸಂಸ್ಕೃತ ಗ್ರಂಥಗಳು ಬಹುಕಷ್ಟವೂ ಕ್ಲಿಷ್ಟವೂ ಆಗಿರುವುದರಿಂದ ಜನಸಾಮಾನ್ಯಕ್ಕೆ ಅವು ಸುಲಭಗಮ್ಯವಾಗಿಲ್ಲ. ಅಷ್ಟೋ ಇಷ್ಟೋ ಸಂಸ್ಕೃತ ಬಲ್ಲವರಿಗೂ ಕೂಡ ಅವು ಕಠಿಣವೆನಿಸುತ್ತಿವೆ. ಈ ದೃಷ್ಟಿಯಿಂದ ಪ್ರಾಚೀನ ಕಾವ್ಯಗಳ ಅನುವಾದ ಇಂದು ಅಗತ್ಯವಷ್ಟೇ ಅಲ್ಲ ಅನಿವಾರ್ಯವೂ ಆಗಿದೆ. ಈ ಅನುವಾದ ಕಾರ್ಯಕ್ಕೆ ಕನ್ನಡ ಸಂಸ್ಕೃತ ಎರಡೂ ಭಾಷೆಗಳಲ್ಲಿ ಅಪಾರವಾದ ಪಾಂಡಿತ್ಯ ಪರಿಶ್ರಮ ಅತ್ಯವಶ್ಯಕ.

ಪ್ರಕೃತ ಜೈಮಿನಿಭಾರತದ ಅನುವಾದಕರಲ್ಲೊಬ್ಬರಾದ ಕೀರ್ತಿಶೇಷ ಕಡಬದ ನಂಜುಂಡಶಾಸ್ತ್ರಿಗಳು ಉಭಯಭಾಷಾವಿದ್ವಾಂಸರು. ಈ ಜೈಮಿನಿ ಭಾರತದ ಅನುವಾದ ಕಾರ್ಯವನ್ನು ಮೂಲತಃ ಕೈಕೊಂಡಿದ್ದವರೂ ಅವರೇ. ಅವರು ಪೂರೈಸಲಾಗದೆ ಉಳಿದ ಭಾಗವನ್ನು ಅದೇ ವಿದ್ವತ್ಪರಂಪರೆಯಲ್ಲಿ ಬಂದಿರುವ ಶ್ರೀಮಾನ್ ರಂಗನಾಥಶರ್ಮರು ಮಾಡಿ ಮುಗಿಸಿದ್ದಾರೆ. ಈ ಅನುವಾದ ಸರಳವೂ ಸುಲಭವೂ ಹೃದಯಂಗಮವೂ ಆಗಿದೆ.

ಮುಮ್ಮಡಿ ಕೃಷ್ಣರಾಜ, ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿ, ವಿದ್ವಾನ್ ಪಿ.ಆರ್. ಕರಿಬಸವಶಾಸ್ತ್ರಿ -ಇವರೇ ಮೊದಲಾದವರು ಸಂಸ್ಕೃತ ಕನ್ನಡ ಜೈಮಿನಿ ಭಾರತಗಳಿಗೆ ಟೀಕೆ ಟಿಪ್ಪಣಿಗಳನ್ನು ಬರೆದಿದ್ದಾರೆ. ಈಗ ಪ್ರಕಟವಾಗುತ್ತಿರುವ ಗ್ರಂಥದ ಜೊತೆಗೆ ಈ ಉಳಿದ ಗ್ರಂಥಗಳೂ ಸಿಕ್ಕುವಂತಾದರೆ ಜೈಮಿನಿ ಭಾರತದ ಒಂದು ತುಲನಾತ್ಮಕ ಅಭ್ಯಾಸಕ್ಕೆ ಹೆಚ್ಚು ಸಹಾಯಕವಾಗುತ್ತದೆ. ಕನ್ನಡ ಸಾಹಿತ್ಯ ಪರಿಷತ್ತು ಈ ತೆರನ ಕೆಲಸವನ್ನು ಕೈಕೊಳ್ಳಬೇಕು. ಒಟ್ಟಿನಲ್ಲಿ ಈವರೆಗೆ ಅನುಪಲಬ್ಧವಾಗಿದ್ದ ಸಂಸ್ಕೃತ ಜೈಮಿನಿ ಭಾರತದ ಕನ್ನಡ ಅನುವಾದ ಕನ್ನಡಿಗರಿಗೆ ಒದಗುವಂತಾದುದು ಸಂತೋಷದ ಸಂಗತಿ ಎಂದು ಹೇಳಬೇಕಾಗಿದೆ. ■

# ‘ಕವಿರಾಜಮಾರ್ಗ’ ಪರಿಸರದ ಕನ್ನಡ ಸಾಹಿತ್ಯ

ಲೇಖಕರು: ಎಂ.ಎಂ. ಕಲಬುರ್ಗಿ, ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೭೩; ಪುಟಗಳು xvi+೩೨೭, ಬೆಲೆ: ರೂ. ೧೫

---

**ಕ**ರ್ನಾಟಕ ವಿಶ್ವವಿದ್ಯಾಲಯಕ್ಕೆ ಶ್ರೀ ಎಂ.ಎಂ. ಕಲಬುರ್ಗಿ ಅವರು ಸಾದರಪಡಿಸಿದ ಪಿಎಚ್.ಡಿ ನಿಬಂಧ ಈ ಗ್ರಂಥ. ಸಂಶೋಧನ ಲೇಖನಗಳಿಂದಲೂ ಶಾಸ್ತ್ರೀಯ ಗ್ರಂಥಗಳಿಂದಲೂ ಶ್ರೀಯುತರು ಕನ್ನಡ ವಿದ್ವತ್‌ಲೋಕಕ್ಕೆ ಚಿರಪರಿಚಿತರಾಗಿದ್ದಾರೆ. ಕೆಲವಾರು ವರ್ಷಗಳ ಪರಿಶ್ರಮದಿಂದ ಸಿದ್ಧಪಡಿಸಿರುವ ಈ ಕೃತಿ ಶ್ರೀಯುತರಿಗೆ ಡಾಕ್ಟರೇಟ್ ಪದವಿಯನ್ನು ಜೊತೆಗೆ ಶ್ರೇಯಸ್ಸನ್ನೂ ತಂದುಕೊಟ್ಟಿದೆ.

ಈ ಗ್ರಂಥದಲ್ಲಿ ಆರು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶವನ್ನು ವಿವರಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಕವಿರಾಜಮಾರ್ಗ ಪರಿಚಯ, ಕವಿರಾಜಮಾರ್ಗದ ಕರ್ತೃ, ಪದ್ಯಕವಿಗಳು –ಈ ವಿಷಯವನ್ನೂ ಮೂರನೆಯ ಅಧ್ಯಾಯದಲ್ಲಿ ಶಾಸನ ಸಾಹಿತ್ಯ, ಶಾಸನ ಕವಿಗಳನ್ನೂ ಕುರಿತ ವಿಷಯವನ್ನೂ ಪ್ರತಿಪಾದಿಸಿದ್ದಾರೆ. ನಾಲ್ಕನೆಯ ಅಧ್ಯಾಯದಲ್ಲಿ ಪ್ರಮುಖ ಕವಿಗಳನ್ನೂ, ಐದನೆಯ ಅಧ್ಯಾಯದಲ್ಲಿ ಇತರ ಕಾವ್ಯಗಳು, ಇತರ ಕವಿಗಳು, ಇತರ ಸಾಹಿತ್ಯ ಪ್ರಕಾರಗಳು, ಇತರ ಲಕ್ಷಣ ಗ್ರಂಥಗಳು –ಮುಂತಾದ ಸಂಗತಿಗಳನ್ನೂ ಪ್ರಸ್ತಾಪಿಸಿ ಆರನೆಯ ಅಧ್ಯಾಯದಲ್ಲಿ ಸಮೀಕ್ಷೆ ಮಾಡಿದ್ದಾರೆ.

ಕನ್ನಡದಲ್ಲಿ ಸಾಹಿತ್ಯ ರಚನೆ ಕ್ರಿ.ಶ. ೪೫೦ರಲ್ಲೇ ಆರಂಭವಾದುದಕ್ಕೆ ಶಾಸನಾಧಾರಗಳಿವೆ. ಕವಿರಾಜಮಾರ್ಗದ ಹಿಂದಿನ ಕೆಲವಾರು ಶಾಸನಗಳು ಸಿಕ್ಕಿವೆ. ಆದರೆ ಕಾವ್ಯ ಯಾವುದೂ ಸಿಕ್ಕಿಲ್ಲ. ಕವಿರಾಜಮಾರ್ಗ ಲಕ್ಷಣ ಗ್ರಂಥವಾದುದರಿಂದ ಅದರಲ್ಲಿ ಲಕ್ಷ್ಯವಾಗಿ ಕೊಟ್ಟಿರುವ ಪದ್ಯಗಳಿಂದ ಅದಕ್ಕಿಂತ ಹಿಂದೆ ಕಾವ್ಯಗಳಿದ್ದುವೆಂಬುದು ಸುಸ್ಪಷ್ಟ ಕವಿರಾಜಮಾರ್ಗಕಾರನೇ ತನಗಿಂತ ಹಿಂದಿನ ಗದ್ಯ ಪದ್ಯ ಕಾವ್ಯಗಳ ಕರ್ತೃಗಳನ್ನು ಹೆಸರಿಸಿದ್ದಾನೆ. ಆದರೆ ಇಲ್ಲಿಯವರೆಗೆ ಈ ಪ್ರಾಚೀನ ಕವಿಗಳ ಯಾವೊಂದೂ ಕೃತಿಯೂ ಉಪಲಬ್ಧವಿಲ್ಲ.

ಕವಿರಾಜಮಾರ್ಗದ ಕರ್ತೃ, ಅದರ ಪರಿಸರದ ಸಾಹಿತ್ಯ, ಅದರಲ್ಲಿ ನಿರೂಪಿತವಾಗಿರುವ ವಿಷಯಗಳು. ಇವೇ ಮೊದಲಾದ ಅಂಶಗಳನ್ನು ಹಲವಾರು ಜನ ವಿದ್ವಾಂಸರು ಪರಾಮರ್ಶಿಸಿದ್ದಾರೆ.

ಕವಿರಾಜಮಾರ್ಗದ ಕರ್ತೃತ್ವದ ವಿಷಯ ತುಂಬ ಜಟಿಲ. ಕಲಬುರ್ಗಿ ಅವರು ಶ್ರೀವಿಜಯನೇ ಕವಿರಾಜಮಾರ್ಗದ ಕರ್ತೃ ಎಂದು ದೃಢವಾಗಿ ನಂಬಿದ್ದಾರೆ. ಇದಕ್ಕೆ ಪೋಷಕವಾಗಿ ಶ್ರೀವಿಜಯನೆಂಬ ಹೆಸರನ್ನೊಳಗೊಂಡ ಕ್ರಿ.ಶ. ೭೩೫ರ ಲಕ್ಷ್ಮೇಶ್ವರ ಶಾಸನವನ್ನೂ ಕ್ರಿ.ಶ. ೭೯೩ರ ಮಣ್ಣೆ ತಾಮ್ರಶಾಸನವನ್ನೂ ಕ್ರಿ.ಶ. ೮೦೨ರ ಮತ್ತೊಂದು ಮಣ್ಣೆ ತಾಮ್ರಶಾಸನವನ್ನೂ ಉದ್ಧರಿಸಿದ್ದಾರೆ. ಕ್ರಿ.ಶ. ೮೦೨ರ ಈ ಮಣ್ಣೆ ತಾಮ್ರಶಾಸನದಲ್ಲಿ ಉಕ್ತನಾದ ಶ್ರೀವಿಜಯನೇ ಕವಿರಾಜಮಾರ್ಗದ ಶ್ರೀವಿಜಯನಾಗಿರಬಹುದೆಂದು ಎಣಿಸಿದ್ದಾರೆ. ಆದರೆ ಇದು ಕೇವಲ ಊಹೆ. ಈವರೆಗೆ ಉಪಲಬ್ಧವಾದ ಸಾಧನ ಸಾಮಗ್ರಿಗಳಿಂದ ಕವಿರಾಜಮಾರ್ಗದ ಕರ್ತೃತ್ವವನ್ನು ‘ಇದಮಿತ್ಥಂ’ ಎಂದು ನಿರ್ಧರಿಸುವುದು ಸಾಧ್ಯವಿಲ್ಲ.

ಕವಿಮಾರ್ಗ, ಕವಿರಾಜಮಾರ್ಗ –ಇವುಗಳ ಬಗೆಗೆ ಶ್ರೀಯುತರು ತಳೆದಿರುವ ನಿಲವು ಚಿಂತನೀಯ. "ಕೆಲವರು ಕೃತಿನಾಮವೆಂದು ಒಪ್ಪುವರಾದರೂ ಅಜಿತತೀರ್ಥಂಕರಪುರಾಣವನ್ನು ಅಜಿತಪುರಾಣವೆಂದು, ಮೋಹಾನುಭವ ಮುಕುರವನ್ನು ಅನುಭವಮುಕುರವೆಂದು ಸಂಕ್ಷೇಪಿಸಿ ಕರೆದಂತೆ ಇಲ್ಲಿ ದುರ್ಗಸಿಂಹನು ಕವಿರಾಜಮಾರ್ಗವನ್ನೇ ಕವಿಮಾರ್ಗವೆಂದು ಕರೆದಿರುವನೆಂದು ಊಹಿಸುವರು. ಆದರೆ ಅಜಿತತೀರ್ಥಂಕರ ಪುರಾಣ, ಮೋಹನಾನುಭವ ಮುಕುರಗಳಂತೆ ಕವಿರಾಜಮಾರ್ಗದ ಉಚ್ಚಾರಣೆ ಕ್ಲಿಷ್ಟವಲ್ಲ. ಮೇಲಾಗಿ ದುರ್ಗಸಿಂಹನು 'ರಾಜ' ಪದವನ್ನು ಬಿಟ್ಟು ಶೀರ್ಷಿಕೆಯ ಸೊಗಸು ಕೆಡಿಸುವಂತಹ ಅರಸಿಕನೂ ಅಲ್ಲ. ಛಂದಸ್ಸಿನ ಕಟ್ಟಿಗೆ ಒಳಗಾಗಿ ಕೃತಿನಾಮವನ್ನು ಮೊಟಕುಗೊಳಿಸುವಂತಹ ಛಂದೋದರಿದ್ರನೂ ಅಲ್ಲ. ಅದಕ್ಕಾಗಿ ಕವಿಮಾರ್ಗವೇ ಬೇರೆ, ಕವಿರಾಜಮಾರ್ಗವೇ ಬೇರೆ ಎನಿಸುತ್ತದೆ." (ಪುಟ ೨೭) ಶ್ರೀಯುತರು ಮುಂದುವರಿದು "ಅದಕ್ಕಾಗಿ ಇವನು (ಶ್ರೀವಿಜಯ) ಕವಿಮಾರ್ಗದ ಶ್ರೀವಿಜಯನೂ ಹೌದು ಎನಿಸುತ್ತದೆ. ಒಂದು ಸಮಯದಲ್ಲಿ ರಚಿಸಿದ ತನ್ನ 'ಕವಿಮಾರ್ಗ'ವನ್ನು ಈತನು ಇನ್ನೊಂದು ಸಮಯದಲ್ಲಿ ಪರಿಷ್ಕಾರಗೊಳಿಸಿ 'ಕವಿರಾಜಮಾರ್ಗ'ವನ್ನಾಗಿಸಿರಬಹುದು" (ಪುಟ ೩೨). ಕೊನೆಗೆ "ಕವಿರಾಜಮಾರ್ಗದ ಒಡಲಲ್ಲಿ ನೃಪತುಂಗನ ಹೆಸರು ಮತ್ತು ಬಿರುದುಗಳನ್ನು ಹಲವು ಸಲ ಬಳಸಲಾಗಿದ್ದು, ಅಲ್ಲಿಯ ಉತ್ತಮ-ಪ್ರಥಮ ಪುರುಷ ಪ್ರಯೋಗಗಳ ಆಧಾರದಿಂದ ವಿದ್ವಾಂಸರು ಪರವಾಗಿಯೂ, ವಿರೋಧವಾಗಿಯೂ ವಾದಿಸುತ್ತಾರೆ. ಇಂಥ ಮಾತುಗಳು ಶ್ರೀವಿಜಯಕೃತ ಕವಿಮಾರ್ಗ. ನೃಪತುಂಗ- ಶ್ರೀವಿಜಯರ ವಿಚಾರ ಮಥನದಲ್ಲಿ ಕವಿರಾಜಮಾರ್ಗವಾಯಿತು ಎಂಬ ನಮ್ಮ ಅಭಿಪ್ರಾಯದೆದುರು ಮೌನಗೊಳ್ಳುತ್ತದೆ. ಹೀಗಾಗಿ 'ಶ್ರೀವಿಜಯರ ಕವಿಮಾರ್ಗಂ ಭಾವಿಪ ಕವಿಜನದ ಮನಕೆ ಕನ್ನಡಿಯುಂ ಕೈದ್ಜೀವಿಗೆಯುಂ' ಎಂಬ ದುರ್ಗಸಿಂಹನ ಅಭಿಪ್ರಾಯವೂ ಸತ್ಯ: 'ಶ್ರೀವಿಜಯ ಪ್ರಭೂತ'ವಾದ ರಾಜಕವಿ ಮಾರ್ಗವು 'ನೃಪತುಂಗ ದೇವಾನುಮತ'ವೂ ಸತ್ಯ. ಹೈದರಾಬಾದ ದರ್ಪಣಕಾರನು 'ಶ್ರೀವಿಜಯನ ಪ್ರಯೋಗಂ' ಎಂದು ಬಿಡಿಸಿ ಹೇಳಿರುವುದೂ ಸತ್ಯ. ಒಟ್ಟಿನಲ್ಲಿ ಕವಿಮಾರ್ಗ ರಚನೆ ಮತ್ತು ಕವಿರಾಜಮಾರ್ಗ ಪುನಾರಚನೆ ಎಂಬ ಎರಡು ಹಂತಗಳಲ್ಲಿಯೂ ಶ್ರೀ ವಿಜಯ ನಿಂತಿರುವನೆಂದು ನಮ್ಮ ಅಭಿಪ್ರಾಯ" (ಪುಟ ೪೩) ಎಂದು ತೀರ್ಮಾನಿಸಿರುವುದು ವಿದ್ವಾಂಸರಿಗೆ ಎಷ್ಟರಮಟ್ಟಿಗೆ ಒಪ್ಪಿಗೆಯಾಗುತ್ತದೆ ಎಂಬುದು ತೀರಾ ಸಂದೇಹ.

ಇದೇ ರೀತಿ ಚತ್ತಾಣ ಬೆದಂಡೆಗಳ ಬಗೆಗೆ ಶ್ರೀಯುತರು ಹೇಳಿರುವ ಮಾತುಗಳು ವಿಚಾರಣೀಯ. 'ಅಂಟ ಸುಂಟ' ಶಬ್ದದ ಬಗೆಗೆ ಶ್ರೀಯುತರು ಕೊಟ್ಟಿರುವ ವಿವರಣೆ ಸರಿಯೆನಿಸದು. ಅಜಿತಪುರಾಣದಲ್ಲಿ ಬರುವ ಈ ಶಬ್ದಕ್ಕೆ "ಬಹುಶಃ ಇದೊಂದು ಜಾನಪದ ಸಾಹಿತ್ಯ ಪ್ರಕಾರವಾಗಿರಬೇಕು" ಎಂದು ಅರ್ಥೈಸಿದ್ದಾರೆ. ಪೋಷಕವಾಗಿ 'ಅಂಟಿಗೆ-ಪಂಟಿಗೆ' ಎಂಬ ಶಬ್ದದ ವಿವರಣೆಯನ್ನು ಕೊಟ್ಟಿದ್ದಾರೆ. (ಪುಟ ೨೯೧) ಆದರೆ ವಾಸ್ತವವಾಗಿ 'ಅಂಟ-ಸುಂಟ' ಎಂಬುದು ನಿಂದಾವಾಚಕ. ಇದಕ್ಕೂ 'ಅಂಟಿಗೆ-ಪಂಟಿಗೆ' ಶಬ್ದಕ್ಕೂ ಯಾವ ಸಂಬಂಧವೂ ಇಲ್ಲ. ಇದು ಜಾನಪದದ ಒಂದು ಪ್ರಭೇದವೂ ಅಲ್ಲ. ಶ್ರೀಯುತರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟನ್ನು ನೋಡಿದ್ದರೆ ಈ ಅಂಶ ಸ್ಪಷ್ಟವಾಗುತ್ತಿತ್ತು.

ಒಟ್ಟಿನಲ್ಲಿ ಹಲವಾರೆಡೆ ಚೆಲ್ಲಾಪಿಲ್ಲಿಯಾಗಿ ಹರಡಿಹೋಗಿದ್ದ ಕವಿರಾಜಮಾರ್ಗಕ್ಕೆ ಸಂಬಂಧಿಸಿದ ಮಾಹಿತಿಗಳನ್ನೆಲ್ಲಾ ಶ್ರೀಯುತರು ಒಂದೆಡೆ ಪೋಣಿಸಿ ಈ ಮಾಲೆಯನ್ನು ರಚಿಸಿದ್ದಾರೆ. ವಿದ್ವಾಂಸರ ಅಭಿಪ್ರಾಯಗಳನ್ನು ಸಾಧಾರವಾಗಿ ವಿಮರ್ಶಿಸಿದ್ದಾರೆ. ಕವಿರಾಜಮಾರ್ಗಕ್ಕಿಂತ ಹಿಂದಿನ ಸಾಹಿತ್ಯದ ಮೇಲೆ ಶೋಧನ ಕಿರಣಗಳನ್ನು ಬೀರಿದ್ದಾರೆ. ಪರಿಸರ ಸಾಹಿತ್ಯದ ಮೇಲೆ ಪೂರ್ಣದೃಷ್ಟಿಯನ್ನು ಹರಿಸಿದ್ದಾರೆ. ಹಲವಾರು ಹೊಸ ವಿಷಯಗಳನ್ನೂ ಹೇಳಿದ್ದಾರೆ. ಈ ಎಲ್ಲ ದೃಷ್ಟಿಗಳಿಂದ ಈ ಗ್ರಂಥ ತುಂಬ ಉಪಯುಕ್ತವಾಗಿದೆ.

ಸುಧಾ ವಾರಪತ್ರಿಕೆ, ಸಂಪುಟ-೧೦, ಸಂಚಿಕೆ-೩೯, ೨೯ ಸೆಪ್ಟೆಂಬರ್ ೧೯೭೪

■

# ಕನ್ನಡ ಬಯಲಾಟ-ಅಲ್ಲಮಪ್ರಭು

ಲೇಖಕರು: ಯಲ್ಲಪ್ಪ ಫಕೀರಪ್ಪ (ಕಾವ್ಯನಾಮ: ಶಿವಾನಂದ), ಸಂಪಾದಕರು: ಡಾ.ಎಸ್.ಎಂ. ಸುಂಕಾಪುರ, ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾನಿಲಯ, ಪ್ರಥಮ ಮುದ್ರಣ ೧೯೭೩, ಪುಟಗಳು ೧೨೦, ಬೆಲೆ: ರೂ. ೪

ವಚನಕಾರರಲ್ಲಿ ಅತ್ಯಂತ ಉಚ್ಚಸ್ಥಾನವನ್ನಲಂಕರಿಸಿದವರಲ್ಲಿ ಅಲ್ಲಮಪ್ರಭು ಅಗ್ರಗಣ್ಯ. ಶೂನ್ಯಸಿಂಹಾಸನಾಧೀಶ್ವರನೂ ಪರಮ ವೈರಾಗ್ಯಮೂರ್ತಿಯೂ ಆದ ಅಲ್ಲಮಪ್ರಭು ಮಾಯಾಕೋಲಾಹಲನೆಂದು ಪ್ರಸಿದ್ಧನಾಗಿದ್ದಾನೆ. ಬಸವಣ್ಣನವರ 'ಅಹಂ' ಅನ್ನು ನೀಗಿದವನೂ ಈತನೇ. ಭಕ್ತಿಗೆ ಬಸವಣ್ಣ, ಜ್ಞಾನಕ್ಕೆ ಚೆನ್ನಬಸವಣ್ಣ, ವೈರಾಗ್ಯಕ್ಕೆ ಅಲ್ಲಮಪ್ರಭು ಸಂಕೇತಪ್ರಾಯವಾಗಿದ್ದಾರೆ.

ಅಲ್ಲಮಪ್ರಭುವನ್ನು ಕುರಿತು ಕನ್ನಡ ಸಾಹಿತ್ಯದಲ್ಲಿ ಹಲವಾರು ಸ್ವತಂತ್ರ ಕೃತಿಗಳು ಹುಟ್ಟಿಕೊಂಡಿವೆ. ಅದರಂತೆ ಈ ಪ್ರಸ್ತುತ ಕೃತಿ 'ಅಲ್ಲಮಪ್ರಭು' ಎಂಬುದೂ ಒಂದು. ಅಲ್ಲಮಪ್ರಭುವನ್ನು ಕುರಿತು ರಚಿತವಾಗಿರುವ ಈ ಪ್ರಾಚೀನ ಕೃತಿಗಳಲ್ಲಿ ಕಥಾಸರಣಿ ಬಹುಮಟ್ಟಿಗೆ ಏಕಮುಖವಾಗಿದೆ. ಆದರೆ ಪ್ರಕೃತ ಗ್ರಂಥದ ಲೇಖಕರು ಕೆಲವು ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ಈ ಬದಲಾವಣೆಗಳು ಬಯಲಾಟದ ದೃಷ್ಟಿಯಿಂದ ಪಂಡಿತ ಪಾಮರರಿಗೆ ರಂಜಕವಾಗಿವೆ. ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಪಾರ್ವತಿಯ ಸಾತ್ವಿಕಕಳೆ ಭೂಲೋಕದಲ್ಲಿ ಜನಿಸಿ ಅಕ್ಕಮಹಾದೇವಿಯಾದರೆ ಪ್ರಕೃತಕಾವ್ಯದಲ್ಲಿ ಸಾತ್ಯಕಿ ಆಗಿದ್ದಾಳೆ. ಹಾಗೆಯೇ ಕೌಶಿಕನು ಈಕೆಯನ್ನು ಮೋಹಿಸುವ ಸಂದರ್ಭವನ್ನೂ ಕವಿ ಚಮತ್ಕಾರವಾಗಿ ಚಿತ್ರಿಸಿದ್ದಾನೆ. ಕಾಮಾಂಧನಾದ ಕೌಶಿಕ ಸಾತ್ಯಕಿಯನ್ನು ಮುಟ್ಟಿದ ಕೂಡಲೆ ಮೂರ್ಛೆಹೋಗುತ್ತಾನೆ. ಎಚ್ಚೆತ್ತ ಮೇಲೆ ತಾನು ಮಾಡಿದ ಅಕಾರ್ಯಕ್ಕಾಗಿ ಮರುಗಿ ಆಕೆಯ ಶಿಷ್ಯನಾಗುತ್ತಾನೆ. ಕಲ್ಯಾಣ, ಕೂಡಲಸಂಗಮ, ಅನುಭವಮಂಟಪ ಇವೇ ಮೊದಲಾದ ಐತಿಹಾಸಿಕ ಸಂಗತಿಗಳನ್ನೇ ನಿರೂಪಿಸದೆ ಅಲ್ಲಮ ಸಾತ್ಯಕಿಗೆ ಚಾರ್ವಾಕವೇಷದಲ್ಲಿ ಬಂದು ದರ್ಶನ ಕೊಟ್ಟಲ್ಲಿಗೆ ಈ ನಾಟಕವನ್ನು ಕವಿ ಸಮಾಪ್ತಿಗೊಳಿಸಿದ್ದಾನೆ.

ಜಾನಪದ ಸಾಹಿತ್ಯದ ಉಗಮ ವಿಕಾಸ ಇವುಗಳ ಬಗೆಗೆ ಇತ್ತೀಚೆಗೆ ಸಾಕಷ್ಟು ಜಿಜ್ಞಾಸೆ ನಡೆದಿದೆ. ಕೇವಲ ಜಾನಪದದಲ್ಲೇ ಉಳಿದುಕೊಂಡುಬಂದಿರುವ ಈ ಸಾಹಿತ್ಯವನ್ನು ಸಂಗ್ರಹಿಸಲು ನಾಡಿನ ಮೂರೂ ವಿಶ್ವವಿದ್ಯಾನಿಲಯಗಳು ಕಾರ್ಯೋನ್ಮುಖವಾಗಿವೆ. ಈ ಜಾನಪದ ಸಾಹಿತ್ಯ ಒಂದೊಂದು ಪ್ರಾಂತಕ್ಕೂ ತನ್ನದೇ ಆದ ಒಂದು ವಿಶಿಷ್ಟತೆಯಿಂದ ಕೂಡಿದೆ. ಉತ್ತರ ಕರ್ನಾಟಕದಲ್ಲಿ ಅದರಲ್ಲೂ ಕಲಬುರ್ಗಿ ಪ್ರಾಂತ್ಯದಲ್ಲಿ ವಿಶೇಷವಾಗಿ ಪ್ರಚಲಿತವಾಗಿರುವ ಈ ಬಯಲಾಟ ಮತ್ತೆಲ್ಲೂ ಕಂಡುಬರುವುದಿಲ್ಲ.

'ಅಲ್ಲಮಪ್ರಭು' ಒಂದು ಬಯಲಾಟ. ಇದಕ್ಕೆ ಸಣ್ಣಾಟ, ಶರಣರಾಟ ಎಂಬ ಹೆಸರುಗಳೂ ಇರುವುದಾಗಿ ಇದರ ಸಂಪಾದಕರು ಹೇಳಿದ್ದಾರೆ. ಜೊತೆಗೆ ಈ ಬಯಲಾಟದ ಪರಂಪರೆಯನ್ನೂ ಸಣ್ಣಾಟದ ಪ್ರಾರಂಭವನ್ನೂ, ಶರಣರಾಟದ ಪ್ರಕಾರಗಳನ್ನೂ ಈ ಆಟದ ವಿಧಾನಗಳನ್ನೂ, ಬಯಲಾಟದ ಪೂರ್ವಸಿದ್ಧತೆಯನ್ನೂ ಈ ಬಯಲಾಟದ ಕತೆಗಾರನ

ಸಂಗತಿಯನ್ನೂ ಅಟ್ಟದ ರಚನೆ ದೀಪದ ವ್ಯವಸ್ಥೆ ಈ ಆಟದಲ್ಲಿ ಬರುವ ಗಣಸ್ತುತಿ, ಹಾಡುಗಾರಿಕೆ, ಕುಣಿತ, ವಾದ್ಯಮೇಳ, ಸಂಭಾಷಣೆ ಈ ಎಲ್ಲ ವಿಷಯಗಳನ್ನೂ ಸಂಪಾದಕರು ಪ್ರಸ್ತಾವನೆಯಲ್ಲಿ ನಿರೂಪಿಸಿದ್ದಾರೆ. ಕವಿಕಾವ್ಯ ವಿಷಯಗಳನ್ನು ಕುರಿತು ಕೂಲಂಕಷವಾಗಿ ವಿವೇಚನೆ ಮಾಡಿದ್ದಾರೆ.

ಪ್ರಸ್ತುತ ನಾಟಕದ ಸಂಪಾದಕರಾದ ಡಾ. ಎಂ.ಎಸ್. ಸುಂಕಾಪುರ ಅವರು ಈಗಾಗಲೇ ಹಲವಾರು ಜಾನಪದ ಕೃತಿಗಳನ್ನು ಸಂಪಾದಿಸಿದ್ದಾರೆ, ಸಂಗ್ರಹಿಸಿದ್ದಾರೆ. ಈ ದಿಶೆಯಲ್ಲಿ ಅವರು ಮಾಡುತ್ತಿರುವ ಕಾರ್ಯ ಸ್ತುತ್ಯವಾದುದು. ನಮ್ಮ ನಾಡಿನ ಸಾಹಿತ್ಯ ಸಂಸ್ಕೃತಿಗಳ ಜೀವಂತ ಪ್ರತೀಕವೆನಿಸಿರುವ ಈ ಯಕ್ಷಗಾನ ಬಯಲಾಟಗಳ ಸಂಗ್ರಹ ಪ್ರಕಟನ ಕಾರ್ಯಗಳು ಎಷ್ಟು ಶೀಘ್ರವಾಗಿ ಎಷ್ಟು ವ್ಯಾಪಕವಾಗಿ ನಡೆದರೆ ಅಷ್ಟೂ ಒಳ್ಳೆಯದು. ಏಕೆಂದರೆ ಇವುಗಳನ್ನು ಬಲ್ಲ ಜನ ಕಣ್ಮರೆಯಾದರೆ ಅವರೊಂದಿಗೆ ಈ ಸಾಹಿತ್ಯವೂ ಕಣ್ಮರೆಯಾಗಿ ಹೋಗುತ್ತದೆ. ಶರಣರ ಆಡುಂಬೊಲ ಎನಿಸಿರುವ ಕಲಬುರ್ಗಿ ಪ್ರಾಂತದಲ್ಲಿ ಪ್ರಚಲಿತವಾಗಿರುವ ಈ ತೆರನ ಎಲ್ಲ ನಾಟಕಗಳನ್ನು ಸಂಪಾದಿಸಿ ಸಂಗ್ರಹಿಸುವ ಕಾರ್ಯವನ್ನು ಡಾ. ಸುಂಕಾಪುರ ಅವರು ವಹಿಸಿಕೊಂಡು ಸಮರ್ಥನಾಗಿ ನಿರ್ವಹಿಸಿದರೆ, ಜನಸಾಮಾನ್ಯಕ್ಕೆ ಇದರಿಂದ ಮಹೋಪಕಾರವಾಗುತ್ತದೆ ಎಂದು ಹೇಳಬಯಸುತ್ತೇನೆ.



## ಮೋಹನ ತರಂಗಿಣಿ : ಕನಕದಾಸ

ಸಂಪಾದಕರು: ಡಾ. ಆರ್.ಸಿ. ಹಿರೇಮಠ, ಪ್ರಕಾಶಕರು: ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪ್ರಥಮ ಆವೃತ್ತಿ ೧೯೭೩, ಪುಟಗಳು viii+೬೭೨, ಬೆಲೆ: ರೂ. ೨೦

---

ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಉಗಮಿಸಿ ವಿಕಸಿಸಿ ಕಣ್ಮರೆಯಾದ ಶೈವಪಂಥದ ತರುವಾಯ ಇಂತಹುದೇ ಒಂದು ಪಂಥ ಐದಾರು ಶತಮಾನಗಳಾದ ಮೇಲೆ ಹುಟ್ಟಿಕೊಂಡಿತು. ಇದೇ ದಾಸಪಂಥ. ಹದಿನಾರು ಮತ್ತು ಹದಿನೇಳನೆಯ ಶತಮಾನಗಳಲ್ಲಿ ಹುಟ್ಟಿಕೊಂಡ ಈ ಹರಿದಾಸ ಸಾಹಿತ್ಯ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಮೈಲಿಗಲ್ಲೆನಿಸಿದೆ. ಈ ದಾಸಪಂಥದಲ್ಲಿ ತೊಳಗಿ ಬೆಳಗಿದವರು ಹಲವಾರು ಜನ. ಅವರಲ್ಲಿ ಜಗನ್ನಾಥದಾಸ, ವಿಜಯದಾಸ, ಪುರಂದರದಾಸ, ಕನಕದಾಸ ಇವರೇ ಮೊದಲಾದವರು ಈ ಪಂಥದ ಪ್ರವರ್ತಕರೆನ್ನಬಹುದು. ಈ ದಾಸರು ಹರಿಯೇ ಸರ್ವೋತ್ತಮನೆಂದು ಪರಿಗಣಿಸಿ ಆತನ ನಾಮಸಂಕೀರ್ತನೆಯಲ್ಲೇ ತಮ್ಮ ಇಡೀ ಜೀವಮಾನವನ್ನೇ ಕಳೆದಿದ್ದಾರೆ. ಈ ದಾಸವರೇಣ್ಯರು ಸ್ವತಃ ಕೀರ್ತನೆಗಳನ್ನು ರಚಿಸಿ ಸುಶ್ರಾವ್ಯವಾಗಿ ಹಾಡುತ್ತ ನಾಡಿನ ಉದ್ದಗಲಕ್ಕೂ ಸಂಚರಿಸಿ ಜನಮನವನ್ನು ಭಕ್ತರಸ ಸಮುದ್ರಕ್ಕೆ ಕೊಂಡೊಯ್ದಿದ್ದಾರೆ; ಅವರ ಆತ್ಮೋದ್ಧಾರದ ಮಾರ್ಗವನ್ನು ತೋರಿದ್ದಾರೆ. ಈ ದಾಸಸಮೂಹದಲ್ಲಿ ಕನಕದಾಸ ಕೇಂದ್ರಬಿಂದುವೆನಿಸಿದ್ದಾನೆ. ಆತನ ಕೀರ್ತನೆಗಳು ಜನತೆಯ ನಾಲಿಗೆಯ ಮೇಲೆ ಇಂದಿಗೂ ನರ್ತನಮಾಡುತ್ತಿವೆ. ಕನಕದಾಸ ಕೀರ್ತನೆಗಳ ಜೊತೆಗೆ 'ಮೋಹನ ತರಂಗಿಣಿ' ಎಂಬ ಬೃಹದ್ ಸಾಂಗತ್ಯ ಕೃತಿಯನ್ನೂ, ನಳಚರಿತ್ರೆ, 'ರಾಮಧಾನ್ಯಚರಿತ್ರೆ' ಮತ್ತು 'ಹರಿಭಕ್ತಿಸಾರ' ಎಂಬ ಭಾಮಿನೀಷಟ್ಪದಿ ಕೃತಿಗಳನ್ನೂ ರಚಿಸಿರುವುದು ಸರ್ವವೇದ್ಯವಾದುದು. ಈತನ ಕೃತಿಗಳ ಅಂಕಿತ ಆದಿಕೇಶವ.

ಕನಕದಾಸ ಧಾರವಾಡ ಜಿಲ್ಲೆಯ ಕಾಗಿನೆಲೆಯವನೆಂದೂ, ಬೇಡರ ಜಾತಿಯವನೆಂದೂ ಇದೇ ಜಿಲ್ಲೆಯ ಕೋಡ ಎಂಬ ತಾಲ್ಲೂಕಿನ ಬಾಡ ಎಂಬ ಗ್ರಾಮದಲ್ಲಿ ಹುಟ್ಟಿ ಅಲ್ಲಿಯ ಆದಿಕೇಶವನ ಅಂಕಿತದಲ್ಲಿ ತನ್ನ ಕೃತಿಗಳನ್ನು ರಚಿಸಿ ಕೃತಾರ್ಥನಾಗಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಮತ್ತೆ ಕೆಲವರು ಈತನು ಅಂಡೆಕುರುಬನೆಂದೂ ವ್ಯಾಸರಾಯನ ಸೇವೆಯಿಂದ ಜ್ಞಾನಿಯಾದನೆಂದೂ ಹೇಳುತ್ತಾರೆ. ಈ ಸಂಗತಿಗಳು ಎಂತಾದರೂ ಇರಲಿ. ಕನಕದಾಸ ಒಬ್ಬ ಪರಮವೈಷ್ಣವಭಕ್ತನಾಗಿದ್ದ. ಕಾಗಿನೆಲೆಯ ಆದಿಕೇಶವನ ನಾಮಸಂಕೀರ್ತನೆಯಲ್ಲೇ ಜೀವನದ ಸಾರ್ಥಕತೆಯನ್ನೆಲ್ಲ ಕಂಡುಕೊಂಡಿದ್ದಾನೆ. ಕನ್ನಡ ಸಾಹಿತ್ಯಕ್ಕೆ ಈತನ ಕೊಡುಗೆ ಮಿಗಿಲಾದುದು.

ಮೋಹನ ತರಂಗಿಣಿಯಲ್ಲಿ ೪೨ ಸಂಧಿಗಳೂ ೨೭೦೫ ಪದ್ಯಗಳೂ ಇವೆ. ಈ ಕಾವ್ಯಕ್ಕೆ ಕೃಷ್ಣಚರಿತೆ ಎಂಬ ಪರ್ಯಾಯನಾಮವೂ ಕಂಡುಬರುತ್ತದೆ. ಇದರಲ್ಲಿ ಮನ್ಮಥ ದಹನ, ಕಾಮೋತ್ಪತ್ತಿ, ಶಂಬರಾಸುರನ ವಧೆ, ಅನಿರುದ್ಧನ ಲೀಲೆ, ಬಾಣಾಸುರನ ವಿಜಯ ಇವೇ ಮೊದಲಾದ ಹಲವಾರು ಪ್ರಸಂಗಗಳಿವೆ. ಕನಕದಾಸ ಈ ಎಲ್ಲ ಪ್ರಕರಣಗಳನ್ನೂ ವಿಶದವಾಗಿ ವರ್ಣಿಸಿ ಈ ಕಾವ್ಯವನ್ನು ಹಿಗ್ಗಲಿಸಿದ್ದಾನೆ. ಇದರಲ್ಲಿ ಹಲವಾರು ವರ್ಣನಾಭಾಗಗಳು ಕನಕದಾಸ ಒಬ್ಬ ಉತ್ತಮಕವಿ ಎಂಬುದನ್ನು ಸಾರಿ ತೋರುತ್ತಿವೆ. ಅಪಾರಲೋಕಾನುಭವವನ್ನೂ ಅಸಾಧಾರಣ ಪ್ರತಿಭೆಯನ್ನೂ ಈತನ ಕೃತಿಗಳಲ್ಲಿ ನೋಡಬಹುದಾಗಿದೆ.

ಮೋಹನ ತರಂಗಿಣಿಯನ್ನು ಮೈಸೂರಿನ ಕಾವ್ಯಕಲಾನಿಧಿಯವರು ಈ ಹಿಂದೆಯೇ ಸಂಪಾದಿಸಿ ಪ್ರಕಟಿಸಿದ್ದರು. ಈ ಕಾವ್ಯದ ಸಂಗ್ರಹವು ಕೂಡ ಹೊರಬಂದಿದೆ. ಇಷ್ಟಾದರೂ ಈ ಕಾವ್ಯದ ಪ್ರತಿಗಳು ಉಪಲಬ್ಧವಿರಲಿಲ್ಲ. ಅಲ್ಲದೆ ಈ ಕಾವ್ಯದ ಒಂದು ಅಧಿಕೃತ ಸಂಸ್ಕರಣದ ಆವಶ್ಯಕತೆಯೂ ಬಹಳವಾಗಿ ಇತ್ತು. ಕರ್ನಾಟಕ ವಿಶ್ವವಿದ್ಯಾಲಯದವರು ಈ ಆವಶ್ಯಕತೆಯನ್ನು ಪೂರೈಸಿದ್ದಾರೆ. ಪ್ರಕೃತ ಸಂಸ್ಕರಣವನ್ನು ಏಳುಹಸ್ತಪ್ರತಿಗಳ ಆಧಾರದಿಂದ ಹೊರತರಲಾಗಿದೆ ಎಂದಿದ್ದಾರೆ ಅದರ ಸಂಪಾದಕರು. ಈ ಕಾವ್ಯದ ಪಾಠನಿಷ್ಕರ್ಷೆಯಲ್ಲಿ ಯಾವ ಸಮಸ್ಯೆಗಳೂ ತಲೆದೋರಿದಂತೆ ಕಂಡುಬರುವುದಿಲ್ಲ. ಹಲವಾರು ಪದ್ಯಗಳಿಗೆ ಪಾಠಾಂತರಗಳೇ ಇಲ್ಲದಿರುವುದು ಈ ಹೇಳಿಕೆಯನ್ನು ಸಮರ್ಥಿಸುತ್ತದೆ.

ಈ ಕಾವ್ಯದ ಶಿರೋನಾಮೆಗಳನ್ನು ಇಕ್ಕೆಡೆಗಳಲ್ಲೂ ಮೋಹನ ತರಂಗಿಣಿ ಎಂದೇ ಅಚ್ಚುಮಾಡಿಸಲಾಗಿದೆ. ಆದರೆ ಆಯಾ ಸಂಧಿಗಳ ವಿಷಯಸೂಚಕಗಳನ್ನು ಶಿರೋನಾಮೆಗಳನ್ನಾಗಿ ಕೊಡಬಹುದಾಗಿತ್ತು. ಕ್ರಿ.ಶ. ಸು. ೧೫೫೦ರ ಈ ಕೃತಿಗೆ ಱಟವನ್ನು ಬಳಸುವ ಅಗತ್ಯವಿರಲಿಲ್ಲ. ಚಂಪೂಕಾವ್ಯಗಳ ಕಾಲಕ್ಕೇ ಮಾಯವಾಗುತ್ತಿದ್ದ ಱಟವನ್ನು ಸಾಂಗತ್ಯ ಕೃತಿಗೆ ಬಳಸಿರುವುದರ ಔಚಿತ್ಯ ನಮಗೆ ಅರ್ಥವಾಗುತ್ತಿಲ್ಲ. ಈ ಕಾವ್ಯಕ್ಕೆ ಒಂದು ಸುದೀರ್ಘವಾದ ಪೀಠಿಕೆಯೂ ಅವಶ್ಯವಾಗಿತ್ತು.

ಸಾಂಗತ್ಯ ಕೃತಿಯಾದ ಈ ಮೋಹನ ತರಂಗಿಣಿಯ ಮುದ್ರಣ ಚಿತ್ತಾಕರ್ಷಕವಾಗಿದ್ದರೂ ಮುದ್ರಣದಲ್ಲಿ ಇದರ ಹಲವಾರು ಪುಟಗಳನ್ನು ಕಡಮೆ ಮಾಡುವ ಸಾಧ್ಯತೆ ಇತ್ತು. ಡೆಮಿ ಅಷ್ಟದಳಾಕಾರದಲ್ಲಿ ಅಚ್ಚಾಗಿರುವ ಈ ಪುಸ್ತಕದಲ್ಲಿ ಒಂದು ಪುಟಕ್ಕೆ ಐದುಪದ್ಯಗಳಿಗೆ ಬದಲಾಗಿ ಆರೇಳು ಪದ್ಯಗಳನ್ನು ಸಂದರ್ಭಾನುಸಾರ ಅಳವಡಿಸಿ ಅಚ್ಚುಮಾಡಿಸಬಹುದಾಗಿತ್ತು. ಅಕಾರಾದಿ ಮತ್ತು ಅರ್ಥಕೋಶಗಳನ್ನು ಎರಡೆರಡು 'ಕಾಲಂ'ಗಳಲ್ಲಿ ಕೊಡಬಹುದಾಗಿತ್ತು. ಇದರಿಂದ ಮುದ್ರಣದಲ್ಲಿ ನೂರಾರು ಪುಟಗಳು ಉಳಿತಾಯವಾಗುತ್ತಿದ್ದುವು. ಪ್ರಾಚೀನ ಕಾವ್ಯಗಳ ಸಂಪಾದನೆಯಲ್ಲಿ ಸಿದ್ಧಹಸ್ತರಾದ ಡಾ. ಆರ್.ಸಿ. ಹಿರೇಮಠ ಅವರಿಂದ ಉಳಿದ ಪ್ರಾಚೀನ ಕಾವ್ಯಗಳ ಅಧಿಕೃತ ಸಂಸ್ಕರಣಗಳು ಅಧಿಕ ಸಂಖ್ಯೆಯಲ್ಲಿ ಹೊರಬರಲಿ ಎಂದು ಆಶಿಸುತ್ತೇನೆ.



## ರನ್ನ

ಲೇಖಕರು: ಡಿ.ವಿ. ಶೇಷಗಿರಿವಾವ್, ಎಂ.ಜಿ. ವೆಂಕಟೇಶಯ್ಯ, ಡಾ. ಎಂ. ಮರಿಯಪ್ಪಭಟ್ಟ, ಸಂಪಾದಕರು: ವಿ. ಸೀತಾರಾಮಯ್ಯ, ಪ್ರಕಾಶಕರು: ಐಬಿಎಚ್ ಪ್ರಕಾಶನ, ಗಾಂಧಿನಗರ, ಬೆಂಗಳೂರು–೫೬೦೦೦೯, ಪುಟಗಳು: viii+೨೦೫, ಬೆಲೆ: ರೂ. ೧೨.೫೦, ಮೊದಲನೆಯ ಮುದ್ರಣ ೧೯೭೩

---

ರನ್ನ ಕನ್ನಡ ಸಾಹಿತ್ಯದ ಒಬ್ಬ ಅತ್ಯಂತ ಪ್ರಸಿದ್ಧ ಪ್ರತಿಭಾನ್ವಿತ ಕವಿ. ಸಾಹಸ ಭೀಮವಿಜಯ ಅಥವಾ ಗದಾಯುದ್ಧ, ಅಜಿತತೀರ್ಥಂಕರ ಪುರಾಣತಿಲಕ, ಚಕ್ರೇಶ್ವರ ಚರಿತೆ, ಪರಶುರಾಮ ಚರಿತೆ –ಈ ಉದ್ಗ್ರಂಥಗಳ ಕರ್ತೃವಾದ ರನ್ನ ಕವಿಚಕ್ರವರ್ತಿಗಳಲ್ಲಿ ಒಬ್ಬ; ರತ್ನತ್ರಯರಲ್ಲಿ ಕೊನೆಯವನು. ಅಲ್ಲದೆ ತಾನು 'ಜಿನಸಮಯದೀಪಕ' ಎಂದೂ ಹೇಳಿಕೊಂಡಿದ್ದಾನೆ. ಈತನೇ ರನ್ನಕಂದವೆಂಬ ನಿಘಂಟನ್ನೂ ಬರೆದನೆಂಬ ಪ್ರತೀತಿಯೂ ಇದೆ. ಈತನ ಚಕ್ರೇಶ್ವರ ಚರಿತೆ, ಪರಶುರಾಮ ಚರಿತೆ ಇನ್ನೂ ಸಿಕ್ಕಿಲ್ಲ.

ರನ್ನನ ಮೇಲೆ ಅಪಾರವಾದ ಸಾಹಿತ್ಯರಾಶಿ ಹುಟ್ಟಿಕೊಂಡಿದೆ. ಪ್ರಶಸ್ತಿಗ್ರಂಥಗಳೂ ವಿಮರ್ಶಾಗ್ರಂಥಗಳೂ ಹೊರಬಂದಿವೆ. ಉಪಲಬ್ಧವಾದ ಈತನ ಗ್ರಂಥಗಳು ಪಠ್ಯಕೃತಿಗಳಾಗಿ ಸಾರ್ವತ್ರಿಕವಾಗಿ ಪ್ರಚುರವಾಗಿವೆ. ಈ ಗ್ರಂಥಗಳ ಸಂಗ್ರಹಗಳೂ ಹೊರಬಂದಿವೆ. ಇಂತಹ ಸಮರ್ಥನಾದ ಕವಿ "ಫಣಾಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪರೀಕ್ಷಿಪಂಗೆಂಟೆರ್ದೆಯೇ" ಎಂದು ಆತ್ಮಪ್ರಶಂಸೆಯನ್ನು ಮಾಡಿಕೊಂಡಿದ್ದಾನೆ. ಕನ್ನಡ ಕವಿಗಳಿಗೆ ಈ ತೆರನಾದ ಆತ್ಮಪ್ರಶಂಸೆ ಹೊಸದೇನೂ ಅಲ್ಲ. ಆದರೆ ರನ್ನನ ಕೃತಿಗಳನ್ನು ಅವಲೋಕಿಸಿದವರಿಗೆ ಇದೇನೂ ಮಿಥ್ಯಾಪ್ರಶಂಸೆ ಅಲ್ಲ ಎಂಬುದು ವೇದ್ಯವಾಗುತ್ತದೆ.

ಪ್ರಕೃತ 'ರನ್ನ' ಗ್ರಂಥದ ಮೊದಲನೆಯ ಭಾಗದಲ್ಲಿ ರನ್ನ ಕವಿಯ ಕಾಲ, ದೇಶ, ಕಾವ್ಯಗಳು, ಯುಗವೈಶಿಷ್ಟ್ಯ – ಇವುಗಳ ಒಂದು ಸಮಗ್ರ ವಿವೇಚನೆಯನ್ನು ಶ್ರೀ ಡಿ.ವಿ. ಶೇಷಗಿರಿರಾವ್ ಅವರು ಮಾಡಿದ್ದಾರೆ. ಈವರೆಗೆ ಉಪಲಬ್ಧವಾದ ಎಲ್ಲ ಮಾಹಿತಿಯನ್ನೂ ಶ್ರೀಯುತರು ಸಮಾಲೋಕನ ಮಾಡಿದ್ದಾರೆ. ವಿದ್ವಾಂಸರ ವಾದವಿವಾದಗಳನ್ನೂ ವಿಮರ್ಶಿಸಿದ್ದಾರೆ. ಇದು ಒಂದು ತುಂಬ ಉಪಯುಕ್ತವಾದ ಲೇಖನ.

ಎರಡನೆಯ ಭಾಗದಲ್ಲಿ ರನ್ನನ ಗದಾಯುದ್ಧವನ್ನು ಕುರಿತು ವಿದ್ವಾನ್ ಎಂ.ಜಿ. ವೆಂಕಟೇಶಯ್ಯನವರು ಸುದೀರ್ಘವಾದ ಲೇಖನವನ್ನು ಬರೆದಿದ್ದಾರೆ. ಗದಾಯುದ್ಧ ರನ್ನನ ಕೃತಿರತ್ನ. ಆತನಿಗೆ ಅಪಾರವಾದ ಕೀರ್ತಿ ಗೌರವಗಳನ್ನೂ ತಂದುಕೊಟ್ಟ ಕಾವ್ಯ. ಈ ಲೌಕಿಕ ಕಾವ್ಯ ಯಶಶ್ರೀವನಿತೆಗೆ ಅಲಂಕೃತಿಯಂತೆ. ಈ ಕೃತಿಯ ಸಾರಾಸಾರವಿಮರ್ಶೆಯನ್ನು ಶ್ರೀಯುತರು ಅತ್ಯಂತ ಹೃದಯಂಗಮವಾಗಿ ಮಾಡಿಕೊಟ್ಟಿದ್ದಾರೆ.

ಮೂರನೆಯ ಭಾಗದಲ್ಲಿ ಡಾ. ಎಂ. ಮರಿಯಪ್ಪಭಟ್ಟರು ಅಜಿತಪುರಾಣವನ್ನು ಕುರಿತು ಒಂದು ಪುಟ್ಟ ಲೇಖನವನ್ನು ಬರೆದಿದ್ದಾರೆ. ಜೈನಧರ್ಮದ ಪರಿಭಾಷೆಗಳಿಂದ ಪರಿಪ್ಲುತವಾಗಿರುವ ಈ ಗ್ರಂಥ ಒಂದು ಆಗಮಿಕ ಕಾವ್ಯ. ಪ್ರಾಚೀನ ಜೈನಕವಿಗಳು ಲೌಕಿಕ ಆಗಮಿಕ ಕಾವ್ಯಗಳೆರಡನ್ನೂ ಬರೆಯುವುದು ಒಂದು ಸಂಪ್ರದಾಯವಾಗಿದ್ದಂತೆ ಕಂಡುಬರುತ್ತದೆ. ಈ ಪರಂಪರೆಯನ್ನೇ ರನ್ನನೂ ಅನುಸರಿಸಿದ್ದಾನೆ.

ಕೊನೆಯ ಭಾಗದಲ್ಲಿ ಬರುವ ಈ ಗ್ರಂಥದ ಸಮೀಕ್ಷೆ ಒಂದು ಸಾರವತ್ತಾದ ಭಾಗ. ಈ ಸಮೀಕ್ಷೆಯಲ್ಲಿ ಈ ಗ್ರಂಥದ ಮೂರು ಲೇಖನಗಳಲ್ಲಿನ ಅಂಶಗಳನ್ನು ಸ್ಥೂಲವಾಗಿ ವಿವೇಚಿಸಿ ಅವುಗಳಲ್ಲಿನ ಅರೆಕೊರೆಗಳನ್ನು ತುಂಬಿಕೊಡಲು ಯತ್ನಿಸಲಾಗಿದೆ. ಕವಿಕಾವ್ಯಮಾಲೆಯ ಸಂಪಾದಕರಾದ ಶ್ರೀ ವಿ. ಸೀತಾರಾಮಯ್ಯನವರು ತಮ್ಮ ಅಪಾರವಾದ ಪಾಂಡಿತ್ಯದಿಂದಲೂ ತೀಕ್ಷ್ಣಮತಿಯಿಂದಲೂ ನಿಷ್ಪಕ್ಷಪಾತವಾದ ದೃಷ್ಟಿಯಿಂದಲೂ, ಈ ಮಾಲೆಯ ಪ್ರತಿಯೊಂದು ಗ್ರಂಥಕ್ಕೂ ಸುದೀರ್ಘವಾದ ಸಮೀಕ್ಷೆಯನ್ನು ಬರೆಯುತ್ತಿದ್ದಾರೆ. ಈ ಗ್ರಂಥದ ಪರಿಪೂರ್ಣತೆಗೆ ಈ ಸಮೀಕ್ಷೆ ಸಾಧಕವಾಗಿದೆ. ಮೂವರು ವಿದ್ವಾಂಸರು ಬಿಟ್ಟಿರಬಹುದಾದ ಅಂಶಗಳನ್ನೆಲ್ಲಾ ಸಂಪಾದಕರು ಸಮೀಕ್ಷೆಯಲ್ಲಿ ತುಂಬಿಕೊಡುತ್ತಾರೆ. ಈ ಸಂದರ್ಭದಲ್ಲಿ ಒಂದು ಮಾತನ್ನು ಹೇಳುವುದು ಅನುಚಿತವಾಗಲಾರದು. ಒಬ್ಬ ಕವಿಯನ್ನು ಕುರಿತು ಮೂವರು ವಿದ್ವಾಂಸರು ಸಾಕಷ್ಟು ದೀರ್ಘವಾಗಿಯೇ ಲೇಖನಗಳನ್ನು ಬರೆದಿರುತ್ತಾರೆ. ಆದರೆ ಸಮೀಕ್ಷೆಯಲ್ಲಿ ಮತ್ತೆ ಅದೇ ಅಂಶಗಳನ್ನು ಪ್ರಸ್ತಾಪಿಸುವುದು ಪುನರುಕ್ತವೆನಿಸುತ್ತದೆ. ಹೀಗಾಗಿ, ಒಂದೇ ಪದ್ಯ ಎರಡು ಮೂರು ಬಾರಿ ಉದಾಹೃತವಾಗಿರುವುದೂ ಕಂಡುಬರುತ್ತದೆ. ಇದನ್ನು ನಿವಾರಿಸಬಹುದೆಂದು ತೋರುತ್ತದೆ.

ಮತ್ತೊಂದು ಬಹುಮುಖ್ಯವಾದ ಅಂಶವನ್ನು ಇಲ್ಲಿ ವಿವೇಚಿಸಲೇಬೇಕಾಗಿದೆ. ರನ್ನನನ್ನು ಪಂಪನೊಡನೆ ಹೋಲಿಸಿ ಆತನ ಪ್ರತಿಭೆ ಪಾಂಡಿತ್ಯಗಳು ಈತನಿಗೆ ಇಲ್ಲ ಎಂದು ಆರೋಪಿಸುವ ಒಂದು ಪರಿಪಾಠ ನಮ್ಮಲ್ಲಿ ಬೆಳೆದುಕೊಂಡು ಬಂದಿದೆ. ಯಾವೊಬ್ಬ ಕವಿಯನ್ನಾಗಲಿ ಮತ್ತೊಬ್ಬ ಕವಿಯೊಡನೆ ಹೋಲಿಸಬೇಕಾದ ಪ್ರಮೇಯವಾಗಲಿ ಅವಶ್ಯಕತೆಯಾಗಲಿ ಇದೆ ಎಂದು ನಮಗೆ ಅನಿಸುವುದಿಲ್ಲ. ಕನ್ನಡ ಸಾಹಿತ್ಯದಲ್ಲಿ ಪಂಪನ ಸ್ಥಾನ ಪಂಪನಿಗೆ, ರನ್ನನ ಸ್ಥಾನ ರನ್ನನಿಗೆ. ಅವರವರ ಪಾಂಡಿತ್ಯ ಪ್ರಭಾವ ಪರಿಸರ ಸಂಸ್ಕಾರಗಳಿಗನುಗುಣವಾಗಿ ಅವರವರ ಕೃತಿಗಳು ಸೃಷ್ಟಿಯಾಗುತ್ತವೆ. ಸಾವಿರಾರು ವರ್ಷಗಳ ಅಂತರದಲ್ಲಿ ನಿಂತಿರುವ ನಾವು ಬೇರೆ ಬೇರೆ ಕವಿಗಳೊಡನೆ ಅವರನ್ನು ಹೋಲಿಸಿ ನಮ್ಮ ಮೂಗಿನ ನೇರಕ್ಕೆ ಅವರ ಕಾವ್ಯಗಳನ್ನು ವಿಮರ್ಶಿಸುವುದು ಸಾಧುವಾದುದೇನೂ ಅಲ್ಲ. ಈ ಪ್ರಾಚೀನ ಕವಿಗಳ ಕೃತಿಗಳನ್ನೂ, ಅವುಗಳಲ್ಲಿ ಮೇಲ್ಮೆ ಕೀಳ್ಮೆಗಳನ್ನೂ ಗುರುತಿಸಿದರೆ ಸಾಕು ಎನಿಸುತ್ತದೆ. ಇದು ಎಂತಾದರೂ ಇರಲಿ. ಐಬಿಎಚ್ ಪ್ರಕಾಶನದವರು ಕವಿ ಕಾವ್ಯ ಪರಂಪರೆಯ ೩೦ ಗ್ರಂಥಗಳನ್ನು ಪ್ರಕಟಿಸಬೇಕೆಂದು ಸಂಕಲ್ಪಿಸಿರುವುದು ನಿಜಕ್ಕೂ ಶ್ಲಾಘನೀಯವಾದುದು. ಹತ್ತಾರು ಜನ ವಿದ್ವಾಂಸರು ಒಂದೆಡೆ ಸೇರಿ ಸರ್ಕಾರ, ಸಂಸ್ಥೆಗಳ ನೆರವಿನಿಂದ ನಿರ್ವಹಿಸಬೇಕಾಗಿದ್ದ ಈ ಕಾರ್ಯವನ್ನು ಐಬಿಎಚ್ ಪ್ರಕಾಶನದವರು ಏಕಾಂಗ ಸಾಹಸಿಗಳಾಗಿ ನೆರವೇರಿಸುತ್ತಿದ್ದಾರೆ. ಕನ್ನಡ ಕುಲಕೋಟಿಗೆ ಅತ್ಯಂತ ಉಪಯುಕ್ತವೂ ಅತ್ಯವಶ್ಯವೂ ಎನಿಸಿರುವ ಈ ಕಾರ್ಯ ಬೇಗನೆ ಕೈಗೂಡಲಿ. ಈ ಮಾಲೆಯಲ್ಲಿ ಹೊರಬರಬೇಕಾಗಿರುವ ಇನ್ನುಳಿದ ಕೃತಿಗಳೂ ಅಚಿರದಲ್ಲೇ ಹೊರಬರಲಿ; ಈ ಮಾಲೆಯ ಸಂಪಾದಕರ ಅಪಾರ ಅನುಭವದ ಫಲ ಕನ್ನಡ ಜನತೆಗೆ ದೊರಕುವಂತಾಗಲಿ ಎಂದು ಹಾರೈಸುತ್ತೇನೆ.



## ಪ್ರಾದೇಶಿಕ ಗಾದೆಗಳು

ಸಂಗ್ರಾಹಕರು: ಚೌಡೇಗೌಡ ಬೀಚನಹಳ್ಳಿ, ಪ್ರಕಾಶಕರು: ಜಾನಪದ ಬಳಗ, ಮಾನಸ ಗಂಗೋತ್ರಿ, ಮೈಸೂರು-೬. ಪುಟಗಳು xx+೮೫, ಮೊದಲನೆಯ ಮುದ್ರಣ ೧೯೭೩, ಬೆಲೆ: ರೂ. ೩

---

ಗಾದೆ ವೇದಕ್ಕೆ ಸಮ ಎಂಬ ಒಂದು ನಾಣ್ಣುಡಿ ರೂಢಿಯಲ್ಲಿದೆ. ಈ ನಾಡಿನಲ್ಲಿ ಗಾದೆಗಳು ಅನಾದಿಕಾಲದಿಂದ ಪ್ರಚಲಿತವಾಗಿವೆ. ಯಥಾರ್ಥ ಸಂಗತಿಯನ್ನು ನಿರೂಪಿಸುವುದೇ ಗಾದೆಗಳ ಕೆಲಸ. ಹಲವಾರು ಸಂದರ್ಭಗಳಲ್ಲಿ ಈ ಗಾದೆಗಳು ಯಥೋಚಿತವಾಗಿ ಪ್ರಯೋಗವಾಗುತ್ತವೆ. ಗಾದೆಗಳು ಕಾಲದಿಂದ ಕಾಲಕ್ಕೆ ಬಾಯಿಂದ ಬಾಯಿಗೆ ಹರಿದುಕೊಂಡು ಬರುತ್ತಿವೆ. ಹಳೆಯ ಗಾದೆಗಳು ಮರೆಯಾದಂತೆ ಕ್ರಮೇಣ ಹೊಸ ಗಾದೆಗಳು ಸೃಷ್ಟಿಯಾಗುತ್ತಿರುತ್ತವೆ. ಜೊತೆಗೆ ಒಂದೇ ಗಾದೆ ಅಲ್ಪಸ್ವಲ್ಪ ವ್ಯತ್ಯಾಸದೊಂದಿಗೆ ಹಲವಾರು ಕಡೆ ಪ್ರಚಲಿತವಾಗಿಯೂ ಇರುತ್ತದೆ.

ಕನ್ನಡ ಸಾಹಿತ್ಯದಲ್ಲಿ ಗಾದೆಗಳ ಪ್ರತ್ಯೇಕ ಸಂಗ್ರಹ ಕಾರ್ಯ ಹಿಂದಿನಿಂದ ನಡೆದುಬಂದಿಲ್ಲ. ಕೆಲವು ದಶಕಗಳಿಂದ ಜನಪದ ಸಾಹಿತ್ಯಕ್ಕೆ ವಿಶೇಷ ಪ್ರೋತ್ಸಾಹ ಸಿಕ್ಕು ಅದರಲ್ಲಿ ಗಾದೆಗಳೂ ಮಿಗಿಲಾದ ಸ್ಥಾನವನ್ನು ಆಕ್ರಮಿಸಿಕೊಂಡಿವೆ. ರೆ॥ ಎಫ್. ಕಿಟ್ಟೆಲ್ ಅವರು ಕಲ್ಲಚ್ಚಿನಲ್ಲಿದ್ದ ಸುಮಾರು ನಾಲ್ಕು ಸಾವಿರ ಗಾದೆಗಳನ್ನು ತಮ್ಮ ಕೋಶದಲ್ಲಿ ಉದ್ಧರಿಸಿದ್ದಾರೆ. ತರುವಾಯ ಕೆಲವಾರು ಜನ ಗಾದೆಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಅವರಲ್ಲಿ ಗಾದೆಗಳ ಅಚ್ಚಪ್ಪನವರ ಹೆಸರನ್ನು ಸ್ಮರಿಸಬೇಕಾಗಿದೆ.

'ಪ್ರಾದೇಶಿಕ ಗಾದೆಗಳು' ಗ್ರಂಥದಲ್ಲಿ ೧೩೦೬ ಗಾದೆಗಳನ್ನು ಸಂಗ್ರಹಿಸಲಾಗಿದೆ. ಈ ಸಂಕಲನಕ್ಕೆ ಈ ಹೆಸರು ಎಷ್ಟರಮಟ್ಟಿಗೆ ಉಚಿತವಾದುದು ಎಂಬುದು ವಿಚಾರಣೀಯ. ಏಕೆಂದರೆ ಈ 'ಪ್ರಾದೇಶಿಕ ಗಾದೆಗಳು' ಗ್ರಂಥದಲ್ಲಿಯ ಅನೇಕ ಗಾದೆಗಳು ಬೇರೆಡೆಗಳಲ್ಲೂ ಕೇಳಿಬರುತ್ತಿವೆ. ಶ್ರೀ ಚೌಡೇಗೌಡರು ಸಹಸ್ರಾರು ಗಾದೆಗಳನ್ನು ಒಂದೆಡೆ ಸಂಗ್ರಹಿಸಿದ್ದಾರೆ. ಆದರೆ ಅವನ್ನು ಸಂಪಾದಿಸಿಲ್ಲ ಮತ್ತು ಈ ಸಂಕಲನದಲ್ಲಿಯ ಅನೇಕ ಗಾದೆಗಳು 'ಗಾದೆಗಳು' ಎಂಬ ಹೆಸರಿಗೆ ಅನುಗುಣವಾಗಿಲ್ಲ. ಅವು ನುಡಿಗಟ್ಟುಗಳೂ, ಪದಪುಂಜಗಳೂ ಆಗಿರುವುದರಿಂದ ಗಾದೆಗಳ ಕಾರ್ಯವನ್ನು ನಿರ್ವಹಿಸಲಾರವು. ಅಲ್ಲದೆ ಅನೇಕ ಗಾದೆಗಳು ಗ್ರಾಮ್ಯಭಾಷೆಯಲ್ಲಿಯೇ ಇರುವುದರಿಂದ ಅವು ಅರ್ಥವಾಗುವುದೂ ಕಠಿಣವೇ. ಈ ದೃಷ್ಟಿಯಿಂದಲೇ ಇವು ಸಂಸ್ಕಾರಗೊಂಡು ಸಂಪಾದನೆ ಆಗಬೇಕಾಗಿದೆ. ಈ ಗ್ರಂಥದ ಮುನ್ನುಡಿಕಾರರು ಈ ವಿಷಯವನ್ನು ದೀರ್ಘವಾಗಿ ಪ್ರಸ್ತಾಪಿಸಿದ್ದಾರೆ.

ಪ್ರಸ್ತುತ ಚೌಡೇಗೌಡರ ಸಂಕಲನದ ಹೆಸರಿನ ಹಿಂದೆ ಗಾದೆಗಳನ್ನು ಸಂಗ್ರಹಿಸುವಾಗ ಅವುಗಳ ಸಂಸ್ಕಾರಕ್ಕೆಡೆಗೊಡದೆ ಸಹಜ ಸ್ಥಿತಿಯಲ್ಲೇ ಉಳಿಸಿಕೊಂಡಿದ್ದೇನೆ ಎಂಬ ಅರಿವು ಇದ್ದಂತಿದೆ. ಒಂದು ಪ್ರದೇಶದ ಭಾಷಾಪ್ರಯೋಗ, ಉಚ್ಚಾರಣಾ ಧಾಟಿ ಆ ಪ್ರದೇಶಕ್ಕೆ ವಿಶಿಷ್ಟವಾದದ್ದು. ಆದರೆ ಆ ವಿಶಿಷ್ಟತೆಯನ್ನು ಹಿಡಿದಿಡುವಾಗ ಸಾಧಾರಣತೆಯನ್ನು ಪೂರ್ಣ ಅಲಕ್ಷಿಸುವುದೂ ತಪ್ಪಾಗುತ್ತದೆ ಎನ್ನಿಸುತ್ತದೆ. ಉದಾಹರಣೆಗೆ "ಅರಿದೈಜಾಂತ" ಎಂದು ಪ್ರಾರಂಭವಾಗುವ ೬೪ನೇ

ಗಾದೆಯನ್ನು ವಿವೇಚಿಸಬಹುದು. "ಅರಿದೈಜಾಂತ" ಎಂಬ ಪ್ರಯೋಗ ಪದವಿಭಾಗ ಮಾಡಿಕೊಂಡು ಅರ್ಥಮಾಡಿಕೊಳ್ಳಲೂ ಕೂಡ ಸಹಕಾರಿಯಾಗಿಲ್ಲ. ಅರಿ+ದೈಜ+ಅಂತ ಅಥವಾ ಅರಿ+ದೈಜಾಂತ ಎಂದು ಪದವಿಭಾಗ ಮಾಡಿ ಅರ್ಥವಾಗದೆ ಓದುಗ ಕಣ್ಣು ಕಣ್ಣು ಬಿಡುವ ಸಂಭವವೇ ಹೆಚ್ಚು. ಅದರ ಸರಿಯಾದ ರೂಪ "ಅರಿಯದ ಹೈದ ಅಂತ". ಅರಿಯದ ಎಂಬುದು ಜನರ ಬಾಯಲ್ಲಿ ಅರೀದ ಎಂದಾಗುತ್ತದೆ: ಅಂದರೆ ಯಕಾರ ಹೋಗಿ ದೀರ್ಘ ಬರುತ್ತದೆ. ಹಾಗೆಯೇ ಹೈದ ಹೈಜವಾಗುತ್ತದೆ. ಆದ್ದರಿಂದ ಅದರ ಒಟ್ಟು ರೂಪ 'ಅರೀದ ದೈಜಾಂತ' ಅಥವಾ 'ಅರೀದೈಜಾಂತ' ಎಂದಿದ್ದರೆ ಓದುಗ ಅದಕ್ಕೆ ಅರ್ಥವನ್ನು ಸುಲಭವಾಗಿ ಊಹಿಸುತ್ತಾನೆ. ಆದರೆ ಈ ಸುಳಿವು ಕೂಡ ದೊರಕದ ಹಾಗೆ ಪ್ರಾದೇಶಿಕ ಉಚ್ಚಾರಣೆ ಎಂಬ ನೆಪದಲ್ಲಿ "ಅರಿದೈಜಾಂತ" ಎಂದು ಬಳಸುವುದು ಸರಿಯೆ? ಎಂಬುದನ್ನು ಕೊಂಚ ಯೋಚಿಸಬೇಕಾಗುತ್ತದೆ. ಹಳ್ಳಿಯವರು ಮಹಾಪ್ರಾಣಗಳನ್ನು ಅಲ್ಪಪ್ರಾಣಗಳನ್ನಾಗಿ ಉಚ್ಚರಿಸಿದರೂ ಸಂಗ್ರಾಹಕ ಅದರ ಸರಿಯಾದ ರೂಪವನ್ನು ಇಟ್ಟುಕೊಳ್ಳಬೇಕಾಗುತ್ತದೆ. ಇಲ್ಲದಿದ್ದಲ್ಲಿ ಅರ್ಥಕ್ಕೆ ಚ್ಯುತಿಬರುತ್ತದೆ. ಕೇವಲ ಪೂರ್ವಾರ್ಧ ಮತ್ತು ಉತ್ತರಾರ್ಧದ ಸಾಲುಗಳನ್ನು ತಲೆಕೆಳಗು ಮಾಡುವುದರಿಂದ ಒಂದೇ ಗಾದೆ ಎರಡು ಪ್ರತ್ಯೇಕ ಗಾದೆಗಳಾಗಲು ಸಾಧ್ಯವಿಲ್ಲ ಎಂಬುದಕ್ಕೆ ೧೫೬ ಮತ್ತು ೮೦೨ನೇ ಗಾದೆಗಳು ಹಾಗೂ ೨೨೫ ಮತ್ತು ೮೬೭ನೇ ಗಾದೆಗಳು ನಿದರ್ಶನ. ಇಂಥವುಗಳನ್ನು ತಪ್ಪಿಸಬಹುದಾಗಿತ್ತು. ಇದೇ ತೆರನ ಅನೇಕ ಉದಾಹರಣೆಗಳನ್ನು ಈ ಗ್ರಂಥದಿಂದ ಎತ್ತಿ ತೋರಿಸಬಹುದಾಗಿದೆ. ಶ್ರೀ ಚೌಡೇಗೌಡರು ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಮುಂದಿನ ಸಂಕಲನಗಳನ್ನು ಹೊರತರುವರೆಂದು ಆಶಿಸಲಾಗಿದೆ.

ಸುಧಾ ವಾರಪತ್ರಿಕೆ, ೨ ಸೆಪ್ಟೆಂಬರ್ ೧೯೭೩



# ಸರ್ವಜ್ಞಮೂರ್ತಿಯ ವಚನಗಳು

ಸಂಪಾದಕ: ಜಿ.ಎಂ. ಉಮಾಪತಿಶಾಸ್ತ್ರಿ, ಪ್ರಕಾಶಕರು: ಶಾರದಾ ಭವನ ಪ್ರಕಾಶನ, ಬಾಗಲಕೋಟೆ, ದ್ವಿತೀಯ ಮುದ್ರಣ ೧೯೭೩, ಪುಟಗಳು ೧೩೪+೩೮+೩೪, ಬೆಲೆ: ರೂ. ೫

---

**ಪ್ರ**ಸ್ತುತ ಸಂಕಲನದಲ್ಲಿ ಸಂಪಾದನೆಯ ಸಿದ್ಧವೀರಣ್ಣದೇವರು ಸೇರಿಸಿದ ಆಚರಣೆಯ ಸಂಬಂಧದ ೨೬೫ ತ್ರಿಪದಿಗಳೂ ವೀರಗಣಸ್ತೋತ್ರವೆಂಬ ೧೨೦ ಸರ್ವಜ್ಞ ಮೂರ್ತಿಯ ತ್ರಿಪದಿಗಳೂ ಇವೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸರ್ವಜ್ಞನ ಹೆಸರು ಚಿರಸ್ಥಾಯಿಯಾಗಿ ನಿಲ್ಲುವಂತಹುದು. ಆತನಿಗೆ ಯಾರ ಹಂಗೂ ಯಾವ ಹಂಗೂ ಇರಲಿಲ್ಲ. ಹೀಗಾಗಿ ಸಮಾಜದಲ್ಲಿನ ಲೋಪದೋಷಗಳನ್ನೂ, ಕುಂದುಕೊರತೆಗಳನ್ನೂ ನಿರ್ಭಿಡೆಯಿಂದ ಬಯಲಿಗೆಳೆದಿದ್ದಾನೆ. ಸರ್ವಜ್ಞ ನಾಡಿನ ಉದ್ದಗಲ ಹರಿದಾಡಿ ಅಪಾರವಾದ ಲೋಕಾನುಭವವನ್ನು ಸಂಪಾದಿಸಿಕೊಂಡಿದ್ದನು. ಜೊತೆಗೆ ಹಲವರಿಂದ ವಿದ್ಯೆಯನ್ನು ಕಲಿತಂತೆಯೂ ತಿಳಿದುಬರುತ್ತದೆ. ಅದಕ್ಕೆ "ಸರ್ವಜ್ಞನೆಂಬುವನು ಗರ್ವದಿಂದಾದವನೆ! ಸರ್ವರೊಳೊಂದೊಂದು ನುಡಿಗಲಿತು ವಿದ್ಯದಾ ಪರ್ವತವೆ ಆದ ಸರ್ವಜ್ಞ" ಎಂಬ ತ್ರಿಪದಿ ಸಾಕ್ಷಿಯಾಗಿದೆ.

ಸರ್ವಜ್ಞನ ಕಾಲ ದೇಶ ವರ್ತಮಾನಗಳ ಬಗೆಗೆ ನಿಜಸಂಗತಿಗಳೆಲ್ಲಿಯೂ ನಿರೂಪಿತವಾಗಿಲ್ಲ, ತಿಳಿದೂ ಬಂದಿಲ್ಲ. ಸಿದ್ಧವೀರಣ್ಣದೇವರು ಸರ್ವಜ್ಞ ವಚನಗಳ ಆಚರಣೆಯ ಸಂಬಂಧದ ವಚನಗಳನ್ನು ಸಂಪಾದಿಸಿರುವುದರಿಂದ ಸರ್ವಜ್ಞ ಸಿದ್ಧವೀರಣ್ಣದೇವರಿಗಿಂತ ಹಿಂದಿನವನೆಂಬುದು ನಿರ್ವಿವಾದ. ಈ ಸಿದ್ಧವೀರಣ್ಣದೇವರ ಕಾಲ ಕ್ರಿ.ಶ. ಸುಮಾರು ೧೬೦೦. ಆದ್ದರಿಂದ ಸರ್ವಜ್ಞನ ಕಾಲ ಕ್ರಿ.ಶ. ಸುಮಾರು ೧೫೦೦ ರಿಂದ ೧೫೫೦ ಇರಬಹುದು. ಸರ್ವಜ್ಞನನ್ನು ಸ್ತುತಿಸಿರುವ ಏಕೈಕ ಕವಿ ಎಂದರೆ ವಿರಕ್ತ ಮಹಲಿಂಗದೇವ. ಈತನ ಕಾಲವೂ ಕ್ರಿ.ಶ. ೧೫೫೦ ಇರಬಹುದು. ಸರ್ವಜ್ಞ ಕ್ರಿ.ಶ. ೧೫೦೦ರ ವೇಳೆಗೆ ಇದ್ದನೆಂಬುದಕ್ಕೆ ಇದರಿಂದಲೂ ಪುಷ್ಟಿ ದೊರೆಯುತ್ತದೆ.

ಸರ್ವಜ್ಞನ ವಚನಗಳ ಸಂಖ್ಯೆ ಎಷ್ಟು ಎಂಬುದು ಒಂದು ಜಟಿಲವಾದ ಸಮಸ್ಯೆಯಾಗಿದೆ. ಎರಡು ಸಾವಿರಕ್ಕಿಂತ ಹೆಚ್ಚು ವಚನಗಳು ಸರ್ವಜ್ಞನ ಅಂಕಿತದಲ್ಲಿ ದೊರೆಯುತ್ತವೆ. ಸರ್ವಜ್ಞ ವಚನಗಳ ಹಲವಾರು ಹಸ್ತಪ್ರತಿಗಳಲ್ಲಿ ವಚನಗಳ ಸಂಖ್ಯೆಯಲ್ಲಾಗಲಿ, ಪದ್ಧತಿ ಅಥವಾ ವರ್ಗಗಳ ವಿಂಗಡಣೆಯಲ್ಲಾಗಲಿ ಏಕರೂಪತೆ ಕಂಡುಬರುವುದಿಲ್ಲ. ಆದರೆ ಸಿದ್ಧವೀರಣ್ಣದೇವರು ಸಂಪಾದಿಸಿರುವ ಆಚರಣೆಯ ಸಂಬಂಧದ ೨೬೫ ವಚನಗಳೂ ಸರ್ವಜ್ಞನ ನಿಜವಚನಗಳೆಂದೇ ಭಾವಿಸಬಹುದಾಗಿದೆ.

ಪ್ರಕೃತ ಗ್ರಂಥದಲ್ಲಿ "ವೀರಗಣ ಸ್ತೋತ್ರ" ಎಂಬ ಹೆಸರಿನಲ್ಲಿ ೧೨೦ ತ್ರಿಪದಿಗಳನ್ನು ಸರ್ವಜ್ಞನ ಹೆಸರಿಗೆ ಅಂಟಿಸಲಾಗಿದೆ. ಸರ್ವಜ್ಞಮೂರ್ತಿಯ ಹೆಸರಿನಲ್ಲಿ ಬೇರೆ ಯಾರೋ ಈ ತ್ರಿಪದಿಗಳನ್ನು ರಚಿಸಿರಬೇಕೆಂದು ಕಾಣುತ್ತದೆ. ಅಲ್ಲದೆ ಈ ವಚನಗಳ ಕಡೆಯಲ್ಲಿ "ವೀರಮಾಹೇಶ್ವರನ ವೀರಗಣ ಸ್ತೋತ್ರವದು । ಹಾರೈಸಿ ಕೇಳೆ ಪರಶಿವನ ಕೃಪೆಯೊದಗಿ ಸೇರ್ವ ಕೈಲಾಸ ಸರ್ವಜ್ಞ" ಎಂಬ ಪದ್ಯದಿಂದ ಇದು ಅನ್ಯಕೃತವೆಂಬುದು ಸ್ಪಷ್ಟಪಡುತ್ತದೆ.

ಶ್ರೀ ಜಿ.ಎಂ. ಉಮಾಪತಿಶಾಸ್ತ್ರಿಗಳು ಸರ್ವಜ್ಞಮೂರ್ತಿಯ ಈ ದ್ವಿತೀಯ ಮುದ್ರಣಕ್ಕೆ ಸುಮಾರು ೧೨೨ ಪುಟಗಳ ದೀರ್ಘವಾದ ಪ್ರಸ್ತಾವನೆಯನ್ನು ಬರೆದಿದ್ದಾರೆ. ತುಂಬ ಉಪಯುಕ್ತ ವಿಷಯಗಳನ್ನು ಇದರಲ್ಲಿ ಚರ್ಚಿಸಿದ್ದಾರೆ. ಹಲವಾರು ವಿದ್ವಾಂಸರ ಅಭಿಪ್ರಾಯಗಳನ್ನು ಕ್ರೋಡೀಕರಿಸಿಕೊಟ್ಟಿದ್ದಾರೆ. ಇಷ್ಟಾದರೂ ಕವಿಕಾಲದ ಬಗೆಗೆ ಯಾವ ಹೊಸ ಬೆಳಕೂ ಬಿದ್ದಂತಿಲ್ಲ. ಶ್ರೀಯುತರು ಅಪಾರ ಪರಿಶ್ರಮದಿಂದ ಈವರೆಗೆ ಹೊರಬಿದ್ದಿರುವ ಸರ್ವಜ್ಞ ವಚನಗಳ ವಿವಿಧ ಸಂಸ್ಕರಣಗಳು, ಇವರಿಗೆ ದೊರೆತ ಹಸ್ತಪ್ರತಿಗಳು ಇವುಗಳ ಬಗೆಗೆ ವಿವರಣಾತ್ಮಕ ಮಾಹಿತಿಯನ್ನು ನೀಡಿ ತುಂಬ ಉಪಕಾರ ಮಾಡಿದ್ದಾರೆ. ಜೊತೆಗೆ ಸರ್ವಜ್ಞನ ಮೇಲೆ ಇತರರಿಂದ ಆಗಿರುವ ಪ್ರಭಾವ, ಇತರ ಕವಿಗಳ ಮೇಲೆ ಸರ್ವಜ್ಞನ ಪ್ರಭಾವ ಎಷ್ಟರಮಟ್ಟಿಗೆ ಆಗಿದೆ ಎಂಬುದನ್ನು ಸಾಧಾರವಾಗಿ ನಿರೂಪಿಸಿದ್ದಾರೆ. ಸರ್ವಜ್ಞನ ಬಗೆಗೆ ಸಾಕಷ್ಟು ವ್ಯಾಸಂಗ ಮಾಡಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಈ ಅಭಿಪ್ರಾಯಗಳನ್ನು ಸಂಪೂರ್ಣವಾಗಿ ಒಪ್ಪಲಾಗದಿದ್ದರೂ ನಿರಾಧಾರವಾಗಿ ತಿರಸ್ಕರಿಸುವಂತಿಲ್ಲ. ಈ ದೃಷ್ಟಿಯಿಂದ ಈ ಗ್ರಂಥವನ್ನು ಸ್ವಾಗತಿಸಬಹುದಾಗಿದೆ.

ಸುಧಾ ವಾರಪತ್ರಿಕೆ, ಸಂಪುಟ–೯, ಸಂಚಿಕೆ–೪೧, ೧೪ ಅಕ್ಟೋಬರ್ ೧೯೭೩



# ಮಲ್ಲಿನಾಥ ಪುರಾಣಂ

ಸಂಪಾದಕರು: ಡಾ. ಬಿ.ಬಿ. ಹೆಂಡಿ, ಎಂ.ಎ., ಪಿಎಚ್.ಡಿ., ಪ್ರಕಾಶಕರು: ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪುಟಗಳು ೪೦೦+೫೦, ಪ್ರಥಮ ಮುದ್ರಣ: ೧೯೭೪, ಬೆಲೆ: ರೂ. ೧೫.೦೦

---

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪಂಪ ಎಷ್ಟು ಪ್ರಸಿದ್ಧನೋ ಅವನಾದ ಮೇಲೆ ಬಂದ ಅಭಿನವ ಪಂಪನೂ ಅಷ್ಟೇ ಪ್ರಸಿದ್ಧನಾಗಿದ್ದಾನೆ. ಈತನಿಗೆ ತನ್ನ ಹೆಸರನ್ನು ನಾಗಚಂದ್ರ ಎಂದು ಕರೆದುಕೊಳ್ಳುವುದಕ್ಕಿಂತಲೂ ಅಭಿನವಪಂಪ ಎಂದು ಕರೆಸಿಕೊಳ್ಳುವುದರಲ್ಲಿ ಹೆಚ್ಚು ಆಸಕ್ತಿ, ಗೌರವ, ಪ್ರತಿಷ್ಠೆಯನ್ನು ತಳೆದಂತೆ ಕಂಡುಬರುತ್ತದೆ.

ನಾಗಚಂದ್ರ ರಾಮಚಂದ್ರಚರಿತ ಪುರಾಣ ಅಥವಾ ಪಂಪರಾಮಾಯಣ ಮತ್ತು ಮಲ್ಲಿನಾಥಪುರಾಣ ಎಂಬ ಎರಡು ಚಂಪುಕೃತಿಗಳನ್ನು ರಚಿಸಿ ಅಜರಾಮರನಾಗಿದ್ದಾನೆ. ಅಲ್ಲದೆ ಜಿನಮುನಿತನಯ, ಜಿನಾಕ್ಷರಮಾಲೆ, ಯೋಗಾಮೃತ, ಕಾಮನಕಾಳಗ –ಎಂಬ ನಾಲ್ಕು ಕೃತಿಗಳನ್ನೂ ಬರೆದಿರಬೇಕೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿರುವುದನ್ನು ಮತ್ತೆ ಹಲವು ವಿದ್ವಾಂಸರು ಸಕಾರಣವಾಗಿ ನಿರಾಕರಿಸಿದ್ದಾರೆ. ಆದರೆ ಈತನು ಬಿಜಾಪುರದ ಒಂದು ಶಾಸನವನ್ನು ಬರೆದಿದ್ದಾನೆಂದು ಎಲ್ಲರೂ ಏಕಕಂಠದಿಂದ ಒಪ್ಪಿಕೊಳ್ಳುತ್ತಾರೆ. ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿ ಬಾಳಿ ಬದುಕಿ ಪ್ರಸಿದ್ಧನಾದ ಈತನು ಜೈನಸಂಪ್ರದಾಯ ಪರವಾದ ರಾಮಾಯಣವನ್ನು ೧೯ನೆಯ ತೀರ್ಥಂಕರನಾದ ಮಲ್ಲಿನಾಥನನ್ನು ಕುರಿತು ಹದಿನಾಲ್ಕು ಆಶ್ವಾಸಗಳ ಮಲ್ಲಿನಾಥ ಪುರಾಣವೆಂಬ ಚಂಪೂಗ್ರಂಥವನ್ನು ಬರೆದಿದ್ದಾನೆ.

ಮಲ್ಲಿನಾಥಪುರಾಣವನ್ನು ಕರ್ನಾಟಕ ಕಾವ್ಯಕಲಾಮಂಜರಿಯವರು ಬಹಳ ಹಿಂದೆಯೇ ಸಂಪಾದಿಸಿ ಪ್ರಕಟಿಸಿದ್ದರು. ಆದರೆ ಈ ಕಾವ್ಯ ಮರುಮುದ್ರಣವನ್ನಾಗಲಿ, ಮರುಸಂಸ್ಕರಣವನ್ನಾಗಲಿ ಕಂಡಿರಲಿಲ್ಲ. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದವರು ಈ ಕಾವ್ಯದ ಅಧಿಕೃತ ಸಂಸ್ಕರಣವನ್ನು ಹೊರತಂದಿರುವುದು ತುಂಬಾ ಶ್ಲಾಘ್ಯವಾದುದು. ಈ ಗ್ರಂಥದ ಸಂಪಾದಕರು ಪ್ರಸ್ತಾವನೆಯಲ್ಲಿ ಈವರೆಗೆ ಈ ಕವಿಯ ಬಗೆಗೆ ಬಂದಿರುವ ಎಲ್ಲ ಮಾಹಿತಿಗಳನ್ನು ಉಪಯೋಗಿಸಿಕೊಂಡಿದ್ದಾರೆ. ಈತನ ಕಾಲ, ದೇಶ, ವರ್ತಮಾನ ಕೃತಿಗಳು ಅವುಗಳ ಸಾರಾಸಾರ ವಿವೇಚನೆ – ಇವುಗಳನ್ನು ಸಂಕ್ಷಿಪ್ತವಾಗಿಯಾದರೂ ಸಮರ್ಪಕವಾಗಿ ಮಾಡಿಕೊಟ್ಟಿದ್ದಾರೆ.

ಮಲ್ಲಿನಾಥಪುರಾಣವನ್ನು ಐದುಹಸ್ತಪ್ರತಿಗಳ ಆಧಾರದಿಂದ ಸಂಪಾದಿಸಿರುವುದಾಗಿ ಅದರ ಸಂಪಾದಕರು ಹೇಳಿಕೊಂಡಿದ್ದಾರೆ. ಇವುಗಳಲ್ಲಿ ಒಂದು ಮುದ್ರಿತ ಪ್ರತಿ, ಮೂರು ತಾಳೆಪ್ರತಿಗಳು, ಮತ್ತೊಂದು ಕಾಗದದ ಪ್ರತಿ. ಇಷ್ಟನ್ನು ಬಿಟ್ಟು ಮತ್ತಾವ ವಿವರಗಳನ್ನೂ ಹಸ್ತಪ್ರತಿಗಳ ಬಗೆಗೆ ಕೊಟ್ಟಿಲ್ಲ. ಅಲ್ಲದೆ ಪಾಠಾಂತರಗಳನ್ನು ನಿರ್ಧರಿಸುವಲ್ಲಿ ಅನುಸರಿಸಿರುವ ವಿಧಾನ, ಅಡಿಟಿಪ್ಪಣಿಯಲ್ಲಿ ಅವನ್ನು ಸೂಚಿಸಿರುವ ಕ್ರಮ –ಇವುಗಳ ಬಗೆಗೆ ಏನನ್ನೂ ಹೇಳಿಲ್ಲ. ಪಾಠಾಂತರಗಳನ್ನು ನಿರ್ದೇಶಿಸುವಲ್ಲಿ ಕೆಲವೆಡೆ ಒಂದೊಂದೇ ಸಂಖ್ಯೆಯನ್ನು ಮತ್ತೆ ಕೆಲವೆಡೆ ಎರಡೆರಡು ಸಂಖ್ಯೆಗಳನ್ನು ಕೊಡಲಾಗಿದೆ. ಏಕಾಕ್ಷರದ ಪಾಠಾಂತರಗಳನ್ನು ನಿರ್ದೇಶಿಸುವಲ್ಲಿ ಒಂದೇ ಸಂಖ್ಯೆಯನ್ನು ಅದಕ್ಕಿಂತ ಹೆಚ್ಚಾದ ಅಕ್ಷರಗಳ ಪಾಠಾಂತರಗಳನ್ನು ಗುರುತಿಸುವಲ್ಲಿ ಎರಡೆರಡು ಸಂಖ್ಯೆಗಳನ್ನು ಕೊಟ್ಟಂತಿದೆ. ಈ ಕ್ರಮ ತುಂಬ ಜಟಿಲವಾದುದಷ್ಟೇ ಅಲ್ಲ ಅರ್ಥೈಸಿಕೊಳ್ಳುವುದೂ

ಕಠಿಣವಾದುದು. ಉದಾ: ಲೋಕಾಗ್ರದೊಳ್ನಿ[೫]ಶ್ಚಲಮಿ[೬]ರೆ (೧-೨) ಅಡಿಟಿಪ್ಪಣಿಯಲ್ಲಿ: ೫. ಳಿಪ್ಪ (ಮಾ) ೬. ದೂ (ಪಾ) ಎಂದು ಕೊಟ್ಟಿದೆ. ಇದರ ಅನ್ವಯ ಸಂದಿಗ್ಧವಾದುದು. ಹಾಗೆಯೇ ಅನವಶ್ಯ ಮತ್ತು ಅಪಪಾಠಗಳನ್ನು ಕೊಡದೆ ಬಿಡಬಹುದಾಗಿತ್ತು. ಉದಾ: (೧)[೩] ಅವಲೋ[೪]ಹಂ ಪಿಂಗೆ (೧-೨). ಪಾಠಾಂತರ-೩. ಒನ (ಮಾ) (೨) ದಯೆಯಿಂದಾಚಾರ್ಯ ೪. ಸಂಪತ್ತಿಯಂ (೧-೩) ಪಾಠಾಂ ೪ ಳಿರ (ವ). ಈ ಪಾಠಾಂತರಗಳನ್ನು ಮೂಲದ ಜೊತೆ ಹೊಂದಿಸಿಕೊಳ್ಳುವುದೇ ಕಷ್ಟವಾಗಿದೆ.

ಈ ಕಾವ್ಯದ ವೃತ್ತ ಪದ್ಯಗಳಿಗೆ ನಾಮನಿರ್ದೇಶನ ಮಾಡಿದ್ದರೆ ಓದುಗರಿಗೆ ಪ್ರಯೋಜನವಾಗುತ್ತಿತ್ತು. ಹಾಗೆಯೇ ಕಂದಪದ್ಯಗಳನ್ನು ಹೆಸರಿಸಬೇಕಾಗಿತ್ತು. ಸಂಧಿ, ಸಮಾಸ ಪದಗಳನ್ನು ಓದುಗರ ಸೌಲಭ್ಯಕ್ಕೋಸ್ಕರ ಬಿಡಿಸಿಕೊಟ್ಟಿದ್ದರೆ ಹೆಚ್ಚು ಪ್ರಯೋಜನವಾಗುತ್ತಿತ್ತು. ಪ್ರಾಚೀನ ಕಾವ್ಯಗಳ ವ್ಯಾಸಂಗ ಕೊನೆಗಾಣುತ್ತಿರುವ ಈ ಕಾಲದಲ್ಲಿ ಕೊನೆಯ ಪಕ್ಷ ಈ ಕೆಲವು ಸೌಲಭ್ಯಗಳನ್ನಾದರೂ ಆಧುನಿಕ ವಿದ್ವಾಂಸರಿಗೆ ಒದಗಿಸಿಕೊಡಬೇಕಾಗಿತ್ತು.

ಮುದ್ರಣದಲ್ಲಿ ಪ್ರತಿಪದ್ಯಗಳ ನಡುವೆ ಬಹಳ ಧಾರಾಳವಾಗಿ ಸ್ಥಳವನ್ನು ಬಿಡಲಾಗಿದೆ. ಅನೇಕ ಪುಟಗಳಲ್ಲಿ ಈಗ ಅಚ್ಚುಮಾಡಿರುವ ಪದ್ಯಗಳಿಗಿಂತ ಮತ್ತೆ ಎರಡು ಮೂರು ಪದ್ಯಗಳನ್ನು ಸೇರಿಸಬಹುದಾಗಿತ್ತು. ಇದರಿಂದ ಹಲವಾರು ಪುಟಗಳ ಉಳಿತಾಯವಾಗುತ್ತಿತ್ತು.

ಮಲ್ಲಿನಾಥಪುರಾಣದ ಪಾಠಸಂಸ್ಕರಣದಲ್ಲಿ ಅಂತಹ ಕ್ಲೇಶಗಳೇನೂ ಕಂಡುಬಂದಿಲ್ಲ. ಸಂಪಾದಕರು ಸಮರ್ಥವಾಗಿಯೇ ಪಾಠನಿರ್ಧಾರಮಾಡಿದ್ದಾರೆ. ಪದ್ಯಗಳ ಅಕಾರಾದಿ, ಶಬ್ದಕೋಶ, ಜೈನಪಾರಿಭಾಷಿಕ ಪದಗಳು ವಿಸ್ತಾರವಾದ ಪ್ರಸ್ತಾವನೆಯೊಂದಿಗೆ ಈ ಕಾವ್ಯವನ್ನು ಹೊರತಂದಿರುವ ಸಂಪಾದಕರನ್ನೂ ಇದನ್ನು ಪ್ರಕಟಿಸಿರುವ ಕರ್ನಾಟಕ ವಿಶ್ವವಿದ್ಯಾಲಯವನ್ನೂ ಅಭಿನಂದಿಸುತ್ತೇವೆ.

ಕನ್ನಡ ಕವಿಯಾದ ಆದಿಪಂಪನ ಬಗ್ಗೆ ನಾಗರಾಜನು ಹೇಳಿರುವ 'ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ ಪಂಪನಾವಗಂ' ಎಂಬ ಮಾತು ಅಭಿನವ ಪಂಪನ ಬಗ್ಗೆಯೂ ಅಷ್ಟೇ ಔಚಿತ್ಯಪೂರ್ಣವಾಗಿ ಅನ್ವಯವಾಗುತ್ತದೆ ಎಂದು ಧಾರಾಳವಾಗಿ ಹೇಳಬಹುದಾಗಿದೆ.

ಸುಧಾ, ೫ ಅಕ್ಟೋಬರ್ ೧೯೭೫



# ಕವಿಗಳು ಕಂಡ ಕರ್ನಾಟಕ

ಸಂಪಾದಕರು: ಎಸ್. ಚನ್ನಪ್ಪ. ಪ್ರಕಾಶಕರು: ಹಂಸಧ್ವನಿ ಪ್ರಕಾಶನ, ರಾಜಾಜಿನಗರ, ಬೆಂಗಳೂರು-೧೦, ಮೊದಲನೆಯ ಮುದ್ರಣ: ೧೯೭೪, ಪುಟಗಳು ೧೦+೭೨, ಬೆಲೆ: ಸಾದಾಪ್ರತಿ ರೂ. ೫.೦೦, ಕ್ಯಾಲಿಕೋ ಪ್ರತಿ ರೂ. ೮.೦೦

ಸಹಸ್ರಾರು ವರ್ಷಗಳ ಪ್ರಾಚೀನತೆಯುಳ್ಳ ಕರ್ಣಾಟಕ ದಾರ್ಶನಿಕರ ರಸಋಷಿಗಳ ಕವಿಪುಂಗವರ ಪುಣ್ಯದ ಬೀಡಾಗಿದೆ. ಈ ನಾಡಿನ ಮಹಿಮೆಯನ್ನು ಹಾಡಿ ಹೊಗಳಿ ಅನೇಕ ಕವಿಗಳು ಕೃತಾರ್ಥರಾಗಿದ್ದಾರೆ. ಪೌರಾಣಿಕ, ಐತಿಹಾಸಿಕ ಮತ್ತು ಚಾರಿತ್ರಿಕ ಮಹತ್ವಗಳಿಂದ ಕೂಡಿರುವ ಈ ನಾಡು ಉಜ್ವಲ ಭವ್ಯಪರಂಪರೆಯನ್ನು ರೂಪಿಸಿದೆ. ಈ ಪುಣ್ಯಭೂಮಿಯಲ್ಲಿ ಜನ್ಮತಳೆಯುವುದೇ ಒಂದು ಸುಕೃತ ಎಂದು ಭಾವಿಸಿದ್ದಾರೆ ನಮ್ಮ ಕವಿ ಸಮೂಹ.

ಈ ನಾಡಿಗೆ ಕರ್ಣಾಟಕ ಎಂಬ ಹೆಸರೇ ರೂಢಮೂಲವಾಗಿತ್ತು ಎಂಬುದಕ್ಕೆ ಅನೇಕ ದಾಖಲೆಗಳಿವೆ. ಹೀಗಿದ್ದೂ ಕೂಡ ಈ ನಾಡು ಕೆಲವು ಕಾಲ 'ಮೈಸೂರು ರಾಜ್ಯ' ಎನ್ನಿಸಿಕೊಂಡಿದ್ದು ಮತ್ತೆ ಈಗ ಕರ್ಣಾಟಕ ಎಂಬ ಅಭಿಧಾನವನ್ನು ತಳೆದು ನಿಂತಿದೆ. ಈ ನಾಡಿನ ಅರಸರಿಗೆ 'ಕರ್ಣಾಟಕ ರತ್ನಸಿಂಹಾಸನಾಧೀಶ್ವರ'ರು ಎಂಬ ನಾಮಾಂಕಿತವಿದ್ದುದು ಸರ್ವಶ್ರುತವಾದುದು. ಆದರೂ ಕೂಡ ಈ ಹುಟ್ಟುಹೆಸರಾದ ಕರ್ಣಾಟಕವನ್ನು ಬಹುಕಷ್ಟದಿಂದ ಲೌಕಿಕವಾಗಿ ಸಮರ್ಥಿಸಿಕೊಳ್ಳಬೇಕಾಗಿ ಬಂದುದು ಒಂದು ವೈಚಿತ್ರ್ಯವೇ ಸರಿ. ಇದು ಎಂತಾದರೂ ಇರಲಿ, ಮೈಸೂರು ಈಗ ಕರ್ನಾಟಕ ಎಂದಾದುದೇ ಒಂದು ಸಮಾಧಾನದ ಸಂಗತಿ.

'ಕವಿಗಳು ಕಂಡ ಕರ್ಣಾಟಕ'ದಲ್ಲಿ ಪ್ರಾಚೀನ ಕವಿಗಳು ಈ ನಾಡನ್ನು ಕುರಿತು ಹಾಡಿರುವ ಕೆಲವು ಪದ್ಯಗಳನ್ನು ಸಂಗ್ರಹಿಸಲಾಗಿದೆ. ಜೊತೆಗೆ ಒಂದೇ ಒಂದು ಶಾಸನಪದ್ಯವನ್ನೂ ಕೊಡಲಾಗಿದೆ. ನಾಡು-ನುಡಿಗಳ ಬಗೆಗೆ ಅಭಿಮಾನ ಮೂಡುವಂತೆ ಮೂಡುವ ಕೆಲವು ಕಾರ್ಯಕ್ರಮಗಳಲ್ಲಿ ಇದೂ ಒಂದು. ಇಂತಹ ಕೆಲಸವನ್ನು ಯಾರು ಮಾಡಿದರೂ ಮೆಚ್ಚುವಂತಹುದೆ. ಅಂತಹ ಕೆಲಸವನ್ನು ಶ್ರೀ ಚನ್ನಪ್ಪನವರು ಮಾಡಿದ್ದಾರೆ. ಈ ದಿಶೆಯಲ್ಲಿ ಇದು ಮೊದಲನೆಯ ಕೆಲಸವೇನೂ ಅಲ್ಲ, ಇದು ಸಮಗ್ರವಾದ ಕೆಲಸವೂ ಅಲ್ಲ. ಈ ನಾಡಿನ ಮಹಿಮೆಯನ್ನು ಪ್ರತಿಯೊಬ್ಬ ಕನ್ನಡ ಕವಿಯೂ ಪ್ರತ್ಯಕ್ಷವಾಗಿಯಾಗಲಿ ಪರೋಕ್ಷವಾಗಿಯಾಗಲಿ ವರ್ಣಿಸಿರುವುದು ಕಂಡುಬರುತ್ತದೆ. ಅವರಲ್ಲಿ ಕೆಲವು ಪ್ರಮುಖ ಕವಿಗಳ ಕಾವ್ಯಗಳಿಂದ ಸ್ವಲ್ಪಭಾಗವನ್ನು ಆರಿಸಿಕೊಂಡು ಇಲ್ಲಿ ಪೋಣಿಸಲಾಗಿದೆ.

ಪ್ರಕೃತ ಸಂಕಲನದ ಬಗೆಗೆ ಕೆಲವು ಮಾತುಗಳನ್ನು ಹೇಳುವುದು ಅನಿವಾರ್ಯವಾಗಿದೆ. ಇಲ್ಲಿಯ ಕವನಗಳನ್ನು 'ಸ್ವಲ್ಪ ಹೆಚ್ಚು ಕಡಿಮೆ ಕಾಲಾನುಕ್ರಮಣಿಕೆಯನ್ನು ಅನುಸರಿಸಿ ಜೋಡಿಸಲಾಗಿದೆ' ಎಂದಿದ್ದಾರೆ ಸಂಪಾದಕರು. ಆದರೆ 'ಕನ್ನಡಮೆನಿಪ್ಪಾ ನಾಡು' ಎಂಬ ಆಂಡಯ್ಯನ ಪದ್ಯಗಳಾದ ಮೇಲೆ 'ಕನ್ನಡ ಜನಪದ' ಎಂಬ ನೃಪತುಂಗನ ಪದ್ಯಗಳೂ ಆಮೇಲೆ ಪಂಪನ 'ಬನವಾಸಿ' ವರ್ಣನೆಯೂ ಬಂದಿದೆ. ಇದು ಕಾಲಕ್ರಮದಲ್ಲಿಲ್ಲ. ಆದರೆ ಪರಿವಿಡಿಯಲ್ಲಿ 'ಕರ್ಣಾಟಕ ದೇಶ' ಎಂಬ ಶಾಸನಪದ್ಯವೂ, 'ಕನ್ನಡ ಜನಪದ' ಎಂಬ ನೃಪತುಂಗನ ಭಾಗವೂ ಆಮೇಲೆ ಪಂಪನ 'ಬನವಾಸಿ' ತರುವಾಯ ಆಂಡಯ್ಯನ ಕನ್ನಡಮೆನಿಪ್ಪಾನಾಡು ಬಂದಿದೆ. ಇದು ಕಾಲಕ್ರಮದಲ್ಲೇನೋ ಇದೆ. ಈ ಸಂಕಲನದಲ್ಲಿ ಕೊಟ್ಟಿರುವ ಭಾಗಗಳಿಗೆ ಸಂಬಂಧಿಸಿದಂತೆ ಕವಿ ಕಾವ್ಯ ವಿಚಾರವನ್ನು ಸ್ವಲ್ಪಮಟ್ಟಿಗೆ ಹೇಳಿದ್ದರೆ ಹೆಚ್ಚು ಪ್ರಯೋಜನವಾಗುತ್ತಿತ್ತು. ಜೊತೆಗೆ ಉದ್ಧರಿಸಿರುವ ಭಾಗಗಳ ಹೊಸಗನ್ನಡ ಗದ್ಯಾನುವಾದವನ್ನಾಗಲಿ, ಸಾರಾಂಶವನ್ನಾಗಲಿ ಕೊಟ್ಟಿದ್ದರೆ ಸಾಮಾನ್ಯ ಜನತೆಗೂ ಇದು ಮತ್ತಷ್ಟು ಪ್ರಯೋಜನವಾಗುತ್ತಿತ್ತು. ಅಲ್ಲದೆ ಶಾಸನದಿಂದ ಎತ್ತಿಕೊಟ್ಟಿರುವ ಪದ್ಯದ ಜೊತೆಗೆ ಆ ಶಾಸನದ ಕಾಲ, ಸ್ಥಳ ಇತ್ಯಾದಿ ವಿವರಗಳನ್ನೂ ಸೂಚಿಸಬಹುದಾಗಿತ್ತು. ೭೨ ಪುಟಗಳ ಈ ಪುಟ್ಟ ಕೃತಿಗೆ ಇಟ್ಟಿರುವ ಬೆಲೆ ಮುಟ್ಟಿ ನೋಡಿಕೊಳ್ಳುವಂತಹುದು. ಈ ಕೆಲವು ಅರೆಕೊರೆಗಳನ್ನು ಸರಿಪಡಿಸಿಕೊಂಡು ಮತ್ತೊಂದು ಮುದ್ರಣವನ್ನೂ ಈ ಕೃತಿ ಕಾಣುವಂತಾದರೆ ಕನ್ನಡ ಜನತೆಗೆ ಇದು ಒಂದು ಉಪಯುಕ್ತ ಗ್ರಂಥವಾಗಬಹುದು.

■

# ಗದಾಯುದ್ಧ ದರ್ಪಣಂ

ವ್ಯಾಖ್ಯಾನಕಾರ ಮತ್ತು ಪ್ರಕಾಶಕ: ಪ್ರೊ. ಡಿ. ಸುಬ್ರಾಯಭಟ್, ಸರಕಾರಿ ಕಲಾಶಾಲೆ, ಅಂಚೆ ವಿದ್ಯಾನಗರ, ಕಾಸರಗೋಡು–೩ (ಕೇರಳ), ಮೊದಲನೆಯ ಮುದ್ರಣ ೧೯೭೫, ಪುಟಗಳು : viii+೩೬೦, ಬೆಲೆ: ರೂ. ಇಪ್ಪತ್ತು ರೂಪಾಯಿ

---

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹತ್ತನೆಯ ಶತಮಾನವನ್ನು ಸುವರ್ಣಯುಗವೆಂದು ಕರೆಯುತ್ತಾರೆ. ಈ ಶತಮಾನದಲ್ಲೇ ಕವಿಚಕ್ರವರ್ತಿಗಳಲ್ಲಿ ಒಬ್ಬನೂ ಜಿನಸಮಯದೀಪಕನೂ ಆದ ರನ್ನ ಜನ್ಮತಳೆದಿದ್ದು, ಈತನು ಲೌಕಿಕ, ಆಗಮಿಕ ಕಾವ್ಯಗಳೆರಡನ್ನೂ ರಚಿಸಿದ್ದಾನೆ. ಅವುಗಳಲ್ಲಿ ಪರಶುರಾಮ ಚರಿತೆ, ಚಕ್ರೇಶ್ವರ ಚರಿತೆ ಇನ್ನೂ ಉಪಲಬ್ಧವಿಲ್ಲ. ರನ್ನ ಪ್ರತಿಭಾವಂತ ಕವಿ. ಅತ್ಯಂತ ಆತ್ಮಪ್ರತ್ಯಯದಿಂದ ಕೂಡಿದವನು. ಆದುದರಿಂದಲೇ 'ಫಣಾಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪರೀಕ್ಷಿಪಂಗೆಟೆರ್ದೆಯೇ' ಎಂದು ಪ್ರಶ್ನಿಸಿದ್ದಾನೆ. ಸದ್ಯದಲ್ಲಿ ರನ್ನನ ಉಪಲಬ್ಧ ಕೃತಿಗಳು ಅಜಿತತೀರ್ಥಂಕರ ಪುರಾಣ ಮತ್ತು ಗದಾಯುದ್ಧ ಅಥವಾ ಸಾಹಸಭೀಮವಿಜಯ. ಇವೆರಡೂ ಚಂಪೂ ಕೃತಿಗಳು.

ಪ್ರಕೃತ ಗದಾಯುದ್ಧ ಅಥವಾ ಸಾಹಸಭೀಮವಿಜಯದಲ್ಲಿ ರನ್ನ ತನ್ನ ಆಶ್ರಯದಾತನಾದ ಇಜೀವಬೆಡಂಗ ಸತ್ಯಾಶ್ರಯನನ್ನು ಭೀಮಸೇನನೊಡನೆ ಸಮೀಕರಿಸಿದ್ದಾನೆ. ಗದಾಯುದ್ಧಕ್ಕೆ ಪಂಪನ ವಿಕ್ರಮಾರ್ಜುನವಿಜಯ, ಭಾಸ ಭಟ್ಟನಾರಾಯಣನ ಊರುಭಂಗ, ವೇಣೀಸಂಹಾರ ನಾಟಕಗಳು ಆಸರೆಯಾಗಿದ್ದರೂ ರನ್ನ ಈ ಕಾವ್ಯದುದ್ದಕ್ಕೂ ತನ್ನ ಅಸಾಧಾರಣ ಪ್ರತಿಭೆಯನ್ನು ಸ್ವಂತಿಕೆಯನ್ನು ಮೆರೆದಿದ್ದಾನೆ. ಈ ಕಾವ್ಯದ ಪಾತ್ರಸೃಷ್ಟಿ, ನಾಟಕೀಯ ಪ್ರಜ್ಞೆ, ರಸಪ್ರತಿಪಾದನ ವಿಧಾನ, ಅದ್ವಿತೀಯ ಶೈಲಿ –ಇವೇ ಮೊದಲಾದವು ರನ್ನನ ಕವಿತಾ ಸಾಮರ್ಥ್ಯಕ್ಕೆ ಉಜ್ವಲ ನಿದರ್ಶನಗಳಾಗಿವೆ. ಗದಾಯುದ್ಧ ಅತ್ಯಂತ ಪ್ರಸಿದ್ಧವೂ ಜನಪ್ರಿಯವೂ ಆದುದು. ರನ್ನನ ಕಾಲದೇಶ ವರ್ತಮಾನಗಳನ್ನು ಕೃತಿಗಳನ್ನು ಕುರಿತು ಅಪಾರವಾದ ಸಾಹಿತ್ಯ ಈಗಾಗಲೇ ಪ್ರಕಟವಾಗಿದೆ. ಗದಾಯುದ್ಧವನ್ನು ಕುರಿತು ಹಲವಾರು ವಿಮರ್ಶಾತ್ಮಕ ಲೇಖನಗಳೂ ಕೃತಿಗಳು ಹುಟ್ಟಿಕೊಂಡಿವೆ. ಆಚಾರ್ಯ ಬಿಎಂಶ್ರೀ ಅವರು ಇದನ್ನು ನಾಟಕ ರೂಪದಲ್ಲಿ ಸಂಗ್ರಹಿಸಿದ್ದಾರೆ. ಪ್ರಾಚಾರ್ಯ ತೀನಂಶ್ರೀ ಅವರು ಗದಾಯುದ್ಧ ಸಂಗ್ರಹವನ್ನು ಟಿಪ್ಪಣಿ ಸಮೇತವಾಗಿ ಪ್ರಕಟಿಸಿದ್ದಾರೆ. ಡಾ. ರಂ.ಶ್ರೀ. ಮುಗಳಿ, ಜಿ.ಪಿ. ರಾಜರತ್ನಂ, ಸೇಡಿಯಾಪು ಕೃಷ್ಣಭಟ್ಟ ಇವರೇ ಮೊದಲಾದ ವಿದ್ವಾಂಸರು ಈ ಕ್ಷೇತ್ರದಲ್ಲಿ ವಿಶೇಷವಾಗಿ ಕೃಷಿಗೈದಿದ್ದಾರೆ. ಈ ದಿಸೆಯಲ್ಲಿ ಪ್ರೊ. ಸುಬ್ರಾಯಭಟ್ಟರು ಮಾಡಿರುವ 'ಗದಾಯುದ್ಧ ದರ್ಪಣ' ಕಾರ್ಯ ಅಭಿನಂದನಾರ್ಹವಾಗಿದೆ.

ಪ್ರಸ್ತುತ 'ಗದಾಯುದ್ಧ ದರ್ಪಣಂ' ಗ್ರಂಥದಲ್ಲಿ ಮೂಲಪದ್ಯಗಳನ್ನು ಅವುಗಳ ಅನ್ವಯಾನುಸಾರ ಪ್ರತಿಪದಾರ್ಥವನ್ನು ಆಮೇಲೆ ಆ ಪದ್ಯಗಳ ತಾತ್ಪರ್ಯವನ್ನೂ ಕೊಡಲಾಗಿದೆ. ಅದಾದ ಮೇಲೆ ಅಲಂಕಾರ, ರಸ, ವ್ಯಾಕರಣಾಂಶ ಇತ್ಯಾದಿ ವಿಶೇಷ ವಿವರಗಳನ್ನು ನೀಡಿದ್ದಾರೆ. ಶ್ರೀಯುತರು ಅನುಸರಿಸಿರುವ ಈ ವಿಧಾನ ತುಂಬ ಉಪಯುಕ್ತವಾದುದಾಗಿದೆ. ಪಂಪ, ಪೊನ್ನ, ರನ್ನ ಇವರೇ ಮೊದಲಾದ ಪ್ರಾಚೀನ ಕವಿಗಳ ಪ್ರೌಢಕೃತಿಗಳನ್ನು ಅರ್ಥೈಸುವುದು, ವ್ಯಾಖ್ಯಾನಿಸುವುದು ಇಂದಿನ ಸುಕುಮಾರಯುಗದ ಜನಕ್ಕೆ ತುಂಬ ಕಷ್ಟಕರ. ಎಷ್ಟೋ ವ್ಯುತ್ಪನ್ನಮತಿಗಳಾದರೂ ಈ ಕಾವ್ಯಗಳನ್ನು ಅರ್ಥೈಸುವಲ್ಲಿ

ಒಂದಿಲ್ಲ ಒಂದು ಸಮಯದಲ್ಲಿ ಎಡವುವುದು ಸಹಜವಾದುದು. ಪ್ರೊ. ಸುಬ್ರಾಯಭಟ್ಟರೂ ಇದಕ್ಕೇನೂ ಹೊರತಾಗಿಲ್ಲ. ಹಲವಾರು ಕಡೆ ಶ್ರೀಯುತರ ಅರ್ಥನಿರೂಪಣಾಕ್ರಮ, ವ್ಯಾಖ್ಯಾನ ವಿಧಾನ ತಪ್ಪಾಗಿದೆ. ಇದಕ್ಕೆ ದೃಷ್ಟಾಂತವಾಗಿ ಪ್ರಥಮಾಶ್ವಾಸದ ೨ನೆಯ ಪದ್ಯ, ೫೫ನೆಯ ಪದ್ಯವಾದ ಮೇಲೆ ಬರುವ ವಚನ, ೫೬ನೆ ಪದ್ಯ ೫೭ನೆಯ ಪದ್ಯ ಇವೇ ಮೊದಲಾದುವನ್ನು ನೋಡಬಹುದು. ಮೂಲಪಾಠವನ್ನು ಸ್ವೀಕರಿಸುವಲ್ಲಿ, ಪಾಠಾಂತರಗಳನ್ನು ಸೂಚಿಸುವಲ್ಲಿ ಸಾಕಷ್ಟು ಸ್ಖಾಲಿತ್ಯಗಳು ತಲೆದೋರಿವೆ. ಪ್ರತಿಪದಾರ್ಥಗಳನ್ನು ಕೊಡುವಾಗ ಮೂಲದಲ್ಲಿನ ಶಕಟರೇಫವನ್ನು ಸಾಮಾನ್ಯ ರೇಫವಾಗಿ ಕೊಡಲಾಗಿದೆ. ಅಲ್ಲದೆ ೧–೫೭ರಲ್ಲಿ ಬರುವ ಮಟ್ಟೆಗಿಸು, ೧–೬೪ರಲ್ಲಿ ಬರುವ ಮುಯ್ ಈ ಮೊದಲಾದ ಶಬ್ದಗಳಿಗೆ ಕೊಟ್ಟಿರುವ ಅರ್ಥ ಸರಿಯಾಗಿಲ್ಲ.

ಪ್ರಾಚೀನ ಹಳಗನ್ನಡ ಕಾವ್ಯಗಳನ್ನು ವ್ಯಾಸಂಗ ಮಾಡುವುದು ಅವನ್ನು ಅರ್ಥೈಸಿಕೊಳ್ಳುವುದು, ಇಂದಿನ ಜನಕ್ಕೆ ಕಷ್ಟಸಾಧ್ಯವಾದುದು. ಆದುದರಿಂದಲೇ ಈ ಪ್ರೌಢಕಾವ್ಯಗಳಿಗೆ ಅರ್ಥವ್ಯಾಖ್ಯಾನಗಳು ಅತಿಮುಖ್ಯ. ಈ ಗುರುತರವಾದ ಕಾರ್ಯವನ್ನು ನಿರ್ವಹಿಸಬೇಕಾದರೆ ಆಳವಾದ ಅಭ್ಯಾಸ, ಅಪಾರವಾದ ಪಾಂಡಿತ್ಯ ಅನಿವಾರ್ಯವಾಗುತ್ತವೆ. ಪಂಪಭಾರತಕ್ಕೆ ಒಂದು ಸಮರ್ಥ ದೀಪಿಕೆಯನ್ನು ದಿ. ಡಾ. ಡಿ.ಎಲ್. ನರಸಿಂಹಾಚಾರ್ಯರು ನೀಡಿ ಕನ್ನಡ ಜನತೆಗೆ ಮಹೋಪಕಾರವನ್ನು ಮಾಡಿದ್ದಾರೆ. ಇದೇ ರೀತಿ ಪ್ರೊ. ಸುಬ್ರಾಯಭಟ್ಟರೂ ಗದಾಯುದ್ಧಕ್ಕೆ ಒಂದು ದರ್ಪಣವನ್ನು ರಚಿಸಿದ್ದಾರೆ. ಶ್ರೀಯುತರ ಈ ಪ್ರಯತ್ನದಲ್ಲಿ ಕೆಲವಾರು ಲೋಪದೋಷಗಳು ನುಸುಳಿಕೊಂಡು ಬಂದಿವೆ. ಈ ಲೋಪದೋಷಗಳನ್ನು ವಿದ್ವಾಂಸರು ತೋರಿಸಿಕೊಟ್ಟು ಇದೊಂದು ಉತ್ತಮ 'ದರ್ಪಣ'ವಾಗುವುದಕ್ಕೆ ಸಹಕರಿಸಬೇಕು. ಸಜ್ಜನರೂ ಸಂಪನ್ನರೂ ಆದ ದಿ. ಪ್ರೊ. ಸುಬ್ರಾಯಭಟ್ಟರು ಹಲವಾರು ವರ್ಷಗಳ ತಮ್ಮ ಅನುಭವ ಪಾಂಡಿತ್ಯಗಳಿಂದ ಹೊರತಂದಿರುವ 'ಗದಾಯುದ್ಧ ದರ್ಪಣ' ಪರಿಷ್ಕಾರಗೊಂಡಲ್ಲಿ ಒಂದು ಉತ್ತಮ ಕೈದೀವಿಗೆಯಾಗಬಲ್ಲುದು.



# ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನಪದಪ್ರಯೋಗ ಕೋಶ

ಸಿದ್ಧಪಡಿಸಿದವರು: ಟಿ.ಎಲ್. ಬ್ಯಾಡಿಗಿ, ಎಸ್.ಆರ್. ಗುಂಜಾಳ್, ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪ್ರಥಮ ಮುದ್ರಣ: ೧೯೭೬, ಪುಟಗಳು viii+೪೩೬; ಬೆಲೆ: ಸಾದಾಪ್ರತಿ ರೂ. ೪೦.೦೦; ಉತ್ತಮ ಪ್ರತಿ ೪೫.೦೦

---

ಬಸವಣ್ಣನವರು ಹನ್ನೆರಡನೆಯ ಶತಮಾನದ ವಚನಕಾರರ ನೇತಾರರಾಗಿ ಒಂದು ಪರಂಪರೆಯನ್ನು ಸೃಷ್ಟಿಸಿದಂತೆ ಹದಿನಾರನೆಯ ಶತಮಾನದಲ್ಲಿ ಇಂತಹುದೇ ಒಂದು ಪರಂಪರೆಯನ್ನು ಸೃಷ್ಟಿಸಿದವರು ತೋಂಟದ ಸಿದ್ಧಲಿಂಗ ಶಿವಯೋಗಿಗಳು. ಸುಮಾರು ನಾಲ್ಕು ಶತಮಾನಗಳ ಕಾಲ ಅಸ್ತಂಗತವಾಗಿದ್ದ ವಚನಸಾಹಿತ್ಯವನ್ನು ಪುನರುಜ್ಜೀವನಗೊಳಿಸಿ ಅದಕ್ಕೆ ಮತ್ತೆ ಚಾಲನೆ ಕೊಟ್ಟವರು ಇವರು. ಬಸವಣ್ಣನವರ ಅಸಂಖ್ಯಾತ ಅನುಯಾಯಿಗಳಂತೆ ಸಿದ್ಧಲಿಂಗ ಯತಿಗಳ ಅನುಯಾಯಿಗಳ ಪಂಥವೂ ಹಿರಿದಾದುದು. ಇವರಿಬ್ಬರೂ ಆಯಾ ಕಾಲದ ಧರ್ಮಪ್ರವರ್ತಕರೆನಿಸಿಕೊಂಡರು. ಸಿದ್ಧಲಿಂಗ ಯತಿಗಳು ಶ್ರೇಷ್ಠ ವಚನಕಾರರಾಗಿ, ಧರ್ಮಸಂಸ್ಥಾಪಕರಾಗಿ, ಸಮರ್ಥ ಸಂಘಟನಕಾರರಾಗಿ ನಾಡಿನಾದ್ಯಂತ ಸಂಚರಿಸಿ ಮಹತ್ತರ ಕಾರ್ಯವನ್ನು ಕೈಕೊಂಡವರು. ವಚನಗಳ ರಚನೆಯಷ್ಟೇ ಅಲ್ಲದೆ ಅವುಗಳ ಕ್ರಮಬದ್ಧವಾದ ಸಂಕಲನ ಸಂರಕ್ಷಣಕಾರ್ಯ ನಡೆದುದು ಇವರ ಕಾಲದಲ್ಲಿಯೇ. ಈ ಎಲ್ಲ ದೃಷ್ಟಿಗಳಿಂದ ದ್ವಿತೀಯಘಟ್ಟದ ವಚನಕಾರರ ನೇತಾರರಾಗಿ ಧರ್ಮ ಮತ್ತು ಸಾಹಿತ್ಯ ಕ್ಷೇತ್ರಕ್ಕೆ ಸಿದ್ಧಲಿಂಗ ಯತಿಗಳು ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ. ಬಸವಣ್ಣ ಮತ್ತು ಸಿದ್ಧಲಿಂಗ ಶಿವಯೋಗಿಗಳ ಹೆಸರುಗಳು ವಚನಸಾಹಿತ್ಯ ಚರಿತ್ರೆಯಲ್ಲಿ ಸದಾ ಬೆಳಗತಕ್ಕವು.

ಸಾಹಿತ್ಯ ಕೃತಿಗಳಿಗೆ ಪದಪ್ರಯೋಗಕೋಶಗಳನ್ನು ಸಿದ್ಧಪಡಿಸುವ ವಿಧಾನ ನಮಗೆ ಹೊಸದು. ಈ ವಿಧಾನ ಇತ್ತೀಚೆಗೆ ಬೆಳಕಿಗೆ ಬರುತ್ತಿದೆ. ಯಾವುದೇ ಒಂದು ಕೃತಿಯಲ್ಲಿನ ಮುಖ್ಯಶಬ್ದಗಳನ್ನು ಅವುಗಳ ಪ್ರಯೋಗಗಳ ಸಹಿತ ಸಿದ್ಧಪಡಿಸುವುದಕ್ಕೆ ಪದಪ್ರಯೋಗಕೋಶ (concordance) ಎಂಬ ಹೆಸರು ಚಾಲ್ತಿಗೆ ಬಂದಿದೆ. ಈ ಕೆಲಸ ತುಂಬ ಕಷ್ಟಕರವಾದುದು. ಸಂಶೋಧಕರಿಗೂ ವಿದ್ವಾಂಸರಿಗೂ ಇದರಿಂದ ತುಂಬ ಪ್ರಯೋಜನವಾಗುತ್ತದೆ. ಒಟ್ಟಿನಲ್ಲಿ ಅತ್ಯಂತ ಸೀಮಿತ ಗುರಿಯನ್ನುಳ್ಳ ಈ ತೆರನ ಪದಪ್ರಯೋಗಕೋಶಗಳಿಂದ ಸಾಮಾನ್ಯ ಓದುಗರಿಗೆ ಅಷ್ಟೇನೂ ಪ್ರಯೋಜನವಾಗುವುದಿಲ್ಲ.

ಕನ್ನಡದಲ್ಲಿ ಈಗಾಗಲೇ ಬಸವವಚನಪದಪ್ರಯೋಗಕೋಶವೊಂದು ಹೊರಬಂದಿದೆ. ಪ್ರಸ್ತುತ ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನಪದಪ್ರಯೋಗಕೋಶದ ರಚಕರಲ್ಲಿ ಒಬ್ಬರಾದ ಶ್ರೀ ಎಸ್.ಆರ್. ಗುಂಜಾಳ ಅವರೇ ಅದನ್ನು ಸಿದ್ಧಪಡಿಸಿದ್ದಾರೆ. ಅದೇ ಜಾಡಿನಲ್ಲಿ ನಡೆದು ಶ್ರೀ ಟಿ.ಎಲ್. ಬ್ಯಾಡಿಗಿ ಮತ್ತು ಶ್ರೀ ಎಸ್.ಆರ್. ಗುಂಜಾಳ ಅವರು ಪ್ರಕೃತ ವಚನಪದಪ್ರಯೋಗಕೋಶವನ್ನು ಸಿದ್ಧಪಡಿಸಿದ್ದಾರೆ. ಇದರ ಸ್ಥೂಲವಾದ ಸಮೀಕ್ಷೆ ಇಂತಿದೆ.

೧. ಈ ಗ್ರಂಥವನ್ನು ಹನ್ನೆರಡು ಪಾಯಿಂಟ್ ಅಕ್ಷರಗಳಲ್ಲಿ ಮುದ್ರಿಸಲಾಗಿದೆ. ಮುಖ್ಯಶಬ್ದಗಳನ್ನು ದಪ್ಪಕ್ಷರಗಳಿಂದ ಎತ್ತಿ ತೋರಿಸಲಾಗಿದೆ. ಕೇವಲ ಕೆಲವೇ ಮಂದಿಗೆ ಕ್ವಚಿತ್ತಾಗಿ ಉಪಯೋಗಕ್ಕೆ ಬರುವಂತಹ ಈ ಗ್ರಂಥವನ್ನು ಹತ್ತು ಪಾಯಿಂಟ್ ಅಕ್ಷರಗಳಲ್ಲಿ ಮುದ್ರಿಸಿದ್ದರೆ ಸಾಕಾಗಿತ್ತು. ಇದರಿಂದ ಸಾಕಷ್ಟು ಉಳಿತಾಯವೂ ಆಗುತ್ತಿತ್ತು.

೨. "ಈ ಕೋಶದಲ್ಲಿ ಕ್ರಿಯಾಪದಗಳನ್ನು ಹೆಚ್ಚಾಗಿ ಎತ್ತಿಕೊಂಡಿಲ್ಲ. ಸರ್ವನಾಮಗಳನ್ನು ಕೈಬಿಟ್ಟಿದ್ದೇವೆ. ಹಾಗೆಯೇ ಅನಾವಶ್ಯಕವೆಂದು ತೋರಿಬಂದ ಶಬ್ದಗಳನ್ನು ಸೇರಿಸಿಲ್ಲ" (ಪುಟ iii) ಎಂದು ಹೇಳಲಾಗಿದೆ. ಈ ಹೇಳಿಕೆ ಅನವಸ್ಥಾ ದೋಷಕ್ಕೆ ಎಡೆಮಾಡಿಕೊಟ್ಟಿದೆ. ತಮಗೆ ತೋರಿದ, ತಾವು ಸೂಕ್ತವೆಂದು ಭಾವಿಸಿದ ಶಬ್ದಗಳನ್ನು ಮಾತ್ರ ಸೇರಿಸಿಕೊಳ್ಳುವ ಅಧಿಕಾರ ಇದರ ರಚಕರಿಗೆ ಏನೇನೂ ಇಲ್ಲವೆಂದು ನಾವು ಭಾವಿಸುತ್ತೇವೆ.

೩. "ಹದಿನಾಲ್ಕು ವಚನಗಳಲ್ಲಿ ಸಂಸ್ಕೃತ ಶ್ಲೋಕಗಳು ಉದಾಹರಿಸಲ್ಪಟ್ಟಿವೆ. ಅವುಗಳ ಶಬ್ದಗಳನ್ನು ಆಯ್ಕೆ ಮಾಡಿಲ್ಲ. ಆದರೆ ಶ್ಲೋಕ ಶಬ್ದದ ಕೆಳಗೆ ಅವು ಪ್ರಯೋಗವಾದ ವಚನಗಳ ಸಂಖ್ಯೆಗಳನ್ನು ಮಾತ್ರ ಕೊಟ್ಟಿದ್ದೇವೆ" (ಪುಟ iv) ಎಂದು ಹೇಳಿದೆ. ಈ ಕ್ರಮದಿಂದ ಯಾರಿಗೂ ಏನೂ ಪ್ರಯೋಜನವಿಲ್ಲ ಎಂಬುದನ್ನು ಮತ್ತೆ ಹೇಳಬೇಕಾಗಿಲ್ಲ.

೪. ಮುಖ್ಯಶಬ್ದಗಳಿಗೆ ಕೊಟ್ಟಿರುವ ಪ್ರಯೋಗಗಳು ಹಲವಾರೆಡೆ ತೀರ ಲಂಬವಾಗಿವೆ. ಉದಾಹರಣೆಗೆ ಅಂಗ ಶಬ್ದವನ್ನು ನೋಡಬಹುದು. ಇಲ್ಲಿ ಕೆಲವೆಡೆ ವಚನಗಳನ್ನೇ ಪೂರ್ತಿಯಾಗಿ ಉದ್ಧರಿಸಿದಂತಿದೆ. ಇವನ್ನು ಮೊಟಕು ಮಾಡುವುದರಿಂದ ಓದುಗರ ಸಮಯ ಮತ್ತು ಅನವಶ್ಯಕ ವೆಚ್ಚ ಎರಡೂ ಉಳಿಯುತ್ತವೆ.

೫. ಅತ್ತಿ-ಹಣ್ಣು ಎಂಬ ಉಲ್ಲೇಖದಲ್ಲಿ ಬರುವ ಪ್ರಯೋಗ "ಅತ್ತಿಯ ಹಣ್ಣು ಕಳಿತಿರ್ದರೇನೋ" ಎಂದಿದೆ. ಈ ಪದವನ್ನು ಅತ್ತಿಯ ಹಣ್ಣು ಎಂದೇ ಕೊಡಬೇಕಾಗಿತ್ತಲ್ಲವೆ?

೬. ಅತೀತ ಎಂಬ ಪದಕ್ಕೆ ಕೊಟ್ಟಿರುವ "ನೀನು ವಾಚಾತೀತ, ಮಾನಾತೀತ, ವರ್ಣಾತೀತ, ಭಾವಾತೀತ, ಜ್ಞಾನಾತೀತವಾಗಿ ನೀನು ನಿಃಕಲನಯ್ಯ" ಈ ಪ್ರಯೋಗ ಸಾಧುವಲ್ಲ. ಏಕೆಂದರೆ ಈ ಪ್ರಯೋಗದಲ್ಲಿ ಬಂದಿರುವ ವಾಚಾತೀತ ಮಾನಾತೀತ ವರ್ಣಾತೀತ ಭಾವಾತೀತ ಜ್ಞಾನಾತೀತ -ಇವು ಆಯಾ ಸ್ಥಳಗಳಲ್ಲಿ ಮುಖ್ಯ ಉಲ್ಲೇಖಗಳಾಗಿ ಬಂದಿವೆ. ಮತ್ತೆ ಇಲ್ಲಿಯೂ ಇವನ್ನು ಕೊಡುವುದರ ಅವಶ್ಯಕತೆ ಇಲ್ಲ. ಕೇವಲ ಪುನರುಕ್ತಿಯಾಗುತ್ತದೆ.

೭. ಅನುಭವಜ್ಞಾನ ಪದದ ವರ್ಣಾನುಕ್ರಮಣಿಕೆ (Word order) ತಪ್ಪಾಗಿದೆ. ಅನುಭಾವಪ್ರಸಾದ, ಅನುಭಾವಭಕ್ತಿ, ಅನುಭಾವಲಿಂಗ, ಅನುಭಾವಜ್ಞಾನ, ಅನುಭಾವಿ. ಇಲ್ಲಿ ಅನುಭಾವಜ್ಞಾನ, ಅನುಭಾವಪ್ರಸಾದಕ್ಕಿಂತ ಮೊದಲೇ ಬರಬೇಕಾಗಿತ್ತು.

೮. ಕೆಲವು ಮುಖ್ಯಪದಗಳೂ ಕೆಲವು ಪ್ರಯೋಗಗಳೂ ಬಿಟ್ಟುಹೋಗಿವೆ. ಅಷ್ಟದಳಕಮಲ ಎಂಬ ಉಲ್ಲೇಖವೇ ಇಲ್ಲ.

೯. ಮುಖ್ಯಪದಗಳನ್ನು ಅವುಗಳ ಪ್ರಕೃತಿರೂಪದಲ್ಲೇ ಕೊಡಬೇಕಾಗಿತ್ತು. 'ಎಯ್ದಿ' ಎಂದು ಕೊಟ್ಟಿರುವ ಕೃದಂತ ರೂಪವನ್ನು 'ಎಯ್ದು' ಎಂಬ ಧಾತುರೂಪದಲ್ಲಿ ಕೊಡಬೇಕಾಗಿತ್ತು. ಹಾಗೆಯೇ 'ಅರಗ' ಎಂಬ ಪದವನ್ನು 'ಅರಗು' ಎಂದು ಸೂಚಿಸಬೇಕಾಗಿತ್ತು.

೧೦. 'ಎಳೆಮಿಂಚಿನ ವರ್ಣ' ಎಂಬ ಪದವನ್ನು 'ಎಳೆಮಿಂಚು' ಎಂದು ಮಾತ್ರ ಕೊಡಬೇಕಾಗಿತ್ತು. ಏಕೆಂದರೆ ಎಳೆಮಿಂಚಿನ ವರ್ಣ ಸಮಸ್ತ ಶಬ್ದವಲ್ಲ.

೧೧. ಒಳಗೆ ಎಂಬ ಪದವನ್ನು ಕೊಡಬೇಕಾಗಿರಲಿಲ್ಲ. ಕೆಲವು ಕ್ರಿಯಾಪದಗಳನ್ನೂ ಸರ್ವನಾಮಗಳನ್ನೇ ಬಿಟ್ಟಿರುವುದಾಗಿ ಹೇಳಿಕೊಂಡಿರುವಾಗ ಈ ಪದವನ್ನು ಕೊಟ್ಟಿರುವುದರ ಔಚಿತ್ಯವಾದರೂ ಏನು?

೧೨. ತಲಗೇಜು ಎಂಬ ಪದವನ್ನು ಮುಖ್ಯಉಲ್ಲೇಖವಾಗಿ ಕೊಡುವ ಅಗತ್ಯವಿಲ್ಲ.

೧೩. ತ್ರಿಪುಟಿಯೇಕಾರ್ಥ : ಇದು ಸಮಸ್ತ ಪದವಲ್ಲ. ಎರಡು ಭಿನ್ನ ಶಬ್ದಗಳಿರುವ ಇಂತಹ ರೂಪಗಳನ್ನು ಸೂಚಿಸಬೇಕಾಗಿಲ್ಲ. (ಜ್ಞಾತೃ ಜ್ಞಾನ ಜ್ಞೇಯವೆಂಬ ತ್ರಿಪುಟಿಯೇಕಾರ್ಥವಾದ ಅಗ್ನಿಯಿಂದ ಸುಟ್ಟುರುಹಿದ ಭಸ್ಮವ

ಧರಿಸಿದೆನಯ್ಯಾ) ಹೀಗೆಯೇ ದಿಟಪುಟವಿವಾಕರ ಎಂಬುದನ್ನೂ ಮುಖ್ಯಪದವಾಗಿ ಕೊಡಬೇಕಾಗಿಲ್ಲ. (ಹುಸಿಯ ಮಾಯಾತಮಂಧಕೆ ದಿಟಪುಟವಿವಾಕರ ಎನ್ನೊಡೆಯ) ಈ ತೆರನ ಅನೇಕ ಪದಗಳು ಸೇರಿಹೋಗಿವೆ. ಉಳ್ಳಿನುಗ್ಗೆ ಎಂಬುದೂ ಈ ರೀತಿಯದೇ.

೧೪. ರತಿ ಎಂಬ ಪದಕ್ಕೆ ಸ್ವತಂತ್ರಪ್ರಯೋಗಗಳಿಲ್ಲ. ಆದ್ದರಿಂದ ಈ ಪದಪ್ರಯೋಗವಾಗಿರುವ ಸಮಸ್ತ ಶಬ್ದವನ್ನು ಕೊಟ್ಟು ಅವನ್ನು ನೋಡು ಎಂದು ಸೂಚಿಸಬಹುದಾಗಿತ್ತು. ಇದರಿಂದ ಹಲವಾರು ಕಡೆ ಒಂದೇ ವಚನ ಪ್ರಯೋಗವನ್ನು ಉದಾಹರಿಸುವುದನ್ನು ತಪ್ಪಿಸಬಹುದಾಗಿತ್ತು.

೧೫. ಮರ ಪದದ ಕೆಳಗೆ ಕೊಟ್ಟಿರುವ ಪ್ರಯೋಗಗಳಲ್ಲಿ ಕೆಲವು ಸ್ಪಷ್ಟವಾಗಿ ತಪ್ಪಾಗಿವೆ. ಮರ ಶಬ್ದಕ್ಕೆ ಮಱ ಎಂಬ ಶಕಟರೇಫದ ರೂಪ ಅಸಾಧು, ಅಸಂಭವ. ಇವನ್ನು ಸುಲಭವಾಗಿ ಸರಿಪಡಿಸಬಹುದಾಗಿತ್ತು.

೧೬. ಚಿತ್‌ಪಿಂಡ, ಚಿತ್‌ಪ್ರಕಾಶ ಎಂಬ ಪದಗಳನ್ನು ಕೊಟ್ಟು ಮತ್ತೆ ಚಿತ್ಪಿಂಡ ಚಿತ್ಪ್ರಕಾಶ ಎಂಬ ರೂಪದ ಕೆಳಗೂ ಇವನ್ನು ಕೊಟ್ಟಿರುವುದು ವ್ಯರ್ಥ, ಅನವಶ್ಯಕ. ಬರವಣಿಗೆಯಲ್ಲಿನ ಈ ವೈವಿಧ್ಯವನ್ನು ಎರಡೆಡೆಯೂ ಅದೂ ಬೇರೆ ಬೇರೆ ಸ್ಥಳಗಳಲ್ಲಿ ಸೂಚಿಸಿರುವುದು ತೀರ ನಿರಾಧಾರವಾದುದು.

ಈ ಗ್ರಂಥದಲ್ಲಿ ಈ ತೆರನ ಹಲವಾರು ಲೋಪದೋಷಗಳು ಕಂಡುಬರುತ್ತವೆ. ಪದಪ್ರಯೋಗ ಕೋಶಗಳನ್ನು ಸಿದ್ಧಪಡಿಸುವುದು ತುಂಬ ಪ್ರಯಾಸದ ಕೆಲಸ. ಕನ್ನಡಕ್ಕೆ ಇದು ಇತ್ತೀಚೆಗೆ ಆಗತ್ತಿರುವ ಕಾರ್ಯ. ಆದುದರಿಂದ ಈ ತೆರನ ಸ್ಖಾಲಿತ್ಯಗಳು ಅಜ್ಞಾನ, ಅನವಧಾನದಿಂದ ಸಂಭವಿಸುತ್ತವೆ. ಸೀಮಿತ ಉದ್ದೇಶ ಪ್ರಯೋಜನಗಳನ್ನು ಹೊಂದಿರುವ ಈ ತೆರನ ಕಾರ್ಯ ಸಮಗ್ರವಾಗಿಯೂ ಸಮರ್ಪಕವಾಗಿಯೂ ಸ್ಖಾಲಿತ್ಯಗಳಿಲ್ಲದಂತೆಯೂ ಸಿದ್ಧವಾದಾಗಲೇ ಇದಕ್ಕೆ ಸಾರ್ಥಕತೆ ಬರುತ್ತದೆ. ಇನ್ನು ಮುಂದೆ ಇಂತಹ ನಿರ್ದುಷ್ಟ ಕಾರ್ಯಗಳನ್ನು ಈ ಗ್ರಂಥದ ರಚಕರು ಕೈಗೊಳ್ಳಲಿ. ಅವರ ಬಹುಕಾಲದ ಶ್ರಮ ಸಾರ್ಥಕವಾಗುವಂತಾಗಲಿ ಎಂದು ಹಾರೈಸುತ್ತೇನೆ.



## ಮಹಾಕವಿ ಚಾಮರಸ ವಿರಚಿತ ಪ್ರಭುಲಿಂಗಲೀಲೆ

ಸಂಪಾದಕರು: ಡಾ. ಎಂ.ಎಸ್. ಸುಂಕಾಪುರ, ಪ್ರಕಾಶಕರು: ಕನ್ನಡ ಅಧ್ಯಯನಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪ್ರಥಮ ಮುದ್ರಣ: ೧೯೭೬, ಪುಟಗಳು xxviii+೩೯೨, ಬೆಲೆ: ರೂ. ೨೦.೦೦

---

**ಚಾ**ಮರಸ ಕನ್ನಡಕವಿಪರಂಪರೆಯಲ್ಲಿ ಗಣ್ಯನಾದವನು. ವೀರಶೈವ ಕವಿಗಳಲ್ಲಿ ಪ್ರಮುಖನಾದವನು. ಆತನ ಪ್ರಭುಲಿಂಗಲೀಲೆ ಕನ್ನಡ ಸಾಹಿತ್ಯದ ಒಂದು ಶ್ರೇಷ್ಠಕೃತಿ. ಇದರಲ್ಲಿ ವೀರಶೈವಧರ್ಮ ಮತ್ತು ಕಾವ್ಯಧರ್ಮಗಳೆರಡೂ ಸಮನ್ವಯಗೊಂಡಿವೆ. ಅಲ್ಲಮಪ್ರಭು, ಮಾಯೆ ಮತ್ತು ಮಹದೇವಿಯರ ಜೀವಂತ ಚಿತ್ರಣವನ್ನು ಈ ಕಾವ್ಯದಲ್ಲಿ ಕಾಣಬಹುದಾಗಿದೆ. ವ್ಯೋಮಮೂರ್ತಿ ಅಲ್ಲಮನ ಜೀವನಚರಿತ್ರೆಯನ್ನು ಬಿತ್ತರಿಸುವ ಪ್ರಭುಲಿಂಗಲೀಲೆಯಲ್ಲಿ ಚಾಮರಸ ಹರಿಹರನ ಸಂಪ್ರದಾಯದಂತೆ ತನ್ನದೇ ಆದ ಒಂದು ಸಂಪ್ರದಾಯವನ್ನು ಸ್ಥಾಪಿಸಿದ್ದಾನೆ. ಈ ಎಲ್ಲ ದೃಷ್ಟಿಗಳಿಂದ ಚಾಮರಸನ ಪ್ರಭುಲಿಂಗಲೀಲೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅತ್ಯಂತ ಮಹತ್ವದ ಸ್ಥಾನವನ್ನು ಪಡೆದಿದೆ.

ಚಾಮರಸ ತನ್ನ ಕೃತಿಯನ್ನು:

ಸತ್ತವರ ಕಥೆಯಲ್ಲ ಜನನದ
ಕುತ್ತದಲಿ ಕುದಿಕುದಿದು ಕರ್ಮದ
ಕತ್ತಲೆಗೆ ಸಿಲ್ಕುವರ ಸೀಮೆಯ ಹೊಲಬು ತಾನಲ್ಲ
ಹೊತ್ತು ಹೋಗದೆ ಪುಂಡರಾಲಿಪ
ಮತ್ತಮತಿಗಳ ಗೋಷ್ಠಿಯಲ್ಲಿದು
ಸತ್ಯಶರಣರು ತಿಳಿವುದೀ ಪ್ರಭುಲಿಂಗಲೀಲೆಯನು

ಈ ರೀತಿ ವರ್ಣಿಸಿದ್ದಾನೆ. ಈತನ ಕಾವ್ಯ ಅತ್ಯಂತ ಜನಪ್ರಿಯವಾಗಿದ್ದುದರಿಂದಲೇ ತೆಲುಗು ತಮಿಳು ಮರಾಠಿ ಸಂಸ್ಕೃತ ಭಾಷೆಗಳಿಗೂ ಪರಿವರ್ತನೆಗೊಂಡಿದೆ. "ಮಹಾತ್ಮರ ಜೀವನಚರಿತ್ರೆಯನ್ನು ಕಾವ್ಯರೂಪದಲ್ಲಿ ಹೇಗೆ ಬರೆಯಬೇಕೆಂಬುದಕ್ಕೆ ಪ್ರಭುಲಿಂಗಲೀಲೆ ಉತ್ತಮ ನಿದರ್ಶನವಾಗಿದೆ" ಎಂಬ ಎಂ.ಆರ್.ಶ್ರೀ ಅವರ ಹೇಳಿಕೆ ಯಥಾರ್ಥವಾಗಿದೆ.

ಪ್ರಭುಲಿಂಗಲೀಲೆಯ ಎರಡು ಮೂರು ಸಂಸ್ಕರಣಗಳು ಈಗಾಗಲೇ ಹೊರಬಂದಿವೆ. ಪ್ರಕೃತ ಪರಿಷ್ಕರಣ ಹಲವಾರು ಹಸ್ತಪ್ರತಿಗಳ ಆಧಾರದಿಂದ ಸಿದ್ಧಪಡಿಸಿದ್ದು ಪ್ರತಿಯೊಂದು ಗತಿಯ ಆದಿಯಲ್ಲೂ ಸಮಯೋಚಿತವಾಗಿ ಪ್ರಭುದೇವರ ವಚನಗಳನ್ನು ಉದ್ಧರಿಸಲಾಗಿದೆ. ಅಲ್ಲದೆ ಕೆಲವೆಡೆ ಕಂದಪದ್ಯಗಳನ್ನು ಕೊಡಲಾಗಿದೆ. ಇವು ಪ್ರವೇಶದ್ವಾರದಲ್ಲಿ ಕಟ್ಟಿದ ನಾಂದಿತೋರಣಗಳಂತಿವೆ.

ಗತಿ ೧ ಪದ್ಯ ೨ರಲ್ಲಿ ಭಕ್ತರ ಕಾಯವನು ಪಾವನವ ಮಾಡಿದ ಎಂಬುದು ಭಕ್ತನಿಕಾಯವನು ಪಾವನ ಮಾಡಿದ ಎಂದಿದ್ದರೆ ಹೆಚ್ಚು ಅರ್ಥವತ್ತಾಗಿರುತ್ತಿತ್ತು. ಹಾಗೆಯೇ ೧ ಪದ್ಯ ೩ರಲ್ಲಿ ಧಾರುಣಿಯಲಜೀವಂತೆ ಎಂಬುದು ಧಾರುಣಿಯೊಳಜೀವಂತೆ ಎಂದಿರಬೇಕಾಗುತ್ತದೆ. ಇದೇ ೧-೧೨ರಲ್ಲಿ 'ಕಾಳಗವು ಕರಣದಲ್ಲಿ ಸುರತದ' ಎಂಬಲ್ಲಿ

ಛಂದೋಭಂಗವಾಗಿದೆ. 'ಕಾಳಗವು ಕರಣದಲಿ ಸುರತದ' ಎಂದಿರಬೇಕು. ಗತಿ ೨-೧೧ರಲ್ಲಿ ಛಂದೋಭಂಗವಾಗಿದೆ. ವೃತ್ತಕುಚವೆ ಎಂದಿರುವುದು ವೃತ್ತಕುಚವೇ ಎಂದಾಗಬೇಕು. ಇದೇ ೨-೧೪ರಲ್ಲಿ ಡಾಕಿನಿಯರುಳಳಾದಿಯಾಗಿರ್ದ ಎಂದಿರುವುದು. ಡಾಕಿನಿಯರುಗಳಾದಿಯಾಗಿರ್ದ ಎಂದಿರಬೇಕು. ೨-೨೭ರಲ್ಲಿ ಮೇಲುಪ್ಘಡಿಪ ಎಂಬುದು ಮೇಲುಗ್ಘಡಿಪ ಎಂದಿರಬೇಕು. ಗತಿ ೩-೨ರಲ್ಲಿ 'ವದನವೊ' ಎಂಬುದು 'ವದನವೋ' ಎಂದಾಗಬೇಕು. ೩-೩ರಲ್ಲಿ 'ಬನವಸೆಯಲುಧ್ಯಾನ' ಎಂದಿರುವುದು 'ಬನವಸೆಯಲುದ್ಯಾನ' ಎಂದಿರಬೇಕು. ೩-೫ರಲ್ಲಿ 'ಕಳಕಳವೆತ್ತಿಹುದಾಗಳಾ ಪುರವು' ಎಂಬಲ್ಲಿ ಛಂದೋಭಂಗವಾಗಿದೆ. ಇದು 'ಕಳಕಳತೆವೆತ್ತಿಹುದಾಗಳಾಪುರವು' ಎಂದಾಗಬೇಕು. ೩-೧೩ರಲ್ಲಿ 'ಬುಧವಜ್ರಂಗಳ ಚಿತ್ರಗಳು' ಎಂಬುದು 'ಬುಧವ್ರಜಂಗಳ ಚಿತ್ತಗಳು' ಎಂದಿರಬೇಕು. ಗತಿ ४-೧ರಲ್ಲಿ 'ಧರಿಣಿಯೊಳು' ಎಂಬುದು 'ಧರಣಿಯೊಳು' ಎಂದೂ ४-೮ರಲ್ಲಿ 'ಕಾಂಚೀಧಾಮ' ಎಂಬುದು 'ಕಾಂಚೀದಾಮ' ಎಂದೂ, ४-೧೦ರಲ್ಲಿ 'ಸರಸಮುದಯ' ಎಂಬುದು 'ಸರದ ಸಮುದಯ' ಎಂದೂ, ४-೧೨ರಲ್ಲಿ ಮೃಡಹರಿಬ್ರಹ್ಮಾದ್ಯರನು । ಕೆಡೆಕೆಡೆದು ಕಟ್ಟುವ ಕಾಮಪಾಶದ ಎಂಬಲ್ಲಿ ಮೃಡಹರಿ ಬ್ರಹ್ಮಾದ್ಯರನು ಕೆಡೆ । ಬಡಿದು ಕಟ್ಟುವ ಕಾಮಪಾಶದ ಎಂಬಂತೆ ಪಾದವಿನ್ಯಾಸ ಇರಬೇಕು. ಇದೇ ರೀತಿ ಗತಿ ೬ ಪದ್ಯ ೩ರಲ್ಲಿ 'ಸೆಳೆನಡುವಿನುನ್ನತಕುಚಂ । ಗಳ ಚೆಲುವಿಕೆಯ ದಿವ್ಯಾಂಗತೇಜ'ದ ಎಂದು ಅಚ್ಚಾಗಿರುವುದು ಸೆಳೆನಡುವಿನುನ್ನತ ಕುಚಂಗಳ । ಚೆಲುವಿಕೆಯ ದಿವ್ಯಾಂಗತೇಜದ ಎಂದಿರಬೇಕು. ಇಲ್ಲಿ ಪಾದವಿನ್ಯಾಸ ತಪ್ಪಾಗಿದೆ. ೬-೮ರಲ್ಲಿ 'ಬೆಳಿವಿಗೆಗೆ ಬೆದೆಯಾಯಿತು ನೆನಹಿನ' ಎಂಬ ಪಾದದಲ್ಲಿ ಪದದೋಷ ಛಂದೋದೋಷಗಳಿವೆ. ಇದು 'ಬೆಳವಿಗೆಗೆ ಬೆದೆಯಾಯ್ತು ನೆನಹಿನ' ಎಂದಿರಬೇಕು. ಈ ತೆರನ ಪದವಿನ್ಯಾಸ, ಪಾದವಿನ್ಯಾಸ, ಮುದ್ರಣದೋಷಗಳು ಸಾಕಷ್ಟು ಉಳಿದುಕೊಂಡಿವೆ. ಇವನ್ನು ಮರುಮುದ್ರಣದಲ್ಲಿ ಸರಿಪಡಿಸಬೇಕಾಗಿದೆ. ಈ ಕಾವ್ಯದ ಸಂಸ್ಕರಣಕ್ಕೆ ಬಳಸಿಕೊಂಡಿರುವ ಹಸ್ತಪ್ರತಿಗಳ ವಿವರಗಳನ್ನೇ ಕೊಟ್ಟಿಲ್ಲ. ಇದು ಏಕೆ ಹೀಗಾಯಿತು ಎಂಬುದು ಊಹೆಗೂ ನಿಲುಕದಂತಾಗಿದೆ. ಪ್ರತಿಗತಿಯ ಆದಿಯಲ್ಲಿ ಬರುವ ವಚನ ಮತ್ತು ಕಂದಪದ್ಯಗಳ ಬಗೆಗೆ ನಾಲ್ಕು ಮಾತುಗಳನ್ನಾದರೂ ಪ್ರಸ್ತಾಪಿಸಬೇಕಾಗಿತ್ತು.

ಸಮಗ್ರ ಕವಿಕಾವ್ಯ ವಿಷಯಗಳನ್ನು ಕೊಟ್ಟಿರುವುದು; ಶಬ್ದಕೋಶ, ಅನುಬಂಧಗಳನ್ನು ಸೇರಿಸುವುದು ಸಾಹಿತಿಗಳಿಗೂ ಸಂಶೋಧಕರಿಗೂ ಹೆಚ್ಚಿನ ಪ್ರಯೋಜನವನ್ನು ಉಂಟುಮಾಡಿದೆ. ಪ್ರಾಚೀನ ಕಾವ್ಯಗಳನ್ನು ಶಾಸ್ತ್ರೀಯವಾಗಿ ಸಂಪಾದಿಸುವ ಕಾರ್ಯ ತುಂಬ ಶ್ರಮಸಾಧ್ಯವಾದುದು. ಎಷ್ಟೇ ಎಚ್ಚರಿಕೆಯನ್ನು ವಹಿಸಿದರೂ ಸಂಪಾದಕರ ಅರಿವಿಲ್ಲದಂತೆಯೇ ಸ್ಖಾಲಿತ್ಯಗಳು ಸಂಭವಿಸುತ್ತವೆ. ಇವನ್ನು ಮತ್ತೆ ಮತ್ತೆ ಪರಿಶೋಧಿಸುವುದರಿಂದ ಶುದ್ಧಮಾಡಬಹುದು. ಈ ತೆರನ ಗುರುತರ ಕಾರ್ಯವನ್ನು ನಿರ್ವಹಿಸುತ್ತಿರುವ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠ ನಿಜಕ್ಕೂ ಶ್ಲಾಘ್ಯವಾದ ಸೇವೆಯನ್ನು ಸಲ್ಲಿಸುತ್ತಿದೆ ಎನ್ನಬಹುದು.



## ವಿಭೂತಿ

ಪ್ರಕಾಶಕರು: ಶಿವಾದ್ವೈತ ತತ್ತ್ವಪ್ರಚಾರ ಸಮಿತಿ, ಗಿರಿಯಾಪುರ, ಡೆಮ್ಮಿ ೧/೮, ಪುಟಗಳು ೭೫೨+೨೦, ಬೆಲೆ: ರೂ. ೮.೦೦

---

"ವಿಭೂತಿ" ಹಾನಗಲ್ಲ ಲಿಂ. ಶ್ರೀ ನಿ.ಪ್ರ. ಕುಮಾರ ಶಿವಯೋಗಿ ಸ್ಮಾರಕ ಶಿವಾದ್ವೈತ ತತ್ತ್ವಪ್ರಚಾರಕ ಸಮಿತಿಯ ದ್ವಾದಶಮಹೋತ್ಸವ ಮತ್ತು ಸಂಸ್ಥಾಪಕರ ಷಷ್ಠ್ಯಬ್ದಿ ಮಹೋತ್ಸವ ಗ್ರಂಥ. ಇದನ್ನು ನಡೆನುಡಿಯೊಂದಾಗಿ ಬೆಳಗಿ ನಾಡವರಿಗೆ ಬೆಳಗನೀಯುತ್ತಿರುವ ಶೀಲಸಂಪನ್ನತೋಪನಿಷ್ಪನ್ನ ಭಾಷ್ಯಾಚಾರ್ಯ ಗುರುವರ್ಯ ಷ.ಬ್ರ.ಶ್ರೀ ಸದಾಶಿವ ಶಿವಾಚಾರ್ಯ ಮಹಾಸನ್ನಿಧಿಯಲ್ಲಿ ಸಮರ್ಪಿಸಲಾಗಿದೆ. ಪ್ರಕೃತ ಗ್ರಂಥದಲ್ಲಿ ಮೂರುದಳಗಳಿವೆ. ಮೊದಲನೆಯ ದಳದಲ್ಲಿ ಶ್ರೀಗಳವರ ಸಂದರ್ಶನಕ್ಕೆ ಸಂಬಂಧಿಸಿದ ಲೇಖನಗಳೂ, ಎರಡನೆಯ ದಳದಲ್ಲಿ ಸಾಮಾಜಿಕ ದರ್ಶನಕ್ಕೆ ಸಂಬಂಧಿಸಿದ ಲೇಖನಗಳೂ, ಮೂರನೆಯ ದಳದಲ್ಲಿ ಸಾಹಿತ್ಯ ದರ್ಶನಕ್ಕೆ ಸಂಬಂಧಿಸಿದ ಲೇಖನಗಳೂ, ಹೀಗೆ ಒಟ್ಟು ೯೮ ಲೇಖನಗಳೂ ಕವಿತೆಗಳೂ ಇವೆ. ಈ ಉಪಾಯನ ಗ್ರಂಥವನ್ನು ಮೈಸೂರಿನ ರಾಜ್ಯಪಾಲರೂ ಕರ್ಣಾಟಕ ರತ್ನಸಿಂಹಾಸನಾಧೀಶ್ವರರೂ ಆದ ಶ್ರೀ ಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಅವರು ಉದ್ಘಾಟಿಸಿದ್ದಾರೆ.

ಷ.ಬ್ರ.ಶ್ರೀ. ಸದಾಶಿವಾಚಾರ್ಯರು ಪರಮಯೋಗಿಗಳಷ್ಟೇ ಅಲ್ಲದೆ ಉತ್ತಮ ಸಾಹಿತಿಗಳೂ ಭಾಷ್ಯಕಾರರೂ ಆಗಿದ್ದಾರೆ. ಶ್ರೀಗಳವರು ಸುಮಾರು ೨೦ ಕೃತಿಗಳನ್ನೂ ಲೇಖನಗಳನ್ನೂ ಬರೆದಿದ್ದಾರೆ. ಇವು ನಾಡಿನ ವಿದ್ವಾಂಸರಿಗೆ ಈಗಾಗಲೇ ಪರಿಚಿತವಾಗಿವೆ.

ನಾವು ಇಂದು ವಿಜ್ಞಾನಯುಗದಲ್ಲಿದ್ದೇವೆ. ಇಂದಿನ ಮಾನವನಲ್ಲಿ ಹಿಂದಿನವರ ಧರ್ಮನೀತಿ ತತ್ತ್ವಗಳು ಅಷ್ಟಾಗಿ ಕಂಡುಬರುತ್ತಿಲ್ಲ. ಅದಕ್ಕೆ ಕಾರಣ ನವನಾಗರೀಕತೆ. ಮಾನವನ ಬುದ್ಧಿಶಕ್ತಿ ಬೆಳೆದಂತೆಲ್ಲ ಆತ್ಮಶಕ್ತಿ ಕುಗ್ಗುತ್ತಾ ಬರುತ್ತಿದೆ; ಧರ್ಮಶ್ರದ್ಧೆ ಕುಂಠಿತವಾಗುತ್ತದೆ. ತತ್ಪರಿಣಾಮವಾಗಿ ಅಜ್ಞಾನಾಂಧಕಾರದಲ್ಲಿ ಇಂದು ತೊಳಲಬೇಕಾಗಿದೆ. ಮಾನವನಲ್ಲಿ ದಯೆ ಧರ್ಮ ನೀತಿತತ್ವಗಳು ನೆಲೆಗೊಳ್ಳಬೇಕಾದರೆ ವಿಭೂತಿ ಪುರುಷರ ಜ್ಞಾನದಾನಿಗಳ ಅವತಾರ ಅತ್ಯವಶ್ಯ. ಇಂತಹ ಪರಿಸ್ಥಿತಿಯಲ್ಲಿ ಶ್ರೀ ಸದಾಶಿವಾಚಾರ್ಯರು ಮಾನವ ಕಲ್ಯಾಣಕ್ಕಾಗಿ ಜ್ಞಾನಬೋಧೆಗಾಗಿ ಅವತಾರವೆತ್ತಿರುವುದು ನಾಡಿನ ಪುಣ್ಯ. ನಮ್ಮ ದೇಶದ ಇತಿಹಾಸವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಈ ಸಂಗತಿಗಳು ಸುಸ್ಪಷ್ಟವಾಗುತ್ತವೆ. ದೇಶದಲ್ಲಿ ಅಜ್ಞಾನವೆಂಬ ಕತ್ತಲೆ ಆವರಿಸಿದ್ದಾಗ ಗೌತಮಬುದ್ಧ, ವಿಶ್ವಬಂಧು ಬಸವಣ್ಣ, ಮಧ್ವಾಚಾರ್ಯ, ರಾಮಾನುಜಾಚಾರ್ಯ, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಮಹಾತ್ಮಾ ಗಾಂಧಿ ಮೊದಲಾದ ವಿಭೂತಿ ಪುರುಷರೂ ಅನುಭಾವಿಗಳೂ ಜನ್ಮವೆತ್ತಿ ಜನತೆಯನ್ನು ಸನ್ಮಾರ್ಗಕ್ಕೊಯ್ಯುವ ಪಥವನ್ನು ತೋರಿದ್ದಾರೆ. ಅಂತೆಯೇ ಇಂದು ಶ್ರೀಗಳವರು ಈ ತೆರನ ಕಾಯಕವನ್ನು ಕೈಕೊಂಡು ಜನತೆಯ ಅಜ್ಞಾನಂಧಕಾರವನ್ನು ತಮ್ಮ ಜ್ಞಾನಾಂಜನ ಶಲಾಕೆಯಿಂದ ಹೊರದೂಡುತ್ತಿದ್ದಾರೆ. ಶ್ರೀಗಳವರ ಶೀಲತಪೋನಿಷ್ಠೆಗಳಿಗೆ ಮಾರುಹೋಗಿರುವ ಭಕ್ತರೆಷ್ಟು ಮಂದಿ! ಅನುಯಾಯಿಗಳೆಷ್ಟು ಮಂದಿ! ಹೀಗೆ ತಮ್ಮ ಧೀಶಕ್ತಿಯಿಂದ ತಮ್ಮ ಸುತ್ತಮುತ್ತಲಿನ ಜನತೆಯನ್ನು ಸನ್ಮಾರ್ಗಕ್ಕೊಯ್ಯುವ ಸೇವೆಯಲ್ಲಿ ಶ್ರೀಗಳವರು ನಿರತರಾಗಿರುವುದು

ನಮ್ಮ ಪುಣ್ಯ. ಇಂತಹ ಉಜ್ವಲ ತಪೋನಿಷ್ಠರೂ, ಸಚ್ಛೀಲ, ಸಚ್ಚಾರಿತ್ರ ಸಂಪನ್ನರೂ ಮೇಲಾದ ಅನುಭಾವಿಗಳೂ ಆದ ಶ್ರೀಗಳವರ ಷಷ್ಟ್ಯಬ್ದದ ಸವಿನೆನಹಿಗಾಗಿ ಈ ಗ್ರಂಥವನ್ನು ಅವರ ಶಿಷ್ಯವೃಂದದವರು ಅರ್ಪಿಸಿದ್ದಾರೆ.

ಶ್ರೀಸದಾಶಿವ ಶಿವಾಚಾರ್ಯರು ಶಿವಾದ್ವೈತ ತತ್ತ್ವಪ್ರಚಾರಕ್ಕಾಗಿ ಒಂದು ಸಮಿತಿಯನ್ನು ಸ್ಥಾಪಿಸಿದ್ದಾರೆ. ಪ್ರತಿವರ್ಷ ಸಮ್ಮೇಳನಗಳನ್ನೂ ನಡೆಸುತ್ತಿದ್ದಾರೆ. ಅಲ್ಲದೆ ತಾವಿರುವೆಡೆಯಲ್ಲಿ ಒಂದು ಆಶ್ರಮವನ್ನು ಸ್ಥಾಪಿಸಿದ್ದಾರೆ. ಶಿಷ್ಯಕೋಟಿಗೆ ಸರ್ವವಿಧದಲ್ಲೂ ಜ್ಞಾನದಾನವನ್ನು ಮಾಡುತ್ತಿದ್ದಾರೆ. ಜನತೆಯ ಮೇಲ್ಮೆಗಾಗಿ ಶ್ರೀಗಳವರು ಧಾರ್ಮಿಕ ಆಂದೋಲನವನ್ನೇ ಉಂಟುಮಾಡಿದ್ದಾರೆ. ತತ್ಪರಿಣಾಮವಾಗಿ ಜನ ಜಾಗೃತರಾಗಿ ಸದ್ಧರ್ಮ ಸತ್ಪಥಗಳಲ್ಲಿ ಮುಂದುವರಿಯಲವಕಾಶವಾಗಿದೆ.

ಪ್ರಸ್ತುತ ಗ್ರಂಥವು ಹಲವಾರು ದೃಷ್ಟಿಗಳಿಂದ ಉಪಯುಕ್ತವಾಗಿದೆ. ಧಾರ್ಮಿಕರಿಗೆ ಧರ್ಮವನ್ನೂ, ಸಾಮಾಜಿಕರಿಗೆ ಸಾಮಾಜಿಕ ಸಂಗತಿಗಳನ್ನೂ, ಸಾಹಿತಿಗಳಿಗೆ ಸಾಹಿತ್ಯವನ್ನೂ ಒದಗಿಸುತ್ತದೆ. ಇಲ್ಲಿಯ ಹಲವಾರು ಲೇಖನಗಳು ಅತ್ಯಂತ ಉಪಯುಕ್ತವಾಗಿವೆ. ಕೆಲವು ಸಂಶೋಧನಾತ್ಮಕ ಲೇಖನಗಳು ಈ ಗ್ರಂಥದ ಮೇಲ್ಮೆಯನ್ನು ಹೆಚ್ಚಿಸಿವೆ. ಶ್ರೀಗಳವರಲ್ಲಿರುವ ಅಪಾರ ಶ್ರದ್ಧಾಭಕ್ತಿಗಳ ಕುರುಹಾಗಿ ಈ "ವಿಭೂತಿ" ಶ್ರೀಗಳವರ ಲಲಾಟದಲ್ಲಿ ರಾರಾಜಿಸುವಂತಾಗಿದೆ.

ಸಂಭಾವನಾಗ್ರಂಥಗಳನ್ನೂ ಉಪಾಯನಗಳನ್ನೂ ಯಾರಾದರೂ ಒಬ್ಬ ಅತ್ಯುನ್ನತ ವ್ಯಕ್ತಿಗೆ ಅವರಲ್ಲಿನ ಅಪಾರ ಗೌರವಸೂಚಕವಾಗಿ ಅರ್ಪಿಸುವ ಈ ಪದ್ಧತಿ ತೀರಾ ಇತ್ತೀಚಿನದು. ಕೆಲವು ದಶಕಗಳಿಂದ ಪ್ರಾರಂಭವಾಗಿದೆ. ಬಹುಶಃ ಪಾಶ್ಚಾತ್ಯರಿಂದ ಈ ಪದ್ಧತಿ ಬಂದಿರಬಹುದೇನೋ. ಎಂತಾದರೂ ಆಗಲಿ ಇದು ಒಂದು ಸ್ತುತ್ಯ ಸೇವೆ. ಇದು ನಮ್ಮ ನಾಡಿನಲ್ಲಿ ನಿರಂತರವಾಗಿ ನಡೆದುಕೊಂಡು ಬರಲಿ. ಕನ್ನಡ ಸಾಹಿತ್ಯಕ್ಕೆ ಇದೊಂದು ಹೊಸಕೊಡುಗೆ ಎನ್ನಬಹುದು. ಪ್ರಸ್ತುತ ಗ್ರಂಥದ ಪ್ರಕಟನಾಧ್ಯಕ್ಷರಾದ ನಿಡುಮಾಮಿಡಿ ಚನ್ನಬಸವ ದೇಶಿಕೇಂದ್ರ ಮಹಾಸ್ವಾಮಿಗಳವರು ಅತ್ಯಂತ ನಿಷ್ಠೆ ಮತ್ತು ಆಸ್ಥೆಯಿಂದ ಈ ಗ್ರಂಥವನ್ನು ಹೊರತಂದಿದ್ದಾರೆ. ಶ್ರೀಗಳವರ ಬಹುಮುಖವಾದ ಸಾಹಿತ್ಯ ಸೇವೆ ಅವ್ಯಾಹತವಾಗಿ ನಡೆದುಕೊಂಡು ಬರುತ್ತಿದೆ. ಈ ಗ್ರಂಥದಲ್ಲಿ ಶ್ರೀಗಳವರ ಸುಮಾರು ೧೯ ಲೇಖನಗಳೂ ಕವಿತೆಗಳೂ ಇವೆ. ಒಬ್ಬ ಕಿರಿಯ ಶ್ರೀಗಳವರ ನೇತೃತ್ವದಲ್ಲಿ ನಾಡಿನ ಮತ್ತೊಬ್ಬ ಹಿರಿಯ ಶ್ರೀಗಳವರಿಗೆ ಅರ್ಪಿಸಲ್ಪಟ್ಟಿರುವುದು ಒಂದು ಶುಭಯೋಗ.

ಈ ಸಂದರ್ಭದಲ್ಲಿ ಒಂದು ಸೂಚನೆಯನ್ನು ಗ್ರಂಥಸಂಪಾದಕರಿಗೆ ಕೊಡಬಯಸುತ್ತೇವೆ. "ವಿಭೂತಿ" ಒಬ್ಬ ಮಹಾನ್ ವ್ಯಕ್ತಿಗೆ, ಧಾರ್ಮಿಕ ಪುರುಷನಿಗೆ ಅರ್ಪಿಸಿದ ಗ್ರಂಥ. ಇದರಲ್ಲಿ ಧರ್ಮಕ್ಕೆ ಮುಖ್ಯವಾಗಿ ವೀರಶೈವ ಧರ್ಮಕ್ಕೆ ಸಂಬಂಧಿಸಿದ ಲೇಖನಗಳ ಒಂದು ವಿಭಾಗ ಇದ್ದಿದ್ದರೆ ಚೆನ್ನಿತ್ತು ಎನ್ನಿಸುತ್ತದೆ. ಅಂದು ಇದು ಒಂದು ಅಧಿಕೃತ ಆಧಾರಗ್ರಂಥ ಎಂದೆನಿಸುವುದು ಅನಿವಾರ್ಯವಾಗಿತ್ತು. ಈ ಗ್ರಂಥವು ಸರ್ವಾಂಗೀಣ ಸುಂದರವಾಗಿ ಹೊರಬಿದ್ದಿದ್ದರೂ ಕೆಲವೆಡೆ ಮುದ್ರಣ ಅಷ್ಟಾಗಿ ಸಮರ್ಪಕವಾಗಿಲ್ಲ. ಈ ಗ್ರಂಥದ ಸಂಪಾದಕರು, ಪ್ರಕಾಶಕರು ಶ್ರಮವಹಿಸಿ ಈ ಬೃಹದ್ಗ್ರಂಥವನ್ನು ಹೊರತಂದಿರುವುದು ಸ್ತುತ್ಯ. ಈ "ವಿಭೂತಿ" ಭವಗಳನ್ನು ಕಳೆದು ಸರ್ವರ ಲಲಾಟದಲ್ಲಿ ರಾರಾಜಿಸಲಿ ಎಂದು ಈ ಗ್ರಂಥವನ್ನು ಅರ್ಪಿಸಿರುವ ಶ್ರೀಗಳವರು ದೀರ್ಘಾಯುವಾಗಲಿ ಎಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇವೆ.



## ಸದಾ–ಶಿವ–ರುದ್ರಂ–ಸಮೀಕ್ಷೆ

ಸಂಪಾದಕರು: ಶಾಂತೇಶ ಹಿರೇಮಠ, ಮುಳಸಾವಳಗಿ, ಆಶ್ರಯದಾತರು– ಶ್ರೀ ಜಿ.ಎಸ್. ಸೋಮಶೇಖರಪ್ಪನವರು, ಶ್ರೀ ಬಿ.ಎಸ್. ಆನಂದಮೂರ್ತಿಯವರು, ಗಿರಿಯಾಪುರ, ಚಿಕ್ಕಮಗಳೂರು ಜಿಲ್ಲೆ. ಪ್ರಥಮ ಮುದ್ರಣ ೧೯೭೬, ಪುಟಗಳು ೧೬+೩೨೨, ಬೆಲೆ: ರೂ. ೧೨.೦೦

## ಸಿದ್ಧಾಂತಶಿಖಾಮಣಿಯ ಸೌಂದರ್ಯದರ್ಶನ

ಲೇಖಕರು: ಶ್ರೀಜಚನಿ, ಪ್ರಕಾಶಕರು: ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ, ನಂ. ೪೯, ಹ.ಬ. ಸಮಾಜರಸ್ತೆ, ಬಸವನಗುಡಿ, ಬೆಂಗಳೂರು–೪, ಸೇವಾಕರ್ತರು: ಶ್ರೀ ಬಿ. ರೇಣುಕಾಚಾರ್ಯ, ಎಂ.ಎ. ಯಲಗುದಿಗೆ ಆಲೂರು, ಚಿಕ್ಕಮಗಳೂರು ಜಿಲ್ಲೆ, ಪ್ರಥಮ ಮುದ್ರಣ ೧೯೭೬, ಪುಟಗಳು ೨೪+೧೦೮, ಬೆಲೆ: ರೂ. ನಾಲ್ಕು ರೂಪಾಯಿಗಳು.

## ಕೂಡಲ ಕ್ಷೇತ್ರ

ಲೇಖಕರು: ಶ್ರೀ ಜಚನಿ, ಪ್ರಕಾಶಕರು: ಶ್ರೀ ಜಿ.ಪಿ. ಪಾಟೀಲ, ಕೂಡಲಸಂಗಮ, ದ್ವಿತೀಯ ಮುದ್ರಣ ೧೯೭೫, ಪುಟಗಳು viii+೯೦, ಬೆಲೆ: ರೂ. ೨.೦೦

---

**ಈ** ಮೂರು ಕೃತಿಗಳ ಕರ್ತೃಗಳು ಡಾ. ಜಚನಿ ಅವರು. ಶ್ರೀಮನ್ನಿಡುಮಾಮಿಡಿ ದೇಶಿಕೇಂದ್ರ ಸ್ವಾಮಿಗಳು. ವೀರಶೈವಧರ್ಮ ತತ್ವಸಾಹಿತ್ಯಗಳಲ್ಲಿ ವಿಶೇಷ ಪರಿಶ್ರಮವನ್ನು ಗಳಿಸಿರುವುದು ಸರ್ವಶ್ರುತ. ಸಮಾಜಸೇವೆ ಸಾಹಿತ್ಯ ಸೃಷ್ಟಿ. ಸಾಂಸ್ಕೃತಿಕ ಚಟುವಟಿಕೆ, ಭಾಷಾಭಿಮಾನ –ಇವುಗಳತ್ತ ಶ್ರೀಗಳವರು ವಿಶೇಷ ಗಮನವನ್ನು ಹರಿಸಿದ್ದಾರೆ. ನಿಡುಮಾಮಿಡಿಮಠ ಸಾಹಿತ್ಯಸಂಸ್ಕೃತಿಗಳ ಕೇಂದ್ರಸ್ಥಾನವಾಗಿದೆ.

ಶ್ರೀಗಳವರು ನೂರಾರು ಕೃತಿಗಳನ್ನು ರಚಿಸಿ ಕನ್ನಡ ಧಾರ್ಮಿಕ ಸಾಹಿತ್ಯ ಕ್ಷೇತ್ರಕ್ಕೆ ಮಿಗಿಲಾದ ಸೇವೆಯನ್ನು ಸಲ್ಲಿಸಿದ್ದಾರೆ. ವಚನ, ಕಾವ್ಯ, ಚರಿತ್ರೆ, ವಿಮರ್ಶೆ, ಸಂಶೋಧನೆ, ಸಂಪಾದನೆ, ಭಾಷಾಂತರವೇ ಮೊದಲಾದ ವಿವಿಧ ಪ್ರಕಾರಗಳಲ್ಲಿ ಕೃಷಿಗೈದಿದ್ದಾರೆ. ಶ್ರೀಗಳವರ ಜೀವನಸಿದ್ಧಾಂತದಲ್ಲಿ ವೀರಶೈವ ಸಿದ್ಧಾಂತವನ್ನು ಸವಿಸ್ತಾರವಾಗಿ ಪರಿಶೀಲಿಸಲಾಗಿದೆ. ಷಟ್ಸ್ಥಲ ಸಿದ್ಧಾಂತವನ್ನು ಪ್ರತಿಪಾದಿಸಿರುವ ಈ ಬೃಹತ್ಕೃತಿಯಲ್ಲಿ ಶ್ರೀಗಳವರ ವ್ಯಾಪಕವಾದ ಅಧ್ಯಯನವನ್ನು ಖಚಿತವಾದ ವಿದ್ವತ್ತನ್ನು ಕಾಣಬಹುದಾಗಿದೆ. ಜಚನಿ ಅವರು ತಮ್ಮ ಜೀವನವನ್ನೆಲ್ಲ ಆಧ್ಯಾತ್ಮಿಕ ಸಾಹಿತ್ಯ ಸೃಷ್ಟಿಗೆ ಮೀಸಲಾಗಿರಿಸಿದ್ದಾರೆ. ಶ್ರೀಗಳವರ ವ್ಯಕ್ತಿತ್ವದಲ್ಲಿ ಧರ್ಮ ಹಾಗೂ ಕಾವ್ಯಧರ್ಮಗಳು ಹಾಸುಹೊಕ್ಕಾಗಿವೆ. ಅನುಭವ ಅನುಭಾವಗಳು ಸಂಗಮಿಸಿರುವ ಶ್ರೀಗಳವರ ಕೃತಿಗಳು ಕನ್ನಡ ಸಾಹಿತ್ಯಕ್ಕೆ ಮಹತ್ವಪೂರ್ಣ ಕಾಣಿಕೆಗಳಾಗಿವೆ.

ಸದಾ–ಶಿವ–ರುದ್ರಂ ಕೃತಿಯನ್ನು ಕೆಲವು ಮಹನೀಯರು ಕನ್ನಡದ ಮಹಾಕಾವ್ಯವೆಂದು ಕರೆದಿದ್ದಾರೆ. ಈ ಮಹಾಕಾವ್ಯದ ಸಮೀಕ್ಷೆಯನ್ನು ಹಲವಾರು ವಿದ್ವಾಂಸರು ಪ್ರಸ್ತುತ ಗ್ರಂಥದಲ್ಲಿ ಮಾಡಿದ್ದಾರೆ. ಈ ಕಾವ್ಯದ ಕಥಾವಸ್ತು ತೀರಾ ನವೀನವಾದುದು. ಗಿರಿಯಾಪುರದ ಶ್ರೀ ಸದಾಶಿವ ಸ್ವಾಮಿಗಳ ಮತ್ತು ಅವರ ಪರಮಶಿಷ್ಯರಾದ ಶಿವರುದ್ರಪ್ಪನವರ ಜೀವನ ಚರಿತ್ರೆಯಾಗಿದೆ. ಈ ಕಾವ್ಯದ ವಸ್ತುವನ್ನು ಕುರಿತು ಶ್ರೀಗಳವರು ಹೇಳಿರುವ ಮಾತುಗಳು ಇವು: "ಈ ಕಾವ್ಯವಸ್ತು ಹಳತಲ್ಲ, ಬಾನ್‌ಹೂವಲ್ಲ. ಪ್ರಾಕ್‌ಕಥಾಬೃಹತ್ ಭಿತ್ತಿಯ ಮೇಲೆ ಲೀಲೆಯಿರೆ ಪೊಸಕಬ್ಬ ಚಿತ್ತಾರಂ ಮಿಗೆ ರೂಪಿಸವೇಳ್ಕುಂ; ನವಭಿತ್ತಿಯಂ ರಚಿಸಿ ನವಕಾವ್ಯಮಂ ರೂಪಿಸುವ ಕಜ್ಜಮಿದು ತಿಳಿಯೆ ಕಷ್ಟಂ ತಾನಲ್ತೆ?... ನವ್ಯಜೀವನ ನಡೆಸಿದ ಶ್ರೀ ಶಿವರುದ್ರನಾ ಕಾವ್ಯರಚನೆಯು

ಕಷ್ಟಕರ ಕಾರ್ಯಸಾಧನಂ. ನಿನ್ನ ದಯೆ ತಾನದಿರೆ ಹೊಮ್ಮದೇಂ ಪೊಸಪ್ರಜ್ಞೆ ಸನ್ನುತದ ನವನವೋನ್ಮೇಷಶಾಲಿನಿ ಪ್ರತಿಭೆ?"

ಇದು ಒಂದು ಸಮಕಾಲೀನ ವಸ್ತುನಿಷ್ಠ ಕಾವ್ಯ. ಇದರಲ್ಲಿ ಹಲವಾರು ಸಮಸ್ಯೆಗಳನ್ನು ವಿಶ್ಲೇಷಿಸಲಾಗಿದೆ. ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕವೇ ಮೊದಲಾದ ವಿಷಯಗಳನ್ನು ಚರ್ಚಿಸಲಾಗಿದೆ. ದಾನಧರ್ಮ ದರ್ಶನಗಳ ಬಗೆಗೆ ವಿಶೇಷವಾದ ಪ್ರಸ್ತಾಪ ಮಾಡಲಾಗಿದೆ. ಶ್ರೀಗಳವರ ಅಸಾಧಾರಣ ಪಾಂಡಿತ್ಯ ಪ್ರತಿಭೆಗಳನ್ನು ಈ ಬೃಹತ್ ಕಾವ್ಯದಲ್ಲಿ ಕಾಣಬಹುದಾಗಿದೆ. ಒಟ್ಟಿನಲ್ಲಿ ಸದಾ-ಶಿವ-ರುದ್ರಂ ಸಮೀಕ್ಷೆ ಮೂಲಕಾವ್ಯದ ಎಲ್ಲ ಅಂಶಗಳನ್ನು ಸಮಗ್ರವಾಗಿ ವಿಶ್ಲೇಷಿಸಿರುವ ಒಂದು ಮಹತ್ಕೃತಿಯಾಗಿದೆ. ಸಂಪಾದಕರ ಶ್ರಮ ಸಾರ್ಥಕವಾಗಿದೆ. ಅವರ ಉದ್ದೇಶ ಈಡೇರಿದಂತಾಗಿದೆ.

ಸಿದ್ಧಾಂತಶಿಖಾಮಣಿ ವೀರಶೈವಧರ್ಮದ ಒಂದು ಸಿದ್ಧಾಂತ ಗ್ರಂಥ. ಜನಸಾಮಾನ್ಯರಿಗೆ ಇದರ ಪ್ರವೇಶ ದುರ್ಗಮವಾದುದು. ಪಂಡಿತರಿಗೂ ಇದನ್ನು ಓದಿ ಅರ್ಥೈಸಿಕೊಳ್ಳುವುದು ಸ್ವಲ್ಪಮಟ್ಟಿಗೆ ದುಸ್ತರವಾದುದು. ಶ್ರೀಗಳವರಿಗಾದರೋ ಸಿದ್ಧಾಂತಶಿಖಾಮಣಿ ಕರತಲಾಮಲಕ. ಅವರು ಇಡೀಗ್ರಂಥವನ್ನು ಸಮಗ್ರವಾಗಿ ಅವಲೋಕಿಸಿ ಅದರಲ್ಲಿ ಸೌಂದರ್ಯ ದರ್ಶನ ಯಾವ ರೀತಿ ವ್ಯಕ್ತವಾಗಿದೆ ಎಂಬುದನ್ನು ವಿವರಿಸಿದ್ದಾರೆ. ಈ ಕೃತಿಯಲ್ಲಿ ಶ್ರೀಗಳವರು ನಾಲ್ಕುಬಗೆಯ ಸೌಂದರ್ಯವನ್ನು ಕಂಡಿದ್ದಾರೆ. ಅವು ಶಿವಶಕ್ತಿ ಸೌಂದರ್ಯ; ಪ್ರಕೃತಿ ಸೌಂದರ್ಯ; ವ್ಯಕ್ತಿನಿಷ್ಠ ಸೌಂದರ್ಯ: ತಾತ್ವಿಕ ಅಥವಾ ಸೈದ್ಧಾಂತಿಕ ಸೌಂದರ್ಯ. ವಾಸ್ತವವಾಗಿ ಗ್ರಂಥದಲ್ಲಿ ಹೇಳಿರುವುದು ಆಧಾರ ಸೌಂದರ್ಯ ಮತ್ತು ಆಧೇಯ ಸೌಂದರ್ಯ. ಈ ಎರಡರಲ್ಲೇ ನಾಲ್ಕು ಪರ್ಯವಸಾನವಾಗುತ್ತವೆ. "ಕವಿ ಶಿವಾಗಮಗಳ ಆಧಾರದಲ್ಲಿ ಪಡೆದ ಸ್ವಾನುಭವವನ್ನು ಸಂಪೂರ್ಣವಾಗಿ ಸುಂದರವಾಗಿ ರೂಪಿಸಿದ್ದಾರೆ. ನಾವು ಆತನ ಸೈದ್ಧಾಂತಿಕ ಕಾವ್ಯವನ್ನು ಆಧರಿಸಿ ಪಡೆದ ಅನಿಸಿಕೆಗಳನ್ನು ಅಭಿವ್ಯಕ್ತ ಮಾಡಿದ್ದೇವೆ" ಎಂದಿದ್ದಾರೆ ಲೇಖಕರು. ವಿಷಯ ಪ್ರತಿಪಾದನೆಗೆ ಮೂಲದ ಶ್ಲೋಕಗಳನ್ನು ಉದ್ಧರಿಸಿರುವುದೇ ಅಲ್ಲದೆ ಅವುಗಳ ಕನ್ನಡ ಭಾಷಾಂತರವನ್ನೂ ಕೊಟ್ಟಿದ್ದಾರೆ. ಜೊತೆಗೆ ಅಲ್ಲಲ್ಲಿ ಕೆಲವು ವಚನಕಾರರ ವಚನಗಳನ್ನು ಹೊಂದಿಸಿ ವ್ಯಾಖ್ಯಾನ ಸುಲಭಸಾಧ್ಯವಾಗುವಂತೆ ಮಾಡಿದ್ದಾರೆ. ಒಟ್ಟಿನಲ್ಲಿ ಸಿದ್ಧಾಂತ ಶಿಖಾಮಣಿಯ ಸೌಂದರ್ಯದರ್ಶನ ಮೂಲಕೃತಿಗೆ ಹಿಡಿದ ಒಂದು ಕೈಪಿಡಿಯಂತಿದೆ. ಇದು ಕೇವಲ ಕೈಗನ್ನಡಿಯಷ್ಟೇ ಅಲ್ಲದೆ ರನ್ನಗನ್ನಡಿಯೂ ಆದಂತಿದೆ.

"ಕೂಡಲ ಕ್ಷೇತ್ರ" ಎಂಬುದು ಕೂಡಲಸಂಗಮದ ಪರ್ಯಾಯನಾಮ. ಈ ಕ್ಷೇತ್ರ ಹಲವಾರು ದೃಷ್ಟಿಗಳಿಂದ ಪ್ರಮುಖವಾದುದು. ಇದಕ್ಕೆ ಐತಿಹಾಸಿಕ, ಧಾರ್ಮಿಕ, ಪೌರಾಣಿಕ ಹಿನ್ನೆಲೆಗಳಿವೆ. ಧರ್ಮಪ್ರಧಾನವಾದ ಭರತಖಂಡದಲ್ಲಿ ಅನಾದಿಕಾಲದಿಂದಲೂ ತೀರ್ಥಕ್ಷೇತ್ರಗಳು ಜನಜೀವನದಲ್ಲಿ ಮಹತ್ತರವಾದ ಪಾತ್ರವನ್ನು ನಿರ್ವಹಿಸಿವೆ.

ಬಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕಿಗೆ ಸೇರಿದ ಕೂಡಲಸಂಗಮದಲ್ಲಿ ಕೃಷ್ಣ ಮತ್ತು ಮಲಪ್ರಭ ನದಿಗಳು ಕೂಡಿ ಹರಿಯುತ್ತವೆ. ಈ ಸಂಗಮದಲ್ಲಿ ಮಿಂದವರ ಪಾಪ ಪರಿಹಾರವಾಗುವುದೆಂಬ ನಂಬಿಕೆ ಜನಜನಿತವಾಗಿದೆ. ಇಲ್ಲಿರುವ ಪ್ರಾಚೀನವಾದ ಸಂಗಮನಾಥ ದೇವಾಲಯ ಭಕ್ತಿಮುಕ್ತಿಗಳ ಸಂಕೇತವಾಗಿ ಕಂಗೊಳಿಸುತ್ತಿದೆ. ಈ ಕೂಡಲಸಂಗಮಕ್ಕೆ ಈ ಹೆಸರು ಬರಲು ಕಾರಣ, ಇದರ ನಿಷ್ಪತ್ತಿ ಮೊದಲಾದ ವಿವರಗಳನ್ನು ಶ್ರೀಗಳವರು ತರ್ಕಿಸಿದ್ದಾರೆ.

ಕೂಡಲಸಂಗಮದ ಹೆಸರು ಚಿರಸ್ಥಾಯಿಯಾಗಿ ಉಳಿದಿರುವುದು ಬಸವೇಶ್ವರರ ಸಂಪರ್ಕವಾದ ಮೇಲೆಯೇ. ಈ ಧಾರ್ಮಿಕ ಕ್ಷೇತ್ರಕ್ಕೆ ರಾಜಕೀಯ ಸಂಬಂಧವಾದ ಮೇಲೆ ಇತಿಹಾಸದಲ್ಲಿ ಇದಕ್ಕೆ ಒಂದು ಗಣನೀಯ ಸ್ಥಾನ ಪ್ರಾಪ್ತವಾಯಿತು ಎನ್ನಬಹುದು. ಬಸವಣ್ಣನವರ ವ್ಯಕ್ತಿತ್ವವನ್ನು ನಿರೂಪಿಸಿದ ಜಾತವೇದಮುನಿಗಳು ಸ್ಥಾನಪತಿಗಳಾಗಿದ್ದುದು ಈ ಕ್ಷೇತ್ರದಲ್ಲೇ. ಬಸವಣ್ಣನವರು ತಮ್ಮ ಮರ್ತ್ಯದ ಮಣಿಹವನ್ನು ಮುಗಿಸಿದ್ದೂ ಈ ಪುಣ್ಯಕ್ಷೇತ್ರದಲ್ಲೇ. ಇಂತಹ ಪುಣ್ಯಕ್ಷೇತ್ರದ ಒಂದು ಸುಂದರ ಚಿತ್ರಣವನ್ನು ಶ್ರೀಗಳವರು ಪ್ರಕೃತ ಗ್ರಂಥದಲ್ಲಿ ಮಾಡಿಕೊಟ್ಟಿದ್ದಾರೆ. ಇಹಪರಗಳ ಸೋಪಾನದಂತಿರುವ ಈ "ಕೂಡಲಕ್ಷೇತ್ರ" ಓದುಗರಿಗೆ ಒಂದು ಕೈಪಿಡಿಯಂತಿದೆ, ದಾರಿದೀಪದಂತಿದೆ.

ಸುಧಾ, ೨೧ ಆಗಸ್ಟ್ ೧೯೭೭

■

# ಮಹಾಕವಿ ಹರಿಹರದೇವ ವಿರಚಿತ ಗಿರಿಜಾಕಲ್ಯಾಣ

ಸಂಪಾದಕರು: ಡಾ. ಎಂ.ಎಸ್. ಸುಂಕಾಪುರ, ಪ್ರಕಾಶಕರು: ಕನ್ನಡ ಅಧ್ಯಯನ ಪೀಠ, ಪಠ್ಯಪುಸ್ತಕ ನಿರ್ದೇಶನಾಲಯ, ಧಾರವಾಡ, ಪುಟಗಳು ೧೧+xxiv+೩೪೪. ಬೆಲೆ: ರೂ. ೧೫.೦೦; ೧೮.೦೦, ಮೊದಲನೆಯ ಮುದ್ರಣ ೧೯೭೭

ಹದಿಮೂರನೆಯ ಶತಮಾನದಲ್ಲಿ ಆಗಿಹೋದ ಹರಿಹರ ತನ್ನ ಶ್ರೇಷ್ಠಕೃತಿಗಳಿಂದ ಚಿರಸ್ಮರಣೀಯನಾಗಿದ್ದಾನೆ. ಕನ್ನಡ ಸಾಹಿತ್ಯದಲ್ಲಿ ಒಂದು ಹೊಸ ಆಯಾಮವನ್ನು ತೆರೆದ ಹರಿಹರ ಕ್ರಾಂತಿಕಾರಕ ಕವಿ ಎಂದು ಹೆಸರಾಗಿದ್ದಾನೆ. ರಸಿಕಚಕ್ರಿ ಎಂದೂ ಭಕ್ತಕವಿ ಎಂದೂ ಕರೆಸಿಕೊಂಡಿದ್ದಾನೆ. ಅಸಂಖ್ಯಾತ ರಗಳೆಗಳನ್ನು ಬರೆದು ರಗಳೆಕವಿ ಎಂಬ ಬಿರುದಿಗೂ ಪಾತ್ರನಾಗಿದ್ದಾನೆ. ಈತನು ಬರೆದಿರುವ ರಗಳೆಗಳ ಸಂಖ್ಯೆ ಎಷ್ಟು ಎಂಬ ಬಗೆಗೆ ಒಂದು ನಿಬಂಧವೇ ಹುಟ್ಟಿಕೊಂಡಿದೆ. ಹರಿಹರನ ಭಕ್ತಿಭಾವಗಳ ಪ್ರಕರ್ಷವನ್ನು ರಗಳೆಗಳಲ್ಲಿ ಕಂಡುಕೊಳ್ಳಬಹುದಾಗಿದೆ. ಹರಿಹರನ ಜೀವನ ಚರಿತ್ರೆ ಆತನ ಕೃತಿಗಳಲ್ಲೆಲ್ಲೂ ಕಂಡುಬರುವುದಿಲ್ಲ. ಆತನ ಸೋದರಳಿಯನೂ ಉಭಯಕವಿ ಶರಭಭೇರುಂಡನೂ ಆದ ರಾಘವಾಂಕನ 'ಹರಿಹರ ಮಹತ್ವ' ಇನ್ನೂ ಸಿಕ್ಕಿಲ್ಲ. ಆದರೆ ಸಿದ್ಧನಂಜೇಶನ ರಾಘವಾಂಕ ಚಾರಿತ್ರದಲ್ಲಿ ಹರಿಹರನ ಜೀವಿತದ ಕೆಲವು ಸಂಗತಿಗಳು ಕಂಡುಬರುತ್ತವೆ. ಅಲ್ಲದೆ ಹರಿಹರನ ಪಿಂಡೋತ್ಪತ್ತಿ ರಗಳೆ, ಪುಷ್ಪರಗಳೆ ಮತ್ತು ಶತಕಗಳಲ್ಲಿ ಆತನ ಜೀವಿತದ ಕೆಲವು ಸಂಗತಿಗಳು ವ್ಯಕ್ತವಾಗಿವೆ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಇದು ಎಂತಾದರೂ ಇರಲಿ. ಹರಿಹರ ಕನ್ನಡದ ಒಬ್ಬ ಮಹಾಕವಿ, ಕ್ರಾಂತಿಕಾರಕ ಕವಿ, ಪ್ರಾಚೀನ ಸಂಪ್ರದಾಯಗಳನ್ನು ಕಿತ್ತೊಗೆದ ಧೀಮಂತ ಕವಿ. 'ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಕೃತಿರಚನೆ ಮಾಡಿ ಕೆಡಬಾರದೆಂದು' ತರುವಾಯದವರಿಗೆ ಮಾರ್ಗದರ್ಶನ ನೀಡಿದ ಕ್ರಾಂತದರ್ಶಿ.

ರಗಳೆಯ ಕವಿ ಎಂಬ ಅಪವಾದಕ್ಕೆ ಗುರಿಯಾಗಿದ್ದ ಹರಿಹರ ಅದನ್ನು ಹೋಗಲಾಡಿಸಿಕೊಳ್ಳಲು ಗಿರಿಜಾಕಲ್ಯಾಣವೆಂಬ ಚಂಪೂಕಾವ್ಯವನ್ನು ಬರೆದನೆಂಬ ಪ್ರತೀತಿ ಇದೆ. ಇದರ ಸತ್ಯಾಸತ್ಯತೆಯ ಬಗೆಗೆ ಚರ್ಚಿಸುವುದಕ್ಕಿಂತ ಆ ಕೃತಿಯ ಪರಿಶೀಲನೆಗೆ ತೊಡಗುವುದು ಹೆಚ್ಚು ಉಪಯುಕ್ತವಾದುದು. ಗಿರಿಜಾಕಲ್ಯಾಣದ ಕಥೆ ಲೋಕಪ್ರಸಿದ್ಧವಾದುದು. ಕಾಳಿದಾಸನ ಕುಮಾರಸಂಭವವನ್ನು ಆಧರಿಸಿ ರಚಿತವಾದ ಈ ಕಾವ್ಯದಲ್ಲಿ ಹಲವಾರೆಡೆ ಹರಿಹರ ತನ್ನ ಪ್ರತಿಭೆಯನ್ನೂ ಸ್ವಂತಿಕೆಯನ್ನೂ ಮೆರೆದಿದ್ದಾನೆ. ಆದ್ದರಿಂದಲೇ ಗಿರಿಜಾಕಲ್ಯಾಣ ಲೋಕಪೂಜ್ಯವಾದ ಕಾವ್ಯವಾಗಿದೆ.

ಹರಿಹರನ ಗಿರಿಜಾಕಲ್ಯಾಣವನ್ನು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ನಿರ್ದೇಶಕರಾದ ಡಾ. ಎಂ.ಎಸ್. ಸುಂಕಾಪುರ ಅವರು ಶಾಸ್ತ್ರೀಯವಾಗಿ ಸಂಪಾದಿಸಿದ್ದಾರೆ. ಈ ಸಂಸ್ಕರಣಕ್ಕೆ ಮೊದಲೇ ಡಾ. ನಂದೀಮಠ ಅವರು ಈ ಕಾವ್ಯವನ್ನು ಸಮರ್ಥವಾಗಿ ಸಂಪಾದಿಸಿದ್ದರು. ಸದ್ಯದಲ್ಲಿ ಅದರ ಪ್ರತಿಗಳು ದುರ್ಲಭವಾಗಿದ್ದುದರಿಂದ ಮತ್ತಷ್ಟು ಹಸ್ತಪ್ರತಿಗಳ ನೆರವಿನಿಂದ ಪ್ರಸ್ತುತ ಮುದ್ರಣವನ್ನು ಹೊರತರಲಾಗಿದೆ. ಪ್ರಾಚೀನ ಕಾವ್ಯಗಳನ್ನು ಶಾಸ್ತ್ರೀಯವಾಗಿ ಸಂಪಾದಿಸುವುದು ತುಂಬ ಕಷ್ಟದ ಕಾರ್ಯ. ಅಪಾರವಾದ ಪಾಂಡಿತ್ಯ ವಿದ್ವತ್ತುಗಳು ಮೇಳವಿಸಿರುವ ವಿದ್ವಾಂಸರು ಕೈಕೊಳ್ಳಬೇಕಾದಂಥಹುದು. ಗಿರಿಜಾಕಲ್ಯಾಣದ ಪ್ರಸ್ತುತ ಪರಿಷ್ಕರಣವನ್ನು ವಿವರವಾಗಿ ಪರಿಶೀಲಿಸಿದಾಗ ಕೆಲವೆಡೆ ಪಾಠಾಂತರಗಳ ಪಲ್ಲಟವಾಗಿರುವುದು. ಶಕಟರೇಫ ಸಾಮಾನ್ಯ ರೇಫ ತಪ್ಪಾಗಿರುವುದು; ಪದವಿಭಾಗ ಕ್ರಮ ತಪ್ಪಿರುವುದೂ ಕಂಡುಬರುತ್ತದೆ. [ಆಶ್ವಾಸ ೧-೭, ೧-೨೨, ೧-೩೩, ೧-೪೦, ೧-೪೩, ೧-೪೬, ೧-೫೦, ೨-೧೦೫ ವಚನ, ೮-೪೪, ೮-೪೭, ೧೦-೨೨ ವಚನ, ೧೦-೪೫ ವಚನ] ಈ ಸ್ಖಾಲಿತ್ಯಗಳನ್ನು ಪಟ್ಟಿ ಮಾಡುವುದು ಸುಲಭವಾದುದು. ಆದರೆ ಈ ಪ್ರಾಚೀನ ಪ್ರೌಢ ಚಂಪೂಕಾವ್ಯವನ್ನು ಸಂಪಾದಿಸುವ ಪರಿಶ್ರಮ ಕಾರ್ಯದಲ್ಲಿ ಈ ಸ್ಖಾಲಿತ್ಯಗಳು ಅನವಧಾನದಿಂದ ಸಂಭವಿಸಿದುವೆಂದು ಭಾವಿಸಬಹುದಾಗಿದೆ. ಇವನ್ನು ಮರುಮುದ್ರಣದಲ್ಲಿ ಸರಿಪಡಿಸಿಕೊಳ್ಳುವರೆಂದು ನಂಬಿದ್ದೇನೆ.

ಗಿರಿಜಾಕಲ್ಯಾಣಕ್ಕೆ ಚಿಕ್ಕದಾದರೂ ಅರ್ಥಪೂರ್ಣವಾದ ಪೀಠಿಕೆಯನ್ನೂ ವಿಸ್ತಾರವಾದ ಶಬ್ದಕೋಶವನ್ನೂ ಕೊಟ್ಟಿರುವುದು ತುಂಬ ಉಪಯುಕ್ತವಾಗಿದೆ. ಸಂಪಾದಕರ ಶ್ರಮ ನಿಜಕ್ಕೂ ಸಾರ್ಥಕವಾಗಿದೆ. ■

## ಹರಿಹರ ಕವಿಯ ಗಿರಿಜಾಕಲ್ಯಾಣ ಮಹಾಪ್ರಬಂಧಂ

ಗದ್ಯಾನುವಾದ: ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ, ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೧೮, ಪುಟಗಳು : xii+೩೮೪, ಮೊದಲ ಮುದ್ರಣ: ೧೯೭೭, ಬೆಲೆ: ಒಂಬತ್ತು ರೂಪಾಯಿಗಳು

## ಕನಕದಾಸರ ನಳಚರಿತ್ರೆ

ಗದ್ಯಾನುವಾದ: ಹಾತೂರು ಶಂಕರನಾರಾಯಣಭಟ್ಟ, ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೧೮, ಪುಟಗಳು : xii+೨೦೩, ಮೊದಲ ಮುದ್ರಣ: ೧೯೭೭, ಬೆಲೆ: ಐದು ರೂಪಾಯಿಗಳು

## ಬಸವಪ್ಪಶಾಸ್ತ್ರಿಗಳ ದಮಯಂತೀಸ್ವಯಂವರ

ಗದ್ಯಾನುವಾದ: ಕೆ.ಆರ್. ಲಕ್ಷ್ಮೀಕಾಂತಯ್ಯ, ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೧೮, ಪುಟಗಳು : xii+೧೬೩, ಮೊದಲ ಮುದ್ರಣ: ೧೯೭೭, ಬೆಲೆ: ಐದು ರೂಪಾಯಿಗಳು

---

ಕನ್ನಡ ಸಾಹಿತ್ಯ ಪರಿಷತ್ತು ಪಾಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣ ಮತ್ತು ಇವುಗಳ ಗದ್ಯಾನುವಾದವನ್ನು ಹೊರತರಬೇಕೆಂದು ತೀರ್ಮಾನಿಸಿ ಅದರಂತೆ ವಜ್ರಮಹೋತ್ಸವದ ವೇಳೆಗೆ ಕೆಲವಾರು ಕೃತಿಗಳನ್ನು ಹೊರತಂದಿದೆ. ಆ ಯೋಜನೆಯಂತೆ ಪ್ರಕಟವಾದವು ಈ ಮೇಲಿನ ಈ ಮೂರು ಪುಸ್ತಕಗಳು.

ಪ್ರಾಚೀನ ಕನ್ನಡ ಕಾವ್ಯಗಳನ್ನು ಜನಸಾಮಾನ್ಯರಿಗೂ ವಿದ್ಯಾರ್ಥಿಗಳಿಗೂ ಸುಲಭಗಮ್ಯವಾಗುವಂತೆ ಅವುಗಳ ಗದ್ಯಾನುವಾದ, ಅರ್ಥಕೋಶವೇ ಮೊದಲಾದ ಉಪಯುಕ್ತ ಮಾಹಿತಿಯೊಂದಿಗೆ ಹೊರತರುವ ಈ ಯೋಜನೆ ಸ್ತುತ್ಯವಾದುದು. ಈ ತೆರನ ಕಾರ್ಯ ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಈ ದಿಸೆಯಲ್ಲಿ ಗುಬ್ಬಿಯ ಮಲ್ಲಣ್ಣಾರ್ಯನ ವೀರಶೈವಾಮೃತ ಮಹಾಪುರಾಣಕ್ಕೆ ನಂಜುಂಡಶಾಸ್ತ್ರಿಗಳ ಶಿವಪ್ಪಶಾತ್ರಿಗಳು ತಾತ್ಪರ್ಯ ಚಂದ್ರಿಕೆ ಎಂಬ ಗದ್ಯಾನುವಾದವನ್ನೂ, ಷಡಕ್ಷರಿಯ ರಾಜಶೇಖರ ವಿಳಾಸಕ್ಕೆ ದಕ್ಷಿಣಾಮೂರ್ತಿಶಾಸ್ತ್ರಿ ಅವರು ಟೀಕೆ ಟಿಪ್ಪಣಿಗಳನ್ನೂ, ಲಕ್ಷ್ಮೀಶನ ಜೈಮಿನಿ ಭಾರತಕ್ಕೆ ದೊಡ್ಡಬೆಲೆ ನಾರಾಯಣಶಾಸ್ತ್ರಿಗಳು ಒಂದು ಉತ್ತಮ ವ್ಯಾಖ್ಯಾನವನ್ನೂ ಕರ್ನಾಟಕ ಶಬ್ದಮಂಜರಿಯೇ ಮೊದಲಾದ ಅನೇಕ ಕೃತಿಗಳಿಗೆ ಹೆಸರುಘಟ್ಟದ ಹೊನ್ನಪ್ಪನವರು ಟೀಕೆ ಟಿಪ್ಪಣಿಗಳನ್ನು ಬರೆದಿದ್ದಾರೆ. ಇದೇ ರೀತಿ ಇನ್ನೂ ಅನೇಕ ಘನವಿದ್ವಾಂಸರು ಈ ತೆರನ ಕಾರ್ಯವನ್ನು ಮಾಡಿದ್ದಾರೆ. ಇತ್ತೀಚೆಗೆ ಈ ತೆರನ ಕಾರ್ಯ ಕುಂಠಿತವಾಗಿತ್ತು. ಆ ಕಾರ್ಯವನ್ನು ಮತ್ತೆ ಪರಿಷತ್ತು ಕೈಗೆತ್ತಿಕೊಂಡುದು ಮೆಚ್ಚುವಂತಹುದೇ. ಆದರೆ ಈ ಕಾರ್ಯ ಎಷ್ಟರಮಟ್ಟಿಗೆ ಸಫಲವಾಗಿದೆ ಎಂಬುದನ್ನು ನಿರ್ವಿಕಾರ ಬುದ್ಧಿಯಿಂದ ಪರಿಶೀಲಿಸೋಣ:

ಪ್ರಾಚೀನ ಕಾವ್ಯಗಳ ಅನುವಾದ ಸಂಬಂಧದಲ್ಲಿ ಪರಿಷತ್ತು ತೀರ್ಮಾನಿಸಿದ ಅಂಶಗಳು ಇವು:

(೧) "ಭಾರತೀಯ ಜ್ಞಾನಪೀಠದವರು ವಿಶ್ವವಿದ್ಯಾನಿಲಯದವರು ಖಾಸಗಿ ಪ್ರಕಾಶಕರು ಪರಿಷತ್ತಿನ ಉದ್ದೇಶದಂತೆ ಈಗಾಗಲೆ ಕನ್ನಡ ಕಾವ್ಯಗಳನ್ನು ಅನುವಾದ ಮಾಡಲು ಕಾರ್ಯಕೈಕೊಂಡಿದ್ದಾರೆ. ಅಂಥ ಕಾವ್ಯಗಳನ್ನು ಪರಿಷತ್ತು ಅನುವಾದಕ್ಕೆ ತೆಗೆದುಕೊಳ್ಳಬೇಕಾಗಿಲ್ಲ."

ಈ ನಿಯಮವನ್ನು ಪರಿಷತ್ತಿನವರು ಪರಿಪಾಲಿಸಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಭಾರತೀಯ ಜ್ಞಾನಪೀಠದವರು ಆರಿಸಿಕೊಂಡಿರುವ ಕೆಲವಾರು ಕೃತಿಗಳನ್ನು ಪರಿಷತ್ತೂ ಆರಿಸಿಕೊಂಡಿದೆ. ಇದು ಮೇಲಿನ ತೀರ್ಮಾನಕ್ಕೆ ವಿರುದ್ಧವಾಗಿದೆ.

೭(ಆ) "ಅನುವಾದದಲ್ಲಿ ಏಕರೂಪತೆ ಇರಬೇಕು. ಮಧ್ಯದಲ್ಲಿ ವಿಚ್ಛಿನ್ನತೆ ಕಾಣಬಾರದು. ಕಥೆಯಂತೆ ಓದಿಸಿಕೊಂಡು ಹೋಗಬೇಕು."

ಈ ಅಂಶದಲ್ಲಿ ಪರಿಷತ್ತಿನ ಯೋಜನೆ ಸಂಪೂರ್ಣವಾಗಿ ವಿಫಲವಾಗಿದೆ. ಮುಂದೆ ಕೊಟ್ಟಿರುವ ಕೆಲವು ಉದಾಹರಣೆಗಳಿಂದ ಇದನ್ನು ಕಂಡುಕೊಳ್ಳಬಹುದಾಗಿದೆ.

ಪರಿಷತ್ತು ಅನುವಾದಗಳಿಗೆ ಆರಿಸಿಕೊಂಡಿರುವ ಪ್ರಾಚೀನ ಕೃತಿಗಳನ್ನು ಈಗಾಗಲೇ ಮುದ್ರಿತವಾಗಿರುವ ಕೃತಿಗಳಿಂದ ಮಾಡಲಾಗಿದೆ. ಕೆಲವಾರು ಸಂದರ್ಭಗಳಲ್ಲಿ ಮೂಲಸಂಪಾದಕರ ಬಗೆಗೆ ಕೃತಜ್ಞತೆಯನ್ನು ಸೂಚಿಸದಷ್ಟು ತಾತ್ಸಾರವನ್ನೂ ತಾಳಲಾಗಿದೆ.

ಪ್ರಾಚೀನ ಕಾವ್ಯಗಳ ಅನುವಾದಕಾರ್ಯವನ್ನು ನಾಡಿನ ಗಣ್ಯವಿದ್ವಾಂಸರಿಗೇ ವಹಿಸಲಾಗಿದ್ದರೂ ಈ ಕಾರ್ಯ ಒಟ್ಟಾರೆ ಸಮರ್ಪಕವಾಗಿಲ್ಲವೆಂಬುದನ್ನು ಮೇಲುನೋಟದಿಂದಲೇ ಯಾರಾದರೂ ಅರಿತುಕೊಳ್ಳಬಹುದಾಗಿದೆ.

ಪ್ರಕೃತ ಹರಿಹರಕವಿಯ ಗಿರಿಜಾಕಲ್ಯಾಣ ಮಹಾಪ್ರಬಂಧದ ಅನುವಾದವನ್ನು ಪರಿಶೀಲಿಸೋಣ: ಪ್ರಥಮಾಶ್ವಾಸದ ಎರಡನೆಯ ಪದ್ಯ:

ಗೌರೀಪಾದಾಂಗುಲೀಕೋರಕಮೆಸೆವ ಕರಂ ಪಲ್ಲವಂ ಪುಷ್ಪವೃಂತಾ
ಕಾರಂ ಮಂದಸ್ಮಿತಂ ಶಾಖೆಗಳಮರ್ದ ಭುಜಾನೀಕಮಾಸ್ಯಂ ಫಲಂ ಶ್ರೀ
ಸಾರಂ ತಾನಾದ ಪಂಪಾಪುರದರಸ ವಿರೂಪಾಕ್ಷ ಕಲಾಂಘ್ರಿಪಂ ವಿ
ಸ್ತಾರಂಬೆತ್ತೀಗೆ ಸದ್ಭಕ್ತಿಯನೆಮಗಮೃತಪ್ರಾಯೆಯಂ ಪ್ರೀತಿಯಿಂದಂ ॥

ಈ ವಿರೂಪಾಕ್ಷ ಕಲ್ಪಕುಲಜಕ್ಕೆ ಗೌರೀದೇವಿಯ ಪಾದಾಂಗುಲಿಗಳೇ ಮೊಗ್ಗು. ಹೊಳೆವ ಕರಗಳೇ ಚಿಗುರು, ಮಂದಸ್ಮಿತ ಹೂಗೊಂಚಲು ದಶಭುಜ ಶಾಖೆಗಳು. ಮುಖಕಮಲವೇ ಶ್ರೀಮುಖ. ಆದ್ದರಿಂದ ಅಂತಹ ಸಂಪತ್ಕರವಾದ ಸೌಭಾಗ್ಯವೇ ತಾನಾಗಿರುವ ಹಂಪೆಯ ವಿರೂಪಾಕ್ಷ ಸ್ವಾಮಿಯೆಂಬ ಕಲ್ಪಕುಜವು ಅಮೃತಕ್ಕೆ ಸಮವಾದ ವಿಪುಲ ಸದ್ಭಕ್ತಿಯನ್ನೂ ಕರುಣಿಸಲಿ. ದ್ವಿತೀಯಾಶ್ವಾಸ : ಪದ್ಯ ೧೭

ಗಿಳಿಯಂ ಸೋವೆಳೆಯಳ ನುಡಿ
ವಳಿಯಿಂದೆ ವಿಕಾಸಮಾದ ಬಾಟ್ದೆ ಗಂಡಂ
ದೆಳಸುತ್ತಿರ್ಪುವು ದಾಡಿಮ
ಫಳ ಬೀಜಂಗೆತ್ತು ದಂತಕುಳಮಂ ಗಿಳಿಗಳ್ ॥

ಗಿಳಿಯನ್ನು ಸೋವ ಒಬ್ಬ ಎಳೆಯಳು ಅವಳ ನುಡಿವಳಿಯಿಂದ ಅರಳಿದ ತುಟಿಗಳ ಹಿಂದೆ ಇರುವ ದಂತಪಂಕ್ತಿಯನ್ನು ಗಿಳಿಗಳು ದಾಳಿಂಬೆಯ ಬೀಜವೆಂದು ತಿಳಿದು ಅವನ್ನು ಬಯಸುತ್ತಿದ್ದವು.

ನಳಚರಿತ್ರೆಯ ಎರಡು ಪದ್ಯಗಳು : ಸಂಧಿ–೧, ಪದ್ಯ ೪

ಕರಿವದನ ಹೇರಂಬ ಲಂಬೋ
ದರ ಗಣಾಧಿಪ ಮೋದಕಪ್ರಿಯ
ಪರಶು ಪಾಶಾಂಕುರಾಶಕರಾಂಕಿತದಿಂದ ರಂಜಿಸುವ
ಸುರನರೋರಗನಮಿತ ಗೌರೀ
ವರಕುಮಾರಕ ವಿದ್ಯೆವಾರಿಧಿ
ವರದ ಗಣಪತಿ ಪಾಲಿಸೆನ್ನಯ ಮತಿಗೆ ಮಂಗಳವ ॥

ಗಜಮುಖನೇ ಗಣಪತಿಯೇ ಡೊಳ್ಳುಹೊಟ್ಟೆಯವನೇ ಪ್ರಮಥ ಗಣಗಳ ಅಧಿಪತಿಯೇ ಮೋದಕವನ್ನು ಪ್ರೀತಿಸುವವನೇ, ಕೈಯಲ್ಲಿ ಕೊಡಲಿ ಪಾಶ ಮತ್ತು ಅಂಕುಶಗಳನ್ನು ಹಿಡಿದವನೇ ದೇವತೆಗಳು ಮನುಷ್ಯರು ಹಾಗೂ ನಾಗಗಳಿಂದ ನಮಸ್ಕರಿಸಲ್ಪಟ್ಟವನೇ ಪಾರ್ವತಿಯ ಸುಪುತ್ರನೇ ವಿದ್ಯೆಯ ಸಮುದ್ರದಂತಿರುವವನೇ ವರವನ್ನು ಕೊಡುವವನೇ ಗಣಾಧಿಪತಿಯೇ ನನ್ನ ಈ ಬುದ್ಧಿಗೆ ಮಂಗಳವನ್ನು ದಯಪಾಲಿಸು.

ಏಳನೆಯ ಸಂಧಿ ಹನ್ನೊಂದನೆಯ ಪದ್ಯ:

ಎಂದು ಹಾಸ್ಯವ ಮಾಡಿದವನೊಡ
ನೆಂದನಾ ಬಾಹುಕನು ಪೂರ್ವದೊ
ಳಂದು ಬ್ರಾಹ್ಮಣನೊಬ್ಬ ನಿಜಪತಿಯಗಲಿಯೆನ್ನೊಡನೆ
ನೊಂದು ನುಡಿದನು ವಿರಹದಲಿಯದ
ನಿಂದು ಕನಸಲಿ ಕಂಡು ಭ್ರಾಂತಿಯೊ
ಳೆಂದಡದು ತಪ್ಪೇನು ಸತಿಸುತರಿಲ್ಲ ತನಗೆಂದ ॥

"ಹ ಅಪಹಾಸ್ಯ ಮಾಡಿದ ವಾಲಾಖ್ಯನೊಡನೆ ಬಾಹುಕನು" ಹಾಗೇನಿಲ್ಲ. ಈ ಹಿಂದೆ ಒಬ್ಬ ಬ್ರಾಹ್ಮಣನು ತನ್ನ ಪತ್ನಿಯನ್ನು ಅಗಲಿ ನನ್ನೊಡನೆ ಆ ವಿರಹದ ದುಃಖವನ್ನು ತೋಡಿಕೊಂಡನು. ಅದೇ ಇಂದು ನನಗೆ ಸ್ವಪ್ನದಲಿ ಕಂಡು ಫಕ್ಕನೆ ಭ್ರಮೆಯಿಂದ ಆಡಿಬಿಟ್ಟೆ, ಅದರಲ್ಲಿ ತಪ್ಪೇನಿದೆ? ನಿಜವಾಗಿಯೂ ನನಗೆ ಹೆಂಡತಿಯಾಗಲಿ ಮಕ್ಕಳಾಗಲಿ ಇಲ್ಲ" ಎಂದನು.

ದಮಯಂತೀ ಸ್ವಯಂವರ ೧-೨

ತಾಯೆ ಮುನೀಂದ್ರಗೇಯೆ ಸುಮನೋಹರಕಾಯೆ ರಮಾದಿಶಕ್ತಿ ಹೃ
ದ್ಧ್ಯೇಯೆ ಸದಾನಪಾಯೆ ಜಗದಾದಿಮ ಮಾಯೆ ಕರಾಸಿಕೃತ್ತದೈ
ತೀಯೆ ನತಾದಿತೇಯೆ ನಿಖಿಲಶ್ರುತಿಮೇಯೆ ತಟಿತ್ಪ್ರಭಾನಿಭ
ಚ್ಛಾಯೆ ಮಹೇಶಜಾಯೆ ಭಜಕಪ್ರಿಯೆ ಕಾಯೆಯಜೇಯೆ ಶೈಲಜೇ ॥

ಮುನಿಮುಖ್ಯರಿಂದ ಸ್ತುತಿಸಲ್ಪಡುವವಳೂ ಸೌಂದರ್ಯವಾದ ಶರೀರವುಳ್ಳವಳೂ ಲಕ್ಷ್ಮೀ ಮುಂತಾದ ದೇವತೆಗಳಿಂದ ಧ್ಯಾನಿಸಲ್ಪಡತಕ್ಕವಳೂ ಶಾಶ್ವತಳೂ ಆದಿಮಾಯಾಮಹಿಮಳೂ ಖಡ್ಗಹಸ್ತದಿಂದ ದೈತ್ಯಸಂಹಾರಳೂ ಸಕಲಶ್ರುತಿಗೋಚರಳೂ ಮಿಂಚಿನ ಪ್ರಭೆಯಷ್ಟು ಕಾಂತಿಯುಕ್ತಳೂ ಪರಮೇಶ್ವರನ ಪ್ರಿಯಪತ್ನಿಯೂ ಭಕ್ತರಿಗೆ ಅತ್ಯಂತ ಪ್ರಿಯಳೂ ಅಜೇಯಳೂ ಆದ ಪಾರ್ವತೀ ತಾಯೇ ನಮ್ಮನ್ನು ರಕ್ಷಿಸು.

ಆಶ್ವಾಸ ೨-೨೭:

ಕಲಹಂಸ ಶಕುಂತವತಂಸ ಭವ
ಲ್ಲಲಿತಾಕೃತಿ ಸೂಕ್ತಿಚಮತ್ಕೃತಿ ಮೇಣ್
ಕಲಧೌತ ಸುವಕ್ಷತಿಯೆಂಬಿವು ಗ
ಲ್ಗಲನಿತ್ತವು ಮನ್ಮನಕದ್ಭುತಮಂ ॥

ಪಕ್ಷಿಗಳಲ್ಲಿ ಶ್ರೇಷ್ಠನಾದ ಕಲಹಂಸನೇ ನಿನ್ನ ಮನೋಹರವಾದ ಸೌಂದರ್ಯವೂ ಮಾತಿನ ಚಮತ್ಕಾರವೂ ಮತ್ತು ಚಿನ್ನದಂತೆ ಮೃದುವಾದ ರೆಕ್ಕೆಗಳ ಬುಡವೂ ನನ್ನ ಮನಸ್ಸಿಗೆ ಆಶ್ಚರ್ಯವನ್ನುಂಟುಮಾಡಿದುವು.

ಈ ಮೇಲಿನ ಉದಾಹರಣೆಗಳಿಂದ ಕನ್ನಡ ಅನುವಾದ ಜನಸಾಮಾನ್ಯಕ್ಕೆ ಎಷ್ಟರಮಟ್ಟಿಗೆ ಉಪಯುಕ್ತವಾಗಿದೆ ಎಂಬುದು ಸ್ವಯಂವೇದ್ಯವಾಗಿದೆ. ಹೀಗೆಂದಮಾತ್ರಕ್ಕೆ ಇಡೀಕಾವ್ಯಗಳೇ ಈ ರೀತಿ ಇವೆ ಎಂದು ಭಾವಿಸುವುದಕ್ಕೆ ಎಡೆಯಿಲ್ಲ. ಆದರೆ ಈ ತೆರನ ಅನುವಾದಗಳು ಸಾಕಷ್ಟಿವೆ ಎಂಬುದು ನಿರ್ವಿವಾದ.

ಕನ್ನಡ ಅನುವಾದ ಕಾರ್ಯವನ್ನು ಕೈಗೊಂಡಿರುವವರೆಲ್ಲ ಪಂಡಿತರು, ಘನವಿದ್ವಾಂಸರು. ಹೀಗಿದ್ದೂ ಈ ಅನುವಾದಕಾರ್ಯ ಸಮರ್ಪಕವಾಗಿಲ್ಲದಿರುವುದಕ್ಕೆ ಕಾರಣವೇನು? ಈ ಅನುವಾದಕರಿಗೆ ಕೊಟ್ಟ ಸಮಯ ಸಾಲದೇ ಹೋಯಿತೇ? ಸಂಭಾವನೆ ಎಟುಕದೇ ಹೋಯಿತೆ? ಇದು ವಿಚಾರಣೀಯ. ಇದು ಹೇಗಾದರೂ ಇರಲಿ. ಜನತೆಯ ದೃಷ್ಟಿಯಿಂದ ಈ ಅನುವಾದಿತ ಗ್ರಂಥಗಳು ಪುನರ್‌ಮುದ್ರಣವಾಗಬಹುದಾದ ಸಮಯ ಪ್ರಾಪ್ತವಾದಲ್ಲಿ ಇವನ್ನು ಸಂಪೂರ್ಣವಾಗಿ ಪರಿಷ್ಕರಿಸಬೇಕಾದುದು ಅತ್ಯಂತ ಅಗತ್ಯ ಎಂದು ನಾವು ಭಾವಿಸುತ್ತೇವೆ. ಸರ್ಕಾರದ ನೆರವಿನಿಂದ ಈ ಕೃತಿಗಳನ್ನು ಆದಷ್ಟು ಕಡಿಮೆ ಬೆಲೆಗೆ ಮಾರುವಂತಾದುದು ಮೆಚ್ಚಬೇಕಾದ ಅಂಶವಾಗಿದೆ.

■

## ಕೌಸ್ತುಭ

ವಜ್ರಮಹೋತ್ಸವ ೧೯೧೫-೧೯೭೫ ಸಂಸ್ಮರಣ ಸಂಪುಟ (೧೯೭೭) ಗ್ರಂಥಸಂಪಾದನೆ

---

**ಪ್ರಾ**ಚೀನ ಕನ್ನಡ ಗ್ರಂಥಗಳ ಹಸ್ತಪ್ರತಿಗಳು ನಿಮ್ಮ ಸಾಂಸ್ಕೃತಿಕ ಸಂಪತ್ತಿನ ಒಂದು ಅಮೂಲ್ಯವಾದ ಭಾಗ. ಅವುಗಳ ಸಂಗ್ರಹ ಮತ್ತು ಸಂರಕ್ಷಣೆಯ ಬಗೆಗೆ ಪ್ರತ್ಯೇಕ ಲೇಖನವೊಂದು ಈ ಸಂಪುಟದ ಹಿಂದಿನ ವಿಭಾಗವೊಂದರಲ್ಲಿ ಪ್ರಕಟವಾಗಿದೆ. ಹಸ್ತಪ್ರತಿಗಳ ಸಂಗ್ರಹ-ಸಂರಕ್ಷಣೆಗಳ ಕಾರ್ಯದ ಮುಂದಿನ ಹಂತವೇ ಗ್ರಂಥಸಂಪಾದನೆ. ಇದು ಈಗ ಒಂದು ಶಾಸ್ತ್ರವಾಗಿ ಬೆಳೆದಿದೆ. ಪ್ರಾಚೀನ ಗ್ರಂಥವೊಂದು ಸಾಹಿತ್ಯಗುಣದ ದೃಷ್ಟಿಯಿಂದ ಎಷ್ಟೇ ಕೆಳಮಟ್ಟದ್ದಾಗಿರಲಿ, ಮೊದಲ ಸಲ ಒಮ್ಮೆಯಾದರೂ ಅದು ಶಾಸ್ತ್ರೀಯವಾಗಿ ಸಂಪಾದನೆಯಾಗಿ ಪ್ರಕಟವಾಗಬೇಕಾದದ್ದು ಅತ್ಯಗತ್ಯ. ಭಾಷಾಸ್ವರೂಪ, ಸಮಕಾಲೀನ ಸಮಾಜಚಿತ್ರಣ ಮುಂತಾದ ಇತರ ದೃಷ್ಟಿಗಳಿಂದ ಅಂಥ ಗ್ರಂಥ ಬಹುಮುಖ್ಯವಾಗಿರಬಹುದು. ಈವರೆಗೆ ರೈಸ್, ಕಿಟೆಲ್‌ರವರು ಪ್ರಾರಂಭಿಸಿದ ಗ್ರಂಥಸಂಪಾದನಾ ಕಾರ್ಯವನ್ನು ನಮ್ಮ ಅನೇಕ ಕನ್ನಡ ವಿದ್ವಾಂಸರು ಬಹುಯಶಸ್ವಿಯಾಗಿ ನಡೆಸಿಕೊಂಡು ಬಂದಿದ್ದಾರೆ. ಗ್ರಂಥಸಂಪಾದನೆಯನ್ನು ವಿದ್ವಾಂಸರು ಮಾಡಿದರೂ, ಅವುಗಳ ಪ್ರಕಾಶನ ಕಾರ್ಯಕ್ಕೆ ಸರ್ಕಾರದ, ಸಂಘಸಂಸ್ಥೆಗಳ, ಖಾಸಗಿ ಪ್ರಕಾಶಕರ ನೆರವು ಅತ್ಯಗತ್ಯ. ಗ್ರಂಥಸಂಪಾದನೆಯಲ್ಲಿ ಪರಿಣತರಾದ ಎಸ್. ಬಸವಾರಾಧ್ಯರು (ಇವರು ಕೆಲಕಾಲ ಪರಿಷತ್ತಿನ ಕನ್ನಡ ನಿಘಂಟುವಿನ ಸಂಪಾದಕರೂ ಆಗಿದ್ದರು). ಅಂಥ ಸಂಘ ಸಂಸ್ಥೆಗಳ ಸೇವೆಯನ್ನು ಸ್ಮರಿಸಿ ೧೯೭೦ ರಿಂದ ಈಚಿನ ವರ್ಷಗಳಲ್ಲಿ ಸಂಪಾದಿತವಾಗಿ ಪ್ರಕಟವಾಗಿರುವ ಕೃತಿಗಳಿಗೆ ಸಂಬಂಧಪಟ್ಟಂತೆ ಅಗತ್ಯ ಮಾಹಿತಿಯನ್ನು ಒದಗಿಸಿದ್ದಾರೆ. ಅನುಬಂಧವಾಗಿ ಕೊಟ್ಟಿರುವ ಪಟ್ಟಿಯಲ್ಲಿ ೮೨ ಗ್ರಂಥಗಳ ವಿವರಗಳಿವೆ. ವರ್ಷಕ್ಕೆ ಸರಾಸರಿ ೧೨ ಗ್ರಂಥಗಳು ಎಂದರೆ, ತಿಂಗಳಿಗೊಂದರಂತೆ ಪ್ರಕಟವಾದಂತಾಯಿತು. ಪ್ರಕಟವಾಗದೆ ಉಳಿದಿರುವ, ಇನ್ನೂ ಸಂಗ್ರಹವಾಗಬೇಕಾಗಿರುವ, ಹಸ್ತಪ್ರತಿಗಳ ರಾಶಿಯನ್ನು ನೋಡಿದರೆ, ಇದು ತೃಪ್ತಿಕರವಾದ ಸ್ಥಿತಿಯಲ್ಲಿ, ವಿಶ್ವವಿದ್ಯಾನಿಲಯಗಳೂ ಇತರ ಪ್ರಕಾಶಕರೂ ಮಾಡಿದ ಸೇವೆಯನ್ನು ಜನತೆ ಸಾರ್ಥಕಗೊಳಿಸಬೇಕು. ಲೇಖಕರೊಂದಿಗೆ "ಕನ್ನಡ ಜನತೆಯ ಇಂದಿನ ದೃಷ್ಟಿ ಬದಲಾಗಿ ಅದು ಮುಂದಿನ ಸೃಷ್ಟಿಗೆ ನಾಂದಿಯಾಗಲಿ" ಎಂದು ಹಾರೈಸೋಣ.

ಕನ್ನಡ ಸಾಹಿತ್ಯದ ಪ್ರಸಿದ್ಧವೂ ಪ್ರಮುಖವೂ ಆದ ಪ್ರಕಾರಗಳಲ್ಲಿ ಗ್ರಂಥಸಂಪಾದನೆಯೂ ಒಂದು. ಪ್ರಾಚೀನ ಕಾಲದಿಂದ ಪ್ರಚಲಿತವಾಗಿರುವ ಈ ಪ್ರಕಾರದ ನಿರ್ವಹಣೆ ಜಟಿಲವಾದುದು. ನಮ್ಮ ದೇಶದ ಅಪೂರ್ವ ಸಂಪತ್ತಾಗಿರುವ ಈ ಪ್ರಾಚೀನ ಕಾವ್ಯಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸುವುದು ಒಂದು ಬಹುಮುಖ್ಯ ಕಾರ್ಯ.

ಹಲವಾರು ಸಂಸ್ಕೃತಿಗಳ ತವರೂರಾದ ಈ ಭರತಖಂಡದಲ್ಲಿ ಅನಾದಿಕಾಲದಿಂದಲೂ ಪ್ರಾಚೀನ ಕಾವ್ಯಗಳನ್ನು ಸಂರಕ್ಷಿಸಿಕೊಂಡು ಬರಲಾಗುತ್ತಿದೆ. ಆಧುನಿಕ ಸೌಲಭ್ಯಗಳಿಲ್ಲದ ಹಿಂದಿನ ಕಾಲದಲ್ಲಿ ಕಂಠಸ್ಥವಾಗಿದ್ದ ಈ ಪ್ರಕಾರ ಕ್ರಮೇಣ ಗ್ರಂಥಸ್ಥವಾಗತೊಡಗಿದೆ. ನಮ್ಮ ಪ್ರಾಚೀನರು ನಮಗೆ ಬಿಟ್ಟು ಹೋಗಿರುವ ಈ ಅಪೂರ್ವ, ಅಮೂಲ್ಯ ಆಸ್ತಿಯನ್ನು ಸದುಪಯೋಗಪಡಿಸಿಕೊಳ್ಳುವುದು ಈ ನಾಡಿನ ಜನತೆಯ ಕರ್ತವ್ಯವಾಗಿದೆ.

ಗ್ರಂಥಸಂಪಾದನೆ ಒಂದು ಕಷ್ಟಕರವಾದ ಕಾರ್ಯ. ಇದಕ್ಕೆ ಪ್ರತಿಭೆ ವಿದ್ವತ್ತುಗಳು ಅತ್ಯಾವಶ್ಯಕ. ಜೊತೆಗೆ ಹಲವಾರು ಶಾಸ್ತ್ರಗಳ ಪರಿಚಯವೂ ಪರಿಣತಿಯೂ ಅನಿವಾರ್ಯವಾಗುತ್ತದೆ. ಯಾವುದೇ ಪ್ರಾಚೀನ ಕಾವ್ಯವನ್ನಾಗಲಿ, ಉಪಲಬ್ಧವಿದ್ದ ಹಸ್ತಪ್ರತಿಗಳ ಆಧಾರದಿಂದ ಸಂಶೋಧಿಸಿ ಶಾಸ್ತ್ರೀಯವಾಗಿ ಸಂಪಾದಿಸುವುದನ್ನೇ ಗ್ರಂಥಸಂಪಾದನೆ ಎನ್ನುತ್ತಾರೆ. ಇತ್ತೀಚೆಗೆ ಈ ಶಾಸ್ತ್ರ ಬಹುವ್ಯಾಪಕವೂ ಪ್ರಮುಖವೂ ಆಗುತ್ತಿದೆ.

ಗ್ರಂಥಸಂಪಾದನೆ ಕಾರ್ಯವನ್ನು ಕೇವಲ ವ್ಯಕ್ತಿಗಳಿಂದಲೇ ಪೂರೈಸುವುದು ದುಸ್ತರವಾದುದು. ಹಲವಾರು ಶಾಸ್ತ್ರಗಳಲ್ಲಿ ಪರಿಣತರಾದ ಕೆಲವರು ವಿದ್ವಾಂಸರು ಒಂದೆಡೆ ಸೇರಿ ಕೈಗೊಳ್ಳಬೇಕಾದ ಕಾರ್ಯ ಇದು. ಆದುದರಿಂದಲೇ ಈ ಕಾರ್ಯವನ್ನು ಸರ್ಕಾರದ ನೆರವು ಪಡೆದ ವಿದ್ಯಾಸಂಸ್ಥೆಗಳು, ವಿಶ್ವವಿದ್ಯಾನಿಲಯಗಳು, ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಗಳು ಪೂರೈಸುತ್ತಿದ್ದುವು. ಪ್ರಕೃತ ಕರ್ನಾಟಕದಲ್ಲಿ ಈ ತೆರದ ಕಾರ್ಯವನ್ನು ಪ್ರಾಚ್ಯಸಂಶೋಧನ ಸಂಸ್ಥೆ – ಮೈಸೂರು; ಕನ್ನಡ ಸಾಹಿತ್ಯ ಪರಿಷತ್ತು– ಬೆಂಗಳೂರು; ಪ್ರಾಚ್ಯ ಸಂಶೋಧನ ಸಂಸ್ಥೆ– ಧಾರವಾಡ; ಕನ್ನಡ ಅಧ್ಯಯನ ಸಂಸ್ಥೆ– ಮೈಸೂರು; ಕನ್ನಡ ಅಧ್ಯಯನ ಕೇಂದ್ರ– ಬೆಂಗಳೂರು; ಕನ್ನಡ ಅಧ್ಯಯನ ಪೀಠ– ಧಾರವಾಡ ಈ ಸರ್ಕಾರಿ ಮತ್ತು ಸಾರ್ವಜನಿಕಸಂಸ್ಥೆಗಳು ನಿರ್ವಹಿಸುತ್ತಿವೆ. ಜೊತೆಗೆ ಕೆಲವು ಧಾರ್ಮಿಕ ಸಂಸ್ಥೆಗಳೂ ಈ ಕಾರ್ಯದಲ್ಲಿ ನಿರತವಾಗಿವೆ. ಶ್ರೀ ಸುತ್ತೂರು ಶಿವರಾತ್ರೀಶ್ವರ ಮಾಲೆ– ಮೈಸೂರು; ಶ್ರೀ ಮುರುಘರಾಜೇಂದ್ರಮಠ– ಧಾರವಾಡ; ಮೂರುಸಾವಿರ ಮಠ– ಹುಬ್ಬಳ್ಳಿ; ಚಿತ್ರದುರ್ಗ ಮಹಾಸಂಸ್ಥಾನ– ಚಿತ್ರದುರ್ಗ; ಇವೇ ಅಲ್ಲದೆ ಮೈಸೂರಿನ ಶಾರದ ಮಂದಿರ, ಡಿ.ವಿ.ಕೆ. ಮೂರ್ತಿ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಪ್ರಾಚ್ಯಕಾವ್ಯ ಪ್ರಕಾಶನ ಮಾಲೆ, ನಳಿನೀ ಶಂಕರ ಪ್ರಕಾಶನ, ಶರತ್ ಪ್ರಕಾಶನ –ಇವೇ ಮೊದಲಾದುವನ್ನು ಹೆಸರಿಸಬಹುದು. ಕೆಲವು ವಿದ್ವಾಂಸರು ವೈಯಕ್ತಿಕವಾಗಿ ಈ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಎಲ್ಲ ಸಂಘ ಸಂಸ್ಥೆಗಳೂ ಹಲವು ವಿದ್ವಾಂಸರೂ ಈ ಕಾರ್ಯದಲ್ಲಿ ನಿರತರಾಗಿ ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ, ಹೆಚ್ಚಿಸುತ್ತಿದ್ದಾರೆ.

ಸಂಪಾದನ ಕ್ಷೇತ್ರದಲ್ಲಿ ೧೯೭೦ ರಿಂದ ಈಚೆಗೆ ನಡೆದಿರುವ ಕಾರ್ಯವನ್ನು ಸ್ಥೂಲವಾಗಿ ಸಮೀಕ್ಷಿಸಲಾಗಿದೆ. ಈ ಅವಧಿಯಲ್ಲಿ ಪ್ರಕಟವಾದ ಪ್ರತಿಯೊಂದು ಕೃತಿಯನ್ನೂ ಇಲ್ಲಿ ಸಮಾಲೋಚಿಸುವುದಕ್ಕೆ ತೊಡಗಿಲ್ಲ. ಪ್ರಮುಖವೂ ಪ್ರಸಿದ್ಧವೂ ಪ್ರಾದೇಶಿಕವೂ ಆದ ಕೆಲವು ಗ್ರಂಥಗಳನ್ನು ಮಾತ್ರ ಇಲ್ಲಿ ವಿವೇಚಿಸಿದೆ.

**೧. ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ:** ಸಂಪಾದಕರು: ಆರ್.ಸಿ. ಹಿರೇಮಠ, ಬಸವಣ್ಣ, ಚೆನ್ನಬಸವಣ್ಣ, ಅಲ್ಲಮಪ್ರಭು, ಸಿದ್ಧರಾಮ ಇವರೇ ಮೊದಲಾದ ವಚನಕಾರರ ಸಂಭಾಷಣಾರೂಪದ ಸಂಕಲನ ಗ್ರಂಥ. ಈವರೆಗೂ ಅಪ್ರಕಟಿತವಾಗಿದ್ದ ಈ ಕೃತಿ ಮೊದಲಬಾರಿಗೆ ಶಾಸ್ತ್ರೀಯವಾಗಿ ಸಂಪಾದಿತವಾಗಿದೆ. ಇತರ ಶೂನ್ಯಸಂಪಾದನೆಗಳೊಂದಿಗೆ ಇದನ್ನು ತುಲನಾತ್ಮಕವಾಗಿ ವಿವೇಚನೆ ಮಾಡಲಾಗಿದೆ.

**೨. ಮಹಾಲಿಂಗೇಂದ್ರ ವಿಜಯ (ಮಹಾದೇವ):** ಸಂಪಾದಕರು: ಎಲ್. ಬಸವರಾಜು, ವಾರ್ಧಕ ಷಟ್ಪದಿಯಲ್ಲಿರುವ ಈ ಕೃತಿಯಲ್ಲಿ ೨೦೬೪ ಪದ್ಯಗಳಿವೆ. ಇದರ ಕರ್ತೃ ಮಹಾದೇವ. ಇದರಲ್ಲಿ ಚಿತ್ರದುರ್ಗ ಸಂಸ್ಥಾನದ ಬೃಹನ್ಮಠದ ಪರಂಪರೆಯ ವಿವರಣೆ ಮಾಡಲಾಗಿದೆ. ಇದು ಒಂದು ಐತಿಹಾಸಿಕ ದಾಖಲೆಗಳುಳ್ಳ ಮಹತ್ವದ ಗ್ರಂಥ. ಈ ಕೃತಿಯನ್ನು ಚೊಕ್ಕವಾಗಿ ಸಂಪಾದಿಸಿ ಪ್ರಕಟಿಸಲಾಗಿದೆ.

**೩. ಮುಕ್ತಿಕಂಠಾಭರಣ:** ಸಂಪಾದಕರು: ಆರ್.ಸಿ. ಹಿರೇಮಠ, ಅಸಮಗ್ರ ಕೃತಿಯಾದ ಇದರ ಕಾಲ, ದೇಶ, ವರ್ತಮಾನಗಳು ತಿಳಿದುಬಂದಿಲ್ಲ. ಇದು ಒಂದು ವಚನ ಸಂಕಲನ ಗ್ರಂಥ. ಬಸವಾದಿ ಪ್ರಮಥರೇ ಮೊದಲಾದ ೪೨ ಮಂದಿ ವಚನಕಾರರ ೭೨೬ ವಚನಗಳನ್ನು ಇದು ಒಳಗೊಂಡಿದೆ. ಈ ವಚನಕಾರರ ವಚನಗಳನ್ನು ವಿಡಂಬಿಸಲಾಗಿದೆ.

**೪. ಬಸವಪುರಾಣ (ಭೀಮಕವಿ):** ಸಂಪಾದಕರು: ಆರ್.ಸಿ. ಹಿರೇಮಠ, ೧೩೬೯ರಲ್ಲಿದ್ದ ಭೀಮಕವಿಯ ಭಾಮಿನಿ ಷಟ್ಪದಿಯ ಕೃತಿ. ಮೊದಲೇ ಅಚ್ಚಾಗಿದ್ದ ಈ ಕೃತಿಯನ್ನು ಹಲವಾರು ಉಪಯುಕ್ತ ಅನುಬಂಧಗಳೊಂದಿಗೆ ಶಾಸ್ತ್ರೀಯವಾಗಿ ಸಂಪಾದಿಸಲಾಗಿದೆ.

೫. **ವಿಷ್ಣುಪುರಾಣ (ಪೂರ್ವಾರ್ಧ) (ಚಿಕ್ಕುಪಾಧ್ಯಾಯ):** ಸಂಪಾದಕರು: ಎಸ್.ಎನ್. ಕೃಷ್ಣಜೋಯಿಸ್. ಚಿಕ್ಕುಪಾಧ್ಯಾಯ ವಿರಚಿತ ಈ ಚಂಪೂಕಾವ್ಯ ಪ್ರಥಮಬಾರಿಗೆ ಬೆಳಕುಕಂಡಿದೆ. ಈ ಕಾವ್ಯದ ಉತ್ತರಾರ್ಧ ಇನ್ನೂ ಅಚ್ಚಾಗಿಲ್ಲ. ಹಲವಾರು ಕೃತಿಗಳ ಕರ್ತೃವಾದ ಚಿಕ್ಕುಪಾಧ್ಯಾಯನ ಈ ಕೃತಿ ಹೆಸರಿಸತಕ್ಕದ್ದು.

೬. **ಅರ್ಚನ (ತಿಮ್ಮಪ್ಪದಾಸ):** ಸಂಪಾದಕರು: ಎಂ.ವಿ. ಸೀತಾರಾಮಯ್ಯ, ಇದರ ಕರ್ತೃ ತಿಮ್ಮಪ್ಪದಾಸ. ಇದರಲ್ಲಿ ೧೧೮ ಕೀರ್ತನೆಗಳಿವೆ- ತಿಮ್ಮಪ್ಪದಾಸ ಇನ್ನೂ ಹಲವಾರು ಕೀರ್ತನೆಗಳನ್ನು ಬರೆದಂತೆ ಕಂಡುಬಂದಿದೆ. ಅವೂ ಪ್ರಕಟವಾಗುವುದು ಅವಶ್ಯ. ಈ ಕೃತಿ ಶಾಸ್ತ್ರೀಯವಾಗಿ ಸಂಪಾದಿತವಾಗಿದೆ.

೭. **ಪೌಲೋಮ- ಆಸ್ತೀಕ ಪರ್ವಗಳು (ಸದಾನಂದ ಯೋಗೀಂದ್ರ):** ಸಂಪಾದಕರು: ಕೆ.ಜಿ. ಶಾಸ್ತ್ರಿ, ಸದಾನಂದ ಯೋಗೀಂದ್ರ ವಿರಚಿತ ಈ ಕೃತಿ ಭಾಮಿನಿ ಷಟ್ಪದಿಯಲ್ಲಿದೆ. ಇದರಲ್ಲಿ ೫೫೧ ಪದ್ಯಗಳಿವೆ. ಈ ಕೃತಿಯನ್ನು ಪರಿಶಿಷ್ಟಗಳೊಂದಿಗೆ ಪ್ರಕಟಿಸಲಾಗಿದೆ.

೮. **ವಿಶೇಷಾನುಭವ ಷಟ್ಸ್ಥಲ:** ಸಂಪಾದಕರು: ಆರ್.ಸಿ. ಹಿರೇಮಠ, ಇದು ಒಂದು ವಚನ ಸಂಕಲನ ಗ್ರಂಥ. ಇದರ ಕರ್ತೃ ಚೆನ್ನವೀರದೇವ. ಇದರಲ್ಲಿ ೪೯ ವಚನಕಾರ-ವಚನಕಾರ್ತಿಯರ ೭೪೨ ವಚನಗಳಿವೆ.

೯. **ಕರಸ್ಥಲದ ನಾಗಲಿಂಗನ ಚರಿತ್ರೆ (ರುದ್ರ):** ಸಂಪಾದಕರು: ಕೆ.ಆರ್. ಶೇಷಗಿರಿ, ನೂರೊಂದು ಜನ ವಿರಕ್ತರಲ್ಲಿ ಒಬ್ಬನಾದ, ನಾಗಲಿಂಗನ ಕಥೆ ಇದರಲ್ಲಿ ಉಕ್ತವಾಗಿದೆ. ಈ ಕೃತಿ ಈ ಮೊದಲೇ ಅಚ್ಚಾಗಿದೆ.

೧೦. **ಶೂನ್ಯಸಂಪಾದನೆ: ಗುಮ್ಮಳಾಪುರ ಸಿದ್ಧಲಿಂಗ:** ಸಂಪಾದಕರು: ಆರ್.ಸಿ. ಹಿರೇಮಠ. ಶೂನ್ಯಸಂಪಾದನಕಾರರಲ್ಲಿ ಪ್ರಮುಖನಾದ ಈತನ ಗ್ರಂಥದಲ್ಲಿ ೩೯ ವಚನಕಾರರ ಮತ್ತು ವಚನಕಾರ್ತಿಯರ ೧೩೩೭ ವಚನಗಳು ಸಂಭಾಷಣೆಯ ರೂಪದಲ್ಲಿವೆ. ಉಚಿತವಾದ ಪೀಠಿಕೆ ಅನುಬಂಧಗಳೊಡನೆ ಪ್ರಕಟವಾಗಿರುವ ಈ ಕೃತಿ ಉಲ್ಲೇಖಾರ್ಹವಾದುದು.

೧೧. **ಪರಮಾರ್ಥ:** ಸಂಪಾದಕರು: ಎಲ್. ಬಸವರಾಜು, ಕನ್ನಡ ಸಾಹಿತ್ಯದಲ್ಲಿ ಪ್ರಸಿದ್ಧನಾದ ಸರ್ವಜ್ಞನ ೯೩೯ ನಿಜವಚನಗಳನ್ನು ಸಂಶೋಧಿಸಿ ಸಂಪಾದಿಸಿ ಕೊಡಲಾಗಿದೆ. ಇದು ಸರ್ವಜ್ಞ ವಚನಗಳ ಒಂದು ಅಧಿಕೃತ ಮುದ್ರಣ.

೧೨. **ಮದನಮೋಹಿನಿಯ ಕಥೆ : ಲಕ್ಷ್ಮಕವಿ :** ಸಂಪಾದಕರು: ಬಿ.ಎಸ್. ಸಣ್ಣಯ್ಯ, ಸಾಂಗತ್ಯದಲ್ಲಿ ರಚಿತವಾಗಿರುವ ಈ ಕೃತಿಯಲ್ಲಿ ೧೧ ಸಂಧಿಗಳೂ ೮೬೦ ಪದ್ಯಗಳೂ ಇವೆ. ಸ್ವಾರಸ್ಯವಾದ ಕಥೆಯನ್ನೊಳಗೊಂಡಿರುವ ಈ ಕಾವ್ಯ ಶಾಸ್ತ್ರೀಯವಾಗಿ ಸಂಪಾದಿತವಾಗಿ ಪ್ರಕಟಗೊಂಡಿದೆ.

೧೩. **ಗುರುಭಕ್ತ ಚಾರಿತ್ರ (ವಿರುಪೇಂದ್ರ):** ಸಂಪಾದಕರು: ಕೆ.ಆರ್. ಶೇಷಗಿರಿ, ಈ ಕಾವ್ಯಕ್ಕೆ 'ಮಧುರ ಮಂದಾರ' ಎಂಬ ಪರ್ಯಾಯ ನಾಮವೂ ಇದೆ. ಇದು ಕುಸುಮಷಟ್ಪದಿಯಲ್ಲಿದೆ. ಇದರಲ್ಲಿ ೭೭೫ ಪದ್ಯಗಳಿವೆ. ಇದರಲ್ಲಿ ಗುರುಭಕ್ತನೆಂಬ ಶಿವಭಕ್ತನ ಕಥೆ ನಿರೂಪಿತವಾಗಿದೆ. ಈ ಕಾವ್ಯ ಪ್ರಥಮ ಬಾರಿಗೆ ಬೆಳಕುಕಂಡಿದೆ.

೧೪. **ದೀಕ್ಷಾಬೋಧೆ: ಕೆರೆಯ ಪದ್ಮರಸ :** ಸಂಪಾದಕರು: ಎಸ್. ಬಸಪ್ಪ. ಇದರಲ್ಲಿ ಮೂರು ಸ್ಥಲಗಳಿವೆ. ರಗಳೆ, ವೃತ್ತ, ಕಂದಗಳಿಂದ ಇದು ರಚಿತವಾಗಿದೆ. ಅಲ್ಲಲ್ಲಿ ಸಂಸ್ಕೃತ ಶ್ಲೋಕಗಳನ್ನು ಪ್ರಮಾಣತ್ವೇನ ಉದ್ಧರಿಸಲಾಗಿದೆ. ಇದರಲ್ಲಿ ವೀರಶೈವತತ್ತ್ವವನ್ನು ಗುರುಶಿಷ್ಯ ಸಂವಾದರೂಪದಲ್ಲಿ ವಿವರಿಸಲಾಗಿದೆ. ಈ ಕೃತಿ ಸರ್ವಾಂಗಶುದ್ಧವಾಗಿ ಪ್ರಕಟವಾಗಿದೆ. ಇದೇ ಕಾವ್ಯವನ್ನು ಕರ್ನಾಟಕ ವಿಶ್ವವಿದ್ಯಾಲಯದವರೂ ಅಚ್ಚುಮಾಡಿಸಿದ್ದಾರೆ.

೧೫. **ಕಾವ್ಯಸಾರಂ: ಮಲ್ಲಕವಿ:** ಸಂಪಾದಕರು: ಎನ್. ಅನಂತರಂಗಾಚಾರ್, ಇದು ಒಂದು ಸಂಕಲನ ಗ್ರಂಥ. ಸಂಕಲನ ಗ್ರಂಥಗಳ ಉಪಯೋಗ ಸೀಮಿತವಾದರೂ ಅಪ್ರಕಟಿತವಾಗಿದ್ದ ಈ ಕಾವ್ಯ ಪ್ರಕಟನೆಯಿಂದ ಸಂಶೋಧಕರಿಗೆ ಸಹಾಯವಾಗಬಹುದು. ಸಂಪಾದಕರ ಶ್ರಮ ಮೆಚ್ಚತಕ್ಕದ್ದಾಗಿದೆ. ಇದರಲ್ಲಿ ಸು. ೩೫೫೫ ಪದ್ಯಗಳಿವೆ.

**೧೬. ಶಿವಶರಣ ಸಂಪುಟ :** ಸಂಪಾದಕರು: ಎಚ್. ದೇವೀರಪ್ಪ. ಕನ್ನಡದ ಭಕ್ತಕವಿ, ಶ್ರೇಷ್ಠ ಕವಿ ಹರಿಹರ ನೂರಾರು ರಗಳೆಗಳನ್ನು ಬರೆದಿದ್ದಾನೆ. ಹರಿಹರನ ತರುವಾಯ ಆತನ ಅಂಕಿತವನ್ನೇ ಇಟ್ಟುಕೊಂಡು ಮತ್ತೆ ಕೆಲವರೂ ರಗಳೆಗಳನ್ನು ಬರೆದಿರುವುದು ಕಂಡುಬರುತ್ತದೆ. ಪ್ರಕೃತ ಹರಿಹರೇತರ ವಿರೂಪಾಕ್ಷಾಂಕಿತ ಶಿವಶರಣ ರಗಳೆಗಳನ್ನೆಲ್ಲ ಶಾಸ್ತ್ರೀಯವಾಗಿ ಸಂಪಾದಿಸಿ ಸಮುಚಿತವಾದ ಪೀಠಿಕೆ ಅನುಬಂಧಗಳೊಂದಿಗೆ ಹೊರತರಲಾಗಿದೆ.

**೧೭. ಅಷ್ಟಕಗಳು:** ಸಂಪಾದಕರು: ಭೋಜರಾಜ ಪಾಟೀಲ, ಇದರಲ್ಲಿ ೧೫ ಪ್ರಾಚೀನ ಅಷ್ಟಕಗಳು ಸೇರ್ಪಡೆಯಾಗಿವೆ. ಭಕ್ತಿಪ್ರದವಾದ ಈ ಅಷ್ಟಕಗಳನ್ನು ಬಹುನಿಷ್ಠೆಯಿಂದ ಹೊರತಂದಿರುವ ಸಂಪಾದಕರ ಶ್ರಮ ಸಾರ್ಥಕವಾದುದು.

**೧೮. ಲೋಭದತ್ತ ಚರಿತೆ : ನೇಮರಸ :** ಸಂಪಾದಕರು: ಬಿ.ಎಸ್. ಕುಲಕರ್ಣಿ, ಸಾಂಗತ್ಯದಲ್ಲಿ ರಚಿತವಾಗಿರುವ ಈ ಕಿರುಹೊತ್ತಗೆಯಲ್ಲಿ ಮೂರುಸಂಧಿಗಳೂ ೩೫೭ ಪದ್ಯಗಳೂ ಇವೆ. ಮೊದಲಬಾರಿಗೆ ಬೆಳಕು ಕಾಣುತ್ತಿರುವುದೇ ಇದರ ವೈಶಿಷ್ಟ್ಯ.

**೧೯. ಅಬ್ಬಲೂರು ಚರಿತ್ರೆ – ಶಾಂತ ನಿರಂಜನ:** ಸಂಪಾದಕರು: ಎನ್. ಬಸವಾರಾಧ್ಯ. ಇದು ಒಂದು ಸಾಂಗತ್ಯ ಕೃತಿ. ಇದರಲ್ಲಿ ಆರು ಸಂಧಿಗಳೂ ಐದನೂರ ಇಪ್ಪತ್ತೆರಡು ಪದ್ಯಗಳೂ ಇವೆ. ಚಾರಿತ್ರಿಕ ವ್ಯಕ್ತಿಯೂ ಶಾಸನೋಕ್ತನೂ ಆದ ಏಕಾಂತರಾಮಯ್ಯನ ಕಥೆಯನ್ನು ನಿರೂಪಿಸುವ ಈ ಕಾವ್ಯ ಪ್ರಥಮಬಾರಿಗೆ ಶಾಸ್ತ್ರೀಯವಾಗಿ ಸಂಪಾದಿತವಾಗಿದೆ.

**೨೦. ವರ್ಧಮಾನ ಪುರಾಣಂ– ಎರಡನೆಯ ನಾಗವರ್ಮ:** ಸಂಪಾದಕರು: ಬಿ.ಎಸ್. ಸಣ್ಣಯ್ಯ, ಬಹುಕಾಲದಿಂದ ಅನುಪಲಬ್ಧವಾಗಿದ್ದ ನಾಗವರ್ಮನ ಈ ಅಪೂರ್ವ ಕೃತಿಯಲ್ಲಿ ಇಪ್ಪತ್ತನಾಲ್ಕನೆಯ ತೀರ್ಥಂಕರನಾದ ವರ್ಧಮಾನ ಮಹಾವೀರನ ಚರಿತೆ ನಿರೂಪಿತವಾಗಿದೆ. ಹದಿನಾರು ಆಶ್ವಾಸಗಳುಳ್ಳ ಈ ಚಂಪೂಕೃತಿ ಸರ್ವಾಂಗ ಸುಂದರವಾಗಿ ಪ್ರಪ್ರಥಮ ಬಾರಿಗೆ ಅಧಿಕೃತವಾಗಿ ಸಂಪಾದಿತವಾಗಿ ಪ್ರಕಟವಾಗಿದೆ.

**೨೧. ಧರ್ಮಸಂಪಾದನೆ– ಚಿಕ್ಕ ಮಲ್ಲಿಕಾರ್ಜುನ :** ಸಂಪಾದಕರು: ಎಸ್. ವಿದ್ಯಾಶಂಕರ, ಹು.ಕಾ. ಜಯದೇವ. ಕವಿಚರಿತ್ರೆಯಲ್ಲಿ ಅನುಕ್ತವಾದ ವಿವಿಧ ಷಟ್ಪದಿಯ ಈ ಕೃತಿಯಲ್ಲಿ ಐದು ಸಂಧಿಗಳೂ, ೨೮೯ ಪದ್ಯಗಳೂ ಇವೆ. ಶಿವಸಾಕ್ಷಾತ್ಕಾರಕ್ಕೆ ಸಾಧನವಾದ ಭಿಕ್ಷದ ಮಹಿಮೆಯನ್ನೂ ಸಾರುವ ಈ ಕೃತಿ, ಉಪಯುಕ್ತ ಮುನ್ನುಡಿ ಅನುಬಂಧಗಳೊಂದಿಗೆ ಮೊದಲಬಾರಿಗೆ ಅಚ್ಚಾಗಿದೆ.

**೨೨. ಸಕಲ ಪುರಾತನರ ವಚನಗಳು:** ಸಂಪಾದಕರು: ಆರ್.ಸಿ. ಹಿರೇಮಠ, ಈ ಗ್ರಂಥದಲ್ಲಿ ೧೬ ಜನ ಶರಣರ ೨೯೬೩ ವಚನಗಳನ್ನು ಸಂಪಾದಿಸಲಾಗಿದೆ. ಅಪಾರ ಪರಿಶ್ರಮದಿಂದ ಚಿತ್ತಾಕರ್ಷಕವಾಗಿ ಪ್ರಕಟವಾಗಿರುವ ಈ ಕೃತಿ ಮಹತ್ತರವಾದುದು, ಉಪಯುಕ್ತವಾದುದು, ಒಂದು ಆಕರಗ್ರಂಥ.

**೨೩. ಪುರಾತನರ ರಗಳೆಗಳು : ಹರಿಹರ :** ಸಂಪಾದಕರು: ಆರ್.ಸಿ. ಹಿರೇಮಠ, ಹರಿಹರ ವಿರಚಿತ ೪೮ ಜನ ಪುರಾತನ ಶಿವಶರಣರನ್ನು ಕುರಿತ ರಗಳೆಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಲಾಗಿದೆ. ಇದರಲ್ಲಿ ಕೆಲವು ರಗಳೆಗಳು ಈ ಹಿಂದೆಯೇ ಪ್ರಕಟವಾಗಿದ್ದುವು.

**೨೪. ವರ್ಧಮಾನ ಚರಿತಂ : ಪದ್ಮಕವಿ :** ಸಂಪಾದಕರು: ಬಿ.ಎಸ್. ಸಣ್ಣಯ್ಯ, ಕ್ರಿ.ಶ. ೧೫೨೮ರಲ್ಲಿದ್ದ ಪದ್ಮಕವಿಯ ಈ ವರ್ಧಮಾನ ಚರಿತೆ ಸಾಂಗತ್ಯದಲ್ಲಿ ರಚಿತವಾಗಿದೆ. ಇದರಲ್ಲಿ ೧೨ ಸಂಧಿಗಳೂ ೧೩೯೯ ಪದ್ಯಗಳೂ ಇವೆ. ಇದು ಶಾಸ್ತ್ರೀಯವಾಗಿ ಸಂಪಾದಿತವಾಗಿ ಭಾರತೀಯ ಜ್ಞಾನಪೀಠದ ವತಿಯಿಂದ ಪ್ರಕಟವಾಗಿದೆ.

**೨೫. ಹಾಲಾಸ್ಯ ಪುರಾಣಂ : ಇಮ್ಮಡಿ ಗುರುಸಿದ್ಧ :** ಸಂಪಾದಕರು: ಜಿ.ಜಿ. ಮಂಜುನಾಥನ್, ೧೮ನೆಯ ಶತಮಾನದ ಆದಿಭಾಗದಲ್ಲಿದ್ದ ಮುರಿಗಾ ಗುರುಸಿದ್ಧನ ಹಾಲಾಸ್ಯಪುರಾಣ ಗಾತ್ರದಿಂದ, ಛಂದಸ್ಸಿನಿಂದ ಒಂದು ಅಪೂರ್ವ ಕೃತಿ.

ಚಂಪುವಿನಲ್ಲಿ ರಚಿತವಾಗಿರುವ ಈ ಬೃಹತ್ ಕೃತಿಯಲ್ಲಿ ಮಧುರೆಯ ಸುಂದರೇಶ್ವರರ ಚತುಷ್ಷಷ್ಟಿ ಲೀಲೆಗಳು ವರ್ಣಿತವಾಗಿವೆ. ಇದು ಮೊದಲ ಸಲ ಸಂಪಾದಿತವಾಗಿ ಪ್ರಕಟವಾಗಿದೆ.

**೨೬. ಸಾಳ್ವಭಾರತ : ಸಾಳ್ವ** : ಸಂಪಾದಕರು: ಹಂ.ಪ. ನಾಗರಾಜಯ್ಯ, ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿರುವ ಈ ಕೃತಿಯಲ್ಲಿ ಪರಿವರ್ಧಿನಿ ಮತ್ತು ವಾರ್ಧಕ ಷಟ್ಪದಿಗಳೂ ಇವೆ. ಇದರಲ್ಲಿ ೬೫ ಸಂಧಿಗಳೂ ೩೪೩೭ ಪದ್ಯಗಳೂ ಇವೆ. ಸಾಳ್ವಭಾರತಕ್ಕೆ ನೇಮೀಶ್ವರ ಚರಿತೆ ಎಂಬ ಪರ್ಯಾಯ ನಾಮವೂ ಉಂಟು. ಹರಿವಂಶ ಕುರುವಂಶಗಳ ಚರಿತ್ರೆಯನ್ನು ನಿರೂಪಿಸುವ ಈ ಸಾಳ್ವಭಾರತ ಮೊದಲ ಬಾರಿಗೆ ಅಚ್ಚುಕಟ್ಟಾಗಿ ಅಚ್ಚಾಗಿವೆ.

**೨೭. ತಿಷಷ್ಟಿಶಲಾಕಾ ಪುರುಷ ಪುರಾಣಂ : ಚಾವುಂಡರಾಯ** : ಸಂಪಾದಕರು: ಬಿ.ಎಸ್. ಕುಲಕರ್ಣಿ, ಹತ್ತನೆಯ ಶತಮಾನದ ಈ ಹಳಗನ್ನಡ ಗದ್ಯಕೃತಿಯಲ್ಲಿ ೬೩ ಜನ ಶಲಾಕಾಪುರುಷರ ಚರಿತ್ರೆ ನಿರೂಪಿತವಾಗಿದೆ. ಹಲವಾರು ಕವಿಗಳಿಗೆ ಆಕರಗ್ರಂಥವಾದ ಈ ಚಾವುಂಡರಾಯಪುರಾಣ ಸರ್ವಾಂಗ ಶುದ್ಧವಾಗಿ ಪ್ರಕಟವಾಗಿದೆ.

**೨೮. ಧರ್ಮನಾಥ ಪುರಾಣಂ : ಬಾಹುಬಲಿ ಪಂಡಿತ** : ಸಂಪಾದಕರು: ಎನ್. ಬಸವಾರಾಧ್ಯ, ಕ್ರಿ.ಶ. ೧೩೫೨ರಲ್ಲಿ ರಚಿತವಾದ ಈ ಚಂಪೂಕೃತಿಯಲ್ಲಿ ೧೬ ಆಶ್ವಾಸಗಳಿವೆ. ೧೫ನೆಯ ತೀರ್ಥಂಕರನಾದ ಧರ್ಮನಾಥನ ಕಥೆ ಇದರಲ್ಲಿ ನಿರೂಪಿತವಾಗಿದೆ. ಈ ಕೃತಿ ಪ್ರಥಮ ಬಾರಿಗೆ ಬೆಳಕುಕಂಡಿದೆ.

ಪ್ರಕೃತ ಲೇಖನದಲ್ಲಿ ಮರುಮುದ್ರಣಗಳನ್ನೂ ಸಂಪಾಗಿತ ಕೃತಿಗಳನ್ನೂ ವಿವೇಚಿಸಿಲ್ಲ. ಅಲ್ಲದೆ ಈವರೆಗೆ ಪ್ರಕಟವಾದ ಎಲ್ಲ ಕಾವ್ಯಗಳನ್ನೂ ಇಲ್ಲಿ ಉಲ್ಲೇಖಿಸಿಲ್ಲ.

ಗ್ರಂಥಸಂಪಾದನೆ ಒಂದು ಶ್ರಮಸಾಧ್ಯವಾದ ಕಾರ್ಯವೆಂಬುದನ್ನು ಈ ಹಿಂದೆಯೇ ಶ್ರುತಪಡಿಸಿದೆ. ಸಾಹಿತ್ಯದ ಈ ಪ್ರಕಾರಕ್ಕೆ ಸಾಕಷ್ಟು ಪುರಸ್ಕಾರ ಪ್ರಚಾರ ಇಂದು ದೊರಕುತ್ತಿಲ್ಲ. ಪ್ರಾಚೀನಕಾವ್ಯಗಳ ಬಗೆಗೆ ಇಂದಿನ ದೃಷ್ಟಿ ಅವಶ್ಯ ಬದಲಾಗಬೇಕು. ಕನ್ನಡದಲ್ಲಿ ಕೃಷಿಮಾಡಲು ಹೊರಡುವವರು ಪ್ರಾಚೀನಕಾವ್ಯಗಳನ್ನು ಅವಶ್ಯ ಪರಿಶೀಲಿಸಬೇಕು. ಭದ್ರಬುನಾದಿಯಿಲ್ಲದ ಸೌಧ ಬಹುಕಾಲ ನಿಲ್ಲಲಾರದು. ಕನ್ನಡದಲ್ಲಿ ರಚಿತವಾಗಿರುವ ಪ್ರಾಚೀನ ಕಾವ್ಯಗಳೆಲ್ಲ ಶಾಸ್ತ್ರೀಯವಾಗಿ ಸಂಪಾದಿತವಾಗಬೇಕು. ಅವುಗಳನ್ನು ಕನ್ನಡ ಜನ ತಪ್ಪದೆ ಪರಾಮರ್ಶಿಸಬೇಕು. ಗ್ರಂಥಸಂಪಾದನಕಾರ್ಯ ಅಂದು ಇಂದು ಮುಂದು ಅನೂಚಾನವಾಗಿ ನಡೆದುಕೊಂಡು ಬರುವಂತಾಗಬೇಕು. ಕನ್ನಡ ಜನತೆಯ ಇಂದಿನ ದೃಷ್ಟಿ ಬದಲಾಗಿ ಅದು ಮುಂದಿನ ಸೃಷ್ಟಿಗೆ ನಾಂದಿಯಾಗಿರಲಿ ಎಂದು ಹಾರೈಸೋಣ.



# ಗದುಗಿನ ಗಂಡುಕವಿ ಕುಮಾರವ್ಯಾಸ

ಲೇಖಕರು: ಎನ್ಕೆ, ಪ್ರಕಾಶಕರು: ಸಮಾಜ ಪುಸ್ತಕಾಲಯ, ಧಾರವಾಡ, ಪ್ರಥಮ ಮುದ್ರಣ : ೧೯೭೮, ಪುಟಗಳು: ೮+೧೯೬, ಬೆಲೆ: ರೂ. ೬.೦೦

---

ಹದಿನೈದನೆಯ ಶತಮಾನದ ಕೇಂದ್ರಬಿಂದು ಕುಮಾರವ್ಯಾಸ ಪಂಚಮವೇದವೆನಿಸಿಕೊಂಡಿರುವ 'ಭಾರತಕಥಾಮಂಜರಿ'ಯನ್ನು ರಚಿಸಿ ಚಿರಸ್ಮರಣೀಯನಾಗಿದ್ದಾನೆ, ಮಹಾಕವಿ ಎಂದೂ ಕರೆಸಿಕೊಂಡಿದ್ದಾನೆ, ಯುಗಪ್ರವರ್ತಕ ನೆನಿಸಿಕೊಂಡಿದ್ದಾನೆ. ಆದುದರಿಂದಲೇ ಆಧುನಿಕ ಕವಿಶ್ರೇಷ್ಠರೊಬ್ಬರು "ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದು, ಭಾರತ ಕಣ್ಣಲಿ ಕುಣಿಯುವುದು" ಎಂದು ಹಾಡಿದ್ದಾರೆ. ಕುಮಾರವ್ಯಾಸ ಭಾರತವನ್ನು ಓದಿದವರಿಗೆಲ್ಲ ಈ ಮಾತು ಸತ್ಯಸ್ಯಸತ್ಯವೆಂಬುದು ಅರಿವಾಗದೆ ಇರದು.

ರಾಮಾಯಣ ಮಹಾಭಾರತಗಳು ಸಹಸ್ರಾರು ವರ್ಷಗಳಿಂದ ಜೀವಂತವಾಗಿ ಉಳಿದುಕೊಂಡು ಬಂದಿವೆ. ಈ ದೇಶದ ಜನ ಅನಾದಿಕಾಲದಿಂದಲೂ ಇವುಗಳ ಬಗೆಗೆ ಅನನ್ಯಭಕ್ತಿ, ಶ್ರದ್ಧೆ, ನಿಷ್ಠೆ, ಗೌರವಗಳನ್ನು ತೋರುತ್ತಾ ಬಂದಿದ್ದಾರೆ. ಇವು ಮಾನವರ ಉದ್ಧಾರಕ್ಕೂ ಉತ್ಥಾನಕ್ಕೂ ನೆರವಾಗಬಲ್ಲುವು ಎಂದು ಅವರು ದೃಢವಾಗಿ ನಂಬಿದ್ದಾರೆ. ಆದ್ದರಿಂದಲೇ ಇಂದಿಗೂ ಇವು ನಾಡಿನಾದ್ಯಂತ ಪಠನಗೊಳ್ಳುತ್ತಿವೆ, ಪಾರಾಯಣಗೊಳ್ಳುತ್ತಿವೆ. ವಿಶ್ವದ ಹಲವಾರು ಭಾಷೆಗಳಿಗೆ ಇವು ಭಾಷಾಂತರಗೊಂಡಿವೆ. ಹೀಗಾಗಿ ಇವು ವಿಶ್ವಕಾವ್ಯಗಳಾಗಿವೆ.

ಕುಮಾರವ್ಯಾಸನ ಕಾಲದೇಶ ವರ್ತಮಾನ ಮತ್ತು ಆತನ ಕೃತಿಯ ಬಗೆಗೆ ಅಪಾರವಾದ ಸಾಹಿತ್ಯ ಈಗಾಗಲೇ ಹೊರಬಂದಿದೆ. ಇಂದಿಗೂ ಹೊರಬರುತ್ತಲೇ ಇದೆ. ಈ ಮಾಲಿಕೆಯಲ್ಲಿ ಪ್ರಕೃತ ಎನ್ಕೆ ಅವರ ಕುಮಾರವ್ಯಾಸ ಒಂದು ಗಮನಾರ್ಹ ಕೃತಿ. ಶ್ರೀಯುತರು ಈ ಕೃತಿಯಲ್ಲಿ ಕುಮಾರವ್ಯಾಸನ ಕಾಲ, ತಿಳಿಯ ಹೇಳುವೆ ಕೃಷ್ಣ ಕಥೆಯ, ಕುಮಾರವ್ಯಾಸನ ಕಾವ್ಯಕಥಾವಾಹಿನಿ, ಕುಮಾರವ್ಯಾಸನ ಶೈಲಿ ಮತ್ತು ದರ್ಶನ, ಕುಮಾರವ್ಯಾಸನ ಕೆಲವು ಮುಖ್ಯಪಾತ್ರಗಳು, ಕುಮಾರವ್ಯಾಸನ ಸಮಕಾಲೀನ ಪ್ರಜ್ಞೆ, ಪ್ರತಿಭೆ, ಕಾವ್ಯಕ್ಕೆ ಗುರು ಎಂಬ ಶೀರ್ಷಿಕೆಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ನಿರೂಪಿಸಿದ್ದಾರೆ.

ಕುಮಾರವ್ಯಾಸನ ಕಾಲದ ಬಗೆಗೆ ಈವರೆಗೆ ವಿದ್ವಾಂಸರಲ್ಲಿ ಸಾಕಷ್ಟು ಜಿಜ್ಞಾಸೆ ನಡೆದಿದೆ. ಆದರೂ ಒಮ್ಮತಕ್ಕೆ ಬರಲು ಸಾಧ್ಯವಾಗಿಲ್ಲ. ಹದಿಮೂರನೆಯ ಶತಮಾನದಿಂದ ಹದಿನಾರನೆಯ ಶತಮಾನದವರೆಗೆ ಆತನ ಕಾಲದ ಪರಿಧಿ ಹರಿದಿದೆ. ಲೇಖಕರು ಯಾವ ತೀರ್ಮಾನಕ್ಕೆ ಬರಲೂ ಸಾಧ್ಯವಿಲ್ಲದಂತಾಗಿದೆ.

ಶ್ರೀ ಎನ್ಕೆ ಅವರು ಕುಮಾರವ್ಯಾಸ ಭಾರತದ ಕಥೆಯನ್ನು ಸರಳವಾಗಿ ನಿರೂಪಿಸುತ್ತಾ ಅಲ್ಲಲ್ಲಿ ವ್ಯಾಖ್ಯಾನಗಳನ್ನೂ ವಿಶ್ಲೇಷಣೆಯನ್ನೂ ವಿಮರ್ಶೆಯನ್ನೂ ಮಾಡಿಕೊಂಡು ಹೋಗಿದ್ದಾರೆ. ಕಥೆ, ಪಾತ್ರ ಪರಿಚಯ, ಶೈಲಿ, ಸಮಕಾಲೀನ ಪ್ರಜ್ಞೆ –ಇವನ್ನು ಹಲವಾರು ದೃಷ್ಟಾಂತಗಳ ಮೂಲಕ ವಿಶದೀಕರಿಸಿದ್ದಾರೆ. ಮೂಲಭಾರತದೊಂದಿಗೆ ಕೆಲವಾರು ಪ್ರಕರಣಗಳನ್ನು ತುಲನೆ ಮಾಡಿ ಕುಮಾರವ್ಯಾಸನ ಹೆಗ್ಗಳಿಕೆಯನ್ನು ಎತ್ತಿ ತೋರಲು ಪ್ರಯತ್ನಿಸಿದ್ದಾರೆ. ಸಂದರ್ಭಕ್ಕೆ ತಕ್ಕಂತೆ ಮೂಲದಿಂದ

ಶ್ಲೋಕಗಳನ್ನು ಉದ್ಧರಿಸಿ ವಿವರಿಸಿದ್ದಾರೆ. ಸಾಕಷ್ಟು ಪರಿಶ್ರಮವಹಿಸಿ ವಿವೇಚನೆಮಾಡಿದ್ದಾರೆ. ಅಲ್ಲದೆ ಇಂದಿಗೂ ಜೀವಂತವಾಗಿರುವ ಕೆಲವು ಗಾದೆಗಳನ್ನೂ ನುಡಿಗಟ್ಟುಗಳನ್ನೂ ಭಾರತದಿಂದ ಪಟ್ಟಿಮಾಡಿ ತೋರಿದ್ದಾರೆ.

ಪುಟ ೧೧೬ರಲ್ಲಿ 'ಸುಲಭವಾಗಿ ಅರ್ಥವಾಗದಂತಹ ಕೆಲವೊಂದು ವಿಚಿತ್ರ ಪದಗಳನ್ನು ಗಮನಿಸಬಹುದು' ಎಂದು ತಪ್ಪರ, ಚೊಕ್ಕೆಯ, ಡಿಳ್ಳಾಸ, ಖರ್ವಡ, ದಳದುಳ ಮುಂತಾದ ಶಬ್ದಗಳನ್ನು ಉದಾಹರಿಸಿದ್ದಾರೆ. ಇವು ಕುಮಾರವ್ಯಾಸನಿಗಿಂತ ಹಿಂದಿನ ಕಾವ್ಯಗಳಲ್ಲೇ ಕಂಡುಬರುತ್ತವೆ. ಆದ್ದರಿಂದ ಇವು ಅರ್ಥವಾಗದಂತಹವೂ ಅಲ್ಲ ವಿಚಿತ್ರವೂ ಅಲ್ಲ. ಹಾಗೆಯೇ ದಾರಡಿ ಎಂಬ ಶಬ್ದವನ್ನು ಕೊಟ್ಟಿದೆ. ಇದು ಆರಡಿ ಎಂದಿರಬೇಕು. ಇದೇ ರೀತಿ ಮತ್ತೆ ಕೆಲವೆಡೆ ಶಬ್ದಗಳನ್ನೂ ಅರ್ಥಗಳನ್ನೂ ಸೂಚಿಸಿರುವಲ್ಲಿ ಅನವಸ್ಥಾದೋಷ ಬಂದಿದೆ. ಈ ಕೆಲವು ಸ್ಖಾಲಿತ್ಯಗಳನ್ನು ಸುಲಭವಾಗಿ ಪರಿಹರಿಸಿಕೊಳ್ಳಬಹುದು.

ಶ್ರೀ ಎನ್ಕೆ ಅವರು ಅತಿಯಾದ ಆಸ್ಥೆಯಿಂದ ಕುಮಾರವ್ಯಾಸ ಭಾರತವನ್ನು ತುಂಬ ಪರಿಶ್ರಮದಿಂದ ವ್ಯಾಸಂಗ ಮಾಡಿ ತಮ್ಮ ಅನಿಸಿಕೆಗಳನ್ನೂ ಅಭಿಪ್ರಾಯಗಳನ್ನೂ ವ್ಯಕ್ತಪಡಿಸಿದ್ದಾರೆ. ಕೆಲವೆಡೆ ಮೂಲಭಾರತಕ್ಕೂ ಕುಮಾರವ್ಯಾಸ ಭಾರತಕ್ಕೂ ಇರುವ ಸಾದೃಶ್ಯ ವೈದೃಶ್ಯಗಳನ್ನೂ ಎತ್ತಿತೋರಿಸಿಕೊಟ್ಟಿದ್ದಾರೆ. ತಾವು ತಳೆದ ಅಭಿಪ್ರಾಯಗಳನ್ನು ಪ್ರಾಮಾಣಿಕವಾಗಿ ಹೇಳಿದ್ದಾರೆ. ಅವು ಸರ್ವರಿಗೂ ಮೆಚ್ಚುಗೆಯಾಗಬೇಕೆಂದೇನಿಲ್ಲ. ಸಾಮಾನ್ಯ ಓದುಗರಿಗೆ ಈ ಕೃತಿ ತುಂಬ ಪ್ರಯೋಜನವಾಗುತ್ತವೆ. ಪರಿಣಾಮಕಾರಿಯಾಗುತ್ತದೆ. ವಿದ್ವಾಂಸರೂ ಈ ಕೃತಿಯ ಅವಲೋಕನದಿಂದ ಲಾಭ ಪಡೆಯಬಹುದು. ಈ ಎರಡೂ ದೃಷ್ಟಿಗಳಿಂದ ಗದುಗಿನ ಗಂಡುಕವಿ ಕುಮಾರವ್ಯಾಸ ಪರಿಶೀಲನಾರ್ಹವಾಗಿದೆ.



# ಮುದ್ದಣ

ಡಾ. ಶ್ರೀನಿವಾಸ ಹಾವನೂರ, ವಿದ್ವಾನ್ ರಾಮಚಂದ್ರ ಉಚ್ಚಿಲ, ಎನ್.ಎನ್. ಲಕ್ಷ್ಮೀನಾರಾಯಣಭಟ್ಟ, ಐಬಿಎಚ್ ಪ್ರಕಾಶನ, ಗಾಂಧಿನಗರ, ಬೆಂಗಳೂರು-೫೬೦೦೦೯, ಪುಟಗಳು viii+೧೯೬, ಬೆಲೆ: ರೂ. ೧೫.೦೦, ಮೊದಲನೆಯ ಮುದ್ರಣ ೧೯೭೮

---

ಐಬಿಎಚ್ ಪ್ರಕಾಶನದ ಕವಿಕಾವ್ಯ ಪರಂಪರೆ ಮಾಲೆಯ ೧೪ನೆಯ ಪುಷ್ಪವಾದ 'ಮುದ್ದಣ' ಎಂಬ ವಿಮರ್ಶನ ಕೃತಿಯನ್ನು ಆದರಪೂರ್ವಕವಾಗಿ ಸ್ವಾಗತಿಸುತ್ತೇವೆ. ಹತ್ತೊಂಬತ್ತನೆಯ ಶತಮಾನದಲ್ಲಿ ಆಗಿಹೋದ ಮುದ್ದಣ ಬದುಕಿದ್ದು ಕೇವಲ ಮೂವತ್ತು ವರ್ಷಗಳಾದರೂ ತನ್ನ ಕೃತಿಗಳಿಂದ ಕನ್ನಡಿಗರ ಮನದಲ್ಲಿ ನೂರಾರು ವರ್ಷಗಳವರೆಗೆ ನೆನಪಿನಲ್ಲಿ ಉಳಿಯುತ್ತಾನೆ. ವ್ಯಾಯಾಮ ಶಿಕ್ಷಕನಾಗಿ ಉದ್ಯೋಗವನ್ನು ಕೈಕೊಂಡ ಮುದ್ದಣ ಕನ್ನಡ ಉಪಾಧ್ಯಾಯನಾಗಿ ಕನ್ನಡದಲ್ಲಿ ಕಸರತ್ತನ್ನು ಮಾಡಿ ಜೀವಿತದ ಅಲ್ಪಾವಧಿಯಲ್ಲೇ ಸಾರಸ್ವತ ಕೃತಿಗಳನ್ನು ರಚಿಸಿ ಹೋಗಿದ್ದಾನೆ. ಇಂತಹ ಒಬ್ಬ ಕನ್ನಡ ವಿದ್ವಾಂಸನಿಗೆ, ಸಾಹಿತಿಗೆ ಬಂದ ಸಾವಾದರೂ ಎಂತಹುದು! ಆರ್ಥಿಕ ನೆರವಿಲ್ಲದೆ ಸರಿಯಾದ ಆರೈಕೆ ಉಪಚಾರಗಳಿಲ್ಲದ ಪ್ರಾಣಬಿಡುವಂತೆ ಮಾಡಿದ್ದೇ ಆತನಿಗೆ ನಮ್ಮವರು ಕೊಟ್ಟ ಅತ್ಯಮೂಲ್ಯ ಕಾಣಿಕೆಯಾಗಿದೆ.

ತನ್ನ ನಿಜವಾದ ಹೆಸರನ್ನೂ ಹೇಳಿಕೊಳ್ಳದ ಸಂಕೋಚಪ್ರವೃತ್ತಿಯ ನಂದಳಿಕೆ ಲಕ್ಷ್ಮೀನಾರಾಯಣಪ್ಪ ೧೯ನೆಯ ಶತಮಾನದ ಒಬ್ಬ ಶ್ರೇಷ್ಠಕವಿ ಎಂಬುದು ನಿರ್ವಿವಾದವಾದುದು. ಪ್ರಾಚೀನಪುರಾಣ ವಸ್ತುಗಳನ್ನೇ ಆಧರಿಸಿಕೊಂಡು, ಅನುಸರಿಸಿಕೊಂಡು ಒಂದು ವಿನೂತನ ಮಾರ್ಗದಲ್ಲಿ ಅವನ್ನು ಕೃತಿರೂಪದಲ್ಲಿ ರಚಿಸಿ ತನ್ನ ಹೆಸರನ್ನು ಶಾಶ್ವತಗೊಳಿಸಿಕೊಂಡಿದ್ದಾನೆ. ತನ್ನ ಜೀವಿತದ ಕಷ್ಟಕಾರ್ಪಣ್ಯಗಳನ್ನು ಅಪ್ಪಿತಪ್ಪಿಯಾದರೂ ಕಾವ್ಯಗಳಲ್ಲಿ ಪ್ರಸ್ತಾಪಿಸಿಲ್ಲ. ಅಷ್ಟೇ ಅಲ್ಲ, ತನ್ನ ಪಾಂಡಿತ್ಯ ಪ್ರಭೆಗಳ ಬಗ್ಗೆಯೂ ಚಕಾರವನ್ನು ಎತ್ತಿಲ್ಲ. ಆದ್ದರಿಂದಲೇ ಆತನ ಕೃತಿಗಳು ಮನೋರಮೆಯೇ ಹೇಳುವಂತೆ ಪಿಂತಿಲ್ಲ ಮುಂತಿಲ್ಲವಾದುವು.

'ಮುದ್ದಣ' ಕೃತಿಯಲ್ಲಿನ ಮೂವರು ವಿದ್ವಾಂಸರ ಲೇಖನಗಳೂ ಸಾಕಷ್ಟು ಸಂಶೋಧನೆ, ವ್ಯಾಸಂಗಗಳಿಂದ ಕೂಡಿದವುಗಳಾಗಿವೆ. ಈ ಕವಿಕಾವ್ಯ ಮಾಲೆಯ ಸಂಪಾದಕರಾದ ವಿ. ಸೀತಾರಾಮಯ್ಯನವರ ಸಮೀಕ್ಷೆ ಮುದ್ದಣನ ಒಂದು ಸಮಗ್ರ ವಿವೇಚನೆಯನ್ನು ಮಾಡಿಕೊಡುವಂತಹುದಾಗಿವೆ. ಮುದ್ದಣ ಕವಿಯ ಕಾಲ ದೇಶ ವರ್ತಮಾನವನ್ನು ಡಾ. ಶ್ರೀನಿವಾಸ ಹಾವನೂರ ಅವರು ತುಂಬ ಸಮರ್ಪಕವಾಗಿ ನಿರೂಪಿಸಿದ್ದಾರೆ. ಮುದ್ದಣನ ಕಾಲದ ಪರಿಸರದ ಸಾಹಿತ್ಯವನ್ನು ಆತನ ಜೀವಿತದ ಅನೇಕ ರಸಸ್ಯಂದಿ ಘಟನೆಗಳನ್ನೂ ಮನಮುಟ್ಟುವಂತೆ ಚಿತ್ರಿಸಿದ್ದಾರೆ. ನಿಷ್ಪಕ್ಷಪಾತವಾದ ಒಂದು ತೌಲನಿಕ ವಿಮರ್ಶೆಯನ್ನು ಮಾಡಿದ್ದಾರೆ. ರಾಮಚಂದ್ರ ಉಚ್ಚಿಲ ಅವರು ಮುದ್ದಣನ ಯಕ್ಷಗಾನ ಕೃತಿಗಳು ಮತ್ತು ರಾಮಪಟ್ಟಾಭಿಷೇಕ ಮತ್ತು ಅದ್ಭುತ ರಾಮಾಯಣಗಳ ಸಾರಸ್ವತ ವಿಮರ್ಶೆಯನ್ನು ಮಾಡಿ ಕನ್ನಡ ಸಾಹಿತ್ಯದಲ್ಲಿ ಅವುಗಳ ಸ್ಥಾನಮಾನಗಳೇನೆಂಬುದನ್ನು ತೋರಿಸಿಕೊಟ್ಟಿದ್ದಾರೆ. ರಾಮಾಶ್ವಮೇಧವನ್ನು ಕುರಿತು ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರು ಒಂದು ಸಮರ್ಥವಾದ ತುಲನಾತ್ಮಕ ವ್ಯಾಸಂಗವನ್ನು ಮಾಡಿದ್ದಾರೆ. ರಾಮಾಶ್ವಮೇಧದ ಒಂದು ಮೌಲ್ಯಮಾಪನವನ್ನೇ ಮಾಡಿ ತೋರಿದ್ದಾರೆ ಎನ್ನಬಹುದು.

ಸಮೀಕ್ಷೆಯಲ್ಲಿ ವಿ. ಸೀತಾರಾಮಯ್ಯನವರು ಮುದ್ದಣನ ಒಂದು ಸಮಗ್ರ ದರ್ಶನವನ್ನು ಮಾಡಿಕೊಟ್ಟಿದ್ದಾರೆ. ಈ ಸಮೀಕ್ಷೆ ಶ್ರೀಯುತರ ಆಳವಾದ ವ್ಯಾಪಕವಾದ ವ್ಯಾಸಂಗಕ್ಕೆ ಅನುಭವಕ್ಕೆ ದ್ಯೋತಕವಾಗಿದೆ. ಒಟ್ಟಿನಲ್ಲಿ ಈ ಸಮೀಕ್ಷೆ ಈ ಗ್ರಂಥಕ್ಕೆ ತಿಲಕಪ್ರಾಯವಾಗಿದೆ.

ಐಬಿಎಚ್ ಪ್ರಕಾಶನದವರು ಕವಿಕಾವ್ಯ ಪರಂಪರೆ ಮಾಲೆಯಲ್ಲಿ ಪ್ರಮುಖ ಕನ್ನಡ ಕವಿಗಳ ಮತ್ತು ಅವರ ಕೃತಿಗಳ ಸಮಗ್ರ ವಿವೇಚನೆ ವಿಮರ್ಶೆಗಳನ್ನು ಹೊರತರುವುದರ ಮೂಲಕ ಕನ್ನಡ ಜನತೆಗೆ ಮಹೋಪಕಾರವನ್ನು ಮಾಡುತ್ತಿದ್ದಾರೆ. ಸಮರ್ಥ ವಿದ್ವಾಂಸರಿಂದ ಸಮುಚಿತವಾದ ಲೇಖನಗಳನ್ನು ಬರೆಸಿ ಕವಿಕಾವ್ಯಗಳು ಜನಮನವನ್ನು ಹೊಗುವಂತೆ ಮಾಡಿದ್ದಾರೆ. ಈ ಕೃತಿಗಳ ಪ್ರಯೋಜನ ಅಪಾರವಾದದ್ದು; ಬಹುಕಾಲ ನಿಲ್ಲುವಂತಹುದು. ಇಂತಹ ಉಪಯುಕ್ತ ಕಾರ್ಯವನ್ನು ಕೈಗೊಂಡಿರುವ ಐಬಿಎಚ್ ಪ್ರಕಾಶನದವರು ಅಭಿನಂದನೀಯರು. ನಂದಳಿಕೆ ಲಕ್ಷ್ಮೀನಾರಾಣಪ್ಪನ ಜೀವಿತ ಮತ್ತು ಕೃತಿಗಳ ಸಂಪೂರ್ಣ ಮಾಹಿತಿ, ವಿವೇಚನೆ, ಮೌಲ್ಯಮಾಪನಗಳನ್ನು ಈ ಮುದ್ದಣ ಕೃತಿ ನೀಡುವುದರಲ್ಲಿ ಸಂದೇಹವಿಲ್ಲ.



# ಐಬಿಎಚ್ ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟು

ಸಂಪಾದಕರು: ಪ್ರೊ. ಜಿ. ವೆಂಕಟಸುಬ್ಬಯ್ಯ, ಪ್ರೊ. ಎಲ್.ಎಸ್. ಶೇಷಗಿರಿರಾವ್, ಪ್ರೊ. ಎಚ್.ಕೆ. ರಾಮಚಂದ್ರಮೂರ್ತಿ, ಪ್ರಕಾಶಕರು: ಐಬಿಎಚ್ ಪ್ರಕಾಶನ, ಗಾಂಧಿನಗರ, ಬೆಂಗಳೂರು-೫೬೦೦೦೯, ಮೊದಲ ಮುದ್ರಣ ; ೧೯೮೧, ಪುಟಗಳು: ೬೭೭+viii, ಬೆಲೆ: ರೂ. ೩೦.೦೦

---

ನಿಘಂಟು ರಚನೆ, ಸಂಕಲನ, ಸಂಪಾದನೆ ತುಂಬ ಕಷ್ಟವೂ ಕ್ಲಿಷ್ಟವೂ ಆದುದು. ಇದಕ್ಕೆ ಆಳವಾದ ಪಾಂಡಿತ್ಯವೂ ಅಪಾರವಾದ ಲೋಕಾನುಭವವೂ ಅತ್ಯವಶ್ಯಕ. ನಮ್ಮ ಪ್ರಾಚೀನರು ಹಲವಾರು ನಿಘಂಟುಗಳನ್ನು ರಚಿಸಿದ್ದಾರೆ. ಇವು ವೈವಿಧ್ಯಪೂರ್ಣವಾಗಿವೆ. ಭಾರತೀಯ ನಿಘಂಟುಶಾಸ್ತ್ರದ ವಿಕಾಸವನ್ನು ಪರಿಶೀಲಿಸಿದವರಿಗೆ ಈ ನಿಘಂಟುಗಳು ನಿರ್ವಹಿಸಿದ ಮಹತ್ತರ ಪಾತ್ರ ಮನದಟ್ಟಾಗುತ್ತದೆ. ಪ್ರಾಚೀನ ನಿಘಂಟುಗಳೆಲ್ಲ ಶ್ಲೋಕ ಪದ್ಯರೂಪಗಳಲ್ಲಿದ್ದು ಕಂಠಪಾಠಮಾಡಿಕೊಳ್ಳುವುದಕ್ಕೆ ಅನುಕೂಲವಾಗಿದ್ದುವು. ಇವು ಕೇವಲ ಸೀಮಿತ ಉದ್ದೇಶ ಸಾಧನೆಗಾಗಿ ಮಾತ್ರ ರಚಿತವಾದಂಥವು. ಭಾಷೆ ಬೆಳೆದಂತೆಲ್ಲ ನಿಘಂಟುಗಳ ವ್ಯಾಪ್ತಿಯೂ ಹೆಚ್ಚಾಗುತ್ತಾ ಬಂದಿತು. ಅನ್ಯಭಾಷೆಗಳ ಸಂಪರ್ಕವನ್ನು ಪಡೆದುಕೊಳ್ಳಲು ದ್ವಿಭಾಷಾ ತ್ರಿಭಾಷಾ ನಿಘಂಟುಗಳು ಹುಟ್ಟಿಕೊಂಡವು.

ಕನ್ನಡದಲ್ಲಿ ಈ ತೆರನ ನಿಘಂಟುಗಳು ಅಷ್ಟಾಗಿ ಇಲ್ಲದಿದ್ದರೂ ಒಬ್ಬಿಬ್ಬರು ಈ ದಿಶೆಯಲ್ಲೂ ಕೆಲಸ ಮಾಡಿರುವುದನ್ನು ಕಾಣುತ್ತೇವೆ. ೧೮೩೨ರಲ್ಲಿ ರೆ॥ ರೀವ್ ಅವರು A Dictionary, Canarese and English ಎಂಬ ನಿಘಂಟನ್ನೂ, ೧೮೫೮ರಲ್ಲಿ ಡ್ಯಾನಿಯಲ್ ಸ್ಯಾಂಡರ್‌ಸನ್ ಅವರು A Dictionary, Canarese and Englsih ಎಂಬ ನಿಘಂಟನ್ನೂ, ೧೮೭೧ರಲ್ಲಿ ಜಾನ್ ಗ್ಯಾರೆಟ್ A Manual Kanarese and English Dictionary ಯನ್ನೂ, ೧೮೯೧ರಲ್ಲಿ ನರಸಿಂಹರಾವ್ ಅವರು Kisamwar Glossary (ದೇಶ್ಯ ಅನ್ಯದೇಶ್ಯ ಕನ್ನಡ ಶಬ್ದಗಳಿಗೆ ಇಂಗ್ಲಿಷಿನಲ್ಲೆ ಅರ್ಥ ಕೊಟ್ಟಿದೆ) ಯನ್ನೂ ೧೮೯೪ರಲ್ಲಿ ರೆ॥ ಎಫ್. ಕಿಟ್ಟೆಲ್ ಅವರು Kannada English Dictionary ಎಂಬ ಅಭೂತಪೂರ್ವ ನಿಘಂಟನ್ನೂ ೧೯೬೫ರಲ್ಲಿ ಆರ್.ಎಸ್. ರಾಮರಾವ್ ಅವರು ಕನ್ನಡ-ಕನ್ನಡ ಇಂಗ್ಲಿಷ್ ನಿಘಂಟನ್ನೂ ಹೊರತಂದಿದ್ದಾರೆ. ಪ್ರಕೃತ ಐಬಿಎಚ್ ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟು ರೆ॥ ಎಫ್. ಕಿಟ್ಟೆಲ್ ಅವರ Kannada English Dictionary ಯನ್ನೂ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟನ್ನೂ ಆಧರಿಸಿ ರಚಿತವಾದಂತೆ ಸಂಪಾದಕರೇ ಹೇಳಿಕೊಂಡಿದ್ದಾರೆ. ಈ ನಿಘಂಟಿನ ಅನುಬಂಧದಲ್ಲಿ ಕೆಲವು ನುಡಿಗಟ್ಟುಗಳನ್ನೂ ಗಾದೆಗಳನ್ನೂ ಕೊಟ್ಟಿದ್ದಾರೆ.

ಈ ನಿಘಂಟನ್ನು ಸ್ಥೂಲವಾಗಿ ಪರಿಶೀಲಿಸಿದಾಗ ನಮಗೆ ಕಂಡುಬಂದ ಕೆಲವು ಸಂಗತಿಗಳನ್ನು ಮುಂದೆ ನಿರೂಪಿಸಲಾಗಿದೆ.

೧. ಈ ನಿಘಂಟಿನಲ್ಲಿ ಅನುಸರಿಸಿರುವ ಕ್ರಮವನ್ನು ಸಂಪಾದಕರು 'ಮೊದಲ ಮಾತು'ನಲ್ಲಿ ವಿವರಿಸಿದ್ದಾರೆ. ಆದರೆ ಈ ವಿವರಣೆ ಸಮರ್ಪಕವಾಗಿಲ್ಲ. ಶಬ್ದಗಳನ್ನು ಕೊಟ್ಟಿರುವ ಕ್ರಮ ಅರ್ಥಗಳನ್ನು ವಿವರಿಸಿರುವ ವಿಧಾನ, ಒಂದು ಶಬ್ದ

ಕ್ರಿಯಾವಾಚಕ, ನಾಮವಾಚಕ, ಗುಣವಾಚಕ ಅವ್ಯಯ ಇತ್ಯಾದಿಯಾಗಿ ಬಳಕೆಯಾದಾಗ ಅನುಸರಿಸಿರುವ ವಿಧಾನಗಳನ್ನು ಸ್ಪಷ್ಟಪಡಿಸಬೇಕಾಗಿತ್ತು.

೨. "ಪ್ರಚಲಿತ ಕನ್ನಡ ಬರಹವನ್ನು ಓದುವವರ ಉಪಯೋಗಕ್ಕಾಗಿ ಮುಖ್ಯವಾಗಿ ಈ ನಿಘಂಟನ್ನು ಯೋಜಿಸಿದುದರಿಂದ ನಮ್ಮ ಉದ್ದೇಶಕ್ಕೆ ಅಗತ್ಯವಾದ ಶಬ್ದಗಳನ್ನು ಮಾತ್ರ ಆಯ್ದುಕೊಂಡಿದ್ದೇವೆ" ಎಂದಿದ್ದಾರೆ ಸಂಪಾದಕರು. ಒಂದು ಶಬ್ದಕ್ಕೆ ಹಲವು ರೂಪಗಳಿದ್ದಾಗ ಶುದ್ಧವಾದ ರೂಪವನ್ನು ಉಳಿಸಿಕೊಂಡು ಉಳಿದುವನ್ನು ಬಿಡಬಹುದು. ಉದಾ: ಅಡಪ, ಅಡೆಪ, ಅಣಿಗೆಯ್, ಅಣಿಗೈ, ಅಡ್ಡಕಸಬು, ಅಡ್ಡಕಸುಬು, ಅಣುಮ, ಅಣುವ, ಅಣುವಂತ, ಅದಟ, ಅದಟು, ಅಧಟ, ಅಧಟು ಈ ಮೊದಲಾದ ಎಲ್ಲ ಶಬ್ದಗಳೂ ಶಬ್ದರೂಪಗಳೂ ಪ್ರಚಲಿತ ಕನ್ನಡ ಬರಹದಲ್ಲಿ ವಿಶೇಷವಾಗಿ ಬರುವಂತಹವಲ್ಲ. ಕೇವಲ ಚಾರಿತ್ರಿಕ ನಿಘಂಟಿನಲ್ಲಿ ಮಾತ್ರ ಇವುಗಳ ಉಲ್ಲೇಖ ಅಗತ್ಯವಾಗುತ್ತದೆ.

೩. ಅಂಕಗೊಳ್, ಅಂಕಕಹಳೆ; ಅಂಕಗಣಿತ, ಅಂಕವರೆ, ಅಂಕ, ಅಂಕಿ ಅಂಶ; ಅಳಲು, ಅಳಲಿಕೆ, ಅಳಲಿಸು; ಅಭಿವ್ಯಕ್ತಿ, ಅಭಿವ್ಯಕ್ತಗೊಳಿಸು, ಆಕಳು, ಆಕಳಿಕೆ, ಆಕಳಿಸು, ಕಾಲೋಚಿತ, ಕಾಲುಕೆರೆ; ಕಾಲ್ಚೆಂಡು, ಕಾಲ್ದಳ, ಕಾಲ್ಪನಿಕ, ಕಾಲುಬೆರಳು, ಕಾಲುಮಣೆ, ಕಾಲುಮರೆ, ಕಾವಲು, ಕಾವಲೆ, ಕಾವಲುಗಾರ; ಕಾಸ್ತಾರ, ಕಾಸಾರ –ಈ ಎಲ್ಲ ಶಬ್ದಗಳ ಅನುಕ್ರಮ (Word order) ತಪ್ಪಾಗಿದೆ.

೪. ಅಪಾತ್ರ ಶಬ್ದಕ್ಕೆ ಕೊಟ್ಟಿರುವ ಎರಡನೆಯ ಅರ್ಥ ಆಲಂಕಾರಿಕವಾದುದು. ಇದನ್ನು ಸೂಚಿಸಬೇಕಾಗಿತ್ತು.

೫. ಅಮರಿ ಎಂಬ ಶಬ್ದಕ್ಕೆ ಅಮರಸ್ತ್ರೀ ಎಂದು ಅರ್ಥ ಕೊಟ್ಟಿದೆ. ಶಬ್ದಕ್ಕಿಂತ ಅರ್ಥವೇ ಬಿರುಸಾಗಿದೆ. ಇದಕ್ಕೆ ಅಪ್ಸರೆ ಎಂದು ಅರ್ಥವನ್ನು ಕೊಡಬಹುದಾಗಿತ್ತಲ್ಲವೇ?

೬. ಅಮರಿಸು (ಕ್ರಿ) ಇರಿಸು, ಕೂಡಿಸು, ಸೇರಿಸು, ತುಂಬು ಎಂದು ಅರ್ಥಗಳನ್ನು ಕೊಟ್ಟಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಇದೇ ಕ್ರಮದಲ್ಲಿ ಅರ್ಥಗಳನ್ನು ಕೊಟ್ಟಿದೆ. ಈ ನಾಲ್ಕು ಶಬ್ದಗಳು ನಿಘಂಟಿನಲ್ಲಿ ಅನವಶ್ಯಕ. ಇಂಗ್ಲಿಷಿನಲ್ಲಾದರೋ to cause to join, to fit, to fill ಎಂಬ ಮೂರು ಶಬ್ದಗಳನ್ನು ಮಾತ್ರ ಕೊಡಲಾಗಿದೆ. ಅರ್ಥಗಳನ್ನು ಸೂಚಿಸುವಲ್ಲಿ ಯಾವ ವಿವೇಚನೆಯೂ ಇದ್ದಂತಿಲ್ಲ. ಅಮರ್ಚು ಶಬ್ದಕ್ಕೆ ಆರು ಅರ್ಥಗಳನ್ನು ಕೊಡಲಾಗಿದೆ. ಈ ಶಬ್ದ ಹೊಸಗನ್ನಡದಲ್ಲಿ ಬಳಕೆ ಇಲ್ಲವೆಂದೇ ಹೇಳಬಹುದು. ಒಂದು ವೇಳೆ ಎಲ್ಲೋ ಇದ್ದರೂ ಇಷ್ಟು ಅರ್ಥಗಳು ಅವಶ್ಯವೆ? ಅರ್ಥಗಳನ್ನು ಕೊಡುವಲ್ಲಿ ಯಾವ ಕ್ರಮವನ್ನೂ ಅನುಸರಿಸದೆ ಬೇರೊಂದು ನಿಘಂಟಿನಿಂದ ಅನಾಮತ್ತಾಗಿ ಎತ್ತಿಕೊಂಡಿರುವುದಕ್ಕೆ ಇಂತಹ ಉಲ್ಲೇಖಗಳು ಸಾಕ್ಷಿಯಾಗಿವೆ. ಇದಕ್ಕಿಂತಲೂ ವಿಚಿತ್ರವಾದುದೆಂದರೆ ಅಮರ್ಚು ಶಬ್ದಕ್ಕೆ ಆರುಅರ್ಥಗಳನ್ನು ಕೊಟ್ಟು ಅಮರ್ ಶಬ್ದಕ್ಕೆ ಕೇವಲ ಎರಡು ಅರ್ಥಗಳನ್ನು ಮಾತ್ರ ಕೊಟ್ಟಿರುವುದು.

೮. ಅಸಿಧಾರಾವ್ರತ ಶಬ್ದಕ್ಕೆ ಕೊಟ್ಟಿರುವುದು ಆಲಂಕಾರಿಕ ಅರ್ಥವಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟನ್ನು ನೋಡಬಹುದು.

೯. ಗ್ಯಾಲರಿ, ಗ್ಯಾಲಿ, ಗ್ಯಾಸು, ಗ್ಯಾಂಗ್, ಗೌನು, ಗ್ಯಾಲನ್ನು, ಡ್ರಮ್ಮು, ಡ್ರಿಲ್ಲು, ಡ್ರೈವರು –ಇವೇ ಮೊದಲಾದ ಇಂಗ್ಲಿಷ್ ಶಬ್ದಗಳನ್ನು ಈ ನಿಘಂಟಿನಲ್ಲಿ ಸೇರಿಸುವುದು ಉಚಿತವೆ? ಇವುಗಳಲ್ಲಿ ಕೆಲವಕ್ಕೆ ಆಗಲೇ ಕನ್ನಡ ಶಬ್ದಗಳು ಬಳಕೆಗೆ ಬಂದುಬಿಟ್ಟಿಲ್ಲವೆ? ಮೇಲಾಗಿ ಇದು ಕನ್ನಡ–ಕನ್ನಡ–ಇಂಗ್ಲಿಷ್ ನಿಘಂಟಲ್ಲವೆ?

೧೦. ದದ್ದು ಶಬ್ದಕ್ಕೆ ಮೈಮೇಲೆ ಏಳುವ ಗುಳ್ಳೆ ಎಂಬ ರೂಢಿಯ ಅರ್ಥವನ್ನೇ ಕೊಟ್ಟಿಲ್ಲ.

೧೧. ವಿಶೇಷಾರ್ಥವಿಲ್ಲದ ಅಡಿಗೆ ಮಾಡು, ತೂತುಕೊರೆ, ತೃಪ್ತಿಗೊಳ್ಳು, ತೃಪ್ತಿಗೊಳಿಸು, ತೃಪ್ತಿಪಡಿಸು, ತೃಪ್ತಿಪಡು, ದಯಮಾಡಿಸು, ದಯಮಾಡು ಮುಂತಾದ ಕ್ರಿಯಾರೂಪಗಳನ್ನು ಏಕೆ ಕೊಡಬೇಕು? ಇದಕ್ಕೆ ಇತಿಮಿತಿ ಏನಾದರೂ ಇದೆಯೆ?

೧೨. "ಈ ನಿಘಂಟಿನಲ್ಲಿ ಕನ್ನಡ ಶಬ್ದವನ್ನೇ ಗಮನಿಸಿ ಅದರ ವ್ಯಾಕರಣಸ್ವರೂಪವನ್ನೇ ಮುಖ್ಯವಾಗಿಟ್ಟುಕೊಂಡು ಇಂಗ್ಲಿಷಿನಲ್ಲಿ ಅದು ಯಾವ ಸ್ವರೂಪವನ್ನು ಪಡೆದರೂ ಕನ್ನಡದ ಮೂಲಕ್ಕೆ ಸಂವಾದಿಯಾಗಿರುವಂತೆ ಇಂಗ್ಲಿಷಿನಲ್ಲಿಯೂ ನಿರೂಪಿಸಿದ್ದೇವೆ. ಉದಾಹರಣೆಗೆ: ಕಾಲೋಚಿತ. ಇದು ಕನ್ನಡದಲ್ಲಿ ಗುಣವಾಚಕ. ಇಂಗ್ಲಿಷಿನಲ್ಲಿ ಇದಕ್ಕೆ ಸಂವಾದಿಯಾಗಿ Suitable to the time; opportune; in season; trively, propition; seasonable, at the proper time ಇವುಗಳನ್ನು ಕೊಟ್ಟು adj (ಎಂದರೆ adjective) ಎಂದು ಸೂಚಿಸಿದೆ. ಇದು ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟು. ಕನ್ನಡ ಶಬ್ದಕ್ಕೆ ಇಂಗ್ಲಿಷಿನಲ್ಲಿರುವ ಅರ್ಥವನ್ನು ಸೂಚಿಸುವುದಷ್ಟೇ ಇದರ ಕೆಲಸ. ಇದು ಬಿಟ್ಟು ಕನ್ನಡ ಶಬ್ದಕ್ಕೆ ಇಂಗ್ಲಿಷಿನಲ್ಲಿರುವ ಸಂವಾದಿಯಾದ ರೂಪಗಳನ್ನೆಲ್ಲ ಕೊಡುವುದು ಅತಿವ್ಯಾಪ್ತಿದೋಷಕ್ಕೆ ಒಳಪಡುತ್ತದೆ. ಇದು ನಿಘಂಟಿನ ಕೆಲಸವಲ್ಲ. ಸಂವಾದಿ ಪದಕೋಶದಲ್ಲಿ ಇದನ್ನೆಲ್ಲ ಕೊಡಬಹುದು. ಸಂಪಾದಕರು ಈ ನಿಘಂಟಿನ ಉದ್ದಕ್ಕೂ ಇದೇ ಕ್ರಮವನ್ನು ಅನುಸರಿಸಿಕೊಂಡು ಹೋಗಿದ್ದಾರೆ. ಆಶ್ಚರ್ಯ, ಕೋಪ, ಉಜ್ವಲ, ತುಡಿ ಮುಂತಾದ ಶಬ್ದಗಳನ್ನು ವಿಶೇಷವಾಗಿ ನೋಡಬಹುದು.

೧೩. "ಪ್ರಚಲಿತ ಕನ್ನಡ ಬರಹವನ್ನು ಓದುವವರ" ಉಪಯೋಗಕ್ಕೆ ಬಾರದ ಎಷ್ಟೋ ಸಂಸ್ಕೃತ ಕನ್ನಡ ಶಬ್ದಗಳು ಈ ನಿಘಂಟಿನಲ್ಲಿ ಸೇರಿಹೋಗಿವೆ. ಉದಾ: ಅಜಸ್ರ, ಅಟನ, ಅಟನೆ, ಅದ್ಧುರಿ, ಅಡ್ಡಾಯುಧ, ಅಣ್ಮುಕಾರ, ಅನನ್ಯಸಾಧಾರಣ, ಅನನ್ಯಸಾಮಾನ್ಯ ಇತ್ಯಾದಿ.

೧೪. ಈ ನಿಘಂಟಿನ ರಕ್ಷಾಕವಚದ ಮೇಲೆ "ಶಬ್ದ-ಅರ್ಥ ಸೇರಿ ೬೦,೦೦೦ ಗಳಿಗೂ ಮಿಕ್ಕು ಪದಗಳನ್ನು ಒಳಗೊಂಡಿದೆ" ಎಂದಿದೆ. ಯಾವುದೇ ನಿಘಂಟಿನಲ್ಲಿ ಮುಖ್ಯ ಶಬ್ದಗಳೂ ಉಲ್ಲೇಖಗಳೂ ಎಷ್ಟಿವೆ ಎಂದು ಹೇಳಲಾಗುವುದೇ ಹೊರತು ಶಬ್ದ-ಅರ್ಥಗಳನ್ನು ಸೇರಿಸಿ ಒಟ್ಟು ಪದಗಳು ಎಂದು ಹೇಳುವುದು ಸಂಪ್ರದಾಯವಲ್ಲ. ಈ ನಿಘಂಟಿನಲ್ಲಿ ಒಟ್ಟು ಹದಿನೈದು ಸಾವಿರ ಮುಖ್ಯ ಶಬ್ದಗಳಿರಬಹುದೆಂದು ನಾವು ಅಂದಾಜು ಮಾಡಿದ್ದೇವೆ.

ಐಬಿಎಚ್ ಪ್ರಕಾಶನ ಸಂಸ್ಥೆಯವರು ಕನ್ನಡ ಸಾಹಿತ್ಯಕ್ಕೆ ಹಲವಾರು ಮುಖಗಳಲ್ಲಿ ಅನುಪಮ ಸೇವೆಯನ್ನು ಸಲ್ಲಿಸುತ್ತಿರುವುದು ಎಲ್ಲರಿಗೂ ಗೊತ್ತಿರುವ ಸಂಗತಿ. ಪ್ರಸ್ತುತ ಈ ದ್ವಿಭಾಷಾ ನಿಘಂಟು ಯೋಜನೆ ಸ್ವಾಗತಾರ್ಹವಾದುದು. ಪ್ರಕೃತ ನಿಘಂಟು ಕೆಲವಾರು ಅರೆಕೊರೆಗಳಿಂದ ಕೂಡಿದ್ದರೂ ಇದನ್ನು ಮತ್ತೊಮ್ಮೆ ಪರಿಷ್ಕರಿಸಿದರೆ ಜನತೆಗೆ ಉಪಯೋಗವಾಗಬಲ್ಲುದು.

■

## ಅನಂತಕವಿಯ ಗೋಮಟೇಶ್ವರ ಚರಿತ್ರೆ

ಸಂಪಾದಕರು: ಡಾ. ಬಿ.ವಿ. ಶಿರೂರ. ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು. ಪುಟಗಳು: vi+೩೧+೧೫೮, ಬೆಲೆ: ರೂ. ೩.೫೦, ಮೊದಲನೆಯ ಮುದ್ರಣ ೧೯೮೧

ಭರತ ಬಾಹುಬಲಿ ಅವರ ಪ್ರಕರಣ ಸಾಹಿತ್ಯಲೋಕದಲ್ಲಿ ಅದರಲ್ಲೂ ಜೈನಸಾಹಿತ್ಯದಲ್ಲಿ ನಿತ್ಯನೂತನವಾಗಿದೆ. ಪಂಪ, ರತ್ನಾಕರ ಅವರು ಬರೆದಿರುವ ಆದಿಪುರಾಣ, ಭರತೇಶವೈಭವ ಮಹತ್ಕೃತಿಗಳಾಗಿ ಇಂದಿಗೂ ಬೆಳಗುತ್ತಿವೆ. ವೈರಾಗ್ಯಮೂರ್ತಿಯಾದ ಬಾಹುಬಲಿಯ ಭವ್ಯ ದಿವ್ಯ ಸ್ವರೂಪ ಕಣ್ಮನಗಳನ್ನು ಸೂರೆಗೊಳ್ಳುತ್ತದೆ. ಕಾವ್ಯಲೋಕದಲ್ಲಿ ಮಾತ್ರ ಕಂಗೊಳಿಸುತ್ತಿದ್ದ ದಿವ್ಯಮೂರ್ತಿಯನ್ನು ಶ್ರವಣಬೆಳಗೊಳದಲ್ಲಿ ಕಡೆದು ನಿಲ್ಲಿಸುವುದಕ್ಕೆ ಕಾರಣನಾದವನು ಚಾವುಂಡರಾಯ. ಇದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳು ಲಭ್ಯವಾಗಿವೆ. ಆದರೂ ಕೂಡ ಅನಂತಕವಿ ಬಾಹುಬಲಿಯ ಅಸ್ತಿತ್ವಕ್ಕೆ ಬೇರೊಂದು ಕಥೆಯನ್ನೇ ಸೃಷ್ಟಿಸಿದ್ದಾನೆ. ಚಾವುಂಡರಾಯನ ಗೊಮ್ಮಟದರ್ಶನದ ಕಥೆಯನ್ನು ಕೇಳಿದ ಚಾವುಂಡರಾಯನ ತಾಯಿ ಕಾಳಲದೇವಿ ಜಿನನನ್ನು ಕಾಣುವವರೆಗೆ ಆಹಾರವನ್ನು ಸ್ವೀಕರಿಸುವುದಿಲ್ಲವೆಂಬ ಪ್ರತಿಜ್ಞೆಯನ್ನು ಮಾಡುವಳು. ತಾಯಿಯ ಪ್ರೀತ್ಯರ್ಥವಾಗಿ ಗೊಮ್ಮಟದರ್ಶನಕ್ಕೆ ಹೊರಟ ಚಾವುಂಡರಾಯ ಬೆಳ್ಗೊಳದ ಬೆಟ್ಟದಲ್ಲಿ ಬೀಡುಬಿಟ್ಟ. ಒಂದು ರಾತ್ರಿ ಕೂಷ್ಮಾಂಡಿನಿ ಪದ್ಮಾಂಬಿಕೆಯವರು ಸ್ವಪ್ನದಲ್ಲಿ ಕಾಣಿಸಿಕೊಂಡು:

> ತೆರಳ್ವುವದು ಪೌದನಪುರ ದೂರವೀ
> ಗಿರಿಯೊಳು ನಿಂದು ಕಾರ್ಮುಕಕೆ
> ಶರವ ಜೋಡಿಸೆ ಗುಂಡೊಡೆದು ಬಾಹುಬಲಿ ಜಿನ
> ವರನು ಪ್ರತ್ಯಕ್ಷನಾಗುವನು.

ಎಂದು ಹೇಳಿದರು. ಅದರಂತೆ ಚಾವುಂಡರಾಯ ಬಾಣಪ್ರಯೋಗ ಮಾಡಲು ಕೋಟಿಚಂದ್ರಾರ್ಕಕಿರಣಪ್ರಜ್ವಲಿತ ಇಂದ್ರನರೇಂದ್ರವಂದಿತ ಜಿನಚಂದ್ರ ಮುಖತೋರಿದನು. ಆನಂದದಿಂದ ಕೂಡಿದ ಚಾವುಂಡರಾಯ ಹಲವಾರು ಜಿನಾಲಯಗಳನ್ನು ಅಲ್ಲಿ ನಿರ್ಮಿಸಿದನು.

ಗೊಮ್ಮಟೇಶ್ವರ ಚರಿತೆಯಲ್ಲಿ ಗೊಮ್ಮಟನ ಕಥೆ ನಿಮಿತ್ತ ಮಾತ್ರವಾದುದು. ಬೆಳಗೊಳದ ಮಹಾತ್ಮ್ಯ ವರ್ಣನೆಯೇ ಇದರ ಕಥಾವಸ್ತು. ಆದುದರಿಂದಲೇ ಕವಿ ಈ ಕಾವ್ಯವನ್ನು ಬೆಳಗೊಳದ ವಿಸ್ತಾರವೆಂದೇ ವರ್ಣಿಸಿದ್ದಾನೆ. ಗೊಮ್ಮಟೇಶ್ವರ ಚರಿತೆ ಚಾರಿತ್ರಿಕದೃಷ್ಟಿಯಿಂದ ಒಂದು ಮಹತ್ವಪೂರ್ಣ ಕೃತಿ. ಈ ಕಾವ್ಯದಲ್ಲಿ ಬರುವ ಹಲವಾರು ಪ್ರಕರಣಗಳು ಮನೋಜ್ಞವಾಗಿವೆ. ಅನಂತಕವಿ ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿದ್ದವನು. ಈತನ ಸಾಂಗತ್ಯ ಕೃತಿ ಕಾವ್ಯಗುಣಗಳಿಂದ ಕಂಗೊಳಿಸುತ್ತಿದೆ. ಈ ಅಪ್ರಕಟಿತ ಕಾವ್ಯವನ್ನು ಸಂಪಾದಿಸಿದ ಕೀರ್ತಿ ಡಾ. ಬಿ.ವಿ. ಶಿರೂರ ಅವರದು.

ಈ ಕಾವ್ಯವನ್ನು ಸಂಪಾದಿಸಲು ಸಂಪಾದಕರು ತುಂಬ ಶ್ರಮವನ್ನು ವಹಿಸಿದ್ದಾರೆ. ಈ ಕಾವ್ಯದ ಸಮಗ್ರ ಪ್ರತಿಗಳು ಇವರಿಗೆ ಲಭ್ಯವಾಗಿವೆಯೇ ಇಲ್ಲ. ಆದರೂ ಉಪಲಬ್ಧವಿಲ್ಲ ಹಸ್ತಪ್ರತಿಗಳಿಂದಲೇ ಶಾಸ್ತ್ರೀಯವಾಗಿ ಸಂಪಾದಿಸಿದ್ದಾರೆ.

ಪೀಠಿಕೆಯಲ್ಲಿ ಹಲವಾರು ವಿಷಯಗಳನ್ನು ನಿರೂಪಿಸಿದ್ದಾರೆ. ಇದು ತುಂಬ ಉಪಯುಕ್ತವಾಗಿದೆ. ಕಾವ್ಯದ ಕಡೆಯಲ್ಲಿ ಕೊಟ್ಟಿರುವ ಅನುಬಂಧಗಳೂ ಹೆಚ್ಚು ಪ್ರಯೋಜನಕಾರಿಯಾಗಿವೆ. ಒಟ್ಟಿನಲ್ಲಿ ಸಂಪಾದಕರ ನಿಷ್ಠೆ, ಶ್ರದ್ಧೆ, ಪ್ರಾಮಾಣಿಕತೆ, ಶ್ರಮ –ಈ ಕಾವ್ಯದ ಉದ್ದಕ್ಕೂ ಎದ್ದುಕಾಣುತ್ತಿವೆ.

ಅನಂತಕವಿ ತನ್ನ ಕಾವ್ಯವನ್ನು ಬೆಳ್ಗುಳದ ವಿಸ್ತಾರ ಎಂದೇ ಕರೆದಿದ್ದಾನೆ. ಪ್ರತಿಸಂಧಿಯ ಕೊನೆಯಲ್ಲಿಯೂ ಇದನ್ನೇ ಹೇಳಿದ್ದಾನೆ. ಆದ್ಧರೆ ಗೊಮ್ಮಟೇಶ್ವರನಿಂದ ಆ ಕ್ಷೇತ್ರಕ್ಕೆ ಮಹಾತ್ಮ್ಯೆ ಪ್ರಾಪ್ತವಾದುದರಿಂದ ಇದನ್ನು ಗೊಮ್ಮಟೇಶ್ವರ ಚರಿತೆ ಎಂದು ಕರೆದಿರಬಹುದು. ಸಂಪಾದಕರು ಇದೇ ಹೆಸರನ್ನೇ ಕೊಟ್ಟಿದ್ದಾರೆ. ಹಲವು ಹತ್ತು ಮುಖಗಳಿಂದ ಉಪಯುಕ್ತವಾಗಿರುವ ಈ ಕಾವ್ಯವನ್ನು ಸಂಪಾದಿಸಿದ ಡಾ. ಶಿರೂರ ಅವರು ಅಭಿನಂದನೀಯರು. ಇಂತಹ ಒಳ್ಳೆಯ ಕಾವ್ಯದ ಮುದ್ರಣ ತೀರ ಅಸಮರ್ಪಕವಾಗಿದೆ.

ಪ್ರಜಾವಾಣಿ (ಸಾಪ್ತಾಹಿಕ ಪುರವಣಿ), ಭಾನುವಾರ ೩೦ನೇ ಮೇ ೧೯೮೨



# ವಚನಕಾರರು ಮತ್ತು ಆಂದೋಲನಗಳು

ಲೇಖಕರು: ಹ.ನಂ. ವಿಜಯಕುಮಾರ್, ಪ್ರಕಾಶಕರು: ಶ್ರೀ ಬಸವೇಶ್ವರ ಗ್ರಂಥಮಾಲೆ, ಹಳೇವೂರು, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ, ಕರ್ನಾಟಕ ರಾಜ್ಯ, ಪುಟಗಳು: ೧೩೬, ಬೆಲೆ: ಸಾದಾ ಹದಿನಾಲ್ಕು ರೂಪಾಯಿಗಳು, ಕ್ಯಾಲಿಕೊ: ಇಪ್ಪತ್ತನಾಲ್ಕು ರೂಪಾಯಿಗಳು, ಮೊದಲನೆಯ ಮುದ್ರಣ ೧೯೮೧

---

ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ನಡೆದ ಧಾರ್ಮಿಕ ಕ್ರಾಂತಿ, ರಾಜಕೀಯ, ಸಾಮಾಜಿಕ, ಸಾಹಿತ್ಯಕ ಕ್ಷೇತ್ರಗಳು ಮೇಲ್ [illegible] ಷ ಪರಿಣಾಮವನ್ನು ಬೀರಿದುದು ಸರ್ವಶ್ರುತವಾದುದು. ಈ ಕ್ರಾಂತಿಗೆ ಬಸವೇಶ್ವರರ ನೇತೃತ್ವದ ವಚನ[illegible] ಕಾರಣಕರ್ತರು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಈ ತೆರನ ಕ್ರಾಂತಿ ಮತ್ತಾವಾಗಲೂ ನಡೆದಂತೆ ಕಂಡುಬಂದಿಲ್ಲ. ಈ ಕ್ರಾಂತಿಯ ಪರಿಣಾಮ ಕೇವಲ ಕೆಲವರಿಗೇ ಮೀಸಲಾಗಿದ್ದ ಧರ್ಮ ಹಲವರಿಗೆ ಅನುಸರಣೀಯವಾದದ್ದು. ಇದರಿಂದ ಜನತೆ ಪಾರಮಾರ್ಥಿಕದತ್ತ ಮನಸ್ಸನ್ನು ಹರಿಯಬಿಡುವುದು ಸಾಧ್ಯವಾಯಿತು.

"ವಚನಕಾರರು ಮತ್ತು ಆಂದೋಲನಗಳು" ಈ ಗ್ರಂಥದಲ್ಲಿ ವಿಶ್ವದ ಹಲವಾರೆಡೆ ನಡೆದ ಆಂದೋಲನಗಳನ್ನೂ, ಅವುಗಳ ಸ್ವರೂಪವನ್ನೂ ಪರಿಣಾಮವನ್ನೂ ವಿಶ್ಲೇಷಿಸುವುದಕ್ಕೆ ಪ್ರಯತ್ನಿಸಲಾಗಿದೆ. ಆಂದೋಲನಗಳೆಂದರೇನು? ವಚನಕಾರರು ನಡೆಸಿದ್ದು ಆಂದೋಲನವೆ? ಕ್ರಾಂತಿಯೆ? ಚಳವಳಿಯೆ? ಎಂಬುದನ್ನು ವಿವರಿಸಲು ತೊಡಗಲಾಗಿದೆ. ಆಂದೋಲನ, ಕ್ರಾಂತಿ, ಚಳವಳಿಗಳ ಅರ್ಥವ್ಯಾಪ್ತಿಯನ್ನು ವ್ಯಾಖ್ಯಾನಿಸಿದ್ದಾರೆ. ಭಾರತೀಯ ಧರ್ಮಗಳಲ್ಲಿ ನಡೆದ ಆಂದೋಲನಗಳ ಒಂದು ವಿವೇಚನೆಯನ್ನು ಮಾಡಿದ್ದಾರೆ. ವಚನಕಾರರಿಗಿಂತ ಹಿಂದಿನ ಬೌದ್ಧ, ಜೈನ, ಶೈವಧರ್ಮಗಳ ಸ್ವರೂಪವನ್ನು ಅವುಗಳಲ್ಲಾದ ಪರಿವರ್ತನೆಯನ್ನು ವಿವರಿಸಿದ್ದಾರೆ.

ವಚನಕಾರರನ್ನು ಕೇಂದ್ರೀಕರಿಸಿಕೊಂಡಿರುವ ಲೇಖಕರು ತ್ರಿಷಷ್ಠಿಪುರಾತನರು, ಶೈವಧರ್ಮದ ಪ್ರಗತಿಯೇ ಮೊದಲಾದ ಅಂಶಗಳನ್ನು ಪ್ರಸ್ತಾಪಿಸಿದ್ದಾರೆ. ವೀರಶೈವಧರ್ಮ ಪ್ರಾಬಲ್ಯಕ್ಕೆ ಬರಲು ಬಸವೇಶ್ವರರು ಕೈಕೊಂಡ ಕಾರ್ಯಕ್ರಮಗಳನ್ನೂ, ಈ ದಿಸೆಯಲ್ಲಿ ಅವರಿಗೆ ಒದಗಿಬಂದ ಸವಲತ್ತುಗಳನ್ನೂ ನಿರೂಪಿಸಿದ್ದಾರೆ. ಆದರೆ "ಎಲ್ಲ ಬಿಟ್ಟು ತಿರುಗುವ, ಎಲ್ಲಾ ಸಾಧನೆಗಳನ್ನು ಸಿದ್ಧಿಸಿಕೊಂಡ ಅಲ್ಲಮ ಅಧ್ಯಾತ್ಮದಲ್ಲಿ, ಯೋಗದಲ್ಲಿ ಬಸವಣ್ಣನಿಗಿಂತ ಮಿಗಿಲಾಗಿದ್ದರೂ ಹಣ, ಅಧಿಕಾರ ಕಾರಣವಾಗಿ ಆತನೇ ಬಸವಣ್ಣನನ್ನು ಆಶ್ರಯಿಸಬೇಕಾಯಿತು. ಶರಣರು ಕೂಡ ಬಸವಣ್ಣನನ್ನು ಮಾತ್ರ ಮತ್ತೆ ಮತ್ತೆ ತಮ್ಮ ನಾಯಕನೆಂದು ಹೊಗಳಿ ಹಾಡಿದರು. ಅಲ್ಲಮನಾಗಲೀ, ಸಿದ್ಧರಾಮನಾಗಲೀ, ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಸೊಡ್ಡಳ, ಚಾಮರಸ –ಇವರು ನಾಯಕರಾಗಲಿಲ್ಲ. ಯಾಕೆಂದರೆ ಹಣ ಮತ್ತು ಅಧಿಕಾರ ಇಲ್ಲದ್ದು" ಎಂಬ ಹೇಳಿಕೆ ಉಚಿತವೆನಿಸುವುದಿಲ್ಲ. ಅಷ್ಟೇ ಅಲ್ಲ, ಇದು ಯಥಾರ್ಥವಾದುದೂ ಅಲ್ಲ.

ವಚನಕಾರರ ಆಂದೋಳನವನ್ನು ವಿಶ್ವದ ಇತರ ಆಂದೋಳನಗಳೊಡನೆ ಹೋಲಿಸಿದ ಔಚಿತ್ಯದ ಬಗೆಗೆ ಸಮರ್ಥನೆ ನೀಡಲು ಯತ್ನಿಸಿದ್ದಾರೆ. ಒಂದೊಂದು ದೇಶಕ್ಕೂ ಒಂದೊಂದು ಧರ್ಮಕ್ಕೂ ತನ್ನದೇ ಆದ ಇತಿಮಿತಿಗಳಿರುತ್ತವೆ. ಆದರೆ

ಇವು ಹೇಗೆ ಬೆಳೆದುಬಂದುವು ಎಂಬುದನ್ನು ತುಲನಾತ್ಮಕವಾಗಿ ವ್ಯಾಸಂಗಮಾಡಲು ಅಡ್ಡಿಯೇನೂ ಇಲ್ಲ. ಇಂತಹ ಪ್ರಯತ್ನವನ್ನು ಈ ಲೇಖಕರು ಮಾಡಲು ತೊಡಗಿದ್ದಾರೆ. ಇದು ಒಂದು ಯೋಗ್ಯವಾದ ಪ್ರಯತ್ನವೇ. ಇದಕ್ಕಾಗಿ ಲೇಖಕರು ಸಾಕಷ್ಟು ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಆದರೆ ಅವುಗಳ ವಿತರಣೆ ಎಷ್ಟರಮಟ್ಟಿಗೆ ಆಗಿದೆ ಎಂಬುದನ್ನು ಓದುಗರೇ ಕಂಡುಕೊಳ್ಳಬೇಕು.

ಈ ಗ್ರಂಥದ ಕಡೆಯಲ್ಲಿ ವಚನಕಾರರು ಮತ್ತು ಅವರ ಅಂಕಿತಗಳ ಒಂದು ಪಟ್ಟಿಯನ್ನು ಕೊಟ್ಟಿದ್ದಾರೆ. ಇದು ಉಪಯುಕ್ತವಾದುದು. ಈ ಪುಸ್ತಕದಲ್ಲಿ ಅಸಂಖ್ಯಾತರಾದ ಮುದ್ರಣ ದೋಷಗಳು ಉಳಿದುಕೊಂಡಿವೆ. ಅಲ್ಲಲ್ಲಿ ಶಬ್ದಸ್ಖಾಲಿತ್ಯಗಳೂ ತಲೆಹಾಕಿವೆ. ಕೆಲವೆಡೆ ವಿಷಯಗಳ ಪುನರಾವರ್ತನೆಯೂ ಆಗಿದೆ. ಅಲ್ಲದೆ ವಚನಕಾರರ ವಿವೇಚನೆಯಲ್ಲಿ ಒಂದು ನಿರ್ದಿಷ್ಟ ಕ್ರಮವನ್ನೂ ಅನುಸರಿಸಿದಂತೆ ಕಾಣುವುದಿಲ್ಲ.

ಪ್ರಜಾವಾಣಿ (ಸಾಪ್ತಾಹಿಕ ಪುರವಣಿ), ಭಾನುವಾರ ೧೭ನೇ ಅಕ್ಟೋಬರ್ ೧೯೮೨



# ಭಾಷೆ ಸಮಾಜ ಸಂಸ್ಕೃತಿ

ಲೇಖಕರು: ರಾಜೇಶ್ವರಿ ಆರ್. ವಸ್ತ್ರದ, ಸಾಧನಕೇರಿ ರಸ್ತೆ, ಧಾರವಾಡ, ಪುಟಗಳು ೫೦+vi ಬೆಲೆ: ಆರು ರೂಪಾಯಿಗಳು. ಮೊದಲನೆಯ ಮುದ್ರಣ ೧೯೮೨

ಪ್ರಸ್ತುತ ಗ್ರಂಥದಲ್ಲಿ ೧. ಭಾಷೆ, ೨. ಭಾಷೆ ಮತ್ತು ಸಮಾಜ, ೩. ಭಾಷೆ ಮತ್ತು ಮನಸ್ಸು, ೪. ಭಾಷೆ ಮತ್ತು ಜಾನಪದ, ೫. ಭಾಷೆ ಮತ್ತು ಸಂಸ್ಕೃತಿ ಎಂಬ ಐದು ವಿಭಾಗಗಳಿವೆ.

ಭಾಷೆ, ಸಮಾಜ, ಸಂಸ್ಕೃತಿ ಇವುಗಳ ಬಗೆಗೆ ಈಗಾಗಲೇ ಸಾಕಷ್ಟು ಗ್ರಂಥಗಳು ಹೊರಬಂದಿವೆ. ಅದರಲ್ಲೂ ಭಾಷಾಶಾಸ್ತ್ರ ವಿಶೇಷವಾದ ಅಧ್ಯಯನಕ್ಕೆ ಒಳಪಟ್ಟಿದೆ. ಭಾಷಾಶಾಸ್ತ್ರದ ಉದ್ಗ್ರಂಥಗಳೂ ಪ್ರಕಟವಾಗಿವೆ. ಶ್ರೀಮತಿ ರಾಜೇಶ್ವರಿ ಆರ್. ವಸ್ತ್ರದ ಅವರು ಭಾಷಾಶಾಸ್ತ್ರದ ವಿದ್ಯಾರ್ಥಿಯಾಗಿ ಸದಭಿರುಚಿಯನ್ನು ಬೆಳೆಸಿಕೊಂಡಿರುವುದು ಈ ಗ್ರಂಥದಲ್ಲಿ ವ್ಯಕ್ತವಾಗಿದೆ. ತಮ್ಮ ಈ ಚೊಚ್ಚಲುಕೃತಿಯಲ್ಲಿ ಭಾಷೆ ಸಮಾಜ ಸಂಸ್ಕೃತಿಗಳ ಸಂಬಂಧವನ್ನು ಸರಳವಾಗಿ ಸುಲಭವಾಗಿ ವಿವರಿಸಿದ್ದಾರೆ. ಯಾವ ಪೂರ್ವಗ್ರಹಕ್ಕೂ ಒಳಗಾಗದೆ ಪಕ್ಷಪಂಥಗಳಿಗೆ ಜೋತುಬೀಳದೆ ನಿರ್ಲಿಪ್ತರಾಗಿ ವಿಷಯ ನಿರೂಪಣೆ ಮಾಡಿದ್ದಾರೆ. ಶ್ರೀಮತಿಯವರ ಈ ಪ್ರಥಮ ಕೃತಿಯಲ್ಲಿ ಕೆಲವು ಅಪಶಬ್ದಗಳೂ, ಸ್ಖಾಲಿತ್ಯಗಳೂ ತಲೆಹಾಕಿವೆ. (ಪುಟ ೧೧, ವಿಶಿಷ್ಟ; ಪುಟ ೨೧ ಮೆದುಳಿನ ಮಹಾಮಸ್ತಿಷ್ಕ; ಪುಟ ೨೮ ನಿರ್ದಿಷ್ಟ ಪುಟ ೩೫.೪೧ ವೈಶಿಷ್ಟತೆ - ಇತ್ಯಾದಿ) ಈ ಸ್ಖಾಲಿತ್ಯಗಳನ್ನು ಮರುಮುದ್ರಣದಲ್ಲಿ ಸರಿಪಡಿಸಿಕೊಳ್ಳುವುದು ಅಗತ್ಯ.

ಈ ಗ್ರಂಥಕ್ಕೆ ಸುಪ್ರಸಿದ್ಧ ಸಾಹಿತಿಗಳೂ ಭಾಷಾವಿಜ್ಞಾನಿಗಳೂ ಆದ ಡಾ. ಆರ್.ಸಿ. ಹಿರೇಮಠ ಅವರು ಮುನ್ನುಡಿಯನ್ನು ಬರೆದು ಮೌಲ್ಯವನ್ನು ಹೆಚ್ಚಿಸಿದ್ದಾರೆ. ಭಾಷೆ, ಸಾಹಿತ್ಯ, ಸಂಸ್ಕೃತಿಯಲ್ಲಿ ಶ್ರೀಮತಿ ವಸ್ತ್ರದ ಅವರ ಪರಿಣತಿಯನ್ನಲ್ಲದಿದ್ದರೂ ಪ್ರಾಮಾಣಿಕ ಪ್ರಯತ್ನವನ್ನು ಗಮನಿಸಬಹುದಾಗಿದೆ. ತಾವು ಓದಿ ಅರ್ಥಮಾಡಿಕೊಂಡಿರುವುದನ್ನು ನಿರ್ಭಿಡೆಯಿಂದ ನಿರೂಪಿಸುವುದು ಈ ಕೃತಿಯ ವೈಶಿಷ್ಟ್ಯ.

ಪ್ರಜಾವಾಣಿ (ಸಾಪ್ತಾಹಿಕ ಪುರವಣಿ), ಭಾನುವಾರ ೧೫ನೇ ಮೇ ೧೯೮೩

■

# ವಚನ ಶಾಸ್ತ್ರಸಾರ

ಸಂ. ಡಾ. ಫ.ಗು. ಹಳಕಟ್ಟಿ, ಪರಿಷ್ಕರಣ: ಡಾ. ಎಂ.ಎಂ. ಕಲಬುರ್ಗಿ, ಡಾ. ವ್ಹಿ.ಬಿ. ರಾಜೂರ, ಪ್ರಕಾಶಕರು: ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ-ಗದಗ, ಪುಟಗಳು: ೭೭೮+೩೬, ತೃತೀಯ ಆವೃತ್ತಿ ೧೯೮೨, ಬೆಲೆ: ರೂ. ೫೦.೦೦

---

ವಿಪುಲವಾದ ವಚನ ಸಾಹಿತ್ಯದ ಸಂರಕ್ಷಣ, ಸಂಕಲನ, ಪರಿಷ್ಕರಣ ಸಂಪಾದನ ಕಾರ್ಯವನ್ನು ಹಲವಾರು ಮಂದಿ ಪ್ರಾಚೀನರು ನಿರಂತರವಾಗಿ ಮಾಡಿಕೊಂಡು ಬಂದಿರುವುದನ್ನು ನಾವು ಗುರುತಿಸಬಹುದಾಗಿದೆ. ಇಷ್ಟಾದರೂ ವಚನಸಾಹಿತ್ಯ ಸಮಗ್ರವಾಗಿ ಲಭ್ಯವಾಗಿಲ್ಲವೆಂದೇ ಹೇಳಬಹುದಾಗಿದೆ. ಅನೇಕ ವಚನಕಾರರ ವಚನಗಳನ್ನೂ, ಅಂಕಿತಗಳನ್ನೂ ಗುರುತಿಸುವುದು ಇಂದಿಗೂ ಸಾಧ್ಯವಾಗದೇ ಹೋಗಿದೆ. ಉಪಲಬ್ಧ ವಚನ ಸಾಹಿತ್ಯವನ್ನಾದರೂ ಸಂರಕ್ಷಿಸಿದ ಕೀರ್ತಿ ಅನೇಕ ನಿಷ್ಠಾವಂತ ಮಹನೀಯರಿಗೆ ಸಲ್ಲತಕ್ಕದ್ದಾಗಿದೆ. ಈ ದಿಸೆಯಲ್ಲಿ ಶೂನ್ಯಸಂಪಾದನಾಕಾರರು, ಗುಬ್ಬಿಯ ಮಲ್ಲಣ್ಣ, ಕಲ್ಲುಮಠದ ಪ್ರಭುದೇವ, ಸಂಪಾದನೆಯ ಚೆನ್ನಂಜೇದೇವ -ಇವರೇ ಮೊದಲಾದವರು ಸ್ಮರಣೀಯರಾಗಿದ್ದಾರೆ.

ವಚನಸಾಹಿತ್ಯದ ಸಂಕಲನ ಕಾರ್ಯವೂ ವ್ಯವಸ್ಥಿತವಾಗಿ ಕಾಲಕಾಲಕ್ಕೆ ನಡೆದುಕೊಂಡು ಬಂದಿದೆ. ಹಲವಾರು ವಚನಕಾರರ ವಚನಗಳನ್ನು ಸ್ಥಲವಾರು ವಿಂಗಡಿಸಿ ಪೋಣಿಸಿರುವುದನ್ನೂ ಪರಿಗಣಿಸಬಹುದಾಗಿದೆ. ಸರ್ವಪುರಾತನರ ವಚನಗಳು, ವಚನಗಳ ಸಂಗ್ರಹ, ಲಿಂಗಚಿದಮೃತಬೋಧೆ, ನಿಜಾಚರಣೆಯ ವಚನಗಳು, ಏಕೋತ್ತರ ಶತಸ್ಥಲ, ಸಂಬಂಧದ ವಚನಗಳು, ಆಚರಣೆಯ ವಚನಗಳು- ಅಷ್ಟಾವರಣದ ವಚನಗಳು -ಇವೇ ಮೊದಲಾದ ಸಂಕಲನಗಳನ್ನೂ ಹೆಸರಿಸಬಹುದಾಗಿದೆ. ಈ ಸಂಕಲನಗಳ ಉದ್ದಿಶ್ಯವಿಷ್ಟೇ: ಹಲವಾರು ವಚನಕಾರರ ಶ್ರೇಷ್ಠವಚನಗಳನ್ನು ಅನುಕ್ರಮವಾಗಿ ಜೋಡಿಸಿ, ಸಾಹಿತ್ಯಾಭ್ಯಾಸಿಗಳಿಗೆ ಉಪಕರಿಸುವುದೇ ಆಗಿದೆ. ಇದರಿಂದ ಒಂದೇ ಸಂಕಲನದಲ್ಲಿ ವಿವಿಧ ವಚನಕಾರರ ಏಕಾಭಿಪ್ರಾಯದ ವಚನಗಳನ್ನು ಒತ್ತಟ್ಟಿಗೇ ಓದುವ ಅವಕಾಶ ದೊರೆತಂತೆ ಆಗುತ್ತದೆ. ಇದು ನಿಜಕ್ಕೂ ಶ್ಲಾಘ್ಯವಾದ ಕಾರ್ಯ. ಈ ಕಾರ್ಯಪ್ರವರ್ತಕರಿಗೆ ವಚನಸಾಹಿತ್ಯದ ಆಳವಾದ ಅಭ್ಯಾಸವಿರಬೇಕಾದುದು ಸ್ವಯಂವೇದ್ಯವಾದುದು. ಇಂತಹ ಪುಣ್ಯಕಾರ್ಯವನ್ನು ಮಾಡಿ ಪುನೀತರಾದವರು ಲಿಂಗೈಕ್ಯ ಡಾ. ಫ.ಗು. ಹಳಕಟ್ಟಿಯವರು. ವಚನಶಾಸ್ತ್ರಸಾರವೆಂಬ ಮೂರುಭಾಗಗಳಲ್ಲಿ ಇವರು ಸಂಕಲಿಸಿದ ವಚನಗಳ ಸಂಖ್ಯೆಯಾದರೂ ಎಷ್ಟು ಅಪಾರವಾದುದು! ಹಲವಾರು ವರ್ಷಗಳ ಪರಿಶ್ರಮದಿಂದ ನಿರಂತರ ಅಧ್ಯಯನದಿಂದ ಮಾತ್ರ ಇಂತಹ ಕಾರ್ಯ ಸಾಧ್ಯವಾದೀತು. ಈ ಮಹತ್ಕಾರ್ಯವನ್ನು ಮಾಡಿದ ಹಳಕಟ್ಟಿ ಅವರು 'ವಚನ ಪಿತಾಮಹ' ಎಂಬ ಬಿರುದಿಗೆ ಪಾತ್ರರಾದುದು ಯಥಾರ್ಥವಾಗಿದೆ. ಏಕಾಂಗವೀರರಾಗಿ ಇವರು ಸಲ್ಲಿಸಿದ ಸೇವೆ ಅಜರಾಮರವಾದುದು. ಈ ಕೃತಿಯ ಪೀಠಿಕೆಯಲ್ಲಿ: "ಈ ಗ್ರಂಥರಚನೆಯಲ್ಲಿ ನಾನು ಪ್ರತಿಯೊಂದು ಸ್ಥಲದ ಪ್ರಾರಂಭದಲ್ಲಿ ಆ ಸ್ಥಲದ ಸಾಮಾನ್ಯ ತತ್ತ್ವಗಳನ್ನು ಮೊದಲಿಗೆ ನಿರೂಪಿಸಲಿಕ್ಕೆ ಯತ್ನಿಸಿದ್ದೇನೆ. ಆಮೇಲೆ ಆ ತತ್ತ್ವಗಳಿಗೂ ಆ ಸ್ಥಲದ ವಚನಗಳಿಗೂ, ಆಚರಣೆಗಳಿಗೂ ಸಂಬಂಧಿಸಿದ ವಿಷಯಗಳನ್ನು ವಿವರಿಸಿದ್ದೇನೆ. ಕಟ್ಟಕಡೆಗೆ ಆ ಸ್ಥಲದ ಆಚಾರಗಳ ಅತಿರೇಕ ಮತ್ತು ಅವುಗಳ ದುರುಪಯೋಗ -ಇವುಗಳನ್ನೂ ನಿರ್ದೇಶಿಸಿದ್ದೇನೆ; ಈ ಸಂಗತಿಯನ್ನು ಸಾಮಾನ್ಯವಾಗಿ ಪ್ರತಿಯೊಂದು ಸ್ಥಲದಲ್ಲಿಯೂ ವಾಚಕರು ಈ ಗ್ರಂಥದಲ್ಲಿ ಕಂಡುಕೊಳ್ಳಬಹುದು ಮತ್ತು ಪ್ರತಿಯೊಂದು ವಿಷಯ ನಿರೂಪಣೆಯಲ್ಲಿ ಪ್ರಥಮದಲ್ಲಿ ಆ ವಿಷಯಕ್ಕೆ ಸಂಬಂಧಿಸಿದ ಸುಲಭವಾದ ಮತ್ತು ತೀವ್ರವಾಗಿ ತಿಳಿಯುವ ವಚನಗಳನ್ನು ಕೊಟ್ಟಿದ್ದೇನೆ. ಆದರೆ ಹಿಂದುಗಡೆ ಈ ಗ್ರಂಥವು ಬಹುದೊಡ್ಡದಾಗುವ ಸಂಭವ ತೋರಿತು. ಇದರಿಂದ

ವಾಚಕರಿಗೆ ಬೇಸರಿಕೆಯಾಗಬಹುದೆಂದು ತಿಳಿದು ನಾನು ಯಾವ ವಿಷಯಗಳಲ್ಲಿ ದ್ವಿರುಕ್ತಿಗಳು ಹೆಚ್ಚಾಗಿವೆಯೇ ಅವುಗಳಲ್ಲಿಯ ವಚನಗಳನ್ನು ತೆಗೆದುಹಾಕಿದೆನು. ಆದರೆ ನೈತಿಕ ವಿಷಯಗಳು ಮತ್ತು ವಚನಕಾರರ ಮತ್ತು ಈಗ ವಿರೋಧವಾಗಿ ಪ್ರಚಲಿತವಿರುವ ರೂಢಿಗಳು ಮತ್ತು ಆಚಾರಗಳು ಇವುಗಳ ಸಂಬಂಧದ ವಚನಗಳನ್ನು ಮಾತ್ರ ತೆಗೆದುಹಾಕಿಲ್ಲ. ಅವುಗಳಲ್ಲಿ ಹೆಚ್ಚಿಗೆ ಪುನರುಕ್ತಿಗಳುಂಟಾದರೂ ಕೂಡ ಅವುಗಳನ್ನು ನಾನು ಬುದ್ಧ್ಯಾ ಹಾಗೆಯೇ ಇಟ್ಟಿದ್ದೇನೆ" ಎಂದು ಹೇಳಿ ಈ ಸಂಕಲನದಲ್ಲಿ ಅನುಸರಿಸಿರುವ ವಿಧಿವಿಧಾನಗಳನ್ನು ಸ್ಪಷ್ಟಪಡಿಸಿದ್ದಾರೆ.

ವಚನ ಶಾಸ್ತ್ರಸಾರದ ಮೂರನೆಯ ಆವೃತ್ತಿಯನ್ನು ಗದುಗಿನ ತೋಂಟದಾರ್ಯ ಮಹಾಸ್ವಾಮಿಗಳವರು "ವೀರಶೈವ ಅಧ್ಯಯನ ಸಂಸ್ಥೆಯ" ಮೂಲಕ ಪ್ರಕಟಿಸಿ ನಾಡಿಗೆ ಮಹೋಪಕಾರವನ್ನು ಮಾಡಿದ್ದಾರೆ. ತೋಂಟದಾರ್ಯ ಸ್ವಾಮಿಗಳು ಅಧಿಕಾರಕ್ಕೆ ಬಂದ ಮೇಲೆ ಅತ್ಯಂತ ಮಹತ್ವಪೂರಿತವಾದ ಕಾರ್ಯಗಳನ್ನು ಕೈಕೊಂಡು ವಿಶೇಷವಾಗಿ ಅಪ್ರಕಟಿತ ವೀರಶೈವ ಸಾಹಿತ್ಯವನ್ನೆಲ್ಲಾ ಹೊರತರಲು ಬದ್ಧಕಂಕಣರಾಗಿದ್ದಾರೆ. ವೀರಶೈವ ಪುರಾತನ ಸಾಹಿತ್ಯರತ್ನ ಮಾಲೆ, ವೀರಶೈವ ನೂತನ ಸಾಹಿತ್ಯ ರತ್ನಮಾಲೆ, ವೀರಶೈವ ಪುಣ್ಯಪುರುಷ ಸಾಹಿತ್ಯ ರತ್ನಮಾಲೆ -ಈ ಮಾಲೆಗಳಲ್ಲಿ ಈಗಾಗಲೇ ಹಲವಾರು ಗ್ರಂಥಗಳನ್ನೂ ಪ್ರಕಟಿಸಿದ್ದಾರೆ. ಇದು ನಿಜಕ್ಕೂ ನಾಡಿನ ಶುಭೋದಯವೆಂದು ನಾವು ಭಾವಿಸುತ್ತೇವೆ.

ವಚನಶಾಸ್ತ್ರಸಾರ ಪರಿಷ್ಕರಣಕಾರ್ಯವನ್ನು ಸಮರ್ಥ ವಿದ್ವಾಂಸರಾದ ಡಾ. ಎಂ.ಎಂ. ಕಲಬುರ್ಗಿ, ಡಾ. ವ್ಹಿ.ಜಿ. ರಾಜೂರ ಅವರು ಕೈಕೊಂಡು ಶಾಸ್ತ್ರೀಯವಾಗಿ ನಿರ್ವಹಿಸಿಕೊಟ್ಟಿದ್ದಾರೆ. ಅವರು ಅನುಸರಿಸಿರುವ ವಿಧಾನಗಳನ್ನು ಹದಿನಾಲ್ಕು ಅಂಶಗಳಲ್ಲಿ ವಿವರಿಸಿದ್ದಾರೆ. ವಚನಶಾಸ್ತ್ರದಲ್ಲಿ ಶ್ರೀಯುತರಿಗಿರುವ ಪರಿಶ್ರಮ, ಡಾ. ಫ.ಗು. ಹಳಕಟ್ಟಿಯವರಲ್ಲಿರುವ ಭಕ್ತಿ, ಶ್ರದ್ಧೆಗಳು ಈ ಪರಿಷ್ಕರಣಕಾರರಿಗೆ ಸ್ಫೂರ್ತಿಯನ್ನೂ, ನಿಷ್ಠೆಯನ್ನೂ ತಂದುಕೊಟ್ಟಿರುವುದು ಈ ಗ್ರಂಥದ ಅಚ್ಚುಕಟ್ಟಿನಿಂದಲೇ ಗೋಚರವಾಗುತ್ತದೆ. ಮೊದಲಿನ ಆವೃತ್ತಿಯಲ್ಲಿದ್ದ ಎಷ್ಟೋ ವಚನಗಳು ತಮ್ಮ ಕಾಳಿಕೆಯನ್ನು ಕಳೆದುಕೊಂಡು ನಿರ್ಮಲ ಶುದ್ಧವಾಗಿ ಹೊರಬಂದಿವೆ. "ಶಿಥಿಲವಾದ ವಚನಮಂಟಪವೊಂದನ್ನು ಜೀರ್ಣೋದ್ಧಾರ ಮಾಡಿದ ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿಯವರ ಸೇವೆಮಾಡಿದ ಧನ್ಯತೆ ನಮಗುಂಟಾಗಿದೆ" ಎಂಬ ಮಾತುಗಳಿಂದ ವ್ಯಕ್ತವಾಗುತ್ತದೆ. ಈ ಗ್ರಂಥದ ಅನುಬಂಧದಲ್ಲಿ ಕೊಟ್ಟಿರುವ ೨೩೭ ವಚನಕಾರರ ಮುದ್ರಿಕೆಗಳು ಮತ್ತು ಅವರ ಹೆಸರುಗಳು, ವಚನಕಾರರು ವಚನಗಳ ಸಂಖ್ಯೆ, ವಚನಗಳ ಅಕಾರಾದಿ -ಇವು ವಿದ್ವಾಂಸರಿಗೂ ವಿಶೇಷವಾಗಿ ಸಂಶೋಧಕರಿಗೂ ತುಂಬ ಉಪಯುಕ್ತವಾಗಿವೆ.

ಈ ಕೃತಿಯ ಪರಿಷ್ಕರಣಕಾರರು ಹೇಳಿರುವ "ಈವರೆಗೆ ಕನ್ನಡದಲ್ಲಿ ಹಸ್ತಪ್ರತಿಗಳನ್ನು ಇಟ್ಟುಕೊಂಡು ವಿದ್ವಾಂಸರು ಪರಿಷ್ಕರಣ ಕಾರ್ಯವನ್ನು ಪೂರೈಸಿದುದುಂಟು. ಆದರೆ ಒಬ್ಬರು ಸಂಪಾದಿಸಿದ ವಚನ ಕೃತಿಯನ್ನು, ಅದೂ ಅವರು ಬಳಸಿದ ಹಸ್ತಪ್ರತಿಗಳು ಲಭ್ಯವಿಲ್ಲದಾಗ ಇನ್ನೊಬ್ಬರು ಪರಿಷ್ಕರಿಸುವುದು ಕನ್ನಡದಲ್ಲಿಯೇ ಹೊಸಅನುಭವ, ಹೊಸ ಉಪಕ್ರಮ. ಎರಡನೆಯದಾಗಿ ಈ ಕಾರ್ಯವನ್ನು ಕಾವ್ಯಸಾಹಿತ್ಯ ವಿಷಯವಾಗಿ ಮಾಡುವುದು ಸುಲಭ. ವಚನ ಸಾಹಿತ್ಯ ವಿಷಯವಾಗಿ ಮಾಡುವುದು ಕಠಿಣ. ಏಕೆಂದರೆ ಕಾವ್ಯಸಾಹಿತ್ಯದಲ್ಲಿ ಪಾಠಾಂತರಗಳು ವಿರಳ ಮತ್ತು ವ್ಯವಸ್ಥಿತ; ವಚನ ಸಾಹಿತ್ಯದಲ್ಲಿ ಪಾಠಾಂತರಗಳು ಹೇರಳ ಮತ್ತು ಅವ್ಯವಸ್ಥಿತ. ಅಂದರೆ ಒಂದೇವಚನ ಪಾಠಗಳ ಲೋಪ, ಆಗಮ, ಆದೇಶ ಕಾರಣಗಳಿಗಾಗಿ ಸಂಕ್ಷಿಪ್ತ, ವಿಸ್ತಾರ, ಪಲ್ಲಟ, ಇತ್ಯಾದಿ 'ರೂಪ'ಗಳಲ್ಲಿ ಸಿಗುತ್ತದೆ. ಹೀಗಾಗಿ ಇವುಗಳಲ್ಲಿ ಹಳಕಟ್ಟಿಯವರು ಇಟ್ಟುಕೊಂಡ ವಚನ 'ರೂಪ'ವನ್ನು ನಾವು ಮೊದಲು ಒಪ್ಪಿಕೊಂಡು, ಅದರಲ್ಲಿಯೇ ಪಾಠಶುದ್ಧಿಯನ್ನೂ ಮಾಡಬೇಕಾಗುತ್ತದೆ. ಇದನ್ನು ಮನಗಂಡು ಹಳಕಟ್ಟಿಯವರು ಸ್ವೀಕರಿಸಿದ ವಚನರೂಪಕ್ಕೂ ಧಕ್ಕೆಬರದಂತೆ ಜೊತೆಗೆ ವೀರಶೈವ ತತ್ವಕ್ಕೂ ಚ್ಯುತಿಬರದಂತೆ ಗ್ರಂಥಸಂಪಾದನ ಶಾಸ್ತ್ರಕ್ಕೂ ಭಂಗಬರದಂತೆ ತ್ರಿಶೂಲಸಾಕ್ಷಿಯಾಗಿ ನಾವು ಪರಿಷ್ಕರಣ ಕಾರ್ಯವನ್ನು ನಿರ್ವಹಿಸಿದ್ದೇವೆ" -ಈ ಮಾತುಗಳು ತೋರಣನಾಂದಿಯಂತಿವೆ. ಹಳಕಟ್ಟಿಯವರ ವಚನಶಾಸ್ತ್ರಸಾರ ಭಾಗ-೧, ಪೂರ್ವಾರ್ಧ, ಉತ್ತರಾರ್ಧಗಳಲ್ಲಿ ಒಟ್ಟು ೨೬೬೫ ವಚನಗಳಿವೆ. ಇವೆರಡನ್ನೂ ಸಂಯುಕ್ತ ಸಂಪುಟವನ್ನಾಗಿ ಸಮರ್ಪಕವಾಗಿ ಹೊರತಂದಿರುವ ಪರಿಷ್ಕರಣಕಾರರನ್ನು ನಾವು ಮನಸಾರೆ ಅಭಿವಂದಿಸುತ್ತೇವೆ. ಇಂತಹ ಬೃಹತ್ಕೃತಿಯ ಪ್ರಕಟಣೆಯನ್ನು ಮಾಡಿದ ಗದುಗಿನ ಶ್ರೀಗಳವರ ಕರ್ತೃತ್ವಶಕ್ತಿಗಳಿಗೆ ಮಣಿಯುತ್ತೇವೆ. ವಚನಶಾಸ್ತ್ರಸಾರ ಸಾರದ ಪರಿಷ್ಕೃತ ಮುದ್ರಣದ ಪ್ರತಿಗಳು ಎಲ್ಲರ ಮನೆಯನ್ನೂ, ಮನವನ್ನೂ ಬೆಳಗಲಿ ಎಂದು ಹಾರೈಸುತ್ತೇವೆ.

■

# ವೀರಶೈವ ಉಗಮ ಮತ್ತು ಪ್ರಗತಿ : ಶ್ರೀ ಟಿ.ಎನ್. ಮಲ್ಲಪ್ಪ

ಪ್ರಕೃತ ಗ್ರಂಥದಲ್ಲಿ ವೀರಶೈವಧರ್ಮದ ಹುಟ್ಟುಬೆಳವಣಿಗೆಯನ್ನು ಕುರಿತು ವಿವರವಾಗಿ ವಿವೇಚಿಸಲಾಗಿದೆ. ಇದರಲ್ಲಿ ನಾಲ್ಕು ಅಧ್ಯಾಯಗಳಿವೆ. ಪ್ರಥಮಾಧ್ಯಾಯದಲ್ಲಿ ವೀರಶೈವದ ಪ್ರಾಚೀನತೆಯನ್ನೂ, ದ್ವಿತೀಯಾಧ್ಯಾಯದಲ್ಲಿ ಆದಿಮಾನವನ ಕಾಲದಲ್ಲಿ ವೀರಶೈವದ ಉಗಮವನ್ನೂ, ತೃತೀಯಾಧ್ಯಾಯದಲ್ಲಿ ವೇದಾಗಮೋಪನಿಷತ್ ಪುರಾಣಗಳ ಕಾಲದಲ್ಲಿ ವೀರಶೈವದ ಪ್ರಗತಿಯನ್ನೂ ಮತ್ತು ಚತುರ್ಥಾಧ್ಯಾಯದಲ್ಲಿ ಶುದ್ಧಿಸಂಘಟನೆಯಿಂದ ವೀರಶೈವದ ಸಂಪೂರ್ಣತೆಯನ್ನೂ ವಿವರಿಸಿದ್ದಾರೆ.

ವೀರಶೈವ ಧರ್ಮವು ಅತ್ಯಂತ ಪ್ರಾಚೀನವಾದುದು. ಅದು ಬಸವಾದಿ ಪ್ರಮಥರ ಕಾಲದಿಂದೀಚೆಗೆ ತಲೆದೋರಿತು ಎಂಬ ಕೆಲವರ ವಾದದಲ್ಲಿ ಹುರುಳಿಲ್ಲ ಎಂಬುದನ್ನು ವೇದಾಗಮೋಪನಿಷತ್ತುಗಳ ಆಧಾರದಿಂದ ಲೇಖಕರು ಸ್ಪಷ್ಟಪಡಿಸಿದ್ದಾರೆ. ಅಲ್ಲದೆ ಭಾರತದಲ್ಲಿನ ಶೈವಪ್ರಭೇದಗಳೆಲ್ಲವನ್ನು ಸೂಕ್ಷ್ಮವಾಗಿ ಸೂಕ್ತವಾಗಿ ವಿವೇಚಿಸಿ ವಿಮರ್ಶಿಸಿ ವೀರಶೈವಧರ್ಮದ ಸಾರೋದ್ಧಾರತೆಯನ್ನು ಗ್ರಂಥಾಧಾರಗಳಿಂದ ಪ್ರತಿಪಾದಿಸಿದ್ದಾರೆ. ವೀರಶೈವ ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಸಂವರ್ಧನೆಗೆ ಶ್ರೀ ಮಲ್ಲಪ್ಪನವರು ಗಣನೀಯವಾದ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ. ಪ್ರಸ್ತುತ ಗ್ರಂಥದ ಪ್ರಸ್ತಾವನೆಯಲ್ಲಿ "ಶೈವಧರ್ಮದ ಉಗಮ ಮತ್ತು ಪ್ರಗತಿಯ ಚರಿತ್ರೆಯು ಬಹ್ವಂಶದಿಂದ ಸನಾತನ ಭಾರತೀಯ ಧರ್ಮದ ಉಗಮ ಮತ್ತು ಪ್ರಗತಿಯ ಚರಿತ್ರೆಯೇ ಆಗಿದೆ. ತಲಕಾವೇರಿಯಲ್ಲಿ ಸೂಕ್ಷ್ಮರೂಪದಲ್ಲಿ ಹುಟ್ಟಿ ಬೇರೆ ಬೇರೆ ದೇಶದ ಉಪನದಿಗಳಿಂದ ಪುಷ್ಟಿಗೊಂಡು ಪ್ರಗತಿಹೊಂದಿ, ಕೃಷ್ಣರಾಜಮಹಾಸಾಗರದಲ್ಲಿನ ಆಧುನಿಕ ಪ್ರಯೋಗಗಳಿಂದ ವೈಶಾಲ್ಯತೆಯನ್ನು ಪಡೆದ ತಾಯಿ ಕಾವೇರಿಯಂತೆ, ಸನಾತನ ಕಾಲದಲ್ಲಿ ಸೂಕ್ಷ್ಮವಾದರೂ ಸ್ಪಷ್ಟವಾದ ರೂಪದಿಂದ ಹೊರಹೊಮ್ಮಿ, ವೇದಾಗಮೋಪನಿಷತ್ ಪುರಾಣಗಳಿಂದ ಪುಷ್ಟಿಪಡೆದು, ಆಧುನಿಕ ಕಾಲದಲ್ಲಿ ಪ್ರಚಲಿತವಾಗಿರುವ ಸುಧಾರಣೆಗಳಿಂದ ಹನ್ನೆರಡನೆಯ ಶತಮಾನದಿಂದಲೂ ಪ್ರಗತಿಹೊಂದಿ, ವಿಶ್ವಧರ್ಮವಾಗಲು ತಕ್ಕ ವೈಶಾಲ್ಯತೆಯನ್ನು ಈ ಧರ್ಮವು ಪಡೆದಿದೆ. ಇದರ ಪರಿಪೂರ್ಣ ರೂಪದಲ್ಲಿ ದ್ವೈತಮತದ ಭವ್ಯಭಕ್ತಿಭಾವನೆಯೂ, ವಿಶಿಷ್ಟಾದ್ವೈತಮತದ ಶರಣಾಗತಿ ಪ್ರಪತ್ತಿಗಳ ಪಾರವಶ್ಯತೆಯೂ, ಶಾಂಕರಸಿದ್ಧಾಂತದ ಅವಿರಳ ಐಕ್ಯವನ್ನು ಸಾಧಿಸುವ ಜ್ಞಾನಮಾರ್ಗವೂ ಸಹ ಸಮರಸವಾಗಿ ಕಾಣಬರುವುದರಿಂದಲೂ, ಸಂಕುಚಿತ ಭಾವನೆಗಳನ್ನತಿಗಳೆದ ಅತಿವರ್ಣಾಶ್ರಮ ಧರ್ಮವಾಗಿರುವುದರಿಂದಲೂ ವಿಚಾರ ಸ್ವಾತಂತ್ರ್ಯ, ವೃತ್ತಿಸ್ವಾತಂತ್ರ್ಯ ಮೊದಲಾದ ಸುಧಾರಣೆಗಳಿಂದ ಹನ್ನೆರಡನೆಯ ಶತಮಾನದಲ್ಲಿ ಶುದ್ಧಿ ಸಂಘಟನೆಗೊಳಗಾಗಿ ರೂಪುಗೊಂಡಿರುವುದರಿಂದಲೂ ವೀರಶೈವಧರ್ಮವು ಹಿಂದೂಧರ್ಮದಲ್ಲಿನ ಅತ್ಯಂತ ಸುಧಾರಿತ ಧರ್ಮವೆನ್ನಬಹುದು" ಎಂದು ಹೇಳಿರುವ ಅಭಿಪ್ರಾಯವು ಶ್ರೀಮಲ್ಲಪ್ಪನವರು ಆಳವೂ ಪರಿಪಕ್ವವೂ ಆದ ಅನುಭವಕ್ಕೆ ಸಾಕ್ಷಿಯಾಗಿದೆ. ವಾದಪ್ರವಾದಗಳ ಮಂಥನಕ್ಕೆ ಸಿಲುಕದೆ ಪ್ರಶಾಂತ ಮನೋಭಾವದಿಂದ ಗ್ರಂಥರಚನೆಗೆ ತೊಡಗಿರುವ ಶ್ರೀ ಮಲ್ಲಪ್ಪನವರಿಂದ ಈ ತೆರನ ಹಲವಾರು ಗ್ರಂಥಗಳನ್ನು ನಿರೀಕ್ಷಿಸಬಹುದಾಗಿದೆ.

■

# ಮಹಾಕವಿ ರಾಘವಾಂಕ ವಿರಚಿತ ಸೋಮನಾಥ ಚಾರಿತ್ರ

ಸಂಪಾದಕರು: ಡಾ. ಆರ್.ಸಿ. ಹಿರೇಮಠ, ಡಾ. ಎಂ.ಎಸ್. ಸುಂಕಾಪುರ, ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ಡೆಮ್ಮಿ ೧/೮, ಪುಟಗಳು ೨೩೬+೪೯, ಬೆಲೆ: ರೂ. ೫.೦೦

---

ಮಹಾಕವಿ ರಾಘವಾಂಕ ವಿರಚಿತ ಸೋಮನಾಥ ಚಾರಿತ್ರವನ್ನು, ಕರ್ನಾಟಕ ವಿಶ್ವವಿದ್ಯಾನಿಲಯದವರು ಪ್ರಕಟಿಸಿ ನಾಡಿನ ಜನತೆಗೆ ಮಹೋಪಕಾರವನ್ನು ಮಾಡಿದ್ದಾರೆ. ಈ ಕಾವ್ಯದ ಸಂಪಾದಕರೂ, ಸಂಶೋಧನಾ ಪಟುಗಳೂ ಆದ ಡಾ. ಆರ್.ಸಿ. ಹಿರೇಮಠ, ಡಾ. ಎಂ.ಎಸ್. ಸುಂಕಾಪುರ ಅವರು ಅತ್ಯಂತ ಶ್ರದ್ಧಾಭಕ್ತಿಗಳಿಂದ ಸಶಾಸ್ತ್ರೀಯವಾಗಿ ಸಂಶೋಧಿಸಿ ಸಂಪಾದಿಸಿ ಕನ್ನಡಿಗರೆಲ್ಲರ ಅಭಿಮಾನಕ್ಕೆ ಪಾತ್ರರಾಗಿದ್ದಾರೆ. ಈ ಕಾವ್ಯವು ಸುದೀರ್ಘವಾದ ಪೀಠಿಕೆ, ವಿಪುಲ ಪಾಠಾಂತರಗಳು, ಪರಿಶಿಷ್ಟಗಳು, ಪದ್ಯಗಳ ಅಕಾರಾದಿ, ಕಠಿಣ ಶಬ್ದಕೋಶ –ಇವುಗಳನ್ನು ಒಳಕೊಂಡು ಸರ್ವಾಂಗಸುಂದರವಾಗಿ ಹೊರಬಂದಿದೆ. ಅಲ್ಲದೆ ರಾಘವಾಂಕ ಚರಿತೆಯ ಒಂದು ಪ್ರತಿಯಲ್ಲಿ ಕಂಡುಬಂದ ರಾಘವಾಂಕನ ತೈಲಚಿತ್ರವನ್ನು ಮತ್ತೆ ಕೆಲವು ಚಿತ್ರಗಳನ್ನು ಈ ಕಾವ್ಯದಲ್ಲಿ ಉಪಯೋಗಿಸಿರುವುದು ಇದರ ಮೇಲ್ಮೆಯನ್ನು ಮತ್ತಷ್ಟು ಹೆಚ್ಚಿಸಿದೆ.

ಗ್ರಂಥಸಂಸ್ಕರಣ ಒಂದು ಕಲೆ. ಇದು ಸುಲಭಸಾಧ್ಯವಾದುದಲ್ಲ, ಇದಕ್ಕೆ ಅಸಹನೀಯ ತಾಳ್ಮೆ, ಅಪಾರ ಪರಿಶ್ರಮ; ಆಳವಾದ ಅಭ್ಯಾಸ ಅತ್ಯಾವಶ್ಯಕ. ಕವಿಯ ಮೂಲಪ್ರತಿಯಿಂದ ಹುಟ್ಟಿಕೊಂಡ ಹಲವಾರು ಪ್ರತಿಗಳು ಆಲದ ಮರದಂತೆ ಬಿಳಿಲುಗಳನ್ನು ಬಿಡುತ್ತವೆ. ಇದರಿಂದ ಕವಿಯ ಮೂಲಪಾಠವನ್ನು ಕಂಡುಹಿಡಿಯುವುದು ಅತಿ ದುರ್ಗಮವಾಗುತ್ತದೆ. ತಾಳೆಯೋಲೆಯಲ್ಲಿ ಬರೆಯುವಾಗ ಹಲವಾರು ಸ್ಖಾಲಿತ್ಯಗಳು ಸಂಭವಿಸುವುದುಂಟು. ಅಲ್ಲದೆ ಪ್ರತಿಕಾರ ಅಕ್ಷರಜ್ಞನಲ್ಲದಿದ್ದರೆ ಮತ್ತಷ್ಟು ದೋಷಗಳು ತಲೆದೋರುತ್ತವೆ. ಆದುದರಿಂದ ಯಾವೊಂದು ಕಾವ್ಯವನ್ನು ಸಂಪಾದಿಸಬೇಕೋ, ಆ ಕಾವ್ಯದ ಪ್ರತಿಗಳು ಎಷ್ಟು ಸಿಕ್ಕುತ್ತವೆಯೋ ಅಷ್ಟನ್ನೆಲ್ಲಾ ಮೊದಲು ಸಂಗ್ರಹಿಸಿ, ಪಾಠಾಂತರಗಳನ್ನು ಗುರುತಿಸಿ ಮೂಲಮಾತೃಕೆಯ ಪಾಠಗಳಾಗುವುವೆಂಬುದನ್ನು ಪತ್ತೆ ಹಚ್ಚಬೇಕು. ತರುವಾಯ ಕಾವ್ಯಸಂಸ್ಕರಣೆಗೆ ತೊಡಗಬೇಕು.

ಪ್ರಕೃತ ಗ್ರಂಥದಲ್ಲಿ ಅನಕ್ಷರಜ್ಞರಾದ ಪ್ರತಿಕಾರರಿಂದ ಸಂಭವಿಸಿದ ಹಲವಾರು ಅಕ್ಷರಸ್ಖಾಲಿತ್ಯಗಳನ್ನು ಗಮನಿಸಬಹುದು. ಉದಾಹರಣೆಗೆ:

(೧) ಸ್ವರಾದಿ ಶಬ್ದಗಳಿಗೆ ಬದಲಾಗಿ ವ್ಯಂಜನಾದಿಗಳನ್ನು ಉಪಯೋಗಿಸುವುದು (ಅ) ಎಸೆವ ಭಕ್ತಿ ಜ್ಞಾನವೈರಾಗ್ಯ (೧-೨೮) ಯೆಸೆವ ಭಕ್ತಿ ಜ್ಞಾನವೈರಾಗ್ಯ; (ಆ) ಇತ್ತ ಬಾ ಬಳಲ್ದೆಲ್ಲಿಗೆ ಹೋದೆ (೧-೩೮) ಯಿತ್ತ ಬಾ ಬಳಲ್ದೆಲ್ಲಿಗೆ ಹೋದೆ; (ಇ) ಉನ್ನತಾಶ್ಚರ್ಯಂಗಳೇನೇನ ಕಂಡೆ (೧-೪೦) ವುನ್ನತಾಶ್ಚರ್ಯಂಗಳೇನೇನ ಕಂಡೆ; (ಈ) ಒಸೆದು ಹರಿಯಜರು (೧-೫೧) ವೊಸೆದು ಹರಿಯಜರು; (ಉ) ಇಡುಕುದೆರೆಯಟ್ಟುದೆರೆ (೧-೬೦) ಯಿಡುಕುದೆರೆ ಯಟ್ಟುದೆರೆ; (ಊ) ಹಾಡಿ ಹಡೆದಾಡಿ (೧-೬೭) ಆಡಿ ಹಡೆದಾಡಿ; (ಋ) ಎಂತಧಿಕ (೧-೭) ಯಂತಧಿಕ; (ೠ) ಎದೆಯಸೆರೆ (೧-೭೪) ಯೆದೆಯ ಸೆರೆ –ಇತ್ಯಾದಿ. ಕ.ಬಿ. ಪತ್ರಿಗಳಲ್ಲಿ ಸ್ವರಾದಿ ಶಬ್ದಗಳಿಗೆಲ್ಲ ವ್ಯಂಜನಾದಿ ಶಬ್ದಗಳನ್ನು ಬಳಸಿರುವುದನ್ನು ಈ ಕಾವ್ಯದ ಉದ್ದಕ್ಕೂ ನೋಡಬಹುದು.

(೨) ಎಕಾರಾಂತ ಶಬ್ದಗಳಿಗೆ ಬದಲಾಗಿ ಅಕಾರಾಂಕ ಶಬ್ದಗಳನ್ನು ಬಳಸಿರುವುದು. ಮೂಲಶಬ್ದ ಸ್ಪಷ್ಟವಾಗಿ ಎಕಾರಾಂತವಾಗಿದ್ದರೂ ಪ್ರತಿಕಾರರು ಅಕಾರಾಂತವನ್ನು ವಿಪುಲವಾಗಿ ಉಪಯೋಗಿಸಿರುವುದು (ಅ) ಎಸೆವ–ಎಸವ. (ಆ) ಬೆಳೆದಾವಗಂ–ಬೆಳದಾವಗಂ (೧–ಪಲ್ಲವ), (ಇ) ನೆನೆದು–ನೆನದು (೧–೧೧), (ಈ) ನೆರೆದು–ನೆರದು

(೧-೧೩), (ಉ) ನಡೆ-ನಡ, (ಊ) ಒಡೆ-ಒಡ (೧-೧೪) ಇತ್ಯಾದಿ. 'ಕಬಮ' ಪ್ರತಿಗಳು ಎಕಾರಾಂತಕ್ಕೆ ಬದಲಾಗಿ ಅಕಾರಾಂತವನ್ನು ತಪ್ಪದೆ ಉಪಯೋಗಿಸಿರುವುದನ್ನು ಗಮನಿಸಬಹುದು.

(೩) ದೀರ್ಘಾಕ್ಷರಗಳಿಗೆ ಬದಲಾಗಿ ಛಂದೋಭಂಗವಾದರೂ ಹ್ರಸ್ವಾಕ್ಷರಗಳನ್ನು ಬಳಸಿರುವುದು (ಅ) ಈ ವಂಗಂ - ಇವಂಗಂ (೧-೭೮); (ಆ) ಏಳದೆಂಟೊಂಬತ್ತು-ಎಳದೆಂಟೊಂಬತ್ತು (೧-೯೦); (ಇ) ಈ ನಾಡೊಳೀ-ಇನಾಡೊಳೀ (೧-೧೦೧) ಇತ್ಯಾದಿ.

(೪) ಅಲ್ಪಪ್ರಾಣಗಳಿಗೆ ಮಹಾಪ್ರಾಣಗಳನ್ನೂ, ಮಹಾಪ್ರಾಣಗಳಿಗೆ ಅಲ್ಪಪ್ರಾಣಗಳನ್ನೂ ಬಳಸಿರುವುದು (ಅ) ಶ್ರೀ ಮದುಜ್ವಲ-ಶ್ರೀಮಧುಜ್ವಲ (೧-೨), (ಆ) ಪುಣ್ಯಧಾಮ-ಪುಣ್ಯದಾಮ (೧-೩), (ಇ) ಧೃತಸೋಮ-ದೃತಸೋಮ (೧-೪), (ಈ) ಮಾಯಾತಮಂಥ-ಮಾಯಾತಮಂದ (೧-೮), (ಉ) ನಿಷ್ಠುರ-ನಿಷ್ಟುರ (೧-೧೩), (ಊ) ಮುಕುರ-ಮುಖುರ (೧-೧೩), (ಋ) ಅಧಮತನ-ಅದಮತನ (೧-೧೫) ಇತ್ಯಾದಿ.

(೫) ಶಿಷ್ಟಶಬ್ದಗಳಿಗೆ ಬದಲಾಗಿ ಅಶಿಷ್ಟಶಬ್ದಗಳನ್ನು ಬಳಸಿರುವುದು (ಅ) ವ್ಯೋಮ-ಯೋಮ (೧-೨), (ಆ) ನಿರವದ್ಯ-ನಿರವಂಧ್ಯ (೧-೫), (ಇ) ಇಂದುಧರ-ಇಂಧುದರ (೧-೬), (ಈ) ಶಾಪ-ಸಾಪ (೧-೮) ಇತ್ಯಾದಿ. ಇಷ್ಟೇ ಅಲ್ಲದೆ ಸಾಮಾನ್ಯ ರೇಫಕ್ಕೆ ಶಕಟರೇಫಗಳನ್ನು, ಶಕಟರೇಫಗಳಿಗೆ ಸಾಮಾನ್ಯ ರೇಫಗಳನ್ನು ಬಳಸಿರುವುದು.

ಪ್ರತಿಕಾರರಿಂದ ಸ್ಪಷ್ಟವಾಗಿ ಸಂಭವಿಸಿರಬಹುದಾದ ಈ ಮೇಲಿನ ಸ್ಖಾಲಿತ್ಯಗಳನ್ನು ಪಾಠಾಂತರಗಳೆಂದು ಸ್ವೀಕರಿಸಬಹುದೇ? ನಮಗೆ ತಿಳಿದಂತೆ ಪ್ರಾಚೀನ ಕಾವ್ಯಸಂಸ್ಕರಣದಲ್ಲಿ ಈ ಅಪರೂಪಗಳನ್ನು ಪಾಠಾಂತರಗಳೆಂದು ಸ್ವೀಕರಿಸಲಾಗದು. ಪೀಠಿಕೆಯಲ್ಲಿ ಈ ವಿಷಯವನ್ನು ಸ್ಪಷ್ಟಪಡಿಸಬಹುದು. ಇದರಿಂದ ಅನವಶ್ಯಕವಾದ ಪಾಠಾಂತರಗಳನ್ನು ಸಂಪೂರ್ಣವಾಗಿ ಬಿಟ್ಟುಬಿಡಬಹುದು. ಈ ಕಾವ್ಯದ ಪ್ರತಿಯೊಂದು ಪದ್ಯಕ್ಕೂ ವಿಪುಲವಾದ ಪಾಠಾಂತರಗಳು ಕಂಡುಬರುತ್ತವೆ, ಒಂದೊಂದೆಡೆ ಪಾದದ ಪ್ರತಿಯೊಂದು ಅಕ್ಷರಕ್ಕೂ ಪಾಠಾಂತರಗಳು ಕಂಡುಬರುತ್ತವೆ. ಇವನ್ನು ಸಂಗ್ರಹಿಸಲು ಸಾಧ್ಯ. ಉದಾ: ಸ್ಥಲ (೧-೨೯), (೨-೭), (೨-೧೩), (೨-೧೫), (೨-೮೧) ಇತ್ಯಾದಿ.

ಹರಿಶ್ಚಂದ್ರಕಾವ್ಯ ಮತ್ತು ಸೋಮನಾಥ ಚಾರಿತ್ರದಲ್ಲಿನ ಪದ್ಯಗಳ ಪರಸ್ಪರ ಸಾಗಾಟ ಒಂದು ಬಹುಮುಖ್ಯವಾದ ವಿಚಾರಣೀಯ ಅಂಶ. ಸೋಮನಾಥ ಚಾರಿತ್ರದಲ್ಲಿ ಐದು ಸ್ಥಲಗಳೂ ೫೨೪ ಪದ್ಯಗಳೂ ಇವೆ, ಪ್ರಥಮ ಮುದ್ರಣದ ಪ್ರತಿಯಲ್ಲಿ ಆರುಸಂಧಿಗಳೂ ೫೬೫ ಪದ್ಯಗಳೂ ಇವೆ, ಹರಿಶ್ಚಂದ್ರಕಾವ್ಯದ ೯೧ ಪದ್ಯಗಳು ಯಥಾವತ್ತಾಗಿ ಸೋಮನಾಥ ಚಾರಿತ್ರದಲ್ಲಿ ಸೇರ್ಪಡೆಯಾಗಿವೆ, ಅಲ್ಲದೆ ಹಲವಾರು ಪದ್ಯಗಳು ಅಲ್ಪಸ್ವಲ್ಪ ವ್ಯತ್ಯಾಸದೊಡನೆ ಕಾಣಿಸಿಕೊಳ್ಳುತ್ತವೆ ಮತ್ತು ಸಿದ್ಧರಾಮ ಚಾರಿತ್ರದ ಕೆಲವು ಪದ್ಯಗಳೂ ಸೋಮನಾಥ ಚಾರಿತ್ರದಲ್ಲಿ ಕಂಡುಬರುತ್ತವೆ. ಈ ರೀತಿ ಒಬ್ಬನೇ ಕವಿಯ ಪದ್ಯಗಳು ಆತನ ಬೇರೆ ಬೇರೆ ಕಾವ್ಯಗಳಲ್ಲಿ ಸೇರ್ಪಡೆಯಾಗಿರುವುದು ಹೊಸತೇನೂ ಅಲ್ಲ. ಪಂಪಭಾರತ ಮತ್ತು ಆದಿಪುರಾಣಗಳಲ್ಲಿ ಪದ್ಯಗಳು ವಿನಿಮಯವಾಗಿವೆ. ನಾಗಚಂದ್ರನ ರಾಮಚಂದ್ರಚರಿತಪುರಾಣ ಮತ್ತು ಮಲ್ಲಿನಾಥ ಪುರಾಣದ ಪದ್ಯಗಳು ಪರಸ್ಪರ ವಿನಿಮಯವಾಗಿವೆ. ಕವಿರಾಜಕುಂಜರನಾದ ನೇಮಿಚಂದ್ರನ ಲೀಲಾವತಿ, ಅರ್ಧನೇಮಿಯ ಪದ್ಯಗಳೂ ಪರಸ್ಪರ ವಿನಿಮಯವಾಗಿವೆ. ಮಹಾಕವಿಗಳು ಒಂದೇ ಪದ್ಯವನ್ನು ತಮ್ಮೆರಡು ಕಾವ್ಯಗಳಲ್ಲಿ ಬಳಸುವುದು ಒಂದು ರೀತಿಯಲ್ಲಿ ಅವರ ಪ್ರತಿಭೆಗೆ ಕುಂದೋ ಏನೋ? ಅಂತು ಈ ಒಂದು ಪರಿಪಾಠ ಬಹಳ ಹಿಂದಿನಿಂದಲೂ ಬೆಳೆದುಕೊಂಡು ಬಂದಿದೆ. ರಾಘವಾಂಕನು ಈ ಪುರಾತನ ಸಂಪ್ರದಾಯವನ್ನು ಉಲ್ಲಂಘಿಸಿಲ್ಲ, ಒಂದು ದೃಷ್ಟಿಯಲ್ಲಿ ಅವರೆಲ್ಲರಿಗಿಂತ ಒಂದು ಹೆಜ್ಜೆ ಮುಂದೆಯೇ ನಡೆದಿದ್ದಾನೆ.

ಪ್ರಸ್ತುತ ಕಾವ್ಯದ ಸುದೀರ್ಘವಾದ ಪೀಠಿಕೆಯಲ್ಲಿ ರಾಘವಾಂಕನ ಕಾಲ, ದೇಶ, ವರ್ತಮಾನ ಕೃತಿಗಳ ವಿವೇಚನೆಯನ್ನು ಯಥೋಚಿತವಾಗಿ ಮಾಡಿದ್ದಾರೆ. ಆದಯ್ಯ ಒಬ್ಬ ಶಿವಶರಣ. ಈತನು ವಚನಗಳನ್ನು ಬರೆದಿದ್ದಾನೆ. ಈ ಶರಣನನ್ನು ಕುರಿತು ಹರಿಹರ ಒಂದು ರಗಳೆಯನ್ನು ಬರೆದಿದ್ದಾನೆ. ರಾಘವಾಂಕನ ಸೋಮನಾಥ ಚಾರಿತ್ರಕ್ಕೆ ಮೂಲ ಯಾವುದು? ಹರಿಹರನ ಆದಯ್ಯನಿಗೂ ರಾಘವಾಂಕನ ಆದಯ್ಯನಿಗೂ ಇರುವ ಸಾಮ್ಯ ವೈಷಮ್ಯಗಳೇನು ಎಂಬುದನ್ನು ಸಂಪಾದಕರು ತಿಳಿಸಿದ್ದರೆ ಮತ್ತಷ್ಟು ಉಪಕಾರವಾಗುತ್ತಿತ್ತು. ಒಟ್ಟಿನಲ್ಲಿ ಸೋಮನಾಥ ಚಾರಿತ್ರವನ್ನು ಕರ್ನಾಟಕ ವಿಶ್ವವಿದ್ಯಾನಿಲಯದವರು ಪ್ರಕಟಿಸಿ ಕನ್ನಡಿಗರಿಗೆ ಮಹೋಪಕಾರವನ್ನು ಮಾಡಿದ್ದಾರೆ ಎಂದು ಮತ್ತೊಮ್ಮೆ ಹೇಳುವುದು ಅನಿವಾರ್ಯವಾಗಿದೆ. ■

# ಸಮ್ರಾಜ್ಞಿ (ನಾಟಕ)

ಶ್ರೀ ನಿರಂಜನ, ರಶ್ಮಿ, ಜಯನಗರ, ಬೆಂಗಳೂರು, ಪುಟ ೧೪೧, ಬೆಲೆ: ರೂ. ೨

---

**ಸ**ಮ್ರಾಜ್ಞಿ ಒಂದು ಐತಿಹಾಸಿಕ ನಾಟಕ. ಹದಿನಾಲ್ಕನೆಯ ಶತಮಾನದಲ್ಲಿ ಮಂಗೋಲಿಯ ಸಾಮ್ರಾಜ್ಯದ ತೈಮೂರನು ಹಿಂದೂಸ್ಥಾನದ ಮೇಲೆ ದಂಡೆತ್ತಿ ಹೋಗಿದ್ದಾಗ ತನ್ನ ಅರಮನೆಯಲ್ಲಿ ನಡೆದ ಒಂದು ಅಹಿತಕರವಾದ ಘಟನೆಯಿಂದ ಪರಿತಪ್ತನಾಗಿ ಕೊರಗಿ ಕೊರಗಿ ಅಸುನೀಗುವನು. ತೈಮೂರನ ಸಮ್ರಾಜ್ಞಿಯಾಗಿ ಆತನ ವಿಜಯ ಪರಂಪರೆಗಳೆಲ್ಲಕ್ಕೂ ಸ್ಫೂರ್ತಿದಾಯಿನಿಯಾಗಿ ಮೆರೆದ ಮಹಾಸಾಧ್ವಿ, ಅನುಪಮ ಸುಂದರಿ ಹಾನಿಮ್ ಈ ನಾಟಕದ ಕೇಂದ್ರಬಿಂದು. ತೈಮೂರನ ಖ್ಯಾತಿಯನ್ನು ಸುಸ್ಥಿರಗೊಳಿಸಬೇಕೆಂದು ಹಾನಿಮ್ ಒಂದು ಪ್ರಾರ್ಥನಾಮಂದಿರದ ನಿರ್ಮಾಣಕ್ಕೆ ತೈಮೂರನಿಂದ ಅನುಮತಿಯನ್ನು ಪಡೆಯುವಳು. ಅವಳ ಮೇಲ್ವಿಚಾರಣೆಯಲ್ಲೇ ಆ ಭವ್ಯಮಂದಿರದ ನಿರ್ಮಾಣ ಕಾರ್ಯ ಜರುಗುತ್ತದೆ. ಪ್ರಾರ್ಥನಾ ಮಂದಿರದ ಮುಖ್ಯ ಶಿಲ್ಪಿ ದಾವೂದ್. ಆತನು ಸೌಂದರ್ಯೋಪಾಸಕ. ಆತನು ಆ ಮಂದಿರದ ನಿರ್ಮಾಣ ಕಾರ್ಯವನ್ನು ಕೈಕೊಂಡದ್ದು ತೈಮೂರನಿಗಾಗಿಯೂ ಅಲ್ಲ, ದ್ರವ್ಯಸಂಪಾದನೆಗಾಗಿಯೂ ಅಲ್ಲ, ಹಾನೀಮಳ ಸೌಂದರ್ಯದ ಪ್ರತೀಕವಾಗಿ.

ಒಮ್ಮೆ ಅಂತಃಪುರದಲ್ಲಿ ಹಾನೀಮಳೊಂದಿಗೆ ದಾವೂದ್ ಏಕಾಂತವಾಗಿ ಸಂಭಾಷಿಸುತ್ತಿದ್ದಾಗ ಹಾನೀಮ್ ಪ್ರಾರ್ಥನಾಮಂದಿರದ ಕಾರ್ಯ ಬೇಗಮುಗಿಯುವುದಕ್ಕೆ ಏನೇನು ಅನುಕೂಲಗಳು ಬೇಕೆಂದು ಕೇಳುವಳು. ಅದಕ್ಕೆ ದಾವೂದ್ 'ಒಂದು ಚುಂಬನ' ಎಂದು ಹೇಳುವನು. ಆ ಮಾತು ಕಿವಿಗೆ ಬಿದ್ದೊಡನೆಯೇ ಹಾನಿಮ್ ಮೂರ್ಛೆಹೋಗುವಳು. ದಾವೂದ್ ಸಮ್ರಾಜ್ಞಿಯನ್ನು ಸಂತೈಸಿ ಸಂತೃಪ್ತನಾಗುವನು.

ಅತ್ತ ದಿಗ್ವಿಜಯವನ್ನು ಮುಗಿಸಿಕೊಂಡು ಹಿಂತಿರುಗಿದ ತೈಮೂರ್ ನೇರವಾಗಿ ಸಮ್ರಾಜ್ಞಿಯಲ್ಲಿಗೆ ಬರುವನು. ಆದರೆ ಆಕೆಯಲ್ಲಿ ಮೊದಲಿನ ಗೆಲುವಾಗಲಿ ಬಲವಾಗಲಿ ಕಂಡುಬರಲಿಲ್ಲ. ಆಕೆಯ ಗಂಟಲ ಮೇಲೆ ಆಗಿದ್ದ ಗುರುತನ್ನು ಕಂಡು ತೈಮೂರ್ ರೋಷಾವೇಶದಿಂದ ಸೈನಿಕರೊಂದಿಗೆ ಪ್ರಾರ್ಥನಾ ಮಂದಿರಕ್ಕೆ ಹೋಗಿ ಶಿಲ್ಪಿ ದಾವೂದನನ್ನು ಬಂಧಿಸಿ "ನನ್ನ ದಿಗ್ವಿಜಯಗಳಿಗೆ ಚಿರಸ್ಮಾರಕವಾಗಿ ಕಟ್ಟಿದೆಯಲ್ಲವೆ ಈ ಕೀರ್ತಿಮಂದಿರವನ್ನು ಬೊಗಳು" ಎಂದು ಆರ್ಭಟಿಸುವನು. ದಾವೂದನು ಅದಕ್ಕೆ "ಸೌಂದರ್ಯದ ಅಧಿದೇವತೆಗೆ ಶಿಲ್ಪಿ ದಾವೂದನ ಕಾಣ್ಕೆ" ಎಂದು ಉತ್ತರ ಕೊಡುವನು. ಆ ಮಾತನ್ನು ಕೇಳುತ್ತಲೇ ತಡೆಯಲಾರದ ಸಿಟ್ಟಿನಿಂದ ಕತ್ತಿಯನ್ನು ಹಿರಿದು ದಾವೂದನ ಮೇಲೆ ನುಗ್ಗುವನು. ಸೈನಿಕರ ಬಂಧನದಿಂದ ತಪ್ಪಿಸಿಕೊಂಡ ದಾವೂದ್ ಪ್ರಾರ್ಥನಾ ಮಂದಿರದೊಳಕ್ಕೆ ಓಡಿಹೋಗಿ ಸ್ತಂಭವನ್ನೇರಿ ಅಲ್ಲಿಂದ ಕಮರಿಯೊಳಕ್ಕೆ ಧುಮುಕಿಬಿಡುವನು. ಅದನ್ನು ಕೇಳಿದ ತೈಮೂರ್ ಉದ್ವೇಗಪರನಾಗಿ "ತೈಮೂರನಿಗೆ ಸೋಲಾಯಿತು, ಮಂಗೋಲ ಸಮ್ರಾಟ ತೈಮೂರನಿಗೆ ಸೋಲಾಯಿತು" ಎಂದು ವ್ಯಥೆಪಟ್ಟು "ಈ ಮಸೀದಿಯನ್ನೂ ಕಮಾನುಕಂಬಗಳನ್ನೂ ಕೆಡವಿಬಿಡಿ ಈ ಕ್ಷಣ". "ಸಮ್ರಾಜ್ಞಿಯನ್ನೂ ಆಕೆಯ ಪರಿಚಾರಿಕೆಯನ್ನೂ ಸೆರೆಯಲ್ಲಿಡಿ" ಎಂದು ಆಜ್ಞಾಪಿಸಿ ಮತ್ತೆ ಅರಮನೆಗೆ ಹಿಂತಿರುಗುವ ಮನಸ್ಸಾಗದೆ ಊರಹೊರಗಿನ ಬಯಲುಗಾವಲಿನಲ್ಲಿ ಶಿಬಿರವನ್ನೇರ್ಪಡಿಸಿ ನಿಲ್ಲುವನು.

ಅಂತರಂಗದ ತುಯ್ದಾಟ ಮಾನಸಿಕ ವೇದನೆಗಳಿಂದ ಹಾಸಿಗೆ ಹಿಡಿಯುವನು. ಆಗ ಮಗನನ್ನು ಕರೆದು "ಬಂದೀಖಾನೆಯಲ್ಲಿ ನಿಮ್ಮಮ್ಮ ಹಾನಿಮ್ ಬೀಬಿ-ಮಂಗೋಲರ ಸಮ್ರಾಜ್ಞಿ ಇನ್ನೂ ಬದುಕಿದ್ದರೆ ಅವಳನ್ನು ಬಿಟ್ಟುಬಿಡು" ಎಂದು ಹೇಳುವನು. ಮಗನನ್ನು ಕುರಿತು "ರುಖ್ ಈ ಭೂಮಿಯ ಮೇಲೆ ಏನು ಸಾಧಿಸಬೇಕೆಂಬ ಆಸೆ ಇಟ್ಟುಕೊಂಡಿದೀಯೆ ನೀನು?" ಎಂದು ಕೇಳಿದ್ದಕ್ಕೆ "ಜಗತ್ತಿನಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದ ಒಂದು ಗ್ರಂಥಭಂಡಾರ ಸ್ಥಾಪಿಸಬೇಕು ಎನ್ನುವುದೇ ನನಗಿರುವ ಆಸೆ ಅಬ್ಬಾಜಾನ್" ಎನ್ನುವನು. ಅದನ್ನು ಕೇಳಿದ ತೈಮೂರ್ "ಥತ್ ಮೂರ್ಖ! ಗ್ರಂಥಭಂಡಾರವಂತೆ! ಜಗತ್ತಿನಲ್ಲೆಲ್ಲಾ ಅತ್ಯಂತ ಬಲಿಷ್ಠವಾದ ವಿಸ್ತಾರವಾದ ಸಾಮ್ರಾಜ್ಯ ಕಟ್ಟಬೇಕು. ಜಗತ್ತೇ ನನ್ನ ಸಾಮ್ರಾಜ್ಯವಾಗಬೇಕು ಎನ್ನುವ ಆಸೆ ಇಟ್ಟುಕೋ" ಎಂದು ಹೇಳಿ ತನ್ನ ಕೊನೆ ಉಸಿರನ್ನೆಳೆಯುವನು.

ಇದು ಒಂದು ದುರಂತ ನಾಟಕ. ಐತಿಹಾಸಿಕ ಸಂಗತಿಗಳೊಂದಿಗೆ ಜಾನಪದ ಕಥೆಯನ್ನೂ ಸೇರಿಸಿ ಶ್ರೀ ನಿರಂಜನ ಅವರು ಈ ಉತ್ತಮ ನಾಟಕವನ್ನು ಬರೆದಿದ್ದಾರೆ. ಇಲ್ಲಿಯ ಪಾತ್ರಗಳು ಜೀವಂತವಾಗಿ ಓದುಗರ ಕಣ್ಣಿಗೆ ಕಟ್ಟುವಂತಿವೆ. ಲಘುಸಾಹಿತ್ಯದಿಂದ ಬೇಸತ್ತಿರುವ ಇಂದಿನ ಜನತೆಗೆ ಈ ತೆರನ ನಾಟಕಗಳು ಸಮಾಧಾನವನ್ನು ನೀಡಬಲ್ಲುವಾಗಿವೆ. ಸುಪ್ರಸಿದ್ಧ ಸಾಹಿತಿಗಳೂ ಪ್ರಖ್ಯಾತ ಕಾದಂಬರಿಕಾರರೂ ಆದ ಶ್ರೀ ನಿರಂಜನ ಅವರಿಂದ ಮತ್ತೆ ಕೆಲವು ಶ್ರೇಷ್ಠ ನಾಟಕಗಳನ್ನು ನಾವು ನಿರೀಕ್ಷಿಸಬಹುದಾಗಿದೆ.



# ದಾಸೋಹ ದೀಪ್ತಿ

ಲೇಖಕರು: ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ.ಚ.ನಿ., ಪ್ರಕಾಶಕರು: ಶ್ರೀಶೈಲ ಜಗದ್ಗುರು ನಿಡುಮಾಮಿಡಿ ನಿವಾಸ, ನಂ. ೪, ಹ.ಬ. ಸಮಾಜ ರಸ್ತೆ, ಬೆಂಗಳೂರು-೪, ಪುಟ ೧೨+೧೦೨+೮, ಬೆಲೆ: ೨.೦೦

**ಕ**ನ್ನಡದಲ್ಲಿ ನೂರಕ್ಕಿಂತಲೂ ಹೆಚ್ಚು ಗ್ರಂಥಗಳನ್ನು ರಚಿಸಿರುವ ಶ್ರೀ ಜಚನಿ ಅವರು "ದಾಸೋಹ ದೀಪ್ತಿ" ಎಂಬ ಗ್ರಂಥದಲ್ಲಿ ಅನ್ವೇಷಣ-ಅನುಸಂಧಾನ, ಸೋಹಂ ದಾಸೋಹಂ, ಅನ್ನದಾಸೋಹ, ಜ್ಞಾನದಾಸೋಹ, ತ್ರಿವಿಧ ದಾಸೋಹ, ದಾತೃತ್ವ, ದಾರಿಯಲ್ಲಿ ದಾಸೋಹ, ದಾಸೋಹ ದರ್ಶನ, ದಾಸೋಹಿಯ ನಿಲವು, ಹಕ್ಕಿನೋಟ –ಈ ಶಿರೋನಾಮೆಗಳಿಂದ ದಾಸೋಹದ ವಿವಿಧ ವಿಧಾನಗಳನ್ನು ವಿವರಿಸಿದ್ದಾರೆ.

ವೀರಶೈವ ಧರ್ಮದಲ್ಲಿ ದಾಸೋಹ ಒಂದು ಪ್ರಮುಖ ಘಟ್ಟ. ವಚನಕಾರರು ಈ ದಾಸೋಹವನ್ನು ಒತ್ತಿ ಹೇಳಿದ್ದಾರೆ. ಅದರಲ್ಲೂ ತ್ರಿವಿಧದಾಸೋಹ ಬಹುಮುಖ್ಯವಾದುದು. ಗುರುವಿಗೆ ತನುವನ್ನು ಲಿಂಗಕ್ಕೆ ಮನವನ್ನು ಜಂಗಮಕ್ಕೆ ಧನವನ್ನು ಅರ್ಪಿಸಿ ಜೀವನದ ಮುಕ್ತಿಮಾರ್ಗವನ್ನು ಕಂಡುಕೊಳ್ಳಬೇಕು. ಜೀವನಕ್ಕೆ ಯಾವ ಕಾಯಕವನ್ನು ಕೈಗೊಂಡರೂ ಆ ಕಾಯಕದಿಂದ ಬಂದ ಹಣದಲ್ಲಿ ದಾಸೋಹವನ್ನು ಮೊದಲು ಮಾಡಬೇಕು. ಈ ಎಲ್ಲ ಅಂಶಗಳನ್ನು ಪ್ರಕೃತ ಗ್ರಂಥದಲ್ಲಿ ಸಮಗ್ರವಾಗಿ ನಿರೂಪಿಸಲಾಗಿದೆ. ಪ್ರಾಚೀನ ವಚನಕಾರರ ವಚನಗಳನ್ನು ಸಂಸ್ಕೃತದ ಶ್ಲೋಕಗಳನ್ನು ಯಥೋಚಿತವಾಗಿ ಉದ್ಧರಿಸಿ ಗ್ರಂಥವನ್ನು ಅಧಿಕೃತವಾದುದನ್ನಾಗಿ ಮಾಡಿದ್ದಾರೆ. ವೀರಶೈವಧರ್ಮದಲ್ಲಿ ಅಪಾರ ಪರಿಶ್ರಮವನ್ನು ಪಡೆದಿರುವ ಶ್ರೀ ಜಚನಿ ಅವರಿಂದ ಇನ್ನೂ ಮಿಗಿಲಾದ ಕೃತಿಗಳನ್ನು ನಿರೀಕ್ಷಿಸಬಹುದಾಗಿದೆ. ಅಂತಹವುಗಳಲ್ಲಿ ವೀರಶೈವಧರ್ಮವನ್ನು ಕುರಿತು ಒಂದು ಅಧಿಕೃತ ಗ್ರಂಥವನ್ನು ಶ್ರೀಗಳವರು ಬರೆದಲ್ಲಿ ಸಮಾಜಕ್ಕೂ ಜನತೆಗೂ ಮಹತ್ತರ ಉಪಕಾರವಾಗುವುದೆಂದು ಹೇಳಬಯಸುತ್ತೇನೆ.

■

# ಮಹಾಲಿಂಗೇಂದ್ರ ವಿಜಯ

ಸಂಪಾದಕರು: ಡಾ. ಎಲ್. ಬಸವರಾಜು, ಎಂ.ಎ., ಡಿ.ಲಿಟ್, ಪ್ರಕಾಶಕರು: ಶ್ರೀಬೃಹನ್ಮಠ ಸಂಸ್ಥಾನ, ಚಿತ್ರದುರ್ಗ. ಪುಟಗಳು ೧೫೮+೪೬೮, ಬೆಲೆ: ರೂ. ೧೦.೦೦

---

ಶಾಸ್ತ್ರೀಯವಾದ ಗ್ರಂಥಸಂಪಾದನೆಗೆ ಹೆಸರಾಂತಿರುವ ಡಾ. ಎಲ್. ಬಸವರಾಜು ಅವರ ಮತ್ತೊಂದು ಸಂಪಾದನಾಕೃತಿ, ವೈಶಿಷ್ಟ್ಯಪೂರ್ಣವಾದ ಮಹಾಲಿಂಗೇಂದ್ರ ವಿಜಯ. ಇದು ಶೂನ್ಯಸಿಂಹಾಸನದ ಪರಂಪರೆಯ ಇತಿಹಾಸವನ್ನು ನಿರೂಪಿಸುವ ಪ್ರಥಮ ಕೃತಿ. ಸಂಪ್ರದಾಯಬದ್ಧ ಪ್ರಾಚೀನ ಛಂದೋಕೃತಿಗಳು ಕಣ್ಮರೆಯಾಗಿದ್ದ ಕಾಲದಲ್ಲಿ ಮೈವೆತ್ತ ಈ ವಾರ್ಧಕ ಷಟ್ಪದಿಯ ಕೃತಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಮೈಲಿಗಲ್ಲಿನಂತಿದೆ. ಹನ್ನೆರಡನೆಯ ಶತಮಾನದಲ್ಲಿ ಸ್ಥಾಪಿತವಾದ ಶೂನ್ಯಸಿಂಹಾಸನದ ಸಂಗತಿ ನಿರೂಪಿತವಾಗಿರುವುದು ಈ ಅಪೂರ್ವ ಕೃತಿಯಲ್ಲಿ ಮಾತ್ರ. ಕಲ್ಯಾಣದ ಕ್ರಾಂತಿಯಾದ ಮೇಲೆ ಶಿವಶರಣರು ಚೆನ್ನಬಸವಣ್ಣನ ನೇತೃತ್ವದಲ್ಲಿ ಉಳವಿಗೆ ಹೋಗಿ ಅಲ್ಲಿ ನೆಲೆನಿಂತರು. ಚೆನ್ನಬಸವಣ್ಣನವರು ಶೂನ್ಯಸಿಂಹಾಸನವನ್ನು ಏರಿದ ಮೇಲೆ ಯಾರು ಯಾರು ಈ ಶೂನ್ಯಸಿಂಹಾಸನದ ಪಟ್ಟಕ್ಕೆ ಬಂದರು ಎಂಬುದನ್ನು ಈ ಕೃತಿಯಲ್ಲಿ ವಿವರಿಸಲಾಗಿದೆ. ಈ ದೃಷ್ಟಿಯಿಂದ ಮಹಾಲಿಂಗೇಂದ್ರ ವಿಜಯ ಒಂದು ಉತ್ತಮ ದಾಖಲಾತಿ ಎಂದು ಹೇಳಬಹುದು.

ಮಹಾಲಿಂಗೇಂದ್ರ ವಿಜಯದ ಕರ್ತೃ ಮಹಾದೇವ. ಈ ಕೃತಿಯ ರಚನಾಕಾಲ ಕ್ರಿ.ಶ. ೧೮೭೦. ಕವಿಯ ವಿಷಯವಾಗಿ ಹೆಚ್ಚಿನ ಸಂಗತಿಗಳೇನೂ ತಿಳಿದುಬಂದಿಲ್ಲ. ತನ್ನ ತಂದೆ "ಪರಮೋತ್ಕರ್ಷ ಸಿದ್ಧಾಂತಮಂ ನೆಗಳಿಪೊಂದುರು ಶೀಲವುಳ್ಳ ಸೋಮೇಶ" ಎಂದು ಆತನು ಹೇಳಿಕೊಂಡಿದ್ದಾನೆ.

ಪುರಾಣಗಳ ಪಂಥಕ್ಕೆ ಸೇರಿದ ಮಹಾಲಿಂಗೇಂದ್ರ ವಿಜಯದಲ್ಲೂ ಪ್ರಾಚೀನ ಸಂಪ್ರದಾಯವನ್ನೇ ಅನೂಚಾನವಾಗಿ ಕವಿ ಅನುಸರಿಸಿಕೊಂಡು ಬಂದಿದ್ದಾನೆ. ಶಿವಪಾರ್ವತಿಯರ ಸಂಭಾಷಣೆಯಿಂದ ಕಥೆ ಪ್ರಾರಂಭವಾಗುತ್ತದೆ. ಈ ಕಾವ್ಯದ ಕಥಾನಾಯಕ ಮಹಾಲಿಂಗ ಜಗದ್ಗುರು. ಈ ಗುರುವಿನ ಕಥೆಯನ್ನು ಹೇಳುವ ಸಂದರ್ಭದಲ್ಲಿ ಆ ಪರಂಪರೆಗೆ ಸೇರಿದ ಹಿಂದಿನ ಗುರುಗಳ ಸಂಕ್ಷಿಪ್ತಚರಿತ್ರೆಯನ್ನು ವಿವರಿಸಲಾಗಿದೆ. ಕಲ್ಯಾಣ ಅಲ್ಲಿನ ಶಿವಶರಣನು, ಶೂನ್ಯಸಿಂಹಾಸನವನ್ನು ಏರಿದ ಜಗದ್ಗುರುಗಳು. ಈ ಜಗದ್ಗುರುಗಳ ಮಹಿಮೆಯನ್ನು ಸಾರುವಲ್ಲಿ ದೃಷ್ಟಾಂತವಾಗಿ ಕೊಡುವ ಹಲವಾರು ಶಿವಶರಣರ ಪ್ರಸಂಗಗಳು ಇವನ್ನು ಕವಿ ಸಮಯೋಚಿತವಾಗಿ ಹೃದಯಂಗಮವಾಗಿ ವಿವರಿಸಿದ್ದಾನೆ. ಶೂನ್ಯಸಿಂಹಾಸನದ ಅಧಿಕಾರಪಟ್ಟದ ಪರಂಪರೆ ಈ ರೀತಿಯಿದೆ. ಮೊದಲನೆಯ ಪಟ್ಟ ಚೆನ್ನಬಸವಣ್ಣ, ಎರಡನೆಯ ಪಟ್ಟ ತೋಂಟದ ಸಿದ್ಧಲಿಂಗ ಶಿವಯೋಗಿ, ಮೂರನೆಯ ಪಟ್ಟ ನಿರಕ್ಷರದ ಬೋಳುಬಸವಸ್ವಾಮಿ, ನಾಲ್ಕನೆಯ ಪಟ್ಟ ಸಿದ್ಧವೀರಸ್ವಾಮಿ, ಐದನೆಯ ಪಟ್ಟ ಗೂಳೂರು ಸಿದ್ಧವೀರಸ್ವಾಮಿ, ಆರನೆಯ ಪಟ್ಟ ಗಗನದ ಸ್ವಾಮಿ, ಏಳನೆಯ ಪಟ್ಟ ಕಟ್ಟಿಗೆಹಳ್ಳಿ ಸ್ವಾಮಿ, ಎಂಟನೆಯ ಪಟ್ಟ ಮುರಿಗೇಂದ್ರ ರಾಜೇಂದ್ರಸ್ವಾಮಿ, ಒಂಬತ್ತನೆಯ ಪಟ್ಟ ಇಮ್ಮಡಿ ಗುರುಸಿದ್ಧಸ್ವಾಮಿ, ಹತ್ತನೆಯ ಪುಟ್ಟ ಸ್ವಾದಿಯ ಚೆನ್ನಬಸವಣ್ಣ ಸ್ವಾಮಿ, ಹನ್ನೊಂದನೆಯ ಪಟ್ಟ ಸಿರಹಟ್ಟಿ ಸಿದ್ಧಲಿಂಗಸ್ವಾಮಿ, ಹನ್ನೆರಡನೆಯ ಪಟ್ಟ ಗುರುಪಾದ ದೇಶಿಕರು, ಹದಿಮೂರನೆಯ ಪಟ್ಟ ಮೂರುಸಾವಿರದ ಗುರುಪಾದ ದೇಶಿಕರು, ಹದಿನಾಲ್ಕನೆಯ ಪಟ್ಟ ಮೂರುಸಾವಿರದ ಸಿದ್ಧಲಿಂಗಸ್ವಾಮಿ, ಹದಿನೈದನೆಯ ಪಟ್ಟ ಒಪ್ಪತ್ತಿನ ಚೆನ್ನವೀರಸ್ವಾಮಿ, ಹದಿನಾರನೆಯ ಪಟ್ಟ ವ್ಯಾಕರಣದ ಸಿದ್ಧಲಿಂಗಸ್ವಾಮಿ, ಹದಿನೇಳನೆಯ ಪಟ್ಟ ನೈಘಂಟಿನ ಸಿದ್ಧಬಸವಸ್ವಾಮಿ, ಹದಿನೆಂಟನೆಯ ಪಟ್ಟ ಸಣ್ಣಬರಹದ ರಾಚವಟಿ ಸ್ವಾಮಿ, ಹತ್ತೊಂಬತ್ತನೆಯ

ಪಟ್ಟ ಸಾವಳಿಗೆ ಗುರುಶಾಂತಸ್ವಾಮಿ, ಇಪ್ಪತ್ತನೆಯ ಪಟ್ಟ ಸಣ್ಣಪಾದದ ಚೆನ್ನವೀರ ಸ್ವಾಮಿಗಳು, ಇಪ್ಪತ್ತೊಂದನೆಯ ಪಟ್ಟ ಕಥಾನಾಯಕರಾದ ಮಹಲಿಂಗ ಜಗದ್ಗುರು, ಇಪ್ಪತ್ತೆರಡನೆಯ ಪಟ್ಟ ಪಟ್ಟದ ರುದ್ರಸ್ವಾಮಿ. ಇಲ್ಲಿಗೆ ಕಾವ್ಯ ಮುಕ್ತಾಯವಾಗುತ್ತದೆ. ಪಟ್ಟದ ರುದ್ರಸ್ವಾಮಿಗಳಾದ ಮೇಲೆ ಬ್ಯಾಡಗಿ ಮುಪ್ಪಿನ ಸ್ವಾಮಿಗಳು, ಜಯದೇವ ಸ್ವಾಮಿಗಳು, ಜಯವಿಭವ ಸ್ವಾಮಿಗಳು, ಮಲ್ಲಿಕಾರ್ಜುನ ಸ್ವಾಮಿಗಳು ಇವರ ಮಾಹಿತಿಯನ್ನು ಡಾ. ಎಲ್. ಬಸವರಾಜು ಅವರು ಸಂಗ್ರಹಿಸಿ ಪೀಠಿಕೆಯಲ್ಲಿ ನಿರೂಪಿಸಿದ್ದಾರೆ.

ಗುರುಮಠಗಳು ಧಾರ್ಮಿಕವಾಗಿ, ಸಾಮಾಜಿಕವಾಗಿ ಎಂತಹ ಮಹತ್ತರ ಪಾತ್ರಗಳನ್ನು ನಿರ್ವಹಿಸುತ್ತಿದ್ದುವು ಎಂಬುದಕ್ಕೆ ಈ ಕಾವ್ಯ ಸಾಕ್ಷಿಯಾಗಿದೆ. ಅಷ್ಟೇ ಅಲ್ಲ. ರಾಜಕೀಯವಾಗಿಯೂ ಈ ಮಠಗಳು ಎಷ್ಟು ಪ್ರಾಬಲ್ಯವನ್ನು ಪಡೆದಿದ್ದುವು ಎಂಬ ವಿವರಗಳು ವ್ಯಕ್ತವಾಗಿವೆ. ಚಿತ್ರದುರ್ಗದ ಪಾಳೆಯ ನಾಯಕರ ಏಳುಬೀಳುಗಳಿಗೂ ಅಳಿವು ಉಳಿವುಗಳಿಗೂ ಈ ಗುರುಗಳು ಕಾರಣೀಭೂತರಾಗಿದ್ದಾರೆ. ಪಟ್ಟಕ್ಕೆ ಬಂದ ಈ ಜಗದ್ಗುರುಗಳು ನಿರ್ವಹಿಸುತ್ತಿದ್ದ ಲೋಕಕಲ್ಯಾಣಾರ್ಥವಾದ ಕಾರ್ಯಗಳು, ಈ ಕಾರ್ಯಗಳಿಗೆ ಅಡ್ಡಿ ತರುತ್ತಿದ್ದ ದುಷ್ಟಶಕ್ತಿಗಳು, ಅವನ್ನು ದಮನಮಾಡುತ್ತಿದ್ದ ಸ್ವಾಮಿಗಳ ಅಂತಶ್ಶಕ್ತಿ ಈ ಮುಂತಾದ ಅಂಶಗಳು ಈ ಕಾವ್ಯದಲ್ಲಿ ವಿವರಿಸಲ್ಪಟ್ಟಿವೆ.

ಮಹಾಲಿಂಗವಿಜಯದ ಕರ್ತೃ ಸಂಸ್ಕೃತ ಕನ್ನಡ ಭಾಷೆಗಳೆರಡರಲ್ಲೂ ಅದ್ವಿತೀಯವಾದ ಪಾಂಡಿತ್ಯವನ್ನು ಪಡೆದಿದ್ದನು. ಸುಪ್ರೌಢವಾದ ಈ ಕಾವ್ಯವನ್ನು ಅವಲೋಕಿಸಿದವರಿಗೆ ಮಹಾದೇವನ ಉಭಯ ಭಾಷಾಪಾಂಡಿತ್ಯ, ಕಥಾನಕಶಕ್ತಿ, ಸಾಮರ್ಥ್ಯಗಳು ಮನದಟ್ಟಾಗುತ್ತವೆ. ಇತಿಹಾಸ ಧರ್ಮನೀತಿಗಳ ತ್ರಿವೇಣೀ ಸಂಗಮ ಈ ಮಹಾಲಿಂಗೇಂದ್ರ ವಿಜಯ. ಇತಿಹಾಸ ನಿರೂಪಣೆಯ ಮೂಲಕ ಧರ್ಮಪ್ರಚಾರವನ್ನೂ, ಧರ್ಮಪ್ರಚಾರದ ಮೂಲಕ ನೀತಿಬೋಧೆಯನ್ನೂ ಮಾಡಿ ಕವಿ ಕೃತಾರ್ಥನಾಗಿದ್ದಾನೆ. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಚಂಪೂ, ಷಟ್ಪದಿ, ಸಾಂಗತ್ಯ ಈ ಕಾವ್ಯಗಳ ಕಾಲ ಮರೆತುಹೋಗಿದ್ದ ಸಮಯದಲ್ಲಿ ೩೧ ಸಂಧಿ ೨೦೩೪ ವಾರ್ಧಕ ಷಟ್ಪದಿಗಳಲ್ಲಿ ಈ ಬೃಹತ್ಕಾವ್ಯವನ್ನು ರಚಿಸಿದ ಶ್ರೇಯಸ್ಸು ಮಹಾದೇವನಿಗೆ ಪ್ರಾಪ್ತವಾಗಿದೆ. ಈ ದೃಷ್ಟಿಯಿಂದ ಇದೊಂದು ಅಪೂರ್ವ ವಿಶಿಷ್ಟ ಕೃತಿ.

ಈ ಕಾವ್ಯದ ಸಂಪಾದಕರು ಪ್ರಾಚೀನ ಕಾವ್ಯಗಳ ಸಂಸ್ಕರಣ ಕಾರ್ಯದಲ್ಲಿ ನಿಷ್ಣಾತರಾದುದರಿಂದ, ಅತ್ಯುತ್ತಮವಾಗಿ ಈ ಕೃತಿಯನ್ನು ಸಂಪಾದಿಸಿದ್ದಾರೆ. ಅಪ್ರಕಟಿತ ಈ ಕೃತಿಯ ಹಸ್ತಪ್ರತಿಗಳು ದುರ್ಲಭವಾದರೂ ಲಭ್ಯವಾದ ಏಕೈಕ ಹಸ್ತಪ್ರತಿಯಿಂದಲೇ ಶಾಸ್ತ್ರೀಯವಾಗಿ ಸಂಪಾದಿಸಿದ್ದಾರೆ. ಈ ಕಾವ್ಯದ ಪೀಠಿಕೆಯಲ್ಲಿ ಡಾ. ಎಲ್. ಬಸವರಾಜು ಅವರು ಹಲವಾರು ಅತ್ಯಮೂಲ್ಯವಾದ ವಿಷಯಗಳನ್ನು ಪ್ರತಿಪಾದಿಸಿದ್ದಾರೆ. ೧೫೮ ಪುಟಗಳ ದೀರ್ಘವೂ ಸಮಗ್ರವೂ ಆದ ಈ ಪೀಠಿಕೆಯಲ್ಲಿ ಕಾವ್ಯದ ಕಥಾಸಾರವನ್ನೆಲ್ಲ ಬಟ್ಟಿ ಹಿಡಿದಂತೆ ಅತ್ಯಂತ ಆಕರ್ಷಣೀಯವಾದ ಶೈಲಿಯಲ್ಲಿ ನಿರೂಪಿಸಿದ್ದಾರೆ. ಅವರ ಶೈಲಿಯಲ್ಲಿ ಒಂದು ಗತ್ತು ಇದೆ. ಆದ್ದರಿಂದಲೇ ಅದಕ್ಕೆ ವಿಶೇಷ ಕಿಮ್ಮತ್ತು ಬಂದಿದೆ. ನಿರ್ಭೀತ ನಿರ್ದಾಕ್ಷಿಣ್ಯ ನಿಷ್ಪಕ್ಷಪಾತವಾದ ಬರವಣಿಗೆ ಡಾ. ಎಲ್. ಬಸವರಾಜು ಅವರದು. ಈ ಪೀಠಿಕೆ ಕಾವ್ಯಕ್ಕೆ ಪ್ರವೇಶದ್ವಾರದಂತಿದೆ.

ಸುಮಾರು ೬೫೦ ಪುಟಗಳಿರುವ ಈ ಕಾವ್ಯ ಉತ್ತಮ ಕಾಗದದ ಮೇಲೆ ಸುಂದರವಾಗಿ ಅಚ್ಚಾಗಿ ಕ್ಯಾಲಿಕೋ ರಟ್ಟಿನಿಂದ ಕೂಡಿದ್ದರೂ ಇದಕ್ಕೆ ಇಟ್ಟಿರುವ ಬೆಲೆ ಕೇವಲ ಹತ್ತು ರೂಪಾಯಿಗಳು. ಈ ಕಾವ್ಯದ ಪ್ರಕಾಶಕರು ಧರ್ಮಪ್ರಚಾರಕ್ಕಾಗಿಯೇ ಈ ಕಾವ್ಯವನ್ನು ಪ್ರಕಟಿಸಿದಂತಿದೆ.

ಈ ಕಾವ್ಯದ ಸಂಪಾದಕರು ಪದ್ಯಗಳನ್ನು ಓದುವಾಗ ಅರ್ಥವಾಗಲಿ ಎಂಬ ಉದ್ದಿಶ್ಯದಿಂದ ಪದ್ಯಗಳಿಗೆ ವಿವರಣ ಚಿಹ್ನೆಗಳನ್ನು ಬಳಸಿದ್ದಾರೆ. ಆದರೆ ಪ್ರಾಚೀನ ಕಾವ್ಯಗಳಲ್ಲಿ ವಿವರಣ ಚಿಹ್ನೆಗಳನ್ನು ಬಳಸುವುದಾಗಲಿ ಅಲ್ಲಲ್ಲಿ ಶಬ್ದಗಳನ್ನು ಬಿಡಿಸಿ ತೋರಿಸುವುದಾಗಲಿ ಅನವಶ್ಯ ಎಂಬುದು ನಮ್ಮ ಅಭಿಪ್ರಾಯ. ಕೆಲವೆಡೆ ಮುದ್ರಣದೋಷಗಳೂ ಮೈತೋರಿವೆ. ಮುಂದಿನ ಮುದ್ರಣದಲ್ಲಿ ಇವನ್ನು ಸರಿಪಡಿಸಿಕೊಳ್ಳಬಹುದು. ಒಟ್ಟಿನಲ್ಲಿ ಈವರೆಗೂ ಅಪ್ರಕಟಿತವಾಗಿದ್ದ ಶೂನ್ಯಸಿಂಹಾಸನದ ಪರಂಪರೆಯ ಇತಿಹಾಸ ನಿರೂಪಣೆಯ, ಮಹಾಲಿಂಗ ಜಗದ್ಗುರುವಿನ ಜೀವನ ಚರಿತ್ರೆಯ ಜೊತೆಗೆ ವೀರಶೈವಧರ್ಮ ಆಚರಣೆಯನ್ನೂ ಪ್ರತಿಪಾದಿಸುವ, ಅನೇಕ ಶಿವಶರಣರ ಕಥೆಗಳನ್ನೊಳಗೊಂಡಿರುವ- ವಾರ್ಧಕ ಷಟ್ಪದಿಯ ಈ ಮಹತ್ಕೃತಿ ಸರ್ವರ ಅವಲೋಕನೆಗೂ ಅರ್ಹವಾಗಿದೆ. ಇಂತಹ ಕೃತಿಯ ಸಂಪಾದಕರೂ ಪ್ರಕಾಶಕರೂ ಅಭಿನಂದನಾರ್ಹರಾಗಿದ್ದಾರೆ.

■

# ನಾಗಚಂದ್ರ

ಲೇಖಕರು: ಆರ್.ಎಸ್. ರಾಮರಾವ್, ಕೆ.ಎಸ್. ಧರಣೇಂದ್ರಯ್ಯ, ವಿ.ಜಿ. ಕುಲಕರ್ಣಿ, ಸಂಪಾದಕರು: ವಿ. ಸೀತಾರಾಮಯ್ಯ, ಪ್ರಕಾಶಕರು: ಐ.ಬಿ.ಎಚ್. ಪ್ರಕಾಶನ, ಗಾಂಧಿನಗರ, ಬೆಂಗಳೂರು–೫೬೦೦೦೯, ಪುಟಗಳು vii+೨೦೪, ಬೆಲೆ: ರೂ.೧೫.

---

ಹನ್ನೆರಡನೆಯ ಶತಮಾನದ ಆದಿಭಾಗದಲ್ಲಿ ಆಗಿಹೋದ ನಾಗಚಂದ್ರ ತನ್ನ ಅನುಪಮ ಕೃತಿಗಳಿಂದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಮರನಾಗಿದ್ದಾನೆ. ಜೈನಕವಿಗಳಲ್ಲಿ ಈತನು ಅತ್ಯಂತ ಪ್ರಮುಖನಾದವನು. ಈತನು ಪಂಪರಾಮಾಯಣ ಅಥವಾ ರಾಮಚಂದ್ರಚರಿತಪುರಾಣ, ಮಲ್ಲಿನಾಥಪುರಾಣ ಎಂಬ ಎರಡು ಚಂಪೂ ಕಾವ್ಯಗಳನ್ನು ಬರೆದಿದ್ದಾನೆ. ಅಲ್ಲದೆ ಜಿನಮುನಿತನಯ, ಜಿನಾಕ್ಷರಮಾಲೆ ಎಂಬ ಮತ್ತೆರಡು ಕೃತಿಗಳನ್ನೂ ಬರೆದಿರುವನೆಂಬ ಪ್ರತೀತಿಯಿದೆ; ಆದರೆ ಇವು ನಾಗಚಂದ್ರ ಕೃತವಲ್ಲವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈತನು ಬಿಜಾಪುರದ ಒಂದು ಶಾಸನವನ್ನೂ ಬರೆದಿರಬಹುದು ಎಂಬ ಅಭಿಪ್ರಾಯವೂ ಇದೆ.

ನಾಗಚಂದ್ರ ಒಂದು ಲೌಕಿಕ ಕಾವ್ಯವನ್ನೂ ಮತ್ತೊಂದು ಆಗಮಿಕ ಕಾವ್ಯವನ್ನೂ ಬರೆದಿದ್ದಾನೆ. ಪಂಪ ಹೇಳಿದಂತೆ ಧರ್ಮವನ್ನೂ, ಕಾವ್ಯಧರ್ಮವನ್ನೂ, ತನ್ನ ಕೃತಿಗಳಲ್ಲಿ ಮೆರೆದಿದ್ದಾನೆ. ಈತನ ರಾಮಾಯಣ ಜೈನಸಂಪ್ರದಾಯಕ್ಕನುಸಾರವಾದುದು. ಕನ್ನಡದಲ್ಲಿ ಜೈನರಾಮಾಯಣಗಳನ್ನು ಬರೆದವರಲ್ಲಿ ಬಹುಶಃ ನಾಗಚಂದ್ರನೇ ಮೊದಲಿಗನೆನ್ನಬಹುದು. ಈತನ ರಾಮಾಯಣ ಶಾಸ್ತ್ರದೃಷ್ಟಿಯಿಂದಲ್ಲದೆ ಕಾವ್ಯದೃಷ್ಟಿಯಿಂದಲೂ ಅದ್ವಿತೀಯವಾದುದು. ನಾಗಚಂದ್ರನ ಕವಿತಾಶಕ್ತಿ ಅದ್ಭುತವಾದುದು; ಕಮನೀಯವಾದುದು; ರಮಣೀಯವಾದುದು.

ನಾಗಚಂದ್ರನಿಗೆ ಪಂಪಕವಿಯ ಬಗೆಗೆ ಅಪಾರವಾದ ಗೌರವವಿರುವಂತೆ ತೋರುತ್ತದೆ. ಆದ್ದರಿಂದಲೇ ತನ್ನನ್ನು ಅಭಿನವ ಪಂಪನೆಂದೂ ಕರೆದುಕೊಂಡಿದ್ದಾನೆ. ಈತನಿಗೆ ಸಾಹಿತ್ಯವಿದ್ಯಾಧರ, ಭಾರತೀಕರ್ಣಪೂರ, ಕವಿತಾಮನೋಹರ, ಚತುರಕವಿ ಜನಾಸ್ಥಾನರತ್ನ ಪ್ರದೀಪ, ಕಾವ್ಯರಸಾರ್ಣವ, ಪೂರ್ಣಚಂದ್ರ, ಸಾಹಿತ್ಯಸರ್ವಜ್ಞ, ಸೂಕ್ತಿಮುಕ್ತಾವತಂಸ – ಮುಂತಾದ ಬಿರುದುಗಳಿವೆ. ಅಷ್ಟೇ ಅಲ್ಲ, ಈತನು:

ಜಿನಪತಿಸಭೆಯೊಳ್ ಪೂಜ್ಯಂ
ಮುನಿಪತಿಸಭೆಯೊಳ್ ಪದಾರ್ಥನಿಪುಣಂ ವಿದ್ವ–
ಜ್ಜನ ಸಭೆಯೊಳ್ ಮಾನಂ ಸ–
ಜ್ಜನ ಸಭೆಯೊಳ್ ಚಾರುಚರಿತನ್ನಭಿನವಪಂಪಂ ॥ (ಮಲ್ಲಿನಾಥ ಪುರಾಣ ೧–೪೧)

ಈ ರೀತಿ ಹೇಳಿಕೊಂಡಿದ್ದಾನೆ. ನಾಗಚಂದ್ರನನ್ನು ತರುವಾಯದ ಅನೇಕ ಕವಿಗಳು ಮುಕ್ತಕಂಠದಿಂದ ಸ್ತುತಿಸಿದ್ದಾರೆ.

ನಾಗಚಂದ್ರ ಕವಿಯ ಕಾಲ, ಕೃತಿಗಳು ಇವನ್ನು ಕುರಿತು ಶ್ರೀ ಆರ್.ಎಸ್. ರಾಮರಾಯರು ಬರೆದಿರುವ ಮೊದಲ ಲೇಖನದಲ್ಲಿ ವಿದ್ವಾಂಸರ ಅಭಿಪ್ರಾಯಗಳನ್ನೆಲ್ಲಾ ವಿವರವಾಗಿ ಪರಿಶೀಲಿಸಲಾಗಿದೆ. ನಾಗಚಂದ್ರನ ಕಾಲ, ದೇಶ, ವರ್ತಮಾನಗಳ ಬಗೆಗೆ ಶ್ರೀಯುತರು ಆಳವಾದ ವ್ಯಾಸಂಗ ನಡೆಸಿ, ತುಂಬ ಉಪಯುಕ್ತವಾದ ಲೇಖನವನ್ನು ಬರೆದಿದ್ದಾರೆ.

ಈ ಗ್ರಂಥದ ಎರಡನೆಯ ಲೇಖನದಲ್ಲಿ ದಿವಂಗತ ಕೆ.ಎಸ್. ಧರಣೇಂದ್ರಯ್ಯನವರು ಮಲ್ಲಿನಾಥಪುರಾಣವನ್ನು ಕುರಿತು ಹೃದಯಂಗಮವಾದ ವಿವೇಚನೆ ಮಾಡಿದ್ದಾರೆ. ಆ ಕಾವ್ಯದ ಸಾರಸರ್ವಸ್ವವನ್ನೂ ಭಟ್ಟಿಯಿಳಿಸಿಕೊಟ್ಟಿದ್ದಾರೆ. ನಿಷ್ಪಕ್ಷಪಾತವಾದ ವಿಮರ್ಶೆಯನ್ನು ಮಾಡಿದ್ದಾರೆ. ಅಲ್ಲದೆ ಆಗಮ ಧರ್ಮಭಾಗಗಳಿಗೆ ಸಂಬಂಧಿಸಿದ ಶಬ್ದಗಳನ್ನೂ ಪಾರಿಭಾಷಿಕ ಶಬ್ದಗಳನ್ನೂ ಕೊಟ್ಟು ಅವುಗಳ ಅರ್ಥವನ್ನೂ ನಿರೂಪಿಸಿದ್ದಾರೆ. ಇದರಿಂದ ಶ್ರೀಯುತರಿಗೆ ಜೈನಧರ್ಮದಲ್ಲಿರುವ ಅಪಾರಜ್ಞಾನ ವ್ಯಕ್ತವಾಗುತ್ತದೆ.

ರಾಮಚಂದ್ರಚರಿತ ಪುರಾಣವನ್ನು ಕುರಿತು ಶ್ರೀ ವಿ.ಜಿ. ಕುಲಕರ್ಣಿ ಅವರು ಒಂದು ಉತ್ತಮ ಪ್ರಬಂಧವನ್ನು ಬರೆದಿದ್ದಾರೆ. ಈ ಕಾವ್ಯಕ್ಕೆ ಮೂಲ, ನಾಗಚಂದ್ರ ಮಾಡಿಕೊಂಡಿರುವ ಮಾರ್ಪಾಟುಗಳು, ಈ ಕಾವ್ಯದ ವೈಶಿಷ್ಟ್ಯ, ದುರಂತರಾವಣನ ಪಾತ್ರ ಇವೇ ಮೊದಲಾದ ಅಂಶಗಳನ್ನು ಕುರಿತು ವ್ಯಾಖ್ಯಾನಿಸಿದ್ದಾರೆ. ಉತ್ತಮ ಭಾಗಗಳನ್ನು ಎತ್ತಿತೋರಿಸಿದ್ದಾರೆ. ಈ ಕಾವ್ಯದ ಒಂದು ತುಲನಾತ್ಮಕ ಅಭ್ಯಾಸವನ್ನು ನಡೆಸಿದ್ದಾರೆ.

ಈ ಗ್ರಂಥದ 'ಸಮೀಕ್ಷೆ'ಯಲ್ಲಿ ನಾಗಚಂದ್ರನ ಕಾವ್ಯಗಳನ್ನು ಸಿಂಹಾವಲೋಕನ ಮಾಡಲಾಗಿದೆ. ಇದು ಈ ಗ್ರಂಥದ ಒಂದು ಸಾರವತ್ತಾದ ಭಾಗ, ಈ ಕವಿಕಾವ್ಯಮಾಲೆಯ ಸಂಪಾದಕರಾದ ಪ್ರೊ. ವಿ. ಸೀತಾರಾಮಯ್ಯನವರು ತಮ್ಮ ಅನೇಕ ವರ್ಷಗಳ ಅನುಭವ, ಪರಿಶ್ರಮಗಳಿಂದ ಈ ಪ್ರಾಚೀನ ಕಾವ್ಯಗಳ ಒಂದು ಸಾರಾಸಾರ ವಿವೇಚನೆಯನ್ನು ನೀಡುತ್ತಿರುವುದು ಕನ್ನಡಿಗರಿಗೆ ತುಂಬ ಪ್ರಯೋಜನಕರವಾಗಿದೆ. ಇದರಂತೆಯೇ ಇನ್ನುಳಿದ ಪ್ರಾಚೀನ ಕವಿಗಳ ಬಗ್ಗೆಯೂ ಸಮೀಕ್ಷೆ ಶೀಘ್ರದಲ್ಲಿಯೇ ನಡೆಸಲಿ ಎಂದು ಹಾರೈಸುತ್ತೇವೆ.

ಬೆಂಗಳೂರಿನ ಐಬಿಎಚ್ ಪ್ರಕಾಶನ ಸಂಸ್ಥೆಯವರು ಈ ಕವಿಕಾವ್ಯ ಪರಂಪರೆಯನ್ನು ಪ್ರಾರಂಭಿಸಿ ಈಗಾಗಲೇ ಕೆಲವಾರು ಗ್ರಂಥಗಳನ್ನು ಪ್ರಕಟಿಸಿ ಕನ್ನಡ ನಾಡಿಗೆ, ಜನತೆಗೆ ಮಹೋಪಕಾರವನ್ನು ಮಾಡುತ್ತಿದ್ದಾರೆ. ಈ ತೆರನ ಗ್ರಂಥಗಳಿಂದ ಯಾವೊಬ್ಬ ಕವಿಯನ್ನೂ ಆತನ ಕಾವ್ಯಗಳ ವಿಮರ್ಶೆಯನ್ನೂ ಒಂದೆಡೆ ಪಡೆದುಕೊಳ್ಳುವ ಸೌಲಭ್ಯ ಪ್ರಾಪ್ತವಾದಂತಾಗಿದೆ. ಹಲವಾರು ಜನ ವಿದ್ವಾಂಸರು ಒಂದೆಡೆ ಕುಳಿತು ಕೈಗೊಳ್ಳಬೇಕಾದ ಕಾರ್ಯವನ್ನು ಐಬಿಎಚ್ ಪ್ರಕಾಶನದವರು ಏಕಾಂಗಿ ಸಾಹಸಿಗಳಾಗಿ ನೆರವೇರಿಸುತ್ತಿರುವುದು ತುಂಬ ಅಭಿನಂದನೀಯವಾದುದು.

ಸುಧಾ ವಾರಪತ್ರಿಕೆ, ೨೬ ಡಿಸೆಂಬರ್ ೧೯೭೬



## ವೀರೇಶ ಚರಿತೆ

ಕವಿ–ರಾಘವಾಂಕ : ಸಂಪಾದಕರು: ಪಂಡಿತರತ್ನಂ ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರೀ. ಪ್ರಕಾಶಕರು: ಶರಣ ಸಾಹಿತ್ಯ ಕಾರ್ಯಾಲಯ, ಬೆಂಗಳೂರು–೨, ಪುಟಗಳು ೨+೨೨+೪೪+೬೮+೮, ದ್ವಿತೀಯ ಮುದ್ರಣ, ಬೆಲೆ: ರೂ. ೨.೦೦

---

**ಕ**ನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕ್ರಾಂತಿಕಾರಕ ಕವಿಗಳೆಂದು ಹೆಸರಾಂತಿರುವವರು ಹರಿಹರ ಮತ್ತು ರಾಘವಾಂಕ. ರಗಳೆಗೆ ಹರಿಹರ ಆದ್ಯಪ್ರವರ್ತಕನಾದರೆ ವಿವಿಧ ಷಟ್ಪದಿಗಳಿಗೆ ಆದ್ಯಪ್ರವರ್ತಕ ರಾಘವಾಂಕ. ಹರಿಶ್ಚಂದ್ರಕಾವ್ಯ, ಸೋಮನಾಥ ಚಾರಿತ್ರ, ಸಿದ್ಧರಾಮ ಚಾರಿತ್ರ, ವೀರೇಶ ಚರಿತೆ, ಶರಭ ಚರಿತ್ರೆ ಮತ್ತು ಹರಿಹರ ಮಹತ್ವ ಈತನ ಕೃತಿಗಳು. ವೀರೇಶಚರಿತೆ ಉದ್ದಂಡಷಟ್ಪದಿಯಲ್ಲಿದೆ. ವೀರಭದ್ರನಿಂದ ದಕ್ಷಾಧ್ವರ ನಾಶವಾದುದೇ ಈ ಕಾವ್ಯದ ಕಥಾವಸ್ತು. ರಾಘವಾಂಕ ಪ್ರತಿಭಾನ್ವಿತ ಕವಿ. ಸಂಸ್ಕೃತ ಕನ್ನಡ ಭಾಷೆಗಳೆರಡರಲ್ಲೂ ಅದ್ವಿತೀಯ ಪಾಂಡಿತ್ಯವನ್ನು ಹೊಂದಿ ಕವಿಶರಭ ಭೇರುಂಡನೆಂಬ ಬಿರುದನ್ನು ಪಡೆದಿದ್ದವನು. ಈತನ ಕೃತಿರತ್ನಗಳನ್ನು ಅಭ್ಯಸಿಸಿದವರಿಗೆ ಈ ಅಂಶಗಳು ಸ್ಪಷ್ಟವಾಗದೆ ಇರವು.

ಪ್ರಕೃತ ಮುದ್ರಣವನ್ನು ಮೂರು ಹಸ್ತಪ್ರತಿಗಳ ನೆರವಿನಿಂದ ಸಂಸ್ಕರಿಸಲಾಗಿದೆ. ಆದರೂ ಕೆಲವೆಡೆ ಕವಿಯ ಮೂಲಪಾಠವನ್ನು ಕಂಡುಹಿಡಿಯುವುದು ದುಸ್ತರವಾಗಿದೆ. ಇನ್ನು ಹೆಚ್ಚಿನ ಪ್ರತಿಗಳು ಸಿಕ್ಕಿದಲ್ಲಿ ಈ ಕಾವ್ಯದ ಮತ್ತೊಂದು ಅಧಿಕೃತಮುದ್ರಣವನ್ನು ಹೊರತರುವುದು ಅನಿವಾರ್ಯವಾಗಿದೆ.

ಈ ಗ್ರಂಥದ ಸಂಪಾದಕರು ಮೊದಲಲ್ಲಿ ಕವಿಕಾವ್ಯ ವಿಚಾರವಾಗಿ ಸುದೀರ್ಘವಾಗಿ ಬರೆದಿದ್ದಾರೆ. ಗ್ರಂಥದಲ್ಲಿ ಕೊನೆಯಲ್ಲಿ ಹರಿಹರನ ವೀರಭದ್ರದೇವರ ರಗಳೆಯನ್ನು ವೀರೇಶಚರಿತೆಯ ಕಥಾಸಾರವನ್ನು ವಿಶೇಷ ವಿಚಾರಗಳನ್ನು ಅರ್ಥಕೋಶವನ್ನು ಕೊಟ್ಟಿರುವುದು ತುಂಬಾ ಉಪಯುಕ್ತವಾಗಿದೆ. ಈ ಗ್ರಂಥದ ಸಂಪಾದಕರು ಅಭಿನಂದನಾರ್ಹರು. ■

# ವೀರಶೈವ ದರ್ಶನ

ಪ್ರೊ. ಸ.ಸ. ಮಾಳವಾಡ, ಶರಣ ಪ್ರಕಾಶನ, ಧಾರವಾಡ-೭, ಪುಟಗಳು xviii+೧೫೦, ಪ್ರಥಮ ಮುದ್ರಣ ೧೯೮೦.
ಬೆಲೆ: ರೂ. ೧೦

**ಭ**ರತಖಂಡದ ಪ್ರಾಚೀನದರ್ಶನಗಳಲ್ಲಿ ವೀರಶೈವದರ್ಶನ ಅತ್ಯಂತ ಪ್ರಮುಖವಾದುದು. ಆಸೇತು ಹಿಮಾಚಲ ಪರ್ಯಂತ ಈ ಧರ್ಮ ಚಿರಂತನವಾಗಿದೆ. ಕಾಲಕಾಲಕ್ಕೆ ಈ ವೀರಶೈವಧರ್ಮ ವಿಕಾಸವನ್ನು ಹೊಂದುತ್ತ ವ್ಯಾಪಕತೆಯನ್ನೂ ಜನಪ್ರಿಯತೆಯನ್ನೂ ಪಡೆದುಕೊಂಡು ಬಂದಿದೆ. ವಚನಕಾರರು ಅದರಲ್ಲೂ ಜಗಜ್ಯೋತಿ ಬಸವೇಶ್ವರರು ಈ ಧರ್ಮಕ್ಕೆ ಒಂದು ಹೊಸತಿರುವನ್ನು ಕೊಟ್ಟು ಸರ್ವಜನಾದರಣೀಯವಾಗಿ ಮಾಡಿದರು. ಭರತಖಂಡದ ಅಸಂಖ್ಯಾತ ಮಂದಿ ಈ ಧರ್ಮದ ಅನುಯಾಯಿಗಳಾದರು.

ಧರ್ಮ ಪ್ರಗತಿಗಾಮಿಯಾದುದು. ಅದು ಯಾವುದೇ ಸ್ಥಿರಸಿದ್ಧಾಂತಗಳ ಮೇಲೆ ಏಕರೂಪಿತವಾಗಿರುವುದಿಲ್ಲ. ಕಾಲಕಾಲಕ್ಕೆ ವಿಕಾಸ ಹೊಂದುತ್ತಲೇ ಇರುತ್ತದೆ. ಇದು ಯಾವುದೇ ಜೀವಂತ ಧರ್ಮದ ಕುರುಹಾಗಿರುತ್ತದೆ.

ಧರ್ಮ ಸುಲಭಗಮ್ಯವಾದುದಲ್ಲ. ಇದನ್ನು ಅರ್ಥೈಸುವುದೂ ಸರ್ವಜನಾದರಣೀಯವನ್ನಾಗಿ ಮಾಡುವುದೂ ಕಷ್ಟತರವಾದುದು. ಅದರಲ್ಲೂ ಒಂದು ಧರ್ಮವನ್ನು ಮತ್ತೊಂದು ಧರ್ಮದವರಿಗೆ ಮನಂಬೊಗುವಂತೆ ನಿರೂಪಿಸುವುದು ಸಾಹಸದ ಕಾರ್ಯವೇ ಸರಿ.

ವೀರಶೈವದರ್ಶನ ತನ್ನದೇ ಆದ ವೈಶಿಷ್ಟ್ಯವನ್ನುಳ್ಳದಾಗಿದೆ. ವೇದಾಗಮೋಪನಿಷತ್ತುಗಳಲ್ಲಿ ಈ ಧರ್ಮದ ರೂಪರೇಷೆಗಳು ಕಂಡುಬರುತ್ತವೆ. ಅವುಗಳನ್ನು ಆಧರಿಸಿ ವಚನಸಾಹಿತ್ಯದ ಮೂಲಕ ಇದನ್ನು ಪ್ರಚುರಪಡಿಸಲು ಅನೇಕರು ಯತ್ನಿಸಿದ್ದಾರೆ. ಪ್ರಸ್ತುತ ವಚನಕಾರರು ಕಂಡುಕೊಂಡ ವೀರಶೈವ ದರ್ಶನವನ್ನು ಸಾಧಾರವಾಗಿ ನಿರೂಪಿಸಲು ಈ ಗ್ರಂಥದಲ್ಲಿ ತೊಡಗಲಾಗಿದೆ.

ಸರ್ವಶೂನ್ಯ ನಿರಾಲಂಬದಿಂದ ಹಿಡಿದು ಬಯಲು ಆಗುವವರೆಗೆ ಐವತ್ತು ವಿಭಾಗಗಳಲ್ಲಿ ವೀರಶೈವ ದರ್ಶನವನ್ನು ವಿವರಿಸಲಾಗಿದೆ. ಆಯಾ ವಿಭಾಗಕ್ಕೆ ಸಂಬಂಧಿಸಿದ ವಚನಗಳನ್ನು ವಚನಕಾರರಿಂದ ಆರಿಸಿಕೊಂಡು ಯಥೋಚಿತವಾಗಿ ಇಲ್ಲಿ ಕೋದಿದ್ದಾರೆ. ವಚನಸಾಹಿತ್ಯವನ್ನೆಲ್ಲ ಸಮಗ್ರವಾಗಿ ಪರಿಶೀಲಿಸಿದ್ದಾರೆ. ಈಗ ಕೊಟ್ಟಿರುವ ವಚನಗಳ ಜೊತೆಗೆ ಇದೇ ವಚನಗಳು ಲಭ್ಯವಾಗುತ್ತಿದ್ದುವು. ಇಲ್ಲಿ ಕೊಟ್ಟಿರುವ ಐವತ್ತು ವಿಭಾಗಗಳ ಮೊದಲಿಗೆ ಅವುಗಳ ಸ್ಥೂಲ ಪರಿಚಯವನ್ನು ಮಾಡಿದ್ದರೆ ಹೆಚ್ಚು ಉಪಯುಕ್ತವಾಗುತ್ತಿತ್ತು. ಪ್ರಸ್ತಾವನೆಯಲ್ಲಿ ಈ ವಿವೇಚನೆಯನ್ನು ಮಾಡಿದ್ದಾರೆ. ಆದರೆ ಪ್ರತಿಯೊಂದು ಬಾರಿಯೂ ಪ್ರಸ್ತಾವನೆಯನ್ನು ಓದಿ ಅದಕ್ಕೆ ಸಂಬಂಧಿಸಿದ ವಚನಗಳನ್ನು ಅಭ್ಯಸಿಸಬೇಕಾಗುತ್ತದೆ.

ಪರಿಭಾಷೆಗಳಿಂದ ಪರಿಪ್ಲುತವಾಗಿರುವ ಧರ್ಮವನ್ನು ಸರಳವಾಗಿ ನಿರೂಪಿಸುವುದು ದುಸ್ತರವಾದುದು. ಆದಾಗ್ಯೂ ಪ್ರೊ. ಸ.ಸ. ಮಾಳವಾಡ ಅವರು ತುಂಬ ಪರಿಶ್ರಮದಿಂದ ಈ ಕಾರ್ಯವನ್ನು ನಿರ್ವಹಿಸಲು ಯತ್ನಿಸಿದ್ದಾರೆ. ಐವತ್ತು ಪುಟಗಳ ಪ್ರಸ್ತಾವನೆಯಲ್ಲಿ ವೀರಶೈವ ದರ್ಶನದ ಒಂದು ವಿಹಂಗಮ ನೋಟವನ್ನು ಮಾಡಿಕೊಟ್ಟಿದ್ದಾರೆ. ಈವರೆಗೆ ಈ ತೆರನ ಯಾವೊಂದು ಗ್ರಂಥವೂ ಹೊರಬಂದಂತೆ ಕಾಣುವುದಿಲ್ಲ. ವೀರಶೈವ ದರ್ಶನವನ್ನು ಪಡೆಯಬೇಕೆನ್ನುವವರಿಗೆ ಇದು ಒಂದು ಕೈದೀವಿಗೆಯಂತಿದೆ. ಪ್ರೊ. ಸ.ಸ. ಮಾಳವಾಡರ ಶ್ರಮ ಸಾರ್ಥಕವಾಗಿದೆ. ಈ ನಿಟ್ಟಿನಲ್ಲಿ ಶ್ರೀಯುತರಿಂದ ಇನ್ನೂ ಹಲವಾರು ಗ್ರಂಥಗಳು ಹೊರಬರಲಿ ಎಂದು ಹಾರೈಸುತ್ತೇವೆ.

■

## ಷಡಕ್ಷರಮಂತ್ರ ಮಹಿಮೆ : ಕೊಂಡಗುಳಿ ಕೇಶಿರಾಜ

ಸಂಪಾದಕರು: ಪಂಡಿತರತ್ನಂ ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು, ಪ್ರಕಾಶಕರು: ಶರಣಸಾಹಿತ್ಯ ಕಾರ್ಯಾಲಯ, ಬೆಂಗಳೂರು-೨, ಪುಟಗಳು ೩+೩+೯೪, ದ್ವಿತೀಯ ಮುದ್ರಣ, ಬೆಲೆ: ರೂ. ೨.೦೦

---

**ಕೊಂ**ಡಗುಳಿ ಕೇಶಿರಾಜ ಕ್ರಿ.ಶ. ೧೦೭೬ ರಿಂದ ೧೧೨೬ ರವರೆಗೆ ಕಲ್ಯಾಣದಲ್ಲಿ ರಾಜ್ಯಭಾರಮಾಡಿದ ಚಾಲುಕ್ಯವಿಕ್ರಮಾದಿತ್ಯನ ಆಸ್ಥಾನದಲ್ಲಿ ದಂಡನಾಯಕನಾಗಿದ್ದನು. ಈತನು ಅತ್ಯಂತ ಪ್ರಸಿದ್ಧನೂ, ಪ್ರಭಾವಶಾಲಿಯೂ ಆಗಿದ್ದವನು. ಈತನ ತರುವಾಯ ಬಂದ ಅನೇಕ ಕವಿಗಳು ಈತನನ್ನು ತಮ್ಮ ಕಾವ್ಯಗಳಲ್ಲಿ ಸ್ಮರಿಸಿದ್ದಾರೆ. ಕೊಂಡಗುಳಿ ಕೇಶಿರಾಜ ಕಲಿಯಾಗಿದ್ದಂತೆ ಕವಿಯೂ ಆಗಿದ್ದನು. ಈತನ ಕೃತಿ 'ಷಡಕ್ಷರಮಂತ್ರ ಮಹಿಮೆ'. ಈತನು ಶಾಸನೋಕ್ತ ಕವಿ.

ಷಡಕ್ಷರಮಂತ್ರಮಹಿಮೆಯಲ್ಲಿ ೧೧೦ ಕಂದಪದ್ಯಗಳಿವೆ. ಇವುಗಳಲ್ಲಿ ಶಿವಮಂತ್ರದ ಹಿರಿಮೆ ಗರಿಮೆಗಳನ್ನು ಕವಿ ಅತ್ಯಂತ ಭಕ್ತಿಪೂರ್ವಕವಾಗಿ ವಿವರಿಸಿದ್ದಾನೆ. ಪ್ರತಿಯೊಂದು ಪದ್ಯವೂ 'ಓಂ ನಮಃ ಶಿವಾಯೆಂಬ ಪದಂ' ಎಂದು ಮುಗಿಯುತ್ತದೆ. ಗ್ರಂಥದ ಕೊನೆಯ ಪದ್ಯದಲ್ಲಿ ಕವಿ–

ಆರಕ್ಕರದೀ ಮಂತ್ರಂ
ಮೂರುಂಕಣ್ಣಭವನಿಂದೆ ವೆಗ್ಗಳದೈವಂ
ಬೇರಿಲ್ಲವೆಂದು ಧಾತ್ರಿಗೆ
ಸಾರಿದೆನಾಂ ಕೇಶಿರಾಜದಂಡಾಧೀಶಂ

ಹೀಗೆ ಸಾರಿದ್ದಾನೆ. ಭಕ್ತಿರಸಸೋನೆಯಂತಿರುವ ಈ ಕೃತಿಯ ಪಾರಾಯಣದಿಂದ ಮಾನವ ಮಹಂತನಾಗುತ್ತಾನೆ.

ಈ ಕೃತಿಯ ಸಂಪಾದಕರು ಕವಿಕಾಲ ವಿಚಾರವಾಗಿ ಅಧಿಕೃತವಾಗಿ, ಸವಿಸ್ತಾರವಾಗಿ, ವಿಚಾರಪೂರ್ಣವಾಗಿ ಬರೆದಿದ್ದಾರೆ. ಅನುಬಂಧವಾಗಿ ಕೊಟ್ಟಿರುವ ಶಂಕರದೇವ ವಿರಚಿತ ಷಡಕ್ಷರ ರಗಳೆ, ಹರಿಹರನ ಕೊಂಡಗುಳಿ ಕೇಶಿರಾಜನ ರಗಳೆ, ಕೊಂಡಗುಳಿ ಕೇಶಿರಾಜ ದಂಡನಾಯಕನ ಶಿವಮಂತ್ರ ಮಹಿಮೆ ಮತ್ತು ಅರ್ಥಕೋಶ ಇವು ಈ ಗ್ರಂಥದ ಬಗ್ಗೆ ಒಂದು ಸಂಪೂರ್ಣ ಕಲ್ಪನೆಯನ್ನು ವಾಚಕರಿಗೆ ಉಂಟುಮಾಡುತ್ತವೆ. ಕೊಂಡಗುಳಿ ಕೇಶಿರಾಜ ಮತ್ತು ಷಡಕ್ಷರ ಮಂತ್ರಮಹಿಮೆ. ಈ ವಿಷಯವಾದ ಸಮಗ್ರ ಮಾಹಿತಿಯನ್ನು ಕ್ರೋಢೀಕರಿಸಿಕೊಟ್ಟಿರುವುದು ಸಂಶೋಧಕರಿಗೆ ಅತ್ಯಂತ ಉಪಯುಕ್ತವಾಗಿದೆ.

ಹನ್ನೊಂದನೆಯ ಶತಮಾನದಲ್ಲಿದ್ದ ಈ ಕಾವ್ಯಕ್ಕೆ ಶಕಟರೇಫವನ್ನಾದರೂ ಬಳಸಬೇಕಾಗಿತ್ತು. ಕವಿ ಪ್ರಾಸಸ್ಥಾನಗಳಲ್ಲಿ ನಿಯತವಾಗಿ ಶಕಟರೇಫವನ್ನು ಬಳಸಿದ್ದಾನೆ.

ಪ್ರಾಚೀನ ಕಾವ್ಯಗಳನ್ನು ಸಂಪಾದಿಸಿ ಪ್ರಕಟಿಸಿ ಮಾರಾಟ ಮಾಡುವುದು ಒಂದು ಸಾಹಸಕಾರ್ಯ. ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಈ ತೆರನ ಸಾಹಸ ಕಾರ್ಯವನ್ನು ಕೈಕೊಂಡು ಹಲವಾರು ಅಪ್ರಕಟಿತ ಗ್ರಂಥಗಳನ್ನೂ, ಪ್ರಕಟಿತ ಗ್ರಂಥಗಳ ಅಧಿಕೃತ ಮುದ್ರಣಗಳನ್ನು ಹೊರತರುವುದರ ಮೂಲಕ ಸ್ತುತ್ಯವಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಭಕ್ತಿ, ವೈರಾಗ್ಯಪ್ರದವಾದ ಈ ತೆರನ ಕೃತಿಗಳನ್ನು ಜನತೆ ಸ್ವಾಗತಿಸುವರೆಂದು ನಂಬಲಾಗಿದೆ.

■

## ಸಿದ್ಧರಾಮ ಶಿವಯೋಗಿ

ಲೇಖಕರು: ಎಂ.ಬಿ. ಕೊಟ್ರಶೆಟ್ಟಿ, ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ಪುಟಗಳು ೩೦೭, ಬೆಲೆ: ರೂ. ೨೪.೦೦

---

**ಈ** ಗ್ರಂಥ ಪಿಎಚ್.ಡಿ ಪದವಿಗೆ ಸಾದರಪಡಿಸಿದ ನಿಬಂಧ. ಕರ್ನಾಟಕ ವಿಶ್ವವಿದ್ಯಾನಿಲಯದ ರಜತಮಹೋತ್ಸವದ ಪ್ರಕಟನೆಗಳಲ್ಲಿ ಇದೂ ಒಂದು. ಇದರಲ್ಲಿ ಸಿದ್ಧರಾಮನ ಜೀವನ, ಸಾಹಿತ್ಯ ಹಾಗೂ ತತ್ತ್ವಜ್ಞಾನಗಳ ವಿಮರ್ಶಾತ್ಮಕ ಅಧ್ಯಯನವನ್ನು ಮಾಡಲಾಗಿದೆ –ಎಂದಿದ್ದಾರೆ ಮಾನ್ಯ ಲೇಖಕರು. ಈ ನಿಬಂಧದಲ್ಲಿ ಸಾಹಿತ್ಯದಲ್ಲಿ ಸಿದ್ಧರಾಮ ಶಿವಯೋಗಿ, ಶಾಸನಗಳಲ್ಲಿ ಸಿದ್ಧರಾಮ ಶಿವಯೋಗಿ, ಸಿದ್ಧರಾಮ ಶಿವಯೋಗಿಯ ಕಾಲ, ಜೀವನ ಚರಿತ್ರೆ, ಸಿದ್ಧರಾಮನ ವೀರಶೈವತತ್ವ ಸಾಹಿತ್ಯ, ತತ್ತ್ವವಿವೇಚನೆ, ಶಿವಯೋಗ ಸಮೀಕ್ಷೆ, ವ್ಯಕ್ತಿತ್ವ, ಪ್ರಭಾವಮುದ್ರೆ ಎಂಬ ಅಧ್ಯಾಯಗಳಿವೆ.

ಕನ್ನಡ ಸಾಹಿತ್ಯದಲ್ಲೂ, ವಚನ ಸಾಹಿತ್ಯದಲ್ಲೂ ಸಿದ್ಧರಾಮನ ಹೆಸರು ಚಿರಂತನವಾಗಿದೆ. 'ಸಾಕಾರನಿಷ್ಠೆ ಭೂತಂಗಳೊಳಗನುಕಂಪೆ ತಾನೆ ಪರಬೊಮ್ಮ' ಎಂಬ ಸೂತ್ರವನ್ನು ಹಿಡಿದು ಸಕಲಜೀವಾವಳಿಗೆ ಲೇಸನೇ ಬಯಸಿದವನು ಸಿದ್ಧರಾಮನು. ಈತನು ಜೀವಮಾನವನ್ನೆಲ್ಲ ಸಮಾಜೋದ್ಧಾರ ಕಾರ್ಯಕ್ಕಾಗಿಯೇ ಮೀಸಲಾಗಿರಿಸಿ ಕರ್ಮಯೋಗಿ ಎನಿಸಿಕೊಂಡವನು. ಈ ಕಾರಣಿಕಪುರುಷ ಜನತೆಯನ್ನು ಉದ್ಧರಿಸಿ ಅವರಿಗೆ ಮುಕ್ತಿಯ ಪಥವನ್ನು ತೋರಿದ್ದಾನೆ. ಈತನು ಒಬ್ಬ ಶ್ರೇಷ್ಠವಚನಕಾರ. ಈತನ ವಚನಗಳು ಆತ್ಮದ ಪರಿಶುದ್ಧತೆಯನ್ನೂ ಕಾಯಕಮಹತ್ವವನ್ನೂ ಆಚಾರ ವಿಚಾರಗಳನ್ನೂ ವ್ಯಕ್ತಪಡಿಸುತ್ತವೆ. ಸಿದ್ಧರಾಮ ವಚನಗಳನ್ನೇ ಅಲ್ಲದೆ ಬಸವಸ್ತೋತ್ರಗೀತೆ, ಮಿಶ್ರಸ್ತೋತ್ರಗೀತೆ, ಅಷ್ಟಾವರಣಸ್ತೋತ್ರಗೀತೆ ಇವುಗಳನ್ನೂ ಬರೆದಿದ್ದಾನೆ. ಈ ಗೀತೆಗಳಲ್ಲಿ ಭಕ್ತಿ, ದೈನ್ಯ, ಆತ್ಮಾರ್ಪಣೆ, ಕೈಂಕರ್ಯ ಭಾವಗಳನ್ನು ಕಂಡುಕೊಳ್ಳಬಹುದಾಗಿದೆ. ಈತನು ಕಾಲಜ್ಞಾನವನ್ನು ಬರೆದಂತೆ ಪ್ರತೀತಿಯಿದೆ.

ಸಿದ್ಧರಾಮ ಶಿವಯೋಗಿಯ ಬಗೆಗೆ ಸಾಕಷ್ಟು ಕೃತಿಗಳೂ, ಶಾಸನಗಳೂ ಹುಟ್ಟಿಕೊಂಡಿವೆ. ಶೂನ್ಯಸಂಪಾದನೆಯಲ್ಲಂತೂ ಈತನ ಹೆಸರು ಪ್ರಮುಖವಾದುದಾಗಿದೆ. ಇಂತಹ ಕರ್ಮಯೋಗಿಯ ಜೀವನ ಸಾಹಿತ್ಯ ಹಾಗೂ ತತ್ತ್ವಜ್ಞಾನಗಳ ವಿಮರ್ಶಾತ್ಮಕ ಅಧ್ಯಯನವನ್ನು ಮಾಡಲು ಪ್ರಸ್ತುತ ಪ್ರಬಂಧದಲ್ಲಿ ಪ್ರಯತ್ನಿಸಲಾಗಿದೆ. ವಚನ ಸಾಹಿತ್ಯದಲ್ಲಿ ಸಿದ್ಧರಾಮನ ಸ್ಥಾನ ಕನ್ನಡ ಸಾಹಿತ್ಯದಲ್ಲಿ ಸಿದ್ಧರಾಮನ ಸ್ಥಾನ ಎಂತಹುದು ಎಂಬುದನ್ನು ಲೇಖಕರು ವಿವೇಚಿಸುವುದಕ್ಕೆ ತೊಡಗಿದ್ದಾರೆ. ಈ ಸಂಬಂಧವಾಗಿ ಹೇಳಿಕೆಗಳನ್ನು ನೀಡುವಾಗ ತೀರ್ಪುಗಳನ್ನು ಕೊಡುವಾಗ ಶ್ರೀಮಾನ್ ಕೊಟ್ರಶೆಟ್ಟರು ಅತಿಯಾದ ಆವೇಶವನ್ನು ತಳೆದಿದ್ದಾರೆ ಎಂದು ನಮಗೆ ಭಾಸವಾಗುತ್ತದೆ. ಇದಕ್ಕೆ ಪೋಷಕವಾಗಿ ಕೆಲವು ಸನ್ನಿವೇಶಗಳನ್ನು ನೋಡಬಹುದು: ಸಿದ್ಧರಾಮನ ವೀರಶೈವತ್ವದ ಬಗೆಗೆ ಸಾಕಷ್ಟು ವಾದ-ವಿವಾದಗಳು ನಡೆದು ಕೊನೆಗೆ ವಿದ್ವಾಂಸರೆಲ್ಲ ಏಕಾಭಿಪ್ರಾಯಕ್ಕೆ ಬಂದಿರುವುದು ಸರ್ವಶ್ರುತವಾದುದು. ಈ ಗ್ರಂಥದಲ್ಲಿ ಮತ್ತೆ ಮತ್ತೆ ಅದೇ ಅಂಶಗಳನ್ನೇ ಹೇಳಿ ತಮ್ಮ ಹೇಳಿಕೆಗೆ ಯಾವೊಂದು ಹೊಸಆಧಾರವನ್ನೂ ಕೊಡದೆ ವಿದ್ವಾಂಸರ ಅಭಿಪ್ರಾಯಗಳನ್ನು ಲಘುವಾಗಿ ಟೀಕಿಸುವುದು ಸಲ್ಲದ ಮಾರ್ಗ. ಹಾಗೆಯೇ 'ಹರಿಹರ ರಾಘವಾಂಕರಿಗೆ ಕಲ್ಯಾಣದ ಆಂದೋಲನದ ನಿಕಟಪರಿಚಯವಿಲ್ಲದೆ ಇರುವುದು ಹೆಚ್ಚು

ಸಂಭವನೀಯ' (ಪುಟ ೯೯); 'ಹರಿಹರ ರಾಘವಾಂಕರು ಶರಣರ ಚರಿತ್ರೆಗಳನ್ನು ಪ್ರಥಮತಃ ಕಾವ್ಯದೃಷ್ಟಿಯಿಂದ ಕಂಡಿದ್ದಾರೆ. ಅವರ ಜೀವನದ ಐತಿಹಾಸಿಕ ವಿವರಗಳ ಕಡೆಗೆ ಪ್ರಜ್ಞಾಪೂರ್ವಕವಾದ ಕುತೂಹಲ ದೃಷ್ಟಿ ಅವರಲ್ಲಿಲ್ಲವೆಂದು ಹೇಳಿದರೆ ತಪ್ಪಾಗಲಾರದು.. ಹರಿಹರ ರಾಘವಾಂಕರಿಗೆ ಗೊತ್ತಾದುದು ಸಾಮಾನ್ಯ ಜನರ ಕಲ್ಪನಾಪರಿವೇಷದಲ್ಲಿ ಮೂಡಿನಿಂತ ಶರಣರ ವ್ಯಕ್ತಿತ್ವದ ಮಹೋನ್ನತಿ. ಆದುದರಿಂದ ಐತಿಹಾಸಿಕ ವಿವರಗಳನ್ನು ಅವರ ಕೃತಿಗಳಲ್ಲಿ ಆರಿಸಿಕೊಂಡು ಹೋದರೆ ತಪ್ಪನ್ನೇ ಕಾಣುವ ಸಂಭವ. ಹಾಗೆ ಹುಡುಕ ಹೋಗುವುದು ಇತಿಹಾಸ ದೃಷ್ಟಿಗೆ ವ್ಯತಿರಿಕ್ತವಾದ ದಾರಿಯನ್ನು ಹಿಡಿದಂತೆಯೇ ಎಂದು ನಮ್ಮ ಭಾವನೆ.' (ಪುಟ ೧೦೦)

ಇಷ್ಟೇ ಅಲ್ಲದೆ "ಕಲ್ಯಾಣದ ನೂತನ ಪುರಾತನರಲ್ಲಿ ಅತ್ಯಂತ ಸಾಮಾನ್ಯರಾದವರನ್ನೂ ಕುರಿತು ರಗಳೆಗಳನ್ನೂ ಬರೆದ ಮಹಾಕವಿ ಹರಿಹರನು ಅಂದಿನ ಐದು ಜನ ಮಹಾಚೇತನರ ಸಾಲಿನಲ್ಲಿ ನಿಲ್ಲಬಲ್ಲ ಚನ್ನಬಸವಣ್ಣನ ಹಾಗೂ ಸಿದ್ಧರಾಮ ಶಿವಯೋಗಿಯ ರಗಳೆಗಳನ್ನೂ ಬರೆಯದೆ ಇರಲು ಕಾರಣವೇನು? ಅವನಿಗೆ ಇವರ ಪರಿಚಯವಿರಲಿಲ್ಲವೇ? ಹಾಗೆಂದು ಹೇಳಿಬರುವಂತಿಲ್ಲ. ಏಕೆಂದರೆ ಇತರ ಶರಣರ ರಗಳೆಗಳಲ್ಲಿ ಅನೇಕ ಸಂದರ್ಭಗಳಲ್ಲಿ ಹರಿಹರನು ಇವರನ್ನು ಪ್ರಸ್ತಾಪಿಸಿದ್ದಾನೆ. ಮಾನವ ಕಲ್ಯಾಣದ ಭವ್ಯಸ್ವಪ್ನವನ್ನು ಅನುಭವಮಂಟಪದಲ್ಲಿ ನನಸಾಗಿಸಿದ ಬಸವಣ್ಣನವರ ಜೀವನ ಚರಿತ್ರೆಯಾಗಿರುವ 'ಬಸವರಾಜದೇವರ ರಗಳೆ'ಯಲ್ಲಿ ಆ ಯುಗದ ಮಹಾಜ್ಞಾನಿ 'ಷಟ್‌ಸ್ಥಲ ಚಕ್ರವರ್ತಿ' ಎಂದು ಖ್ಯಾತಿವೆತ್ತ ಬಸವಣ್ಣನವರ ಕ್ರಾಂತಿಯ ಬೆನ್ನೆಲುಬಾಗಿದ್ದ ಚನ್ನಬಸವಣ್ಣನವರ ಹೆಸರು ಕೂಡ ಕಾಣಿಸಿಕೊಳ್ಳಬಾರದೆ? ಕಳಿಂಗದೇಶದ ಮಹಾದೇವಸೆಟ್ಟಿಯ ಕಲ್ಯಾಣ ಸಂದರ್ಶನದ ವರ್ಣನೆಗೆ ತನ್ನ ರಗಳೆಯಲ್ಲಿ ಮೂರುಪುಟಗಳನ್ನು ಮೀಸಲಾಗಿರಿಸಿದ ಹರಿಹರನು ಶೂನ್ಯಸಿಂಹಾಸನದ ಅಧ್ಯಕ್ಷ ಪೀಠವನ್ನು ಅಲಂಕರಿಸಿದ ಮಹೋನ್ನತ ವ್ಯಕ್ತಿ ಅಲ್ಲಮಪ್ರಭುವಿನ ಸಂದರ್ಶನವನ್ನು ಮೂರೇಮೂರುಪಂಕ್ತಿಗಳಲ್ಲಿ ತಿಳಿಸುವಷ್ಟಕ್ಕೆ ಕೈಸೋಲಬೇಕೇ? ಕಲ್ಯಾಣದ ವಾತಾವರಣವನ್ನೇ ಕಲಕಿರಬಹುದು ಬಿಜ್ಜಳನ ಕೊಲೆಯ ಸಂಗತಿಯನ್ನು ಒಂದೇ ಒಂದು ವಾಕ್ಯದಲ್ಲಿ ಹೇಳಿರುವುದು ಸಾಧ್ಯವೆ? ಎಂದು ಮುಂತಾಗಿ ಆವೇಶದಿಂದಲೂ ಆಕ್ರೋಶದಿಂದಲೂ ಮಾಡಿರುವ ಟೀಕೆಗಳು ತುಂಬಾ ಅಪಾಯಕಾರಕವಾದುವು.

ಕಲ್ಯಾಣದ ಶಿವಶರಣರಿಗೆ, ವಚನಕಾರರಿಗೆ ಅತ್ಯಂತ ಸಮೀಪವರ್ತಿಯಾಗಿದ್ದು ತನ್ನ ಜೀವಮಾನವನ್ನೆಲ್ಲ ಶರಣರ ನಾಮಸಂಕೀರ್ತನೆಯಲ್ಲೇ ಕಳೆದ ಹರಿಹರನ ಬಗೆಗೆ ಈ ರೀತಿ ಅಭಿಪ್ರಾಯಪಡುವುದು ಲೇಖಕರ ಸಂಕುಚಿತ ದೃಷ್ಟಿಯನ್ನೂ ಸಾದರಪಡಿಸುತ್ತದೆ. ಇದೇ ತೆರನ ಹಲವಾರು ಟೀಕೆಗಳನ್ನು ಈ ಗ್ರಂಥದ ಉದ್ದಕ್ಕೂ ಕಾಣಬಹುದಾಗಿದೆ. ವಿದ್ವಾಂಸರ ಅಭಿಪ್ರಾಯಗಳನ್ನು ವಿಮರ್ಶಿಸುವಲ್ಲಿಯೂ ಶ್ರೀಯುತರು ಇದೇರೀತಿ ವರ್ತಿಸಿದ್ದಾರೆ. ಈ ತೆರನ ಟೀಕೆಗಳನ್ನು ಕಡೆಗಣಿಸಿದಲ್ಲಿ ಇದೊಂದು ಉತ್ತಮ ಗ್ರಂಥವೆಂದು ಭಾವಿಸಬಹುದಾಗಿದೆ. ಸಿದ್ಧರಾಮನ ಬಗೆಗೆ ಉಪಲಬ್ಧವಿರುವ ಮಾಹಿತಿಯನ್ನೆಲ್ಲಾ ಒಂದೆಡೆ ಕ್ರೋಡೀಕರಿಸಿದ್ದಾರೆ. ಅವರ ಸಮೀಕ್ಷೆ ಸೂಕ್ತವಾಗಿಲ್ಲದಿದ್ದರೂ ಅವರ ಸಂಕಲನ ಕಾರ್ಯ ಮೆಚ್ಚುವಂತಹುದು. ಒಟ್ಟಿನಲ್ಲಿ ಶಿವಯೋಗಿ ಸಿದ್ಧರಾಮನ ಬಗೆಗೆ ಮಾಹಿತಿ ನೀಡಬಲ್ಲ ಈ ಗ್ರಂಥ ಒಂದು ಉಚ್ಚಕೃತಿ ಎಂದು ಹೇಳಬಹುದಾಗಿದೆ.

■

# ಪ್ರಾಣವೀಣೆ

ಸಮೇತನಹಳ್ಳಿ ರಾಮರಾಯ, ರಾಸ ಪ್ರಕಾಶನ, ಪುಟ ೧೧೪, ಬೆಲೆ: ರೂ. ೨.೦೦

**ಪ್ರಾ**ಣವೀಣೆ ಒಂದು ಕಥಾಸಂಕಲನ. ಇದರಲ್ಲಿ ತಾಯಿ, ಬೆಂದಬಾಳು, ಒಲಿದ ಜೀವ, ಒರೆಗಲ್ಲು, ಹೃದಯ ನಿಸ್ವನ, ಹೂವಾದಳು ಎಂಬ ಆರುಕಥೆಗಳಿವೆ.

ಈ ಸಂಕಲನದ ಕಥೆಗಳೆಲ್ಲ ಗ್ರಾಮೀಣ ಜೀವನಕ್ಕೆ ಸಂಬಂಧಿಸಿದುವು. ಗ್ರಾಮೀಣ ಸಮಾಜದ ಚಿತ್ರವನ್ನು ಈ ಕಥೆಗಳಲ್ಲಿ ತುಂಬ ಸ್ವಾರಸ್ಯವಾಗಿ ಚಿತ್ರಿಸಲಾಗಿದೆ. ತಾಯಿಯ ನಡತೆಯ ಬಗೆಗೆ ಸಂಶಯ ಹೊಂದಿದ ಮಗ ಆಕೆಯ ಸಾವಿಗೆ ಕಾರಣವಾಗುತ್ತಾನೆ. ಯಥಾರ್ಥ ಸಂಗತಿ ಗೊತ್ತಾದ ಮೇಲೆ ತಾಯಿಲ್ಲದ ತಬ್ಬಲಿಯಾಗುತ್ತಾನೆ. ಇದು 'ತಾಯಿ'ಯ ಕಥೆ.

'ಬೆಂದಬಾಳು' ಕಥೆಯಲ್ಲಿ ಗಂಡನ ದುಷ್ಪವರ್ತನೆಗಳಿಂದ ಬೇಸತ್ತ ಚೆಂದವ್ವನ ವಿಷಯವನ್ನು ಚಿತ್ರಿಸಲಾಗಿದೆ. ಆಕೆಯ ಗಂಡ ಲಕುಮಣ್ಣ ಯಾವುದೋ ಒಂದು ಕೊಲೆಮಾಡಿಸಿ ತಲೆತಪ್ಪಿಸಿಕೊಂಡು ಬಿಡುತ್ತಾನೆ. ಆತನು ಹಿಂತಿರುಗುವ ನಂಬಿಕೆ ಯಾರಿಗೂ ಉಳಿಯಲಿಲ್ಲ. ಹನ್ನೆರಡು ವರ್ಷಗಳಾದ ಮೇಲೆ ಲಕುಮಣ್ಣ ಮತ್ತೆ ಬರುತ್ತಾನೆ ಎಂಬ ಸಂಗತಿ ತಿಳಿದಾಗ ಚೆಂದವ್ವನ ಮನಸ್ಸಿನಲ್ಲಿ ಭೀತಿ ಮೂಡುತ್ತದೆ. ಕಾರಣವಿಷ್ಟೇ: ಚೆಂದವ್ವ ಅನಿರೀಕ್ಷಿತವಾಗಿ ಒಬ್ಬ ಬಣ್ಣಗಾರನಿಗೆ ತನ್ನ ಮನೆಯಲ್ಲಿ ಆಶ್ರಯ ಕೊಟ್ಟು ಒಂದು ಮಗುವಿನ ತಾಯಿಯಾಗುತ್ತಾಳೆ. ಲಕುಮಣ್ಣ ಹಿಂತಿರುಗಿದ ಮೇಲೆ ಚೆಂದವ್ವ ಮಾಡಿದ ಆ ತಪ್ಪನ್ನು ಮರೆತುಬಿಡುವುದಾಗಿ ಹೇಳಿ ಆಕೆಯನ್ನು ಸಮಾಧಾನಪಡಿಸುತ್ತಾನೆ.

'ಒಲಿದ ಜೀವ'ದಲ್ಲಿ ಒಂದು ಹೆಣ್ಣು ಒಬ್ಬನಿಗೆ ಒಲಿದು ಮದುವೆ ಮಾಡಿಕೊಂಡು ಅವನು ಮರೆಯಾದ ಮೇಲೆ ಮತ್ತೊಬ್ಬನಿಗ ಒಲಿಯುತ್ತಾಳೆ. ಸಂತಾನ ಪಡೆಯುತ್ತಾಳೆ. ಸ್ವಲ್ಪಕಾಲದ ಮೇಲೆ ತನ್ನ ಮೊದಲಿನ ಗಂಡ ಕಾಣಿಸಿಕೊಂಡಾಗ ಪುನಃ ಅವನಿಗೆ ಒಲಿಯುತ್ತಾಳೆ.

'ಒರೆಗಲ್ಲು' ಎಂಬ ಕಥೆಯಲ್ಲಿ ಬಯಿರ ಹೆಗ್ಗಡೆಯ ಧರ್ಮಬುದ್ಧಿಯನ್ನೂ ನ್ಯಾಯನಿಷ್ಠುರತೆಯನ್ನೂ ಒರೆಯಿಟ್ಟು ತೋರಿಸಲಾಗಿದೆ.

'ಹೃದಯ ನಿಸ್ವನ'ದಲ್ಲಿ ಒಬ್ಬ ಬಡಹುಡುಗ ವಿದ್ಯಾಭ್ಯಾಸಕ್ಕಾಗಿ ಪಟ್ಟ ಬವಣೆಯನ್ನು ಬಡತನದ ದಾರುಣ ಚಿತ್ರವನ್ನೂ, ಸಮಾಜದಲ್ಲಿನ ವಿಪರ್ಯಾಸಗಳನ್ನೂ ಮನಮುಟ್ಟುವಂತೆ ನಿರೂಪಿಸಲಾಗಿದೆ.

'ಹೂವಾದಳು' ಎಂಬ ಕಥೆಯಲ್ಲಿ ಶಿವಹೆಗ್ಗಡೆಯ ಏಕೈಕ ಪುತ್ರಿ ಸುರಗಿ ಮತ್ತು ಅವನ ಸೋದರಳಿಯ ಚೆಲುವ ಇವರ ಚೆಲ್ಲಾಟವನ್ನು ಚಿತ್ರಿಸಿದೆ.

ಬೆಂದಬಾಳು ಮತ್ತು ಒಲಿದ ಜೀವ ಈ ಕಥೆಗಳಲ್ಲಿ ಒಂದು ಹೆಣ್ಣು ಎರಡು ಗಂಡು ಎಂಬ ಸೂತ್ರವನ್ನು ಅಳವಡಿಸಲಾಗಿದೆ. ಆದರೆ ಈ ಪದ್ಧತಿ ನಮ್ಮ ಸಂಪ್ರದಾಯಕ್ಕೆ ನಮ್ಮ ಸಂಸ್ಕೃತಿಗೆ ವಿರುದ್ಧವಾಗಿ ಕಂಡುಬರುತ್ತದೆ.

ಈ ಕಥಾಸಂಕಲನದ ಸಂಭಾಷಣೆಯಲ್ಲಿ ಬಳಸಿರುವ ಪ್ರಾದೇಶಿಕ ಭಾಷೆ, ಅದರ ವೈವಿಧ್ಯ ತುಂಬ ಸ್ವಾರಸ್ಯವಾಗಿದೆ. ಕಾವ್ಯ, ನಾಟಕ, ಕಾದಂಬರಿ, ಸಣ್ಣಕಥೆ ಈ ಎಲ್ಲ ವಿಭಾಗಗಳಲ್ಲೂ ಕೃತಿಗಳನ್ನು ರಚಿಸಿರುವ ಶ್ರೀ ಸಮೇತನಹಳ್ಳಿ ರಾಮರಾಯರ 'ಪ್ರಾಣವೀಣೆ' ಎಂಬ ಕಥಾಸಂಕಲನವನ್ನು ಅಭಿಮಾನದಿಂದ ಸ್ವಾಗತಿಸುತ್ತೇವೆ.

# ಹತ್ತೊಂಬತ್ತು ಕವನಗಳು

ಚಂದ್ರಶೇಖರ ಪಾಟೀಲ, ಸಂಕ್ರಮಣ ಪ್ರಕಾಶನ, ಧಾರವಾಡ, ಪುಟ ೬೪, ಬೆಲೆ: ರೂ.೨

ಇದು ಒಂದು ಕವನ ಸಂಕಲನ. ಇದರಲ್ಲಿ ಅರಳು, ಆಚೆ, ನೆಹರೂ, ಆಚೆ ಮೊನ್ನೆಯ ಜನರು, ನಾಯಿ, ಬಸವಣ್ಣನಿಗೆ ಶರಣು. ಒಂದು ಹಳೆಯ ಮುಗಿ(ಯ)ದ ಕತೆ, ಪ್ರೇಯಸೀವಲ್ಲಭನಿಗೊಂದಿಷ್ಟುಪದೇಶ, ನನ್ನ ಕಟ್ಟಿಕೊಂಡ ಹೆಂಡತಿಗೆ, ಇಪ್ಪತ್ತೆಂಟರಲ್ಲಿ, ಬುದ್ಧನೂ ನಾನೂ, ಹತಾಶ, ಶಾಸ್ತ್ರಿ, ಬೇಂದ್ರೆ, ಅಂಬಿಕಾತನಯದತ್ತ, ಲೆಕ್ಕ, ಮಗು, ಇನ್ನೊಂದು ಪ್ರಶ್ನೆ, ಮುದುಕನ ಸಮಾಧಾನ, ನವ್ಯಕವಿ, ಎರಡು ಭ್ರಮೆಗಳು ಎಂಬ ಹತ್ತೊಂಬತ್ತು ಕವನಗಳಿವೆ.

ಕೆಲವು ದಶಕಗಳ ಹಿಂದೆ ಮೈತಳೆದ ನವ್ಯಕಾವ್ಯ ಪರಂಪರೆ ತನ್ನದೇ ಆದ ಒಂದು ವಿಶಿಷ್ಟ ರೀತಿಯಲ್ಲಿ ಮುಂದುವರಿಯುತ್ತಿದೆ. ಈ ನವ್ಯಕಾವ್ಯದ ಪ್ರಭಾವಕ್ಕೆ ಒಳಗಾದ ತರುಣ ಕವಿಗಳಲ್ಲಿ ಶ್ರೀ ಚಂದ್ರಶೇಖರ ಪಾಟೀಲರು ಒಬ್ಬರು.

ಪ್ರಕೃತ ಕವನ ಸಂಕಲನದಲ್ಲಿ ಬಿಡಿಬಿಡಿಯಾದ ಹಲವಾರು ವಿಷಯಗಳಿಗೆ ಸಂಬಂಧಿಸಿದ ಕವಿತೆಗಳಿವೆ. ಜೀವನದ ವಿವಿಧ ಅವಸ್ಥೆಗಳನ್ನು ಕುರಿತು ಕವಿ ತನ್ನ ಸ್ವಾನುಭವವನ್ನು ಇವುಗಳಲ್ಲಿ ಅಭಿವ್ಯಕ್ತಪಡಿಸಿದ್ದಾರೆ. ಬುದ್ಧ, ಬಸವಣ್ಣ, ನೆಹರು, ಶಾಸ್ತ್ರಿ ಮೊದಲಾದ ಹಿರಿಯ ಚೇತನಗಳನ್ನು ಕುರಿತ ಕವನಗಳಿವೆ. ನೆಹರೂ ಅವರನ್ನು ಕುರಿತ ಕವನದಲ್ಲಿ:

ನೀರಿನರಮನೆ ಮೇಲೆ ಗಾಳಿಗೋಪುರ ಕಟ್ಟಿ
ಬಟ್ಟಬಯಲಿನ ತುಂಬ ರಾಮರಾಜ್ಯವ ಬಿತ್ತಿ
ನಾವು ಕೊಂಚ ವಿರಾಮ ಹೊಂದುತ್ತಿದ್ದಾಗ
ನೀವು ಸತ್ತಿರಿ ನೆಹರು
ನೀರುಪಾಲಾದಿರಿ, ಗಾಳಿಪಾಲಾದಿರಿ
ಬಯಲೊಡನೆ ನೀವೂ ಬಯಲಾದಿರಿ

ಎಂದು ಹೇಳಿರುವ ಈ ಸಾಲುಗಳು ತುಂಬ ಮಾರ್ಮಿಕವಾಗಿವೆ. 'ಬಸವಣ್ಣನಿಗೆ ಶರಣು' ಎಂಬ ಕವಿತೆ ಹೃದಯಸ್ಪರ್ಶಿಯಾಗಿದೆ.

ನಿನಗಿಂತ ಕಿರಿಯರಿಲ್ಲ ಬಸವಣ್ಣ
ಅದಕೆಂದೆ ಈ ಹೊಲಸು ಮಣ್ಣ ಮಡಿಲೊಳಗಿಂದ
ಚಿಮ್ಮಿ ಅರಳಿದ ನಿನ್ನ ಕಿತ್ತು ಕೊಸರಿ ಮೇಲೆ
ಮುಗಿಲಿಗೇ ತೂರಿದೆವು ನಕ್ಷತ್ರಮಾಲೆಯಲಿ
ಹೆಣೆದು ಕೈಮುಗಿದೆವು ಇಲ್ಲಿ ಸಲ್ಲದ ನೀನು
ಅಲ್ಲಿ ಸಲ್ಲುತ್ತಿರುವಿ ಬೆಳಕ ಚೆಲ್ಲುತ್ತಿರುವಿ
ಅದರಲ್ಲಿ ಮಿಂದಿರುವ ಪುಣ್ಯಾತ್ಮರೈ ನಾವು
ನಮಗಿಂತ ಹಿರಿಯರಿಲ್ಲ.

ಎಂದಿದ್ದಾರೆ. ನವ್ಯಕವಿಯ ಎರಡು ಭ್ರಮೆಗಳು ಎಂಬ ಕವನವನ್ನು ಓದಿಯೇ ಸವಿಯಬೇಕು. ಚಂದ್ರಶೇಖರ ಪಾಟೀಲರ ವೈಶಿಷ್ಟ್ಯವೆಂದರೆ ತಮ್ಮ ಪ್ರಾಂತ್ಯದ ಆಡುನುಡಿಗಳನ್ನು ಯಥೇಚ್ಛವಾಗಿ ತಮ್ಮ ಕವನಗಳಲ್ಲಿ ಹುದುಗಿಸಿರುವುದು. ಇವರ ಕವನಗಳಲ್ಲಿ ನವುರಾದ ವ್ಯಂಗ್ಯವಿದೆ, ವಿಡಂಬನೆಯಿದೆ, ತಿಳಿಹಾಸ್ಯವಿದೆ.

'ಬಾನುಲಿ', 'ಮಧ್ಯಬಿಂದು' ಎಂಬ ಕವನ ಸಂಕಲನಗಳಿಂದ ಪರಿಚಿತರಾಗಿರುವ ಪ್ರತಿಭಾಶಾಲಿ ನವ್ಯಕವಿ ಶ್ರೀ ಚಂದ್ರಶೇಖರ ಪಾಟೀಲರಿಂದ ಇನ್ನೂ ಶ್ರೇಷ್ಠ ಕವಿತೆಗಳನ್ನು ನಿರೀಕ್ಷಿಸಬಹುದಾಗಿದೆ. ■

## ಜೀವಂತ ಧೋರಣೆಗಳು

ಲೇಖಕರು: ಮಾಧವ ಕುಲಕರ್ಣಿ, ಪ್ರಕಾಶಕರು: ಸಾಹಿತ್ಯ ಭಂಡಾರ, ಬಳೆಪೇಟೆ, ಬೆಂಗಳೂರು-೫೩. ಪುಟಗಳು: iv+೧೨೦, ಬೆಲೆ: ರೂ. ೬.೦೦

---

**ಜೀ**ವಂತ ಧೋರಣೆಗಳು ಒಂದು ಸಾಹಿತ್ಯ ವಿಮರ್ಶೆಯ ಕೃತಿ. ಇದರಲ್ಲಿ ಸಾಹಿತ್ಯ ರಂಗದಲ್ಲಿ ನವ್ಯಚಟುವಟಿಕೆ, ಶಿಕ್ಷಣ, ಸಂವೇದನೆ, ಜಾತಿಪದ್ಧತಿಯ ವಿರೋಧಾಭಾಸಗಳ ದಟ್ಟ ಚಿತ್ರಣ, ದಾಟು, ದ್ಯಾವನೂರು, ಹೊಸತರಾವು ಮತ್ತು ಅದರ ನೆಲೆ, ಜೀವಂತ ಧೋರಣೆಗಳು, ರಾಮಾನುಜನ್‌ರ 'ನಲವತ್ತು ನೆರಳು', ಕುರ್ತುಕೋಟಿಯವರ ಲೇಖನಕ್ಕೆ ಸಂಬಂಧಿಸಿ, ಕಾರ್ನಾಡರ 'ಹಯವದನ', ಶಕ್ತಿಯುತ ಸಾಂಪ್ರದಾಯಿಕ ನಾಟಕ, 'ಆ ಊರು ಈ ಊರು', ಕದಡಿದ ನೀರು, ನಾರ್ಸಿಸಸ್, ದಂಗುಬಡಿಸುವ ನಿರ್ಧಾರಗಳು ಎಂಬ ಹದಿಮೂರು ಲೇಖನಗಳಿವೆ. ಈ ಲೇಖನಗಳೆಲ್ಲ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿರುವುದಾಗಿ ಲೇಖಕರೇ ಹೇಳಿಕೊಂಡಿದ್ದಾರೆ.

ಕನ್ನಡಸಾಹಿತ್ಯದಲ್ಲಿ ಆಧುನಿಕ ವಿಮರ್ಶಾಪದ್ಧತಿ ಸಾಕಷ್ಟು ಪ್ರವರ್ಧಮಾನವಾಗಿಲ್ಲವೆಂಬುದು ತಿಳಿದ ವಿಷಯವೇ ಆಗಿದೆ. ಪಕ್ಷ ಪಂಥಗಳ ಕಟ್ಟಿನಲ್ಲಿ ವಿಮರ್ಶೆ ಬೆಳೆದುಬರುತ್ತಿದೆ. ವಿಮರ್ಶಾಕ್ಷೇತ್ರದಲ್ಲಿ ಈ ಗುಂಪುಗಾರಿಕೆ ತಾಂಡವವಾಡುತ್ತಿದೆ. ನಿಷ್ಪಕ್ಷಪಾತವಾದ ವಿಮರ್ಶೆಯಾಗುತ್ತಿಲ್ಲ. ಒಂದು ವೇಳೆ ಇಂತಹ ಕಾರ್ಯವೇನಾದರೂ ನಡೆದರೆ ಅದನ್ನು ಮೊಳಕೆಯಲ್ಲೇ ಚಿವುಟಿ ಹಾಕುತ್ತಿದ್ದಾರೆ ಅಧಿಕಾರಸ್ಥ, ಪ್ರತಿಷ್ಠಿತರು. ಒಬ್ಬೊಬ್ಬ ಲೇಖಕನ ಹಿಂದೆ ಒಂದೊಂದು ಸಮಾಜವೇ ಎದ್ದು ನಿಂತಂತೆ ಕಾಣುತ್ತದೆ. ಸರಿಯಾದುದನ್ನು ಹೇಳಿದರೆ ಸಿಡಿದು ಬೀಳುತ್ತಾರೆ ಇಂದಿನ ಮಾನ್ಯ ಲೇಖಕ ವರ್ಗ. ಈ ಎಲ್ಲ ಪ್ರತಿಭಟನೆಗಳನ್ನು ಅಡ್ಡಿ ಅಡಚಣೆಗಳನ್ನು ದಾಟಿ ಬರಬೇಕಾಗಿದೆ. ನಿಷ್ಪಕ್ಷಪಾತವಾದ ನಿಜವಾದ, ವಿಮರ್ಶಕ. ವಿಮರ್ಶಾ ಕ್ಷೇತ್ರದಲ್ಲಿ ಒಂದು ಆರೋಗ್ಯಕರವಾದ ವಾತಾವರಣ ಇನ್ನೂ ಸೃಷ್ಟಿಯಾಗಿಲ್ಲವೆಂದೇ ಹೇಳಬೇಕಾಗಿದೆ.

ಪ್ರಕೃತ ಜೀವಂತಧೋರಣೆಗಳಲ್ಲಿ ಇಂದಿನ ಕೆಲವು ಪ್ರತಿಷ್ಠರ ಕೃತಿಗಳ ನಿಷ್ಪಕ್ಷಪಾತವಾದ ವಿಮರ್ಶೆಯನ್ನು ಮಾಡಲಾಗಿದೆ. ಈ ವಿಮರ್ಶಕರು ಯಾವ ಪೂರ್ವಗ್ರಹಪೀಡಿತರೂ ಆಗಿರದೆ ಒಂದು ನ್ಯಾಯವಾದ ಮೌಲ್ಯಮಾಪನವನ್ನು ಮಾಡಲು ಪ್ರಯತ್ನಿಸಿದ್ದಾರೆ. ವಿಮರ್ಶಿತ ಕೃತಿಗಳನ್ನು ಚೆನ್ನಾಗಿ ವ್ಯಾಸಂಗ ಮಾಡಿ ಒಂದು ಸ್ಪಷ್ಟ ನಿಲುವನ್ನು ನಮ್ಮ ಮುಂದಿಟ್ಟಿದ್ದಾರೆ. ಇದು ನಿಜಕ್ಕೂ ಮೆಚ್ಚುವಂತಹುದು. ಈ ಗ್ರಂಥದ ರಕ್ಷಾಕವಚದಲ್ಲಿ ಹೇಳಿರುವ ಸಾಹಿತ್ಯ ಕೃತಿಗಳ ವಸ್ತುನಿಷ್ಠ ವಿಮರ್ಶೆಯಿಂದ ಪ್ರಾರಂಭಿಸಿದ ವಿಮರ್ಶಕನು ಮಾತ್ರ ಒಂದು ಭಾಷೆಯ ಸಾಹಿತ್ಯದ ಒಟ್ಟು ಧೋರಣೆಯ ಬಗ್ಗೆ ಅಭಿಪ್ರಾಯವನ್ನು ಮಂಡಿಸಲು ಅರ್ಹನಾಗುತ್ತಾನೆ. ಇಂಥ ಅಭಿಪ್ರಾಯ ಮಂಡನೆಯ ಪೂರ್ವತಯಾರಿಯನ್ನು ಇಲ್ಲಿರುವ ಹದಿಮೂರು ಲೇಖನಗಳಲ್ಲಿಯೂ ಕಾಣಬಹುದು. ಸಮಕಾಲೀನ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಬಂದಿರುವ ಅತ್ಯುತ್ತಮ ಕೃತಿಗಳ ವಿಮರ್ಶಾತ್ಮಕ ವಿಶ್ಲೇಷಣೆ ಇಲ್ಲಿರುವ ಲೇಖನಗಳಲ್ಲಿ ಇದೆಯಲ್ಲದೆ, ಈ ಲೇಖಕರುಗಳ ಸಾಧನೆಯನ್ನು ಇಲ್ಲಿ ಗುರುತಿಸಲಾಗಿದೆ. ಅಡಿಗರ ಕಾವ್ಯವನ್ನು ನೋಡುವಲ್ಲಿರುವ ಸೂಕ್ಷ್ಮತೆಯನ್ನು ಭೈರಪ್ಪನವರ ಕಾದಂಬರಿಯ ಅಭ್ಯಾಸದಲ್ಲಿಯೂ ತೋರುವ, ಆದರೆ ಅಡಿಗರ ವಿಮರ್ಶಾ ಧೋರಣೆಯನ್ನು ಪ್ರಶ್ನಿಸಬಲ್ಲ; ಕಂಬಾರರ ಜಾನಪದ ಪ್ರಭಾವಿ ಕಾವ್ಯಕ್ಕೆ

ಸ್ಪಂದಿಸಬಲ್ಲಂತೆಯೇ, ರಾಮಾನುಜನ್‌ರ ನಾಗರಿಕ ಕಾವ್ಯಕ್ಕೂ ದೇವನೂರರ ಕತೆಗಳಲ್ಲಿಯ ಹೊಸಅಳಲಿಕಗೂ ಪ್ರತಿಸ್ಪಂದಿಸಬಲ್ಲ; ಕಾರ್ನಾಡರ ಹೊಸನಾಟಕದ ತಿರುಳನ್ನು ಬಗೆಯಬಲ್ಲಂತೆಯೇ ಜಡಭರತರ ಸಾಂಪ್ರದಾಯಿಕತೆಯ ಮಹತ್ವವನ್ನು ಎತ್ತಿ ತೋರಿಸಬಲ್ಲ; ಕೀರ್ತಿನಾಥ ಕುರ್ತಕೋಟಿ ಮತ್ತು ಜಿ.ಎಚ್. ನಾಯಕರ ವಿಮರ್ಶಾಧೋರಣೆಗಳನ್ನು ಪ್ರಶ್ನಿಸಬಲ್ಲ; ಇದೆಲ್ಲದರ ಪರಿಣಾಮವಾಗಿ ಯಾವ ಪಂಥಕ್ಕೂ ಸೇರದ ನಿರ್ಭಿಡೆಯ ಖಚಿತವಾದ ನೇರ ಅಭಿಪ್ರಾಯಗಳನ್ನು ವಿಮರ್ಶಾತ್ಮಕ ಗದ್ಯದಲ್ಲಿ ರುಜವಾತುಪಡಿಸಬಲ್ಲ ಈ ತರುಣ ನಿಸ್ಪೃಹ ವಿಮರ್ಶಕನಿಂದ ಕನ್ನಡ ವಿಮರ್ಶಾಲೋಕ ಬೃಹತ್‌ಕಾರ್ಯವನ್ನು ನಿರೀಕ್ಷಿಸುತ್ತದೆ. ಈ ಮಾತುಗಳನ್ನು ನಾವು ಸಂಪೂರ್ಣವಾಗಿ ಅನುಮೋದಿಸುತ್ತೇವೆ.

ಶ್ರೀ ಮಾಧವ ಕುಲಕರ್ಣಿ ಅವರ ಬರವಣಿಗೆ ಸರಳವಾಗಿದೆ, ಸ್ಪಷ್ಟವಾಗಿದೆ. ವಿಷಯಗಳನ್ನು ನೇರವಾಗಿ ಮನಮುಟ್ಟುವಂತೆ ಪ್ರತಿಪಾದನೆ ಮಾಡುವಂತಿದೆ. ಇಂದಿನ ವಿಮರ್ಶಾಕ್ಷೇತ್ರದಲ್ಲಿ ಈ ದಿಟ್ಟನಿಲುವನ್ನು ತಾಳಿರುವ ಕುಲಕರ್ಣಿ ಅವರಿಂದ ಇನ್ನುಳಿದ ಕೃತಿಗಳ ನೈಜವಿಮರ್ಶೆಯನ್ನು ನಿರೀಕ್ಷಿಸಬಹುದಾಗಿದೆ. ಶ್ರೀಯುತರು ತಾಳಿರುವ ಧೋರಣೆಗಳು ಗತಧೋರಣೆಗಳೂ ಮೃತಧೋರಣೆಗಳೂ ಆಗಿರದೆ ಜೀವಂತಧೋರಣೆಗಳಾಗಿವೆ. ಈ ದೃಷ್ಟಿಯಿಂದ ಇದು ಒಂದು ಆದರಣೀಯ ಕೃತಿಯಾಗಿದೆ.



# ಪ್ರೊ. ವಿ. ಕೃಷ್ಣಶೆಟ್ಟಿ ಅವರ ಕೃತಿಗಳ ಪರಿಚಯ

**ಪ್ರೊ.** ವಿ. ಕೃಷ್ಣಶೆಟ್ಟರು ಕರ್ನಾಟಕ ವಿದ್ಯಾಇಲಾಖೆಯಲ್ಲಿ ಹಿರಿಯ ಅಧಿಕಾರಿಗಳಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಜನೋಪಕಾರಿ ದೊಡ್ಡಣ್ಣಶೆಟ್ಟರ ಧರ್ಮಸಂಸ್ಥೆಯ ಆಡಳಿತ ಮಂಡಳಿಯ ಸದಸ್ಯರಾಗಿಯೂ ಹಲವಾರು ವರ್ಷ ಸೇವೆಯನ್ನು ಮಾಡಿದ್ದಾರೆ. ಶ್ರೀಯುತರು ಭಗವದ್ಭಕ್ತರು, ಆಧ್ಯಾತ್ಮಿಕ ಮತ್ತು ಧಾರ್ಮಿಕ ಚಿಂತಕರು, ಪ್ರೊ. ವಿ. ಕೃಷ್ಣಶೆಟ್ಟಿ ಅವರು ಶ್ರೀರಾಮಕೃಷ್ಣಾಶ್ರಮದ ಗುರುಗಳ ನಿಕಟ ಸಂಪರ್ಕವನ್ನು ಉಳ್ಳವರಾಗಿದ್ದಾರೆ. ಶ್ರೀಯುತರು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಹಲವಾರು ಕೃತಿಗಳನ್ನು ಬರೆದಿದ್ದಾರೆ. ಪ್ರಸ್ತುತ ಶ್ರೀಯುತರ ಅವತಾರ ಶೃಂಗ, ರಾಷ್ಟ್ರಪಿತ ಬಾಪೂಜಿ, ಶ್ರೀ ಭಗವದ್ಗೀತಾ, ಪರಮಾರ್ಥ ಪ್ರದೀಪಿಕೆ ಎಂಬ ಕೃತಿಗಳ ಕಿರುಪರಿಚಯವನ್ನು ಮಾಡಿಕೊಡಲಾಗಿದೆ.

**ಅವತಾರ ಶೃಂಗ**
**(ಭಗವಾನ್ ಶ್ರೀ ರಾಮಕೃಷ್ಣಪರಮಹಂಸರು)**

ಭರತಖಂಡದ ಮಹಾಜ್ಞಾನಿಯೂ ಸರ್ವಧರ್ಮ ಸಮನ್ವಯ ಸಾಧಕರೂ ಆದ ಶ್ರೀ ರಾಮಕೃಷ್ಣ ಪರಮಹಂಸರನ್ನು ಕುರಿತು ಅಸಂಖ್ಯಾತ ಕೃತಿಗಳು ವಿಶ್ವದ ಹಲವಾರು ಭಾಷೆಗಳಲ್ಲಿ ರಚಿತವಾಗಿರುವುದು ಸರ್ವವಿದಿತವಾದುದು. ಶ್ರೀರಾಮಕೃಷ್ಣರ ದಿವ್ಯಜ್ಯೋತಿ ವಿಶ್ವದಲ್ಲೆಲ್ಲ ತನ್ನ ಪ್ರಭೆಯನ್ನು ನಿರಂತರವಾಗಿ ಬೀರುತ್ತಿದೆ. ಈ ದೇಶದಲ್ಲಿ ಹಲವಾರು ಮಂದಿ ಶ್ರೀರಾಮಕೃಷ್ಣ ಪರಮಹಂಸರ ದಿವ್ಯಚರಿತ್ರೆಯನ್ನು ಅತ್ಯಂತ ಶ್ರದ್ಧಾಭಕ್ತಿಯಿಂದ ರಚಿಸಿ ಪುನೀತರಾಗಿದ್ದಾರೆ. ಈ ನಂದಾದೀಪದಿಂದ ಪ್ರೊ. ವಿ. ಕೃಷ್ಣಶೆಟ್ಟಿ ಅವರು ತಮ್ಮ ಹಣತೆಯನ್ನು ಹಚ್ಚಿ ಬೆಳಗಿದ್ದಾರೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಹುಟ್ಟಿ ತಮ್ಮ ಅಸಾಧಾರಣ ಸಾಧನೆಯನ್ನು ಕಂಡುಕೊಂಡ ಮಹಿಮಾನ್ವಿತರು ತಮ್ಮ ಐವತ್ತು ವರ್ಷಗಳ ಜೀವಿತಾವಧಿಯಲ್ಲಿ ಅಸಾಧಾರಣ ಸಾಧನೆಯಿಂದ ದೈವಸಾಕ್ಷಾತ್ಕಾರ ಪಡೆದುಕೊಂಡ ಮಹಾಮಹಿಮರು. ಅವರ ಸಾಧನೆ ಬೋಧನೆಗಳು, ಎಲ್ಲ ಕಾಲಕ್ಕೂ ಎಲ್ಲ ಜನಾಂಗಕ್ಕೂ ಅನುಸರಣೀಯವಾದುವು. ಸಂಪ್ರದಾಯಸ್ಥ ಬ್ರಾಹ್ಮಣರ ಮನೆತನದಲ್ಲಿ ಜನಿಸಿದ ಗದಾಧರ ಚಟ್ಟೋಪಾಧ್ಯಾಯ ಲೋಕವಿಖ್ಯಾತ ರಾಮಕೃಷ್ಣ ಪರಮಹಂಸರಾದದ್ದು ಒಂದು ಇತಿಹಾಸ.

ರಾಮಕೃಷ್ಣ ಪರಮಹಂಸರ ದೃಷ್ಟಿಯಲ್ಲಿ ದ್ವೈತಅದ್ವೈತ ವಿಶಿಷ್ಟಾದ್ವೈತಗಳು ಪರಸ್ಪರ ವಿರೋಧ ಧರ್ಮಗಳಲ್ಲ. ಸಿದ್ಧಿ ಸಾಧಕನ ಪರಮಧ್ಯೇಯ. ಹೊನ್ನು ಹೆಣ್ಣು ಮಣ್ಣು –ಇವುಗಳ ತ್ಯಾಗ ಅನಿವಾರ್ಯ. ಹೊನ್ನಿನ ತ್ಯಾಗವೆಂದರೆ ದಾರಿದ್ರ್ಯಲೋಲುಪತೆಯಲ್ಲಿ ಹೆಣ್ಣಿನ ತ್ಯಾಗವೆಂದರೆ ಸ್ತ್ರೀದ್ವೇಷ ಅಥವಾ ತಿರಸ್ಕಾರವೆಂದಲ್ಲ. ಕಾಮತ್ಯಾಗ ಅಥವಾ ಇಂದ್ರಿಯನಿಗ್ರಹ. ಐಶ್ವರ್ಯವನ್ನು ಸನ್ಮಾರ್ಗದಿಂದ ಸಂಪಾದಿಸಿ ಸದುಪಯೋಗಪಡಿಸಿಕೊಳ್ಳಬೇಕು. ದುಃಖಿಗಳ ಸೇವೆಯೂ ದೇವರ ಸೇವೆಯೇ. ರಾಮಕೃಷ್ಣ ಪರಮಹಂಸರು ತಮ್ಮ ಜೀವನವನ್ನೆಲ್ಲ ಲೋಕಕಲ್ಯಾಣದ ಅಧ್ಯಾತ್ಮ ಸಾಧನೆಯಲ್ಲೇ ತೊಡಗಿಸಿಕೊಂಡ ಮಹಾಮಹಿಮರು.

ಪ್ರೊ. ವಿ. ಕೃಷ್ಣಶೆಟ್ಟಿ ಅವರ "ಅವತಾರ ಶೃಂಗ" (ಭಗವಾನ್ ಶ್ರೀರಾಮಕೃಷ್ಣ ಪರಮಹಂಸರು) ಒಂದು ಬೃಹತ್ಕೃತಿ. ಇದರಲ್ಲಿ ಹತ್ತುಕಾಂಡಗಳೂ ಒಂದುನೂರ ಮೂವತ್ತನಾಲ್ಕು ಅಧ್ಯಾಯಗಳೂ ಇವೆ. ಇದರಲ್ಲಿ ರಾಮಕೃಷ್ಣ ಪರಮಹಂಸರ ದಿವ್ಯದರ್ಶನವನ್ನು ಮಾಡಿಸಿದ್ದಾರೆ; ಭವ್ಯಚಿತ್ರಣವನ್ನು ನೀಡಿದ್ದಾರೆ. ಸುಮಾರು ಹದಿನಾರುಸಾವಿರ ಸಾಲುಗಳಲ್ಲಿ ಹರಡಿಕೊಂಡಿರುವ ಈ ಸರಳರಗಳೆಯ ಬೃಹತ್ಕೃತಿಯಲ್ಲಿ ರಾಮಕೃಷ್ಣಪರಮಹಂಸರ ಜೀವನಸಾರಸರ್ವಸ್ವವನ್ನು ಎಳೆಎಳೆಯಾಗಿ ಬಿಡಿಸಿ ಚಿತ್ರಿಸಿದ್ದಾರೆ. ಈ ಲೇಖಕರ ಅಪಾರ ಭಕ್ತಿ, ಶ್ರದ್ಧೆ, ನಿಷ್ಠೆಗಳು ಕಾವ್ಯದಲ್ಲೆಲ್ಲಾ ಚೆಲ್ಲಿ ಸೂಸಿವೆ. ಪುಣ್ಯಪ್ರದವಾದ ಈ ಕಾವ್ಯರಚನೆಯಿಂದ ಪ್ರೊ. ವಿ. ಕೃಷ್ಣಶೆಟ್ಟರು ಕೃತಕೃತ್ಯರಾಗಿದ್ದಾರೆ.

**ರಾಷ್ಟ್ರಪಿತ ಬಾಪೂಜಿ**
**(ವಾರ್ಧಕ ಷಟ್ಪದಿಯಲ್ಲಿ ಮಹಾಕಾವ್ಯ)**

ಕನ್ನಡ ಸಾಹಿತ್ಯದ ವಿವಿಧಪ್ರಕಾರಗಳಲ್ಲಿ ಹಲವಾರು ಕೃತಿಗಳನ್ನು ರಚಿಸಿರುವ ಪ್ರೊ. ವಿ. ಕೃಷ್ಣಶೆಟ್ಟಿ ಅವರು ರಾಷ್ಟ್ರಪಿತ ಬಾಪೂಜಿ ಅವರನ್ನು ಕುರಿತು ವಾರ್ಧಕಷಟ್ಪದಿಯಲ್ಲಿ ಒಂದು ಮಹಾಕಾವ್ಯವನ್ನೇ ಬರೆದಿದ್ದಾರೆ. ಇದರಲ್ಲಿ ಎಂಟು ಸಂಪುಟಗಳೂ ೨೪೨೮ ವಾರ್ಧಕ ಷಟ್ಪದಿಗಳೂ ಇವೆ.

ರಾಷ್ಟ್ರಪಿತ ಮಹಾತ್ಮಗಾಂಧಿಯವರನ್ನು ಕುರಿತು ಭಾರತೀಯರೇ ಅಲ್ಲದೆ ವಿದೇಶೀಯರೂ ತಮ್ಮ ತಮ್ಮ ಭಾಷೆಗಳಲ್ಲಿ ಮಹತ್ವದ ಕೃತಿಗಳನ್ನು ಬರೆದಿದ್ದಾರೆ. ಗಾಂಧೀಜಿಯವರ ಜೀವನ ಚರಿತ್ರೆಗಳನ್ನೇ ಅಲ್ಲದೆ ಅವರ ವಿಚಾರಧಾರೆಗಳ ಬಗೆಗೆ ಇಂದಿಗೂ ಬರಹಗಳು ಬರುತ್ತಲೇ ಇವೆ. ಭಾಷಣಗಳು ಆಗುತ್ತಲೇ ಇವೆ. ಶಾಲಾಕಾಲೇಜುಗಳ ಪಠ್ಯಪುಸ್ತಕಗಳಲ್ಲಿಯೂ ಈ ವಿಷಯಗಳ ಬಗೆಗೆ ಅಧ್ಯಯನ ನಡೆಯುತ್ತಲೇ ಇದೆ.

ಭಾರತದ ಸ್ವಾತಂತ್ರ್ಯಶಿಲ್ಪಿ ಗಾಂಧೀಜಿಯವರು ಯುಗಪುರುಷರಾಗಿ ಪ್ರತಿಯೊಬ್ಬ ಭಾರತೀಯನ ಮನ, ಮನೆಗಳಲ್ಲಿ ಅನುರಣನಗೊಳ್ಳುತ್ತಿದ್ದಾರೆ. ಇವರ ಜೀವನಚರಿತ್ರೆಯನ್ನು ಪ್ರತಿನಿತ್ಯವೂ ಹಾಡಿಹೊಗಳುವವರು ಅದೆಷ್ಟೋ ಮಂದಿ. ಕಾಲಕಳೆದಂತೆಲ್ಲ ಗಾಂಧೀಜಿ ನಮಗೆ ತೀರ ಹತ್ತಿರವಾಗುತ್ತಿದ್ದಾರೆ. ಯುಗಪುರುಷ ಗಾಂಧೀಜಿ ಪ್ರತಿಯೊಬ್ಬ ಭಾರತೀಯನ ಮನದಲ್ಲಿ ಅಚ್ಚೊತ್ತಿದಂತೆ ನೆಲೆಸಿದ್ದಾನೆ.

ಪ್ರೊ. ವಿ. ಕೃಷ್ಣಶೆಟ್ಟಿ ಅವರು ಅಪಾರ ವ್ಯಾಸಂಗದಿಂದ ಅಪರಿಮಿತವಾದ ಪಾಂಡಿತ್ಯವನ್ನು ಸಂಚಯಿಸಿಕೊಂಡು ಸವ್ಯಸಾಚಿಗಳಂತೆ ಪದ್ಯದಲ್ಲಾಗಲಿ ಗದ್ಯದಲ್ಲಾಗಲಿ ಯಾವುದೇ ವಿಷಯವನ್ನು ಕುರಿತು ಕೃತಿರಚನೆ ಮಾಡುವ ಸಾಮರ್ಥ್ಯವನ್ನು ಕೈವಶಮಾಡಿಕೊಂಡಿದ್ದಾರೆ. ಶ್ರೀಯುತರ ದೈತ್ಯಪ್ರತಿಭೆ, ದೈತ್ಯಶಕ್ತಿಗೆ ಈ ಬೃಹತ್‌ಕೃತಿಗಳು ಸಾಕ್ಷಿಯಾಗಿ ನಿಲ್ಲುತ್ತವೆ. ಇದಕ್ಕೆ ಜೀವಂತ ನಿದರ್ಶನ ಎಂಬಂತೆ ವಾರ್ಧಕ ಷಟ್ಪದಿಯ ಈ ಮೇರುಕೃತಿ ನಿದರ್ಶನವಾಗಿದೆ.

**ಶ್ರೀಮದ್ಭಗವದ್ಗೀತಾ**

ಭಗವದ್ಗೀತೆ ಹಿಂದುಗಳ ಧರ್ಮಗ್ರಂಥ, ಪವಿತ್ರಗ್ರಂಥ. ಇದು ಭಕ್ತಿ ಜ್ಞಾನ ಕರ್ಮಗಳ ತ್ರಿವೇಣೀ ಸಂಗಮ. ಭಗವದ್ಗೀತೆ ಪ್ರಪಂಚದ ಅನೇಕ ಭಾಷೆಗಳಿಗೆ ಭಾಷಾಂತರವಾಗಿದೆ. ಭರತಖಂಡದ ಅನೇಕಭಾಷೆಗಳಲ್ಲಿ ಅನಾದಿಕಾಲದಿಂದ ಪ್ರಚಾರದಲ್ಲಿದೆ. ಭಗವದ್ಗೀತೆಯಲ್ಲಿನ ಏಳುನೂರುಶ್ಲೋಕಗಳು ನಿತ್ಯಸತ್ಯವನ್ನು ಸಾರುತ್ತಿವೆ. ಅಷ್ಟೇ ಅಲ್ಲ ಇವು ಸಾರ್ವಕಾಲಿಕ ಸಾರ್ವದೇಶಿಕ ಸಂಗತಿಗಳನ್ನು ಪ್ರತಿಪಾದಿಸುತ್ತವೆ. ಹಾಗಾಗಿ ಇದು ಭಾರತೀಯರ ನಿತ್ಯಪಾರಾಯಣಗ್ರಂಥ ಮಹಾಭಾರತದ ಸಾರಸರ್ವಸ್ವ ಭಗವದ್ಗೀತೆ. ಇದು ಜೀವಾತ್ಮ ಪರಮಾತ್ಮಗಳ ಅನ್ಯೋನ್ಯಸಂಬಂಧವನ್ನು ವಿವರಿಸುತ್ತದೆ. ಮಾನವನ ಉದ್ಧಾರಕ್ಕೂ ಉತ್ಥಾನಕ್ಕೂ ನೆರವಾಗುವ ಗ್ರಂಥ ಭಗವದ್ಗೀತೆ.

ಭಗವದ್ಗೀತೆಯ ಅನುವಾದವನ್ನೂ ವ್ಯಾಖ್ಯಾನವನ್ನೂ ವಿವರಣೆಯನ್ನೂ ಅನೇಕ ಭಾಷೆಗಳು ಕೊಟ್ಟಿವೆ. ಆದರೂ ಹೊಸ ಹೊಸ ಅನುವಾದಗಳೂ ವ್ಯಾಖ್ಯಾನಗಳೂ ಮೇಲಿಂದ ಮೇಲೆ ಬರುತ್ತಲೇ ಇವೆ. ಅವುಗಳಲ್ಲಿ ಪ್ರೊ. ವಿ.

ಕೃಷ್ಣಶೆಟ್ಟರದೂ ಒಂದು. ಶ್ರೀಯುತರು ಭಗವದ್ಗೀತೆಯ ಮೂಲಆಶಯಕ್ಕೆ ಭಂಗಬಾರದಂತೆ ಅತ್ಯಂತ ಸರಳವಾಗಿ ಅನುವಾದ ಮಾಡಿದ್ದಾರೆ. ಶ್ರೀಯುತರ ಮಡದಿ ಮಕ್ಕಳು ಮೊಮ್ಮಕ್ಕಳು ಓದಿ ಸಂತೋಷಪಟ್ಟಿರುವುದೇ ಸಾಕ್ಷಿಯಾಗಿದೆ. ಈ ಅನುವಾದದ ಬಗೆಗೆ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು, ಪ್ರೊ. ಸಾ.ಕೃ. ರಾಮಚಂದ್ರರಾವ್ -ಇವರು ಈ ಕೃತಿಗೆ ಆಶೀರ್ವಾದದ ಮುತ್ತಿನ ತೋರಣವನ್ನು ಕಟ್ಟಿದ್ದಾರೆ. ಆದುದರಿಂದ ಈ ಕೃತಿ ಸರ್ವಜನಾದರಣೀಯ ವಾಗಬಲ್ಲುದು. ಭಗವದ್ಗೀತೆಯ ಮೂಲ ಮತ್ತು ಚೂಲ ಇಂತಿದೆ:

ಪರಿತ್ರಾಣಾಯ ಸಾಧೂನಾಂ
ವಿನಾಶಾಯಚ ದುಷ್ಕೃತಾಮ್
ಧರ್ಮಸಂಸ್ಥಾಪನಾರ್ಥಾಯ
ಸಂಭವಾಮಿಯುಗೇಯುಗೇ

**ಪರಮಾರ್ಥ ಪ್ರದೀಪಿಕೆ**

ಅನಾದಿಕಾಲದಿಂದಲೂ ಈ ದೇಶದಲ್ಲಿ ದೇವರ ನಾಮಗಳು, ಸುಭಾಷಿತಗಳು, ಭಕ್ತಿಗೀತೆಗಳು -ಇವೇ ಮೊದಲಾದ ಸದ್ಗ್ರಂಥಗಳ ಪಠನ ಪ್ರವಚನ ರೂಢಿಯಲ್ಲಿತ್ತು. ವಯಸ್ಸಿಗೆ ಅನುಗುಣವಾದ ಪದ್ಯಗಳನ್ನೂ ಶ್ಲೋಕಗಳನ್ನೂ ರಚಿಸಿ, ಆರಿಸಿ ಅಳವಡಿಸಲಾಗುತ್ತಿತ್ತು. ಈ ಪದ್ಧತಿ ಹಲವಾರೆಡೆ ಇಂದಿಗೂ ಚಾಲ್ತಿಯಲ್ಲಿದೆ.

ಪ್ರಸ್ತುತ ಪ್ರೊ. ವಿ. ಕೃಷ್ಣಶೆಟ್ಟಿ ಅವರು ಶಂಕರಾಚಾರ್ಯರ ಆತ್ಮಬೋಧ ಮತ್ತು ಭಜಗೋವಿಂದಂ ಶ್ರೀರಮಣ ಮಹರ್ಷಿ ಅವರ ಉಪದೇಶಸಾರ- ಈ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿ ಪರಮಾರ್ಥ ಪ್ರದೀಪಿಕೆ ಎಂಬ ಹೆಸರಿನಿಂದ ಪ್ರಕಟಿಸಿದ್ದಾರೆ. ಲೇಖಕರ ಮಾತಿನಲ್ಲಿ "ನಾನು ಓದಿ ಮೆಚ್ಚಿಕೊಂಡಿರುವ ಮೂರು ಕೃತಿಗಳನ್ನೂ ಕನ್ನಡದಲ್ಲಿ ಪದ್ಯಾನುವಾದ ಮಾಡಿದ್ದೇನೆ. ಮಾಡುವ ಪ್ರಾಮಾಣಿಕ ಪ್ರಯತ್ನ ನಡೆಸಿದ್ದೇನೆ" ಎಂದು ಹೇಳಿಕೊಂಡಿದ್ದಾರೆ.

ಈ ಸುಭಾಷಿತಗಳ ಪಠನದಿಂದ ತನ್ನಲ್ಲಿ ಮತ್ತು ಇತರರಲ್ಲಿ ದೈವಭಕ್ತಿ, ಧರ್ಮಶ್ರದ್ಧೆ, ಪರೋಪಕಾರ ಬುದ್ಧಿ, ಉದಾರಗುಣ -ಇವೇ ಮೊದಲಾದ ಸದ್ಗುಣಗಳು ನೆಲೆಗೊಳ್ಳುತ್ತವೆ ಎಂದು ನೆರೆನಂಬಲಾಗಿದೆ.

■

# ಫ.ಗು. ಹಳಕಟ್ಟಿ ಸಮಗ್ರಸಾಹಿತ್ಯ ಸಮೀಕ್ಷೆ

ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿ ಅವರ ಸಮಗ್ರ ಸಾಹಿತ್ಯವನ್ನು ಹದಿನೈದು ಸಂಪುಟಗಳಲ್ಲಿ ಹೊರತಂದಿರುವ ಪ್ರಕಟನ ಸಮಿತಿಯ ಎಲ್ಲ ಸದಸ್ಯರನ್ನೂ ನಾನು ಅತ್ಯಂತ ಪ್ರೀತಿಗೌರವಗಳಿಂದ ಅಭಿನಂದಿಸುತ್ತೇನೆ. ಹಳಕಟ್ಟಿ ಅವರ ಐವತ್ತು ವರ್ಷಗಳ ನಿರಂತರ ತಪಸ್ಸಿನ ಫಲದಿಂದ ಈ ಹದಿನೈದು ಸಂಪುಟಗಳು ಕನ್ನಡ ಜನತೆಗೆ ಲಭ್ಯವಾಗಿವೆ. ಹಳಕಟ್ಟಿ ಅವರು ಅತ್ಯಂತ ಆಸ್ಥೆಯಿಂದ ನಿಷ್ಠೆಯಿಂದ ಪ್ರಾಮಾಣಿಕತೆಯಿಂದ, ಶುದ್ಧಾಂತಃಕರಣದಿಂದ ನಿಸ್ವಾರ್ಥದಿಂದ ಏಕಾಂಗಿಯಾಗಿ ಹಗಲಿರುಳೂ ದುಡಿದು ಈ ಮಹತ್ವಪೂರಿತ ಸಾಹಿತ್ಯವನ್ನು ಸಂಪಾದಿಸಿದ್ದಾರೆ. ಸಹಸ್ರಾರು ತಾಡೋಲೆ ಗ್ರಂಥಗಳನ್ನು ಸಂಗ್ರಹಿಸಿ ನೂರಾರು ವಚನಕಾರರ ವಚನಗಳನ್ನು ಸಂಪಾದಿಸಿ ಪ್ರಕಟಿಸಿದ ಕೀರ್ತಿ ಹಳಕಟ್ಟಿ ಅವರಿಗೆ ಸಲ್ಲುತ್ತದೆ. ಅನೇಕ ಚಾರಿತ್ರಿಕ ವ್ಯಕ್ತಿಗಳನ್ನು ಗುರುತಿಸಿ ಪರಿಚಯಿಸಿದ್ದಾರೆ. ಹಲವಾರು ಶಿವಶರಣ ಶಿವಶರಣೆಯರ ಚರಿತ್ರೆಯನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಅಂತೆಯೇ ಕೆಲವು ಶಾಸನಗಳನ್ನು ಪರಿಚಯಿಸಿದ್ದಾರೆ.

ಹಳಕಟ್ಟಿ ಅವರು ತಮ್ಮ ಜೀವಮಾನವನ್ನೆಲ್ಲ ನಾಡು-ನುಡಿ, ಸಾಹಿತ್ಯ-ಸಂಸ್ಕೃತಿಗಳ ಸಂವರ್ಧನೆಗಾಗಿಯೇ ಮುಡುಪಾಗಿಟ್ಟವರು. ಈ ಸಾಹಿತ್ಯ ಪ್ರಕಟನೆಗಾಗಿ ತಮ್ಮ ಆಸ್ತಿಪಾಸ್ತಿ ಮನೆಮಠಗಳನ್ನು ಮಾರಿಕೊಂಡು ಜೀವನಕ್ಕಾಗಿ ತೊಳಲಾಡಿದವರು. ಹಳಕಟ್ಟಿ ಅವರನ್ನು ತೀರ ಹತ್ತಿರದಿಂದ ಬಲ್ಲವರ ಮಾತುಗಳಿವು. "ಒಮ್ಮೆ ಹಳಕಟ್ಟಿಯವರಿಗೆ ಅತ್ಯಂತ ಆರ್ಥಿಕ ಅಡಚಣೆ ಬಂದೊದಗಿತು. ಈ ಸಂಗತಿ ಹೇಗೋ ಬಬಲೇಶ್ವರದ ಪರಮಪೂಜ್ಯ ಶ್ರೀ ಶಾಂತವೀರ ಮಹಾಸ್ವಾಮಿಗಳವರಿಗೆ ವಿದಿತವಾಯಿತು. ಕೂಡಲೇ ಪೂಜ್ಯಶ್ರೀಗಳವರು ಐದುಚೀಲ ಜೋಳ, ಒಂದು ಚೀಲ ಗೋಧಿ ಹಾಗೂ ಮುನ್ನೂರು ಐವತ್ತು ರೂಪಾಯಿಗಳ ನಗದು ಹಣವನ್ನು ದಿನನಿತ್ಯದ ಖರ್ಚಿಗಾಗಿ ಡಾ. ಹಳಕಟ್ಟಿಯವರಿಗೆ ಕಳಿಸಿಕೊಟ್ಟರು. ಎಂಥ ಪ್ರತಿಕೂಲ ಪರಿಸ್ಥಿತಿಯಲ್ಲಿ ಡಾ. ಹಳಕಟ್ಟಿಯವರು ಬಾಳಬೇಕಾಯಿತು ಮತ್ತು ಲಿಂಗೈಕ್ಯರಾಗುವ ವರೆಗೆ ಯಶಸ್ವಿಯಾಗಿ ಬಾಳಿದರು ಎಂಬುದನ್ನು ತಿಳಿಸುವುದಕ್ಕಾಗಿಯೇ ನಾನು ಈ ಸತ್ಯಸಂಗತಿಯನ್ನು ಉಲ್ಲೇಖಿಸಿದ್ದೇನೆ."

ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿ ಅವರ ಸಮಗ್ರ ಸಾಹಿತ್ಯವನ್ನು ಸಮೀಕ್ಷೆ ಮಾಡಿರುವವರು ಡಾ. ಬಿ. ನಂಜುಂಡಸ್ವಾಮಿ ಅವರು. ಶ್ರೀಯುತರು ವೃತ್ತಿಯಿಂದ ವೈದ್ಯರಾದರೂ ಪ್ರವೃತ್ತಿಯಿಂದ ಸಾಹಿತಿಗಳೂ ಸಂಶೋಧಕರೂ ಆಗಿದ್ದಾರೆ. ನಮಗೆಲ್ಲ ಚಿರಪರಿಚಿತರೂ ಕನ್ನಡಿಗರಿಗೆಲ್ಲ ಆತ್ಮೀಯರೂ ಆಗಿದ್ದ ಶ್ರೀ ಎಸ್. ಶಿವಣ್ಣನವರು ಶ್ರೇಷ್ಠ ಸಂಶೋಧಕರೂ ಸಾಹಿತಿಗಳೂ ಎಂಬ ಖ್ಯಾತಿಗೆ ಒಳಗಾಗಿದ್ದವರು ಶಿವಾಧೀನರಾದುದು ಸಂಶೋಧನ ಕ್ಷೇತ್ರಕ್ಕೆ ತುಂಬಲಾರದ ನಷ್ಟವಾಗಿದೆ. ನನಗಂತೂ ವೈಯಕ್ತಿಕವಾಗಿ ಆಗಿರುವ ನಷ್ಟ ಅಪಾರ, ಅನಂತ. ಪ್ರಸ್ತುತ ಡಾ. ಬಿ. ನಂಜುಂಡಸ್ವಾಮಿ ಅವರು ಸ್ವಲ್ಪಮಟ್ಟಿಗೆ ಈ ನಷ್ಟವನ್ನು ತುಂಬಿಕೊಡಬಲ್ಲರು ಎಂಬ ವಿಶ್ವಾಸವುಳ್ಳವನಾಗಿದ್ದೇನೆ.

ಡಾ. ಫ.ಗು. ಹಳಕಟ್ಟಿ ಅವರ ಸಮಗ್ರ ಸಾಹಿತ್ಯ ಹದಿನೈದು ಸಂಪುಟಗಳಲ್ಲಿ ಹರಡಿ ಹಂಚಿಹೋಗಿರುವುದನ್ನು ಪರಿಚಯಿಸುವ ಕೈಪಿಡಿಯೇ ಈ ಸಮೀಕ್ಷೆ. ಸಾಹಿತ್ಯವೆಂಬ ಈ ಬೃಹದಾರಣ್ಯವನ್ನು ಅತ್ಯಂತ ಪರಿಶ್ರಮದಿಂದ ಪ್ರವೇಶಿಸಿ ಉದ್ದಗಲಕ್ಕೂ ಸುತ್ತಾಡಿ ಅಪಾರ ಪ್ರೀತ್ಯಾದರಗಳಿಂದ ಸುಗಂಧ ಪರಿಪೂರಿತ ಪುಷ್ಪಗಳನ್ನು ತಿರಿತಂದು ಸುಂದರವಾದ ಮಂದಾರ ಮಾಲೆಯನ್ನು ಅತ್ಯಂತ ಪ್ರಯಾಸ ಮತ್ತು ಪರಿಶ್ರಮದಿಂದ ಡಾ. ಬಿ. ನಂಜುಂಡಸ್ವಾಮಿ ಅವರು ಕಟ್ಟಿದ್ದಾರೆ. ಈ ಮಂದಾರ ಮಾಲೆಯನ್ನು ಧರಿಸಿದವರು ಡಾ. ಫ.ಗು. ಹಳಕಟ್ಟಿ ಸಾಹಿತ್ಯ ಮಹಾರ್ಣವವನ್ನು ನಿರಾತಂಕವಾಗಿ ಉತ್ತರಿಸಬಹುದು. ನಮಗೆ ಬೇಕಾದ ಕಡೆ ವಿಹರಿಸಬಹುದು. ಬೇಡದ ಕಡೆ ವಿರಮಿಸಬಹುದು. ನಮ್ಮ ಬೇಕು ಬೇಡಗಳನ್ನು ಪೂರೈಸಿಕೊಂಡು ಪ್ರವಾಸವನ್ನು ಮುಂದುವರಿಸಬಹುದು. ಈ ಸಾಹಿತ್ಯ ಪ್ರವಾಸ ಎಳ್ಳಷ್ಟೂ ಪ್ರಯಾಸವನ್ನುಂಟು ಮಾಡದೆ ಸೂಕ್ತಪ್ರತಿಫಲವನ್ನು ನೀಡಿ ನಮ್ಮನ್ನು ಸಂತೃಪ್ತಿಪಡಿಸುತ್ತದೆ. ಈ ಮಹಾರ್ಣವವನ್ನು ಸಮೀಕ್ಷೆ ಎಂಬ ನೌಕೆಯಲ್ಲಿ ಕುಳಿತು ಸುರಕ್ಷಿತವಾಗಿ ದಾಟಬಹುದಾಗಿದೆ. ಈ ಸಾಧನವನ್ನು ಕಲ್ಪಿಸಿಕೊಟ್ಟ ಡಾ. ಬಿ. ನಂಜುಂಡಸ್ವಾಮಿ ಎಲ್ಲರ ಅಭಿನಂದನೆಗಳಿಗೂ ಪಾತ್ರರಾಗಿದ್ದಾರೆ. ■

# ಅಲ್ಲಮಪ್ರಭು : ಡಾ. ಬಸರೂರ್ ಸುಬ್ಬರಾವ್

'ಅಲ್ಲಮಪ್ರಭು' ಎಂಬ ಕೃತಿಯನ್ನು ಡಾ. ಬಸರೂರ್ ಸುಬ್ಬರಾವ್ ಅವರು ರಚಿಸಿದ್ದಾರೆ. ಅಲ್ಲಮಪ್ರಭುವಿನ ವಚನಗಳ ತಾತ್ವಿಕ ವಿವೇಚನೆಯನ್ನು ಇಂಗ್ಲೀಷ್ ಅನುವಾದದೊಂದಿಗೆ ಮಾಡಲಾಗಿದೆ ಎಂದಿದ್ದಾರೆ. ಈ ಕೃತಿ ಇಂಗ್ಲೀಷ್ ಭಾಷೆಯಲ್ಲಿದೆ.

ಮೊದಲನೆಯ ಭಾಗದಲ್ಲಿ ಅಲ್ಲಮನ ಜೀವನ ಚರಿತ್ರೆ; ದೈವದ ಪರಿಕಲ್ಪನೆ; ಸೃಷ್ಟಿ; ಮಾನವನ ದೈವತ್ವ; ಇಷ್ಟಲಿಂಗ; ಸ್ಥಾವರಲಿಂಗ; ಅರ್ಚನೆ; ಅರಿವು; ಐಕ್ಯ; ಶಿವರುದ್ರ ಆಗಮಗಳು; ಹಿರಿಯರು; ತತ್ವದರ್ಶನ ಮತ್ತು ಮೌಲ್ಯಮಾಪನ – ಎಂಬ ಶೀರ್ಷಿಕೆಗಳಲ್ಲಿ ಅತ್ಯಂತ ಮೌಲಿಕವಾದ ವಿಶ್ಲೇಷಣೆಯನ್ನು ಮಾಡಲಾಗಿದೆ. ಎರಡನೆಯ ಭಾಗದಲ್ಲಿ ಒಂಬತ್ತು ಅನುಬಂಧಗಳ ಜೊತೆಗೆ ಎಂಟು ಛಾಯಾಚಿತ್ರಗಳನ್ನು ಕೊಡಲಾಗಿದೆ.

ಹನ್ನೆರಡನೆಯ ಶತಮಾನದ ವಚನಕಾರರಲ್ಲಿ ಅಲ್ಲಮ ಅತ್ಯಂತ ಪ್ರಮುಖ, ಪ್ರತಿಭಾವಂತ. ವಚನ ಸಾಹಿತ್ಯಕ್ಕೆ ಅಲ್ಲಮನ ಕೊಡುಗೆ ಅಪಾರ, ಅನಂತ. ಅಲ್ಲಮ ಅಂದಿನ ಮುಖ್ಯಸಾಧಕರನ್ನೆಲ್ಲ ಸಂಧಿಸಿ ಅವರಿಗೆ ಜ್ಞಾನಬೋಧೆಯನ್ನು ಮಾಡಿ ಸನ್ಮಾರ್ಗವನ್ನು ತೋರಿದ್ದಾನೆ. ಕಲ್ಯಾಣದಲ್ಲಿ ಶಿವಾನುಭವಮಂಟಪದ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದವನು. ಬಸವಣ್ಣ ಭಕ್ತಿಗೆ ಪ್ರಸಿದ್ಧನಾಗಿರುವಂತೆ ಅಲ್ಲಮ ಜ್ಞಾನ ಮತ್ತು ವೈರಾಗ್ಯಗಳಿಗೆ ಪ್ರಸಿದ್ಧನಾಗಿದ್ದಾನೆ. ಬಹುಕಾಲ ಯೋಗಾರೂಢನಾಗಿದ್ದ ಅಲ್ಲಮ ಮರಣವನ್ನು ಗೆದ್ದ ಮಹಂತ. ವೀರಶೈವ ಧರ್ಮಸಂಸ್ಥಾಪನೆಯ ಅವತಾರಪುರುಷ ಎನಿಸಿದ್ದಾನೆ. ನಿರ್ವಿಕಲ್ಪಸಮಾಧಿ ಸಾಧಕನಾದ ಅಲ್ಲಮಪ್ರಭು ಗುಹೇಶ್ವರಲಿಂಗದೊಡನೆ ತನ್ಮಯತೆ ಪಡೆದಿದ್ದಾನೆ. ಅಲ್ಲಮಪ್ರಭು ಅದ್ವೈತಿ. ತನ್ನನ್ನು ಸಂಧಿಸಿದವರಿಗೆಲ್ಲ ಅದ್ವೈತ ತತ್ವವನ್ನೇ ಬೋಧಿಸುತ್ತಿದ್ದವನು. ಅಲ್ಲಮಪ್ರಭು ಶ್ರೇಷ್ಠಜಂಗಮ. ಈ ಜಂಗಮ ಜಾತಿವಾಚಕವಲ್ಲ. ಇದು ಜ್ಞಾನಿಯ ಪದವಿ, ವೈರಾಗ್ಯದ ಶಿಖರ.

ಅಲ್ಲಮನ ಜೀವನಚರಿತ್ರೆ, ಕಾಲದೇಶ ವರ್ತಮಾನ ಇತಿವೃತ್ತಗಳ ಬಗೆಗೆ ಪ್ರಾಚೀನ ಕಾವ್ಯಗಳಲ್ಲಿ ಏಕಾಭಿಪ್ರಾಯವಿಲ್ಲ. ಅನೇಕ ವಿಷಯಗಳ ಬಗೆಗೆ ವಾದವಿವಾದಗಳಿವೆ; ಭಿನ್ನಮತಗಳಿವೆ. ಅಲ್ಲಮನ ವಿಷಯದಲ್ಲಿ ಎದ್ದಿರುವ ಸಮಸ್ಯೆಗಳು ಸಂದೇಹಗಳು ಸಂಶಯಗಳ ಬಗೆಗೆ ವಿಶೇಷ ಅಧ್ಯಯನ ನಡೆಸಿರುವ ಪ್ರಸ್ತುತ ಲೇಖಕರು ಹೊಸಬೆಳಕನ್ನು ಚೆಲ್ಲಲು ಪ್ರಯತ್ನಿಸಿದ್ದಾರೆ.

ಅಲ್ಲಮಪ್ರಭುವಿನ ವಚನಗಳೆಷ್ಟು? "ಅಲ್ಲಯ್ಯಗಳ ವಚನ ಎರಡೆಂಬತ್ತು ಕೋಟಿ" ಎಂದಿದ್ದಾರೆ ಸಿದ್ಧರಾಮಯ್ಯ. ಈ ವಚನ ಸಂಖ್ಯೆಯನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗಿಲ್ಲ. ಪ್ರಸ್ತುತ ಈ ಕೃತಿಕಾರರು ಅಲ್ಲಮಪ್ರಭುವಿನ ೨೫೦ ವಚನಗಳನ್ನೂ ಬಸವಣ್ಣ ಮೊದಲಾದವರ ೫೦ ವಚನಗಳನ್ನೂ ಸಾಂಪ್ರದಾಯಕ ದೃಷ್ಟಿಯಿಂದ ಭಿನ್ನವಾಗಿ ವಿಶ್ಲೇಷಿಸಿರುವುದಾಗಿ ತಿಳಿಸಿದ್ದಾರೆ.

ಅಲ್ಲಮನ ಬದುಕಿನಲ್ಲಿ ಬಹುಪ್ರಧಾನ ಪಾತ್ರವಹಿಸಿದ್ದು ಬಳ್ಳಿಗಾವೆ. ಸುಮಾರು ಮೂವತ್ತು ನಲವತ್ತು ವರ್ಷಗಳನ್ನು ಆ ಊರಿನಲ್ಲಿಯೇ ಕಳೆದಿರಬಹುದಾದ ಅಲ್ಲಮ ಲೌಕಿಕ ಪಾರಮಾರ್ಥಿಕಗಳನ್ನು ಕಂಡದ್ದು ಅಲ್ಲಿಯೇ. ಬಳ್ಳಿಗಾವೆ ಆ ಕಾಲಕ್ಕಾಗಲೇ ಧಾರ್ಮಿಕವಾಗಿ ಐತಿಹಾಸಿಕವಾಗಿ ಸಾಂಸ್ಕೃತಿಕವಾಗಿ ಅತ್ಯಂತ ಪ್ರಖ್ಯಾತಿಯನ್ನು ಪಡೆದಿದ್ದುವನ್ನು ಅಲ್ಲಿಯ

ಅನೇಕ ಶಾಸನಗಳು ಸಾರುತ್ತಿವೆ. ಅಲ್ಲಿಯ ಪ್ರಾಚೀನ ದೇವಾಲಯಗಳ ಅವಶೇಷಗಳು ಇದಕ್ಕೆ ಜೀವಂತ ಸಾಕ್ಷಿಯಾಗಿವೆ. ಆ ಕಾಲದಲ್ಲಿ ಅಲ್ಲಿದ್ದ ಕೋಡಿಮಠದ ಪ್ರಕಾಂಡ ಗುರುಗಳ ಪ್ರಭಾವವೂ ಅಲ್ಲಮನ ಮೇಲೆ ಆಗಿರಬಹುದು.

ಈ ಕೃತಿಯ ವಿಷಯಸೂಚಿಯಲ್ಲಿನ ಪ್ರತಿಯೊಂದು ಅಧ್ಯಾಯವನ್ನೂ ಪ್ರತ್ಯೇಕವಾಗಿ ವಿವೇಚಿಸದೆ ಇವುಗಳ ಪರಿಶೀಲನೆಯಿಂದ ಅಭಿವ್ಯಕ್ತವಾಗುವ ಅಂಶಗಳನ್ನೂ ಅಭಿಪ್ರಾಯಗಳನ್ನು ಮಾತ್ರ ಅತ್ಯಂತ ಸಂಕ್ಷೇಪವಾಗಿ ತಿಳಿಸಲಾಗಿದೆ. ವಿಷಯಸೂಚಿ ೩ ರಿಂದ ೧೩ ರವರೆಗಿನ ಪ್ರತಿಯೊಂದು ಅಧ್ಯಾಯದ ವಿಷಯಕ್ಕೆ ಸಂಬಂಧಿಸಿದಂತೆ ಕೂಲಂಕಷವಾದ ವಿವೇಚನೆಯನ್ನೂ ವಿಮರ್ಶೆಯನ್ನೂ ಮಾಡಿದ್ದಾರೆ. ಪ್ರತಿಯೊಂದು ವಿಷಯಕ್ಕೂ ಸಮುಚಿತ ಆಧಾರಗಳನ್ನು ಕೊಟ್ಟಿದ್ದಾರೆ; ಅಧಿಕೃತತೆಯನ್ನು ತಂದಿದ್ದಾರೆ.

ಅಲ್ಲಮನ ಜೀವನಚರಿತ್ರೆಯಿಂದ ವಚನಗಳಿಂದ ಹಿಡಿದು ಅವುಗಳ ಹೋಲಿಕೆ ಮೌಲ್ಯಮಾಪನದವರೆಗಿನ ಅತ್ಯಂತ ಸಾರವತ್ತಾದ ವಿದ್ವತ್ಪೂರ್ಣವಾದ ಅಭಿಪ್ರಾಯವನ್ನು ನೀಡಿದ್ದಾರೆ. ಅವನ್ನು ಯಾರೂ ಅಲ್ಲಗಳೆಯುವಂತಿಲ್ಲ. ಏಕೆಂದರೆ ಅವು ಸಾಧಾರಭೂತವಾಗಿವೆ. ವಚನಗಳಲ್ಲಿ ಪ್ರಸ್ತಾಪಿತವಾಗಿರುವ ವೀರಶೈವಧರ್ಮದ ಸಾರಾಸಾರ ವಿವೇಚನೆಯನ್ನು ಸಾರ್ಥಕವಾಗಿ ಮಾಡಿದ್ದಾರೆ. ಬೇರೆ ಬೇರೆ ವಚನಕಾರರ ವಚನಗಳೊಂದಿಗೆ ತುಲನೆ ಮಾಡಿದ್ದಾರೆ; ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಈ ಎಲ್ಲ ವಚನಗಳನ್ನೂ ಇಂಗ್ಲೀಷಿಗೂ ಅನುವಾದಿಸಿದ್ದಾರೆ. ಅಪಾರ ಪರಿಶ್ರಮದಿಂದ, ಬಹುಕಾಲದ ವ್ಯಾಸಂಗದಿಂದ, ಪೂರ್ವಾಗ್ರಹ ಪೀಡಿತರಾಗದೆ ನಿಷ್ಪಕ್ಷಪಾತವಾಗಿ ಅಲ್ಲಮನಿಗೆ ಸಂಬಂಧಿಸಿದ ಸಮಸ್ತವಿಷಯಗಳನ್ನೂ ತಲಸ್ಪರ್ಶಿಯಾಗಿ ಅಭ್ಯಸಿಸಿ ಅತ್ಯಂತ ಶ್ರದ್ಧಾಭಕ್ತಿಗಳಿಂದ ಪ್ರತಿಪಾದಿಸಿದ್ದಾರೆ. ಅಸಂಖ್ಯಾತ ಆಕರಗಳನ್ನು ಆಧರಿಸಿದ್ದಾರೆ, ಅವಲಂಬಿಸಿದ್ದಾರೆ, ಅನುಸರಿಸಿದ್ದಾರೆ. ಪ್ರತಿಯೊಂದು ಅಂಶದ ಬಗೆಗೂ 'ಕ್ಷ'ಕಿರಣವನ್ನು ಬೀರಿದ್ದಾರೆ.

ಅಲ್ಲಮನ ವಚನಗಳು ಎಲ್ಲ ವಚನಕಾರರಿಗಿಂತ ವಿಭಿನ್ನವೂ ವಿಶಿಷ್ಟವೂ ವೈವಿಧ್ಯಪೂರ್ಣವೂ ವೇದಾಂತ ಪರಿಪ್ಲುತವೂ ಬೆಡಗಿನವೂ ಆಗಿರುವುದಕ್ಕೆ ಕಾರಣವೇನಿರಬಹುದು? ವ್ಯೋಮಮೂರುತಿಯಾದ ಅಲ್ಲಮ ತಾರುಣ್ಯದಲ್ಲಿ ಅನಿಮಿತ್ತವಾಗಿ ಕಾಮಪರವಶನಾಗಿ ಕಾಮಲತೆಯೂ ಇಲ್ಲದೆ ಮಾಯೆಯೂ ಇಲ್ಲದೆ ವೈರಾಗ್ಯಕ್ಕೆ ಶರಣಾಗುತ್ತಾನೆ. ಬಹುಕಾಲ ಯೋಗಿಯಾಗಿರುತ್ತಾನೆ. ಅವನಿಂದ ಹೊರಹೊಮ್ಮಿದ ವಚನಗಳು ಆಧ್ಯಾತ್ಮಿಕ ವಿರಹಗೀತೆಗಳಂತೆ ಬೆಡಗಿನ ವಚನಗಳಾಗಿರಬಹುದೆ? ಆಶುಕವಿತೆಗಳಂತೆ ಮೈದೋರಿರಬಹುದೆ? ದೃಷ್ಟಾಂತಕ್ಕೆ ಈ ವಚನಗಳನ್ನು ನೋಡಬಹುದು:

ಆನು ನೀನೆಂಬುದು ತಾನಿಲ್ಲ; ತಾನಳಿದ ಬಳಿಕ ಮತ್ತೇನೂ ಇಲ್ಲ ಇಲ್ಲ<br>
ಇಲ್ಲದ ಇಲ್ಲವೆಯೆಲ್ಲಿಂದ ಬಪ್ಪುದೋ; ಅನುವನಳಿದು ತನುವ ಮಱೆದು<br>
ಭಾವರಹಿತ ಗುಹೇಶ್ವರ. (೩೦೫)

ಸತ್ಯವೂ ಇಲ್ಲ, ಅಸತ್ಯವೂ ಇಲ್ಲ; ಸಹಜವೂ ಇಲ್ಲ ಅಸಹಜವೂ ಇಲ್ಲ<br>
ನಾನೂ ಇಲ್ಲ ನೀನೂ ಇಲ್ಲ; ಇಲ್ಲ ಇಲ್ಲ ಎಂಬುದು ತಾನಿಲ್ಲ<br>
ಗುಹೇಶ್ವರನೆಂಬುದು ತಾ ಬಯಲು. (೧೩೬೨)

'ಅಲ್ಲಮಪ್ರಭು' ಗ್ರಂಥದಲ್ಲಿ ಕೊಟ್ಟಿರುವ ಒಂಬತ್ತೂ ಅನುಬಂಧಗಳು ಅತ್ಯಂತ ಮಹತ್ವದ ಸಂಗತಿಗಳನ್ನು ನಿರೂಪಿಸುತ್ತವೆ. ಹಾಗಾಗಿ ಇವು ಈ ಕೃತಿಯ ಸಾರವತ್ತಾದ ಭಾಗಗಳಾಗಿವೆ. ಅವುಗಳ ವಿವರ ಇಂತಿದೆ:

ಅನುಬಂಧ-ಎ : ಇದರಲ್ಲಿ ವೀರಶೈವ ಪಾರಿಭಾಷಿಕ ಪದಗಳ ಪಟ್ಟಿಯನ್ನು ಕೊಟ್ಟಿದೆ. ಇವು ಈ ಕೃತಿಯನ್ನು ಪರಿಶೀಲಿಸುವವರಿಗೆ ಸ್ವಲ್ಪಮಟ್ಟಿಗೆ ಸಹಾಯವಾಗಬಲ್ಲುವು.

ಅನುಬಂಧ-ಬಿ : ಬಹುಮುಖ್ಯವಾದ ವಿಷಯಗಳನ್ನು ಪ್ರಸ್ತಾಪಿಸಲಾಗಿದೆ. ವಚನಗಳನ್ನು ಬರೆದವರು ಯಾರು? ಆಯಾ ವಚನಕಾರರೇ ತಮ್ಮ ವಚನಗಳನ್ನು ಬರೆದರೆ? ಅಥವಾ ಯಾರಾದರೂ ಅವರು ಹೇಳಿದ ವಚನಗಳನ್ನು ಬರೆದುಕೊಂಡರೆ? ಯಾರ ಯಾರ ವಚನಗಳೆಷ್ಟು? ಸಿದ್ಧರಾಮಯ್ಯನ ಒಂದು ವಚನವನ್ನು ಪ್ರಸ್ತಾಪಿಸಲಾಗಿದೆ. ಹನ್ನೆರಡನೆಯ ಶತಮಾನದಿಂದ ಇಲ್ಲಿನವರೆಗೆ ವಚನಗಳ ಪರಿಷ್ಕರಣ ಕಾರ್ಯ ನಡೆದಿದೆಯೆ? ವಚನಗಳನ್ನು ಯಾವ ಯಾವ ಮೂಲಗಳಿಂದ ಸಂಗ್ರಹಿಸಬಹುದು. ಮೊದಲಾದ ಜ್ವಲಂತಸಮಸ್ಯೆಗಳನ್ನು ವಿವೇಚಿಸಲಾಗಿದೆ.

ಅನುಬಂಧ-ಸಿ : ಶೂನ್ಯಸಂಪಾದನೆಗಳನ್ನು ಕುರಿತು ಮೌಲಿಕವಿಮರ್ಶೆ ಮಾಡಿದ್ದಾರೆ. ಶೂನ್ಯಸಂಪಾದನೆ ಎಂದರೇನು? ಲಭ್ಯವಿರುವ ನಾಲ್ಕು ಶೂನ್ಯಸಂಪಾದನೆಗಳ ಸ್ವರೂಪವೇನು? ಇವುಗಳಲ್ಲಿ ಯಾವ ಯಾವ ವಿಷಯಗಳನ್ನು ಯಾರ ಯಾರ ವಿಷಯಗಳನ್ನು ಪ್ರಸ್ತಾಪಿಸಲಾಗಿದೆ ಎಂಬ ಮಹತ್ವದ ವಿಷಯಗಳನ್ನು ಚರ್ಚಿಸಲಾಗಿದೆ. ಜೊತೆಗೆ ಈ ಶೂನ್ಯಸಂಪಾದನೆಗಳಲ್ಲಿ ವಿವೇಚಿಸಿರುವ ವಚನಗಳ ಸಂಖ್ಯೆ ಎಷ್ಟು? ಮಹಾಲಿಂಗನ ಸಂಪಾದನೆಯಲ್ಲಿ ಸೇರ್ಪಡೆಯಾಗಿರುವ ಷಟ್ಸ್ಥಲ ವಚನಗಳಲ್ಲಿ ಸಂಪಾದನಕಾರರು ಅಲ್ಲಮನ ವಚನಗಳೆಂದು ಪರಿಗಣಿಸಿ ಸೇರಿಸಿರುವ ವಚನಗಳೆಷ್ಟು? ಅಲ್ಲಮನ ಇತಿವೃತ್ತಗಳ ಬಗೆಗೆ ಪ್ರಾಚೀನ ಗ್ರಂಥಗಳಲ್ಲಿ ಕಂಡುಬರುವ ವ್ಯತ್ಯಾಸಗಳು ಈ ಧರ್ಮದ ಬಗೆಗೆ ಇರಬಹುದಾದ ದಕ್ಷಿಣೋತ್ತರ ಮಾರ್ಗಗಳ ಪ್ರಭೇದಗಳು; ಕಾಮಲತೆ, ಅನಿಮಿಷರ ಬಗೆಗೆ ಪ್ರಾಚೀನ ಕಾವ್ಯಗಳಲ್ಲಿ ಪ್ರತಿಪಾದಿತವಾಗಿರುವ ಸಂಗತಿಗಳು; ಅನಿಮಿಷನ ಬಗೆಗೆ ಕಂಡುಬರುವ ವ್ಯತ್ಯಾಸಗಳು; ಅಲ್ಲಮನಿಗೆ ದೀಕ್ಷೆಯಾಗಿತ್ತೆ? ಅಲ್ಲಮ ಇಷ್ಟಲಿಂಗಧಾರಿಯೆ? ಶೂನ್ಯಸಂಪಾದನೆಗಳಲ್ಲಿ ಕಂಡುಬರುವ ಸಾದೃಶ್ಯ ವೈದೃಶ್ಯಗಳನ್ನು ಅತ್ಯಂತ ಪ್ರಖರವಾಗಿ ಪರಿಶೀಲಿಸಿದ್ದಾರೆ, ವಿವೇಚಿಸಿದ್ದಾರೆ, ವಿಶ್ಲೇಷಿಸಿದ್ದಾರೆ, ತೀರ್ಮಾನಿಸಿದ್ದಾರೆ.

ಅನುಬಂಧ-ಡಿ : ಅಲ್ಲಮ ತನ್ನ ತತ್ವಸಿದ್ಧಾಂತದಂತೆ ವೀರಶೈವ ಧರ್ಮದ ಪ್ರಮುಖ ನಿಯಮಗಳನ್ನು ವಿರೋಧಿಸಿದ್ದಾದರೂ ಏಕೆ? ಈ ಧರ್ಮಕ್ಕೆ ಪ್ರಾಚೀನ ಶಾಸನ ಕಾವ್ಯಾಧಾರಗಳಿದ್ದರೂ ಅಲ್ಲಮ ಇವನ್ನು ನಿರಾಕರಿಸಿದ್ದಾದರೂ ಏಕೆ? ಈತನ ಸಿದ್ಧಾಂತ ೧೫ ಮತ್ತು ೧೬ನೆಯ ಶತಮಾನದ ವೀರಶೈವಧರ್ಮಕ್ಕಿಂತ ಭಿನ್ನವಾಗಿತ್ತೆ? ಈ ಎಲ್ಲ ಸಮಸ್ಯೆಯನ್ನು ಕೂಲಂಕಷವಾಗಿ ಚರ್ಚಿಸಿದ್ದಾರೆ.

ಅಂದಿನ ಧಾರ್ಮಿಕ ಕೇಂದ್ರವಾದ ಬಳ್ಳಿಗಾವೆ ಅಲ್ಲಮನ ಮೇಲೆ ಬೀರಿರುವ ಗಾಢವಾದ ಪ್ರಭಾವದ ರೀತಿಯನ್ನು ಸಾದರಪಡಿಸಿದ್ದಾರೆ. ಆ ಕಾಲದ ಕಾಳಾಮುಖ, ಲಕುಲೀಶ, ಪಾಶುಪತ ಶೈವಪಂಥಗಳು; ಲಕುಲೀಶ ಬೌದ್ಧಧರ್ಮಗಳ ಸಂಬಂಧ; ಅಲ್ಲಮ ಮತ್ತು ಕೋಡಿಮಠದ ಸಂಪರ್ಕ; ಪ್ರಭುದೇವರ ಗದ್ದುಗೆ; ಕೋಡಿಮಠ ಮತ್ತು ಕಾಶ್ಮೀರ ಶೈವಧರ್ಮ; ಲಕುಲೀಶಶೈವ ಮತ್ತು ಕಾಶ್ಮೀರ ಶೈವ ಸಂಬಂಧ; ಬಳ್ಳಿಗಾವೆಯಲ್ಲಿ ಬೌದ್ಧಧರ್ಮ; ವಜ್ರಾಯಣ ಬೌದ್ಧಧರ್ಮ ಮತ್ತು ನಾಥಪಂಥ; ಈ ನಾಥಪಂಥದ ಪ್ರಭಾವ; ಗುಹಾಂತರ ವಿಷಯ; ಕದ್ರಿ ದೇವಾಲಯ; ಶ್ರೀಶೈಲದ ಸಂಬಂಧ; ಕಾಳಾಮುಖ ಶೈವದ ಅವನತಿ; ಬಸವೋತ್ತರ ಪ್ರಗತಿ; ಬಸವ ಅಲ್ಲಮಧರ್ಮದ ಉಳಿವು. ಇವು ಈ ಅನುಬಂಧದಲ್ಲಿ ನಿರೂಪಿತವಾಗಿರುವ ಅತ್ಯಂತ ಪ್ರಮುಖ ವಿಷಯಗಳು.

ಅನುಬಂಧ-ಇ : ಅಲ್ಲಮನ ಜೀವನದಲ್ಲಿ ಹಾಸುಹೊಕ್ಕಾಗಿರುವ ಅನಿಮಿಷನ ಕಥೆ; ಈ ಕಥೆಯಲ್ಲಿನ ವೈರುಧ್ಯ ಸಂದಿಗ್ಧತೆ; ಅನಿಮಿಷನ ಗುಹೆ; ದೀಕ್ಷೆ; ಅನಿಮಿಷ ಶಬ್ದನಿಷ್ಪತ್ತಿ; ದಿವ್ಯದರ್ಶನ ದೇಹದೊಳಗೆ ಗುಹೆ ಇತ್ತೆ? ಪರಿಸಮಾಪ್ತಿ.

ಅನುಬಂಧ-II : ಕನ್ನಡ ವಚನಗಳ ಅಕಾರಾದಿ ಉಚ್ಚಾರಣೆಯ ಕೈಪಿಡಿ; ಲಿಪ್ಯಂತರ ಮಾಡಿದ ಪದಗಳು ಈ ಗ್ರಂಥದಲ್ಲಿ ಬಳಸಲಾದ ಸಂಸ್ಕೃತ ಮಂತ್ರಗಳು.

'ಅಲ್ಲಮಪ್ರಭು' ಕೃತಿಯ ಲೇಖಕರು ಐದು ವರ್ಷಗಳ ನಿರಂತರ ಅಧ್ಯಯನ ಮತ್ತು ಸಂಶೋಧನೆಯ ಪ್ರತಿಫಲ ಎಂದು ಹೇಳಿಕೊಂಡಿದ್ದಾರೆ. ಶ್ರೀಯುತರ ಈ ಮಾತಿನಲ್ಲಿ ಸತ್ಯಾಂಶವಿದೆ. ಕೇವಲ ಐದು ವರ್ಷಗಳ ಅಲ್ಪಾವಧಿಯಲ್ಲಿ ಅಲ್ಲಮಪ್ರಭುವನ್ನು ಅರ್ಥಮಾಡಿಕೊಂಡದ್ದು ಲೇಖಕರ ಪ್ರತಿಭೆ ಪಾಂಡಿತ್ಯಗಳಿಗೆ ನಿದರ್ಶನವಾಗಿದೆ. ಅಲ್ಲಮಪ್ರಭುವನ್ನು ಜನತೆಗೆ ದರ್ಶನ ಮಾಡಿಸಿಕೊಟ್ಟ ಲೇಖಕರಿಗೆ ಅಭಿನಂದನೆಗಳನ್ನು ಸಲ್ಲಿಸಿ ಅಭಿವಂದಿಸುತ್ತೇನೆ. ಲೇಖಕರು ತಮ್ಮ ವ್ಯಾಸಂಗಾವಧಿಯಲ್ಲಿ ಅಲ್ಲಮಪ್ರಭುವಿಗೆ ಸಂಬಂಧಿಸಿದ ಸಮಸ್ತ ವಿಷಯಗಳನ್ನೂ ಸಮಗ್ರವಾಗಿ ಸಮರ್ಪಕವಾಗಿ ಸಮರ್ಥವಾಗಿ ಪ್ರತಿಪಾದಿಸಿರುವುದಕ್ಕೆ ಮತ್ತೊಮ್ಮೆ ಅಭಿವಂದನೆಗಳು. ಇದೇ ರೀತಿ ಇನ್ನುಳಿದ ಪ್ರಮುಖ ವಚನಕಾರರ ಬಗೆಗೆ ಸಂಶೋಧನೆ ವ್ಯಾಸಂಗ ನಡೆಸಿದರೆ ತುಂಬ ಉಪಯೋಗವಾಗುತ್ತದೆ ಎಂಬುದರಲ್ಲಿ ಸಂಶಯವೇ ಇಲ್ಲ. ಪ್ರಸ್ತುತ ಲೇಖಕರು ಈ ಬಗೆಗೆ ಕಾರ್ಯೋನ್ಮುಖರಾಗುತ್ತಾರೆ ಎಂದು ಭಾವಿಸುತ್ತೇನೆ.

■

# ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ

"ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ದೊರಕಿದ್ದರೂ ಅದರ ಅನುಷ್ಠಾನ ನಿರೀಕ್ಷಿತ ಮಟ್ಟದಲ್ಲಾಗುತ್ತಿಲ್ಲ. ಈ ಅನ್ಯಾಯ ಸರಿಪಡಿಸುವಂತೆ ರಾಜ್ಯಸರ್ಕಾರ ಕೇಂದ್ರದ ಮೇಲೆ ಒತ್ತಡ ಹೇರುತ್ತಲೇ ಇದೆ" ಎಂದು ಸನ್ಮಾನ್ಯ ಮುಖ್ಯಮಂತ್ರಿಗಳು ೨೧.೨.೨೦೧೦ ಗದಗ ಸಮ್ಮೇಳನದಲ್ಲಿ ಹೇಳಿದ್ದಾರೆ. **ಪ್ರಜಾವಾಣಿ, ೨೮ ಭಾನುವಾರ, ಫೆಬ್ರವರಿ ೨೦೧೦**

**ಶಾಸ್ತ್ರೀಯ ಭಾಷೆ : ಸರ್ಕಾರದ ಆಲಸ್ಯ, ದಕ್ಕದ ನೆರವು ದೇವರು**

ದೇವರು ಕೊಟ್ಟರೂ ಪೂಜಾರಿ ಕೊಡಲಿಲ್ಲ ಎನ್ನುವಂತೆ ಕರ್ನಾಟಕ ಸರ್ಕಾರದ ವಿಳಂಬ ನೀತಿಯ ಪರಿಣಾಮವಾಗಿ ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಸಿಕ್ಕಿದ್ದರೂ ಭಾಷೆಯ ಅಭಿವೃದ್ಧಿಗೆ ಕೈಕೊಂಡ ಕ್ರಮಗಳ ಕುರಿತು ಕೇಂದ್ರಕ್ಕೆ ವರದಿ ಸಲ್ಲಿಸದೇ ಇರುವುದರಿಂದ ಹಣಕಾಸು ನೆರವು ಸಿಗುವ ಸಾಧ್ಯತೆ ಕಡಮೆಯಾಗಿದೆ.

ಕನ್ನಡ ಅಭಿವೃದ್ಧಿಗೆ ಕೈಗೊಂಡ ಕ್ರಮಗಳು ಹಾಗೂ ಕ್ರಿಯಾಯೋಜನೆಗಳನ್ನು ಕೇಂದ್ರಕ್ಕೆ ಕಳುಹಿಸುವಂತೆ ಕೇಂದ್ರ ಸಂಸ್ಕೃತಿ ಇಲಾಖೆ ರಾಜ್ಯಸರ್ಕಾರಕ್ಕೆ ಸೂಚನೆ ನೀಡಿತ್ತು. ಆದರೂ ಸಹ ರಾಜ್ಯ ಈ ಸೂಚನೆಯನ್ನು ಕಡೆಗಣಿಸಿ ಕೇಂದ್ರದ ಪತ್ರಕ್ಕೆ ಉತ್ತರಿಸದೇ ಇರುವುದರಿಂದ ಅದು ಕೇಂದ್ರದಿಂದ ಲಭ್ಯವಾಗುವ ಹಣಕಾಸು ಸೌಲಭ್ಯದಿಂದ ವಂಚಿತವಾಗುವ ನಿರೀಕ್ಷೆ ಇದೆ.

ಈ ಸಂಬಂಧವಾಗಿ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಕನ್ನಡ ಸಾಹಿತ್ಯದ ಯೋಜನೆಗಳನ್ನು ನಾನು ಈ ಮುಂದಿನ ಕ್ರಮದಲ್ಲಿ ವಿಭಜಿಸಿದ್ದೇನೆ. **ಪ್ರಜಾವಾಣಿ ೪.೩.೨೦೧೦**

**ಶಾಸ್ತ್ರೀಯ ಭಾಷೆ : ಕೇಂದ್ರದಿಂದ ಪತ್ರ ಬಂದಿಲ್ಲ**

ಶಾಸ್ತ್ರೀಯ ಭಾಷೆಗೆ ಸಲ್ಲಬೇಕಾದ ಸೌಲಭ್ಯಗಳನ್ನು ಪಡೆಯುವ ಸಲುವಾಗಿ ಕ್ರಿಯಾಯೋಜನೆ ರೂಪಿಸುವಂತೆ ಕೋರಿ ಕೇಂದ್ರದಿಂದ ಯಾವುದೇ ಪತ್ರ ಬಂದಿಲ್ಲ ಎಂದು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿ ಬಿ.ಆರ್. ಜಯರಾಮರಾಜೇ ಅರಸ್ ತಿಳಿಸಿದ್ದಾರೆ.

ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ೨೦೦೮ರ ಅಕ್ಟೋಬರ್ ೩೧ ರಂದು ನೀಡಿದ್ದರೂ ಇದುವರೆಗೆ ಸೌಲಭ್ಯಗಳನ್ನು ನೀಡುವುದರ ಸಂಬಂಧ ಆರ್ಥಿಕ ಸ್ಥಾಯಿ ಸಮಿತಿ ರಚನೆಯಾಗಿಲ್ಲ. ಸಮಿತಿ ರಚಿಸಲು ಸಂಬಂಧಪಟ್ಟ ಅಧಿಕಾರಿಗಳಿಗೆ ಸೂಚನೆ ನೀಡುವಂತೆ ಕೋರಿ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರು ಫೆ. ೧೧ ರಂದು ಪ್ರಧಾನಿ ಡಾ. ಮನಮೋಹನಸಿಂಗ್ ಅವರಿಗೆ ಪತ್ರ ಬರೆದಿದ್ದಾರೆ. ಕನ್ನಡ ಭಾಷೆಗೆ ಸಲ್ಲಬೇಕಾದ ಸೌಲಭ್ಯಗಳು ಅನುದಾನ ನೀಡುವ ಸಂಬಂಧ ಆರ್ಥಿಕ ಸ್ಥಾಯಿ ಸಮಿತಿ ರಚಿಸುವುದು ಕಡ್ಡಾಯ. ಈ ಸ್ಥಾಯಿ ಸಮಿತಿ ಭಾರತೀಯ ಭಾಷೆಗಳ ಕೇಂದ್ರೀಯ ಸಂಸ್ಥೆ ಮುಖಾಂತರ ಕ್ರಿಯಾಯೋಜನೆ ತಯಾರಿಸಬೇಕು. ಆ ರೀತಿಯ ಕ್ರಿಯಾಯೋಜನೆಯನ್ನು ಕೇಂದ್ರವೇ ರೂಪಿಸಬೇಕಾಗುತ್ತದೆ ಎಂದು ತಿಳಿಸಿದ್ದಾರೆ.

ಆಂಧ್ರ ಕೂಡ ಕ್ರಿಯಾಯೋಜನೆ ಸಲ್ಲಿಸಿಲ್ಲ. ಈ ಬಗ್ಗೆ ಮಾಹಿತಿ ಪಡೆದುಕೊಳ್ಳಲಾಗಿದೆ. ಆರ್ಥಿಕ ಸ್ಥಾಯಿ ಸಮಿತಿ ರಚಿಸುವಂತೆ ಮಾನವ ಸಂಪನ್ಮೂಲ ಇಲಾಖೆ ಜಂಟಿ ಕಾರ್ಯದರ್ಶಿಗೂ ಪತ್ರ ಬರೆಯಲಾಗಿದೆ. ಆದ್ದರಿಂದ ಸರ್ಕಾರ ಕ್ರಿಯಾಯೋಜನೆ ರೂಪಿಸಿಲ್ಲ ಎಂಬುದು ಸತ್ಯಕ್ಕೆ ದೂರವಾದುದು ಎಂದು ಅವರು ಪ್ರಕಟನೆಯಲ್ಲಿ ತಿಳಿಸಿದ್ದಾರೆ. ಈ ಸಂಬಂಧವಾಗಿ ನನ್ನ ಸಲಹೆ-ಸೂಚನೆಗಳು:

**I. ಕನ್ನಡ ನಿಘಂಟು ಯೋಜನೆ**

(ಅ) ಕನ್ನಡ ಸಾಹಿತ್ಯ ಪರಿಷತ್ತು ಈಗಾಗಲೇ ಸಿದ್ಧಪಡಿಸಿ ಪ್ರಕಟಿಸಿರುವ ನಿಘಂಟಿನ ಎಂಟು ಸಂಪುಟಗಳ ಪರಿಷ್ಕರಣೆ ಮತ್ತು ಇಂದಿನವರೆಗಿನ ಸೇರ್ಪಡೆಗಳು.

(ಆ) ವಿವಿಧ ಪ್ರಕಾರದ ನಿಘಂಟುಗಳ ಸಂಕಲನ

i. ಏಕಭಾಷಿಕ, ದ್ವಿಭಾಷಿಕ, ಬಹುಭಾಷಿಕ ನಿಘಂಟುಗಳು

ii. ವಿವಿಧ ಧರ್ಮಗಳಿಗೆ ಸಂಬಂಧಿಸಿದ ಪಾರಿಭಾಷಿಕ ನಿಘಂಟುಗಳು

iii. ವೈಜ್ಞಾನಿಕ ನಿಘಂಟುಗಳು- ರಸಾಯನಶಾಸ್ತ್ರ, ಭೌತಶಾಸ್ತ್ರ, ಸಸ್ಯಶಾಸ್ತ್ರ ಇತ್ಯಾದಿ.

iv. ತಾಂತ್ರಿಕ ನಿಘಂಟುಗಳು

v. ವಿವಿಧ ಪ್ರಕಾರಗಳಿಗೆ ಸಂಬಂಧಿಸಿದ ಶಾಸ್ತ್ರೀಯ ನಿಘಂಟು- ಸಂಗೀತಶಾಸ್ತ್ರ, ನೃತ್ಯಶಾಸ್ತ್ರ, ಶಿಲ್ಪಶಾಸ್ತ್ರ, ವೈದ್ಯಶಾಸ್ತ್ರ, ಅಶ್ವಶಾಸ್ತ್ರ, ಗಜಶಾಸ್ತ್ರ, ಪಾಕಶಾಸ್ತ್ರ, ಕಾಮಶಾಸ್ತ್ರ ಇತ್ಯಾದಿ.

vi. ಪಾಶ್ಚಾತ್ಯ ವಿದ್ವಾಂಸರು ಕನ್ನಡಕ್ಕೆ ಸಂಕಲಿಸಿರುವ ನಿಘಂಟುಗಳು- ರೆವರೆಂಡ್ ರೀವ್, ವಿಲಿಯಂ ಸ್ಯಾಂಡರ್‌ಸನ್, ಗ್ಯಾರೆಟ್, ಬುಚರ್, ಝುಗ್ಲರ್, ರೆವರೆಂಡ್ ಎಫ್. ಕಿಟೆಲ್ -ಇವರೇ ಮೊದಲಾದವರ ನಿಘಂಟುಗಳು.

vii. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ಎಂಟು ಸಂಪುಟಗಳ ಲಿಪ್ಯಂತರ ಮತ್ತು ಭಾಷಾಂತರ.

viii. ವ್ಯಾಕರಣ, ಛಂದಸ್ಸು, ಅಲಂಕಾರ -ಇವೇ ಮೊದಲಾದ ವಿಶಿಷ್ಟ ಪದಕೋಶಗಳು.

ix. ಕರ್ನಾಟಕ ಸರ್ಕಾರದ ಎಲ್ಲಾ ಇಲಾಖೆಗಳ ಆಡಳಿತ ಪದಕೋಶಗಳು ಇತ್ಯಾದಿ.

**II. ಕರ್ನಾಟಕದ ಸಮಗ್ರ ಶಾಸನಗಳ ಸಂಪುಟಗಳ ಪರಿಷ್ಕರಣೆ ಪ್ರಕಟಣೆ**

ಶಾಸನಗಳು ಯಾವುದೇ ನಾಡಿನ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಪ್ರಗತಿಯ ದಾಖಲೆಗಳಾಗಿವೆ. ಕರ್ನಾಟಕದ ಪ್ರತಿಯೊಂದು ಗ್ರಾಮದಲ್ಲಿಯೂ ಒಂದಲ್ಲ ಒಂದು ಶಾಸನ ಕಂಡುಬರುತ್ತದೆ. ಇವು ಆ ಗ್ರಾಮದ ಚಾರಿತ್ರಿಕ ಐತಿಹಾಸಿಕ ಮಾಹಿತಿಯನ್ನು ತಿಳಿಯಪಡಿಸುತ್ತವೆ. ಆದ್ದರಿಂದ ಪ್ರತಿಯೊಂದು ಗ್ರಾಮದಲ್ಲಿ ಲಭ್ಯವಾಗುವ ಶಾಸನಗಳನ್ನು ಸಂಗ್ರಹಿಸಿ, ಪರಿಶೀಲಿಸಿ, ವಿಂಗಡಿಸಿ ಪ್ರಕಟಿಸಬೇಕಾಗಿದೆ. ಈ ಕಾರ್ಯ ಸಾಕಷ್ಟು ನಡೆದಿದ್ದರೂ ಮತ್ತೊಮ್ಮೆ ಸಮಗ್ರವಾಗಿ ನಡೆಯಬೇಕಾಗಿದೆ. ಈ ನಿಟ್ಟಿನಲ್ಲಿ ಈವರೆಗಿನ ಎಲ್ಲ ಶಾಸನ ಸಂಪುಟಗಳೂ ಜನತೆಗೆ ಲಭ್ಯವಾಗಬೇಕಾಗಿದೆ. ಈ ಎಲ್ಲ ಶಾಸನ ಸಂಪುಟಗಳ ಅಧಿಕೃತ ಮುದ್ರಣವನ್ನು ಹೊರತರುವುದು ಅಗತ್ಯವಾಗಿದೆ. ಶಾಸನಗಳ ಶಬ್ದಕೋಶ ಪ್ರಕಟಣೆ.

**III. ಅಪ್ರಕಟಿತ ಪ್ರಾಚೀನ ಕನ್ನಡ ಗ್ರಂಥಗಳ ಸಂಪಾದನೆ ಮತ್ತು ಪ್ರಕಟಣೆ**

ಕನ್ನಡ ಸಾಹಿತ್ಯದ ಅಸಂಖ್ಯಾತ ಪ್ರಾಚೀನ ಕೃತಿಗಳು ಅಪ್ರಕಟಿತವಾಗಿವೆ. ನಮ್ಮ ಹಿರಿಯರು ನಮಗೆ ಬಿಟ್ಟು ಹೋಗಿರುವ ಅಮೂಲ್ಯ ಆಸ್ತಿ ಈ ಪ್ರಾಚೀನ ಕೃತಿಗಳು. ಮುದ್ರಣಸೌಲಭ್ಯ ಇಲ್ಲದಿದ್ದ ಕಾಲದಲ್ಲಿ ರಚಿತವಾದ ಈ ಪ್ರಾಚೀನ

ಕೃತಿಗಳು ಓಲೆಗರಿಗಳಲ್ಲಿ ಕಾಗದದ ಕಡತಗಳಲ್ಲಿ ಉಳಿದುಕೊಂಡುಬಿಟ್ಟಿವೆ. ನಮ್ಮ ಜನ ಅತ್ಯಂತ ಭಯಭಕ್ತಿಗಳಿಂದ ಈ ಓಲೆಗರಿಗಳನ್ನು ಹೊರತೆಗೆಯದೆ ನವರಾತ್ರಿಯಂದು ಮಾತ್ರ ಹೊರತೆಗೆದು ಪೂಜೆಮಾಡಿ ಅಟ್ಟದ ಮೇಲೋ ಗೂಡುಗಳಲ್ಲೋ ಬಚ್ಚಿಟ್ಟು ಬಿಡುತ್ತಾರೆ. ಹೀಗಾಗಿ ಅಪಾರ ಸಾಹಿತ್ಯ ಪ್ರಕಟವಾಗಿಲ್ಲ. ಈ ಓಲೆಗರಿಗಳು ವಿವಿಧ ಮಠಮಾನ್ಯಗಳಲ್ಲಿ ರಕ್ಷಿಸಲ್ಪಟ್ಟಿರುತ್ತವೆ. ಇವನ್ನು ಎಲ್ಲರೂ ನೋಡಲು ಓದಲು ಸಾಧ್ಯವಿಲ್ಲ. ಪ್ರಸ್ತುತ ಶ್ರವಣಬೆಳಗೊಳ, ಮೂಡಬಿದರೆ, ಧರ್ಮಸ್ಥಳ, ಹೊಂಬುಜ, ಚಿತ್ರದುರ್ಗದ ಬೃಹನ್ಮಠ, ಗದಗಿನ ತೋಂಟದಾರ್ಯ ಮಠ, ಸುತ್ತೂರು ಮಠ, ಬೆಳಗಾಂ ನಾಗನೂರುಮಠ – ಮೊದಲಾದ ಮಠಮಾನ್ಯಗಳಲ್ಲೂ; ಮೈಸೂರು, ಬೆಂಗಳೂರು, ಕರ್ನಾಟಕ, ಕುವೆಂಪು ವಿಶ್ವವಿದ್ಯಾಲಯ, ಹಂಪಿ ವಿಶ್ವವಿದ್ಯಾಲಯಗಳಲ್ಲೂ, ಮೇಲುಕೋಟೆ, ಮೈಸೂರಿನ ಅರಮನೆ, ಪರಕಾಲಮಠ, ಕನ್ನಡ ಸಾಹಿತ್ಯ ಪರಿಷತ್ತು, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ, ಕರ್ನಾಟಕದ ಹೊರಗಿನ ಆರಾ. ಲೈಬ್ರರಿ, ಕೊಲ್ಲಾಪುರದ ಹಸ್ತಪ್ರತಿಭಂಡಾರ, ಮದರಾಸು ಮತ್ತು ಬೊಂಬಾಯಿ ವಿಶ್ವವಿದ್ಯಾಲಯಗಳಲ್ಲಿ ಅಸಂಖ್ಯಾತ ಹಸ್ತಪ್ರತಿಗಳಿವೆ. ಬಹುಮಟ್ಟಿನ ಗ್ರಂಥಭಂಡಾರಗಳು ಈ ಹಸ್ತಪ್ರತಿಗಳ ಸೂಚಿಯನ್ನು ತಯಾರಿಸಿವೆ. ಈ ಎಲ್ಲ ಸೂಚಿಗಳನ್ನು ಪರಿಶೀಲಿಸಿದಾಗ ಅಪ್ರಕಟಿತ ಕೃತಿಗಳ ಒಂದು ಪಟ್ಟಿಯನ್ನು ಸಿದ್ಧಪಡಿಸಬಹುದಾಗಿದೆ. ಇವುಗಳ ಸಂಗ್ರಹ, ಸಂರಕ್ಷಣೆ, ಸಂಪಾದನೆ, ಪ್ರಕಟಣೆ ಕಾರ್ಯಗಳು ಅಚಿರದಲ್ಲೇ ಆಗಬೇಕಾಗಿದೆ.

### IV. ಕರ್ನಾಟಕ ಸ್ಮಾರಕಗಳು, ದೇವಾಲಯಗಳು

ಕರ್ನಾಟಕದ ಅರಸುಮನೆತನದವರು ಕಾಲಕಾಲಕ್ಕೆ ನಿರ್ಮಿಸಿರುವ ದೇವಾಲಯಗಳು, ಮಂದಿರಗಳು, ಮಸೀದಿಗಳು ಸ್ಮಾರಕಗಳ ಇತಿವೃತ್ತಗಳು, ಸಂಶೋಧನೆ, ಸಂರಕ್ಷಣೆ, ಸಂಪೂರ್ಣ ಮಾಹಿತಿಯ ಲಭ್ಯತೆ –ಈ ಐತಿಹ್ಯಗಳು ಸಾಹಿತ್ಯದ ಮೇಲೆ ಬೀರಿರುವ ಪ್ರಭಾವ –ಈ ಮೊದಲಾದ ಮಹತ್ವದ ಮಾಹಿತಿಯನ್ನು ಐತಿಹಾಸಿಕ ದಾಖಲೆಗಳನ್ನೂ ಸಂಗ್ರಹಿಸಿ ಪ್ರಕಟಿಸುವ ಮಹತ್ವದ ಕಾರ್ಯ ಅಗತ್ಯವಾದುದು.

### V. ಕರ್ನಾಟಕ ಏಕೀಕರಣದ ಚರಿತ್ರೆ

ಕರ್ನಾಟಕ ಏಕೀಕರಣಕ್ಕಾಗಿ ನಡೆದ ಸಮಸ್ತ ಮಾಹಿತಿಯನ್ನು ಒಳಗೊಂಡ ವಿವರವಾದ ಇತಿಹಾಸವನ್ನು ಅಧಿಕೃತವಾಗಿ ಬರೆಸಿ ಪ್ರಕಟಿಸಬೇಕು. ನೂತನವಾಗಿ ನಿರ್ಮಾಣಗೊಂಡ ಜಿಲ್ಲೆಗಳು ತಾಲ್ಲೂಕುಗಳು ಅವುಗಳ ಇತಿವೃತ್ತಗಳನ್ನೂ ಸಮಗ್ರವಾಗಿ ಬರೆಸಿ ಪ್ರಕಟಿಸಬೇಕು.

ಈ ಮೇಲಿನ ಐದು ವಿವಿಧ ಪ್ರಕಾರಗಳಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರ ಶಾಸ್ತ್ರೀಯ ಭಾಷೆ ಯೋಜನೆಯ ಅಡಿಯಲ್ಲಿ ೫೦ ಕೋಟಿ (ಐವತ್ತು ಕೋಟಿ) ರೂಪಾಯಿಗಳನ್ನು ಮೊದಲ ಕಂತಾಗಿ ಬಿಡುಗಡೆ ಮಾಡಬೇಕೆಂದು ವಿನಂತಿಸಿಕೊಳ್ಳಲಾಗಿದೆ.



# ಎಂ.ಎಸ್. ಪುಟ್ಟಣ್ಣನವರ ಹೇಮಂತರಾಜಕುಮಾರ ಚರಿತೆ :

## ಸಂ. ಡಾ. ಎಚ್.ಎಸ್. ಸುಜಾತ

ಹತ್ತೊಂಬತ್ತನೆಯ ಶತಮಾನದಲ್ಲಿ ಕನ್ನಡನಾಡಿನಲ್ಲಿ ಬಾಳಿಬೆಳಗಿದ ಎಂ.ಎಸ್. ಪುಟ್ಟಣ್ಣನವರು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿರುವ ಅನುಪಮ ಸೇವೆಯಿಂದ. ರಚಿಸಿರುವ ವಿಶಿಷ್ಟ ಕೃತಿಗಳಿಂದ ಅಮರರಾಗಿದ್ದಾರೆ. ಇಂತಹ ಅಪರೂಪದ ಸಾಹಿತಿಯ ಬದುಕು-ಬರಹವನ್ನು ಕುರಿತು ವ್ಯಾಪಕ ವ್ಯಾಸಂಗವನ್ನೂ ಸಂಶೋಧನೆಯನ್ನೂ ಮಾಡಿ ಪಿಎಚ್.ಡಿ. ಪದವಿಯನ್ನು ಪಡೆದುಕೊಂಡಿರುವ ಡಾ. ಎಚ್.ಎಸ್. ಸುಜಾತಾ ಅವರು ಇದೀಗ ಪುಟ್ಟಣ್ಣನವರು ೧೯೨೦ರ ವೇಳೆಗೆ ಸಿದ್ಧಪಡಿಸಿದ್ದ ಮಹಾಕವಿ ಷೇಕ್ಸ್‌ಪಿಯರ್‌ನ ಹ್ಯಾಮ್ಲೆಟ್ ನಾಟಕದ ಗದ್ಯರೂಪಾಂತರವನ್ನು ಸಂಗ್ರಹಿಸಿ ಸಂಪಾದಿಸಿ ಅಚ್ಚುಕಟ್ಟಾಗಿ ಹೊರತಂದಿದ್ದಾರೆ. ಅತ್ಯಂತ ಆಕರ್ಷಕವಾಗಿ ಮುದ್ರಣಗೊಂಡಿರುವ ಈ ಕೃತಿ ನೋಡಿದವರ ಮನಸವನ್ನು ಸೂರೆಗೊಳ್ಳುತ್ತದೆ.

ಈ ಕೃತಿಯ ಬಗೆಗೆ "ಹೇಮಂತರಾಜಕುಮಾರ ಚರಿತ್ರೆ ಪುಟ್ಟಣ್ಣನವರ ಹಸ್ತಾಕ್ಷರದಲ್ಲಿ ಪೂಲ್ಸ್‌ಕ್ಯಾಪ್ ಕಾಗದದಲ್ಲಿ ಮುನ್ನೂರನಲವತ್ತುಮೂರು ಪುಟಗಳ ವಿಸ್ತಾರದ್ದು. ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಪುಟ್ಟಣ್ಣನವರು ಪೀಠಿಕೆಗಳನ್ನು ಬರೆದಿದ್ದಾರೆ. ತಮ್ಮ ರೂಪಾಂತರವನ್ನು ಪುಟ್ಟಣ್ಣನವರು ಗದ್ಯನಾಟಕ ಎಂದು ಹೆಸರಿಸಿದ್ದಾರೆ. ನಾಟಕದ ಅಂತ್ಯದಲ್ಲಿ ರೌದ್ರಿ ಸಂ। ಭಾದ್ರಪದ ಬ। ೧೨ ಸ್ಥಿರವಾದ ಸಾಯಂಕಾಲ ೫ ಗಂಟೆ ಸಮಯ ಎಂದೂ ೧೦-೧೦-೧೯೨೦ ಎಂದೂ ಕ್ರಮವಾಗಿ ಶಾಲಿವಾಹನ ಶಕೆ ಮತ್ತು ಕ್ರಿಸ್ತಶಕೆಗಳ ದಿನಾಂಕಗಳನ್ನು ಪುಟ್ಟಣ್ಣನವರು ಸ್ಪಷ್ಟವಾಗಿ ನಮೂದಿಸಿದ್ದಾರೆ" ಎಂದಿದ್ದಾರೆ ಸಂಪಾದಕರು. ಪುಟ್ಟಣ್ಣನವರು ೧೯೨೯ರಲ್ಲೇ ಈ ನಾಟಕವನ್ನು ಕನ್ನಡಕ್ಕೆ ರೂಪಾಂತರಿಸಿದ್ದರೂ ಅದು ಇಲ್ಲಿಯವರೆಗೆ ಪ್ರಕಟವಾಗದಿರುವುದು ದುರ್ದೈವದ ಸಂಗತಿ. ಈ ಅವಧಿಯಲ್ಲಿ ಈ ನಾಟಕದ ನಾಲ್ಕೂ ಬೇರೆ ಬೇರೆ ಅನುವಾದಗಳು ಹೊರಬಂದಿವೆ. ಅವು- ವೈ.ಎಂ. ಷಣ್ಮುಖಯ್ಯ, ಶ್ರೀನಿವಾಸ, ಎಂ. ಆನಂದರಾವ್ ಮತ್ತು ರಾಮಚಂದ್ರದೇವ. ಈ ನಾಲ್ವರ ಭಾಷಾಂತರಗಳ ಸಾರಾಸಾರ ವಿಮರ್ಶೆಯನ್ನೂ ಪ್ರಸ್ತುತ ಸಂಪಾದಕರು ಮಾಡಿದ್ದಾರೆ.

ಪುಟ್ಟಣ್ಣನವರ ಈ ಗದ್ಯನಾಟಕದ ಬಗೆಗೂ ಡಾ. ಸುಜಾತಾ ಅವರು ವಿಮರ್ಶಿಸಿದ್ದಾರೆ, ಪ್ರತಿಕ್ರಿಯಿಸಿದ್ದಾರೆ. ಅವುಗಳಲ್ಲಿ ಕೆಲವು ಅಂಶಗಳು ಸಮರ್ಥನೀಯವೆನಿಸಿದರೂ ಮತ್ತು ಕೆಲವು ಅಂಶಗಳನ್ನು ಸಮ್ಮತಿಸುವುದು ದುಸ್ತರವಾಗುತ್ತದೆ. ಸುಮಾರು ಒಂದು ಶತಮಾನದ ಹಿಂದೆ ರೂಪಾಂತರಗೊಂಡ ಈ ನಾಟಕದ ಕೆಲವು ಭಾಷಾಪ್ರಭೇದಗಳು ಬರವಣಿಗೆಯ ವೈವಿಧ್ಯಗಳು ಇಂದಿನವರೆಗೆ ವಿಚಿತ್ರವಾಗಿ ಕಾಣಬಹುದು. ಜೊತೆಗೆ ಸ್ಪಷ್ಟವಾದ ಕೆಲವು ಮುದ್ರಣಸ್ಖಾಲಿತ್ಯಗಳನ್ನು ನಾಟಕಕಾರರ ಸ್ಖಾಲಿತ್ಯಗಳೆಂದು ಭಾವಿಸುವುದಕ್ಕೆ ಎಡೆಯಿಲ್ಲ.

ಡಾ. ಎಚ್.ಎಸ್. ಸುಜಾತಾ ಅವರು ಪುಟ್ಟಣ್ಣನವರ ಸಮಗ್ರ ಕೃತಿಗಳ ಒಂದು ಯಾದಿಯನ್ನು ಕಾಲಾನುಕ್ರಮದಲ್ಲಿ ಪಿಂಗಡಿಸಿಕೊಟ್ಟಿದ್ದಾರೆ. ಅಲ್ಲದೆ ಅವರ ಕನ್ನಡ ಇಂಗ್ಲಿಷ್ ಲೇಖನಗಳ ಬಗೆಗೆ ಬಂದಿರುವ ಅಭಿಪ್ರಾಯಗಳನ್ನು ಸಂಗ್ರಹಿಸಿಕೊಟ್ಟಿರುವುದು ಉಪಯುಕ್ತ ಅಂಶಗಳಾಗಿವೆ.

ಆಧುನಿಕ ಕನ್ನಡ ಸಾಹಿತ್ಯವನ್ನು ಕಟ್ಟಿ ಬೆಳೆಸಿದ ಪ್ರಾತಃಸ್ಮರಣೀಯರಲ್ಲಿ ಅಗ್ರಗಣ್ಯರಾದ ಎಂ.ಎಸ್. ಪುಟ್ಟಣ್ಣನವರ ಸಾಹಿತ್ಯದ ಸಮಗ್ರ ದರ್ಶನವನ್ನು ಡಾ. ಎಚ್.ಎಸ್. ಸುಜಾತಾ ಅವರು ಮಾಡಿಸಿದ್ದಾರೆ. ಈವರೆಗೆ ಅಪ್ರಕಟಿತವಾಗಿದ್ದ ವಿಶ್ವದ ಶ್ರೇಷ್ಠ ಕವಿ ಷೇಕ್ಸ್‌ಪಿಯರ್ ವಿರಚಿತ ಹ್ಯಾಮ್ಲೆಟ್ ನಾಟಕದ ಗದ್ಯರೂಪಾಂತರವನ್ನು ಅತ್ಯಂತ ಶ್ರಮ ಪರಿಶ್ರಮಗಳಿಂದ ಹೊರತಂದಿದ್ದಾರೆ. ಡಾ. ಸುಜಾತಾ ಅವರ ಶ್ರದ್ಧೆ ನಿಷ್ಠೆಗಳ ಸಂಕೇತವಾಗಿ ಮನಮೋಹಕವಾಗಿ ಪ್ರಕಟವಾಗಿರುವ "ಹೇಮಂತರಾಜಕುಮಾರ ಚರಿತ" ಅವರಿಗೆ ಎಲ್ಲ ಶ್ರೇಯಸ್ಸನ್ನುಂಟುಮಾಡಲಿ ಎಂದು ಹಾರೈಸುತ್ತೇನೆ.

■

# ಗೋವಿಂದ ಪೈ ವಿಮರ್ಶಾ ಸಾಹಿತ್ಯ

## (ಅಧ್ಯಕ್ಷ ಭಾಷಣ)

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧಕ ಕನ್ನಡ ಸಾಹಿತಿಗಳ ಸಾಲಿನಲ್ಲಿ ಎಂ. ಗೋವಿಂದ ಪೈ ಅಗ್ರಗಣ್ಯರು. ೧೯೪೯ರಲ್ಲಿ ಮದರಾಸು ಸರ್ಕಾರವು ಮುಂಬಯಿಯಲ್ಲಿ ನಡೆಸಿದ ಮೂವತ್ತನಾಲ್ಕನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಬಹುಭಾಷಾಪ್ರಿಯರಾದ ಗೋವಿಂದ ಪೈ ಅವರಿಗೆ ಕನ್ನಡ, ಇಂಗ್ಲಿಷ್, ಕೊಂಕಣಿ, ಹಿಂದಿ, ಸಂಸ್ಕೃತ ಭಾಷೆಗಳಲ್ಲಿ ಪರಿಣತಿಯೂ, ಪ್ರಾಕೃತ, ಪಾಲಿ, ಲ್ಯಾಟಿನ್, ಗ್ರೀಕ್, ಜರ್ಮನ್, ಅರಬ್ಬೀ, ಮರಾಠೀ, ಬಂಗಾಳಿ, ಉರ್ದು, ಜಪಾನಿ ಭಾಷೆಗಳ ತಕ್ಕಮಟ್ಟಿನ ಪರಿಚಯವೂ ಇತ್ತು. ಬಹುಮುಖವಾಗಿ ಸಾಹಿತ್ಯಸೇವೆ ಮಾಡಿದ ಪೈ ಅವರು ಕಾವ್ಯ, ನಾಟಕ, ಸಂಶೋಧನ ಬರಹಗಳು, ಅನುವಾದಗಳು ಮತ್ತು ವಿಮರ್ಶಾ ಲೇಖನಗಳನ್ನು ರಚಿಸಿದ್ದಾರೆ.

ಗೋವಿಂದ ಪೈ ಅವರ ವಿಮರ್ಶಾ ಸಾಹಿತ್ಯವು "ಗೋವಿಂದ ಪೈ ಸಂಶೋಧನ ಸಂಪುಟ"ದ ನವಮಖಂಡದ ಪುಸ್ತಕ ವಿಮರ್ಶೆಗಳು ಎಂಬ ವಿಭಾಗದಲ್ಲಿ ಎಂಟು ವಿಮರ್ಶೆಗಳ ರೂಪದಲ್ಲಿ ಸಮಾವೇಶಗೊಂಡಿವೆ. ಪಾಂಡೇಶ್ವರ ಗಣಪತಿರಾವ್ ಅವರ 'ಹೂಗೊಂಚಲು', ಆರ್. ನರಸಿಂಹಾಚಾರ್ಯರ 'ಕರ್ನಾಟಕ ಕವಿಚರಿತೆ', ಡಾ. ಕೃಷ್ಣ ಅವರ ಸಂಪಾದಕತ್ವದ 'ಮೈಸೂರು ಶಾಸನ ಇಲಾಖೆಯ ವರದಿ', ಕಂ. ಕೃಷ್ಣಯ್ಯಂಗಾರ್‌ರವರ 'ಭಾರತೀಯ ಇತಿಹಾಸ ಪ್ರವೇಶಿಕೆ', ಬಂಕಿಮಚಂದ್ರ ಚಟ್ಟೋಪಾಧ್ಯಾಯರ 'ಶ್ರೀಕೃಷ್ಣ ಚರಿತ್ರೆ', (ಸಂಪಾದಕ) ಆರ್.ಎಸ್. ಪಂಚಮುಖಿ ಅವರ 'ಕರ್ನಾಟಕ ಶಾಸನಗಳು', ನೆಲಮಂಗಲ ಲಕ್ಷ್ಮೀನಾರಾಯಣ ರಾಯರು ಮತ್ತು ಆರ್.ಎಸ್. ಪಂಚಮುಖಿ ಅವರ 'ಕರ್ನಾಟಕ ಅರಸು ಮನೆತನಗಳು', ಕೆ.ವಿ. ಸುಬ್ರಹ್ಮಣ್ಯ ಅಯ್ಯರ್‌ರವರ 'ಉಪನ್ಯಾಸಗಳು' –ಈ ಎಂಟು ವಿಮರ್ಶೆಗಳನ್ನು ಕುರಿತು ಪ್ರತ್ಯೇಕವಾಗಿ ಜಿಜ್ಞಾಸೆ ಮಾಡದೆ ಗೋವಿಂದ ಪೈಗಳ ವಿಮರ್ಶೆಯ ರೂಪುರೇಷೆಗಳನ್ನು ಮಾತ್ರ ಗುರುತಿಸುವುದಕ್ಕೆ ಇಲ್ಲಿ ಪ್ರಯತ್ನಿಸಲಾಗಿದೆ. ಪೈ ಅವರು ಎಂಟು ಪುಸ್ತಕಗಳ ಬಗೆಗೆ ಬರೆದ ವಿಮರ್ಶೆಯ ವಿಧಿವಿಧಾನಗಳು ಹೇಗಿವೆ ಎಂಬುದನ್ನು ತಿಳಿಸುವ ಪ್ರಯತ್ನವನ್ನು ಮಾತ್ರ ಇಲ್ಲಿ ಮಾಡಲಾಗಿದೆ.

ಗೋವಿಂದ ಪೈ ಅವರ ವಿಮರ್ಶಾಬರಹಗಳಲ್ಲಿ ಕೃತಿಕಾರನ ಸಾಧನೆಯನ್ನು, ಪಾಂಡಿತ್ಯವನ್ನು ಅಭಿನಂದಿಸಿರುವುದು ಎದ್ದುಕಾಣುತ್ತದೆ. ಒಂದು ಗ್ರಂಥದಲ್ಲಿ ಇರುವ ಎಲ್ಲಾ ವಿಚಾರಗಳನ್ನು ಪೈ ಚರ್ಚಿಸುತ್ತಾರೆ. ಇದು ಕೃತಿಕಾರರ ಬಗ್ಗೆ ಇರುವ ಗೌರವ ಮತ್ತು ಅವರ ಸಾಧನೆಯನ್ನು ತೋರಿಸುವ ಮಹತ್ವದ ಕೆಲಸ.

ಪಾಂಡೇಶ್ವರದ ಗಣಪತಿರಾವ್ ಅವರ ಕವನ ಸಂಕಲನ 'ಹೂಗೊಂಚಲು' ಬಗೆಗೆ ಬರೆದ ವಿಮರ್ಶೆಯ ಪೂರ್ಣಪಾಠ ಸಿಕ್ಕಿಲ್ಲ ಎನ್ನಲಾಗಿದೆ. ಆರ್. ನರಸಿಂಹಾಚಾರ್ಯರ 'ಕರ್ಣಾಟಕ ಕವಿಚರಿತೆ'ಯ ಮೂರು ಸಂಪುಟಗಳನ್ನು ಕುರಿತು ಪೈ ಅವರು ಹೀಗೆ ಹೇಳುತ್ತಾರೆ: "ಈ ಕವಿಚರಿತೆಯ ಮೂರು ಸಂಪುಟಗಳಲ್ಲಿ ಕೂಡ ನಿರ್ಧರಿಸಿರುವ ಹಲವೊ ಕೆಲವೊ ಕವಿಗಳ ಕಾಲ ವಿಚಾರವೇ ಮೊದಲಾದ ವಿಷಯಗಳು ಕನ್ನಡ ಸಾಹಿತ್ಯೇತಿಹಾಸದಲ್ಲಿ ಶೋಧವು ಬೆಳೆಯುತ್ತ ಬರುವಂತೆ ಆಗಾಗ್ಗೆ ಮಾರ್ಪಾಟಾಗಬಹುದು. ಅನೇಕ ಸಂಗತಿಗಳು ಈಗ ಹೇಳಿದಂತೆ ಇರಲಾರದೆ ತೀರ ಬೇರೆಯೇ ಆಗಬಹುದು. ಕಾಲಕ್ರಮೇಣ ಇದೇ ಕಾಲಾವಧಿಯಲ್ಲಿದ್ದ ಇನ್ನೆಷ್ಟೋ ಹಳೆಯ ಕವಿಗಳ ಹೊಸ ಪರಿಚಯವಾಗಿ ಇವೇ ಶತಕಗಳ

ಕವಿಚರಿತೆ ಮುಂದೆ ಈ ಸಂಪುಟಗಳಿಗಿಂತ ಎಷ್ಟೋ ಹಿಗ್ಗಬಹುದು. ಇವುಗಳಲ್ಲಿ ನಿರ್ದಿಷ್ಟವಾದ ಕಾಲಕ್ಕಿಂತ ಹಿಂದಣಕವಿಗಳ ಗ್ರಂಥಗಳು ಮತ್ತು ಚರಿತ್ರೆಗಳೂ ಒದಗಬಹುದು. ಹೀಗೆಲ್ಲ ಆಗಬಹುದಾದರೂ ಗಿಬ್ಬನನ (Gibbon) ರೋಮರಾಜ್ಯದ ವಿಧ್ವಂಸನ ಇತಿಹಾಸದಂತೆ (Decline and fall of the Roman Empire) ಕನ್ನಡ ಕವಿಚರಿತೆಯ ಈ ಮೂರು ಸಂಪುಟಗಳು ಕನ್ನಡ ಸಾಹಿತ್ಯೇತಿಹಾಸದಲ್ಲಿ... ಚಿರಕಾಲ ಅಗ್ರಗಣ್ಯವಾಗಿರುವುವು ಎಂಬಲ್ಲಿ ಸಂದೇಹವಿಲ್ಲ" ಎನ್ನುತ್ತಾರೆ. 'ಮೈಸೂರು ಶಾಸನ ಇಲಾಖೆಯ ವರದಿ' ಲೇಖನದಲ್ಲಿ ಮೈಸೂರು ಶಾಸನ ಇಲಾಖೆಯ ವರದಿಯ ಜೊತೆಯಲ್ಲಿ ಚಂದ್ರವಳ್ಳಿಯಲ್ಲಿ ನಡೆಸಿದ ಭೂಸಂಶೋಧನೆಯ ವೃತ್ತಾಂತವನ್ನು ನೀಡಲಾಗಿದೆ. ಈ ವರದಿಯನ್ನು ವಿವರವಾಗಿಯೂ ವಿಶದವಾಗಿಯೂ ಪರಿಶೀಲಿಸಿ ತಮ್ಮ ಅಭಿಪ್ರಾಯವನ್ನು ಈ ರೀತಿ ವ್ಯಕ್ತಪಡಿಸಿದ್ದಾರೆ. ಒಟ್ಟಾರೆ ಈ ಗ್ರಂಥವು ಸರ್ವಬಗೆಯಿಂದಲೂ ಉತ್ಕೃಷ್ಟವಾಗಿದೆ. ಇದರ ಮುದ್ರಣವು ಅಂದವಾಗಿದೆ. ಬೇಕಾದಷ್ಟು ಚಿತ್ರಗಳಿದ್ದು ಕಣ್ಣಿಗೆ ಸರಿಯಾಗಿ ಆಪ್ಯಾಯಮಾನವಾಗಿದೆ. ಇಂತಹ ಗ್ರಂಥವನ್ನು ಹೊರಪಡಿಸಿದ ಬಗ್ಗೆ ಈ ಇಲಾಖೆಯವರೆಗೂ ಅದರ ಪ್ರಧಾನರಾದ ಡಾ. ಕೃಷ್ಣರವರಿಗೂ ನಮ್ಮ ಹೃತ್ಪೂರ್ವಕವಾದ ಅಭಿನಂದನೆಗಳು.

ಗೋವಿಂದಪೈ ಅವರಿಗೆ ಕೃತಿಕಾರನ ಸಾಧನೆ, ನಿಸ್ವಾರ್ಥವಾದ ಪರಿಶ್ರಮದ ಬಗೆಗೆ ಅತಿಯಾದ ಕಾಳಜಿ. ಕೃತಿಯನ್ನು ಕುರಿತು ಗಂಭೀರವಾಗಿ ಚಿಂತಿಸಿ ಲೋಪದೋಷಗಳನ್ನು ಗುರುತಿಸುತ್ತಾರೆ. ಆದರೆ ಅಭಿನಂದಿಸುವುದನ್ನು ಮರೆಯುವುದಿಲ್ಲ. ಕಂ. ಕೃಷ್ಣಯ್ಯಂಗಾರ್‌ರವರ 'ಭಾರತೀಯ ಇತಿಹಾಸ ಪ್ರವೇಶಿಕೆ' ಕುರಿತು ತಮ್ಮ ಅಭಿಪ್ರಾಯವನ್ನು ಹೀಗೆ ಹೇಳುತ್ತಾರೆ: 'ಇದೊಂದು ಉತ್ಕೃಷ್ಟವಾದ ಗ್ರಂಥವು. ನಮ್ಮ ಭಾರತ ಭೂಮಿಯ ಇತಿಹಾಸವನ್ನು ಕುರಿತು ಕನ್ನಡದಲ್ಲಿ ಇದುವರೆಗೆ ಇಷ್ಟು ಮೇಲಾದ ಗ್ರಂಥವು ಇಲ್ಲವೆಂದರೆ ಅದು ರೂಪಾಯಿಗೆ ಹದಿನಾರಾಣೆಯ ಮಾತೇ. ಈ ಸಮಗ್ರ ಗ್ರಂಥವು ಈ ಲೇಖಕರ ಸ್ವತಂತ್ರವಾದ ಸಂಶೋಧನದ ಫಲವಲ್ಲ. ಇದರಲ್ಲಿಯ ಯಾವೊಂದು ವಿಷಯವನ್ನಾದರೂ ಪ್ರಾಯಶಃ ಇವರು ತಾನೇ ಹೊಸದಾಗಿ ಕಂಡುಹಿಡಿದಿಲ್ಲ. ವಿವಂಚ ಇವರು ಹಾಗೆಂದು ಇದರಲ್ಲಿ ಎಲ್ಲಿಯೂ ಹೇಳಿಲ್ಲ ಎಂಬುದು ಸರಿಯೇ ಆಗಿರಬಹುದಾದರೂ ಈ ಕೆಲಸಕ್ಕೆ ಆಧಾರಭೂತವೆನಿಸುವ ಗ್ರಂಥಗಳನ್ನು ಓದಿ, ತಕ್ಕಂತೆ ಸಂಗ್ರಹಿಸಿ ಜೇಂದುಂಬಿಯಂತೆ ಅಥವಾ ಮುತ್ತುಮುಳುಕನಂತೆ ಈ ಬಗೆಯ ಉತ್ತಮವಾದೊಂದು ಗ್ರಂಥವನ್ನು ಕನ್ನಡಿಗರಿಗೆ ಒಪ್ಪಿಸಿರುವ ಬಗ್ಗೆ ಇವರು ಪಟ್ಟಿರುವ ನಿಸ್ವಾರ್ಥವಾದ ಪರಿಶ್ರಮಕ್ಕಾಗಿಯೂ ಇವರು ಕೊಟ್ಟಿರುವ ಅನರ್ಘ್ಯವಾದ ಕಾಣಿಕೆಗಾಗಿಯೂ ಇವರನ್ನು ಅಭಿನಂದಿಸುವಷ್ಟು ಸಾಲದು ಎನ್ನುತ್ತಾರೆ. ಕೃತಿಯಲ್ಲಿ ಲೋಪದೋಷಗಳು ಏನೇ ಇದ್ದರೂ ಕೃತಿರಚನೆಯ ಕೆಲಸ ಮುಖ್ಯ, ಅನರ್ಘ್ಯವಾದುದು ಎಂಬುದು ಪೈ ಅವರ ಅಭಿಪ್ರಾಯ. ಹಾಗೇ ನೋಡಿದರೆ ಕೃತಿಯಲ್ಲಿ ಇರುವ ತಪ್ಪುಗಳನ್ನು ಗುರುತಿಸುವಾಗ ಯಾವುದೇ ಮುಲಾಜಿಗೆ ಬೆಲೆಕೊಡದೆ ನೇರವಾಗಿ ಹೇಳುವ ಸ್ವಭಾವ ಪೈ ಅವರದು. ಬಂಗಾಳಿ ಭಾಷೆಯ ಬಂಕಿಮಚಂದ್ರ ಚಟ್ಟೋಪಾಧ್ಯಾಯ ಅವರ 'ಶ್ರೀಕೃಷ್ಣ ಚರಿತ್ರೆ'ಯನ್ನು ಕನ್ನಡಕ್ಕೆ ಅನುವಾದಿಸಿದ ಶ್ರೀ ಆರ್. ವ್ಯಾಸರಾವ್‌ರವರ ಸಾಧನೆ ಕುರಿತು ಹೀಗೆ ಹೇಳುತ್ತಾರೆ– "ಶ್ರೀ ವ್ಯಾಸರಾಯರು ಅನುವಾದದ ಕೆಲಸವನ್ನು ಸಾಕಷ್ಟು ಸೊಗಸಾಗಿ ಮಾಡಿರುತ್ತಾರೆ. ಇದನ್ನು ಓದುವಾಗ ನಾವೊಂದು ಭಾಷಾಂತರವನ್ನು ಓದುವಂತಲ್ಲ. ಕನ್ನಡದ ಮೂಲಗ್ರಂಥವನ್ನು ಓದುವಂತೆ ಭಾಸವಾಗುತ್ತದಾದರೂ ಇದರಲ್ಲಿ ಅಲ್ಲಲ್ಲಿ ಹಲವು ತಪ್ಪುಗಳಿವೆ. ಅವು ಯಾವ ಗ್ರಂಥದಲ್ಲೂ ಇರಬಾರದು. ಇಂಥ ಉದ್ಗ್ರಂಥದಲ್ಲಿ ಸುತರಾಮ್ ಇರಬಾರದು" ಎಂದು ನೇರ ನುಡಿಯಿಂದಲೇ ಸೂಚಿಸುತ್ತಾರೆ. ಹಾಗೇ ನೋಡಿದರೆ ಗೋವಿಂದ ಪೈ ಅವರು ಅಭಿನಂದಿಸುವ ಕೆಲಸವಷ್ಟೇ ಅಲ್ಲದೆ ಕೃತಿಯನ್ನು ಕುರಿತು ಗಂಭೀರವಾಗಿ ಚಿಂತಿಸಿ, ಕಾಲನಿರ್ಣಯದ ಕಡೆಗೂ ಗಮನಹರಿಸುತ್ತಾರೆ.

ಆರ್.ಎಸ್. ಪಂಚಮುಖಿಯವರ ಸಂಪಾದಕತ್ವದ– 'ಕರ್ನಾಟಕದ ಶಾಸನಗಳು' ಕೃತಿ ಕುರಿತು ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸುತ್ತಾರೆ– 'ಈ ಗ್ರಂಥದಲ್ಲಿ ಒಟ್ಟಾರೆ ೬೯ ಶಾಸನಗಳಿವೆ, ಗ್ರಂಥಾರಂಭದ ೨೧ ಪುಟಗಳಷ್ಟರ ಪ್ರಸ್ತಾವನೆಯಲ್ಲಿ ಈ ಶಾಸನಗಳನ್ನೂ ಆಯಾ ಶಾಸನಕಾಲೀನ ಅರಸರನ್ನೂ ಕುರಿತು ಸಾಕಷ್ಟು ವಿವರವಾಗಿ ಹೇಳಿರುವುದಲ್ಲದೆ, ಪ್ರತ್ಯೇಕ ಶಾಸನಕ್ಕೆ ಬರೆದ ಮುನ್ನುಡಿಯಲ್ಲಿಯೂ ಆ ಶಾಸನದ ತಕ್ಕಷ್ಟು ಸಾರವನ್ನೂ ತೇದಿಯನ್ನೂ ನಮೂದಿಸಿರುವಲ್ಲಿ ಅದಕ್ಕೆ ಸರಿಹೋಗುವ ಇಂಗ್ಲಿಷು ತಾರೀಖನ್ನೂ ಕೊಟ್ಟದೆ. ಇದೆಲ್ಲ ಕೆಲಸವನ್ನು ಶ್ರೀ ಪಂಚಮುಖಿಯವರು ತಮ್ಮ ಪಾಂಡಿತ್ಯಕ್ಕೆ ತಕ್ಕಂತೆ ಬಹಳ ಉತ್ತಮವಾಗಿ ಮಾಡಿರುತ್ತಾರೆ. ಆ ಬಗ್ಗೆ ಅವರಿಗೆ ನಮ್ಮ ಹೃತ್ಪೂರ್ವಕವಾದ ಅಭಿನಂದನೆಗಳು' ಎಂದು ತಿಳಿಸುತ್ತಾರೆ.

ಪೈ ಅವರ ಮಹತ್ವದ ಗುಣವೆಂದರೆ ಬೌದ್ಧಿಕ ಪ್ರಾಮಾಣಿಕತೆ, ಸತ್ಯವಾದಿತ್ವ, ವಸ್ತುನಿಷ್ಠತೆಗಳು. ತಮಗೆ ಗೊತ್ತಿಲ್ಲದಿದ್ದುದನ್ನು ವಿನಯಪೂರ್ವಕವಾಗಿ ಒಪ್ಪಿಕೊಳ್ಳುತ್ತಿದ್ದುದು. ತಾವು ಹೇಳುವ ವಿಚಾರವೇ ಸತ್ಯವೆಂದು ಭಾವಿಸುವವರಲ್ಲ. ಅವರ ವಿಚಾರಗಳು ಅವರಿಗೆ, ತಮ್ಮ ವಿಚಾರಗಳು ತಮಗೆ ಎನ್ನುವ ಸಿದ್ಧಾಂತ ಹೊಂದಿರುವವರು. ನೆಲಮಂಗಲ ಲಕ್ಷ್ಮೀನಾರಾಯಣರಾಯರು ಮತ್ತು ಆರ್.ಎಸ್. ಪಂಚಮುಖಿ ಅವರ 'ಕರ್ನಾಟಕದ ಅರಸು ಮನೆತನಗಳು' ಕೃತಿ ಕುರಿತ ವಿಮರ್ಶೆಯ ಅಭಿಪ್ರಾಯ ಹೀಗಿದೆ– "ಈ ವಿಮರ್ಶೆಯಲ್ಲಿ ಈ ಗ್ರಂಥದ ರಚಕರ ಕೆಲಕೆಲವು ನಿರ್ಣಯಗಳನ್ನು ನಾನು ಒಪ್ಪಲಾಗುವುದಿಲ್ಲ. ಎಂದಿರುವ ಮಾತ್ರಕ್ಕೆ ಅವು ಸರಿಯಲ್ಲ ನನ್ನವೇ ಸರಿ ಎಂದು ನಾನು ಸಾಧಿಸುತ್ತೇನೆಂದು ಇವರಾಗಲಿ, ವಾಚಕರಾಗಲಿ, ಸರ್ವಥಾ ಭಾವಿಸಬಾರದು. ಏಕೆಂದರೆ ಮೊದಲಿನಿಂದಲೆ ನಮ್ಮ ದಾರಿಗಳು ಕವಲೊಡೆದ ಕಾರಣ, ಸಹಜವಾಗಿ ಅವರ ಮುಟ್ಟುಗಡೆ ಬೇರೆ, ನನ್ನ ಮುಟ್ಟುಗಡೆ ಬೇರೆಯಾದವು. ಇಂಥಾ ಭಿನ್ನಾಭಿಪ್ರಾಯಗಳು ನೀರ್ಗಲದ ಅಥವಾ ಪರಸ್ಪರ ತುಲನದ ಭಾರ ಯಾವ ಭವಿಷ್ಯದ ಮೇಲಿದೆಯೊ ಅದರ ಸದಸದ್ವಿವೇಚನದಲ್ಲಿ ಪ್ರಾಯಶಃ ಅವರ ನಿರ್ಧಾರಗಳು ಒಪ್ಪಾಗಿ ನನ್ನವು ತಪ್ಪಾಗಬಹುದು. ಯಾರು ಬಲ್ಲರು? ಆದರೆ ನನ್ನ ಬಳಿಗೆ ವಿಮರ್ಶೆಗೆ ಬಂದ ಗ್ರಂಥವನ್ನು ಇತರರ ದೃಷ್ಟಿಯಿಂದಲ್ಲ ನನ್ನ ದೃಷ್ಟಿಯಿಂದ ತಾನೆ ವಿಮರ್ಶಿಸಬೇಕಾದಲ್ಲಿ ನನ್ನ ದೃಷ್ಟಿಗೆ ಒಪ್ಪದುದನ್ನು ಒಪ್ಪಲಾಗುವುದಿಲ್ಲ ಎಂದಿರುತ್ತೇನೆ. ಇದು ಉತ್ಕೃಷ್ಟವಾದ ಗ್ರಂಥ. ಫ್ಲೀಟ್ Kanarese Dynasties ಎಂಬ ಗ್ರಂಥವನ್ನು ೫೦ಕ್ಕೂ ಹೆಚ್ಚು ವರ್ಷಗಳ ಹಿಂದೆ ಮುಂಬಯಿ ಸರಕಾರವು ಕನ್ನಡಿಸಿ ಪ್ರಕಟಿಸಿದ ಬಳಿಕ ಇಂಥಾ ಗ್ರಂಥ ಕರ್ನಾಟಕದಲ್ಲಿ ಹುಟ್ಟಿಲ್ಲ. ಈ ಗ್ರಂಥವಾದರೂ ಆ ನಡುವೆ ದೊರೆತ ಆಯಾ ಮನೆತನಗಳ ಅನೇಕ ಶಾಸನಗಳೇ ಮೊದಲಾದವುಗಳ ಬೆಂಬಲದಿಂದ ಆ ಗ್ರಂಥಕ್ಕಿಂತ ಎಷ್ಟೋ ಮುಂದುವರಿದಿದೆ. ಇಷ್ಟು ಉತ್ತಮವೂ ಪ್ರಶಸ್ತವೂ ಆದ ಗ್ರಂಥವನ್ನು ಕರ್ನಾಟಕದ ಇತಿಹಾಸಕ್ಕೆ ಅಲ್ಲ. ಕರ್ನಾಟಕ ಭಾಷೆಗೂ ಒದಗಿಸಿರುವ ಬಗ್ಗೆ ಈ ಗ್ರಂಥಕರ್ತರಿಬ್ಬರನ್ನೂ ಪುನಃ ಪುನಃ ಅಭಿನಂದಿಸುತ್ತೇನೆ. ಕನ್ನಡಿಗರು ಈ ಗ್ರಂಥವನ್ನು ಓದಬೇಕೆಂದು ಒತ್ತಿ ಹೇಳುತ್ತೇನೆ. ಹಾಗೂ ಕುತೂಹಲದಿಂದ ಇದರ ಮುಂದಿನ ಸಂಪುಟದ ಹಾದಿ ನೋಡುತ್ತೇನೆ" ಎನ್ನುವ ಪೈ ಅವರು ತಪ್ಪುಗಳನ್ನು ಗುರುತಿಸಿಯೂ ಒಟ್ಟಾರೆ ಕೃತಿರಚನೆಯ ಕಾರ್ಯವನ್ನು ಅಭಿನಂದಿಸುತ್ತಾರೆ.

ಕೆ.ವಿ. ಸುಬ್ರಹ್ಮಣ್ಯ ಅಯ್ಯರ್ ಅವರ 'ಉಪನ್ಯಾಸಗಳು' ಕೃತಿ ಓದಲೇಬೇಕಾದ ಕೃತಿ ಎಂದು ಪೈ ಅವರು ಹೇಳುತ್ತಾರೆ. ಏಕೆಂದರೆ ಆ ಕೃತಿಯಲ್ಲಿ ಐತಿಹಾಸಿಕ ಸಂಶೋಧನೆಯ ರೀತಿ, ರಾಷ್ಟ್ರಕೂಟರ ಇತಿಹಾಸದ ಕೆಲವು ರಹಸ್ಯಗಳು ಇವೆ. ಈ ಎರಡು ಭಾಷಣಗಳು ಲಾಭಪ್ರಧಾನವಾದವುಗಳು. ಇವುಗಳನ್ನು ಸಂಶೋಧನಕಾರರಾಗಲಿ, ಕನ್ನಡ ನಾಡಿನ ಇತಿಹಾಸಕಾರರಾಗಲಿ ಓದಲೇಬೇಕು. ಈ ಭಾಷಣಗಳಿಂದ ಕರ್ನಾಟಕದ ಸಂಶೋಧನಕ್ಕೂ, ಇತಿಹಾಸಕ್ಕೂ ಮಾಡಿರುವ ಅನರ್ಘ್ಯವಾದ, ಉಪಕಾರದ ಬಗ್ಗೆ ಶ್ರೀ ಅಯ್ಯರರನ್ನು ಪೈ ಅವರು ಮನಸಾರೆ ಅಭಿನಂದಿಸುತ್ತಾರೆ.

ಆಧುನಿಕ ಸಾಹಿತ್ಯದ ಪ್ರಾರಂಭದ ದಿನಗಳಲ್ಲಿ ಆಗಿನ ಸಾಹಿತ್ಯದ ಸ್ವರೂಪವನ್ನು ವಿವರಿಸಿ, ಪ್ರತಿಪಾದಿಸುವ ವಿಮರ್ಶಕರ ಕೊರತೆಯಿತ್ತು. ಆಧುನಿಕ ಸಾಹಿತ್ಯದ ರೂಪುರೇಷೆಗಳನ್ನು ಅದರ ಸಿದ್ಧಾಂತಗಳನ್ನು, ಅದನ್ನು ರೂಪಿಸುತ್ತಿರುವವರ ಸಾಧನೆಗಳನ್ನು ವಿವರಿಸಿ ತಿಳಿಸಿ ಹೇಳುವ ಅಗತ್ಯವಿರುತ್ತದೆ. ಹಾಗಾಗಿ ಗೋವಿಂದ ಪೈ ಅವರು ಆಗಿನ ಸಾಹಿತ್ಯವನ್ನು ಹಾಗೂ ಕೃತಿರಚನಾಕಾರನ ಸಾಧನೆಯನ್ನು ಸವಿವರವಾಗಿ ತಿಳಿಸುತ್ತಾರೆ. ಪೈ ಅವರು ಒಂದು ಕೃತಿಯನ್ನು ಸರ್ವ ಬಗೆಯಿಂದಲೂ ವಿಚಾರ ಮಾಡಿ ವಿಮರ್ಶೆ ಮಾಡುತ್ತಾರೆ. ಮುದ್ರಣ ವ್ಯವಸ್ಥೆ, ಕೃತಿಯ ಚೌಕಟ್ಟು, ಕಾಲನಿರ್ಣಯ, ಕೃತಿಕಾರನ ಪರಿಶ್ರಮ, ಲೋಪದೋಷಗಳನ್ನು ಗುರುತಿಸುವುದರ ಮುಖೇನವೇ ಕೃತಿಕಾರನ ಸಾಧನೆಯನ್ನು ಅಮೋಘವಾಗಿ ಹೊಗಳುತ್ತಾರೆ. ಹೊಗಳಿಕೆಯ ಮೂಲಕ ಕೃತಿಕಾರರನ್ನು ಪ್ರೋತ್ಸಾಹಿಸುವ ಗೋವಿಂದ ಪೈ ಅವರ ಅಭಿಮತ ಶ್ಲಾಘನೀಯವಾದುದು. ಕನ್ನಡ ವಿಮರ್ಶಾ ಚರಿತ್ರೆಯಲ್ಲಿ ಅತ್ಯಂತ ಮಹತ್ವದ್ದು.

ಕೃತಿಕಾರರನ್ನು ಕುರಿತು, ಕೃತಿಯ ಹಿರಿಮೆ ಗರಿಮೆ ಕುರಿತು ಚರ್ಚಿಸಿ ಮೌಲ್ಯಯುತವಾದ ವಿಮರ್ಶೆಯನ್ನು ಪೈ ಅವರು ಕಟ್ಟಿಕೊಟ್ಟಿರುವುದನ್ನು ಈ ಮೇಲಿನ ಎಂಟು ಕೃತಿಗಳನ್ನು ಕುರಿತ ವಿಮರ್ಶಾ ಲೇಖನಗಳಿಂದ ಕಾಣಬಹುದು. ■

# ಶಿವನಾಗಮಯ್ಯ

ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದಲ್ಲಿ ನಡೆದ ಧಾರ್ಮಿಕ ಸಾಮಾಜಿಕ ಆರ್ಥಿಕ ಕ್ರಾಂತಿ ಜನತೆಯ ಮೇಲೆ ವಿಶೇಷವಾದ ಪ್ರಭಾವವನ್ನು ಬೀರಿದ ಸಂಗತಿ ಸರ್ವಶ್ರುತವಾದುದು. ಈ ಕ್ರಾಂತಿಯ ಮೂಲಪುರುಷರು ಬಸವಣ್ಣನವರು ಎಂಬುದು ಎಲ್ಲರಿಗೂ ತಿಳಿದ ವಿಷಯ. ಬಸವಣ್ಣನವರ ನೇತೃತ್ವದಲ್ಲಿ ಸಮಾವೇಶಗೊಂಡ ಭಕ್ತಸಮೂಹದಲ್ಲಿ ವಿವಿಧ ವೃತ್ತಿಯ ವಿವಿಧ ಧರ್ಮದ ವ್ಯಕ್ತಿಗಳು ಸೇರ್ಪಡೆಯಾಗಿದ್ದುದು ಸರಿಯಷ್ಟೆ. ಸಾಮಾಜಿಕ ಸೌಲಭ್ಯಗಳಿಂದ ವಂಚಿತರಾಗಿದ್ದ ಜನತೆಯನ್ನು ಮೇಲೆತ್ತಿ ಅವರ ಆತ್ಮೋದ್ಧಾರ ಮಾರ್ಗವನ್ನು ತೋರಿಸುವುದೇ ಬಸವಣ್ಣನವರ ಮುಖ್ಯಧ್ಯೇಯವಾಗಿತ್ತು. ದೀನದಲಿತೋದ್ಧಾರವೇ ಅವರ ಜೀವಿತದ ಮುಖ್ಯದೃಷ್ಟಿಯಾಗಿತ್ತು ಎಂಬುದು ನಿರ್ವಿವಾದ.

ದಲಿತ ಎಂದರೆ ಹಿಂದುಳಿದವನು, ದಮನಕ್ಕೆ ಒಳಗಾದವನು, ಶೋಷಿತನಾದವನು, ಆರ್ಥಿಕವಾಗಿ ಸಾಮಾಜಿಕವಾಗಿ ಕೆಳಮಟ್ಟದವನು ಎಂದು ಅರ್ಥ. ಹನ್ನೆರಡನೆಯ ಶತಮಾನದಲ್ಲಿ ಜಾತಿಮತಗಳ ಪ್ರಭಾವ ಬಹಳವಾಗಿತ್ತು. ಜಾತಿಯಿಂದ ಕೀಳಾದವರು ಸಾಮಾಜಿಕ ಸೌಲಭ್ಯಗಳಿಂದ ವಂಚಿತರಾಗಿದ್ದರು. ಮೇಲುಕೀಳೆಂಬ ಭಾವನೆ ತಾನೇ ತಾನಾಗಿತ್ತು. ಈ ಅಸಮಾನತೆಯನ್ನು ಹೋಗಲಾಡಿಸಿ ಸರ್ವರಿಗೂ ಸಮಾನ ಸೌಲಭ್ಯಗಳನ್ನು ದೊರಕಿಸಿಕೊಟ್ಟವರು ಬಸವಣ್ಣನವರು. ಅವರ ಹಲವಾರು ವಚನಗಳು ಇದನ್ನೇ ಪ್ರತಿಪಾದಿಸುತ್ತಿವೆ:

ಹಾವು ತಿಂದವರ ನುಡಿಸಬಹುದು, ಗರ ಹೊಡೆದವರ ನುಡಿಸಬಹುದು;
ಸಿರಿಗರ ಹೊಡೆದವರ ನುಡಿಸಲುಬಾರದು ನೋಡಯ್ಯಾ!
ಬಡತನವೆಂಬ ಮಂತ್ರವಾದಿ ಹೊಗಲು ಒಡನೆ ನುಡಿವರು
ಕೂಡಲಸಂಗಮದೇವಾ! (ಬ.ಷ.ವ. ೧೩೨)

ಕುದುರೆ ಸತ್ತಿಗೆಯವರ ಕಂಡರೆ ಹೊರಳಿಬಿದ್ದು ಕಾಲ ಹಿಡಿವರು
ಬಡಭಕ್ತರು ಬಂದರೆ ಎಡೆಯಿಲ್ಲ ಅತ್ತ ಸನ್ನಿ ಎಂಬರು
ಎನ್ನೊಡೆಯ ಕೂಡಲಸಂಗಯ್ಯನವರ ತಡೆಗೆಡಹಿ
ಮೂಗಕೊಯ್ಯದೆ ಮಾಣ್ಬನೆ? (ಬ.ಷ.ವ. ೪೧೩)

ಬಡವ ಶ್ರೀಮಂತರ ಅಂತರ ಕುರಿತು ಅವರು ಹಾಡಿದ ವಚನಗಳು ಇವು. ಇನ್ನು ಜಾತಿ ಕುಲ ಪಂಥಗಳ ಬಗೆಗೆ ಅವರ ಒಲವು ಇಂತಿದೆ:

ಅಪ್ಪನು ಡೋಹಾರ ಕಕ್ಕಯ್ಯನಾಗಿ,
ಮುತ್ತಯ್ಯ ಚೆನ್ನಯ್ಯನಾದರೆ ಆನು ಬದುಕೆನೆ?
ಮತ್ತಾ ಶ್ವಪಚಯ್ಯನ ಸನ್ನಿಧಿಯಿಂದ ಭಕ್ತಿಯ ಸದ್ಗುಣವ ನಾನರಿವೆನಯ್ಯಾ
ಕಷ್ಟಜಾತಿಯ ಜನ್ಮದಲ್ಲಿ ಜನಿಸಿದೆ. ಎನಗಿದು ವಿಧಿಯೆ ಕೂಡಲಸಂಗಮದೇವಾ?

(ಬ.ಷ.ವ. ೩೪೨)

ಉತ್ತಮಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊಱೆಯ ಹೊಱಿಸದಿರಯ್ಯಾ
ಕಕ್ಕಯ್ಯನೊಕ್ಕುದನಿಕ್ಕ ನೋಡಯ್ಯಾ
ದಾಸಯ್ಯ ಶಿವದಾನವನೆಱೆಯ ನೋಡಯ್ಯಾ
ಮನ್ನಣೆಯ ಚೆನ್ನಯ್ಯನೆನ್ನುವ ಮನ್ನಿಸ, ಉನ್ನತಮಹಿಮಾ
ಕೂಡಲಸಂಗಮದೇವಾ ಶಿವಧೋ ಶಿವಧೋ! (ಬ.ಷ.ವ. ೩೪೩)

ಅಪ್ಪನು ನಮ್ಮ ಮಾದರ ಚೆನ್ನಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ,
ಚಿಕ್ಕಯ್ಯನೆಮ್ಮಯ್ಯ ಕಾಣಯ್ಯ, ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ;
ಎನ್ನನೇತಕ್ಕಱಿಯಿರಿ ಕೂಡಲಸಂಗಯ್ಯಾ? (ಬ.ಷ.ವ. ೩೪೮)

ಭಕ್ತಿಯಿಲ್ಲದ ಬಡವ ನಾನಯ್ಯಾ; ಕಕ್ಕಯ್ಯನ ಮನೆಯಲು ಬೇಡಿದೆ
ಚೆನ್ನಯ್ಯನ ಮನೆಯಲು ಬೇಡಿದೆ, ದಾಸಯ್ಯನ ಮನೆಯಲೂ ಬೇಡಿದೆ
ಎಲ್ಲಾ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದರೆ
ಎನ್ನ ಪಾತ್ರೆ ತುಂಬಿತ್ತು ಕೂಡಲಸಂಗಮದೇವಾ! (ಬ.ಷ.ವ. ೩೪೯)

ಹಿರಿಯಯ್ಯ ಶ್ವಪಚಯ್ಯ, ಕಿಱಿಯಯ್ಯ ಡೋಹಾರ ಕಕ್ಕಯ್ಯ
ಅಯ್ಯಗಳಯ್ಯನು ನಮ್ಮ ಮಾದಾರ ಚೆನ್ನಯ್ಯನು
ಕೂಡಲ ಸಂಗಮದೇವಾ, ನಿಮ್ಮ ಶರಣರೊಲಿದೆನ್ನ ಸಲಹುವರಾಗಿ. (ಬ.ಷ.ವ. ೩೫೦)

ಹೊಕ್ಕಲ್ಲಿ ಹೊಕ್ಕು ನಿಮ್ಮೊಕ್ಕುದನುಂಬವನ ಕುಲವೇನೊ?
ದೇವ ನೀನೊಲಿದವನ, ಸ್ವಾಮೀ ನೀ ಹಿಡಿದವನ ಕುಲವೇನೊ?
ಕುಲಕ್ಕೆ ತಿಲಕ ನಮ್ಮ ಮಾದಾರ ಚೆನ್ನಯ್ಯ ನಿಮ್ಮಿಂದಧಿಕ,
ಕೂಡಲಸಂಗಮದೇವಾ! (ಬ.ಷ.ವ. ೭೩೧)

ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ, ಜಲವೊಂದೆ ಶೌಚಾಚಮನಕ್ಕೆ,
ಕುಲವೊಂದೆ ತನ್ನ ತಾನಱಿದವಂಗೆ, ಫಲವೊಂದೆ ಷಡುದರುಶನಮುಕ್ತಿಗೆ
ನಿಲವೊಂದೆ ಕೂಡಲಸಂಗಮದೇವಾ, ನಿಮ್ಮನಱಿದವಂಗೆ. (ಬ.ಷ.ವ. ೮೨೮)

ಬಸವಣ್ಣನವರು ಈ ಕ್ರಾಂತಿಕಾರಕ ಮನೋಭಾವದಿಂದ ದಿಟ್ಟ ನಿಲುವಿನಿಂದ ದಲಿತೋದಯವನ್ನು ಸಾಧಿಸಿದರು. ಈ ದಲಿತ ಶ್ರೇಣಿಗೆ ಸೇರಿದವರಲ್ಲಿ ಪ್ರಸ್ತುತ ಶಿವನಾಗಮಯ್ಯನೂ ಒಬ್ಬನಾಗಿದ್ದಾನೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶಿವನಾಗಮಯ್ಯನ ಕಥೆ ಹರಿಹರನ ಬಸವರಾಜ ದೇವರ ರಗಳೆ (ಸು. ೧೨೦೦). ಭೀಮಕವಿಯ ಬಸವಪುರಾಣ (ಕ್ರಿ.ಶ. ೧೩೬೯), ವಿರಕ್ತ ತೋಂಟದಾರ್ಯನ ಪಾಲ್ಕುರಿಕೆ ಸೋಮೇಶ್ವರ ಪುರಾಣ (ಸು.೧೬೧೬), ಶಾಂತಲಿಂಗ ದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ (ಕ್ರಿ.ಶ. ೧೬೭೨), ಉತ್ತರ ದೇಶದ ಬಸವಲಿಂಗನ ಬಸವೇಶ್ವರ ಪುರಾಣದ ಕಥಾಸಾಗರ (ಕ್ರಿ.ಶ. ೧೬೭೯) ಮೊದಲಾದ ಪ್ರಾಚೀನ ಗ್ರಂಥಗಳಲ್ಲೂ, ಡಾ. ಫ.ಗು. ಹಳಕಟ್ಟಿ ಅವರ ಶಿವಶರಣರ ಚರಿತ್ರೆಗಳು, ಅಮರಗಣಾಧೀಶ್ವರರ ಚರಿತೆಯಲ್ಲೂ ಕಂಡುಬರುತ್ತದೆ. ಆದರೆ ಶಿವನಾಗಮಯ್ಯನಿಗೆ ಸಂಬಂಧಿಸಿದ ಇತಿವೃತ್ತಗಳು ಮಾತ್ರ ಈ ಯಾವ ಕಾವ್ಯಗಳಲ್ಲೂ ಉಲ್ಲೇಖವಾಗಿಲ್ಲ. ಶಿವನಾಗಮಯ್ಯ ಎಲ್ಲಿಯವನು? ಈತನ ತಂದೆ ತಾಯಿಗಳು ಯಾರು? ಈತನ ವೃತ್ತಿ ಯಾವುದು? ಈತನ ಕುಲ ಯಾವುದು? ಎಂಬ ವಿಷಯಗಳು ಎಲ್ಲಿಯೂ ನಿರೂಪಿತವಾಗಿಲ್ಲ. ಬಸವಣ್ಣನವರೇನೋ ಶಿವನಾಗಮಯ್ಯನನ್ನು ಅತ್ಯಂತ ಗೌರವಭಾವದಿಂದ ಕಾಣುತ್ತಿದ್ದರೆಂದು ಪ್ರಾಚೀನ ಕಾವ್ಯಗಳಲ್ಲಿ ಉಕ್ತವಾಗಿರುವುದು ಸರಿಯಷ್ಟೆ. ಆದರೆ ಒಂದು ಅತ್ಯಂತ ಸೋಜಿಗದ ಸಂಗತಿ ಎಂದರೆ ಬಸವಣ್ಣನವರ ವಚನಗಳಲ್ಲಿ ಶಿವನಾಗಮಯ್ಯನ ಪ್ರಸ್ತಾಪವೇ ಇಲ್ಲ. ಇದಕ್ಕೆ ಕಾರಣವಾದರೂ ಏನು?

ಭೀಮಕವಿಯ ಬಸವ ಪುರಾಣದಲ್ಲಿ ಶಿವನಾಗಮಯ್ಯನ ಪ್ರಕರಣ ದೀರ್ಘವಾಗಿಯೇ ಬಂದಿದೆ. ಆದರೆ ಈತ ಕಥೆಯ ಮಧ್ಯೆ ಹಲವಾರು ಶಿವಶರಣ ಶಿವಶರಣೆಯರ ಪ್ರಸಂಗಗಳನ್ನು ಪೋಣಿಸಿದ್ದಾನೆ. ಪ್ರಕೃತ ಬಸವ ಪುರಾಣದಲ್ಲಿ ಬಂದಿರುವ ಶಿವನಾಗಮಯ್ಯನ ಕಥೆಯ ಸಾರಸರ್ವಸ್ವವನ್ನು ಇಲ್ಲಿ ನಿರೂಪಿಸಲಾಗಿದೆ:

ಸದ್ಭಕ್ತಿ ಸದ್ಗುಣಯುಕ್ತನಾದ ಶಿವನಾಗಮಯ್ಯನು ಬಸವಣ್ಣನಿಂದ ನಮಸ್ಕಾರ ಮಾಡಿಸಿಕೊಂಡು ಸೇವೆಯನ್ನು ಕೈಕೊಳ್ಳುತ್ತ ಸುಖದಿಂದಿದ್ದನು. ಇದನ್ನು ಕಂಡ ಬ್ರಾಹ್ಮಣರು ಅಸಹ್ಯಪಟ್ಟುಕೊಂಡು ಬಿಜ್ಜಳನಿಗೆ "ಎಲೈ ರಾಜನೆ, ಬಸವಣ್ಣನು ವಿಪ್ರಾಚಾರವನ್ನು ಬಿಟ್ಟು ಶಿವನಾಗಮಯ್ಯನನ್ನು 'ಹಿರಿಯಭಕ್ತರು ಹಿರಿಯಭಕ್ತರು' ಎಂದು ಗೌರವಿಸಿ ಅವರ ಪಾದಗಳಿಗೆ ನಮಸ್ಕರಿಸುತ್ತಿದ್ದಾನೆ. ಅವರು ಉಂಡು ಮಿಕ್ಕದ್ದನ್ನು ತಾನು ಸೇವಿಸುತ್ತಿದ್ದಾನೆ. ಶಿವನಾಗಮಯ್ಯನನ್ನು ಹಾಡಿ ಹೊಗಳಿ ಊರಲ್ಲೆಲ್ಲಾ ಮೆರವಣಿಗೆ ಮಾಡಿಸಿಕೊಂಡು ಬರುತ್ತಿದ್ದಾನೆ. ನಮ್ಮನ್ನು ಆತನು ಗಣನೆಗೆ ತೆಗೆದುಕೊಂಡಿಲ್ಲ. ಈ ಕಲ್ಯಾಣನಗರಿಯೆಲ್ಲ ಹೊಲಸಾಗಿ ಹೋಯಿತು. ವರ್ಣಾಶ್ರಮಗಳೆಲ್ಲ ಕೆಟ್ಟುಹೋದುವು. ನೀತಿಗಳೆಲ್ಲ ನಿರ್ನಾಮವಾದವು. ಧರ್ಮ ಕುಂಠಿತವಾಯಿತು. ಯಜ್ಞಾದಿ ಕರ್ಮಗಳೆಲ್ಲ ನಿಂತುಹೋದುವು. ದೇಶದಲ್ಲಿಯ ಈ ಪಾಪಗಳೆಲ್ಲ ರಾಜನಿಗೆ ಹತ್ತಿಕೊಳ್ಳುತ್ತವೆ. ಇವನ್ನು ಪರಿಹರಿಸದಿದ್ದರೆ ರಾಜನ ಪಾಪಗಳೆಲ್ಲ ಪುರೋಹಿತರಿಗೆ ಹೇರಿಕೊಳ್ಳುತ್ತವೆ. ರಾಜೋಗತಧರ್ಮ ಎಂಬುದನ್ನು ನೀವು ಬಲ್ಲಿರಲ್ಲವೆ? ನಾವು ಇರುವ ವಿಷಯವನ್ನು ನಿಮಗೆ ಅರಿಕೆ ಮಾಡಿಕೊಂಡಿದ್ದೇವೆ" ಎಂದು ಹೇಳಿದರು. ಅದನ್ನು ಕೇಳಿ ಕೋಪಗೊಂಡ ಬಿಜ್ಜಳ ಬಸವಣ್ಣನನ್ನು ಕೂಡಲೇ ಕರೆತರುವಂತೆ ಆಜ್ಞಾಪಿಸಿದನು.

ಶಿವನಾಗಮಯ್ಯನನ್ನು ಪಲ್ಲಕ್ಕಿಯ ಮೇಲೆ ಕೂರಿಸಿಕೊಂಡು ಬರುತ್ತಿದ್ದುದನ್ನು ವಿಪ್ರರು ನೋಡಿದರು. ಆ ದೃಶ್ಯವನ್ನು ನೋಡುವಂತೆ ರಾಜನಿಗೂ ಹೇಳುವರು. ಹೇಗಾದರೂ ಆಗಲಿ ಅರಮನೆಯೊಳಕ್ಕೆ ಮಾತ್ರ ಅವರನ್ನು ಬಿಡಬಾರದು ಎಂದು ಎಚ್ಚರಿಸುವರು. ಶಿವನಾಗಮಯ್ಯನನ್ನು ಹೊತ್ತ ಪಲ್ಲಕ್ಕಿ ಅರಮನೆಯ ಬಳಿಗೆ ಬರುತ್ತಲೇ ಅವರನ್ನು ಒಳಗೆ ಬರಲೀಸದೆ ಅಡ್ಡಿಮಾಡಲು ಬಸವಣ್ಣ ತನ್ನ ಉತ್ತರೀಯವನ್ನು ಹಾಸಿ ಶಿವನಾಗಮಯ್ಯನನ್ನು ಅಲ್ಲಿಯೇ ಕುಳ್ಳಿರಿಸಿ ತಾನೊಬ್ಬನೇ ಓಲಗಕ್ಕೆ ಹೋಗಿ ತನ್ನನ್ನು ಕರೆಸಿದುದಕ್ಕೆ ಕಾರಣವೇನೆಂದು ರಾಜನನ್ನು ಕೇಳುವನು. ಕಲುಷಿತಾನನನಾದ ಬಿಜ್ಜಳ "ಎಲೈ ಬಸವಣ್ಣ ಅಷ್ಟಾದಶಕುಲಾಚಾರ ಪದ್ಧತಿಗಳನ್ನೆಲ್ಲ ನೀನು ಹೀಗೆ ಕೆಡಿಸಬಹುದೆ? ಹೊಲೆಗಲಸಿ ಕುಲಸಂಕರವನ್ನುಂಟುಮಾಡಿ ಕಲ್ಯಾಣವನ್ನು ಈ ರೀತಿ ಹಾಳುಮಾಡಬಹುದೆ? ನೀನಾದರೋ ಪರಮಶಿವಭಕ್ತ. ನೀನೇ ನೀತಿ ನಿಯಮಗಳನ್ನು ಅತಿಗಳೆದರೆ ರಾಜ್ಯದಲ್ಲಿ ಮಳೆಬೆಳೆಗಳಾಗುತ್ತವೆಯೆ? ಇನ್ನು ಮೇಲಾದರೂ ಇಂತಹ ಕಾರ್ಯಗಳನ್ನು ಮಾಡಬೇಡ" ಎಂದು ಬುದ್ಧಿವಾದವನ್ನು ಹೇಳಿದನು. ಅದನ್ನು ಕೇಳಿದ ಬಸವಣ್ಣ:

ಪುಣ್ಯಹೀನನ ಕೈಯಲಿದ್ದ ಹಿ । ರಣ್ಯವೊಡ್ಡಾಗಿಪ್ಪ ಪರಿಯೊಳ
ಗಣ್ಯ ಶಿವನಾಕೃತಿಯೊಳಿಹ ಭಕ್ತನು ಭವಿಯ ಕಣ್ಗೆ
ಗಣ್ಯಮಾನಸನಾಗಿ ತೋರ್ಪನು । ಗಣ್ಯನೇ ಅಂತಾಗಿ ಶರಣ
ಶ್ರೇಣ್ಯನುನ್ನತ ಮಹಿಮೆಯಂ ಭಾವಿಸುವೊಡಜೆಯಲ್ಕೆ ॥ (ಬ.ಪು. ೫೫-೨೧)

ಸುರನದಿಗೆ ಪಳ್ಳಂಗಳೆಣೆಯೇ । ಸುರಗಿರಿಗೆ ಬೆಟ್ಟಂಗಳೆಣೆಯೇ
ಸರಿಯೆ ಸುರಧೇನುಗೆ ಪಶುಗಳಹಿಪತಿಗಹಿಗಳೆಣೆಯೆ
ಹರನೊಡನೆ ಮೇಣಿತರ ದಿವಿಜರು । ಸರಿಯಹರೆ ಶಿವನಾಗಮಯ್ಯಗೆ
ದುರುಳ ಭೂಸುರರೀ ಧರೆಯೊಳೆಣೆಯಲ್ಲದೆಂತೆನಲು ॥ (ಬ.ಪು. ೫೫-೨೩)

ಎಂದು ಬಡಗಿ ಮಾಚಲದೇವಿ, ಶ್ರೀಪತಿಪಂಡಿತ, ಹಾವಿನಹಾಳ ಕಲ್ಲಿದೇವ, ಬಿಬ್ಬಿ ಬಾಚಯ್ಯ, ಮಾದರ ಧೂಳಯ್ಯ, ಸಾಮವೇದಿ, ಉದ್ಭಟ, ಡೋಹರ ಕಕ್ಕಯ್ಯ, ಕೆಂಭಾವಿ ಭೋಗಯ್ಯ, ಗುಡ್ಡವ್ವೆ ಮೊದಲಾದ ಶರಣ-ಶರಣೆಯರ ಕಥೆಗಳನ್ನು ನಿರೂಪಿಸುವನು. ಕಮಲವು ನೀರಿನಲ್ಲಿ ಹುಟ್ಟಿದರೂ ಅದು ಪೂಜಾರ್ಹವಾಗಲಿಲ್ಲವೆ? ಕಟ್ಟಿಗೆಯಲ್ಲಿ ಹುಟ್ಟಿದ ಬೆಂಕಿ ಸರ್ವರಿಗೂ ಪಾವನವಾಗಲಿಲ್ಲವೆ? ಇದೇ ರೀತಿ ಅಂತ್ಯಜನಾದರೂ ಶಿವಭಕ್ತನಾದ ಮೇಲೆ ಉತ್ತಮನಾಗಲಿಲ್ಲವೆ?

ಬ್ರಾಹ್ಮಣಗುರುವಾದ ವ್ಯಾಸ ಕಬ್ಬಿಗನಲ್ಲವೆ? ವಸಿಷ್ಠನು ಊರ್ವಶಿಯ ಮಗನಲ್ಲವೆ? ಮಾತಂಗಋಷಿ ಮಾತಂಗಿಯ ಮಗನಲ್ಲವೆ? ಇವರೆಲ್ಲರೂ ಹೀನಕುಲದಲ್ಲಿ ಹುಟ್ಟಿದರೂ ಶಿವಾರ್ಚನೆಯಿಂದ ಪಾವನರೆನಿಸಿಕೊಂಡು ವಿಖ್ಯಾತಿ ಹೊಂದಲಿಲ್ಲವೆ? ಎಂದು ಉತ್ತರಿಸಿದನು. ಇದನ್ನೆಲ್ಲಾ ಕೇಳಿದ ರಾಜ ಸಾವಧಾನದಿಂದ "ಈ ಕಥೆಗಳನ್ನು ಹೇಳಿ ಏನು ಪ್ರಯೋಜನ? ಭಕ್ತರನ್ನು ಚಿವುಟಿದರೆ ಅವರ ದೇಹದಿಂದ ಹಾಲು ಸುರಿಯುತ್ತದೆಯೆ? ಬೇರೆಯವರನ್ನು ಚಿವುಟಿದರೆ ರಕ್ತ ಸುರಿಯುತ್ತದೆಯೆ?" ಎಂದು ಪ್ರಶ್ನಿಸುವನು. ಮತಿಹೀನರಾದ ರಾಜರ ಕೂಡ ವಾದಿಸುವುದು ಕಷ್ಟಕರ. ಹಾಗೆಯೇ. 'ಆನು ಕೊಲ್ಲೆನು ನೇಣು ಕೊಂದಿತು' ಎಂದು ಹೇಳುವ ಬ್ರಾಹ್ಮಣರೊಡನೆ ನುಡಿವುದೂ ದೋಷಕರವಾದುದು. ಆದುದರಿಂದ ಶಿವನಾಗಮಯ್ಯನ ತನುವಿನಲ್ಲಿ ಹಾಲನ್ನು ತೋರಿಸಬೇಕು ಎಂದು ಪ್ರತಿಜ್ಞೆ ಮಾಡಿದ ಬಸವಣ್ಣ ರಾಜನೊಡನೆ ಪಂಥವನ್ನು ಕಟ್ಟುವನು. ಅದರಂತೆ ಶಿವನಾಗಮಯ್ಯನನ್ನು ಕರೆಸಿ ಬಸವಣ್ಣ ಆತನಿಗೆ ನಮಸ್ಕರಿಸಿ ಒಂದು ಶಸ್ತ್ರದಿಂದ ಆತನ ಕರಸ್ಥಲವನ್ನು ಮೆಲ್ಲಗೆ ಒತ್ತಲು ಹಾಲು ಧಾರಾಕಾರವಾಗಿ ಹರಿಯಿತು. ಅಲ್ಲಿ ನೆರೆದಿದ್ದ ಜನಸಮೂಹವೆಲ್ಲ ಜಯಕಾರ ಮಾಡಿತು. ಬಿಜ್ಜಳ ಈ ಅದ್ಭುತವನ್ನು ನೋಡಿ ಶಿವನಾಗಮಯ್ಯನಿಗೆ ವಂದಿಸಿದನು. ಬಸವಣ್ಣ ಶಿವನಾಗಮಯ್ಯನನ್ನು ಪಲ್ಲಕ್ಕಿಯ ಮೇಲೆ ಕೂಡಿಸಿಕೊಂಡು ತನ್ನ ಮನೆಗೆ ಕರೆತಂದು ಸತ್ಕರಿಸಿ ಎಂದಿನಂತೆ ಸಂತೋಷದಿಂದಿದ್ದನು.

ಈ ಮೇಲಿನ ಕಥೆ ಕೇವಲ ನಿಮಿತ್ತ ಮಾತ್ರವಾದುದು. ಶಿವನಾಗಮಯ್ಯನ ಹಿರಿಮೆ ಗರಿಮೆ ಪ್ರತಿಷ್ಠೆಗಳ ಪ್ರದರ್ಶನಕ್ಕಾಗಿ ಸೃಷ್ಟಿಗೊಂಡದ್ದು. ಶಿವನಾಗಮಯ್ಯನ ಮಹತ್ವವನ್ನು ಅರಿತುಕೊಳ್ಳದ ಮಂದಮತಿಗಳಿಗಾಗಿ ನಿರೂಪಿತವಾದುದು. ಇದರ ಸತ್ಯಾಸತ್ಯತೆ ಎಂತಾದರೂ ಇರಲಿ. ಹೀನಕುಲದಲ್ಲಿ ಜನಿಸಿದ ಶಿವನಾಗಮಯ್ಯ ಶ್ರೇಷ್ಠಶಿವಭಕ್ತನಾಗಿ ಹಿರಿಯ ಅನುಭಾವಿಯಾಗಿ ಬಸವಣ್ಣನವರಿಂದ ಗೌರವಿಸಲ್ಪಟ್ಟನೆಂಬುದೇ ಇದರ ಅಂತರಾರ್ಥ. ಶಿವನಾಗಮಯ್ಯ ವಚನಗಳನ್ನು ಬರೆದಂತೆಯೂ ಪ್ರತೀತಿ ಇದೆ. ಸದ್ಯದಲ್ಲಿ ಈತನ ಎರಡು ವಚನಗಳು ಮಾತ್ರ ದೊರಕಿವೆ:

ಅಂಗದ ಮೇಲೆ ಲಿಂಗವಿದ್ದ ಬಳಿಕ ಅಂಗಹೀನರ ಬೆರಸಲಾಗದು.
ಅಂಗದ ಮೇಲೆ ಲಿಂಗವಿದ್ದ ಬಳಿಕ ಲಿಂಗ ಮುಂತಾಗಿ ಎಲ್ಲ ಕ್ರೀಗಳನ್ನು
ಗಮಿಸಬೇಕಲ್ಲದೆ ಅಂಗ ಮುಂತಾಗಿ ಗಮಿಸಲಾಗದು.
ಲಿಂಗಸಂಬಂಧಿಯಾಗಿ ಅಂಗ ಮುಂತಾಗಿ ಇರ್ಪವರು
ಲಿಂಗಕ್ಕೆ ದೂರವಯ್ಯ ನಾಗಪ್ರಿಯ ಚನ್ನರಾಮೇಶ್ವರ! ॥ ೧ ॥

ಘನಸುಖ ಮಹಾಸುಖವ ಮುಟ್ಟಲು
ಸಮಸುಖಂಗಳ ಸುಖಿಸಬಲ್ಲ ಸುಖವನಲ್ಲಿಯೇ ಕೊಯ್ದು
ಸೂಡ ಕಟ್ಟಬಲ್ಲ ನಾಗಪ್ರಿಯ ಚೆನ್ನರಾಮೇಶ್ವರಾ,
ನಿಮ್ಮ ಶರಣನು ಸುಖಿಸಬಲ್ಲ ಸುಖವನು. ॥ ೨ ॥

ಶಿವನಾಗಮಯ್ಯನ ಪ್ರಕರಣ ಕೆಲವು ಸಮಸ್ಯೆಗಳನ್ನು ನಮ್ಮ ಮುಂದೆ ಒಡ್ಡುತ್ತದೆ:

೧. ಶಿವನಾಗಮಯ್ಯನ ಇತಿವೃತ್ತಗಳೇನು?

೨. ಬಸವಣ್ಣನವರು ತಮ್ಮ ವಚನಗಳಲ್ಲಿ ಈತನನ್ನು ಎಲ್ಲಿಯೂ ಸ್ಮರಿಸದಿರಲು ಕಾರಣಗಳೇನು?

೩. ಈತನ ಕುಲ ಯಾವುದು? ಶೂದ್ರನೆ? ಶ್ವಪಚನೆ?

೪. ಈತನ ಕಾಯಕ ಯಾವುದು?

೫. ಶಿವನಾಗಮಯ್ಯನನ್ನು ಕಂಬಳಿ ನಾಗಿದೇವ ಎಂದು ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರದಲ್ಲಿ ಕರೆಯಲು ಆಧಾರಗಳೇನು?

೬ ಈತನ ವಚನಗಳ ಅಂಕಿತ ನಾಗಯ್ಯಪ್ರಿಯ ಚೆನ್ನರಾಮೇಶ್ವರನೆ ಅಥವಾ ನಾಗಪ್ರಿಯ ಚೆನ್ನರಾಮೇಶ್ವರನೆ?

೭ ಬಸವಣ್ಣನವರು ಈತನನ್ನು ಹಿರಿಯಭಕ್ತ ಎಂದು ಸಂಬೋಧಿಸಲು ಕಾರಣವೇನು? ಈತನು ವಯಸ್ಸಿನಿಂದ ಹಿರಿಯನೆ ಅಥವಾ ಅನುಭಾವದಿಂದ ಹಿರಿಯನೆ?

೮. ಈತನ ವಿಷಯವಾಗಿ ಆವೊಂದು ಕೃತಿಯೂ ಕಾಣದಿರಲು ಕಾರಣಗಳೇನು?

ಇವೇ ಮೊದಲಾದ ಸಮಸ್ಯೆಗಳನ್ನು ಪರಿಹರಿಸಬೇಕಾದುದು ವಿದ್ವಾಂಸರ, ಸಂಶೋಧಕರ ಕರ್ತವ್ಯವಾಗಿದೆ.

### ಅನುಬಂಧ : ಒಂದು

## ಹರಿಹರ ಚಿತ್ರಿಸಿದ 'ಸಂಬೋಳಿಯ ನಾಗಿದೇವ'

ಎಂದಿಂತು ಗೀತಮಂ ತನ್ನ ಸಾಮರ್ಥ್ಯಮಂ ಕೊಂಡಾಡುತಿಪ್ಪ ಪರಮಮಾಹೇಶ್ವರರ ಕರುಣಮಂ ಕೈಕೊಂಡು, ಪನ್ನಿಚ್ಛಾಸಿರ ಮನ್ನಣೆಯ ಭಕ್ತರ ನಡುವೆ ಸನ್ನಿಹಿತನಾಗಿ ಬಸವಿದೇವಂ ಸುಖದಿಂದಮಿರ್ದೊಂದು ದೇವಸಂ ಶರಣಕುಲಮಂ ಪಾರ್ದಿರ್ಪ ಸಮಯದೊಳು; ಬರುತಿರ್ದಪರೆಂಬ ಭಾವದೊಡನೆ ಪುಳಕಂ ಪುಟವೇಱೆ ಭೋಂಕನೆದ್ದುನ್ನತಾಸನವೇಱಿ, ಪಲ್ಲವಸತ್ತಿಗೆ ಮೇಲ್ಮಸಗೆ ಕೆಲಬಲನ ಪರಿಜನಂ ನೆಲನನುಗ್ಘಡಿಸೆ ಚಾಮರಸೀಗುರಿಗಳಿಕ್ಕೆಲದೊಳಲ್ಲಾಡೆ ಶಂಖಧ್ವನಿಯುಣ್ಮೆ, ಶಿವಭಕ್ತಪಾದಶೇಖರನೆಂಬ ಶರಣಜನವನವಸಂತನೆಂಬ ಭಕ್ತಜನಬಾಂಧವನೆಂಬ ಬಿರುದಿನ ಕಹಳಾರವಂ ದೆಸೆದೆಸೆಗೆ ಪಸರಿಸೆ, ಪುರಮಂ ಪೊಱಮಟ್ಟು ಹಿರಿಯ ಮಾಹೇಶ್ವರರ ಕೇರಿಗಳ ಕೆಲದೊಳು ನಡೆತಪ್ಪಾಗಲು- ಓಹಿಲಯ್ಯಂಗೆ ಹಿತಾರ್ಥ, ಉದ್ಭಟಯ್ಯಂಗೆ ಹಿತಾರ್ಥ. ಬಸವರಾಜಂಗೆ ಹಿತಾರ್ಥ, ಆರೋಗಿಸು -ಎಂದೆಂಬ ಶಿವಲಿಂಗಾರೋಗಣೆಯ ಸಮಯ ಸರ್ವಮಂಗಳರಚಿತಪರಿಣಾಮಪೂರಿತ ದಿವ್ಯವಾಕ್ಯಂಗಳಂ ಘಂಟಾನಾದದೊಡನೆ ಕೇಳ್ದು, ಕರಣಂ ಕಳೆಯೇಱೆ ಸಿರಿಮೊಗಂ ಸಂಪದವೇಱೆ ದಂಡಿಗೆಯಿಂ ಘಳಿಲನಿಳಿದು, **ಸಂಬೋಳಿಯನಾಗಿದೇವ**ನೆಂಬ ಹಿರಿಯ ಮಾಹೇಶ್ವರನ ಮನೆಯಂ ಪೊಕ್ಕು, ಸಂಗಪ್ರಸಾದವನವರ ಪ್ರಸಾದವೆರಸಿ ಕೈಕೊಳ್ಳುತ್ತಿರೆ;

ಇತ್ತಲೊಡನೆ ಬರುತ್ತಿರ್ಪ ವೈಷ್ಣವರ ಬೇಹಿನ ಸಾಹಸಿಗನೊರ್ವಂ ಪುರಕೆ ಪರಿತಂದು ಬಸವನ ಚರಿತ್ರಮನಜ್ಞಾನಿಗಳಪ್ಪ ವಿಪ್ರಕುಲಕ್ಕೆ ಪೇಳೆ; ಕೇಳ್ದು ಸಂಭ್ರಮದಿಂ ಸಡಗರಿಸುತ್ತಂ, ನಾರಣಕ್ರಮಿತಂ ಕೃಷ್ಣಪೆದ್ದಿ ವಿಷ್ಣುಭಟ್ಟಂ ಕೇಶವಭಟ್ಟಂ ವಿಷ್ವಕ್ಸೇನ ಭಟ್ಟಂ ಮುರಾರಿಕ್ರಮಿತಂ ಸೌರಿಪೆದ್ದಿ ಮುಕುಂದಭಟ್ಟಂ ಪದ್ಮನಾಭಕ್ರಮಿತಂ ಗೋವಿಂದಪಂಡಿತಂ ಧರಣೀಧರಭಟ್ಟಂ ವೈಕುಂಠಪೆದ್ದಿ ಜಲಶಯನಕ್ರಮಿತಂ ದಶಾವತಾರಭಟ್ಟಂ ಜನಾರ್ದನಪೆದ್ದಿ ವಾಸುದೇವಘೈಸು ಅಚ್ಯುತಕ್ರಮಿತಂ ದಾಮೋದರ ಭಟ್ಟಂ ಮೊದಲಾದ ಛಾಂದಸರು ವೇದಜಡರು ಮಟ್ಟಿಯ ಮರುಳ್ಗಳು ವೃಥೋತ್ಸಾಹಿಗಳು ಹೆಬ್ಬೇಳಿಗಳು ದರ್ಭೆಯ ನಿರ್ಭಾಗ್ಯರೆಲ್ಲಂ ನೆರೆದರಮನೆಗೆ ಬಂದು- ದೇವದೇವ, ಎಲೆ ಭೂಪ, ಎಲೆಲೆಲೆ ಬಿಜ್ಜಳ, ಬಸವನ ನಡೆವಳಿ ದಿನದಿನಕ್ಕೆ ವಿಪರೀತಮಾಗಿರ್ದಪುದು. ಹಿರಿಯ ಮಾಹೇಶ್ವರರೆಂದು ಬೆರಸಿಕೊಂಡಿಪ್ಪುದಂತಲ್ಲದೆ, ಇಂದೀ ಗಳಿಗೆಯೊಳು ಹೊಲಗೇರಿ ಯೊಳೊರ್ವಂ- ಪೊಲೆಯನೆಂದಡೆ ಕೋಪಂ- ಹಿರಿಯ ಭಕ್ತನ ಮನೆಯೊಳಗುಂಡುದಲ್ಲದೆ ನಿನ್ನೋಲಗದೊಳು ಪೊಲೆಗಲಸಲುಂ ಬಂದಪಂ. ಇಂತಾದಡೆಮಗಿರಲ್ಬಾರದು -ಎಂದು ಪೇಳ್ವರಂ ಸಂತೈಸಿ, ಬಸವನಂ ಕರೆಯಿಮೆಂದರಸಾಳ್ಗಳಂ ಕಳುಪುತ್ತಂ; ಬಸವರಾಜಂ ಬಂದೋಲಗದ ಮನೆಯಂ ಪೊಗುವನೆಂದು ರಾಜಾಂಗಣದ ಬಯಲೊಳು ಒಡ್ಡೋಲಗಂಗೊಟ್ಟು ಕುಳ್ಳಿರಲು;

ಅಲ್ಲಿಗೆ ಜಂಗಮದಶಾವಸ್ಥಂ ಜಂಗಮಪ್ರಾಣಿಯೆನಿಪ ಸಂಗನಬಸವಂ ಬಂದು ನಿಂದಿರೆ, ಬಿಜ್ಜಳಂ ಕಂಡು- ಎಲೆ ಬಸವಣ್ಣ, ಸುವರ್ಣಂ ಕಮ್ಮಿತ್ತಾದಂತೆ ವಿಪ್ರಕುಲಕನುಕೂಲಮಪ್ಪ ಶಿವಭಕ್ತಿ ಪೊದ್ದಿರ್ದು ಸದಾಚಾರದಿಂ ಸುಖಿಯಾಗಿರ್ಪುದನೊಲ್ಲದೆ, ಅತಿಭಕ್ತಿ ತಲೆಗೇಱಿ ಹಿರಿಯ ಮಾಹೇಶ್ವರರೆಂದು ಪೊಲೆಗಲಸಿ ಅವರ ಮನೆಯೊಳುಂಡುದಲ್ಲದೆ ಇಲ್ಲಿ ಬಂದು ಎಲ್ಲರಂ ಗೋಜಾಗತಂ ಮಾಳ್ಪುದು ಮಾರ್ಗವಲ್ಲ ಎಂದು ವಿಪ್ರಪ್ರೇರಿತಂ ನುಡಿಯೆ, ಬಸವರಾಜಂ ಕೇಳ್ದು- ಎಲೆ ಬುದ್ಧಿಯಿಲ್ಲದ ಭೂಪ, ಎರಗಿವಿಯ ಮರುಳೆ, ನಾರಣಕ್ರಮಿತರ ಕೇರಿಯಂ ಪೊಕ್ಕೆನೆ? ಮುಕುಂದಭಟ್ಟರ ಮನೆಯೊಳುಂಡೆನೆ? ಸೌರಪೆದ್ದಿಗಳ ಸಾರಿ ನಿಂದೆನೆ? ದಾಮೋದರಭಟ್ಟರಂ ಪ್ರೇಮದಿಂ ಸೋಂಕಿದೆನೆ? ಕೇಶವಘೈಸರ ವಾಸನೆಯುಂಟೆ? ಪರಸನಱಿಯದ ಪೊಲೆಯರ ಮನೆಯಂ ಹೊಕ್ಕುಂಡುದಿಲ್ಲ -ಎಂದು ಶಿವಪ್ರೇರಕಂ ನುಡಿವ

ಮಾತಿನೊಡನೆ ಬಿಜ್ಜಳಂ ಕೋಪದೊಳುರಿದು -ಇಂತು ನುಡಿವರೆ, ಭಂಡಾರಿಬಸವ? ವೇದಶಾಸ್ತ್ರಪುರಾಣಾಗಮ ಯಜ್ಞವಿಧಿಯಿಂ ನಡೆವ ವಿಪ್ರರಂ ಹೊಲೆಯರೆಂದು ಶಿವಭಕ್ತನಾದ ಹೊಲೆಯನಂ ಉತ್ತಮನೆಂಬುದಕ್ಕೆ ಪ್ರಮಾಣೇನು? ವಿಪ್ರರ ಮೈಯಂ ಕೊಯ್ಯೆನೆತ್ತರ್ ಸುರಿದು, ಭಕ್ತರ ಮೈಯೊಳು ಪಾಲ್ ಸುರಿದಪುದೆ? ಬೇಡ ಬೇಡ. ಸಮಯ ಪಕ್ಷಪಾತದೊಳಪ್ಪುದೆಲ್ಲತಿರೇಕವೇಕೆ? ಪದುಳಮಿರ್ದಡೆ ಸಾಲ್ವುದು-ಎಂದರಸಂ ನುಡಿಯೆ, ಬಸವಣ್ಣಂ ಕೇಳ್ದು ನಸುನಗುತ್ತೆ ಆ ಮಾತಿಂಗೊಡಂಬಟ್ಟು- ತಪ್ಪದು ತಪ್ಪದೆಲೆ ಅರಸ. ನೀಂ ತಪ್ಪಿ ನುಡಿಯೆ. ನೀನೆಂದಂತೆ ವಿಪ್ರರ ಮೈಯೊಳು ನೆತ್ತರು ಭಕ್ತರ ಮೈಯೊಳು ಪಾಲ್ ಸುರಿಯದಿರ್ದಡೆ, ಸಂಗಂಗೆ ದೂರಂ, ಶರಣರ್ಗೆ ದೂರಂ, ನೋಡು ನೋಡರಸ, ನೀಂ ನೋಡಿನಿತು ಬೇಗಂ ಸೈರಿಸು -ಎಂದು;

ಗಳಗಳನೆ ನಡೆತಂದು, **ಸಂಬೋಳಿಯ ನಾಗಿದೇವ**ನನಂದಣದಲುಂ ಬಿಜಯಂಗೆಯ್ಸಿ ತಾಂ ಕೆಲದೊಳು ಬರುತ್ತಂ- ದೇವ, ಭಕ್ತದೇಹಿಕದೇವ, ನೀಂ ಪೊಕ್ಕಲ್ಲಿ ಪೊಕ್ಕವರೊಕ್ಕುದಂ ಕೊಂಡೆ. ನೀನಿರ್ದ ಕುಲವೆ ಸತ್ಕುಲಂ. ನಿನ್ನಿಂದ ನಾ ಕುಲಜನೆ. ಕೂಡಲಸಂಗ ಕರುಣಿಸು ಎಂದು ಗೀತಮಂ ಪಾಡುತಂ ನಡೆತಂದು. ಬಿಜ್ಜಳನುಂ ಪರವಾದಿಗಳುಂ ಕೌತುಕಂಬಡುತ್ತಿರಲು, ದಂಡಿಗೆಯಿಂದುಪಮನ್ಯುದೇವರನಿಳುಪುವಂತಿಳುಪಿ ತಾನೆ ಕೈಗೊಟ್ಟು ಬಂದಾಸ್ಥಾನದ ನಡುವೆ ನಿಂದಿರ್ದು, ಕರೆ ಕರೆ ನಿನ್ನ ಕರ್ಮಜಡರನೆಂದು ಕರೆಸಿ, ಬಂದ ವಿಪ್ರನೊರ್ವನ ಮೈಯಂ ಸೀಳೆ ಕೆನ್ನೆತ್ತರುಂ ಪುಳುವುಂ ಸುರಿಯಲರಸಂ ಕಂಡು ನೆಱೆ ಪೇಸಿ ತೆಗೆತೆಗೆಯೆಂದು ಕಣ್ಮುಚ್ಚಿಕೊಳುತ್ತಿರೆ; ಬಸವರಾಜನೆದ್ದು. ಇತ್ತ ನೋಡು ಬಿಜ್ಜಳನೃಪಾಲ ಎಂದು. ರಜತಾದ್ರಿಯರಸನಂ ಗೌರೀಪತಿಯಂ ಗಂಗಾಧರನಂ ವಿಭೂತಿಭೂಷಣನಂ ಚಂದ್ರಧರನಂ ಪುಣ್ಯಮಯನಂ ಶಿವನಂ ನೆನೆದು ಸುಧಾಕರಧರನ ಪಾದದಂತಿರ್ದ ಶರಣನ ಪಾದಮಂ ಪಿಡಿದು, ಸುರಧೇನುವಿನ ಪಯೋಧರಮನಿಸುವಂತೆ ಉಂಗುಟದ ಮೊನೆಯನಿಸಲೊಡಂ, ಶ್ವೇತಪರ್ವತದ ಪಾದತಟದ ಸರಿವುದರಿವಿನ ಹಾಲೊಱತೆ ಸುರಿತಪ್ಪಂತೆ ಹಾಲ ಹಳ್ಳವೋಲಗದ ನಡುವೆ ಮಡುಗಟ್ಟಿ ಪರಿದು ಪೊಱಸೂಸೆ, ಕಂಡು ಬಿಜ್ಜಳಂ ಕೌತುಕಂಗೊಂಡು ಭಯರಸವೇಱ ಭಾವಿಸುತ್ತಿರೆ, ಪುರಜನಂ ಬೆಱಗಾಗೆ, ಶರಣರ್ ಗುಡಿಗಟ್ಟೆ, ಪರವಾದಿಗಳ್ ಮೆಲ್ಲಮೆಲ್ಲನೆ ಸರಿಯೆ;

ಸಾಮರ್ಥ್ಯದಾಯಕಂ ನಾಯಕರ ದೇವಂ ಬಸವರಾಜಂ ನಿಂದು- ಎಲೆ ಧರಿತ್ರೀನಾಥ, ಸೂರ್ಯನ ಮೈಯೊಳು ಕಳಂಕುಂಟೆ? ಅಮೃತರಸದೊಳು ಕೈಪೆಯುಂಟೆ? ಶಿವಭಕ್ತರ ಮೈಯೊಳು ಸುಧಾರಸವಲ್ಲದೆ ಮತ್ತೊಂದುಂಟೆ? ಶರಣಕುಲದುನ್ನತಿಯನಱಿಯದೆ ನಿನ್ನ ವೇದಜಡರ ಮಾತು ಮೇರೆಗೆಡಿಸಿತ್ತು, ನಿರ್ದೈವರ ನುಡಿ ಬುದ್ಧಿಗೆಡಿಸಿತ್ತು. ಕರ್ಮಿಗಳ ಸಂಗಂ ಪೆರ್ಮೆಗೆಡಿಸಿತ್ತು, ಇದಂ ಕಂಡಾದಡಂ ಶರಣರಂ ನಂಬು, ಮರುಳಾಗದಿರು ಎಂದು ಬಿಜ್ಜಳಂಗ ಭಯಮಂ ಕೊಟ್ಟು ಭಕ್ತಿಯ ಬೆಂಬಳಿಯ ಶರಣರ ಬೆಂಬಳಿಯಲ್ಲದೆ ಭವಿಗಳಂ ಮುಟ್ಟನೆಂಬ **ಸಂಬೋಳಿಯ ನಾಗಿದೇವ**ನು ಗಜಮಸ್ತಕದ ಮೇಲೆ ಬಿಜಯಂಗೆಯ್ಸಿ ಪುರದೊಳು ಮೆಱೆಯಿಸಿ ತನ್ನ ಮಹಮನೆಗೆ ತಂದಾನೆಯಿಂದಿಳಿಪಿ ಗದ್ದುಗೆಯನಿತ್ತು ಮೈತೀವಲುಡಕೊಟ್ಟು ಮನಂ ತೀವಲಾರಾಧಿಸುತ್ತವರಂ ಕಳುಪಿ; ಸಂಗನಬಸವಂ ಬಸವಿದೇವಂ ಹಾರದ ನಡುವಣ ನಾಯಕರತ್ನದಂತೆ, ಅವಯವದ ನಡುವಣ ಉತ್ತಮಾಂಗದಂತೆ. ನವರತ್ನದ ನಡುವಣ ಚಿಂತಾರತ್ನದಂತೆ, ಗೋಕುಲದೊಳಗಣ ಕಾಮಧೇನುವಿನಂತೆ, ತರುಕುಲದ ನಡುವಣ ಸುರಕುಜದಂತೆ, ಗಿರಿಗಳ ನಡುವಣ ಮೇರುಗಿರಿಯಂತೆ, ಸುವರ್ಣದ ನಡುವಣ ಪರುಷದಂತೆ, ನಕ್ಷತ್ರಂಗಳ ನಡುವಣ ಚಂದ್ರನಂತೆ, ನವಗ್ರಹಂಗಳ ನಡುವಣ ಭಾಸ್ಕರನಂತೆ, ಅನುಲೇಪನಂಗಳ ನಡುವಣ ಭಸಿತಮುಂಡನದಂತೆ, ಕಾಂತಿಗಳ ನಡುವಣ ಸ್ವಯಂಜ್ಯೋತಿಯಂತೆ, ಸಮಸ್ತಶರಣಮಧ್ಯಸ್ಥಿತ ಮನೋಹರಮೂರ್ತಿಯಾಗಿ ನಿತ್ಯಸುಖದಿಂದಿರ್ಪಲ್ಲಿ-

[ಬಸವರಾಜದೇವರ ರಗಳೆ: (ಸಂ.) ಟಿ.ಎಸ್. ವೆಂಕಣ್ಣಯ್ಯ, ಮೈಸೂರು, ೧೯೩೮, ಹತ್ತನೆಯ ಸ್ಥಲ, ಪು. ೬೬-೭೦]

## ಅನುಬಂಧ : ಎರಡು

# ಶಾಂತಲಿಂಗ ದೇಶಿಕ ಚಿತ್ರಿಸಿದ 'ಕಂಬಳಿಯ ನಾಗಯ್ಯ'*

ಈಶಭುಕುತರೆ ವಿ । ಶೇಷವೆನುತ ಬಸ
ವೇಶ ಕಂಬಳಿಯ ನಾಗಯ್ಯನ
ಭಾಸುರ ಕರದಿ ಸು । ಧಾಸರಿಗರೆದನು
ಭೂಸುರತತಿ ನಾಚುವಂತೆ

ಈಶಭಕ್ತರು ಅಧಿಕವೆಂದು ಬಸವೇಶ ಶಿವನಾಗಮಯ್ಯನ ಕರದಲ್ಲಿ ಅಮೃತವ ಕರೆದರೆಂಬುದಕ್ಕೆ ಕಥೆ:

ನೈಮಿಷಾರಣ್ಯವಾಸದ ಮುನಿಗಳು ಕುಲದಲ್ಲಿ ಅಧಿಕರಾರೆಂದು ಕೇಳಲು ಪೇಳುತ್ತಿರ್ದನು. ಸೂತಮುನೀಂದ್ರನು ಕ್ರಿಮಿಕೀಟ ಪತಂಗ ಮೊದಲಾದ ಸಚರಾಚರ ಚೌರಾಸಿಪ್ರಾಣಿಗಳೊಳಗೆ ಗೋವುಗಳಧಿಕ, ಗೋವಿನಿಂದ ಮನುಷ್ಯರಧಿಕ, ಮನುಷ್ಯರಿಂದ ಅಷ್ಟಭೂತಗಳಧಿಕ. ಅಷ್ಟಭೂತಗಳಿಂದ ಅಷ್ಟವಸುಗಳಧಿಕ, ಅಷ್ಟವಸುಗಳಿಂದ ಅಷ್ಟದಿಕ್ಪಾಲಕರಧಿಕ, ಅವರಿಂದ ನವಗ್ರಹಗಳಧಿಕ, ನವಗ್ರಹಗಳಿಂದ ದ್ವಾದಶಾದಿತ್ಯರಧಿಕ, ಆದಿತ್ಯರಿಂ ನವಬ್ರಹ್ಮರಧಿಕ, ಆ ಬ್ರಹ್ಮರಿಂ ಅರುವತ್ತೆಂಟು ಕೋಟಿ ತೀರ್ಥವಧಿಕ, ತೀರ್ಥದಿಂ ಯಮುನೆಯೆಂಬ ನದಿಯಧಿಕ, ನದಿಯಿಂ ಜಾಹ್ನವಿಯಧಿಕ, ಜಾಹ್ನವಿಯಿಗಿಂದ ಜಹ್ನುಮುನಿಯಧಿಕ, ಮುನಿಗಿಂದ ಸಗರನ ಸುತ ಭಗೀರಥನಧಿಕ, ಅವನಿಗಿಂದ ಹಿಮದ ನಗವಧಿಕ, ನಗದಿಂ ಹಿಮಭೂಮಿಯಧಿಕ, ಅದರಿಂ ಶರಧಿಗಳಧಿಕ, ಶರಧಿಯಿಂ ಮೇಘವಧಿಕ, ಅದರಿಂ ನಕ್ಷತ್ರವಧಿಕ, ಅದರಿಂ ಚಂದ್ರನಧಿಕ, ಅದರಿಂ ಸೂರ್ಯನಧಿಕ, ಸೂರ್ಯನಿಂ ಅಗ್ನಿಯಧಿಕ, ಅದರಿಂ ದೇವರ್ಕಳಧಿಕ, ಅವರಿಂ ಯಜ್ಞವಧಿಕ, ಅದರಿಂ ದೀಕ್ಷಿತರಧಿಕ, ಅವರಿಂದ ವೇದವಧಿಕ, ವೇದದಿಂದ ಧನುರ್ವೇದವಧಿಕ, ಅದರಿಂ ದ್ವಿಜರಧಿಕ, ಅವರಿಂ ವಿಪ್ರರಧಿಕ, ಅವರಿಂ ಕೃತಬುದ್ಧಿಗಳಧಿಕ, ಅವರಿಂ ಕರ್ತಾರರಧಿಕ, ಅವರಿಂದ ಯಮ ನಿಯಮ ಪಂಚಕಯೋಗಿಗಳಧಿಕ, ಅವರಿಂ ಜೋಗಿ ವೆಮಳರಧಿಕ, ಅವರಿಂ ಸನ್ಯಾಸಿಗಳಧಿಕ, ಅವರಿಂ ಪಾಶುಪತಿಗಳಧಿಕ, ಅವರಿಂ ಆದಿಶೈವ ಶುದ್ಧಶೈವ ಮಾರ್ಗಶೈವ ಪ್ರವರಶೈವವರಧಿಕ, ಅವರಿಂದ ಅದ್ವೈತಜ್ಞಾನಿಗಳಧಿಕ, ಅವರಿಂ ಶಿವಾರ್ಚಕರಧಿಕ, ಆ ಶಿವಾರ್ಚಕರ್ಗೆ ಹರಿಯಜಸುರಪ ಮನುಮುನಿಗಳು ಸಮಾನವಲ್ಲ. ಅಂತಾ ಶಿವಾರ್ಚಕರು ವೀರಶೈವಸಂಪನ್ನರಾದ ಲಿಂಗಾಂಗ ಸಂಬಂಧಿಗಳಿಗೆ ಆ ಹದಿನಾಲ್ಕು ಭುವನದೊಳಗೆ ಆರು ಸಮಾನವಿಲ್ಲವಾಗಿ ಹೊಲೆಯನಾದರೂ ಶಿವಪೂಜೆಯಿಂದ ಸತ್ಕುಲಜನಪ್ಪನು. ಅದೆಂತೆಂದೊಡೆ ವೇದವ್ಯಾಸ ಬೋಯಿತಿಯ ಮಗ, ಮಾತಂಗಿಯ ಮಗ ಮಾತಂಗನು, ಸುನಕನ ಮಗ ಸನಕನು, ಊರ್ವಸಿಯೆಂಬ ವೇಶಿಯ ಮಗ ವಸಿಷ್ಠನು, ಮಂಡೋದರಿ ಕಪ್ಪೆಯ ಮಗಳು, ಆಕೆಯ ಮಗ ಮಾಂಡವ್ಯನು, ಅಗಸ್ತ್ಯ ಕಬ್ಬಿಲನು, ದೂರ್ವಾಸ ಮುಚ್ಚಿಗನು, ಕಶ್ಯಪ ಕಮ್ಮಾರನು, ಕೌಂಡಲ್ಯನೆಂಬ ಮುನಿಯು ನಾಯಿಂದನು, ಸಾಂಖ್ಯಮುನಿ ಶ್ವಪಚನು, ವಾಲ್ಮೀಕಿ ಮುನಿಯು ವ್ಯಾಧನು, ಪಾರಾಶರ ಮುನಿಯು ಬೇಡನು, ಶೃಂಗಮುನಿ ಎರಳೆಯ ಮಗನು, ಇವರೆಲ್ಲರು ಶಿವಭಕ್ತಿಯಿಂದ ಸತ್ಕುಲಜರಾದರು. ಶಿವನಾಗಮಯ್ಯನವರೆಂಬ ಹಿರಿಯಭಕ್ತರ ಒಂದು ರೋಮಕ್ಕೆ ವಿಪ್ರರು ಎಣ್ಣೆಯಿಲ್ಲವೆಂದು ಬಸವಣ್ಣನೆನಲು ಬಿಜ್ಜಳ ಕೇಳಿ ನುಡಿದನು. ಭಕ್ತರ ಚಿವುಟಿದರೆ ಮೈಯಲ್ಲಿ ಹಾಲು ಒಗುವುದೆ? ಭವಿಗಳ ಚಿವುಟಿದರೆ ಮೈಯಲ್ಲಿ ನೀರು ಒಕ್ಕಾವೆ? ಎನಲು, ಬಸವಣ್ಣನು ಶಿವಭಕ್ತರೆ ನಿತ್ಯವಾದ ಸತ್ಕುಲಜರೆಂಬುದ ತೋರುವೆನೆಂದು ಶಿವನಾಗಮಯ್ಯಗಳೆಂಬ ಹಿರಿಯ ಭಕ್ತರ ಕರದಲ್ಲಿ ಅಮೃತವ ಕರೆದು ಮೆರೆದರಂದು. ಇಂದು ನಿನಗೆ ಯಾತೆಕ್ಕೆಲವೊ ಎಂದು ಭೈರವದೇವ ವಾದವ ಖಂಡಿಸುತ್ತಿದ್ದನು.

[ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ : (ಸಂ) ಡಾ. ಆರ್.ಸಿ. ಹಿರೇಮಠ, ಡಾ. ಎಂ.ಎಸ್. ಸುಂಕಾಪುರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು. ೪೩೭-೩೮]

---

* ಹರಿಹರ 'ಬಸವರಾಜದೇವರ ರಗಳೆ'ಯಲ್ಲಿ ಶರಣ ನಾಗಿದೇವನ ಹೆಸರನ್ನು ಸಂಬೋಳಿಯ ನಾಗಿದೇವ ಎಂದು ಸರಿಯಾಗಿಯೇ ಗುರುತಿಸಿರುವನು. ಶಾಂತಲಿಂಗದೇಶಿಕನಲ್ಲಿ 'ಕಂಬಳಿಯ ನಾಗಯ್ಯ' ಎಂದು ತಪ್ಪಾಗಿ (ಬಹುಶಃ ಲಿಪಿಕಾರರ ಅಜ್ಞತೆಯಿಂದಾಗಿ) ಬಂದಿದೆ.

### ಅನುಬಂಧ : ಮೂರು

## ಉತ್ತರ ದೇಶದ ಬಸವಲಿಂಗ ಚಿತ್ರಿಸಿದ 'ಶಿವನಾಗಮಯ್ಯ'

ಕಲ್ಯಾಣದಲ್ಲಿ **ಶಿವನಾಗಮಯ್ಯ**ಗಳೆಂಬ ಶರಣರು ಕಾಡೊಳಗೆ ಚಂದನ, ಬಾಳೆಯಲ್ಲಿ ಕಪ್ಪುರ. ಚಿಪ್ಪಿನಲ್ಲಿ ಮುತ್ತು ಹುಟ್ಟುವಂತೆ ಹಿರಿಯ ಕುಲದಲ್ಲಿ ಉದಿಸಿ ವೀರಶೈವರಾಗಿರಲು ಬಸವೇಶ್ವರನು ಅವರಲ್ಲಿ ಪಾದೋದಕ ಪ್ರಸಾದವ ಸೇವಿಸುತ್ತಿರಲು, ಅದ ವಿಪ್ರರು ಕೇಳಿ ಬಿಜ್ಜಳನ ಕೂಡೆ ಹಿರಿಯ ಭಕ್ತರೆಂದು **ತಪ್ಪಟೆಯ ನಾಗ**ನ ಕಾಲಿಗೆ ಬಿದ್ದು ಅವನುಂಡು ಮಿಕ್ಕುದನುಂಬುತವನೆ ಎಂದು ಹೇಳಿದರು. ಮತ್ತೆ ಬಸವಣ್ಣನು **ಶಿವನಾಗಮಯ್ಯ**ಗಳ ದಂಡಿಗೆಯ ಮೇಲೆ ಕುಳ್ಳಿರಿಸಿಕೊಂಡು ಸಭೆಗೆ ಬರುತವನೆ ನೀವು ಹೊಱಗೆ ಓಲಗವಾಗಬೇಕೆಂದು ವಿಪ್ರರು ಹೇಳಲು ಹಾಂಗೆಯೆ ಬಂದು ಬಿಜ್ಜಳ ಕುಳಿತನು. ಆಗ ಶಿವನಾಗಮಯ್ಯಗಳ ಉನ್ನತ ಗದ್ದುಗೆಯಲ್ಲಿ ಕುಳ್ಳಿರಿಸಿ ಬಳಿಕ ಕೂಚಿಪೆದ್ದಿ, ಪೂಚಿಪೆದ್ದಿ, ಕೃಷ್ಣಪೆದ್ದಿ. ಬಿಜ್ಜಳ ಮೊದಲಾದವರ ನಡುವೆ ಬಸವಣ್ಣನು ಹಾರದ ಮಧ್ಯದಲ್ಲಿದ್ದ ನಾಯಕರತ್ನದಂತೆ ಪಶುಗಳ ನಡುವಣ ಕಾಮಧೇನುವಿನಂತೆ. ತರುಗಳ ನಡುವಿನ ಕಲ್ಪವೃಕ್ಷದಂತೆ, ಗಿರಿಗಳ ನಡುವಿನ ಮೇರುವಿನಂತೆ. ನವಗ್ರಹಗಳ ನಡುವಣ ಸೂರ್ಯನಂತೆ, ಅನುಲೇಪನದೊಳಗಣ ಭಸಿತದಂತೆ ಒಪ್ಪಿದನು.

ಆಗ ಬಿಜ್ಜಳನು ಬಸವರಸರೆ ಕುಲಹೀನರ ಕೂಡಿಕೊಂಡು ಹೀಂಗೆ ಸಭೆಗೆ ಬರುವರೆ ಎನಲು, ಪಾಷಾಣದಿಂದಾದ ಲಿಂಗವ ಕಲ್ಲೆನಬಹುದೆ, ಪರುಷಸೋಂಕಿಲೋಹ ಚಿನ್ನವಾದ ಬಳಿಕ ಕಬ್ಬುನವೆಂಬರೆ, ಗುರುಮುಟ್ಟಿ ಶುದ್ಧವಾದ ಭಕ್ತರ ಕುಲವನೆತ್ತಬಹುದೆ ಎನಲು, ಅದಕ್ಕೆ ಬಿಜ್ಜಳ ನಿಮ್ಮ ಭಕ್ತರ ಚಿವುಟಿದರೆ ಹಾಲು ಬರುವುದು, ಉಳಿದವರ ಚಿವುಟಿದರೆ ರಕ್ತ ಬರುವುದೆ ಎನಲು, ಹಾಂಗಹುದೆಂದು **ಶಿವನಾಗಮಯ್ಯ**ಗಳ ಬೆರಳುಗಳಲ್ಲಿ ಅಮೃತವ ಕಱೆಸಲು ಬಿಜ್ಜಳ ತಲೆದೂಗಿ ಬಸವೇಶ್ವರಂಗೆ **ಶಿವನಾಗಮಯ್ಯ**ಂಗೆ ಉಡುಗೊರೆಯ ಕೊಟ್ಟು ಕಳುಹಿಸಿದನು.

[ಬಸವೇಶ್ವರ ಪುರಾಣದ ಕಥಾಸಾಗರ : (ಸಂ.) ಎಸ್. ಉಮಾಪತಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪು. ೨೧೭-೧೮]

■

# ಶಿವಶರಣರ ವಚನಗಳಲ್ಲಿ ಆಚಾರ್ಯರ ಉಲ್ಲೇಖಗಳು

ಪಂಚಾಚಾರ್ಯರು ಸಾಧಿಸಿದ ಬೋಧಿಸಿದ ವೀರಶೈವ ಸಿದ್ಧಾಂತದ ಎಲ್ಲ ತತ್ತ್ವಗಳು ಸಾಕಾರಗೊಂಡದ್ದು ಸಾರ್ವತ್ರಿಕಗೊಂಡದ್ದು ಸಾರ್ಥಕಗೊಂಡದ್ದು ವಚನಕಾರರಿಂದ. ಆದುದರಿಂದ ಪಂಚಾಚಾರ್ಯರು ಮತ್ತು ವಚನಕಾರರು ವೀರಶೈವಧರ್ಮದ ಎರಡು ಕಣ್ಣುಗಳಿದ್ದಂತೆ. ಇವರ ಅನ್ಯೋನ್ಯತೆಗೆ ನಿಕಟಸಂಬಂಧಕ್ಕೆ ಭಕ್ತಿಗೌರವ ಭಾವನೆಗೆ ಈ ಮುಂದಿನ ವಚನಗಳು ಸ್ಪಷ್ಟನಿದರ್ಶನಗಳಾಗಿವೆ.

ಪಂಚಾಚಾರ್ಯರನ್ನು ಆದಯ್ಯ, ಬಸವಣ್ಣ, ಚನ್ನಬಸವಣ್ಣ, ಮೆರೆಮಿಂಡಯ್ಯ, ಹಾವಿನಹಾಳ ಕಲ್ಲಯ್ಯ, ಕಲಕೇತಯ್ಯ, ಪ್ರಸಾದಿ ಭೋಗಣ್ಣ, ಗುರುಸಿದ್ಧದೇವರು ಇವರೇ ಮೊದಲಾದ ವಚನಕಾರರು ಸ್ಮರಿಸಿದ್ದಾರೆ, ಸ್ತುತಿಸಿದ್ದಾರೆ. ಅವುಗಳಲ್ಲಿ ಕೆಲವು ಇಂತಿವೆ:

**ಆದಯ್ಯಗಳ ವಚನಗಳು:**

ಬಸವಣ್ಣನ ಭಕ್ತಿಸ್ಥಲ ಮಡಿವಾಳ ಮಾಚಯ್ಯನ ಮಾಹೇಶ್ವರಸ್ಥಲ
ಘಟ್ಟಿವಾಳ ಮುದ್ದಣ್ಣನ ಪ್ರಸಾದಿಸ್ಥಲ ಚೆನ್ನಬಸವಣ್ಣನ ಪ್ರಾಣಲಿಂಗಿಸ್ಥಲ
ಪ್ರಭುವಿನ ಶರಣಸ್ಥಲ ಸೊಡ್ಡಳ ಬಾಚರಸರ ಐಕ್ಯಸ್ಥಲ
ಅಜಗಣ್ಣನ ಆರೂಢ ನಿಜಗುಣರ ಬೆರಗು
ಅನುಮಿಷನ ನಿಶ್ಚಲ ಮಹದೇವಿಯಕ್ಕನ ಜ್ಞಾನ
ನಿಂಬಿಯಕ್ಕನ ನಿಶ್ಚಯ ಮುಕ್ತಾಯಕ್ಕನ ಅಕ್ಕರು
ಸತ್ಯಕ್ಕನ- ಯುಕ್ತಿ ಅಲ್ಲಾಳಿಯಕ್ಕನ ಸಮತೆ
ರೇವಣಸಿದ್ಧಯ್ಯದೇವರ ನಿಷ್ಠೆ, ಸಿದ್ಧರಾಮ ತಂದೆಗಳ ಮಹಿಮೆ
ಮರುಳಸಿದ್ಧಯ್ಯದೇವರ ಅದೃಷ್ಟ ಪ್ರಸಾದನಿಷ್ಠೆ
ಏಕೋರಾಮಯ್ಯಗಳ ಆಚಾರನಿಷ್ಠೆ
ಪಂಡಿತಾರಾಧ್ಯರ ಸ್ವಯಂಪಾಕ
ಮುಗ್ಧಸಂಗಯ್ಯ ಮೈದುನರಾಮಣ್ಣ ಬೇಡರ ಕಣ್ಣಪ್ಪ
ಕೋಳೂರ ಕೊಡಗೂಸು ತಿರುನೀಲನಕ್ಕರು

ರುದ್ರಪಶುಪತಿಗಳು ದೀಪದ ಕಲಿಯಾರ ಮುಗ್ಧಭಕ್ತಿ
ನಿಮ್ಮೊಳಗೆಂದಪ್ಪುದೊ ಸೌರಾಷ್ಟ್ರ ಸೋಮೇಶ್ವರಾ ॥ ೨೭೫ ॥

ಬಸವಣ್ಣನೆನ್ನ ಲಿಂಗ ಮಡಿವಾಳನೆನ್ನ ಮನ
ಪ್ರಭುವೆನ್ನ ಪ್ರಾಣ ಚನ್ನಬಸವಣ್ಣನೆನ್ನ ಕರಸ್ಥಲದ ಲಿಂಗ
ಘಟ್ಟಿವಾಳನೆನ್ನ ಭಾವ ಸೊಡ್ಡಳಬಾರಚರಸರೆನ್ನ ಅರಿವು

ಮಹಾದೇವಿಯಕ್ಕನೆನ್ನ ಜ್ಞಾನ ಮುಕ್ತಾಯಕ್ಕನೆನ್ನ ಅಕ್ಕರು
ಸತ್ಯಕ್ಕನೆನ್ನ ಯುಕ್ತಿ, ನಿಂಬಿಯಕ್ಕನೆನ್ನ ನಿಶ್ಚಯ
ಅಲ್ಲಾಳಿಯಕ್ಕನೆನ್ನ ಸಮತೆ, ಅನುಮಿಷನೆನ್ನ ನಿಶ್ಚಲ
ನಿಜಗುಣನೆನ್ನ ಕ್ಷಮೆ ರೇವಣಸಿದ್ಧಯ್ಯದೇವರೆನ್ನ ನೇತ್ರ
ಸಿದ್ಧರಾಮತಂದೆಗಳೆನ್ನ ನೇತ್ರದ ದೃಕ್ಕು
ಮರುಳುಸಿದ್ಧಯ್ಯದೇವರೆನ್ನ ಶ್ರೋತ್ರ
ಪಂಡಿತಾರಾಧ್ಯರೆನ್ನ ಜಿಹ್ವೆ ಏಕೋರಾಮಯ್ಯಗಳೆನ್ನ ನಾಸಿಕ
ಅಸಂಖ್ಯಾತರೆನ್ನ ಅವಯವಂಗಳು ಪುರಾತನರೆನ್ನ ಪುಣ್ಯದ ಪುಂಜ
ಏಳುನೂರೆಪ್ಪತ್ತು ಅಮರಗಣಂಗಳೆನ್ನ ಗತಿಮತಿ ಚೈತನ್ಯ
ಸೌರಾಷ್ಟ್ರ ಸೋಮೇಶ್ವರಾ ಆ ನಿಮ್ಮ ಶರಣರ ಪಡಿದೊತ್ತಯ್ಯ ॥ ೨೭೬ ॥

(ಸಮಗ್ರ ಸಾಹಿತ್ಯ ಜನಪ್ರಿಯ ಆವೃತ್ತಿ, ಸಂಪುಟ-೬
ಸಂಕೀರ್ಣ ವಚನ ಸಂಪುಟ ಒಂದು, ಪು. ೩೨೭

**ಬಸವಣ್ಣನವರ ವಚನ:**

ಕೃತಯುಗದಲ್ಲಿ ಕೇತಾರವೆಂಬ ಮೂಲಸ್ಥಾನ
ತ್ರೇತಾಯುಗದಲ್ಲಿ ವಾರಣಾಸಿಯೆಂಬ ಮೂಲಸ್ಥಾನ
ದ್ವಾಪರದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ
ಕಲಿಯುಗದಲ್ಲಿ ಪರ್ವತನೆಂಬ ಮೂಲಸ್ಥಾನ
ಈ ನಾಲ್ಕು ಮೂಲಸ್ಥಾನ
ನಾನಾಸ್ಥಾನಂಗಳ ಮುಟ್ಟದೆ ಜಂಗಮವೆ
ಲಿಂಗವೆಂದು ನಂಬಿದೆ ಕೂಡಲಸಂಗಮದೇವಾ ॥ (ಸಂ.೧, ಪು.೯೫, ವ.೩೯೫)

**ಚನ್ನಬಸವಣ್ಣನ ವಚನ:**

ಕೃತಯುಗದಲ್ಲಿ ಓಂಕಾರಸತ್ಯರೂಪ ದೇವಾಂಗನೆಂಬ ಭಕ್ತನ ಮಾಡುವಲ್ಲಿ
ಸ್ಥೂಲಕಾಯನೆಂಬ ಜಂಗಮ ಅಂದಿಗೆ ಪ್ರಥಮ ಮೂಲಸ್ಥಾನ ಕೇತಾರೇಶ್ವರ
ತ್ರೇತಾಯುಗದಲ್ಲಿ ಘಂಟಾಕರ್ಣನೆಂಬ ಭಕ್ತನ ಮಾಡುವಲ್ಲಿ
ಶೂನ್ಯಕಾಯನೆಂಬ ಜಂಗಮ ಅಂದಿಗೆ ಪ್ರಥಮ ಮೂಲಸ್ಥಾನ ರಾಮೇಶ್ವರ
ದ್ವಾಪರದಲ್ಲಿ ವೃಷಭನೆಂಬ ಭಕ್ತನ ಮಾಡುವಲ್ಲಿ
ಅನಿಮಿಷನೆಂಬ ಜಂಗಮ ಅಂದಿಗೆ ಪ್ರಥಮ ಮೂಲಸ್ಥಾನ ಸೌರಾಷ್ಟ್ರ
ಕಲಿಯುಗದಲ್ಲಿ ಬಸವನೆಂಬ ಭಕ್ತನ ಮಾಡುವಲ್ಲಿ
ಪ್ರಭುವೆಂಬ ಜಂಗಮ ಅಂದಿಗೆ ಪ್ರಥಮ ಮೂಲಸ್ಥಾನ ಶ್ರೀಶೈಲ
ಇಂತೀ ನಾಲ್ಕುಯುಗಕ್ಕೆ ನಾಲ್ಕುಜಂಗಮಸ್ಥಲ
ನಾಲ್ಕುಯುಗಕ್ಕೆ ನಾಲ್ಕು ಲಿಂಗ(ಭಕ್ತ?)ಸ್ಥಲ
ಕೂಡಲಸಂಗಮದೇವಾ ॥ ೧೧೨೬ ॥

**ಮೆರೆಮಿಂಡದೇವರ ವಚನ:**

ಎನ್ನ ಪ್ರಾಣ ಶುದ್ಧವಾಯಿತ್ತಯ್ಯಾ ಏಕೋರಾಮಿ ತಂದೆಗಳ ಧರ್ಮದಿಂದ
ಎನ್ನ ಜಿಹ್ವೆ ಶುದ್ಧವಾಯಿತ್ತಯ್ಯಾ ಪಂಡಿತಾರಾಧ್ಯರ ಧರ್ಮದಿಂದ
ಎನ್ನ ನೇತ್ರ ಶುದ್ಧವಾಯಿತ್ತಯ್ಯಾ ರೇವಣಸಿದ್ಧೇಶ್ವರದೇವರ ಧರ್ಮದಿಂದ
ಎನ್ನ ದೃಕ್ಕು ಶುದ್ಧವಾಯಿತ್ತಯ್ಯಾ ಸಿದ್ಧರಾಮೇಶ್ವರದೇವರ ಧರ್ಮದಿಂದ

ಎನ್ನ ಹೃದಯ ಶುದ್ಧವಾಯಿತ್ತಯ್ಯಾ ಮರುಳುಸಿದ್ಧೇಶ್ವರದೇವರ ಧರ್ಮದಿಂದ
ಸಕಳೇಶ ಮಾದಿರಾಜಯ್ಯಗಳ ಧರ್ಮದಿಂದ
ಎನ್ನ ಅಂತರಂಗ ಶುದ್ಧವಾಯಿತ್ತಯ್ಯಾ
ತೆಲುಗು ಜೊಮ್ಮಯ್ಯಗಳ ಧರ್ಮದಿಂದ
ಎನ್ನ ಬಹಿರಂಗ ಶುದ್ಧವಾಯಿತ್ತಯ್ಯಾ
ಕೇಶಿರಾಜಯ್ಯಗಳ ಧರ್ಮದಿಂದ
ಎನ್ನ ಸರ್ವಾಂಗ ಶುದ್ಧವಾಯಿತ್ತಯ್ಯಾ
ಬಸವಣ್ಣ ಚನ್ನಬಸವಣ್ಣ ಪ್ರಭು, ವೀರ ಮಡಿವಾಳಯ್ಯಗಳ ಧರ್ಮದಿಂದ
ಐಘಟದೂರ ರಾಮೇಶ್ವರಾ ನಿಮ್ಮ ಶರಣರ ಧರ್ಮದಿಂದ
ನಾನು ಶುದ್ಧನಾದೆನಯ್ಯಾ ॥ ೧೩೧೧ ॥

**ಗುರುಸಿದ್ಧದೇವರ ವಚನ:**

ಹೀಂಗೆ ಪೂರ್ವಪುರಾತನರು ಸದ್ಗುರು ವಚನೋಕ್ತಿಯಿಂದ ತಿಳಿದು
ರೇವಣಸಿದ್ಧೇಶ್ವರ, ಮರುಳಸಿದ್ಧೇಶ್ವರ, ತೋಂಟದ ಸಿದ್ಧೇಶ್ವರ
ನೂರೊಂದು ವಿರಕ್ತರು ಮೊದಲಾದ ಮರ್ತ್ಯಲೋಕದ ಮಹಾಗಣಂಗಳೆಲ್ಲ
ಸರ್ವಾಚಾರ ಸತ್ಕಾಯಕ ಸತ್ಕ್ರಿಯಾ ಸಮ್ಯಜ್ಞಾನ
ಸದ್ಭಕ್ತಿಯ ಸದ್ಗುರುಮುಖದಿಂದ ಬೆಸಗೊಂಡು
ನಿಚ್ಚ ಪ್ರಸಾದವೆಂದು ಸದ್ಭಾವದಿಂದ ಭಾವಿಸಿ
ನಡೆದಂತೆ ನುಡಿದು ನುಡಿದಂತೆ ನಡೆದು ಹರುಕಿಲ್ಲದ
ಹರಿ ಅಜ ಸುರ ಮನು ಮುನಿದೇವ ದಾನವ ಮಾನವರೆಲ್ಲ ಮುಳುಗಿಹೋದ
ಹೊನ್ನು ಹೆಣ್ಣು ಮಣ್ಣು ಅನ್ನ ನೀರು ವಸ್ತ್ರ ಆಭರಣ ವಾಹನವೆಂಬ
ಮಾಯಾಪಾಶ ಕಡವರವ ದಾಂಟಿದರು ನೋಡ
ಮಾಯಾಭೋಗವಿರಹಿತನಾಗಿ ಲಿಂಗಭೋಗಸಂಪನ್ನರಾದರು ನೋಡ
ಸಂಗನಬಸವೇಶ್ವರ ॥ ೬೧ ॥

**ಹಾವಿನಹಾಳ ಕಲ್ಲಯ್ಯಗಳ ವಚನ:**

ಎನ್ನ ಕಕ್ಷೆಯಲ್ಲಿ ಸ್ವಾಯತವಾದನಯ್ಯಾ ಶಂಕರದಾಸಿಮಯ್ಯನು
ಎನ್ನ ಕರಸ್ಥರದಲ್ಲಿ ಸ್ವಾಯತವಾದನಯ್ಯಾ ಉರಿಲಿಂಗಪೆದ್ದಯ್ಯನು
ಎನ್ನ ಉರಸೆಜ್ಜೆಯಲ್ಲಿ ಸ್ವಾಯತವಾದನಯ್ಯಾ ಘಟ್ಟಿವಾಳ ಮುದ್ದಯ್ಯನು
ಎನ್ನ ಅಮಳೋಕ್ಯದಲ್ಲಿ ಸ್ವಾಯತವಾದನಯ್ಯಾ ಅಜಗಣ್ಣಯ್ಯನು
ಎನ್ನ ಮುಖಸೆಜ್ಜೆಯಲ್ಲಿ ಸ್ವಾಯತವಾದನಯ್ಯಾ ನಿಜಗುಣದೇವರು
ಎನ್ನ ಶಿಖೆಯಲ್ಲಿ ಸ್ವಾಯತವಾದನಯ್ಯಾ ಅನಿಮಿಷದೇವರು
ಎನ್ನ ಘ್ರಾಣದಲ್ಲಿ ಸ್ವಾಯತವಾದನಯ್ಯಾ ಏಕೋರಾಮಿತಂದೆಗಳು
ಎನ್ನ ಜಿಹ್ವೆಯಲ್ಲಿ ಸ್ವಾಯತವಾದನಯ್ಯಾ ಪಂಡಿತಾರಾಧ್ಯರು
ಎನ್ನ ನೇತ್ರದಲ್ಲಿ ಸ್ವಾಯತವಾದನಯ್ಯಾ ರೇವಣಸಿದ್ಧೇಶ್ವರದೇವರು
ಎನ್ನ ತ್ವಕ್ಕಿನಲ್ಲಿ ಸ್ವಾಯತವಾದನಯ್ಯಾ ಸಿದ್ಧರಾಮೇಶ್ವರದೇವರು
ಎನ್ನ ಶ್ರೋತ್ರದಲ್ಲಿ ಸ್ವಾಯತವಾದನಯ್ಯಾ ಮರುಳಸಿದ್ಧೇಶ್ವರದೇವರು
ಎನ್ನ ಹೃದಯದಲ್ಲಿ ಸ್ವಾಯತವಾದನಯ್ಯಾ ಪ್ರಭುದೇವರು
ಎನ್ನ ಭ್ರೂಮಧ್ಯದಲ್ಲಿ ಸ್ವಾಯತವಾದನಯ್ಯಾ ಚೆನ್ನಬಸವಣ್ಣನು
ಎನ್ನ ಬ್ರಹ್ಮರಂಧ್ರದಲ್ಲಿ ಸ್ವಾಯತವಾದನಯ್ಯಾ ಸಂಗನಬಸವಣ್ಣನು

ಎನ್ನ ಉತ್ತಮಾಂಗದಲ್ಲಿ ಸ್ವಾಯತವಾದನಯ್ಯಾ ಮಡಿವಾಳಯ್ಯನು
ಎನ್ನ ಲಲಾಟದಲ್ಲಿ ಸ್ವಾಯತವಾದನಯ್ಯಾ ಸೊಡ್ಡಳ ಬಾಚರಸರು
ಎನ್ನ ಪಶ್ಚಿಮದಲ್ಲಿ ಸ್ವಾಯತವಾದನಯ್ಯಾ ಹಡಪದಪ್ಪಣ್ಣನು
ಎನ್ನ ಕಂಠದಲ್ಲಿ ಸ್ವಾಯತವಾದನಯ್ಯಾ ಕಿನ್ನರಿ ಬ್ರಹ್ಮಯ್ಯನು
ಎನ್ನ ಸರ್ವಾಂಗದಲ್ಲಿ ಸ್ವಾಯತವಾದನಯ್ಯಾ ಗಣಂಗಳು
ಮಹಾಲಿಂಗ ಕಲ್ಲೇಶ್ವರಾ ನಿಮ್ಮ ಶರಣರ ಶ್ರೀಪಾದಕ್ಕೆ
ನಮೋ ನಮೋ ಎನುತಿರ್ದೆನು ॥ ೧೧೧೩-೨೯ ॥

ವೀರಶೈವ ಸಿದ್ಧಾಂತ ಪ್ರತಿಪಾದಕ ಗ್ರಂಥ ಸಿದ್ಧಾಂತಶಿಖಾಮಣಿ. ವೀರಶೈವ ಧರ್ಮದ ಪರಮಪ್ರಮಾಣ ಗ್ರಂಥ ಆಚಾರ್ಯ ಗ್ರಂಥ, ಆರಾಧ್ಯಗ್ರಂಥ. ಶಿವಯೋಗಿ ಶಿವಾಚಾರ್ಯರು ರೇಣುಕಾಗಸ್ತ್ಯ ಸಂವಾದವನ್ನು ಸಂಗ್ರಹಿಸಿ ಅದಕ್ಕೆ ಸಿದ್ಧಾಂತಶಿಖಾಮಣಿ ಎಂದು ಹೆಸರಿಟ್ಟಿದ್ದಾರೆ. ಶಿವಜೀವೈಕ್ಯರೂಪ ಲಿಂಗಾಂಗ ಸಾಮರಸ್ಯವನ್ನು ಬೋಧಿಸುವುದೇ ಈ ಸಿದ್ಧಾಂತದ ರಹಸ್ಯ. ಇದರಲ್ಲಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಹೆಸರಿನ ಆರು ಸೋಪಾನಗಳಿವೆ. ಇವು ಷಟ್ಸ್ಥಲಗಳೆಂದು ಪ್ರಸಿದ್ಧವಾಗಿವೆ. ಈ ಷಟ್ಸ್ಥಲಜ್ಞಾನವೇ ಮೋಕ್ಷಕ್ಕೆ ಮೂಲಭೂತವಾದುದು. ವೀರಶೈವಧರ್ಮದ ಚಿಂತನೆಗಳು ಮಡುಗಟ್ಟಿ ನಿಂತಿರುವುದು ಸಿದ್ಧಾಂತ ಶಿಖಾಮಣಿಯು "ವೃತ್ತಿಶ್ಚೈತನ್ಯರೂಪಿಣೀ" ಎಂದಿದೆ. ಶರಣರ ಕಾಯಕವೇ ಕೈಲಾಸ ಎಂಬುದಕ್ಕೆ ಈ ಶ್ಲೋಕ ಪ್ರೇರಣೆಯನ್ನು ನೀಡಿದೆ.

ಭಾರತೀಯ ಸನಾತನ ಧರ್ಮ ಸಂಸ್ಕೃತಿಗಳ ಸಂವರ್ಧನೆಗೆ ಎಲ್ಲ ಧರ್ಮಪೀಠಗಳೂ ನಿರಂತರವಾಗಿ ಸೇವೆಯನ್ನು ಸಲ್ಲಿಸಿರುವುದು, ಸಲ್ಲಿಸುತ್ತಿರುವುದು ಸರ್ವವಿದಿತವಾದುದು. ಈ ನಿಟ್ಟಿನಲ್ಲಿ ಭಾರತೀಯ ಧರ್ಮಸಂಸ್ಕೃತಿಗಳ ಪುನರುತ್ಥಾನಕ್ಕೆ ವೀರಶೈವ ಪಂಚಪೀಠಗಳು ಸಲ್ಲಿಸಿರುವ ಸೇವೆ ಅತ್ಯಂತ ಗಣನೀಯವಾದುದು. ಈ ದೇಶದಲ್ಲಿ ಇತ್ತೀಚೆಗೆ ನಡೆಯುತ್ತಿರುವ ಕೋಮುಗಲಭೆಗಳು, ಅಮಾಯಕರ ಮೇಲಿನ ದೌರ್ಜನ್ಯಗಳು, ತಾಂಡವವಾಡುತ್ತಿರುವ ಅನಾಚಾರ ಅತ್ಯಾಚಾರ ಭ್ರಷ್ಟಾಚಾರಗಳು ಜನತೆಯನ್ನು ತಲ್ಲಣಗೊಳಿಸಿವೆ. ಇಂತಹ ಪರ್ವಕಾಲದಲ್ಲಿ ಜನತೆಗೆ ಧರ್ಮಗುರುಗಳ ಸಂದೇಶ ತೀರಾ ಅಗತ್ಯವಾದುದು, ಅನಿವಾರ್ಯವಾದುದು. ಮಾನವಧರ್ಮಕ್ಕೆ ಜಯವಾಗಲಿ, ಧರ್ಮದಿಂದಲೇ ವಿಶ್ವಕ್ಕೆ ಶಾಂತಿ ಎಂಬ ಸಾರ್ವತ್ರಿಕ ಸಾರ್ವಕಾಲಿಕ ಸಂದೇಶವನ್ನು ಪಂಚಾಚಾರ್ಯರು ನಿರಂತರವಾಗಿ ಸಾರುತ್ತಲೇ ಬಂದಿದ್ದಾರೆ. ಧರ್ಮಸಂಘರ್ಷಗಳಿಂದ ಕೋಮುಗಲಭೆಗಳಿಂದ ತತ್ತರಿಸಿರುವ ಜನತೆಗೆ ಧೈರ್ಯ ಸ್ಥೈರ್ಯಗಳನ್ನು ತುಂಬಿ ಎಚ್ಚರಿಸುವ ಶಾಂತಿ ಸಂದೇಶವನ್ನು ಎಲ್ಲ ಧರ್ಮಗುರುಗಳೂ ನೀಡುವ ಪರ್ವಕಾಲ ಪ್ರಾಪ್ತವಾಗಿದೆ. ಧರ್ಮ ಧರ್ಮಗಳ ಸಂಘರ್ಷದಿಂದ ಏನನ್ನೂ ಸಾಧಿಸಲಾಗದು. ಧರ್ಮಸಮನ್ವಯದಿಂದ ಸರ್ವವನ್ನೂ ಸಾಧಿಸಬಹುದು ಎಂಬುದನ್ನು ಸಾರಿ ಹೇಳಬೇಕಾಗಿದೆ.

ಪ್ರಾಚೀನ ಆರ್ಯೋಕ್ತಿಯೆಂದು "ಧರ್ಮ ಏವ ಹತೋಹಂತಿ ಧರ್ಮೋ ರಕ್ಷತಿ ರಕ್ಷಿತಃ" ಎಂದು ಸಾರಿದೆ. ಯಾರು ಧರ್ಮವನ್ನು ರಕ್ಷಿಸುತ್ತಾರೋ ಅವರನ್ನು ಧರ್ಮ ರಕ್ಷಿಸುತ್ತದೆ ಎಂಬುದನ್ನು ಮನಗಾಣಿಸಬೇಕಾಗಿದೆ. ಮಾನವ ಧರ್ಮಕ್ಕೆ ಜಯವಾಗಲಿ, ಧರ್ಮದಿಂದಲೇ ವಿಶ್ವಕ್ಕೆ ಶಾಂತಿ ಎಂಬ ಸಂದೇಶವನ್ನು ನಿರಂತರವಾಗಿ ಸಾರುತ್ತಿರಲಿ ಎಂದು ಹಾರೈಸುತ್ತೇನೆ.



# ವಚನ ಸಾಹಿತ್ಯದ ವಿನಮ್ರಭಾವ

**ಕ**ನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹನ್ನೆರಡನೆಯ ಶತಮಾನದಲ್ಲಿ ತಲೆದೋರಿದ ವಚನ ಸಾಹಿತ್ಯ ಒಂದು ಮಹತ್ತರವಾದ ಪಾತ್ರವನ್ನು ನಿರ್ವಹಿಸಿತು. ಒಂದು ಧಾರ್ಮಿಕ ಕ್ರಾಂತಿಯನ್ನುಂಟುಮಾಡಿತು. ಕರ್ನಾಟಕದಲ್ಲಿ ನಡೆದ ಈ ಧಾರ್ಮಿಕ ಕ್ರಾಂತಿ ವಿಶ್ವದ ಅನೇಕ ಕಡೆಗಳಲ್ಲಿ ನಡೆದು ಒಂದು ನವಚೇತನವೂ ಜಾಗೃತಿಯೂ ತಲೆದೋರಿದಂತೆ ಇತಿಹಾಸದಿಂದ ತಿಳಿದುಬರುತ್ತದೆ. ಈ ಕ್ರಾಂತಿಯ ನೇತಾರರು ಭಕ್ತಿಭಂಡಾರಿ ಬಸವಣ್ಣನವರು.

ಕರ್ನಾಟಕದಲ್ಲಿ ವೇದೋಪನಿಷತ್ತುಗಳ ಕಾಲದ ಆರ್ಯಧರ್ಮವು ಸ್ವಾಭಾವಿಕವಾದ ಏರಿಳಿತಗಳಿಗೆ ಸಿಕ್ಕಿ ಅತ್ಯಂತ ಕ್ಷೀಣದೆಸೆಗೆ ಬಂದಿತ್ತು. ಚಾತುರ್ವಣ್ಯಗಳು ತಮ್ಮ ಜನಾನುರಾಗವನ್ನು ಉಳಿಸಿಕೊಳ್ಳಲಾಗಲಿಲ್ಲ. ತತ್ವಜ್ಞಾನವು ಜನಸಾಮಾನ್ಯರಿಗೆ ಅರ್ಥವಾಗದ ಸಂಸ್ಕೃತ ಭಾಷೆಯಲ್ಲಿ ಪ್ರಚಾರಕ್ಕೆ ಬಂದಿತ್ತು. ವರ್ಣಾಶ್ರಮಪದ್ಧತಿಯಿಂದ ಸಮಾಜದಲ್ಲಿ ಮೇಲುಕೀಳು ಎಂಬ ಭಾವನೆ ತಲೆದೋರಿತ್ತು. ಅಂದಿನ ಸಮಾಜದಲ್ಲಿನ ಧರ್ಮ ಮತ ಪಂಥಗಳ ಅಂತಃಕಲಹ ಗಳಿಂದ ಪರಿಸ್ಥಿತಿ ಹದಗೆಟ್ಟು ಜನತೆ ಅಸಮಾಧಾನಗೊಂಡಿತ್ತು. ವೈದಿಕಧರ್ಮವು ಖಿಲವಾಗುತ್ತಿದ್ದ ಆ ಕಾಲದಲ್ಲಿ ಜೈನಬೌದ್ಧಧರ್ಮಗಳು ತಲೆದೋರಿದುವು. ಅಹಿಂಸಾ ಪ್ರಧಾನವಾದ ಜೈನಧರ್ಮ ವೈದಿಕಧರ್ಮದ ಎದುರು ಸ್ಪರ್ಧಿಸಲಾರದೆ ಹೋಯಿತು. ಜ್ಞಾನಪ್ರಧಾನವಾದ ಬೌದ್ಧಧರ್ಮ ನಮ್ಮ ನಾಡಿನಲ್ಲಿ ನೆಲೆಯಾಗಿ ನಿಲ್ಲಲಿಲ್ಲ. ಧಾರ್ಮಿಕ ಸಂಘರ್ಷಣೆಯ ಈ ಪರ್ವಕಾಲದಲ್ಲಿ ವಚನಕಾರರು ಮುಂದೆ ಬಂದರು. ವಚನಕಾರರ ನೇತಾರರಾದ ಬಸವಣ್ಣನವರು ಪ್ರಗತಿಪರ ಮನೋಭಾವದಿಂದ ಒಂದು ನೂತನ ಸಮಾಜದ ನಿರ್ಮಾಣಕ್ಕೆ ಕಾರಣಕರ್ತರಾದರು. ವರ್ಣಾಶ್ರಮ ಧರ್ಮದ ಸಂಕೋಲೆಗಳಿಗೆ ಸಿಲುಕದಿದ್ದ ವೀರಶೈವಧರ್ಮವನ್ನು ಪುನರುಜ್ಜೀವನಗೊಳಿಸಿದರು.

ವಚನಕಾರರು ಅದರಲ್ಲೂ ಬಸವಣ್ಣನವರು ಪ್ರತಿಪಾದಿಸಿದುದು ಸರ್ವೋದಯ ದೃಷ್ಟಿ ಸಮಾಜದಲ್ಲಿನ ವರ್ಣಭೇದಗಳು ಅಳಿಯಬೇಕು. ಮೇಲುಕೀಳು ಎಂಬ ಭಾವನೆ ನಿರ್ಮೂಲವಾಗಬೇಕು. ಹುಟ್ಟಿನಿಂದ ಮನುಷ್ಯನ ಯೋಗ್ಯತೆಯನ್ನು ಅಳೆಯದೆ ಗುಣದಿಂದ ನಿರ್ಧರಿಸಬೇಕು. ಅರ್ಥವಿಲ್ಲದ ಸಂಪ್ರದಾಯಗಳನ್ನೂ ಆಚಾರಗಳನ್ನೂ ತ್ಯಜಿಸಬೇಕು. ಇವೇ ಮೊದಲಾದ ಪ್ರಗತಿಪರ ದೃಷ್ಟಿಯನ್ನು ವಚನಕಾರರು ಹೊಂದಿದ್ದರು. ವೀರಶೈವಧರ್ಮಕ್ಕೆ ಒಂದು ಹೊಸಚಾಲನೆಯನ್ನು ನೀಡಿದವರು ವಚನಕಾರರಲ್ಲಿ ಪ್ರಮುಖರಾದ ಬಸವಣ್ಣನವರು. ಹಿಂದೂಧರ್ಮದ ಅವನತಿಗೆ ಕಾರಣವಾಗಿದ್ದ ಜಾತಿವಾದ ಮತ್ತು ಅಸ್ಪೃಶ್ಯತೆಯ ಕಳಂಕವನ್ನು ನಿವಾರಿಸಿ ಸರ್ವಸಮಾನತೆಯ ಮೇಲೆ ವೀರಶೈವ ಧರ್ಮವನ್ನು ಪ್ರಪ್ರಥಮವಾಗಿ ಸುಧಾರಿಸಿದ ಕೀರ್ತಿ ಬಸವಣ್ಣನವರದು. ಅನುಭವಮಂಟಪದಲ್ಲಿ ವೇದೋಪನಿಷತ್ತುಗಳ ರಹಸ್ಯವನ್ನೂ ಧರ್ಮಬೋಧೆಯನ್ನೂ ಜನಸಾಮಾನ್ಯರ ಭಾಷೆಯಲ್ಲಿ ಉಪದೇಶಿಸಿದರು. ಕಾಯಕವೇ ಕೈಲಾಸ ಎಂಬ ತತ್ವವನ್ನು ಸಾರಿ ಎಲ್ಲ ಕಾಯಕಗಳಿಗೂ, ಎಲ್ಲ ಕಾಯಕದವರಿಗೂ ಸಮಾನವಾದ ಸ್ಥಾನವನ್ನು ದೊರಕಿಸಿಕೊಟ್ಟರು. ಸ್ವಾವಲಂಬನೆ ಸ್ವತಂತ್ರ ಮನೋಭಾವವನ್ನು ಬೆಳೆಸಿಕೊಳ್ಳುವುದಕ್ಕೆ ಪ್ರೇರೇಪಿಸಿದರು. ಸ್ತ್ರೀಯರಿಗೆ ಸಮಾನ ಸ್ಥಾನಮಾನಗಳನ್ನು ದೊರಕಿಸಿಕೊಟ್ಟರು. ವಚನಕಾರರ ದೃಷ್ಟಿ ಸಾರ್ವತ್ರಿಕವಾದದ್ದು, ಸಾರ್ವಕಾಲಿಕವಾದದ್ದು, ಸಾರ್ವದೇಶಿಕವಾದದ್ದು.

ಇಲ್ಲಿಯವರೆಗೆ ಸುಮಾರು ಮುನ್ನೂರು ವಚನಕಾರರೂ ಸುಮಾರು ಮೂವತ್ತು ವಚನಕಾರ್ತಿಯರೂ ಕಂಡುಬಂದಿದ್ದಾರೆ. ಇವರೆಲ್ಲರೂ ರಚಿಸಿರುವ ಸುಮಾರು ಇಪ್ಪತ್ತೈದು ಸಾವಿರ ವಚನಗಳು ಲಭ್ಯವಾಗಿವೆ, ಪ್ರಕಟವಾಗಿವೆ. ಆದರೆ ವಚನಕಾರರು ಬರೆದಿರುವ ವಚನಗಳೆಲ್ಲ ಲಭ್ಯವಾಗಿಲ್ಲ. ವಚನಕಾರರು ಬರೆದಿರುವ ವಚನಗಳ ಒಂದು ತಖ್ತೆಯನ್ನು ಸಿದ್ಧರಾಮೇಶ್ವರರ ಈ ಮುಂದಿನ ವಚನ ನೀಡುತ್ತದೆ:

ಅಲ್ಲಯ್ಯಗಳ ವಚನ ಎರಡೆಂಬತ್ತು ಕೋಟಿ
ಅಪ್ಪಯ್ಯಗಳ ವಚನ ನಾಲ್ಕುಲಕ್ಷದ ಮೂವತ್ತಾಱುಸಾವಿರ
ಎಮ್ಮಯ್ಯಗಳ ವಚನ ವಚನಕ್ಕೊಂದು
ನೀಲಮ್ಮನ ವಚನ ಲಕ್ಷದ ಹನ್ನೊಂದುಸಾಸಿರ
ಗಂಗಾಂಬಿಕೆಯ ವಚನ ಲಕ್ಷದ ಎಂಟುಸಾಸಿರ
ಎಮ್ಮಕ್ಕ ನಾಗಾಯಿಯ ವಚನ ಮೂಱುಲಕ್ಷದ ತೊಂಬತ್ತಾಱು ಸಾಸಿರ
ಮಡಿವಾಳಣ್ಣನ ವಚನ ಮೂಱುಕೋಟಿ ಮುನ್ನೂಱು
ಹಡಪದಯ್ಯಗಳ ವಚನ ಹನ್ನೊಂದುಸಾಸಿರ
ಮರುಳಸಿದ್ಧನ ವಚನ ಅಱುವತ್ತೆಂಟುಸಾಸಿರ
ಇಂತಪ್ಪ ವಚನದ ರಚನೆಯ ಬಿಟ್ಟು ಹುಡಿಮಣ್ಣ ಹೊಯ್ಯದೆ ಮಾಬನ
ಕುತ್ಸಿತ ಕಾವ್ಯಾಲಂಕಾರ ನೋಡುವರ ನೋಡಿ
ಮಹಾದೇವ ಕಪಿಲಸಿದ್ಧ ಮಲ್ಲಿಕಾರ್ಜುನ ॥ ೧೦೬ ॥

[ಶ್ರೀ ಸಿದ್ಧರಾಮೇಶ್ವರ ವಚನಗಳು, ಸಂಪಾದಕರು: ಡಾ. ಆರ್.ಸಿ. ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೮]

ವಚನಕಾರರು ಲೌಕಿಕ, ಧಾರ್ಮಿಕ, ಸಾಮಾಜಿಕ, ವೈಜ್ಞಾನಿಕ, ವೈಚಾರಿಕ, ಪಾರಮಾರ್ಥಿಕ ಮೊದಲಾದ ಪ್ರಕಾರಗಳ ಬಗೆಗೂ, ಜೊತೆಗೆ ಭಕ್ತಿ, ಪ್ರೀತಿ, ವಾತ್ಸಲ್ಯ, ವಿನಯ, ವಿರಕ್ತಿ –ಇವೇ ಮೊದಲಾದ ವಿಷಯಗಳ ಬಗೆಗೂ ವಚನಗಳನ್ನು ಬರೆದಿದ್ದಾರೆ. ಒಂದೇ ಮಾತಿನಲ್ಲಿ ಹೇಳುವುದಾದರೆ ವಚನಗಳಿಗೆ ಒಳಪಡದ ವಸ್ತು, ವಿಷಯವೇ ಇಲ್ಲವೆನ್ನಬಹುದು. ಈ ಹೇಳಿಕೆಗೆ ದೃಷ್ಟಾಂತವಾಗಿ ಕೆಲವು ವಚನಗಳನ್ನು ಉದಾಹರಿಸುವುದಕ್ಕೆ ಮೊದಲು ವಚನ ಸಾಹಿತ್ಯಕ್ಕೆ ಅಪಾರ ಕೊಡುಗೆಯನ್ನು ನೀಡಿರುವ ಪ್ರೊ. ಸಂ.ಶಿ. ಭೂಸನೂರಮಠ ಅವರ ಮಾತುಗಳನ್ನು ಉದ್ಧರಿಸಲಾಗಿದೆ:

“ಕನ್ನಡದಲ್ಲಿ ಹುಟ್ಟಿದ ವಚನಗಳ ವಿಶೇಷವೇನು? ಘನತೆಯೇನು? ಉಪನಿಷತ್ತು ಭಗವದ್ಗೀತೆ ಕುರಾಣ ಬಾಯಿಬಲ್ ಮುಂತಾದ ವಿಶ್ವಮಾನ್ಯ ಗ್ರಂಥಗಳೊಡನೆ ಸರಿದೊರೆಯಾದ ಸ್ಥಾನಮಾನ ವಚನ ಸಾಹಿತ್ಯಕ್ಕೆ ಇದೆಯೆ? ವಿಶ್ವಸಾಹಿತ್ಯದಲ್ಲಿ ಕನ್ನಡದ ವಚನ ಸಾಹಿತ್ಯಕ್ಕೆ ಯಾವ ಮಾನ, ಎಷ್ಟು ಮನ್ನಣೆ ಇದೆ? ಎಂದು ಮುಂತಾಗಿ ನೀವು ಪ್ರಶ್ನೆ ಎತ್ತಬಹುದು. ಇಂದಿನ ಕಾಲಮಾನ ವಿಚಿತ್ರ, ಉತ್ತರ ಕೊಡುವುದು ಕಷ್ಟ. ಜಾತಿ ಮತ ದೇಶ ಭಾಷೆ ಬುದ್ಧಿಭಾವಗಳ ಸಂಕೋಚದಲ್ಲಿ ಮನೆಮಾಡಿಕೊಂಡು ತಂತಮ್ಮ 'ಸಂಕೋಚ'ವನ್ನು ಅದೇ 'ವಿಶ್ವವಿಸ್ತಾರ'ವೆಂದು ತಿಳಿದುಕೊಂಡು, ಕುರಾಣ, ಬಾಯಿಬಲ್ಲುಗಳ, ಗೀತೆ ಉಪನಿಷತ್ತುಗಳ 'ಬ್ರಹ್ಮದೇವರು' ಬಂದು ಹೇಳಿದರೂ ಅಲುಗಾಡದೆ, ತಮ್ಮ ನಂಬಿಗೆಯಲ್ಲಿ ತಾವು ಬೇರುಬಿಟ್ಟವರಿಗೆ ಯಾರು ಏನು ಹೇಳಿದರೇನು? ವೇದ ಉಪನಿಷತ್ತುಗಳ ಭಕ್ತರು, ಮತ್ತೆ ದಿವ್ಯಾನುಭಾವದ ಅಪಾರವಾರಾಶಿಯಲ್ಲಿ ಮೂಡಿ, ಮೇಲೆ ನುಡಿಯಾಗಿ ಬಂದು ವಿಶ್ವಭಾಷೆಯಲ್ಲಿ ಪ್ರಕಾಶಿಸುತ್ತಿರುವ ವಿವಿಧ ಸಾಹಿತ್ಯದ ಭಕ್ತರು ಪೂಜಿಸಲಿ ತಂತಮ್ಮ ಮನವೊಲಿದ ಸಾಹಿತ್ಯ ಗ್ರಂಥಗಳನ್ನು ಹಾಡಲಿ ಅವೇ ಬ್ರಹ್ಮಸಾಹಿತ್ಯವೆಂದು. ಆದರೆ ಬಯ್ಯದಿರಲಿ, ಕೀಳು ಮಾಡದಿರಲಿ, ಅನ್ಯಜನಾಂಗ, ಅನ್ಯಜಾತಿ, ಅನ್ಯದೇಶಭಾಷೆಯ ಸ್ವಾನುಭಾವದ ಸಾಹಿತ್ಯವನ್ನು, ಒಬ್ಬಿಬ್ಬರನ್ನು ನೋಡಿ ಮಹಾಕವಿ ವಿಶ್ವಕವಿಯೆಂದು ಒಂದೆರಡು ಸಾಹಿತ್ಯ ಗ್ರಂಥಗಳನ್ನು ನೋಡಿ ವಿಶ್ವಸಾಹಿತ್ಯ ಬ್ರಹ್ಮಾಂಡ ಸಾಹಿತ್ಯವೆಂದು ಕರೆವ 'ಅಲ್ಪ'ಬುದ್ಧಿ 'ಅಲ್ಪ'ವಿಚಾರ ಇಲ್ಲವಾಗಲಿ. ಬುದ್ಧಿಭೂಮವಾಗಲಿ, ಹೃದಯ ಬ್ರಹ್ಮವಾಗಲಿ, ಇಂದಿನ ಕಾಲಕ್ಕೆ ಮುಂದೆ

ಕಾಲವಿದೆ. ಒಂದಾಗುವ ಕಾಲ ಬಂದಿದೆ. ಒಟ್ಟಾಗಿ ನೋಡುವ ಕಾಲ ಸನ್ನಿಹಿತವಾಗಿವೆ. ಸಂಕೋಚದ ಬಾಗಿಲು ಕಿಡಿಕಿಗಳನ್ನು ತೆರೆದು, ಅಸಾಧ್ಯನಂತವಾದ ಬ್ರಹ್ಮವಿಸ್ತಾರವನ್ನು ನೋಡುವ ಇರುವ, ತಿನ್ನುವ ಉಣ್ಣುವ ಬ್ರಹ್ಮವಿಸ್ತಾರದಲ್ಲಿ ಮಲಗುವ ಏಳುವ ವ್ಯವಹರಿಸುವ ಕಾಲ ಮನುಷ್ಯ ಕುಲಕೋಟಿಯನ್ನು ತನ್ನತ್ತ ಕೈಮಾಡಿ ಕರೆಯುತ್ತಿದೆ." (ಪುಟ.cxiv-cxv) [ವಚನ ಸಾಹಿತ್ಯ ಸಂಗ್ರಹ : ಸಂಪಾದಕರು: ಸಂ.ಶಿ. ಭೂಸನೂರಮಠ, ಎಂ.ಎ., ಪ್ರಕಾಶಕರು: ಸಾಹಿತ್ಯ-ಸಂಸ್ಕೃತಿ ಅಭಿವೃದ್ಧಿ ಶಾಖೆ, ಬೆಂಗಳೂರು, ೧೯೬೫]

ಅಪಾರವಾದ ವಚನ ಸಾಹಿತ್ಯದಲ್ಲಿ ಸಾರ್ವಕಾಲಿಕ ತತ್ವಗಳನ್ನು ಪ್ರತಿಪಾದಿಸುವ ಕೆಲವು ವಚನಕಾರರ ವಚನಗಳು ಇಂತಿವೆ. ವಚನಕಾರರ ನೇತಾರರಾದ ಬಸವಣ್ಣನವರು ವಿನಮ್ರಭಾವ, ನಯವಿನಯ ಸಜ್ಜನಿಕೆಗಳ ಸಾಕಾರಮೂರ್ತಿಗಳಾಗಿದ್ದರು ಎಂಬುದನ್ನು ಈ ಮುಂದಿನ ವಚನಗಳು ಸಾಕ್ಷೀಕರಿಸುತ್ತವೆ:

ಏನಿ ಬಂದಿರಿ ಹದುಳವಿದ್ದಿರೆ ಎಂದರೆ
ನಿಮ್ಮ ಮೈಸಿರಿ ಹಾಜಿಹೋಹುದೆ
ಕುಳ್ಳಿರೆಂದರೆ ನೆಲಕುಳಿಹೋಹುದೆ
ಒಡನೆ ನುಡಿದರೆ ಸಿರ ಹೊಟ್ಟೆಯೊಡೆವುದೆ
ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿರ್ದಡೆ
ಕೆಡಹಿ ಮೂಗಕೊಯ್ಯದೆ ಮಾಣ್ಬನೆ ಕೂಡಲಸಂಗಮದೇವನು ॥ ೨೪ ॥

ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ
ಮೃದುವಚನವೇ ಸಕಲ ಜಪಂಗಳಯ್ಯಾ
ಮೃದುವಚನವೇ ಸಕಲ ತಪಂಗಳಯ್ಯಾ
ಸದುವಿನಯವೇ ಸದಾಶಿವನೊಲುಮೆಯಯ್ಯಾ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ ॥ ೨೪೪ ॥

ಭಕ್ತಿಭಂಡಾರಿ ಬಸವಣ್ಣ ಎಂಬ ನಾಣ್ಣುಡಿಗೆ ಭಾಜನರಾದ ಬಸವಣ್ಣನವರು ಮೋಕ್ಷಸಂಪಾದನೆಗೆ ಭಕ್ತಿಯು ಸುಲಭವೂ ಸುಮುಖವೂ ಆದ ಮಾರ್ಗ ಎಂದಿದ್ದಾರೆ. ಶಿವ ತನ್ನ ಭಕ್ತರನ್ನು ನಾನಾ ರೀತಿಯಲ್ಲಿ ಪರೀಕ್ಷಿಸುತ್ತಾನೆ. ಈ ಪರೀಕ್ಷೆಗಳಿಗೆ ಅಂಜದಿದ್ದರೆ ಒಲಿಯುತ್ತಾರೆ. ಈ ವಚನ ಇದಕ್ಕೆ ಸಾಕ್ಷಿಯಂತಿದೆ:

ನಾದಪ್ರಿಯ ಶಿವನೆಂಬರು, ನಾದಪ್ರಿಯ ಶಿವನಲ್ಲಯ್ಯಾ
ವೇದಪ್ರಿಯ ಶಿವನೆಂಬರು, ವೇದಪ್ರಿಯ ಶಿವನಲ್ಲವಯ್ಯಾ
ನಾದವ ಮಾಡಿದ ರಾವಣಂಗೆ ಅರೆಯಾಯುಷ್ಯವಾಯಿತ್ತು
ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು
ನಾದಪ್ರಿಯನೂ ಅಲ್ಲ ವೇದಪ್ರಿಯನೂ ಅಲ್ಲ
ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ ॥ ೧೮೧ ॥

ವೀರಶೈವಧರ್ಮವನ್ನು ಅನುಸರಿಸುವವರಿಗೆ ಬಸವಣ್ಣನವರು ಕೆಲವು ಆಚಾರ ಸಂಹಿತೆಗಳನ್ನು ನೀಡಿದ್ದಾರೆ. ಈ ಧರ್ಮವನ್ನು ಅನುಸರಿಸಿದ ಶರಣರು ಹೇಗಿರಬೇಕು ಎಂತಿರಬೇಕು ಎಂಬುದನ್ನು ಈ ವಚನ ವಿವರಿಸುತ್ತಿದೆ.

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ
ಛಲಬೇಕು ಶರಣಂಗೆ ಪರಸತಿಯನೊಲ್ಲನೆಂಬ
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ
ಛಲಬೇಕು ಶರಣಂಗೆ ಲಿಂಗಜಂಗಮ ಒಂದೆ ಎಂಬ
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ
ಛಲವಿಲ್ಲದವರ ಮೆಚ್ಚ ನಮ್ಮ ಕೂಡಲಸಂಗಮದೇವ ॥ ೬೭೬ ॥

[ಬಸವಣ್ಣನವರ ವಚನಗಳು : ಸಂಪಾದಕರು: ಪ್ರೊ. ಬಸವನಾಳ ಶಿವಲಿಂಗಪ್ಪನವರು ಎಂ.ಎ., ಸಾಹಿತ್ಯ ಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, ೧೯೬೨]

ಅನುಭವ ಮಂಟಪದ ಶೂನ್ಯಸಿಂಹಾಸನಾಧೀಶ್ವರನಾಗಿ ವೀರಶೈವಧರ್ಮಕ್ಕೆ ಮೂರ್ತಸ್ವರೂಪವನ್ನು ಕೊಟ್ಟವನು ಅಲ್ಲಮಪ್ರಭು. ಲೋಕಹಿತದೃಷ್ಟಿ ಮತ್ತು ಪ್ರಖರವಾದ ವೈರಾಗ್ಯ ಆತನಲ್ಲಿ ಮೇಳವಿಸಿದ್ದವು. ಅಲ್ಲಮಪ್ರಭು ಲೋಕ ಕಲ್ಯಾಣಾರ್ಥವಾಗಿ ನಾಡಿನಾದ್ಯಂತ ಸಂಚರಿಸಿ ಅಂದಿನ ಪ್ರಮುಖ ಸಾಧಕರನ್ನೆಲ್ಲ ಸಂಧಿಸಿ ಅವರಿಗೆ ಜ್ಞಾನೋಪದೇಶವನ್ನು ಮಾಡಿದ ಕಾರಣಪುರುಷ. ಈತ ಗೊಗ್ಗಯ್ಯ ಮಾಡಿದ ತೋಟವನ್ನು ಕಂಡು ಆತನಿಗೆ ಲೌಕಿಕವಾಗಿ ಮಾಡುವ ತೋಟದ ಕೆಲಸದಿಂದ ಏನೂ ಪ್ರಯೋಜನವಾಗುವುದಿಲ್ಲ. ನಿಜವಾದ ಸುಖಪ್ರಾಪ್ತಿಯಾಗುವುದಿಲ್ಲ. ಅಂತರಂಗದಲ್ಲಿ ನಿಜವಾದ ತೋಟವನ್ನು ಮಾಡಬೇಕು ಎಂಬುದನ್ನು:

ತನುವ ತೋಂಟವ ಮಾಡಿ ಮನವ ಗುದ್ದಲಿಯ ಮಾಡಿ
ಅಗೆದು ಕಳೆದೆನಯ್ಯ ಭ್ರಾಂತಿನ ಬೇರ
ಒಡೆದು ಸಂಸಾರದ ಹೆಂಟೆಯ ಬಗಿದು ಬಿತ್ತಿದೆನಯ್ಯ ಬ್ರಹ್ಮಬೀಜವ
ಅಖಂಡ ಮಂಡಲವೆಂಬ ಭಾವಿ ಪವನವೇ ರಾಟಾಳ
ಸುಷುಮ್ನನಾಳದಿಂದ ಉದಕವ ತಿದ್ದಿ
ಬಸವಗಳೈವರು ಹಸಗೆಡಿಸಿಹರೆಂದು
ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ
ಆವಾಗಲೂ ಈ ತೋಟದೊಳಗೆ ಜಾಗರವಿದ್ದು
ಈ ಸಸಿಯ ಸಲಹಿದೆನು ಕಾಣಾ ಗೊಹೇಶ್ವರ. [ವಚನ ಸಾಹಿತ್ಯ ಸಂಗ್ರಹ, ೭೫-೭೦]

ಈ ರೀತಿ ಆತನಿಗೆ ಬೋಧಿಸುವನು. ಬಸವಣ್ಣನ ಸಂಪರ್ಕ ಸಾಹಚರ್ಯಗಳನ್ನು ಪಡೆದ ಅಲ್ಲಮಪ್ರಭು ಬಸವಣ್ಣನನ್ನು ಮುಕ್ತಕಂಠದಿಂದ ಈ ರೀತಿ ಸ್ತೋತ್ರ ಮಾಡುವನು.

ಬಸವಣ್ಣಾ ನಿನ್ನ ಕಂಡು ಎನ್ನ ತನು ಬಯಲಾಯಿತ್ತು
ಬಸವಣ್ಣಾ ನಿನ್ನ ಮುಟ್ಟಿ ಮುಟ್ಟಿ ಎನ್ನ ಕ್ರೀ ಬಯಲಾಯಿತ್ತು
ಬಸವಣ್ಣಾ ನಿನ್ನ ನೆನೆನೆನೆದು ಎನ್ನ ಮನ ಬಯಲಾಯಿತ್ತು
ಬಸವಣ್ಣಾ ನಿನ್ನ ಮಹಾನುಭಾವವ ಕೇಳಿ ಕೇಳಿ
ಎನ್ನ ಭವಂ ನಾಸ್ತಿಯಾಯಿತ್ತು
ನಮ್ಮ ಗೊಹೇಶ್ವರಲಿಂಗದಲ್ಲಿ ನೀನಜಾತನೆಂಬುದ
ನೆಲೆಮಾಡಿ ಭಾವಪಾಶಗಳ ಹರಿದಿಪ್ಪೆಯಾಗಿ
ನಿನ್ನ ಸಂಗದಿಂದಲಾನು ಬದುಕಿದೆನು.

[ಅಲ್ಲಮಪ್ರಭುದೇವ ವಚನಗಳು, ೬೧೩,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ)

ಭಕ್ತಿಗೆ ಬಸವಣ್ಣ ವೈರಾಗ್ಯಕ್ಕೆ ಅಲ್ಲಮಪ್ರಭು ಹೇಗೆ ಪ್ರಸಿದ್ಧರೊ ಹಾಗೆ ಜ್ಞಾನಕ್ಕೆ ಚೆನ್ನಬಸವಣ್ಣ ಪ್ರಸಿದ್ಧ. ಅನುಭವ ಮಂಟಪದ ಸ್ಥಾಪನೆ ಬಸವಣ್ಣನಿಂದಾದರೆ ಅದರ ವ್ಯವಸ್ಥೆ ಮೇಲ್ವಿಚಾರಣೆ ಚೆನ್ನಬಸವಣ್ಣನಿಂದಾಯಿತು. ಬಸವಣ್ಣ ಚೆನ್ನಬಸವಣ್ಣ, ಅಲ್ಲಮಪ್ರಭು ಇವರು ಅನುಭವಮಂಟಪದ ತ್ರಿಮೂರ್ತಿಗಳು. ಭಕ್ತಿಜ್ಞಾನ ವೈರಾಗ್ಯಗಳ ತ್ರಿವೇಣೀ ಸಂಗಮ. ಈ ಸಂಗಮದಲ್ಲಿ ಮಿಂದವರೆಲ್ಲ ಪುನೀತರಾದರು. ಚೆನ್ನಬಸವಣ್ಣ ಬಸವಣ್ಣನವರ ಹಿರಿಯ ಸೋದರಿಯಾದ ಅಕ್ಕನಾಗಮ್ಮನವರ ಮಗ. ಕಿರಿಯ ವಯಸ್ಸಿನಲ್ಲೇ ಅಪಾರ ಜ್ಞಾನವನ್ನು ಪಡೆದಿದ್ದ ಈತನನ್ನು ಷಟ್ಸ್ಥಲ ಸಾರ್ವಭೌಮ ಎಂದು ಕರೆಯುತ್ತಿದ್ದರು. ವೀರಶೈವ ಧರ್ಮದ ಪ್ರಕ್ರಿಯೆಗಳನ್ನು ಅಧಿಕೃತವಾಗಿ ಆಚರಣೆಗೆ ತಂದವನು ಈತನೇ. ಚೆನ್ನಬಸವಣ್ಣ ಆಚಾರ ವಿಚಾರಗಳ ಸಮನ್ವಯವನ್ನು ಸಾಧಿಸಬೇಕೆಂದು ಹೇಳಿದ್ದಾರೆ. ಷಟ್ಸ್ಥಲಗಳಲ್ಲಿ ಪ್ರಸಾದಿಸ್ಥಲಕ್ಕೆ ಮಹತ್ವವನ್ನು ಕೊಟ್ಟಿದ್ದಾನೆ. ಭಕ್ತ ಕೊಳ್ಳುವುದೆಲ್ಲ ಅವನ ಪ್ರಸಾದ. ಅವನು ಕೇವಲ ನಿಮಿತ್ತ ಮಾತ್ರ, ಇಂತಹ ಅಚ್ಚಪ್ರಸಾದಿ ಹೇಗಿರಬೇಕೆಂಬುದನ್ನು:

ತನುಮುಟ್ಟದ ಮುನ್ನ ಲಿಂಗಾರ್ಪಿತವ ಮಾಡಬೇಕು
ಶ್ರೋತ್ರ ನೇತ್ರ ಘ್ರಾಣ ಜಿಹ್ವೆ ತ್ವಕ್ಕು ಮುಟ್ಟದ ಮುನ್ನ
ಲಿಂಗಾರ್ಪಿತವ ಮಾಡಬೇಕು
ಕೂಡಲ ಚೆನ್ನಸಂಗಯ್ಯನಲ್ಲಿ ಪ್ರಸಾದಿಯಾದಡೆ
ಬಂದ ಪದಾರ್ಥವ ಕೂಡಲ ಚೆನ್ನಸಂಗಯ್ಯಂಗೆ
ಅರ್ಪಿಸಿಕೊಳ್ಳಬಲ್ಲಾತನೇ ಪ್ರಸಾದಿ ॥ ೨೫೭ ॥

[ಚೆನ್ನಬಸವಣ್ಣನವರ ವಚನಗಳು:
ಕನ್ನಡ ಮತ್ತು ಸಂಸ್ಕೃತಿ ಇಲಾಖೆ]

ಈ ರೀತಿ ಹೇಳಿದ್ದಾನೆ.

ಬಸವಣ್ಣನವರಂತೆ ಚೆನ್ನಬಸವಣ್ಣ ಕೇವಲ ಭಕ್ತಿಯಲ್ಲಿಯೇ ಮುಗ್ಧನಲ್ಲ. ಅವನು ಲಾಂಛನಧಾರಿಗಳನ್ನೆಲ್ಲ ಶಿವಶರಣರೆಂದು ನಂಬುವುದಿಲ್ಲ. ಲಿಂಗಧಾರಿಗಳನ್ನೆಲ್ಲ ನೆಚ್ಚುವುದಿಲ್ಲ ಎಂಬುದನ್ನು:

ಅಂಗದ ಮೇಲೆ ಲಿಂಗವುಳ್ಳುದೆಲ್ಲಾ ಸಂಗಮನಾಥನೆಂಬ ಭಾವ
ಬಸವಣ್ಣಂಗಾಯಿತಲ್ಲದೆ ಎನಗೆ ಆ ಭಾವವಿಲ್ಲ ನೋಡಾ
ಲಿಂಗೈಕ್ಯ ಶರಣರ ಕಂಡಡೆ ನಂಬಿ ನಚ್ಚಿ ಅವರ ಪಾದಕ್ಕೆಱಗುವುದೆನ್ನ ಮನವು
ಅವರ ಕಂಡಡೆ ಕರುಣಾಮೃತ ಸುರಿವುದೆನಗೆ
ಅವರ ಪಾದಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವ
ಮಾಡುವುದೆನ್ನ ಮನವು ಕೂಡಲಚೆನ್ನಸಂಗಮದೇವಾ
ನಿಮ್ಮ ಪ್ರಭುವೆಂಬ ಜಂಗಮವ ಕಂಡು
ಪೂಜಿಸಿ ಪೂಜಿಸಿ ದಣಿಯದೆನ್ನ ಮನವು ॥

ಈ ವಚನದಲ್ಲಿ ಸ್ಪಷ್ಟಪಡಿಸಿದ್ದಾರೆ.

"ಸಾಕಾರನಿಷ್ಠೆ ಭೂತಂಗಳೊಳನುಕಂಪೆ ತಾನೆ ಪರಬೊಮ್ಮ" ಎಂಬ ಸೂತ್ರವನ್ನು ಹಿಡಿದು ಸಕಲ ಜೀವಾವಳಿಗೆ ಲೇಸನೇ ಬಯಸಿದವನು ಸಿದ್ಧರಾಮ. ಇಡೀ ಜೀವಮಾನವನ್ನೆಲ್ಲ ಸಮಾಜೋದ್ಧಾರ ಕಾರ್ಯಗಳಿಗೇ ಮೀಸಲಾಗಿರಿಸಿದ ಕರ್ಮಯೋಗಿ. ಜನತೆಯನ್ನು ಉದ್ಧರಿಸಿ ಅವರಿಗೆ ಮುಕ್ತಿಮಾರ್ಗವನ್ನು ತೋರಿದವನು. ಕೆರೆಯ ನಿರ್ಮಾಣ ಕಾರ್ಯದಲ್ಲಿ ನಿರತನಾಗಿದ್ದ ಸಿದ್ಧರಾಮನಿಗೂ ಅಲ್ಲಮಪ್ರಭುವಿಗೂ ನಡೆದ ವಾದವಿವಾದಗಳು ಅತ್ಯಂತ ಮಹತ್ವಪೂರಿತವಾದುವು. ಅಂತೆಯೇ ಸಿದ್ಧರಾಮನ ದೀಕ್ಷಾಪ್ರಕರಣದಲ್ಲಿ ನಡೆದ ಜಿಜ್ಞಾಸೆಯೂ ಅಷ್ಟೇ ಪ್ರಮುಖವಾದುದು.

ಕರ್ಮಯೋಗಿ ಸಿದ್ಧರಾಮನಿಗೆ ದೀಕ್ಷೆಯನ್ನು ಕೊಟ್ಟ ಚನ್ನಬಸವಣ್ಣ ಅವರನ್ನು ಕುರಿತು:

ಶುದ್ಧವನಱಿದೆ ಚನ್ನಬಸವಣ್ಣಾ ನಿಮ್ಮಿಂದೆ
ಸಿದ್ಧವನಱಿದೆ ಚನ್ನಬಸವಣ್ಣಾ ನಿಮ್ಮಿಂದೆ
ಪ್ರಸಿದ್ಧವನಱಿದೆ ಚನ್ನಬಸವಣ್ಣಾ ನಿಮ್ಮಿಂದೆ
ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ
ಚನ್ನಬಸವಣ್ಣ ಗುರುವಾಗಿ ಬಂದು
ಎನ್ನ ಜನ್ಮಕರ್ಮವ ನಿವೃತ್ತಿ ಮಾಡಿದನಯ್ಯಾ ॥ ೭೪೮ ॥

ಈ ರೀತಿ ಸ್ತುತಿಸಿದ್ದಾನೆ. ಬಸವಣ್ಣನವರಲ್ಲಿ ಗುರುಭಾವನೆಯನ್ನು ವಿಶೇಷ ಗೌರವಾದರಗಳನ್ನು ಹೊಂದಿದ್ದ ಸಿದ್ಧರಾಮ ತನುವುಬ್ಬಿ ಮನವುಬ್ಬಿ ಅವರನ್ನು ಕೊಂಡಾಡಿದ್ದಾನೆ:

ಅಣ್ಣನ ನೋಡಿರೆ ಲೋಕಕ್ಕೆ ಜಗದ ಕಣ್ಣ ಮದವ ಕಳೆದನು
ಮುಕ್ಕಣ್ಣನಿಪ್ಪೆಡೆಯ ತೋಱಿದನು

ಅಣ್ಣ ಬಸವಣ್ಣ ವಾಙ್ಮನಕ್ಕಗೋಚರನು
ಮುಕ್ಕಣ್ಣನವತಾರಂಗಳನು ನಾಟಕವೆಂದಱಿದು ಮಱೆದನು
ಸತ್ಯಶುದ್ಧ ನಿರ್ಮಳ ಕೈವಲ್ಯ ವಾಙ್ಮನಕ್ಕಗೋಚರ ಬಸವಣ್ಣನು
ಅಣ್ಣಾ ನಿಮ್ಮಿಂದ ಶುದ್ಧವ ಕಂಡೆ ಸಿದ್ಧವ ಕಂಡೆ ಪ್ರಸಿದ್ಧವ ಕಂಡೆನು
..........................................................
..........................................................
ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ
ಬಸವಣ್ಣನ ಪ್ರಸಾದದಿಂದ ಅರಿದಪ್ಪುದೊಂದಿಲ್ಲ ॥ ೯೦೫ ॥

[ಶ್ರೀ ಸಿದ್ಧರಾಮೇಶ್ವರ ವಚನಗಳು : ಸಂಪಾದಕರು: ಡಾ. ಆರ್.ಸಿ. ಹಿರೇಮಠ, ಕನ್ನಡ ಪ್ರಾಧ್ಯಾಪಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೮]

ಅಕ್ಕಮಹಾದೇವಿ ಅನುಭವಮಂಟಪದಲ್ಲಿ ತನ್ನ ಪ್ರಭಾವವನ್ನು ಸುಸ್ಥಿರಗೊಳಿಸಿ ಮುಕ್ತಿಯ ಪಥದಲ್ಲಿ ನಡೆದು ಶ್ರೀಶೈಲದ ಚೆನ್ನಮಲ್ಲಿಕಾರ್ಜುನನಲ್ಲಿ ಐಕ್ಯಳಾದ ಮಹಾಶಿವಶರಣೆ. ಬಾಲ್ಯದಿಂದಲೇ ಭಕ್ತಿಸಂಪನ್ನಳಾಗಿದ್ದ ಅಕ್ಕಮಹಾದೇವಿ ಶರಣಸತಿ ಲಿಂಗಪತಿ ಎಂಬ ಭಾವದಲ್ಲಿ ಪರಿಪಕ್ವತೆಯನ್ನು ಪಡೆದಳು. ಯೌವನಕ್ಕೆ ಕಾಲಿಟ್ಟಿದ್ದ ಅಕ್ಕಮಹಾದೇವಿಯನ್ನು ಕುರಿತು ಆಕೆಯ ನೆಂಟರಿಷ್ಟರು ಮದುವೆಯ ಪ್ರಸ್ತಾಪವನ್ನು ಮಾಡಿದಾಗ:

ಸಾವಿಲ್ಲದ ಕೇಡಿಲ್ಲದ ಚೆಲುವಾಂಗನೊಲಿದೆನವ್ವ
ಎಡೆಯಿಲ್ಲದ ಕಡೆಯಿಲ್ಲದ ತೆಱಹಿಲ್ಲದ ಕುರುಹಿಲ್ಲದ
ಚೆಲುವಂಗಾನೊಲಿದೆನವ್ವ
ಭವವಿಲ್ಲದ ಭಯವಿಲ್ಲದ ಚೆಲುವಂಗಾನೊಲಿದೆ
ಕುಲಸೀಮೆಯಿಲ್ಲದ ನಿಸ್ಸೀಮ ಚೆಲುವಂಗಾನೊಲಿದೆ
ಇದುಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ
ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ॥ ೪೩೮-೧೯ ॥

ಈ ರೀತಿ ಅವರಿಗೆ ಉತ್ತರವನ್ನು ಕೊಡುತ್ತಾಳೆ.

ಚೆನ್ನಮಲ್ಲಿಕಾರ್ಜುನನನ್ನು ಕಾಣುವುದು ಸುಲಭಸಾಧ್ಯವಲ್ಲ. ಘೋರಾರಣ್ಯದಲ್ಲಿ ಒಬ್ಬಳೇ ತೊಳಲಬೇಕಾಗುವುದು. ವ್ಯರ್ಥವಾದ ಈ ಸಾಹಸಕ್ಕೆ ಕೈಹಾಕಿ ಕಷ್ಟಪಡಬೇಡ ಎಂದು ಆಕೆಯ ತಂದೆ ತಾಯಿಗಳು ನೆಂಟರಿಷ್ಟರು ಪರಿಪರಿಯಾಗಿ ಬುದ್ಧಿವಾದವನ್ನು ಹೇಳುವರು. ಅದಕ್ಕೆ ಅಕ್ಕಮಹಾದೇವಿ:

ಹಸಿವಾದಡೆ ಭಿಕ್ಷಾನ್ನಗಳುಂಟು
ತೃಷೆಯಾದಡೆ ಕೆಱೆಹಳ್ಳಬಾವಿಗಳುಂಟು
ಶಯನಕ್ಕೆ ಹಾಳುದೇಗುಲಗಳುಂಟು
ಚೆನ್ನಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನೆನಗುಂಟು ॥ ೩೩೪-೩೧ ॥

ಎಂದು ಅವರಿಗೆ ಹೇಳುತ್ತಾಳೆ:

ಕಲ್ಯಾಣದಲ್ಲಿಯ ತನ್ನ ಮಣಿಹ ಮುಗಿದ ತರುವಾಯ ಅಕ್ಕಮಹಾದೇವಿ ಚೆನ್ನಮಲ್ಲಿಕಾರ್ಜುನನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಲೆಂದು ಶ್ರೀಶೈಲದತ್ತ ಪ್ರಯಾಣ ಮಾಡುವಳು. ತನುಮನವೆಲ್ಲವೂ ಚೆನ್ನಮಲ್ಲಿಕಾರ್ಜುನನಿಂದ ಆವರಿಸಲ್ಪಟ್ಟಿದ್ದ ಅಕ್ಕ ನಾನಾಬಗೆಯಲ್ಲಿ ಪ್ರಾರ್ಥಿಸಿಕೊಳ್ಳುವಳು. ಕೊನೆಗೆ:

ಹೊಳೆವ ಕೆಂಜೆಡೆಗಳ ಮಣಿಮಕುಟದ ಒಪ್ಪುವ ಸುಲಿಪಲ್ಲ
ನಗೆಮೊಗದ ಕಂಗಳ ಕಾಂತಿಯಿಂ ಈರೇಳುವ ಭುವನಮಂ

ಬೆಳಗುವ ದಿವ್ಯಸ್ವರೂಪನಂ ಕಂಡೆ ನಾನು
ಕಂಡೆನ್ನ ಕಂಗಳ ಬಱ ಹಿಂಗಿತ್ತಿಂದು
ಗಂಡಗಂಡರನೆಲ್ಲ ಹೆಂಡಹೆಂಡಿರಾಗಿ ಆಳುವ
ಗರುವನ ಕಂಡೆ ನಾನು ಜಗದಾದಿ ಶಕ್ತಿಯೊಳು
ಬೆರಸಿ ಒಡನಾಡುವ ಪರಮಗುರು
ಚೆನ್ನಮಲ್ಲಿಕಾರ್ಜುನನ ಕಂಡು ಬದುಕಿದೆನು ॥ ೬೪೦-೧೧೭ ॥

ಎಂದು ಹೇಳಿ ದಿವ್ಯಸಾಕ್ಷಾತ್ಕಾರವನ್ನು ಪಡೆದುಕೊಳ್ಳುವಳು. ಕದಳಿಯ ಬನದಲ್ಲಿ ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗುವಳು. ಅಂತರಂಗದ ವಾಣಿಯಂತಿರುವ ಅಕ್ಕನ ವಚನಗಳಲ್ಲಿ ಸಾಮಾನ್ಯ ಚೇತನವೊಂದು ಸಿದ್ಧಿಯ ಹಂಬಲಕ್ಕಾಗಿ ನಡೆಸುವ ಸಾಧನೆಯ ತೊಳಲಾಟವನ್ನು ಕಾಣಬಹುದು.

[ವಚನ ಸಾಹಿತ್ಯ ಸಂಗ್ರಹ : ಸಂಪಾದಕರು: ಸಂ.ಶಿ. ಭೂಸನೂರಮಠ, ಪ್ರಕಾಶಕರು: ಮೈಸೂರು ಸರ್ಕಾರ, ವಿದ್ಯಾಭ್ಯಾಸ ಇಲಾಖೆ, ಸಾಹಿತ್ಯ-ಸಂಸ್ಕೃತಿ ಅಭಿವೃದ್ಧಿ ಶಾಖೆ, ಬೆಂಗಳೂರು, ೧೯೬೫]

ಮಡಿವಾಳ ಮಾಚಯ್ಯ ಒಬ್ಬ ಪರಮಶಿವಭಕ್ತ, ಅಜೇಯವೀರ. ಮಡಿವಾಳ ಕಾಯಕವನ್ನು ಕೈಕೊಂಡು ಅದರಲ್ಲೇ ತನ್ನ ಜೀವನದ ಸಾರ್ಥಕತೆಯನ್ನು ಕಂಡುಕೊಂಡವನು. ಕಲ್ಯಾಣದ ಕ್ರಾಂತಿಯ ನಂತರ ಶಿವಶರಣರನ್ನು ಸುರಕ್ಷಿತವಾಗಿ ಅವರವರ ನೆಲೆಗಳಿಗೆ ಮುಟ್ಟಿಸಿದ ದಿಟ್ಟ ಕಡುಗಲಿ.

ಉಚ್ಚ ಧ್ಯೇಯಸಾಧನೆಯಲ್ಲಿ ತೊಡಗಿದವನಿಗೆ ಎಂಥ ಎಡರು-ತೊಡರುಗಳು ಬಂದರೂ ಅದನ್ನು ಬಿಡಬಾರದು. ಲೋಕದ ಜನ ಏನನ್ನು ಹೇಳಿದರೂ ಅದನ್ನು ಗಣನೆಗೆ ತಂದುಕೊಳ್ಳದೆ ತನ್ನ ಕರ್ತವ್ಯದಲ್ಲಿ ನಿರತನಾಗಬೇಕು ಎಂಬ ಈತನ ದೃಷ್ಟಿಯು ಈ ಮುಂದಿನ ವಚನದಲ್ಲಿ ಕಂಡುಬರುತ್ತದೆ.

ಉಂಡರೆ ಭೂತನೆಂಬರು ಉಣದಿರ್ದಡೆ ಚಕೋರಿಯೆಂಬರು
ಊರೊಳಗಿರ್ದಡೆ ಸಂಸಾರಿಯೆಂಬರು
ಅಡವಿಯೊಳಗಿರ್ದಡೆ ಮರ್ಕಟ ಎಂಬರು
ಮಾತನಾಡಿದರೆ ಪಾಪಕರ್ಮಿ ಎಂಬರು
ಮಾತನಾದಿರ್ದಡೆ ಮುಸುಕಕರ್ಮಿ ಎಂಬರು
ಮಲಗದಿರ್ದಡೆ ಚೋರನೆಂಬರು
ಮಲಗಿರ್ದಡೆ ಜಡದೇಹಿಯೆಂಬರು
ಇಂತೀ ವಸುಧೆಯೊಳಗೆ ಎಂಟು ವಿಧವ ಕಳೆಯಲಳವಣ್ಣ ಕಾಣಾ
ಕಲಿದೇವರದೇವಾ ॥ ೨೧೯-೬೩ ॥

ಮನುಷ್ಯನಾಗಿ ಹುಟ್ಟಿದ ಮೇಲೆ ಜ್ಞಾನಿಯಾಗಿರಬೇಕು. ಅದರಲ್ಲೂ ಶಿವಜ್ಞಾನವನ್ನು ಅರಿತವನಾಗಿರಬೇಕು. ಇಲ್ಲದಿದ್ದರೆ ಅವನ ಜನ್ಮ ನಿರರ್ಥಕ ಎಂಬುದನ್ನು:

ವಾಯುಗುಣವ ಸರ್ಪ ಬಲ್ಲುದು
ಮಧುರಗುಣವನಿರುಹೆ ಬಲ್ಲುದು
ಗೋತ್ರದ ಗುಣವ ಕಾಗೆ ಬಲ್ಲುದು
ವೇಳೆಯ ಗುಣವ ಕೋಳಿ ಬಲ್ಲುದು
ಇದು ಕಾರಣ ಮನುಷ್ಯಜನ್ಮದಲ್ಲಿ ಬಂದು
ಶಿವಜ್ಞಾನವನಱಯದಿದ್ದಡೆ
ಆ ಕಾಗೆ ಕೋಳಿಗಳಿಂದ ಕರಕಷ್ಟ ಕಾಣಾ ಕಲಿದೇವರದೇವಾ ॥ ೯೪-೭೧ ॥

ಈ ವಚನದಲ್ಲಿ ವಿವರಿಸಿದ್ದಾನೆ.

ಸದಾಚಾರ ಸದ್ಭಕ್ತಿಯಿಂದ ಕೂಡಿದ ಭಕ್ತಜಂಗಮರು ಶಂಭುವಿನ ಅವತಾರವೆಂದೂ ಅವರ ತೊತ್ತಿಗೆ ತೊತ್ತಾಗಿ ತಾನು ಬದುಕಿದನೆಂಬುದನ್ನೂ ತನ್ನ ವಚನಗಳಲ್ಲಿ ವಿವರಿಸಿದ್ದಾನೆ.

ಈವರೆಗಿನ ವಚನ ವಿವೇಚನೆಯಿಂದ ಅಪಾರವಾದ ಅನಂತವಾದ ವಚನ ಸಿಂಧುವಿನಿಂದ ಕೆಲವು ರಸಬಿಂದುಗಳನ್ನು ಸಂಚಯಿಸಿ ಸಮುಚಿತ ವ್ಯಾಖ್ಯಾನದೊಂದಿಗೆ ಪ್ರಸ್ತುತಪಡಿಸಲಾಗಿದೆ. ಅಪಾರ ವಚನರಾಶಿಯಲ್ಲಿ, ವಚನಕಾರರ ಶ್ರೇಣಿಯಲ್ಲಿ ಇವರು ದಾರಿದೀಪಗಳಂತಿದ್ದಾರೆ. ವಚನ ಸಾಹಿತ್ಯದಲ್ಲಿ ಸ್ತ್ರೀಯರಿಗೆ ಅತ್ಯಂತ ಮಹತ್ವದ ಸ್ಥಾನವನ್ನು ನೀಡಲಾಗಿದೆ. ಹೆಣ್ಣಿಗೆ ಧಾರ್ಮಿಕ ಸ್ವಾತಂತ್ರ್ಯವಿಲ್ಲ, ಪಾರಮಾರ್ಥಿಕ ಚಿಂತನೆಯಿಲ್ಲ ಎಂದು ವೈದಿಕಧರ್ಮ ಸಾರಿದ್ದರೂ ವಚನಕಾರರಿಗೆ ಸ್ತ್ರೀಯರ ಬಗೆಗೆ ಅಪಾರ ಗೌರವಾದರಗಳಿದ್ದುವು. "ಛಲಬೇಕು ಶರಣಂಗೆ ಪರಸತಿಯನೊಲ್ಲನೆಂಬ" ಎಂದು ಬಸವಣ್ಣನವರೂ, "ಪರಧನ ಪರಸ್ತ್ರೀ ಪರದೈವಂಗಳಿಗೆರಗದಿಪ್ಪುದೇ ನೇಮ" ಎಂದು ಸತ್ಯಕ್ಕನೂ, "ಅಂಗನೆಯರ ಸಂಗವ ತೊರೆದಡೆ ಶೀಲವಂತ" ಎಂದು ಸಕಲೇಶ ಮಾದರಸರೂ, "ಶಿವಲಿಂಗವ ನೋಡುವ ಕಣ್ಣಲ್ಲಿ ಪರಸ್ತ್ರೀಯ ನೋಡಿದಡೆ ಅಲ್ಲಿ ಲಿಂಗವಿಲ್ಲ" ಎಂದು ಚನ್ನಬಸವಣ್ಣನೂ, "ಪರಧನ ಪರಸ್ತ್ರೀಯ ವಿಸರ್ಜಿಸಿ ಪೂಜಿಸು ಪರಶಿವನ" ಎಂದು ಸಿದ್ಧರಾಮನೂ "ಹೆಂಡಿರ ಕಂಡು ಅಳುಪದಿರಾ ಮನವೆ" ಎಂದು ಸೊಡ್ಡಳ ಬಾಚರಸನೂ, "ಸ್ವಸ್ತ್ರೀಯಿರಲ್ಕೆ ಪರಸ್ತ್ರೀಗಳುಪುವರು ಸತ್ತನಾಯ ಭಕ್ಷಿಸುವ ಹಡಕಿಗರನೇನೆಂಬನಯ್ಯ ರಾಮನಾಥ" ಎಂದು ಜೇಡರ ದಾಸಿಮಯ್ಯನೂ ಹೇಳಿದ್ದಾರೆ.

ಶರಣಧರ್ಮದಲ್ಲಿ ಬ್ರಹ್ಮಚರ್ಯಕ್ಕೆ ಮಹತ್ವವಿಲ್ಲ. ಸತಿಪತಿಗಳು ಒಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ. ಸರ್ವಸಮರ್ಪಣಭಾವದಿಂದ ಸತಿಪತಿಗಳು ಆಧ್ಯಾತ್ಮಿಕ ಸಾಧನೆಯನ್ನು ಮಾಡಿ ದೈವಸಾಕ್ಷಾತ್ಕಾರವನ್ನು ಪಡೆದುಕೊಳ್ಳಬೇಕು. ಈ ಮಾರ್ಗದಲ್ಲಿ ಶರಣರ ಜಾತಿ ವೃತ್ತಿ ಯಾವುದೂ ಅಡ್ಡಿಬರಬಾರದು.

ವಚನಸಾಹಿತ್ಯದಲ್ಲಿ ಶಾಶ್ವತವಾಗಿ ತೊಳಗಿ ಬೆಳಗುತ್ತಿರುವ ವಚನಕಾರರ ವಚನಕಾರ್ತಿಯರ ನಾಮಸ್ಮರಣೆ ಅವರ ವಚನ ಸಂಕೀರ್ತನೆ ಪುಣ್ಯಪ್ರದವೆಂದು ಭಾವಿಸಬಹುದಾಗಿದೆ.



# ಚಿಕ್ಕಬಳ್ಳಾಪುರಜಿಲ್ಲಾ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಸಮ್ಮೇಳನಾಧ್ಯಕ್ಷರ ಭಾಷಣ

(೬-೩-೨೦೧೦ - ೮-೩-೨೦೧೦)

ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।
ಗುರುಸ್ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀಗುರವೇ ನಮಃ ॥

**ಕ**ರ್ನಾಟಕದ ನೂತನ ಜಿಲ್ಲಾಘಟಕವಾಗಿ ಚಿಕ್ಕಬಳ್ಳಾಪುರ ಅಸ್ತಿತ್ವಕ್ಕೆ ಬಂದಿದೆ. ಈವರೆಗೂ ಕೋಲಾರ ಜಿಲ್ಲೆಗೆ ಸೇರಿದ್ದ ಚಿಕ್ಕಬಳ್ಳಾಪುರ ದಿನಾಂಕ ೨೩.೮.೨೦೦೭ ರಿಂದ ಪ್ರತ್ಯೇಕ ಜಿಲ್ಲೆಯಾಗಿ ವಿಭಜನೆಗೊಂಡು ಕಾರ್ಯನಿರ್ವಹಿಸುತ್ತಿದೆ. ಈ ಜಿಲ್ಲೆಯ ವ್ಯಾಪ್ತಿಗೆ ಶಿಡ್ಲಘಟ್ಟ, ಚಿಂತಾಮಣಿ, ಬಾಗೇಪಲ್ಲಿ, ಗುಡಿಬಂಡೆ ಮತ್ತು ಗೌರೀಬಿದನೂರು ತಾಲ್ಲೂಕುಗಳು ಸೇರ್ಪಡೆಯಾಗಿವೆ. ಗೌರೀಬಿದನೂರು ತಾಲ್ಲೂಕಿಗೆ ಸೇರಿದವನಾದ ನಾನು ಚಿಕ್ಕಬಳ್ಳಾಪುರ ಜಿಲ್ಲೆಗೆ ಸೇರಿದವನಾಗಿದ್ದೇನೆ. ನೂತನವಾಗಿ ವಿಕಾಸಗೊಂಡಿರುವ ಈ ಜಿಲ್ಲೆ ಪ್ರಪ್ರಥಮವಾಗಿ ಜಿಲ್ಲಾಕನ್ನಡಸಾಹಿತ್ಯ ಸಮ್ಮೇಳನವನ್ನು ಆಯೋಜಿಸಿ ಈ ಸಮ್ಮೇಳನಕ್ಕೆ ನನ್ನನ್ನೇ ಪ್ರಥಮ ಸಮ್ಮೇಳನಾಧ್ಯಕ್ಷನನ್ನಾಗಿ ಆಯ್ಕೆಮಾಡಿರುವುದಾಗಿ ತಿಳಿಸಿ, ಈ ಅಧ್ಯಕ್ಷ ಸ್ಥಾನವನ್ನು ಒಪ್ಪಿಕೊಂಡು ಸಮ್ಮೇಳನವನ್ನು ಯಶಸ್ವಿಯಾಗಿ ನಡೆಸಿಕೊಡಬೇಕೆಂದು ಜಿಲ್ಲಾ ಘಟಕದ ಅಧ್ಯಕ್ಷರೂ, ಇತರ ಪದಾಧಿಕಾರಿಗಳೂ ದಿನಾಂಕ ೭-೨-೨೦೧೦ ರಂದು ನನ್ನಲ್ಲಿಗೆ ಬಂದು ಪತ್ರವನ್ನು ಕೊಟ್ಟು ವಿನಂತಿಸಿಕೊಂಡಿದ್ದಾರೆ.

ಬಂಧುಗಳೇ, ೧೯೭೦ನೆಯ ಇಸವಿ ಜೂನ್ ೨೦, ೨೧, ೨೨ ರಂದು ಕನ್ನಡಕಾದಂಬರಿಸಾರ್ವಭೌಮ ಅ.ನ. ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ಬಂಗಾರುಪೇಟೆಯಲ್ಲಿ ನಡೆದ ಕೋಲಾರ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸಾಹಿತ್ಯಗೋಷ್ಠಿಯ ಅಧ್ಯಕ್ಷನಾಗಿಯೂ ನಾನು ಭಾಗವಹಿಸುವ ಅವಕಾಶ ಪ್ರಾಪ್ತವಾಗಿತ್ತು. ೧೯೯೪ರಲ್ಲಿ ಬಂಗಾರುಪೇಟೆಯಲ್ಲಿ ನಡೆದ ತಾಲ್ಲೂಕು ಸಾಹಿತ್ಯ ಸಮ್ಮೇಳನದ ಅಧ್ಯಕ್ಷನಾಗಿಯೂ ನಾನು ಕಾರ್ಯವನ್ನು ನಿರ್ವಹಿಸಿದ್ದೇನೆ. ಇದಾದ ಮೇಲೆ ೧೯೯೪ರಲ್ಲಿ ಕೋಲಾರ ಜಿಲ್ಲೆಯ ಕನ್ನಡ ಸಾಹಿತ್ಯ ಪರಿಷತ್ತಿನ ಅಂದಿನ ಪದಾಧಿಕಾರಿಗಳು ನನಗೆ ಶ್ರೇಷ್ಠಸಾಹಿತಿ ಪ್ರಶಸ್ತಿಯನ್ನೂ ಪ್ರದಾನಮಾಡಿದ್ದಾರೆ. ಈ ಸಂದರ್ಭಗಳನ್ನು ನೆನಪು ಮಾಡಿಕೊಳ್ಳುವ ಉದ್ದೇಶವಿಷ್ಟೆ; ನಾವು ಹುಟ್ಟಿದ ಊರನ್ನು ಸದಾ ನೆನಪಿನಲ್ಲಿಟ್ಟುಕೊಳ್ಳುವುದು ಶ್ರೇಯಸ್ಕರ. ಪ್ರಾಚೀನ ಆರ್ಯೋಕ್ತಿ ಯೊಂದು ಹೀಗೆ ಹೇಳಿದೆ:

ಜನನೀ ಜನ್ಮಭೂಮಿಶ್ಚ, ಸ್ವರ್ಗಾದಪಿ ಗರೀಯಸೀ

ಈ ಶ್ಲೋಕದ ಅರ್ಥವಿಷ್ಟೆ: "ನಮಗೆ ಜನ್ಮನೀಡಿದ ಸ್ಥಳವು ಸ್ವರ್ಗಕ್ಕಿಂತಲೂ ಮಿಗಿಲಾದುದು." ಆದುದರಿಂದ ನಮ್ಮ ಜಿಲ್ಲೆಯವರು ನೀಡಿರುವ ಈ ಎಲ್ಲ ಪದವಿ, ಪ್ರಶಸ್ತಿ, ಪುರಸ್ಕಾರಗಳನ್ನು ಅತ್ಯಂತ ಸಂತೋಷದಿಂದ ಸ್ವೀಕರಿಸಿದ್ದೇನೆ. ಪ್ರಸ್ತುತ ನೂತನವಾಗಿ ನಿರ್ಮಾಣವಾಗಿರುವ ಈ ಜಿಲ್ಲೆಯ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನೂ ಆನಂದದಿಂದಲೇ ಅಂಗೀಕರಿಸಿದ್ದೇನೆ. ತಾಲ್ಲೂಕುಮಟ್ಟದ ಸಮ್ಮೇಳನವಾಗಲಿ, ಜಿಲ್ಲಾಮಟ್ಟದ ಸಮ್ಮೇಳನವಾಗಲಿ ನನ್ನಲ್ಲಿ ಯಾವ ಭೇದಭಾವವನ್ನೂ

ಉಂಟುಮಾಡಿಲ್ಲ. ಏಕೆಂದರೆ ಪೌರುಮನೆಯವರು ನೀಡುವ ಪುರಸ್ಕಾರಗಳಲ್ಲಿ ತಾರತಮ್ಯ ಮಾಡುವುದು ಅವಿವೇಕವಾಗುತ್ತದೆ. ಈ ಎಲ್ಲ ದೃಷ್ಟಿಗಳಿಂದ ನೂತನ ಜಿಲ್ಲೆಯ ಪ್ರಥಮ ಸಮ್ಮೇಳನದ ಅಧ್ಯಕ್ಷತೆಯನ್ನು ಸಂತೋಷದಿಂದ ಒಪ್ಪಿಕೊಂಡು ಇದಕ್ಕೆ ಕಾರಣಕರ್ತರಾದವರನ್ನೆಲ್ಲ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಚಿಕ್ಕಬಳ್ಳಾಪುರ ಜಿಲ್ಲೆಯ ವೈಶಿಷ್ಟ್ಯಗಳನ್ನೂ ವೈವಿಧ್ಯಗಳನ್ನೂ ಚಾರಿತ್ರಿಕ ಐತಿಹಾಸಿಕ ಸಂಗತಿಗಳನ್ನೂ ಪರಿಚಯಿಸುವುದು ಅನಗತ್ಯವಾದರೂ ಸೂಕ್ಷ್ಮವಾಗಿ ಅವಲೋಕಿಸುವುದು ಹಲವಾರು ದೃಷ್ಟಿಗಳಿಂದ ಉಚಿತ ಎಂದು ಭಾವಿಸಿದ್ದೇನೆ.

ಜಿಲ್ಲಾ ಕೇಂದ್ರವಾದ ಚಿಕ್ಕಬಳ್ಳಾಪುರ ದೊಡ್ಡಬೆಟ್ಟಗಳಿಂದ ಕೂಡಿದ ಪ್ರದೇಶವಾಗಿದೆ. ನಂದಿದುರ್ಗದ ಶ್ರೇಣಿ ಈ ಊರಿನ ಪಶ್ಚಿಮಭಾಗದಲ್ಲಿ ಉತ್ತರ ದಕ್ಷಿಣವಾಗಿ ಹಬ್ಬಿಕೊಂಡಿದೆ. ಇದರಲ್ಲಿ ನಂದಿದುರ್ಗ, ದಿಬ್ಬಗಿರಿ, ಬ್ರಹ್ಮಗಿರಿ, ಚನ್ನಕೇಶವ ಬೆಟ್ಟ, ಕಳವರದುರ್ಗ (ಸ್ಕಂದಗಿರಿ), ಹರಿಹರೇಶ್ವರ ಬೆಟ್ಟ ಮುಂತಾದ ಉತ್ತರದ ಬೆಟ್ಟಗಳಿವೆ. ಈ ನಗರದ ಹೆಚ್ಚಿನ ಭಾಗ ಕಣಶಿಲೆಯ ಪ್ರದೇಶವಾಗಿದೆ.

ನಂದಿದುರ್ಗ ಒಂದು ಪ್ರಸಿದ್ಧ ಪ್ರೇಕ್ಷಣೀಯ ಸ್ಥಳ. ಇದು ಸುಪ್ರಸಿದ್ಧ ಗಿರಿಧಾಮವೂ, ಐತಿಹಾಸಿಕ ಸ್ಥಳವೂ ಆಗಿದೆ. ಇಲ್ಲಿ ಟಿಪ್ಪುಡ್ರಾಪ್, ಹೈದರ್‌ಡ್ರಾಪ್ ಎಂಬ ಮೃತ್ಯುಕೂಪಗಳಿವೆ. ಬೆಟ್ಟದ ಮೇಲೆ ಮೊದಲಿಗೆ ಕಾಣುವ ಅಮೃತಸರೋವರ ಸದಾ ನೀರಿನಿಂದ ಕೂಡಿರುತ್ತದೆ. ಇಲ್ಲಿ ಪಾತಾಳಗಂಗೆ, ಅಂತರಗಂಗೆ ಎಂಬ ಎರಡು ಕೊಳಗಳಿವೆ. ಬೆಟ್ಟದ ಮೇಲೆ ಯೋಗನಂದೀಶ್ವರ ದೇವಾಲಯವಿದೆ. ಈ ದೇವಾಲಯವನ್ನು ಚೋಳರ ಕಾಲದಲ್ಲಿ ಕಟ್ಟಿಸಲಾಯಿತು ಎಂಬ ಪ್ರತೀತಿಯಿದೆ.

ನಂದಿದುರ್ಗ ಗಂಗರ ಕಾಲದಿಂದಲೂ ಪ್ರಸಿದ್ಧವಾಗಿದೆ. ಸ್ಥಳಪುರಾಣಗಳಲ್ಲಿ ಈ ದುರ್ಗವನ್ನು ಶೃಂಗಿಪರ್ವತ, ಕೂಷ್ಮಾಂಡಪರ್ವತ ಎಂದು ಕರೆಯಲಾಗಿದೆ. ಕೂಷ್ಮಾಂಡಋಷಿ ಇಲ್ಲಿ ನೆಲಸಿದ್ದು ಶಿವನನ್ನು ಪೂಜಿಸುತ್ತಿದ್ದನೆಂಬುದೊಂದು ನಂಬಿಕೆ ಇಲ್ಲಿ ಪ್ರಚಲಿತವಾಗಿದೆ. ಯೋಗನಂದೀಶ್ವರಾಲಯದಲ್ಲಿರುವ ಹಲವಾರು ವಿಗ್ರಹಗಳಲ್ಲಿ ಒಂದನ್ನು ಕೂಷ್ಮಾಂಡ ಋಷಿಯದೆಂದು ತೋರಿಸುತ್ತಾರೆ.

ಹದಿನೇಳನೆಯ ಶತಮಾನದ ಶಾಸನವೊಂದರಿಂದ ಇಲ್ಲಿನ ಅತ್ಯುನ್ನತವೂ ಅಭೇದ್ಯವೂ ಆದ ನಂದಿ ಎಂಬ ಗಿರಿಯನ್ನು ಬಳ್ಳಾಪುರದ ರಾಜರು ದುರ್ಗವನ್ನಾಗಿ ಮಾಡಿದರು ಎಂದು ಹೇಳಿದೆ. ಚಿಕ್ಕಬಳ್ಳಾಪುರದ ಪಾಳೆಯಗಾರನಾಗಿದ್ದ ಚಿಕ್ಕಭೈರೇಗೌಡರ ಮಗ ಮರಿಗೌಡ ಇಲ್ಲಿಯ ಕೋಟೆಯನ್ನು ಕಟ್ಟಿಸಿದ. ಟಿಪ್ಪುಸುಲ್ತಾನ್ ಇಲ್ಲಿನ ಕೋಟೆಕೊತ್ತಲಗಳನ್ನು ಮತ್ತಷ್ಟು ಬಲಪಡಿಸಿದ. ೧೭೯೧ರಲ್ಲಿ ಈ ದುರ್ಗವನ್ನು ಬ್ರಿಟಿಷರು ಆಕ್ರಮಿಸಿಕೊಂಡರು.

ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಿಟಿಷರು ತಮ್ಮ ವಾಸಕ್ಕಾಗಿ ಕಟ್ಟಿಸಿಕೊಂಡಿದ್ದ ಮನೆಗಳು ಇಲ್ಲಿವೆ. ಕರ್ನಲ್‌ಹಿಲ್‌ನ ಗ್ಲೆನ್‌ಟಿಲ್ಟ್, ಮಾರ್ಕ್‌ಕಬ್ಬನ್ನನ ಕಬ್ಬನ್‌ಹೌಸ್, ಕ್ಯಾಪ್ಟನ್ ಕನಿಂಗ್‌ಹ್ಯಾಮ್‌ನ ಓಕ್‌ಲ್ಯಾಂಡ್ಸ್ ಮುಖ್ಯವಾದುವು. ಕನಿಂಗ್‌ಹ್ಯಾಮ್ ಕಟ್ಟಿಸಿದ ಮನೆಯಲ್ಲಿ ಮಹಾತ್ಮ ಗಾಂಧಿಯವರು ವಾಸವಾಗಿದ್ದುದರಿಂದ ಈಗ ಅದನ್ನು 'ಗಾಂಧಿನಿಲಯ' ಎಂದು ಕರೆಯಲಾಗುತ್ತಿದೆ. **(ಕನ್ನಡ ವಿಷಯ ವಿಶ್ವಕೋಶ-೨, ಪು. ೯೦-೯೧)**

ಮುದ್ದೇನಹಳ್ಳಿ ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯ ಅವರ ಜನ್ಮಸ್ಥಳ. ಅವರ ನೆನಪಿಗೆ ಇಲ್ಲಿ ಒಂದು ವಸ್ತುಸಂಗ್ರಹಾಲಯವನ್ನು ಸ್ಥಾಪಿಸಲಾಗಿದೆ. ಈ ತಾಲ್ಲೂಕಿನಲ್ಲಿ ನಡೆಯುವ ಜಾತ್ರೆಗಳಲ್ಲಿ ನಂದಿಯ ಭೋಗನಂದೀಶ್ವರ ಸ್ವಾಮಿ ಜಾತ್ರೆ, ಚಿತ್ರಾವತಿಯ ಸುಬ್ರಹ್ಮಣ್ಯ ಸ್ವಾಮಿ ಜಾತ್ರೆ ಪ್ರಸಿದ್ಧವಾದುವು.

ಶಿಡ್ಲಘಟ್ಟ ತಾಲ್ಲೂಕಿನಾದ್ಯಂತ ಅನೇಕ ಬೆಟ್ಟಗುಡ್ಡಗಳಿವೆ. ಈ ಬೆಟ್ಟಗಳಲ್ಲಿ ಭಾರಿ ಗಾತ್ರದ ಗ್ರಾನೈಟ್ ಶಿಲೆಗಳಿವೆ. ಈ ತಾಲ್ಲೂಕಿನಲ್ಲಿ ಜಲಸಂಪನ್ಮೂಲ ಹೆಚ್ಚಾಗಿಲ್ಲ. ನಂದಿಬೆಟ್ಟದ ಸುತ್ತಲ ಪ್ರದೇಶದಿಂದ ಹುಟ್ಟಿ ಹರಿಯುವ ಪಾಪಾಗ್ನಿನದಿ ಈ ತಾಲ್ಲೂಕಿನ ಉತ್ತರಭಾಗದಲ್ಲಿ ಹರಿದರೆ ದಕ್ಷಿಣಪಿನಾಕಿನಿ ತಾಲ್ಲೂಕಿನ ದಕ್ಷಿಣಭಾಗದಲ್ಲಿ ಹರಿಯುತ್ತದೆ. ಈ ಉಪನದಿಗಳು ಮತ್ತು ಸಣ್ಣತೊರೆಗಳು ಇಲ್ಲಿನ ಕೆಲವು ಕೆರೆಕಟ್ಟೆಗಳನ್ನು ತುಂಬಿ ನೀರಾವರಿಗೆ ನೆರವಾಗಿವೆ.

ಈ ತಾಲ್ಲೂಕಿನ ಮೇಲೂರಿನಲ್ಲಿ ರೇಷ್ಮೆಗೂಡುಗಳಿಂದ ರೇಷ್ಮೆತೆಗೆಯುವ ಕಾರ್ಖಾನೆಯಿದೆ. ಪಲಚಾರ್ಲು ಮತ್ತು ಬೈಗುನಹಳ್ಳಿಗಳಲ್ಲಿ ಪಿಂಗಾಣಿಮಣ್ಣು ತೆಗೆಯುವ ಗಣಿಗಳಿವೆ. ಕೈಮಗ್ಗ ಇಲ್ಲಿನ ಇನ್ನೊಂದು ಪ್ರಮುಖ ಕೈಗಾರಿಕೆ. ಈ ತಾಲ್ಲೂಕಿನ ಸಾದಳ್ಳಿ ಸಹದೇವನಿಂದ ಸ್ಥಾಪಿತವಾದುದು ಎಂಬ ಪ್ರತೀತಿ ಇದೆ.

ಶಿಡ್ಲಘಟ್ಟದ ಸ್ಥಳಪುರಾಣದ ಪ್ರಕಾರ ಉಜಿನಿ ಪಟ್ಟಣದಿಂದ ಕೆಂಪೇಗೌಡ ಎಂಬುವವನು ತನ್ನ ಗರ್ಭಿಣಿ ಹೆಂಡತಿ ಹಲಸೂರಮ್ಮನೊಡನೆ ಶಿಡ್ಲಘಟ್ಟದ ಉತ್ತರಕ್ಕಿರುವ ಅಬ್ಲೋಡು ಎಂಬಲ್ಲಿಗೆ ಬಂದು ನೆಲಸಿದನು. ವೆಲ್ಲೂರಿನ ದಂಡಯಾತ್ರೆಯಲ್ಲಿ ಆತನು ನಿಧನನಾದನು. ಆತನ ಹೆಂಡತಿ ಗುಪ್ತನಿಧಿಯ ಸಹಾಯದಿಂದ ಅಬ್ಲೋಡಿನಲ್ಲಿ ಕೋಟೆ ಕಟ್ಟಿಸಿ ಅಕ್ಕಪಕ್ಕದ ಪ್ರದೇಶಗಳನ್ನು ವಶಪಡಿಸಿಕೊಂಡು ಆಳುತ್ತಿದ್ದಳು. ಆಕೆ ತನ್ನ ಮಾವ ಶಿಡ್ಲಗೌಡನ ಹೆಸರಿನಲ್ಲಿ ಶಿಡ್ಲಘಟ್ಟವನ್ನು ೧೫೨೪ರಲ್ಲಿ ಸ್ಥಾಪಿಸಿದಳು. ಶಿವನೇಗೌಡ ಎಂಬುವವನು ೧೫೭೯ರಲ್ಲಿ ಪಟ್ಟಕ್ಕೆ ಬಂದು ೪೭ ವರ್ಷಗಳು ಈ ಊರನ್ನು ಆಳಿದ. ಈ ಊರಿನ ನೈರುತ್ಯಕ್ಕಿರುವ ಅಮ್ಮನಕೆರೆಯನ್ನು ಹಲಸೂರಮ್ಮನೂ, ಆಗ್ನೇಯಕ್ಕಿರುವ ಗೌಡನಕೆರೆಯನ್ನು ಶಿವನೇಗೌಡನೂ ಕಟ್ಟಿಸಿದರೆಂದು ಪ್ರತೀತಿ. ಅಮ್ಮನಕೆರೆಯ ಸಮೀಪದಲ್ಲಿಯೇ ಶಿವನಗೌಡ ಮತ್ತು ಆತನ ಹೆಂಡತಿಯ ಸಮಾಧಿಗಳಿವೆ. ಶಿವನೇಗೌಡನ ಅನಂತರ ಅದು ಮರಾಠರ ಮತ್ತು ಮುಗಲರ ವಶವಾಯಿತು. ೧೭೬೨ರಲ್ಲಿ ಹೈದರಆಲಿ ಆಕ್ರಮಿಸಿಕೊಂಡು ಇಲ್ಲಿಯ ಕೋಟೆಯನ್ನು ನಾಶಮಾಡಿದ. **(ಕನ್ನಡ ವಿಷಯ ವಿಶ್ವಕೋಶ: ಸಂಪುಟ ೨, ಪು. ೧೦೫೩-೧೦೫೪)**

**ಚಿಂತಾಮಣಿ:** ಇಲ್ಲಿ ದೊರಕುವ ಬಿಳಿಯ ಜೇಡಿಮಣ್ಣು ಪಿಂಗಾಣಿ ಉಪಕರಣಗಳ ತಯಾರಿಕೆಗೆ ಉಪಯುಕ್ತವಾದದ್ದು. ತಾಲ್ಲೂಕಿನಲ್ಲಿ ರೇಷ್ಮೆ, ಸುಗಂಧದ್ರವ್ಯ, ಅಗರಬತ್ತಿ ತಯಾರಾಗುತ್ತವೆ. ಪ್ರಸಿದ್ಧ ಕ್ಷೇತ್ರವೆನಿಸಿಕೊಂಡಿರುವ ಕೈವಾರ ಈ ತಾಲ್ಲೂಕಿಗೆ ಸೇರಿದೆ. ಮಹಾಭಾರತದಲ್ಲಿ ಬರುವ ಏಕಚಕ್ರಪುರವೆ ಇಂದಿನ ಕೈವಾರ ಎಂದು ಹೇಳುತ್ತಾರೆ. ಅರಗಿನ ಮನೆಯಿಂದ ತಪ್ಪಿಸಿಕೊಂಡ ಪಾಂಡವರು ಕೆಲವು ಕಾಲ ಇಲ್ಲಿದ್ದರೆಂದೂ, ಈ ಗ್ರಾಮದ ಹತ್ತಿರವಿರುವ ಚಿದಂಬರಗಿರಿ ಅಥವಾ ಚಿಕ್ಕಬೆಟ್ಟದಲ್ಲಿ ಇದ್ದ ಬಕಾಸುರನನ್ನು ಭೀಮ ಕೊಂದು ಅವನ ಶವವನ್ನು ಬೆಟ್ಟದ ಗುಹೆಯೊಂದರಲ್ಲಿ ಮುಚ್ಚಿಟ್ಟ ಎಂಬುದು ಸ್ಥಳಪುರಾಣ, ಬಕಾಸುರನಿದ್ದನೆಂದು ಹೇಳುವ ಒಂದು ಗವಿ ಬೆಟ್ಟದಲ್ಲಿದೆ.

ಇಲ್ಲಿ ಅಮರನಾರಾಯಣ, ಭೀಮೇಶ್ವರ, ನಕುಲೇಶ್ವರ, ಸಹದೇವೇಶ್ವರ ದೇವಾಲಯಗಳಿವೆ. ಇವೆಲ್ಲ ೧೨೮೦ಕ್ಕೆ ಮುಂಚೆಯೇ ಇದ್ದುವೆಂದು ಇಲ್ಲಿ ದೊರಕುವ ತಮಿಳು ಶಾಸನಗಳಿಂದ ತಿಳಿದುಬರುತ್ತದೆ. ಬಹುಶಃ ಇವು ೧೨೮೦ರ ರಚನೆಗಳು. ಆದರೆ ಎಲ್ಲವೂ ಬಹುವಾಗಿ ನವೀಕೃತವಾಗಿವೆ.

ಅಮರನಾರಾಯಣ ದೇವಾಲಯ ಇಲ್ಲಿನ ಪ್ರಧಾನ ಗುಡಿ ಹಾಗೂ ಮುಖ್ಯ ವಾಸ್ತುಕೃತಿ. ಭೀಮೇಶ್ವರ ದೇವಾಲಯ ಅಮರನಾಥ ದೇವಾಲಯಕ್ಕಿಂತ ದೊಡ್ಡದು. ಸಹದೇವೇಶ್ವರ ಮತ್ತು ನಕುಲೇಶ ಮಂದಿರಗಳು ಸಣ್ಣವು. ಸಹದೇವೇಶ್ವರ ಮಂದಿರದ ಗೋಡೆಗಳ ಮೇಲೆ ಅನೇಕ ತಮಿಳು ಶಾಸನಗಳಿವೆ.

ನಾರೇಯಣಯೋಗಿಗಳೆಂಬ ಪ್ರಸಿದ್ಧ ಸಂತರು ಈ ಊರಿನಲ್ಲಿ ನೆಲಸಿದ್ದರು. ಅವರ ಸಮಾಧಿ ಮತ್ತು ದೇವಾಲಯ ಪವಿತ್ರತಾಣವಾಗಿದೆ. ಎಂ.ಎಸ್. ರಾಮಯ್ಯನವರು ಸ್ಥಾಪಿಸಿದ್ದ ಟ್ರಸ್ಟ್ ಈ ಊರಿನಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ನಡೆಸುತ್ತಿದೆ.

ಅಂಬಾಜಿದುರ್ಗ ಈ ಪ್ರದೇಶದ ಎತ್ತರವಾದ ಬೆಟ್ಟ. ಬೆಟ್ಟದ ಮೇಲೆ ಕೋಟೆ. ಈ ಕೋಟೆ ಟಿಪ್ಪುಸುಲ್ತಾನ್ ಕಾಲದಲ್ಲಿ ರಚಿತವಾದದ್ದು. ೧೭೯೧ರಲ್ಲಿ ಬ್ರಿಟಿಷರ ವಶವಾಯಿತು. ೧೮೭೩ ರವರೆಗೆ ಇದೇ ಸುತ್ತಲ ಪ್ರದೇಶದ ತಾಲ್ಲೂಕಿನ ಮುಖ್ಯಸ್ಥಳವಾಗಿತ್ತು. ಈಗ ಹೋಬಳಿ ಕೇಂದ್ರ, ರಹಮಾನ್‌ಘರ್ ಈ ಪ್ರದೇಶದ ಇನ್ನೊಂದು ಐತಿಹಾಸಿಕ ಸ್ಥಳ.

ರಹಮಾನ್‌ಘರ್ ಚಿಂತಾಮಣಿ ತಾಲ್ಲೂಕಿನಲ್ಲಿರುವ ಒಂದು ಗಿರಿದುರ್ಗ. ಈ ಗಿರಿದುರ್ಗವನ್ನು ಸಮುದ್ರಮಟ್ಟಕ್ಕೆ ೧೩೦೪ ಮೀ. ಎತ್ತರವಿರುವ ಬೆಟ್ಟದ ಮೇಲೆ ಕಟ್ಟಲಾಗಿದೆ. ಈ ದುರ್ಗ ಸ್ವಲ್ಪಕಾಲ ಮರಾಠರ ಆಡಳಿತಕ್ಕೆ ಸೇರಿತ್ತೆಂದು ತಿಳಿದುಬರುತ್ತದೆ. ಮುಂದೆ ಟಿಪ್ಪುಸುಲ್ತಾನನ ಕೈಸೇರಿದ ಈ ದುರ್ಗ ಐತಿಹಾಸಿಕ ಪ್ರಾಮುಖ್ಯ ಪಡೆಯಿತು.

ಚಿಂತಾಮಣಿರಾವ್ ಎಂಬ ಮರಾಠ ನಾಯಕ ಈ ಪಟ್ಟಣವನ್ನು ಸ್ಥಾಪಿಸಿದನೆಂದೂ ಆದ್ದರಿಂದ ಇದಕ್ಕೆ ಆತನ ಹೆಸರು ಬಂದಿದೆಯೆಂದೂ ಹೇಳಲಾಗಿದೆ. ಚಿಂತಾಮಣಿಗೆ ಸೇರಿದಂತೆಯೇ ಉತ್ತರ ಭಾಗದಲ್ಲಿ ಇರುವ ನೆಕ್ಕುಂದಿಯಲ್ಲಿ ಗಂಗರ ಕಾಲದ ವೀರಗಲ್ಲುಗಳು, ಶಾಸನಗಳು ಮತ್ತು ಇತರ ಅವಶೇಷಗಳಿವೆ. **(ಕನ್ನಡ ವಿಷಯ ವಿಶ್ವಕೋಶ : ಪು. ೯೩೭-೯೩೮)**

**ಬಾಗೇಪಲ್ಲಿ:** ಈ ತಾಲ್ಲೂಕಿನ ಹೆಚ್ಚು ಭಾಗ ಕಣಶಿಲೆಯ ಪ್ರದೇಶ. ಅಲ್ಲಲ್ಲಿ ಕಣಶಿಲೆಯ ಬೆಟ್ಟಗಳಿವೆ. ತಾಲ್ಲೂಕಿನ ಆಗ್ನೇಯ ಭಾಗದಲ್ಲಿ ಪಾಪಘ್ನಿ ನದಿ ಹರಿಯುತ್ತಿದೆ. ಈ ನದಿಗೆ ಅಡ್ಡಲಾಗಿ ವ್ಯಾಸನಸಮುದ್ರ ಕೆರೆಯನ್ನು ನಿರ್ಮಿಸಲಾಗಿದೆ. ಈ ತಾಲ್ಲೂಕಿನಲ್ಲಿ ವ್ಯವಸಾಯಕ್ಕೆ ನೀರೊದಗಿಸುವ ಅನೇಕ ಕೆರೆಗಳೂ, ಬಾವಿಗಳೂ ಇವೆ. ಬಾಗೇಪಲ್ಲಿಗೆ ೩ ಕಿ.ಮೀ. ದೂರದಲ್ಲಿರುವ ದೇವರಗುಡಿಪಳ್ಳಿಯ ವೆಂಕಟರಮಣಸ್ವಾಮಿ ದೇವಾಲಯ ಬಹುಪ್ರಸಿದ್ಧ. ಗುಮ್ಮನಾಯಕನಪಾಳ್ಯ ಸು. ೧೮೮೨ ರವರೆಗೂ ತಾಲ್ಲೂಕು ಕೇಂದ್ರವಾಗಿತ್ತು. ಈ ಪಟ್ಟಣವನ್ನು ಬಾಗೇನಹಳ್ಳಿ ಎಂದೂ ಕರೆಯುತ್ತಾರೆ. ಇದು ಒಂದು ಪಾಳೇಯಪಟ್ಟು ಸಹ ಆಗಿತ್ತು.

**ಗುಡಿಬಂಡೆ:** ಚಿಕ್ಕಬಳ್ಳಾಪುರ ಜಿಲ್ಲೆಯ ಅತ್ಯಂತ ಚಿಕ್ಕದಾದ ತಾಲ್ಲೂಕು. ಈ ತಾಲ್ಲೂಕಿನ ಮುಖ್ಯ ಕೆರೆಯಾಗಿರುವ ಭೈರಸಾಗರಕ್ಕೆ ಚಿತ್ರಾವತಿ ನದಿಯೇ ಮುಖ್ಯ ಆಸರೆ. ಗುಡಿಬಂಡೆಯ ಸುತ್ತಮುತ್ತಲೂ ಹುಣಿಸೆಮರಗಳನ್ನು ಹೆಚ್ಚಾಗಿ ಕಾಣಬಹುದು. ಮೈದಾನ ಪ್ರದೇಶದಲ್ಲಿ ಮಾವಿನ ತೋಪುಗಳಿವೆ. ಗುಡಿಬಂಡೆ ತಾಲ್ಲೂಕು ಬೆಲ್ಲ ಮತ್ತು ಕಲ್ಲುಸಕ್ಕರೆ ತಯಾರಿಕೆಗೆ, ರೇಷ್ಮೆ ನೇಯ್ಗೆ ಮತ್ತು ಕೊಟ್ಟಣದ ಅಕ್ಕಿಗೆ ಪ್ರಸಿದ್ಧ. ಗುಡಿಯಿಂದ ಕೂಡಿದ ಬಂಡೆಯೊಂದರ ದಕ್ಷಿಣದ ಬುಡದಲ್ಲಿ ಈ ಪಟ್ಟಣವಿರುವುದರಿಂದ ಇದಕ್ಕೆ ಗುಡಿಬಂಡೆ ಎಂಬ ಹೆಸರು ಬಂದಿದೆ. **(ಕನ್ನಡ ವಿಷಯ ವಿಶ್ವಕೋಶ: ಪು. ೭೭೮-೭೭೯)**

**ಗೌರಿಬಿದನೂರು:** ಈ ತಾಲ್ಲೂಕಿನಲ್ಲಿ ಸಕ್ಕರೆ ಕಾರ್ಖಾನೆ, ಸಿಮೆಂಟ್ ಕೊಳವೆಗಳ ತಯಾರಿಕೆ, ಮರ ಕೊಯ್ಯುವ ಕಾರ್ಖಾನೆ ಇವುಗಳ ಜೊತೆಗೆ ಕೈಮಗ್ಗದ ಬಟ್ಟೆತಯಾರಿಕೆಯು ಉಂಟು. ಈ ತಾಲ್ಲೂಕಿನ ವಿದುರಾಶ್ವತ್ಥದಲ್ಲಿ ವರ್ಷಕ್ಕೊಮ್ಮೆ ಒಂದು ವಾರಕಾಲ ನಡೆಯುವ ಜಾತ್ರೆ ಪ್ರಸಿದ್ಧವಾದುದು. ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಚಳವಳಿಗಾರರು ೧೯೩೮ ಏಪ್ರಿಲ್ ೨೫ ರಂದು ಪ್ರತಿಬಂಧಕಾಜ್ಞೆಯನ್ನು ಉಲ್ಲಂಘಿಸಿ ಕಾಂಗ್ರೆಸ್ ಧ್ವಜವನ್ನು ಆರೋಹಣೆ ಮಾಡಿದಾಗ ಪೊಲೀಸರ ಗುಂಡಿಗೆ ತುತ್ತಾಗಿ ಹತ್ತುಮಂದಿ ಮಡಿದಿದ್ದು ವಿದುರಾಶ್ವತ್ಥಕ್ಕೆ ಸಂಬಂಧಿಸಿದ ಮರೆಯಲಾಗದ ನೆನಪು. ಈ ತಾಲ್ಲೂಕಿನ ಗುಮ್ಮನಾಯಕನಪಾಳ್ಯ ಹಿಂದೆ ಒಂದು ಪಾಳೆಯ ಪಟ್ಟಾಗಿಯೂ ಇತ್ತು. ಇದೇ ತಾಲ್ಲೂಕಿನ ಹೊಸೂರಿನಲ್ಲಿ ಹೊಯ್ಸಳ ದೊರೆ ಮೂರನೆಯ ಬಲ್ಲಾಳ ಇದನ್ನು ವಶಪಡಿಸಿಕೊಂಡು ಹೊಸವೀಡು ಎಂದು ಹೆಸರಿಸಿದ್ದನೆಂದೂ, ವಿಜಯನಗರ ರಾಜ್ಯದ ಗಡಿಯಲ್ಲಿದ್ದು ಅರಸರ ವಾಸಸ್ಥಾನವಾಗಿತ್ತೆಂದೂ ತಿಳಿದುಬರುತ್ತದೆ.

ಹಿಂದೆ ವಿದುರನ ವಾಸಸ್ಥಳವಾಗಿದ್ದು ಇದಕ್ಕೆ ವಿದರೂರು ಎಂಬ ಹೆಸರಿತ್ತೆಂದೂ ಹೇಳಲಾಗಿದೆ. ಗೌರಿಬಿದನೂರು ಪಟ್ಟಣ ದಾರಿನಾಯ್ಕನಪಾಳ್ಯದ ಒಡೆಯನ ವಶದಲ್ಲಿತ್ತು. ಆತ ತನ್ನ ಮಗಳಾದ ಗೌರಿಗೆ ಇದನ್ನು ಬಳುವಳಿಯಾಗಿ ಕೊಟ್ಟ. ವಿದರೂರು ಎಂಬ ಹೆಸರಿಗೆ ಆಕೆಯ ಹೆಸರೂ ಸೇರಿಕೊಂಡು ಇದು ಗೌರಿಬಿದನೂರು ಎನಿಸಿಕೊಂಡಿತು. ಅನಂತರ ಮುಸ್ಲಿಮರು ಇದನ್ನು ಗೋರಿಬಿದನೂರು ಎಂದು ಕರೆದರು. ಇದರ ಬಳಿಯಲ್ಲಿ ನಿರ್ಮಿಸಲಾಗಿದ್ದ ಗೋರಿಗಳಿಂದಾಗಿ ಇದಕ್ಕೆ ಈ ಹೆಸರು ಬಂದಿತು.

ಗೌರಿಬಿದನೂರಿನಲ್ಲಿ ಭಾಭಾ ಪರಮಾಣುಶಕ್ತಿ ಸಂಶೋಧನ ಸಂಸ್ಥೆಗೆ ಸೇರಿದ ಭೂಕಂಪನಮಾಪನ ಕೇಂದ್ರವಿದೆ. ಇಲ್ಲಿ ಒಂದು ಸಕ್ಕರೆ ಕಾರ್ಖಾನೆ ಇದೆ. ರೈಲುಮಾರ್ಗ ನಿರ್ಮಾಣವಾದಂದಿನಿಂದ ಗೌರಿಬಿದನೂರು ವ್ಯಾಪಾರ ವಾಣಿಜ್ಯ ಕೇಂದ್ರವಾಗಿದೆ. **(ಕನ್ನಡ ವಿಷಯ ವಿಶ್ವಕೋಶ : ಕರ್ನಾಟಕ, ಪು. ೮೩೬)**

ಚಿಕ್ಕಬಳ್ಳಾಪುರ ಜಿಲ್ಲೆಯ ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಕ್ಷೇತ್ರಗಳ ಹಿನ್ನೆಲೆಯು ಶಾಸನಗಳ ಪರಿಶೀಲನೆಯನ್ನು ಮಾಡಿದಾಗ ಅಭಿವ್ಯಕ್ತವಾಗುತ್ತದೆ. ಶಾಸನಗಳು ಯಾವುದೇ ನಾಡಿಗಾಗಲಿ ಅಮೂಲ್ಯವಾದ ಆಸ್ತಿ.

ಒಂದು ನಾಡಿನ ರಾಜಕೀಯ ಸಾಮಾಜಿಕ ಸಂಗತಿಗಳನ್ನು ಅರಿತುಕೊಳ್ಳಲು ಶಾಸನಗಳು ಬಹುಮುಖ್ಯವಾದ ಆಧಾರಗಳಾಗಿವೆ. ಅಷ್ಟೇಅಲ್ಲ ಇತಿಹಾಸದ ಪ್ರಮಾಣಭೂತ ಪುನರ್‌ನಿರ್ಮಾಣಕ್ಕೂ ಆಧಾರಗಳಾಗಿವೆ. ಶಾಸನ ಎಂದರೆ ಮುಖ್ಯವಾಗಿ ಆಜ್ಞೆ ಎಂದರ್ಥ. ಈ ಶಾಸನಗಳನ್ನು ಬರೆಸುವುದಕ್ಕೆ ನಿರ್ದಿಷ್ಟ ಕಾರಣಗಳಿವೆ. ರಾಜನಾಗಲಿ, ದಂಡನಾಯಕನಾಗಲಿ ಅಥವಾ ಇತರ ಅಧಿಕಾರಿಗಳಾಗಲಿ ತಾವು ಮಾಡಿದ ದಾನ, ಧರ್ಮ, ದೇವಸ್ಥಾನಗಳ ನಿರ್ಮಾಣ, ಅವುಗಳ ಜೀರ್ಣೋದ್ಧಾರ, ಕೆರೆ ಕಟ್ಟಿಸುವುದು, ಬ್ರಾಹ್ಮಣರ ಆತಿಥ್ಯ, ಶಿಕ್ಷಣವೇ ಮುಂತಾದ ವಿಷಯಗಳನ್ನು ಪ್ರಕಟಪಡಿಸಿ ಸ್ಥಾಪಿಸಿ ಅವುಗಳ ನಿರ್ವಹಣೆಗಾಗಿ ದತ್ತಿಗಳನ್ನು ಕೊಟ್ಟು ಅವುಗಳನ್ನು ಶಾಸನಗಳಲ್ಲಿ ಬರೆಸುವುದರ ಮೂಲಕ ಪ್ರಕಟಪಡಿಸುತ್ತಾರೆ. ಅಲ್ಲದೆ ಗ್ರಾಮಕ್ಕೆ ಕಳ್ಳಕಾಕರೇ ಮೊದಲಾದವರಿಂದ ವಿಪತ್ತು ಒದಗಿದಾಗ ಅವನ್ನು ದಿಟ್ಟತನದಿಂದ ಎದುರಿಸಿ ಹೋರಾಡಿದ ವೀರರ ಶೌರ್ಯವನ್ನು ಸಾರುವುದಕ್ಕೂ ಈ ಶಾಸನಗಳನ್ನು ಕೆತ್ತಿಸುತ್ತಿದ್ದುದು ವಾಡಿಕೆಯಾಗಿತ್ತು. ಒಟ್ಟಿನಲ್ಲಿ ಶಾಸನಗಳನ್ನು ಬರೆಸುತ್ತಿದ್ದುದರ ಮೂಲ ಉದ್ದೇಶ ನಾಡಿನಲ್ಲಿ ಧರ್ಮಜಾಗೃತಿಯನ್ನುಂಟುಮಾಡಿ ಜನತೆಯಲ್ಲಿ ಸದಾಚಾರ ಸದ್ಭಾವನೆಗಳನ್ನು ಮೂಡಿಸುವುದೇ ಆಗಿತ್ತು.

ಕನ್ನಡನಾಡಿನಲ್ಲಿ ಅಸಂಖ್ಯಾತ ಶಾಸನಗಳು ಲಭ್ಯವಾಗಿವೆ. ತಮಿಳುನಾಡನ್ನು ಬಿಟ್ಟರೆ ಭಾರತದ ಇನ್ನಾವ ರಾಜ್ಯದಲ್ಲೂ ಸಿಕ್ಕದಷ್ಟು ಶಾಸನಗಳು ಕರ್ನಾಟಕದಲ್ಲಿ ಸಿಕ್ಕಿವೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ನಮ್ಮ ಜನತೆ ಈ ಶಾಸನಗಳನ್ನು ಅತ್ಯಂತ ಪೂಜ್ಯಭಾವದಿಂದಲೂ ಗೌರವಭಾವದಿಂದಲೂ ರಕ್ಷಿಸಿಕೊಂಡು ಬಂದಿದ್ದಾರೆ. ನಾಡಿನ ಇತಿಹಾಸ ನಿರ್ಮಾಣಕ್ಕೆ ಶಾಸನಗಳಿಂದ ದೊರಕುವ ಆಧಾರ ಅಮೂಲ್ಯವಾದುದು, ಅನುಪಮವಾದುದು.

ಕನ್ನಡದಲ್ಲಿ ಕನ್ನಡ ಸಾಹಿತ್ಯಕ್ಕಿಂತ ಪ್ರಾಚೀನವಾದುದು ಶಾಸನ ಸಾಹಿತ್ಯ. ಕನ್ನಡ ಸಾಹಿತ್ಯದ ಪ್ರಾಚೀನತೆ ಎಂಟು ಅಥವಾ ಒಂಬತ್ತನೆಯ ಶತಮಾನವಾದರೆ ಶಾಸನ ಸಾಹಿತ್ಯ ಐದನೆಯ ಶತಮಾನದಲ್ಲೇ ಕಂಡುಬರುತ್ತದೆ. ಈ ಶಾಸನಗಳು ಬಹುಮಟ್ಟಿಗೆ ಕಾವ್ಯಮಯವಾಗಿರುವುದರಿಂದ ಇವನ್ನು ಸಾಹಿತ್ಯವೆಂದೇ ಪರಿಗಣಿಸಬಹುದಾಗಿದೆ. ಈ ಶಾಸನಗಳಲ್ಲಿ ಕೆಲವು ಗದ್ಯದಲ್ಲಿಯೂ ಮತ್ತು ಕೆಲವು ಗದ್ಯಪದ್ಯದಿಂದಲೂ ಕೂಡಿರುತ್ತವೆ.

ಶಾಸನಗಳನ್ನು ಕಲ್ಲುಬಂಡೆಗಳ ಮೇಲೂ ತಾಮ್ರಪಟಗಳ ಮೇಲೂ ಬರೆಸಲಾಗುತ್ತಿತ್ತು. ಬಹುಕಾಲ ಅವು ನಶಿಸಿ ಹೋಗಬಾರದೆಂಬುದೇ ಅದರ ಉದ್ದೇಶವಾಗಿತ್ತು. ಕರ್ನಾಟಕ ಸಂಸ್ಕೃತಿ ಶಾಸನಗಳಲ್ಲಿ ಹೇಗೆ ನಿರೂಪಿತವಾಗಿದೆ ಎಂಬುದಕ್ಕೆ ಒಂದೆರಡು ದೃಷ್ಟಾಂತಗಳನ್ನು ನೋಡಬಹುದು. ವೀರಗಲ್ಲು ಮಾಸ್ತಿಗಲ್ಲುಗಳು ಕನ್ನಡ ಜನತೆಯ ಶೌರ್ಯಪ್ರದರ್ಶನದ ಪ್ರತೀಕಗಳು. ಗ್ರಾಮರಕ್ಷಣೆಗಾಗಿಯೋ ಸ್ವಾಮಿನಿಷ್ಠೆಗಾಗಿಯೋ ಶತ್ರುಗಳೊಡನೆ ಹೋರಾಡಿ ಗತಿಸಿದವರ ಸ್ಮಾರಕಕ್ಕಾಗಿ ವೀರಗಲ್ಲುಗಳನ್ನು ನೆಟ್ಟು ದತ್ತಿಗಳನ್ನು ಬಿಡುತ್ತಿದ್ದರು. ಆ ವೀರಗಲ್ಲುಗಳ ಕೊನೆಯಲ್ಲಿ:

ಜಿತೇನ ಲಭ್ಯತೇ ಲಕ್ಷ್ಮೀಃ । ಮೃತೇನಾಪಿ ಸುರಾಂಗನಾ ॥
ಕ್ಷಣವಿಧ್ವಂಸಿನೀ ಕಾಯೇ । ಕಾ ಚಿಂತಾ ಮರಣೇ ರಣೇ ॥

ಎಂಬ ಶ್ಲೋಕವಿರುತ್ತಿತ್ತು. ಇದರ ಅರ್ಥವಿಷ್ಟೆ: ಯುದ್ಧದಲ್ಲಿ ಜಯಶಾಲಿಯಾದರೆ ಲಕ್ಷ್ಮಿ ಲಭಿಸುತ್ತಾಳೆ. ಸಾವನ್ನಪ್ಪಿದರೆ ಸುರಾಂಗನೆಯರು ಲಭಿಸುತ್ತಾರೆ. ಕ್ಷಣಮಾತ್ರದಲ್ಲಿ ನಾಶವಾಗುವ ಈ ದೇಹಕ್ಕೆ ಯುದ್ಧದಲ್ಲಿ ಸಾಯುವೆನೆಂಬ ಚಿಂತೆಯೇಕೆ?

ಕೋಲಾರ ಜಿಲ್ಲೆಯ ಶಾಸನಗಳಿಗೆ ಒಂದು ವಿಶಿಷ್ಟ ಸ್ಥಾನವಿದೆ. ಅತ್ಯಂತ ಪ್ರಾಚೀನ ಶಾಸನಗಳು ಈ ಜಿಲ್ಲೆಯಲ್ಲಿ ಲಭಿಸಿವೆ. ಕನ್ನಡ ಶಾಸನಗಳಷ್ಟೇ ಅಲ್ಲದೆ ತಮಿಳು, ತೆಲುಗು ಮತ್ತು ಸಂಸ್ಕೃತ ಭಾಷೆಯ ಶಾಸನಗಳೂ ಸಿಕ್ಕಿವೆ. ಪ್ರಸ್ತುತ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ಚಿಕ್ಕಬಳ್ಳಾಪುರ ತಾಲ್ಲೂಕು ೬೫; ಶಿಡ್ಲಘಟ್ಟ ತಾಲ್ಲೂಕು ೧೧೩; ಚಿಂತಾಮಣಿ ತಾಲ್ಲೂಕು ೧೬೮; ಬಾಗೇಪಲ್ಲಿ ತಾಲ್ಲೂಕು ೮೫; ಗೌರಿಬಿದನೂರು ತಾಲ್ಲೂಕು ೮೯ ಶಾಸನಗಳು ಲಭ್ಯವಾಗಿವೆ.

ಪ್ರಸ್ತುತ ಶಿಡ್ಲಘಟ್ಟದ ೩ನೆಯ ನಂಬರಿನ ಶಾಸನ. ಇದರ ಕಾಲ ೧೭೮೪. ಇದರಲ್ಲಿ ಹಜರತ್ ಮೀರ್ ಜಾತುಕುದಿ ಸಾಹೇಬನು ಮಾಳಿನಾಯಕಗೆ ನೆತ್ತರುಕೊಡುಗೆಯಾಗಿ (ಯುದ್ಧದಲ್ಲಿ ಕಾದಿ ಮಡಿದವನ ಕುಟುಂಬಕ್ಕೆ ನೀಡುತ್ತಿದ್ದ ಭೂಮಿ) ಜಂಗಮಕೋಟೆಯಲ್ಲಿ ಭೂಮಿಯನ್ನು ಕೊಟ್ಟುದ್ದನ್ನು ವರ್ಣಿಸಿದೆ:

ಕ್ರೋಧಿನಾಮ ಸಂ ಮಾಗ ಬ ೧೨ ಲು
ಹಜರತ್ ಮೀರಜಾತುಂದಿ ಸಾಮಾಳಿ
ನಾಯಕಗೆ ಕೊಟ್ಟ ನೆತ್ರಕೊಡಿಗೆ ಹೊಲಲ್ ೩
ಜಂಗಮಕೋಟೆಯಲಿ ಕೊಟ್ಟೆಉ ಪವುತ್ರ
ಪಾರಂಪರೆ ಅನುಭವಿಸೋದು ಹಿಂದೂ
ಮುಸಲುಮಾನು ಯಾರು ತಪ್ಪಿದರೆ ಅವರ
ದೇವರ ಮೇಲೆ ತಲಾಕುನಾಮ ॥

ಗೌರಿಬಿದನೂರಿನ ೪೨ನೆಯ ಶಾಸನ ಇದರ ಕಾಲ ೧೬೪೬. ಇದರಲ್ಲಿ ಕೋಟೆ ಕಟ್ಟಿಸಿ ಜನವನ್ನು ತಂದು ತುಂಬಿದ್ದಕ್ಕಾಗಿ ಕಟ್ಟುಡಗೆಮಾನ್ಯ ಕೊಟ್ಟದ್ದನ್ನು ಹೇಳಿದೆ.

"ವಿರೋಧಿನಾಮ ಸಂವತ್ಸರದ ಆಶ್ವೀಜ
ಶು ೧೦ ಲು ಹೊಸೂರ ಸಂಮನದೇಶಮುಖಿ
ದೇಶಪಾಂಡೆ ದೇಶಿ ಕರಣು ಸಹಿಗೊಂಡ ನಾಯಕಗೆ ಬರೆಸಿ
ಕೊಟ್ಟ ಕಾಗದ ಕ್ರಮವೆಂತೆಂದರೆ ಹೊಸೂರ ಸೀಮೆಗೆ
ಸಲುವ ಎರಪನಗಳಿಗೆ ಪ್ರತಿನಾಮ ದೇಹವಾದ ಕೊಂಡಾಪುರವ
ನು ನೂತನವಾಗಿ ಕೋಟೆಕಟ್ಟಿಸಿ ಪ್ರಜೆ ತಂದು ಗ್ರಾಮ ತುಂಬು
ಮಾಡಿಸಿ ವೆಚ್ಚ ಅರಮನೆ ಕಿಪಾಯತು ತಿಳಿದುಯೀ ಗ್ರಾಮಬಳಿಯ ಕ
ಟ್ಟುಕೊಡಗಿ ಮಾಂನ್ಯವಾಗಿ ಮಣು ೨ ಹೊಲವಂನ್ನುನೇ
ಮಕೆ ಮಾಡಿಕೊಟ್ಟು ಯಿರುವದರಿಂದ ಯೀಗ್ರಾಮದ ಕೋಟೆಕಟ್ಟಿ
...ಮಾಡಿಯೀ ಹೊಲವಂನು ನಿಂನ ಪುತ್ರ ಪವುತ್ರಪಾರಂಪರ್ಯ
ವಾಗಿ ಅನುಭವಿಸಿಕೊಂಡುಯಿರವದು"

ಚಿಂತಾಮಣಿ ತಾಲ್ಲೂಕಿನ ೩೧ನೆಯ ಶಾಸನ. ಇದರ ಕಾಲ ೧೦೫೦. ಇದರಲ್ಲಿ ತನ್ನ ಒಡೆಯ ಸ್ವರ್ಗವಾಸಿ ಯಾದುದನ್ನು ಕೇಳಿ ತನ್ನ ತಲೆಯನ್ನು ಕತ್ತರಿಸಿಕೊಂಡ ಸೇವಕ ಚಲುವಗಂಡನ ವಿಷಯ ಹೇಳಿದೆ.

"ಸ್ವಸ್ತಿಶ್ರೀ ಇಯೂಂನೊಡೆಯ ರಾಜೇನ್ದ್ರಚೋಳ
ಪೊಂಪಲಮಾ ರಾಯರ್ ಸಗ್ಗಯೆದಡಿವರಾಳ ಚೆಲ್ವಗಣ್ಡಕ್ಕೆ
ತಲೆಯಂ ಕಡಿಯಿಸಿ ಸತ್ತ ಇವಂಗೆ ಕೊಡಗೆ ಕಣ್ಡುಗ ಸಲ್ವುದೂ"

ಈ ಮೇಲಿನ ಶಾಸನಗಳನ್ನು ಪರಿವೀಕ್ಷಿಸಿದವರಿಗೆ ಇವು ವಿಭಿನ್ನವೂ ವಿವಿಧ ಪ್ರಕಾರದವೂ ಆಗಿರುವುದು ಗೋಚರವಾಗುತ್ತದೆ.

ಕರ್ನಾಟಕ ಹಲವಾರು ಧರ್ಮಗಳ ತವರೂರು. ಇಲ್ಲಿಯ ಶಾಸನಗಳು ಕನ್ನಡ ಜನತೆಯ ಧರ್ಮಸಮನ್ವಯ, ದಾನಬುದ್ಧಿ, ಸಂಸ್ಕೃತಿಗಳಿಗೆ ಹಿಡಿದ ಕೈಗನ್ನಡಿಯಂತಿವೆ. ಇವುಗಳಲ್ಲಿ ನಿರೂಪಿತವಾಗಿರುವ ತತ್ವಸಿದ್ಧಾಂತಗಳು ಮಾನವ ಜನಾಂಗಕ್ಕೆ ಅನುಕರಣೀಯವಾಗಿವೆ.

ಪೋಲಾಳ್ವದಂಡನಾಯಕ, ಶಿವವಿಷ್ಣು ಇವರ ಸಮನ್ವಯ ಹರಿಹರಮೂರ್ತಿಯನ್ನು ಪ್ರತಿಷ್ಠಾಪಿಸಿದ ದಾವಣಗೆರೆಯ ಶಾಸನಪದ್ಯ ಇಂತಿದೆ:

ಹರಿಯಿಂದಂ ಬಿಟ್ಟು ದೈವಂ ಧರಣೀತಳದೊಳಿಲ್ಲೆಂದು ಪೇಳ್ವರ್ ಕೆಲಂಬರ್
ಹರನಿಂದಂ ಬಿಟ್ಟು ದೈವಂ ಧರಣೀತಳದೊಳಿಲ್ಲೆಂದು ಪೇಳ್ವರ್ ಕೆಲಂಬರ್
ನರರಾ ಸಂದೇಹಮಂ ಪಿಂಗಿಸಲತಿಶಯದಿಂ ಕೂಡಲೂರಲ್ಲಿ ಶೋಭಾ
ಕರಮಪ್ಪಂತೊಂದೆರೂಪಂ ತಳೆದ ಹರಿಹರಂ ರಕ್ಷಿಕ್ಕೆ ನಮ್ಮಂ

ಎಲ್ಲ ದಾನಗಳಲ್ಲಿ ಅನ್ನದಾನವೇ ಶ್ರೇಷ್ಠ ಎಂಬುದನ್ನು ಸಾರಿ ಅದಕ್ಕಾಗಿ ಭೂಮಿದಾನ ಮಾಡಿದುದನ್ನು ನಿರೂಪಿಸುವ ಸೊರಟೂರಿನ ಶಾಸನ ಪದ್ಯ ಇದು:

ದಾನದೊಳನ್ನದಾನಮೆ ಸಾರಂ
ದೀನಾನಾಥರ್ಗೆ ತುಷ್ಟಿದಾನಮೆನುತ್ತುಂ
ತಾನರಿದು ಜಕ್ಕಿಯಬ್ಬೆ ಯ
ಶೋನಿಧಿ ಸತ್ರಕ್ಕೆ ಭೂಮಿದಾನಮನಿತ್ತಳ್

ಇಂದಿನ ಸಮಾಜದಲ್ಲಿ ಶೀಲ ಮತ್ತು ಚಾರಿತ್ರಗಳು ಕಣ್ಮರೆಯಾಗುತ್ತಿರುವಾಗ ಸೊರಬದ ಒಂದು ಶಾಸನದಲ್ಲಿ ಚಟ್ಟಗಾವುಂಡನೆಂಬವನ ಶೀಲ ಮತ್ತು ಚಾರಿತ್ರಗಳು ಹೀಗೆ ನಿರೂಪಿತವಾಗಿವೆ:

ಚಟ್ಟಂ ಪರವನಿತೆಯರಂ
ಮುಟ್ಟಂ ವಿತರಣಮನಮರಭೂರುಹದೊಳ್ ಕೋ
ಡಿಟ್ಟಂ ಪಾಪದ ಪಥಮಂ
ಮೆಟ್ಟಂ ಶಾಶ್ವತಪದಕ್ಕೆ ಕಳಶಮನಿಟ್ಟಂ

ವಿಜಯನಗರದ ಪ್ರೌಢಪ್ರತಾಪರಾಯನ ಕಾಲದಲ್ಲಿ ರಚಿತವಾದ ಈ ಮುಂದಿನ ಶಾಸನಪದ್ಯ ಸಾರ್ವಕಾಲಿಕ ಸತ್ಯವನ್ನು ನಿರೂಪಿಸುತ್ತಿದೆ. ಲಕ್ಷ್ಮೀಧರನು ಮಗುವಾಗಿದ್ದಾಗ ಆತನ ತಾಯಿ ಹಾಲು ಕುಡಿಸುತ್ತಿದ್ದಾಗ ಈ ಪದ್ಯವನ್ನು ಹೇಳುತ್ತಿದ್ದಳಂತೆ:

ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸ
ಜ್ಜೆರೆಯೊಳ್ ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ
ರ್ಗೆರೆವಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾ
ಯೆರೆದಳ್ ಪಾಲೆರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ

ಕನ್ನಡ ಸಾಹಿತ್ಯದ ಇತಿಹಾಸವನ್ನು ಪರಿಶೀಲಿಸಿದಾಗ ಶಿವಶರಣರೂ ಹರಿದಾಸರೂ ಇದೇ ಸಂಸ್ಕೃತಿಯನ್ನು ಪರಿಪಾಲಿಸಿಕೊಂಡು ಬಂದಿರುವುದನ್ನು ಈ ಮುಂದಿನ ಉಲ್ಲೇಖಗಳಲ್ಲಿ ಕಾಣಬಹುದಾಗಿದೆ:

"ದೇವನೊಬ್ಬ ನಾಮ ಹಲವು; ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ; ಅಯ್ಯಾ ಎಂದಡೆ ಸ್ವರ್ಗ ಎಲವೋ ಎಂದಡೆ ನರಕ; ಆಸೆಗೆ ಸತ್ತುದು ಕೋಟಿ ಆಮಿಷಕ್ಕೆ ಸತ್ತುದು ಕೋಟಿ ಹೊನ್ನು ಹೆಣ್ಣಿಗೆ ಸತ್ತುದು ಕೋಟಿ; ಆಸೆಯೆಂಬುದು ಅರಸಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ; ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿ ಗಂಜಿದೊಡೆಂತಯ್ಯ; ಕಲ್ಲನಾಗರ ಕಂಡರೆ ಹಾಲನೆರೆಯೆಂಬರಯ್ಯ ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯಾ; ಎಲ್ಲಿ ಸುಳಿದಡೆ ಅಲ್ಲಿ ಉಪಾಧಿ ಬಿಡದಯ್ಯ; ಬಡತನಕ್ಕೆ ಉಂಬುವ ಚಿಂತೆ" –ಇವೇ ಮೊದಲಾದ ಶಿವಶರಣರ ಸೂಳ್ನುಡಿ ಗಳನ್ನೂ ಹರಿದಾಸರ "ಮಾನವಜನ್ಮ ದೊಡ್ಡದು ಇದ ಹಾನಿ ಮಾಡಲಿ ಬೇಡ ಹುಚ್ಚಪ್ಪಗಳಿರಾ; ಕುಲಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರು ಬಲ್ಲಿರಾ; ಆರುಹಿತವರು ನಿನಗೆ ಈ ಮೂವರೊಳಗೆ ನಾರಿಯೋ, ಧಾರಿಣಿಯೋ, ಬಲುಧನದ ಸಿರಿಯೋ; ಆಚಾರವಿಲ್ಲದ ನಾಲಗೆ ನಿನ್ನ ನೀಚಬುದ್ಧಿಯ ಬಿಡು ನಾಲಗೆ; ಏನು ಬರೆದೆಯೊ ಬ್ರಹ್ಮಾ ನೀನೆಷ್ಟು ನಿಷ್ಕರುಣಿಯೋ; ಸತ್ಪುರುಷರಿಗಿದು ಕಾಲವಲ್ಲ; ತಲ್ಲಣಿಸದಿರು ಕಂಡ್ಯ ತಾಳು ಮನವೇ" ಇವೇ ಮೊದಲಾದ ಕೀರ್ತನೆಗಳನ್ನು ಪರಿಶೀಲಿಸಬಹುದಾಗಿದೆ.

ಚಿಕ್ಕಬಳ್ಳಾಪುರ ಜಿಲ್ಲೆಯ ಸಾಹಿತಿಗಳನ್ನು ಪರಿಚಯಿಸುವುದು ದುಸ್ತರದ ಕೆಲಸ. ೧೯೭೦ರ ಬಂಗಾರುಪೇಟೆಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಹಂಪ ನಾಗರಾಜಯ್ಯ ಅವರು ಸಂಪಾದಿಸಿದ್ದ "ಕೋಲಾರ ಜಿಲ್ಲಾ

ಬರಹಗಾರರು" ಎಂಬ ಸಣ್ಣ ಪುಸ್ತಕವನ್ನು ಅಚ್ಚುಮಾಡಿಸಲಾಗಿದೆ. ಅದರಿಂದ ಪ್ರಸ್ತುತ ಚಿಕ್ಕಬಳ್ಳಾಪುರ ಜಿಲ್ಲೆಯ ಕವಿಗಳನ್ನು ಮಾತ್ರ ಆರಿಸಿಕೊಂಡಿದ್ದೇನೆ. ಇದು ಅಸಮಗ್ರ; ತಾತ್ಕಾಲಿಕ ಪಟ್ಟಿ ಎಂದು ಪರಿಗಣಿಸಬೇಕಾಗಿದೆ.

ಚಿಕ್ಕಬಳ್ಳಾಪುರದ ಕವಿಗಳಲ್ಲಿ ಬರಹಗಾರರಲ್ಲಿ ೧. ಬ.ನ. ಗುಂಡೂರಾವ್, ೨. ಡಾ. ಬಿ.ಆರ್. ಗೋಪಾಲ್, ೩. ಜಿ. ನರಸಪ್ಪ, ೪. ಕೆ.ಆರ್. ರಂಗಾಚಾರ್ (ರಘುಸುತ), ಮಲ್ಲೇಶ್ವರಂ ಪ್ರೌಢಶಾಲೆಯಲ್ಲಿ ಅಧ್ಯಾಪಕರಾಗಿದ್ದರು. ೫. ಡಾ. ಜೆ. ರುದ್ರಪ್ಪ; ಜಿಲ್ಲಾ ನ್ಯಾಯಾಧೀಶರಾಗಿದ್ದರು. ಅವರಿಗೆ ಕಾಶ್ಮೀರ ವಿಶ್ವವಿದ್ಯಾಲಯ ಡಿ.ಲಿಟ್ ಪದವಿ ನೀಡಿತ್ತು. ೬. ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯನವರು. ೭. ಶಾರದಾ ರಾಜಶೇಖರಯ್ಯ ಅವರು ಸುಪ್ರಸಿದ್ಧ ಕಥೆಗಾರರು, ನಾಲ್ಕು ಭಾಷೆಗಳನ್ನು ಬಲ್ಲವರು.

ಶಿಡ್ಲಘಟ್ಟದ ಎಸ್. ಹಂಪಯ್ಯನವರು ಜಗದ್ಗುರು ಶ್ರೀ ನಿಡುಮಾಮಿಡಿ ಸ್ವಾಮಿಗಳವರ ಸಂಕ್ಷಿಪ್ತ ಚರಿತ್ರೆ ಬರೆದಿದ್ದಾರೆ.

ಚಿಂತಾಮಣಿಯ ೧. ಕೈಪು ಲಕ್ಷ್ಮೀನರಸಿಂಹಶಾಸ್ತ್ರೀ, ೨. ಕೈವಾರ ರಾಜಾರಾಯರು, ನಾಟಕಕಾರರು, ೩.ವೈ.ಎಸ್. ಗುಂಡಪ್ಪ, ರಾಷ್ಟ್ರಪ್ರಶಸ್ತಿ ಪಡೆದ ಅಧ್ಯಾಪಕರು, ೪. ಬಿ.ಆರ್. ಲಕ್ಷ್ಮಣರಾವ್, ಉತ್ತಮ ಕವಿಗಳು, ೫. ಶಂಕರನಾರಾಯಣ ಶಾಸ್ತ್ರಿ (ಜಿ.ವಿ. ಶಂಕರ್) ಕೈವಾರದವರು.

**ಗುಡಿಬಂಡೆ:** ೧. ಕಡೆಹಳ್ಳಿ ನಂಜುಂಡರೆಡ್ಡಿ, ಲಾವಣಿಕಾರರು, ೨. ಎಂ.ಆರ್. ಗುಂಡಪ್ಪ, ಅಧ್ಯಾಪಕರು, ಜಲವಿದ್ಯೆಯಲ್ಲಿ ನಿಷ್ಣಾತರು, ೩. ಗುಡಿಬಂಡೆ ರಾಮಾಚಾರ್, ಶ್ರೇಷ್ಠ ಗಮಕಿಗಳು, ಇವರಿಗೆ ನಿಜಲಿಂಗಪ್ಪನವರು ಪ್ರಶಸ್ತಿ ಕೊಟ್ಟಿದ್ದಾರೆ. ೪. ಸುರೇಶ್ ಜೈನ್ ಪತ್ರಿಕಾ ವರದಿಗಾರರಾಗಿದ್ದರು.

**ಗೌರಿಬಿದನೂರು:** ಈ ತಾಲ್ಲೂಕಿನ ಹಂಪಸಂದ್ರದ ನಾಗರಾಜಯ್ಯ ಮತ್ತು ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದೆವು. ಜೊತೆಗೆ ಇದೇ ತಾಲ್ಲೂಕಿನ ಡಾ. ಎಲ್. ಬಸವರಾಜು ಅವರು ಚಿತ್ರದುರ್ಗದಲ್ಲಿ ಕಳೆದ ವರ್ಷ ನಡೆದ ಎಪ್ಪತ್ತೈದನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಇದೇ ತಾಲ್ಲೂಕಿನ ಹೊಸೂರಿನ ಎಚ್. ನರಸಿಂಹಯ್ಯನವರು ಶ್ರೇಷ್ಠ ವಿಜ್ಞಾನಿಗಳಾಗಿ, ಪ್ರಾಧ್ಯಾಪಕರಾಗಿ ಶಿಕ್ಷಣ ತಜ್ಞರಾಗಿ ಹೊಸೂರಿನಲ್ಲಿ ಅತ್ಯಾಧುನಿಕ ಪ್ರೌಢಶಾಲೆಯನ್ನು ನಿರ್ಮಿಸಿದ್ದಾರೆ. ಇದೇ ಊರಿನ ಪುಲ್ಲಕವಿ ತೆಲುಗಿನಲ್ಲಿ ಪಂಡಿತಾರಾಧ್ಯ ಚರಿತೆಯನ್ನು ಬರೆದಿದ್ದಾನೆ. ಇಡಗೂರಿನ ರುದ್ರಕವಿ ಕನ್ನಡ ಮತ್ತು ತೆಲುಗಿನಲ್ಲಿ ಅನೇಕ ಕೃತಿಗಳನ್ನು ಬರೆದಿದ್ದಾನೆ.

ಈ ತಾಲ್ಲೂಕಿನ ವರೂಣಿ ಗ್ರಾಮದ ವಿ.ಎಸ್. ಅನಂತರಾಜಯ್ಯ ಅವರು ಎಂ.ಎಸ್.ಸಿ. ಪದವೀಧರರು. ರೇಣುಕಾಚಾರ್ಯ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದರು. ಮಠದ ಈಶ್ವರಯ್ಯ ಕುರೂಡಿಯವರು. ಇವರ ಬರಹಗಳು ಅಚ್ಚಾಗಿವೆ. ಗೌರಿಬಿದನೂರಿನ ಗಂಗಾಧರ ಅವರ ಬರಹಗಳೂ ಅಚ್ಚಾಗಿವೆ. ಜಿ.ಬಿ. ಚಂದ್ರಕೀರ್ತಿಯವರು ಸಾಗಾನಹಳ್ಳಿಯವರು, ಸಮಾಜಶಾಸ್ತ್ರದ ಎಂ.ಎ. ಪದವೀಧರರು.

ಎಂ. ಚನ್ನಕೃಷ್ಣಯ್ಯ ಮಾದನಹಳ್ಳಿಯವರು ಕೃತಿಗಳನ್ನು ಬರೆದಿದ್ದಾರೆ. ಜಿ.ಪಿ. ದಾಸೇಗೌಡ ಅವರು ಆಚಾರ್ಯ ಪಾಠಶಾಲೆಯಲ್ಲಿ ಅಧ್ಯಾಪಕರು. ಆಸ್ಥಾನ ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯರು ಗುಂಡ್ಲಹಳ್ಳಿಯವರು. ಬೆಂಗಳೂರು ಮತ್ತು ಮೈಸೂರು ಸಂಸ್ಕೃತ ಕಾಲೇಜುಗಳಲ್ಲಿ ಪ್ರಾಧ್ಯಾಪಕರಾಗಿದ್ದರು. ಪ್ರಕಾಂಡ ಪಂಡಿತರು, ಕನ್ನಡ ಮತ್ತು ಸಂಸ್ಕೃತದಲ್ಲಿ ಅನೇಕ ಕೃತಿಗಳನ್ನು ಬರೆದಿದ್ದಾರೆ.

ಡಾ. ಹಂಪ ನಾಗರಾಜಯ್ಯ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದು ಅನೇಕ ಕೃತಿಗಳನ್ನು ಬರೆದಿದ್ದಾರೆ. ಕೆ. ನಾರಾಯಣಸ್ವಾಮಿ ಅವರು ಹೊಸೂರಿನವರು. ಕನ್ನಡ ಎಂ.ಎ. ಪದವೀಧರರು, ಉಪನ್ಯಾಸಕರು. ಜಿ.ಎಸ್. ಬಲರಾಮಗುಪ್ತ ಹೊಸೂರಿನವರು. ಕವಿತೆಗಳನ್ನು ಬರೆದಿದ್ದಾರೆ. ಜಿ. ರುದ್ರಯ್ಯ ಅವರು ಕುರೂಡಿಯವರು. ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿ ಸೇವೆ ಸಲ್ಲಿಸಿದ್ದಾರೆ. ಲಕ್ಷ್ಮೀಕಾಂತಶೆಟ್ಟಿ ಇಡಗೂರಿನವರು. ಕಾಲೇಜಿನಲ್ಲಿ

ಪ್ರಾಧ್ಯಾಪಕರು. ಎನ್. ಲಕ್ಷ್ಮೀನರಸಿಂಹ ಶಾಸ್ತ್ರಿಗಳು ಸಂತೇಕಲ್ಲಳ್ಳಿಯವರು. ಸುಮಾರು ಮೂವತ್ತು ಕೃತಿಗಳನ್ನು ಬರೆದಿದ್ದಾರೆ. ಕನ್ನಡ, ಇಂಗ್ಲಿಷ್ ಭಾಷೆಗಳಲ್ಲಿ ಪರಿಣತರು. ಓ.ಎನ್. ಲಿಂಗಣ್ಣಯ್ಯನವರು, ಮುದುಗೆರೆಯವರು. ಅಸಿಸ್ಟೆಂಟ್ ಕಮೀಷನರ್ ಆಗಿದ್ದರು. ಹೆಸರಾಂತ ಸಾಹಿತಿಗಳು 'ವಿದ್ಯಾವಿಭೂಷಣ' ಬಿರುದಾಂಕಿತರು. 'ಶೂನ್ಯಸಿಂಹಾಸನ' ಮೊದಲಾದ ಕೃತಿಗಳನ್ನು ಬರೆದಿದ್ದಾರೆ. ಸು. ವೆಂಕಟಾಚಲಯ್ಯ ಇವರು ಹೊಸೂರಿನವರು. ಧರ್ಮ, ವೇದಾಂತ ಗ್ರಂಥಗಳನ್ನು ಬರೆದಿದ್ದಾರೆ. ಅದ್ವೈತವಾದ, ಆಸ್ತಿಕವಾದ, ಜೀವಾತ್ಮ ಇತ್ಯಾದಿ. ದ್ವಾ ಶ್ರೀ ವೆಂಕಟೇಶ್ ಗೌರಿಬಿದನೂರಿನವರು 'ಪದ್ಮಪ್ರಿಯ' ಕಾವ್ಯನಾಮ. ಕತೆಗಳನ್ನು ಬರೆದಿದ್ದಾರೆ. ಎಸ್. ಸುಬ್ಬರಾಮಯ್ಯ ಗೌರಿಬಿದನೂರಿನವರು. ಇವರ ಕೆಲವು ಬರಹಗಳು ಅಚ್ಚಾಗಿವೆ.

ಬಂಧುಗಳೆ: ನಾನು ನೂತನ ಜಿಲ್ಲೆಯಾದ ಚಿಕ್ಕಬಳ್ಳಾಪುರದ ಗೌರಿಬಿದನೂರು ತಾಲ್ಲೂಕಿನ ನಾರಸಿಂಹನಹಳ್ಳಿ ಎಂಬ ಗ್ರಾಮದವನು. ನಮ್ಮ ತಂದೆ ನಂಜುಂಡಾರಾಧ್ಯ. ಅವರು ಶಿವಾಧೀನರಾಗಿ ಐವತ್ತು ವರ್ಷಗಳಾದುವು. ತಾಯಿ ಗಿರಿಜಮ್ಮ, ನಾನು ಅವರನ್ನು ನೋಡಿದವನೇ ಅಲ್ಲ. ನನ್ನ ತಾಯಿ ಊರು ಇದೇ ಗೌರಿಬಿದನೂರು ತಾಲ್ಲೂಕಿನ ನಾಮಗೊಂಡ್ಲು. ನನ್ನ ತಾಯಿ ತೀರಿಕೊಂಡ ಮೇಲೆ ನನ್ನ ತಾಯಿಯ ತಂಗಿ ಪಾರ್ವತಮ್ಮನವರು ನನ್ನನ್ನು ಸಾಕಿಕೊಂಡರಂತೆ. ಅವರ ಯಜಮಾನರು ಗೌರಿಬಿದನೂರಿನಲ್ಲಿ ಅಂಗಡಿಯನ್ನಿಟ್ಟುಕೊಂಡಿದ್ದರು. ಅವರಿಗೆ ಮಕ್ಕಳು ಇಲ್ಲದಿದ್ದುದರಿಂದ ನನ್ನನ್ನು ಸಾಕಿಕೊಂಡು ವಿದ್ಯಾಭ್ಯಾಸ ಮಾಡಿಸಿದರು. ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸವನ್ನು ಗೌರಿಬಿದನೂರಿನಲ್ಲೇ ಮುಗಿಸಿ ಪ್ರೌಢಶಾಲಾ ವ್ಯಾಸಂಗಕ್ಕೆ ಬೆಂಗಳೂರಿನ ಫೋರ್ಟ್ ಹೈಸ್ಕೂಲು ಸೇರಿಕೊಂಡೆ. ಅದಾದ ಮೇಲೆ ಸರ್ಕಾರಿ ಇಂಟರ್ ಮೀಡಿಯೆಟ್ ಕಾಲೇಜಿಗೆ ದಾಖಲಾದೆ. ಬಸವನಗುಡಿಯಲ್ಲಿದ್ದ ಸರ್ ಕೆ.ಪಿ. ಪುಟ್ಟಣ್ಣಚೆಟ್ಟಿ ವಿದ್ಯಾರ್ಥಿನಿಲಯದಲ್ಲಿ ಅವಕಾಶ ದೊರೆಯಿತು. ಇಂಟರ್ ಮೀಡಿಯೇಟ್‌ನಲ್ಲಿ "ಎಚ್‌ಎಎಲ್" ತೆಗೆದುಕೊಂಡಿದ್ದೆ. ಕನ್ನಡಕ್ಕೆ ತೀ.ನಂ.ಶ್ರೀಕಂಠಯ್ಯ, ಡಿ.ಎಲ್. ನರಸಿಂಹಾಚಾರ್, ಜಿ.ಪಿ. ರಾಜರತ್ನಂ, ಎಲ್. ಗುಂಡಪ್ಪ ಉಪನ್ಯಾಸಕರಾಗಿದ್ದರು. ಜಿ.ಪಿ. ರಾಜರತ್ನಂ ಅವರ ಪಾಠಪ್ರವಚನಗಳು ನನ್ನ ಮೇಲೆ ಅತ್ಯಂತ ಪ್ರಭಾವವನ್ನು ಬೀರಿದುವು.

ಇಂಟರ್ ಮೀಡಿಯೇಟ್ ಮುಗಿಸಿದ ಮೇಲೆ ಮುಂದಿನ ವ್ಯಾಸಂಗಕ್ಕೆ ಮೈಸೂರಿನ ಮಹಾರಾಜ ಕಾಲೇಜನ್ನು ಸೇರಿಕೊಳ್ಳಬೇಕಾಯಿತು. ಊಟೋಪಚಾರಗಳಿಗೆ ಸುತ್ತೂರು ಹಾಸ್ಟಲ್‌ಗೆ ಅರ್ಜಿಯನ್ನು ಸಲ್ಲಿಸಿದೆ. ನನಗೆ ಕನ್ನಡ ಮತ್ತು ಲಾಜಿಕ್‌ನಲ್ಲಿ ಹೆಚ್ಚಿನ ಅಂಕಗಳು ಬಂದಿದ್ದುದರಿಂದ ಕನ್ನಡ ಮತ್ತು ಮನಶ್ಶಾಸ್ತ್ರ ಎರಡರಲ್ಲೂ ಎಂ.ಎ.ಗೆ ಪ್ರವೇಶ ದೊರೆಯಿತು. ನಾನು ಸುತ್ತೂರು ಶ್ರೀಗಳವರನ್ನು ಸೀಟಿಗಾಗಿ ಭೇಟಿಯಾದಾಗ ಶ್ರೀಗಳು "ನೀನು ಕನ್ನಡ ಆನರ್ಸ್ ತೆಗೆದುಕೊಂಡರೆ ಮಾತ್ರ ಹಾಸ್ಟಲಿನಲ್ಲಿ ಸೀಟು ಕೊಡುವುದಾಗಿಯೂ ಇಲ್ಲದಿದ್ದರೆ ಕೊಡುವುದಿಲ್ಲ" ಎಂದೂ ಹೇಳಿಬಿಟ್ಟರು. ಅಷ್ಟೇ ಅಲ್ಲ "ಮುಂದೆ ಕರ್ನಾಟಕ ಏಕೀಕರಣವಾಗುತ್ತದೆ. ಆಗ ಕನ್ನಡಕ್ಕೆ ಉತ್ತಮ ಸ್ಥಾನಮಾನಗಳು ದೊರಕುತ್ತವೆ" ಎಂದು ಹೇಳಿದಾಗ ಕನ್ನಡ ಆನರ್ಸ್‌ಗೆ ಸೇರಿಕೊಂಡೆ. ಆ ವರ್ಷ ಕನ್ನಡ ಆನರ್ಸ್ ಸೇರಿದವರಿಗೆಲ್ಲರಿಗಿಂತ ನನಗೇ ಹೆಚ್ಚಿನ ಅಂಕಗಳು ಬಂದಿದ್ದುದರಿಂದ ಆ ವರ್ಷದ ಸಬ್ಜೆಕ್ಟ್ ಸ್ಕಾಲರ್‌ಶಿಪ್ ನನಗೇ ದೊರೆಯಿತು. ಶ್ರೀಗಳವರ ದೂರದೃಷ್ಟಿಗೆ ಮಾರುಹೋದೆ. ಇಂದಿನ ನನ್ನ ಎಲ್ಲ ಪದವಿ ಪ್ರಶಸ್ತಿ ಪುರಸ್ಕಾರಗಳಿಗೆ ಪರಮಪೂಜ್ಯರೇ ಕಾರಣೀಭೂತರಾಗಿದ್ದಾರೆ. ಅವರ ಶ್ರೀಪಾದಗಳಿಗೆ ನಮೋ ನಮೋ ಎಂದು ನಮಿಸುತ್ತೇನೆ.

ನಾನು ಬಿ.ಎ. ಆನರ್ಸ್ ಮುಗಿಸಿ ಎಂ.ಎ. ಸೇರಿದ ಕೆಲವು ತಿಂಗಳಾದ ಮೇಲೆ ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯಿಂದ "ಗ್ರಾಜುಯೆಟ್ ಕನ್ನಡ ಸ್ಪೆಷಲಿಸ್ಟ್" ಹುದ್ದೆಗೆ ನೇಮಕಾತಿ ಆದೇಶ ಬಂದಿತು. ನಾನು ಕನ್ನಡ ಎಂ.ಎ. ತರಗತಿ ಸೇರಿಕೊಂಡಿದ್ದುದರಿಂದ ಆ ಓದು ಮುಂದುವರಿಸುವುದಕ್ಕೂ ಕಚೇರಿಯಲ್ಲಿ ಕೆಲಸ ಮುಂದುವರಿಸುವುದಕ್ಕೂ ಅವಕಾಶ ಸಿಕ್ಕಿತು. ಹೀಗಾಗಿ ಆ ವರ್ಷ ಎಂ.ಎ.ಯನ್ನು ಮುಗಿಸಿಕೊಂಡೆ. ಕೆಲಸದಲ್ಲೂ ಮುಂದುವರೆದೆ.

ನನ್ನ ವಿದ್ಯಾಗುರುಗಳಾದ ಡಿ.ಎಲ್. ನರಸಿಂಹಾಚಾರ್ ಅವರು ಗ್ರಂಥಗಳ ಪರಿಶೀಲನೆಗಾಗಿ ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಗೆ ಆಗಾಗ ಬರುತ್ತಿದ್ದರು. ಒಂದು ದಿನ ಅವರು ನಮ್ಮ ಕಚೇರಿಗೆ ಬಂದಿದ್ದಾಗ ನೇರವಾಗಿ ನನ್ನಲ್ಲಿಗೆ ಬಂದು

"ಬೆಂಗಳೂರಿಗೆ ಹೋಗೋಣ ಬರ್ತೀಯೇನಯ್ಯ" ಎಂದು ಕೇಳಿದರು. ನಾನು ಮರುಮಾತಾಡದೆ "ಆಗಲಿ ಸಾರ್" ಎಂದುಬಿಟ್ಟೆ. ಅದಾದ ಸ್ವಲ್ಪದಿನಗಳಲ್ಲಿ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಪ್ರಧಾನ ಸಂಪಾದಕರಾಗಿ ನೇಮಕಗೊಂಡು ನನ್ನನ್ನು ಪ್ರಧಾನ ಸಂಪಾದಕರಿಗೆ ಸಹಾಯಕನಾಗಿ ನಿಯಮಾನುಸಾರ ನಿಘಂಟಿನ ಕೆಲಸಕ್ಕೆ ಎರವಲು ಸೇವೆಯ ಮೇರೆಗೆ ಕರೆಸಿಕೊಂಡರು. ನಾನು ಪ್ರಧಾನ ಸಂಪಾದಕರಿಗೆ ಸಹಾಯಕನಾಗಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಕಚೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದೆ. ಪ್ರಕಟಿತ ಶಾಸನಗಳಿಂದ ನಿಘಂಟಿಗೆ ಶಬ್ದಗಳನ್ನು ಸಂಗ್ರಹಿಸಲು ಉದಕಮಂಡಲದ ಕೇಂದ್ರ ಶಾಸನ ಕಚೇರಿಗೆ ಕಳಿಸಿಕೊಟ್ಟರು. ಅಲ್ಲಿಯ ಅಪ್ರಕಟಿತ ಶಾಸನಗಳಿಂದ ಸಹಸ್ರಾರು ಶಬ್ದಗಳನ್ನು ಸಂಗ್ರಹಿಸಿಕೊಂಡು ಬಂದೆ.

ನನ್ನ ಗುರುಗಳು ನಿಘಂಟು ಕಚೇರಿಗೆ ಬಂದು ವರ್ಷವಾಗುತ್ತಲೆ ಅವರು ಮೈಸೂರು ಮಹಾರಾಜ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ನೇಮಕಗೊಂಡು ಹೊರಟು ಹೋದರು. ಆಗ ನಿಘಂಟು ಸಂಪಾದಕ ಸಮಿತಿಯ ಅಧ್ಯಕ್ಷರಾಗಿದ್ದ ಡಾ. ಎ.ಆರ್. ಕೃಷ್ಣಶಾಸ್ತ್ರಿಗಳು ಡಿ.ಎಲ್. ನರಸಿಂಹಾಚಾರ್ಯರ ಪ್ರಧಾನ ಸಂಪಾದಕತ್ವವನ್ನು ವಹಿಸಿಕೊಳ್ಳುವಂತೆ ನನಗೆ ಹೇಳಿದರು. "ನನಗೆ ಆ ಅರ್ಹತೆಯಿಲ್ಲ, ಬೇಡ" ಎಂದು ಎಷ್ಟು ಹೇಳಿದರೂ ಕೇಳದೆ ನನ್ನನ್ನೇ ಆ ಸ್ಥಾನಕ್ಕೆ ನೇಮಿಸಿಕೊಳ್ಳಬೇಕು ಎಂದು ಪರಿಷತ್ತಿಗೆ ಅಧಿಕೃತ ಪತ್ರವನ್ನು ಬರೆದುಬಿಟ್ಟರು. ಆದರೆ ಅದು ಹೇಗೋ ತಪ್ಪಿ ನನ್ನ ಮತ್ತೊಬ್ಬ ಗುರುಗಳಾದ ಎಲ್. ಗುಂಡಪ್ಪನವರನ್ನು ಸಂಪಾದಕರನ್ನಾಗಿ ನೇಮಿಸಿಕೊಂಡರು.

**ಕನ್ನಡ ಸಾಹಿತ್ಯ ನಿಘಂಟಿನ ಕನ್ನಡ ನಿಘಂಟು:**

ಕನ್ನಡ ನಿಘಂಟು ಕಾರ್ಯದಲ್ಲಿ ೧೯೫೪ ರಿಂದ ನಿರತನಾಗಿದ್ದ ನಾನು ೧೯೬೩ರಲ್ಲಿ ನಿಘಂಟಿನ ಸಂಪಾದಕನಾಗಿ ನೇಮಕಗೊಂಡೆ. ನಿಘಂಟಿನ ಮೊದಲನೆಯ ಸಂಪುಟ ೧೯೭೦ರಲ್ಲಿ ಬಿಡುಗಡೆಯಾಯಿತು. ಕೊನೆಯದಾದ ಎಂಟನೆಯ ಸಂಪುಟ ೧೯೯೫ರಲ್ಲಿ ಬಿಡುಗಡೆಯಾಯಿತು. ಎಂಟು ಸಂಪುಟಗಳಲ್ಲಿ ಹತ್ತುಸಾವಿರ ಪುಟಗಳಲ್ಲಿ ಪ್ರಕಟವಾಗಿರುವ ಈ ನಿಘಂಟಿನಲ್ಲಿ ಸುಮಾರು ಎರಡು ಲಕ್ಷ ಪದಗಳು ಎಡೆಪಡೆದಿವೆ. ಈ ತೆರನ ನಿಘಂಟು ಇನ್ನಾವ ಭಾರತೀಯ ಭಾಷೆಗೂ ಈವರೆಗೆ ಸಿದ್ಧವಾದಂತೆ ತಿಳಿದುಬಂದಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿಗೆ ಈ ಕಾರ್ಯ ಶಾಶ್ವತ ಕೀರ್ತಿಯನ್ನು ತಂದುಕೊಟ್ಟಿದೆ.

ಕನ್ನಡ ಸಾಹಿತ್ಯ ಪರಿಷತ್ತಿಗೆ ಮಕುಟಪ್ರಾಯವಾಗಿರುವ ಈ ಕನ್ನಡ ನಿಘಂಟಿನ ಒಂದು ಸ್ಥೂಲಪರಿಚಯವನ್ನು ಮಾಡಿಕೊಡಲಾಗಿದೆ. ಕನ್ನಡ ಸಾಹಿತ್ಯ ಪರಿಷತ್ತು ಕೈಗೊಂಡಿರುವ ಈ ಕನ್ನಡ ನಿಘಂಟು ಭಾಷಾಶಾಸ್ತ್ರ ತತ್ವಗಳಿಗೆ ಅನುಸಾರವಾದ ಚಾರಿತ್ರಿಕ ವಿವರಣೆಯಿಂದ ಕೂಡಿರುವ ಪ್ರಮಾಣಭೂತವಾದ ನಿಘಂಟು. ಈ ನಿಘಂಟು ಸುಮಾರು ಹತ್ತುಸಾವಿರ ಪುಟಗಳನ್ನು ಒಳಗೊಂಡು ಎಂಟು ಸಂಪುಟಗಳಲ್ಲಿ ಪ್ರಕಟವಾಗಿದೆ. ಈ ನಿಘಂಟಿನ ಪ್ರತಿಸಂಪುಟದಲ್ಲಿ ಸುಮಾರು ಸಾವಿರದ ಇನ್ನೂರು ಐವತ್ತು ಪುಟಗಳಿವೆ.

ಕನ್ನಡ ಭಾಷೆಯಲ್ಲಿನ ಎಲ್ಲ ತೆರನ ಸಾಹಿತ್ಯವನ್ನೂ ಚೆನ್ನಾಗಿ ಪರಿಶೋಧಿಸಿ ಪ್ರಯೋಗಗಳನ್ನು ವಿಪುಲವಾಗಿ ಸಂಗ್ರಹಿಸಲಾಗಿದೆ. ಗ್ರಾಮ್ಯವಲ್ಲದ ದೇಶ್ಯ, ಅನ್ಯದೇಶ್ಯ, ತತ್ಸಮ, ತದ್ಭವ ಶಬ್ದಗಳನ್ನು ಈ ನಿಘಂಟಿನಲ್ಲಿ ಸೇರಿಸಿಕೊಳ್ಳಲಾಗಿದೆ. ಕ್ರಿ.ಶ. ಸು. ೪೫೦ರ ಹಲ್ಮಿಡಿ ಶಾಸನದಿಂದ ಹಿಡಿದು ಕ್ರಿ.ಶ. ೧೮೦೦ ರವರೆಗಿನ ಪ್ರಕಟಿತ ಅಪ್ರಕಟಿತ ಶಾಸನಗಳನ್ನೆಲ್ಲಾ ಅವಲೋಕಿಸಲಾಗಿದೆ. ಎಪಿಗ್ರಾಫಿಯ ಇಂಡಿಕ, ಎಪಿಗ್ರಾಫಿಯ ಕರ್ನಾಟಕ, ಇಂಡಿಯನ್ ಆಂಟಿಕ್ವೆರಿ, ಸೌತ್ ಇಂಡಿಯನ್ ಇನ್ಸ್‌ಸ್ಕ್ರಿಪ್ಷನ್ಸ್, ಬೊಂಬೆ ಕರ್ನಾಟಕ್ ಇನ್ಸ್‌ಸ್ಕ್ರಿಪ್ಷನ್ಸ್, ಕರ್ನಾಟಕ್ ಇನ್ಸ್‌ಸ್ಕ್ರಿಪ್ಷನ್ಸ್, ಮೈಸೂರ್ ಆರ್ಕಿಯಾಲಜಿಕಲ್ ರಿಪೋರ್ಟ್ಸ್, ಹೈದರಾಬಾದ್ ಆರ್ಕಿಯಾಲಜಿಕಲ್ ರಿಪೋರ್ಟ್ಸ್, ಕೊಲ್ಲಾಪುರ್ ಇನ್ಸ್‌ಸ್ಕ್ರಿಪ್ಷನ್ಸ್ –ಇವೇ ಮೊದಲಾದ ಸಂಪುಟಗಳಲ್ಲಿಯ ಸುಮಾರು ಹತ್ತು ಸಾವಿರ ಶಾಸನಗಳನ್ನು ಪರಿಶೀಲಿಸಲಾಗಿದೆ. ಕ್ರಿ.ಶ. ೧೦೫೦ರ ಒಳಗೆ ರಚಿತವಾದ ಕನ್ನಡ ಗ್ರಂಥಗಳಲ್ಲೂ ಶಾಸನಗಳಲ್ಲೂ ದೊರೆಯುವ ಸಂಸ್ಕೃತ, ದೇಶ್ಯ, ಅನ್ಯದೇಶ್ಯ, ತತ್ಸಮ, ತದ್ಭವ ಪದಗಳನ್ನೂ ಅಲ್ಲಿಂದ ಮುಂದಕ್ಕೆ ಕ್ರಿ.ಶ. ೧೨೫೦ರ ಒಳಗೆ ರಚಿತವಾದ ಎಲ್ಲ ಗ್ರಂಥಗಳನ್ನೂ ಶಾಸನಗಳನ್ನೂ ಶೋಧಿಸಿ, ರೂಪ ಅರ್ಥ ಅಪೂರ್ವತೆ ಈ

ಮೊದಲಾದ ದೃಷ್ಟಿಗಳಿಂದ ಗಮನಾರ್ಹ ಪದಗಳನ್ನು ಆರಿಸಿಕೊಂಡಿದೆ. ಮುದ್ರಿತ ಗ್ರಂಥಗಳೇ ಅಲ್ಲದೆ ಅಮುದ್ರಿತ ಗ್ರಂಥಗಳಿಂದಲೂ ಶಬ್ದಗಳನ್ನು ಸಂಗ್ರಹಿಸಿ ಪಟ್ಟಿಕೆಗಳಲ್ಲಿ ಬರೆಯಲಾಗಿದೆ. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಪ್ರಚಾರದಲ್ಲಿರುವ ಕ್ರಮಿಕ ಪತ್ರಪುಸ್ತಕಗಳಲ್ಲಿ ದೊರೆಯುವ ಸ್ಥಳೀಯ ಶಬ್ದಗಳನ್ನು ಜನಪದ ಸಾಹಿತ್ಯದಲ್ಲಿ ದೊರೆಯುವ ಪದಗಳನ್ನೂ ಸಂಗ್ರಹಿಸುವುದರ ಜೊತೆಗೆ ಬಳಕೆಯಲ್ಲಿರುವ ಹಲವಾರು ಶಬ್ದಗಳನ್ನೂ ಅವಕ್ಕೆ ಗ್ರಂಥಾಧಾರ ದೊರೆಯದಿದ್ದರೂ ಈ ನಿಘಂಟಿನಲ್ಲಿ ಸೇರಿಸಿಕೊಳ್ಳಲಾಗಿದೆ.

ಕನ್ನಡದಲ್ಲಿ ಉಪಲಬ್ಧವಾಗಿರುವ ಮೊಟ್ಟಮೊದಲ ಗ್ರಂಥವಾದ ನೃಪತುಂಗನ ಕವಿರಾಜಮಾರ್ಗದಿಂದ ಹಿಡಿದು ಇಂದಿನ ಕಾಲಪರಿಮಿತಿಯಲ್ಲಿ ಬರುವ ಹಳಗನ್ನಡ ನಡುಗನ್ನಡ ಹೊಸಗನ್ನಡದ ಅನೇಕಾನೇಕ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳನ್ನು ಪರಿಶೀಲಿಸಲಾಗಿದೆ. ಕರ್ನಾಟಕದ ಬೇರೆ ಬೇರೆ ಪ್ರದೇಶಗಳಿಂದ ಪ್ರಾತಿನಿಧಿಕವಾದ ಹಲವು ಆಧುನಿಕ ಗದ್ಯಪದ್ಯ ಗ್ರಂಥಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಇದರ ಜೊತೆಗೆ ವೈದ್ಯಶಾಸ್ತ್ರ, ಅಶ್ವಶಾಸ್ತ್ರ, ಗಜಶಾಸ್ತ್ರ, ಛಂದಶ್ಶಾಸ್ತ್ರ, ಅಲಂಕಾರಶಾಸ್ತ್ರ, ಜ್ಯೋತಿಶ್ಶಾಸ್ತ್ರ, ತತ್ವಶಾಸ್ತ್ರ, ಕಾಮಶಾಸ್ತ್ರ, ಗಣಿತಶಾಸ್ತ್ರ ಮುಂತಾದವುಗಳಿಗೆ ಸಂಬಂಧಿಸಿದ ಶಾಸ್ತ್ರೀಯ ಗ್ರಂಥಗಳಿಂದಲೂ ಶಬ್ದಗಳನ್ನು ಆರಿಸಿಕೊಳ್ಳಲಾಗಿದೆ. ಅಲ್ಲದೆ ಕನ್ನಡ ನಾಡಿನಲ್ಲಿ ಪ್ರಚುರವಾಗಿರುವ ಜೈನ, ವೀರಶೈವ, ಬ್ರಾಹ್ಮಣ ಮೊದಲಾದ ಧರ್ಮಗಳಿಗೆ ಸಂಬಂಧಿಸಿದ ಪಾರಿಭಾಷಿಕ ಶಬ್ದಗಳನ್ನೂ ಸಂಗೀತ, ನೃತ್ಯ, ಶಿಲ್ಪ ಮೊದಲಾದ ಕಲೆಗಳಿಗೆ ಸಂಬಂಧಿಸಿದ ಪ್ರಾಚೀನ ಪಾರಿಭಾಷಿಕ ಶಬ್ದಗಳನ್ನೂ ಸಂಗ್ರಹಿಸಲಾಗಿದೆ.

ಇಷ್ಟು ಮಾತ್ರವಲ್ಲದೆ ಇದುವರೆಗೆ, ಕನ್ನಡದಲ್ಲಿ ಬಂದಿರುವ ಅನೇಕ ನಿಘಂಟುಗಳ ಉಪಯೋಗವನ್ನೂ ಇಲ್ಲಿ ಮಾಡಿಕೊಳ್ಳಲಾಗಿದೆ. ಕಿಟೆಲ್ ಅವರ ಕನ್ನಡ ಇಂಗ್ಲಿಷ್ ನಿಘಂಟಂತೂ ಈ ನಿಘಂಟಿಗೆ ಒಂದು ಮುಖ್ಯವಾದ ಆಧಾರಗ್ರಂಥ. ಜೊತೆಗೆ ಕಿಟೆಲ್ ಅವರಿಗಿಂತ ಹಿಂದೆ ರಚಿತವಾದ ರೆ॥ ರೀವ್ ಅವರ ಕನ್ನಡ-ಇಂಗ್ಲಿಷ್ ನಿಘಂಟು, ಗಂಗಾಧರ ಮಡಿವಾಳೇಶ್ವರ ತುರಮುರಿಯವರ ಕನ್ನಡ-ಕನ್ನಡ ನಿಘಂಟು, ಗುರುರಾವ್ ವಿಠ್ಠಲ ಮೋಹರೆಯವರ ಕನ್ನಡ-ಕನ್ನಡ ನಿಘಂಟು ಮುಂತಾದುವನ್ನೂ ಕಿಟೆಲ್ ಅವರ ತರುವಾಯ ಪಂಡಿತ ಪ್ರಭಣ್ಣನವರ ಕನ್ನಡ-ಕನ್ನಡ ನಿಘಂಟು, ಪರಿಷತ್ತಿನ ನಿಘಂಟುಗಳ ನಿಘಂಟು, ಪಂಪಭಾರತ ನಿಘಂಟು, ಷಟ್ಪದೀಕಾವ್ಯಗಳ ನಿಘಂಟು, ತಿರುಮಕೂಡ್ಲು ಶಾಮಣ್ಣನವರ ನಿಘಂಟು, ಮಠದ ರುದ್ರಯ್ಯನವರ ನಿಘಂಟು, ಟಿ.ಕೆ. ಅನಂತನಾರಾಯಣ ಅವರ ನಿಘಂಟು ಮೊದಲಾದ ಅಮುದ್ರಿತ ನಿಘಂಟುಗಳನ್ನು ಬಳಸಿಕೊಳ್ಳಲಾಗಿದೆ. ಇದರ ಜೊತೆಗೆ ಹಲವಾರು ಹಳಗನ್ನಡ, ನಡುಗನ್ನಡ, ಹೊಸಗನ್ನಡದ ಮುದ್ರಿತ ನಿಘಂಟುಗಳನ್ನೂ ಉಪಯೋಗಿಸಿಕೊಂಡಿದೆ.

ಸಂಸ್ಕೃತ ಶಬ್ದಗಳಿಗೆ ಈ ನಿಘಂಟಿನಲ್ಲಿ ಒಂದು ಮಹತ್ವದ ಸ್ಥಾನವಿದೆ. ಕನ್ನಡ ಕಾವ್ಯಗಳಲ್ಲಿ ಬಂದಿರುವ ಸಂಸ್ಕೃತ ಶಬ್ದಗಳು, ಕಿಟೆಲ್ ಅವರ ನಿಘಂಟಿನಲ್ಲಿರುವ ಸಂಸ್ಕೃತ ಶಬ್ದಗಳು ಈ ನಿಘಂಟಿನಲ್ಲಿ ಬರುತ್ತವೆ.

ಕನ್ನಡ ನಿಘಂಟಿನಲ್ಲಿ ಮುಖ್ಯ ಉಲ್ಲೇಖಗಳಾಗಿ ಸೇರಿಸುವ ಶಬ್ದಗಳನ್ನು ಕ್ರಿಯಾಪದ, ನಾಮವಾಚಕ, ಗುಣವಾಚಕ, ಅವ್ಯಯ, ಪ್ರತ್ಯಯ ಎಂದು ವಿಂಗಡಿಸಲಾಗಿದೆ. ಮುಖ್ಯ ಶಬ್ದಗಳನ್ನು ಕೊಟ್ಟಕೂಡಲೇ ಅದರ ಪಕ್ಕದಲ್ಲಿ ದುಂಡನೆಯ ಕಂಸದೊಳಗೆ ಆ ಶಬ್ದದ ಜಾತಿಯನ್ನು (ಕ್ರಿ), (ನಾ), (ಗು), (ಅ), (ಪ್ರ) ಎಂಬ ಸಂಕೇತಗಳಿಂದ ಸೂಚಿಸಲಾಗಿದೆ. ತರುವಾಯ ಅರ್ಥಗಳನ್ನು ವಿವರಿಸಿದೆ. ಪ್ರತಿಯೊಂದು ಶಬ್ದದ ಅರ್ಥನಿರ್ಣಯಕ್ಕೂ ಪ್ರಯೋಗಗಳನ್ನೇ ಮುಖ್ಯ ಆಧಾರವಾಗಿ ಇಟ್ಟುಕೊಳ್ಳಲಾಗಿದೆ. ಶಬ್ದಗಳಿಗೆ ಅರ್ಥಗಳನ್ನು ಕೊಡುವಾಗ ಮೊದಲು ವಾಚ್ಯಾರ್ಥವನ್ನೂ ಆಮೇಲೆ ಲಕ್ಷ್ಯಾರ್ಥವನ್ನೂ ಕೊಡಲಾಗಿದೆ. ಎಲ್ಲ ಅರ್ಥಗಳಿಗೂ ಪ್ರಯೋಗಗಳನ್ನು ಕಾಲಾನುಕ್ರಮದಲ್ಲಿ ತೋರಿಸಲಾಗಿದೆ. ಹೀಗೆಯೇ ಒಂದು ಶಬ್ದಕ್ಕೆ ಹಲವು ಅರ್ಥಗಳಿದ್ದಾಗ ಈ ಅರ್ಥಗಳನ್ನು ಚಾರಿತ್ರಿಕ ದೃಷ್ಟಿಯಿಂದ ಬೇರ್ಪಡಿಸಿ ಪ್ರತಿಯೊಂದು ಅರ್ಥಕ್ಕೂ ಸಂಬಂಧಿಸಿದ ಪ್ರಯೋಗಗಳನ್ನು ಕಾಲಾನುಕ್ರಮದಲ್ಲಿ ವಿವರಿಸಿದೆ.

ಪ್ರತಿಯೊಂದು ಮುಖ್ಯಶಬ್ದದ ನಿಷ್ಪತ್ತಿಯನ್ನು ಶಬ್ದದ ಕೆಳಗೇ ಸೂಚಿಸಲಾಗಿದೆ. ಸಮಾಸಗಳಲ್ಲಿಯ ಶಬ್ದಗಳನ್ನು ನಿಷ್ಪತ್ತಿಯಲ್ಲಿ ಬಿಡಿಸಿ ತೋರಿಸಿದೆ. ಒಂದು ಶಬ್ದ ಸಂಸ್ಕೃತಭಾಷೆಯದಾಗಿದ್ದಲ್ಲಿ ಚೌಕಕಂಸದಲ್ಲಿ (ಸಂ) ಎಂದು ಕೊಟ್ಟಿದೆ.

ದೇಶ್ಯ ಶಬ್ದವಾಗಿದ್ದಲ್ಲಿ (ದೇ) ಎಂದು ಸೂಚಿಸಿ ಇತರ ದ್ರಾವಿಡ ಭಾಷೆಗಳಲ್ಲಿ ಕಂಡುಬರುವ ಜ್ಞಾತಿಶಬ್ದಗಳನ್ನು ಉಲ್ಲೇಖಿಸಲಾಗಿದೆ. ಅನ್ಯದೇಶ್ಯ ಶಬ್ದಗಳಿಗೆ ಅವು ಯಾವ ಭಾಷೆಗಳಿಂದ ಬಂದುವು ಎಂಬುದನ್ನು ← ಈ ಚಿಹ್ನೆಯ ಮೂಲಕ ಸೂಚಿಸಿ ಆಮೇಲೆ ಆಧಾರ ಶಬ್ದಗಳನ್ನು ಕೊಟ್ಟಿದೆ. ನಿಷ್ಪತ್ತಿ ಗೊತ್ತಿಲ್ಲದ ಶಬ್ದಗಳಿಗೆ ಪ್ರಶ್ನಾರ್ಥಕ ಚಿಹ್ನೆಯನ್ನು ಹಾಕಿ ಸೂಚಿಸಿದೆ.

ಕನ್ನಡ ನಿಘಂಟು ಕಿಟೆಲ್ ಅವರ ಕನ್ನಡ ಇಂಗ್ಲಿಷ್ ನಿಘಂಟಿನಿಂದ ಅತಿಶಯವಾಗಿ ಸಹಾಯ ಪಡೆದಿದ್ದರೂ ಇದು ಅದರ ಪ್ರತಿಕೃತಿಯಲ್ಲ. ಆ ನಿಘಂಟಿಗಿಂತಲೂ ಹಲವಾರು ಹೆಜ್ಜೆಗಳನ್ನು ಮುಂದಿಟ್ಟಿದೆ. ಕಿಟೆಲ್ ಅವರಿಗೆ ದೊರೆಯದಿದ್ದ ಶಾಸನಗಳನ್ನೂ ಗ್ರಂಥಗಳನ್ನು ಲೇಖನಗಳನ್ನೂ ಇಲ್ಲಿ ಹೇರಳವಾಗಿ ಉಪಯೋಗಿಸಿಕೊಂಡಿದೆ. ಭಾಷಾದೃಷ್ಟಿಯ ಕಡೆ ವಿಶೇಷ ಗಮನವನ್ನು ಹರಿಸಿದೆ. ಕನ್ನಡ ಜನತೆಯ ಇಂದಿನ ಅವಶ್ಯಕತೆಗಳಿಗೆ ತಕ್ಕಂತೆ ಇಂದಿನ ವಿದ್ವತ್ತನ್ನು ಪ್ರತಿಬಿಂಬಿಸುವಂತೆ ರಚಿತವಾಗಿ ಪ್ರಕಟವಾಗಿರುವ ಈ ಕನ್ನಡ ನಿಘಂಟು ಕನ್ನಡ ಜನತೆಯ ಬಹುದಿನದ ಆಶೋತ್ತರವನ್ನು ಈಡೇರಿಸಿದೆ ಎಂದು ನಂಬಲಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿ ಮತ್ತು ಜನಪದ ಇವುಗಳ ರಕ್ಷಣೆ, ಪ್ರಸಾರ ಮತ್ತು ಅಭಿವೃದ್ಧಿಗಾಗಿ ೧೯೧೫ರಲ್ಲಿ ಸ್ಥಾಪಿತವಾಯಿತು. ಪರಿಷತ್ತಿನ ನಿಬಂಧನೆಗಳು ನಂ.೫(ಉ) "ವ್ಯಾಕರಣ, ನಿಘಂಟು, ಚರಿತ್ರೆ, ವಿಜ್ಞಾನ, ಸಮಾಜವಿಜ್ಞಾನ, ಮಾನವಿಕ ಪರಿಶೋಧನೆ, ತತ್ವವಿಜ್ಞಾನ, ಪಾರಿಭಾಷಿಕ ಕೋಶ, ಸಾಹಿತ್ಯ, ಕಲೆ, ಧರ್ಮ, ದರ್ಶನ ಇತ್ಯಾದಿ ವಿಷಯಗಳನ್ನು ಕುರಿತು ಗ್ರಂಥ ಪ್ರಕಟಣೆಗೆ ಸಹಾಯ ಪ್ರಚಾರ ಮತ್ತು ಮಾರಾಟ" ಎಂದು ಹೇಳಿದೆ.

ಪರಿಷತ್ತಿನ ಕಾರ್ಯಸಮಿತಿ ಈ ನಿಯಮದಂತೆ ನಿಘಂಟಿನ ಕಾರ್ಯವನ್ನು ಕೈಗೆತ್ತಿಕೊಂಡಿತು. ಇದರ ಮುದ್ರಣವನ್ನು ಪರಿಷತ್ತಿನಲ್ಲಿ ಬಿ.ಎಂ. ಶ್ರೀಕಂಠಯ್ಯನವರ ಹೆಸರಿನಲ್ಲಿ ಸ್ಥಾಪಿತವಾಗಿದ್ದ ಅಚ್ಚುಕೂಟದಲ್ಲೇ ಪ್ರಾರಂಭಿಸಲಾಯಿತು. ಈ ಅಚ್ಚುಕೂಟದಲ್ಲಿ ಡಿಟಿಪಿ ವ್ಯವಸ್ಥೆ ಇರಲಿಲ್ಲ. ಆದುದರಿಂದ ನಿಘಂಟಿನ ಮುಂದಿನ ಸಂಪುಟಗಳಲ್ಲಿ ಒಂದೆರಡು ಖಾಸಗಿ ಮುದ್ರಣಾಲಯಗಳಲ್ಲೂ ಉಳಿದವನ್ನು ಸರ್ಕಾರಿ ಮುದ್ರಣಾಲಯದಲ್ಲೂ ಅಚ್ಚುಮಾಡಿಸಲಾಯಿತು. ಮುದ್ರಣದ ಈ ಎಲ್ಲ ಅನನುಕೂಲಗಳನ್ನು ಕಂಡು ಕನ್ನಡ ಸಾಹಿತ್ಯ ಪರಿಷತ್ತಿಗೇ ಒಂದು ಸುಸಜ್ಜಿತ ಮುದ್ರಣಾಲಯವಿದ್ದಿದ್ದರೆ ಎಷ್ಟು ಅನುಕೂಲವಾಗುತ್ತಿತ್ತಲ್ಲ ಎಂದು ನನಗೆ ಮನವರಿಕೆಯಾಯಿತು.

೧೯೯೮ರ ಪರಿಷತ್ತಿನ ಚುನಾವಣೆಗಳು ಬಂದುವು. ಅಧ್ಯಕ್ಷ ಸ್ಥಾನಕ್ಕೆ ನನ್ನನ್ನು ನಿಲ್ಲಿಸಲು ಕೆಲವು ಮಿತ್ರರು ಮುಂದಾದರು. ನಿಘಂಟಿನ ಮುದ್ರಣ ಕಾರ್ಯದಲ್ಲಿ ನಾನು ಅನುಭವಿಸಿದ್ದ ತೊಂದರೆಗಳ ಚಿತ್ರ ಕಣ್ಣಮುಂದೆ ಸುಳಿದಾಡಿ ನಾನು ಚುನಾವಣೆಗೆ ನಿಂತು ಪರಿಷತ್ತಿನ ಅಧ್ಯಕ್ಷನಾದರೆ ಒಂದು ಸುಸಜ್ಜಿತ ಮುದ್ರಣಾಲಯವನ್ನು ಸ್ಥಾಪಿಸಿ ಅಲಭ್ಯವಾಗಿದ್ದ ನಿಘಂಟುಗಳನ್ನೆಲ್ಲ ಅಚ್ಚುಮಾಡಿಸಬಹುದಲ್ಲ ಎಂಬ ಕನಸನ್ನು ಕಂಡೆ. ಆದರೆ ಈ ಕನಸು ನನಸಾಯಿತು. ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗಿ ಆಯ್ಕೆಯಾದೆ. ಮುದ್ರಣಾಲಯದ ಅನುಭವವಿರುವವರನ್ನೂ ಸರ್ಕಾರಿ ಮುದ್ರಣಾಲಯದ ನಿರ್ದೇಶಕರನ್ನೂ ಸಂಪರ್ಕಿಸಿ ನಿಯಮಾನುಸಾರ ಸುಸಜ್ಜಿತ ನೂತನ ಮುದ್ರಣಾಲಯವನ್ನು ಸ್ಥಾಪಿಸಲಾಯಿತು.

ನಿಘಂಟಿನ ಮತ್ತು ಪರಿಷತ್ತಿನ ಪ್ರಕಟಣೆಗಳು –ಇವುಗಳ ಅಂದಾಜು ವೆಚ್ಚದ ಪತ್ರವನ್ನು ಸಿದ್ಧಪಡಿಸಿ ಅಂದಿನ ಮುಖ್ಯಮಂತ್ರಿಗಳಾಗಿದ್ದ ಸನ್ಮಾನ್ಯ ಶ್ರೀ ಎಸ್.ಎಂ. ಕೃಷ್ಣ ಅವರನ್ನು ಭೇಟಿ ಮಾಡಿದಾಗ ಸನ್ಮಾನ್ಯ ಮುಖ್ಯಮಂತ್ರಿಗಲು ನಿಘಂಟುಗಳು ಮತ್ತು ಇತರ ಗ್ರಂಥಗಳ ಮುದ್ರಣಕ್ಕೆ ಒಂದೂವರೆ ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡಿದರು. ನಿಘಂಟಿನ ಲಕ್ಷಾಂತರ ಪ್ರತಿಗಳು ಅತ್ಯಂತ ಸೊಗಸಾಗಿ ಮುದ್ರಣವಾದುವು.

ಬಂಧುಗಳೇ: ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದು ಅರವತ್ತಮೂರು ವರ್ಷಗಳಾದುವು. ನಾವು ಸಾಧಿಸಿರುವ ಪ್ರಗತಿಯಾದರೂ ಏನು? ಸ್ವಾತಂತ್ರ್ಯ ನಮಗೆ ಸ್ವಾರ್ಥವನ್ನೂ ಸ್ವಚ್ಛಂಧತೆಯನ್ನೂ ತಂದುಕೊಟ್ಟಿದೆ.

ಕರ್ನಾಟಕ ಏಕೀಕರಣವಾಗಿ ಐವತ್ತು ನಾಲ್ಕು ವರ್ಷಗಳಾಗಿದ್ದರೂ ಕನ್ನಡ ಶಿಕ್ಷಣ ಮಾಧ್ಯಮವಾಗಲಿಲ್ಲ. ಕನ್ನಡ ಆಡಳಿತ ಭಾಷೆಯಾಗಲಿಲ್ಲ. ಕರ್ನಾಟಕದಲ್ಲಿ ಕನ್ನಡಿಗರೇ ಅಲ್ಪಸಂಖ್ಯಾತರಾಗುವ ಕಾಲ ಸನ್ನಿಹಿತವಾಗುತ್ತಿದೆ.

"ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ದೊರಕಿದ್ದರೂ ಅದರ ಅನುಷ್ಠಾನ ನಿರೀಕ್ಷಿತ ಮಟ್ಟದಲ್ಲಾಗುತ್ತಿಲ್ಲ. ಈ ಅನ್ಯಾಯ ಸರಿಪಡಿಸುವಂತೆ ರಾಜ್ಯಸರ್ಕಾರ ಕೇಂದ್ರದ ಮೇಲೆ ಒತ್ತಡ ಹೇರುತ್ತಲೇ ಇದೆ" ಎಂದು ಸನ್ಮಾನ್ಯ ಮುಖ್ಯಮಂತ್ರಿಗಳು ೨೦.೨.೨೦೧೧ರ ಗದಗ ಸಮ್ಮೇಳನದಲ್ಲಿ ಹೇಳಿದ್ದಾರೆ.

ನಾವು ಇಂದು ವಿಜ್ಞಾನ ಮತ್ತು ತಂತ್ರಜ್ಞಾನ ಯುಗದಲ್ಲಿದ್ದೇವೆ. ಮಾನವ ಜೀವನ ಕೇವಲ ಯಂತ್ರಮಯವಾಗಿವೆ. ಅವನ ನೋವು-ನಲಿವುಗಳಿಗೆ ನೆಲೆಬೆಲೆ ಇಲ್ಲದಂತಾಗಿದೆ. ಆಧುನಿಕ ಜೀವನದ ಮೌಲ್ಯಗಳೆಲ್ಲ ಕುಸಿದು ಬಿದ್ದಿವೆ. ಇಂದಿನ ಜಾಗತೀಕರಣ ಖಾಸಗೀಕರಣ ಉದಾರೀಕರಣಗಳು ನಮ್ಮ ಕರಣಗಳನ್ನೆಲ್ಲ ತಿಂದುಹಾಕಿಬಿಟ್ಟಿವೆ. ಇಡೀ ದೇಶದಲ್ಲಿ ಅನಾಚಾರ, ಅತ್ಯಾಚಾರ, ಭ್ರಷ್ಟಾಚಾರಗಳು ತಾಂಡವವಾಡುತ್ತಿವೆ. ಕೊಲೆ, ದರೋಡೆ, ಸುಲಿಗೆ ಇವು ನಿರಂತರವಾಗಿ ನಡೆಯುತ್ತಿವೆ. ಧರ್ಮಪ್ರಧಾನವಾದ ಈ ನಾಡಿನಲ್ಲಿ ಬದುಕು ದುಸ್ತರವಾಗಿದೆ. ಸಾವು ಸಹಜವಾಗಿದೆ. ಹೊಟ್ಟೆಬಟ್ಟೆಗಿಲ್ಲದೆ, ದುಡಿಯಲು ಕೆಲಸವಿಲ್ಲದೆ ಯುವಜನತೆ ಕಂಗಾಲಾಗಿ ಹೋಗಿದೆ. ಭವಿಷ್ಯವೇ ಇಲ್ಲವೇನೋ ಎಂದು ಚಿಂತಾಕ್ರಾಂತವಾಗಿದೆ. ದುಡಿಯುವ ರೈತ ಹಲವಾರು ಸಮಸ್ಯೆಗಳಿಂದ ಸಾವಿಗೆ ಶರಣಾಗುತ್ತಿದ್ದಾನೆ. "ಸರ್ವೇ ಜನಾಃ ಸುಖಿನೋ ಭವಂತು" ಎಂಬ ಬೀಜಮಂತ್ರವೂ ಹುಸಿಯಾಗಿದೆ. ಹಳಿತಪ್ಪಿರುವ ಈ ದೇಶವನ್ನು ಮೊದಲಿನಂತೆ ಹಳಿಯ ಮೇಲೆ ನಿಲ್ಲುವಂತೆ ಮಾಡಲು ಈ ಗೀತೆಯ ಶ್ಲೋಕ ನೆರವಾಗಬಲ್ಲುದೆ?

ಪರಿತ್ರಾಣಾಯ ಸಾಧೂನಾಂ । ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ । ಸಂಭವಾಮಿ ಯುಗೇ ಯುಗೇ ॥

ಸಾಹಿತ್ಯ ಸಮ್ಮೇಳನದ ಸಂಬಂಧವಾಗಿ ದಿನಾಂಕ ೨೩.೨.೨೦೧೧ರ ಪ್ರಜಾವಾಣಿ ಪತ್ರಿಕೆಯ, ಸಂಪಾದಕೀಯದ ಈ ಮುಂದಿನ ಮಾತುಗಳು ಗಮನಾರ್ಹವಾಗಿವೆ. "ಸಾಹಿತ್ಯ ಎನ್ನುವುದು ಸಿದ್ಧಾಂತ ಅಥವಾ ಸಮಾಜೋದ್ಧಾರದ ಪೊಳ್ಳು ಘೋಷಣೆಯಾಗಬೇಕಾದ್ದಿಲ್ಲ. ಸಾಹಿತ್ಯ ಹೀಗೆಯೇ ಇರಬೇಕು ಮತ್ತು ಹೀಗೆಯೇ ಬರೆಯಬೇಕೆಂದು ಹೇಳುವ ಧೋರಣೆ ಸರಿಯಲ್ಲ. ಜನರ ಹೃದಯವನ್ನು ತಟ್ಟುವ ಸಾಹಿತ್ಯ ಸದಾ ಸಮಾಜಮುಖಿಯಾಗಿಯೇ ಇರುತ್ತದೆ. ವ್ಯವಸ್ಥೆಯ ವಿರುದ್ಧದ ಜನಾಂದೋಲನಕ್ಕೆ ಸಾಹಿತ್ಯ ಪೂರಕವಾಗಬಹುದೇ ಹೊರತು ಅದೇ ಕ್ರಾಂತಿಯನ್ನು ಹುಟ್ಟುಹಾಕಲು ಸಾಧ್ಯವಿಲ್ಲ. ಈ ವಿಚಾರದಲ್ಲಿ ಸಾಹಿತಿಗಳು ಗೊಂದಲಗೊಳ್ಳುವ ಅಗತ್ಯವಿಲ್ಲ. ಸಮಾಜದಲ್ಲಿನ ಕೆಡುಕುಗಳು ಪ್ರಭುತ್ವ ನಡೆಸುವ ಅನ್ಯಾಯಗಳ ವಿರುದ್ಧ ಸಾಹಿತಿಗಳಷ್ಟೇ ಅಲ್ಲ. ಎಲ್ಲರೂ ಹೋರಾಡಬೇಕಾದ ಅಗತ್ಯವಿದೆ. ಸಾಹಿತ್ಯ ಜಾತ್ರೆಗಳು ಜನಪ್ರಿಯ ಅಥವಾ ಘೋಷಣೆಗಳ ದಾರಿ ತುಳಿಯುವ ಅಪಾಯ ಇದೆ. ಇದರಿಂದಾಗಿಯೇ ಸಾಹಿತ್ಯ ಸಮ್ಮೇಳನಗಳನ್ನು ಎಚ್ಚರಿಕೆಯಿಂದ ಮತ್ತು ಉನ್ನತ ಚಿಂತನೆಗೆ ಅವಕಾಶ ಕೊಡುವಂತೆ ಮತ್ತು ಭಿನ್ನ ನೆಲೆಗಳಲ್ಲಿ ರೂಪಿಸುವ ಅಗತ್ಯವಿದೆ."

■

# ಪೂಜ್ಯಶ್ರೀ ಶ್ರೀ ಶಿವಾನಂದ ಶಿವಯೋಗಿ ರಾಜೇಂದ್ರ ಮಹಾಸ್ವಾಮಿಗಳವರ ಪಟ್ಟಾಧಿಕಾರದ ರಜತಮಹೋತ್ಸವ

ಭರತಖಂಡ ಅನಾದಿಕಾಲದಿಂದ ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ನಾಡು ಎಂಬ ಖ್ಯಾತಿವೆತ್ತಿದೆ. ಕರ್ನಾಟಕದಲ್ಲಿ ಅನೇಕ ಶಿಕ್ಷಣಸಂಸ್ಥೆಗಳು ಬಹಳ ಹಿಂದಿನಿಂದಲೂ ಶಿಕ್ಷಣಕ್ಕೆ ಅತ್ಯಂತ ಮಹತ್ವವನ್ನು ನೀಡಿರುವುದನ್ನು ಇತಿಹಾಸದಿಂದ ಕಂಡುಕೊಳ್ಳಬಹುದಾಗಿದೆ. ಧರ್ಮಪ್ರಧಾನವಾದ ಈ ದೇಶದಲ್ಲಿ ಅಸಂಖ್ಯಾತ ಮಠಮಾನ್ಯಗಳು ಶಿಕ್ಷಣವನ್ನು ಅವ್ಯಾಹತವಾಗಿ ನೀಡುತ್ತಾ ಬಂದಿವೆ. ಮಾನವನ ಜ್ಞಾನವಿಕಾಸಕ್ಕೆ ವಿದ್ಯೆ ಪ್ರಮುಖ ಸಾಧನವೆಂಬುದನ್ನು ಅಂದಿನ ಮಠಮಾನ್ಯಗಳು ಪರಿಗಣಿಸಿದ್ದವು. ವಿವಿಧ ಧರ್ಮದ ಮಠಗಳೂ ಪೀಠಗಳೂ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಕಾರ್ಯಗಳನ್ನು ನಿರ್ವಹಿಸುತ್ತಿದ್ದುದಕ್ಕೆ ಶಾಸನಾಧಾರಗಳಿವೆ. ಕರ್ನಾಟಕದಲ್ಲಿ ವಿದ್ಯಾಭ್ಯಾಸವನ್ನು ಪ್ರಾಚೀನಕಾಲದಲ್ಲಿ ಬೌದ್ಧವಿಹಾರಗಳೂ ಸಂಘಾರಾಮಗಳೂ ಅಗ್ರಹಾರಗಳೂ ಘಟಿಕಾಸ್ಥಾನಗಳೂ ಮಠಮಾನ್ಯಗಳೂ ಶಿಕ್ಷಣ ಕಾರ್ಯಗಳನ್ನು ಮಾಡಿವೆ. ಈ ವಿದ್ಯಾಕೇಂದ್ರಗಳಲ್ಲಿ ಪ್ರಕಾಂಡಪಂಡಿತರೂ ಘನವಿದ್ವಾಂಸರೂ ಹಲವಾರು ಶಾಸ್ತ್ರಗಳ ಪಾರಂಗತರೂ ವಿದ್ಯಾದಾನ ಮಾಡುತ್ತಿದ್ದರು. ಅಂದಿನ ವಿದ್ಯಾಕೇಂದ್ರಗಳಲ್ಲಿ ನಡೆಯುತ್ತಿದ್ದ ವ್ಯಾಸಂಗದ ವಿಷಯವೈವಿಧ್ಯವನ್ನು ಹಿಂದಿನ ಕೋಡೀಮಠಕ್ಕೆ ಸಂಬಂಧಿಸಿದ ಈ ಮುಂದಿನ ಶಾಸನ ಭಾಗದಿಂದ ಅರಿತುಕೊಳ್ಳಬಹುದು:

ಪ್ರಸ್ತುತ ಹಾಸನಜಿಲ್ಲೆ ಹಾರನಹಳ್ಳಿಯ ಕೋಡೀಮಠ ಸಂಸ್ಥಾನದ ಪೀಠಾಧಿಕಾರಿಗಳಾದ ಪರಮಪೂಜ್ಯ ಶ್ರೀ ಮ.ನಿ.ಪ್ರಸ್ವ. ಶ್ರೀ ಶ್ರೀ ಶಿವಾನಂದ ಶಿವಯೋಗಿರಾಜೇಂದ್ರಮಹಾಸ್ವಾಮಿಗಳವರ ಪಟ್ಟಾಧಿಕಾರದ ರಜತ ಮಹೋತ್ಸವವನ್ನು ಮುಂದಿನ ತಿಂಗಳು ಆಚರಿಸಲಿರುವುದು ಅತ್ಯಂತ ಸಂತೋಷದ ಸಂಗತಿಯಾಗಿದೆ. ಪರಮಪೂಜ್ಯರು ನಿತ್ಯತೃಪ್ತ, ನಿರವಯ, ನಿರ್ವಿಕಾರ, ನಿರಂಜನ ಪೀಠ, ಸತ್ಯಧರ್ಮ ಸಮಾನತೆಗಳ ತ್ರಿವೇಣೀಸಂಗಮ.

ಪರಮಪೂಜ್ಯರು ಜೀವನದ ಸಂಕಷ್ಟಗಳಿಗೆ ಸಿಲುಕಿದವರ, ದೀನದಲಿತರ, ಜಾತಿವಿಜಾತಿಗಳ ಸೋಂಕಿಲ್ಲದ ವರ್ಗ ವರ್ಣಭೇದವಿಲ್ಲದ ಸರ್ವರನ್ನೂ ಸಮಾನವಾಗಿ ಕಾಣುವ ಮಹಾಮಮಹಿಮರು.

ಕರ್ನಾಟಕದ ಅತ್ಯಂತ ಪ್ರಾಚೀನ ಮಠಗಳಲ್ಲಿ ಕೋಡೀಮಠ ಪ್ರಮುಖವಾದುದು. ಸುಮಾರು ಒಂದುಸಾವಿರ ವರ್ಷಗಳ ಇತಿಹಾಸವುಳ್ಳ ಈ ಮಠದ ಪರಂಪರೆಯಲ್ಲಿ ಈವರೆಗೆ ಐವತ್ತಾರು ಮಂದಿ ಪೀಠಾಧೀಶರು ಈ ಮಠವನ್ನು ಭದ್ರಬುನಾದಿಯ ಮೇಲೆ ಕಟ್ಟಿ ಬೆಳೆಸಿದ್ದಾರೆ. ಈ ಪರಂಪರೆಯಲ್ಲಿ ತೊಳಗಿ ಬೆಳಗಿದ ಹದಿನೇಳನೆಯ ಶತಮಾನದಲ್ಲಿದ್ದ ಶ್ರೀ ದೊಡ್ಡ ನೀಲಲೋಚನ ಸ್ವಾಮಿಗಳು ಮಹಾತಪಸ್ವಿಗಳೆಂದೂ ಪವಾಡಪುರುಷರೆಂದೂ ಖ್ಯಾತರಾಗಿದ್ದಾರೆ. ಈ ಪರಮಪೂಜ್ಯರ ತಪಶ್ಶಕ್ತಿಯನ್ನು ಅಂದಿನ ನವಾಬ್ ಹೈದರಾಲಿ ಮನಗಂಡು ಪರಮಪೂಜ್ಯರಿಗೆ 'ಜಂಗಮ ಜೀತ್ ಫಕೀರ್' ಎಂಬ ಖಿಲ್ಲತ್ತನ್ನು ನೀಡಿ ಗೌರವಿಸಿದ್ದಾನೆ. ಆದ್ದರಿಂದ ಈ ಕ್ಷೇತ್ರ ಹಿಂದೂಮುಸ್ಲಿಮರ ಭಾವೈಕ್ಯತೆಯ ಸಂಕೇತವಾಗಿ ಇಂದಿಗೂ ನಡೆದುಕೊಂಡು ಬರುತ್ತಿದೆ.

ಹತ್ತೊಂಬತ್ತನೆಯ ಶತಮಾನ ಶ್ರೀಮಠದ ಇತಿಹಾಸದಲ್ಲಿ ಸುವರ್ಣಯುಗವೆನಿಸಿದೆ. ಈ ಶತಮಾನದಲ್ಲಿ ಪೀಠಾಧಿಕಾರಿಗಳಾದ 'ಶಿವಲಿಂಗಜ್ಜಯ್ಯ' ಎಂದು ಖ್ಯಾತರಾದ ಶಿವಲಿಂಗಮಹಾಸ್ವಾಮಿಗಳು ಭಕ್ತ ಕೋಟಿಗೆ ದಿವ್ಯಶಕ್ತಿಯೆನಿಸಿ ಜಂಗಮಜ್ಯೋತಿಯಾಗಿ ಬೆಳಗಿದ ಮಹಾಪುರುಷರು. ಅವರು ಸೃಷ್ಟಿಸಿ ಬಿಟ್ಟುಹೋದ 'ಹೊತ್ತಗೆ' ಭವಿಷ್ಯದಲ್ಲಿ ಮನೆಮಾತಾಗಿಸಿ ಈ ಗುರುಪರಂಪರೆಯಲ್ಲಿ ಮರಿಲಿಂಗಸ್ವಾಮಿ ಮತ್ತು ಉರಿಲಿಂಗಸ್ವಾಮಿಗಳಾದ ಮೇಲೆ ಪೂಜ್ಯ ನೀಲಲೋಚನ ಮಹಾಸ್ವಾಮಿಗಳು ಅರ್ಧಶತಮಾನ ಶ್ರೀಕ್ಷೇತ್ರದ ಅಭಿವೃದ್ಧಿಗೆ ಶ್ರಮಿಸಿ ಪ್ರಾತಃಸ್ಮರಣೀಯರಾಗಿದ್ದಾರೆ. ಶ್ರೀ ನೀಲಲೋಚನಮಹಾಸ್ವಾಮಿಗಳ ಕರಕಮಲಸಂಜಾತರಾದ ಶ್ರೀ ಶ್ರೀ ಶಿವಾನಂದ ಶಿವಯೋಗಿ ರಾಜೇಂದ್ರ ಮಹಾಸ್ವಾಮಿಗಳವರು ೨೪.೩.೧೯೮೩ರಲ್ಲಿ ಕೋಡೀಮಠದ ಪಟ್ಟಾಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡು ಗಣನೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಈ ಇಪ್ಪತ್ತೈದು ವರ್ಷಗಳಲ್ಲಿ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಮಹತ್ತರವಾದ ಪ್ರಗತಿಯನ್ನು ಸಾಧಿಸಿದ್ದಾರೆ. ಕೋಡೀಮಠವನ್ನು ಕರ್ನಾಟಕದಲ್ಲಲ್ಲದೆ ರಾಷ್ಟ್ರಮಟದಲ್ಲೂ ಗುರುತಿಸುವಂತೆ ಸ್ಮರಿಸುವಂತೆ ಮಾಡಿರುವುದು ಹೆಮ್ಮೆಯ ಮತ್ತು ಅಭಿಮಾನದ ಸಂಗತಿಯಾಗಿದೆ.

ಕೋಡೀಮಠಕ್ಕೆ ಬಾಣಾವರ, ಬಿಕ್ಕೋಡು ಮತ್ತು ಚಿಕ್ಕನಾಯಕನಹಳ್ಳಿಯಲ್ಲಿ ಶಾಖಾಮಠಗಳಿವೆ. ಶ್ರೀಮಠದ ವಿದ್ಯಾಪೀಠದಲ್ಲಿ ಸುಮಾರು ಮೂರುಸಾವಿರದ ಆರುನೂರು ಗ್ರಾಮಾಂತರ ಪ್ರದೇಶದ ಬಡವಿದ್ಯಾರ್ಥಿಗಳು ಕಲಿಯುತ್ತಿದ್ದಾರೆ. ಶ್ರೀಮಠದ ಆಶ್ರಯದಲ್ಲಿ ಐದು ಪದವಿಪೂರ್ವ ಕಾಲೇಜುಗಳ ಹದಿಮೂರು ಪ್ರೌಢಶಾಲೆಗಳು, ಕಿರಿಯ ತಾಂತ್ರಿಕ ಶಾಲೆ. ನಾಲ್ಕು ಉಚಿತವಿದ್ಯಾರ್ಥಿನಿಲಯಗಳು, ಗ್ರಂಥಭಂಡಾರ, ವೈದಿಕ ಜ್ಯೋತಿಷ್ಯ ಶಾಲೆ, ಪ್ರಾಚ್ಯಸಂಶೋಧನಾ ಕೇಂದ್ರ. ಅತಿಥಿಗೃಹ ನಿರ್ಮಾಣ -ಇವೇ ಮೊದಲಾದ ಸಾರ್ಥಕ ಕಾರ್ಯಗಳು ನಡೆಯುತ್ತಿವೆ.

ಪರಮಪೂಜ್ಯ ಶ್ರೀ ಶ್ರೀ ಶಿವಾನಂದ ಶಿವಯೋಗಿ ರಾಜೇಂದ್ರ ಮಹಾಸ್ವಾಮಿಗಳು ತಮ್ಮ ನೈಷ್ಠಿಕ ತಪೋನುಷ್ಠಾನದಿಂದ ಮಹತ್ತರವಾದ ಸಾಧನೆಗಳನ್ನು ಮಾಡಿದ್ದಾರೆ. ವೇದಾಗಮಗಳಲ್ಲಿ ಒಂದಾದ ಜ್ಯೋತಿಷ್ಯವನ್ನು ಕರಗತಮಾಡಿಕೊಂಡಿದ್ದಾರೆ. ಲೌಕಿಕ, ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಸೇವೆಗಳಂತೆ ಇನ್ನಿತರ ಪಾತ್ರಗಳಲ್ಲೂ ತಮ್ಮ ಅಸಾಧಾರಣ ಪ್ರತಿಭೆ ಪಾಂಡಿತ್ಯವನ್ನು ಮೆರೆದಿದ್ದಾರೆ. ಶ್ರೀಗಳವರ ಜ್ಯೋತಿಷ್ಯಫಲದಲ್ಲಿ ಅಪಾರ ನಂಬಿಕೆಯುಳ್ಳ ರಾಜಕೀಯ, ಲೌಕಿಕ ಕ್ಷೇತ್ರಗಳ ಮುತ್ಸದ್ದಿಗಳು ಸದಾ ಶ್ರೀಗಳನ್ನು ಆಶ್ರಯಿಸಿರುತ್ತಾರೆ, ಆವರಿಸಿಕೊಂಡಿರುತ್ತಾರೆ. ಹನ್ನೊಂದು, ಹನ್ನೆರಡನೆಯ ಶತಮಾನಗಳಲ್ಲಿ ಕರ್ನಾಟಕವಲ್ಲಿ ತಲೆಯೆತ್ತಿ ಶಿಕ್ಷಣ ಕಾರ್ಯವೇ ಮೊದಲಾದ ಲೋಕೋತ್ತರ ಕಾರ್ಯಗಳನ್ನು ಮಾಡಿರುವ ಕೋಡೀಮಠದ ಹೆಸರು ಸ್ಥಿರವಾಗಿ ನಿಂತಿರುವಂತೆ ಇಂದಿನ ಕೋಡೀಮಠವೂ ತನ್ನ ಬಹುಮುಖ ಕಾರ್ಯಗಳಿಂದ ಶಾಶ್ವತವಾಗಿ ನಿಲ್ಲುವುದರಲ್ಲಿ ಸಂದೇಹವಿಲ್ಲ. ಪ್ರಸ್ತುತ ಶ್ರೀಶಿವಾನಂದ ಶಿವಯೋಗಿ ರಾಜೇಂದ್ರ ಮಹಾಸ್ವಾಮಿಗಳು ಶತಮಾನಗಳ ಹಿಂದೆ ಬಾಳಿಬೆಳಗಿದ ಕೋಡೀಮಠದ ಲೋಕೋತ್ತರ ಕಾರ್ಯಗಳಿಂದ ಪ್ರಭಾವಿತರಾಗಿ ಆ ಎಲ್ಲ ಕಾರ್ಯಗಳನ್ನು ಗರ್ಭೀಕರಿಸಿಕೊಂಡು ಶ್ರೀಮಠದ ಹೆಸರನ್ನು ಸಾರ್ಥಕಗೊಳಿಸಿದ್ದಾರೆ, ಶಾಶ್ವತಗೊಳಿಸಿದ್ದಾರೆ.



# ಅರ್ಕಾವತಿ ಸ್ಮರಣಸಂಚಿಕೆಯ ಪ್ರಸ್ತಾವಿಕ ನುಡಿ

**ಕ**ನ್ನಡ ಸಾಹಿತ್ಯ ಪರಿಷತ್ತಿಗೆ ಎಂಬತ್ತುನಾಲ್ಕು ವರ್ಷಗಳು ತುಂಬಿದ ಈ ಸಂದರ್ಭದಲ್ಲಿ ಕನಕಪುರದಲ್ಲಿ ನಡೆಯುತ್ತಿರುವ ಅಖಿಲ ಭಾರತ ಅರವತ್ತೇಳನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಆಗಮಿಸಿರುವ ಕನ್ನಡ ನಾಡಿನ ಎಲ್ಲ ಹಿರಿಯರಿಗೂ, ಗಣ್ಯರಿಗೂ, ಸಾಹಿತ್ಯ ಪ್ರೇಮಿಗಳಿಗೂ ತುಂಬುಹೃದಯದ ಸ್ವಾಗತವನ್ನು ಕೋರಲು ನನಗೆ ಸಂತೋಷವೆನಿಸುತ್ತದೆ.

ಅರವತ್ತೇಳನೆಯ ಈ ಅಭೂತಪೂರ್ವ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಉದ್ಘಾಟಿಸಲು ದಯಮಾಡಿಸಿರುವ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾದ ಮಾನ್ಯ ಶ್ರೀ ಜೆ.ಹೆಚ್. ಪಟೇಲ್, ಶ್ರೀಮತಿ ಸರ್ವಮಂಗಳ ಪಟೇಲ್, ಶ್ರೀಮತಿ ಲೀಲಾವತಿ ಆರ್. ಪ್ರಸಾದ್, ಶ್ರೀ ಬಚ್ಚೇಗೌಡ, ಶ್ರೀ ಸೋಮಣ್ಣ ಅವರೇ, ಸಮ್ಮೇಳನಾಧ್ಯಕ್ಷರಾದ ಡಾ. ಎಸ್.ಎಲ್. ಭೈರಪ್ಪನವರೇ, ಹಿಂದಿನ ಸಮ್ಮೇಳನಾಧ್ಯಕ್ಷರಾದ ಶ್ರೀ ಕಯ್ಯಾರ ಕಿಞ್ಞಣ್ಣ ರೈ ಅವರೇ, ಸ್ವಾಗತ ಸಮಿತಿಯ ಅಧ್ಯಕ್ಷರಾದ ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರೇ, ಸಮನ್ವಯಾಧ್ಯಕ್ಷರಾದ ಶ್ರೀ ಡಿ.ಕೆ. ಶಿವಕುಮಾರ್ ಅವರೇ, ಸಮ್ಮೇಳನದ ಪ್ರಧಾನ ಕಾರ್ಯದರ್ಶಿಗಳೇ, ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಗಳೇ, ಕೋಶಾಧಿಕಾರಿಗಳೇ, ಕಾರ್ಯಸಮಿತಿಯ ಸದಸ್ಯರೇ, ಆಹ್ವಾನಿತ ಅತಿಥಿಗಳೇ, ಸೋದರ ಸೋದರಿಯರೇ,

ಕನಕಪುರದಲ್ಲಿ ನಡೆಯುತ್ತಿರುವ ಈ ಸಾಹಿತ್ಯ ಸಮ್ಮೇಳನವನ್ನು ಅರ್ಥಪೂರ್ಣವಾಗಿಯೂ ಅತ್ಯಂತ ವೈಭವಪೂರ್ಣವಾಗಿಯೂ ವ್ಯವಸ್ಥಿತವಾಗಿಯೂ ನಡೆಸಬೇಕೆಂಬ ಸ್ವಾಗತಸಮಿತಿಯ ಆಶಯ ಈಡೇರಿದೆ ಎಂಬುದು ಈ ವ್ಯವಸ್ಥೆಗಳನ್ನು ನೋಡಿದವರಿಗೆ ಭಾಸವಾಗುವುದರಲ್ಲಿ ಸಂಶಯವಿಲ್ಲ ಎಂದು ನಾನು ಭಾವಿಸುತ್ತೇನೆ.

ಕಳೆದ ವರ್ಷ ಹಲವಾರು ಪ್ರಮುಖಸಾಹಿತಿಗಳು ನಮ್ಮನ್ನು ಅಗಲಿ ಹೋದದ್ದನ್ನು ತುಂಬ ಭಾರವಾದ ಹೃದಯದಿಂದ ಇಲ್ಲಿ ನೆನೆಯಲಿಚ್ಛಿಸುತ್ತೇನೆ. ಅವರ ಅಗಲಿಕೆ ತುಂಬಲಾರದ ನಷ್ಟವನ್ನುಂಟುಮಾಡಿದೆ.

ಈ ಬಾರಿಯ ನೊಬೆಲ್ ಪ್ರಶಸ್ತಿ ಭಾರತದ ಶ್ರೀ ಅಮರ್ತ್ಯಸೇನ್ ಅವರಿಗೆ ಪ್ರಾಪ್ತವಾಗಿದೆ. ಕನ್ನಡಕ್ಕೆ ಏಳನೆಯ ಜ್ಞಾನಪೀಠ ಪ್ರಶಸ್ತಿ ಶ್ರೀ ಗಿರೀಶ್ ಕಾರ್ನಾಡರಿಗೆ ಲಭ್ಯವಾಗಿದೆ. ಈ ಇಬ್ಬರು ಮಹನೀಯರನ್ನು ಪರಿಷತ್ತು ಅಭಿವಂದಿಸುತ್ತದೆ.

ಕನ್ನಡ ಸಾಹಿತ್ಯ ಪರಿಷತ್ತಿಗೆ ಸಂಬಂಧಿಸಿದ ಕೆಲವು ವಿಚಾರಗಳನ್ನು ಪ್ರಸ್ತಾಪಿಸುವುದು ಈಗ ಉಚಿತವೆಂದು ನಾನು ಭಾವಿಸಿದ್ದೇನೆ.

ಕನ್ನಡ ಸಾಹಿತ್ಯ ಪರಿಷತ್ತು ಇಪ್ಪತ್ತೇಳು ಜಿಲ್ಲೆಗಳಲ್ಲೂ, ನೂರೆಪ್ಪತ್ತಾರು ತಾಲ್ಲೂಕುಗಳಲ್ಲೂ ಜಿಲ್ಲಾ ಮತ್ತು ತಾಲ್ಲೂಕು ಘಟಕಗಳನ್ನು ಹೊಂದಿದೆ. ಈ ಘಟಕಗಳು ತುಂಬ ಉತ್ಸಾಹದಿಂದ ಕಾರ್ಯಚಟುವಟಿಕೆಗಳನ್ನು ನಡೆಸಿ ನಾಡಿನ ಮೂಲೆ ಮೂಲೆಗಳಲ್ಲಿ ಕನ್ನಡ ಸಾಹಿತ್ಯದ ಪರಿಚಾರಿಕೆಯನ್ನು ಮಾಡುತ್ತಿರುವುದು ಅತ್ಯಂತ ಮಹತ್ವದ ಸಂಗತಿಯಾಗಿದೆ. ಕರ್ನಾಟಕ ಸರಕಾರ ಈ ಜಿಲ್ಲಾ ಪರಿಷತ್ತಿನ ಘಟಕಗಳಿಗೆ ಆರ್ಥಿಕ ನೆರವನ್ನು ನೀಡುತ್ತಿರುವುದು ಅತ್ಯಂತ ಅಭಿಮಾನದ ಸಂಗತಿಯಾಗಿದೆ. ಇದರಿಂದಾಗಿ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಕನ್ನಡ ಭವನಗಳು ನಿರ್ಮಾಣವಾಗಿವೆ, ನಿರ್ಮಾಣವಾಗುತ್ತಿವೆ.

ಕರ್ನಾಟಕ ಸರಕಾರ ನಾಡು, ನುಡಿ, ಗಡಿ, ನೆಲ, ಜಲದ ವಿಚಾರದಲ್ಲಿ ತಳೆದಿರುವ ನಿರ್ಧಾರ, ಕೈಕೊಂಡಿರುವ ಕಾರ್ಯಕ್ರಮಗಳಿಗೆ ಕನ್ನಡ ಸಾಹಿತ್ಯ ಪರಿಷತ್ತು ಸಂಪೂರ್ಣಬೆಂಬಲವನ್ನು ವ್ಯಕ್ತಪಡಿಸಿರುವುದನ್ನು ನಾನು ಅನೇಕ ಬಾರಿ ಸ್ಪಷ್ಟಪಡಿಸಿದ್ದೇನೆ. ಬಹುಕಾಲದಿಂದ ಬಗೆಹರಿಯದಿರುವ ಗಡಿವಿವಾದವನ್ನು, ಮಹಾಜನ್ ವರದಿಯನ್ನು ಒಪ್ಪಿಕೊಂಡು, ಕೇಂದ್ರಸರಕಾರ ತೀರ್ಮಾನವನ್ನು ಕೈಕೊಳ್ಳುವಂತೆ ಒತ್ತಾಯವನ್ನು ತರಬೇಕೆಂದು ತಮ್ಮಲ್ಲಿ ಮನವಿ ಮಾಡಿಕೊಳ್ಳುತ್ತೇನೆ. ಅಖಂಡ ಕರ್ನಾಟಕದ ವಿರುದ್ಧ ಪ್ರತ್ಯೇಕತೆಯ ಕೂಗನ್ನು ಹಾಕುತ್ತಿರುವುದರ ಹಿನ್ನೆಲೆಯನ್ನು ಪರಿಶೀಲಿಸಿ, ಪರಿಹಾರಗಳನ್ನು ಸೂಚಿಸಿ ಕರ್ನಾಟಕ ಎಂದೆಂದಿಗೂ ಒಂದೇ ಎಂಬುದನ್ನು ತಾವು ಸಾರಿ ತೋರಬೇಕಾಗಿದೆ.

ಕರ್ನಾಟಕದಲ್ಲಿ ಕನ್ನಡದ ಎಲ್ಲ ಚಟುವಟಿಕೆಗಳಿಗೂ ಕನ್ನಡಪರ ಸಂಘಸಂಸ್ಥೆಗಳು ಮಿಗಿಲಾದ ಸೇವೆಯನ್ನು ಸಲ್ಲಿಸುತ್ತಿವೆ. ಈ ದಿಶೆಯಲ್ಲಿ ಮಹಾಲೇಖಪಾಲಕರ ಕಛೇರಿಯ ಸಿಬ್ಬಂದಿವರ್ಗ ಕನ್ನಡದವರೇ ಆಗಿರಬೇಕೆಂಬ ಅವರ ಹೋರಾಟಕ್ಕೆ ಜಯ ತಂದುಕೊಟ್ಟಿರುವುದು ಉಲ್ಲೇಖನೀಯವಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತು ಮತ್ತಷ್ಟು ಶಕ್ತಿಯುತವಾಗಿ ನಾಡು-ನುಡಿಗಳ ಸೇವೆಯನ್ನು ಮಾಡಲು ಅನುಕೂಲವಾಗುವ ಹಲವಾರು ಯೋಜನೆಗಳನ್ನು ತಮ್ಮ ಗಮನಕ್ಕೆ ಈಗಾಗಲೇ ತಂದಿದ್ದೇನೆ. ಅವುಗಳಲ್ಲಿ ಪ್ರಮುಖವಾದವು ಇವು:

೧. ಕನ್ನಡ ಸಾಹಿತ್ಯ ಪರಿಷತ್ತಿಗೆ ಶಾಶ್ವತವಾದ ಕೀರ್ತಿಯನ್ನು ತಂದುಕೊಟ್ಟಿರುವುದು ಕನ್ನಡ ನಿಘಂಟು ಯೋಜನೆ. ಕರ್ನಾಟಕ ಸರಕಾರದ ಸಂಪೂರ್ಣನೆರವಿನಿಂದ ಹತ್ತುಸಾವಿರ ಪುಟಗಳುಳ್ಳ ಎಂಟು ಸಂಪುಟಗಳು ಈಗಾಗಲೇ ಪ್ರಕಟವಾಗಿವೆ. ಇವನ್ನು ಲಿಪ್ಯಂತರ ಮತ್ತು ಭಾಷಾಂತರಗಳೊಂದಿಗೆ ಪ್ರಕಟಿಸುವ ಕಾರ್ಯ ನಡೆಯುತ್ತಿದೆ. ಈಗಾಗಲೇ ಮೊದಲ ಸಂಪುಟ ಅಚ್ಚಿಗೆ ಸಿದ್ಧವಾಗಿದೆ.

೨. ಕನ್ನಡ ವಿದ್ಯಾರ್ಥಿಗಳಿಗೂ, ಅಧ್ಯಾಪಕರಿಗೂ, ಜನಸಾಮಾನ್ಯರಿಗೂ ಅತ್ಯಂತ ಉಪಯುಕ್ತವಾದ ಅಪಾರವಾದ ಬೇಡಿಕೆಯ ಅತ್ಯಗತ್ಯವಾದ ಕನ್ನಡ ಸಂಕ್ಷಿಪ್ತ ನಿಘಂಟು ಮತ್ತು ರತ್ನಕೋಶಗಳ ಮರುಮುದ್ರಣಕ್ಕೆ ನೆರವು ನೀಡಬೇಕು.

೩. ಈ ಹಿಂದೆ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ್ದು ಇಂದು ಅಲಭ್ಯವಾಗಿರುವ ನೂರು ಕನ್ನಡದ ಪ್ರಾಚೀನ ಶ್ರೇಷ್ಠಕೃತಿಗಳ ಪ್ರಕಟನೆಗೆ ಅನುಕೂಲಮಾಡಿಕೊಡಬೇಕು.

೪. ಕನ್ನಡ ಸಾಹಿತ್ಯ ಪರಿಷತ್ತಿನ ಸಿಬ್ಬಂದಿಗೆ ೧೯೭೬ ರಿಂದ ಕರ್ನಾಟಕ ಸರಕಾರ ಅನುದಾನವನ್ನು ನೀಡುತ್ತಿದೆ. ಆದರೆ ಈ ಸಿಬ್ಬಂದಿಗೆ ಈವರೆಗೆ ವೃಂದ ಮತ್ತು ನೇಮಕಾತಿ ನಿಯಮಗಳು ರಚನೆಯಾಗಿಲ್ಲ. ಇದರಿಂದ ಈ ಸಿಬ್ಬಂದಿಗೆ ಅಗತ್ಯವಾಗಿ ಬೇಕಾದ ಸೌಲಭ್ಯಗಳೂ ಸಿಕ್ಕುತ್ತಿಲ್ಲ. ಘನಸರ್ಕಾರ ದಯಮಾಡಿ ಅವರ ನೆರವಿಗೆ ಬರಬೇಕೆಂದು ಕೇಳಿಕೊಳ್ಳುತ್ತೇನೆ.

೫. ಸುಮಾರು ಎಂಬತ್ತು ವರ್ಷಗಳಷ್ಟು ಹಳೆಯದಾಗಿರುವ ಶ್ರೀಕೃಷ್ಣರಾಜಪರಿಷನ್ಮಂದಿರದ ಸಭಾಭವನವನ್ನು ಪುನರ್‌ನಿರ್ಮಾಣ ಮಾಡಬೇಕಾಗಿದೆ. ಇಂದಿನ ಅಗತ್ಯಗಳಿಗೆ ಅನುಗುಣವಾದ ಅತ್ಯಾಧುನಿಕವಾದ ಸಭಾಭವನದ ನಿರ್ಮಾಣದ ಬೇಡಿಕೆಯನ್ನು ಸರ್ಕಾರಕ್ಕೆ ಸಲ್ಲಿಸುತ್ತಲೇ ಬಂದಿದ್ದೇವೆ. ತಮ್ಮ ಕಾಲದಲ್ಲಿ ಈ ಸಭಾಭವನ ನಿರ್ಮಾಣವಾಗಿ ಕನ್ನಡ ಜನತೆಯ ಆಶೋತ್ತರಗಳು ಈಡೇರುವುದೆಂದು ನಾನು ದೃಢವಾಗಿ ನಂಬಿದ್ದೇನೆ.

ಕನ್ನಡ ಸಾಹಿತ್ಯ ಪರಿಷತ್ತಿನ ಅನೇಕ ಯೋಜನೆಗಳಲ್ಲಿ ಈಗಿರುವ ಬಿ.ಎಂ.ಶ್ರೀ ಅಚ್ಚುಕೂಟದ ಜೊತೆಗೆ ಆಫ್‌ಸೆಟ್ ವಿಭಾಗವೊಂದನ್ನು ಸ್ಥಾಪಿಸುವುದೂ ಒಂದಾಗಿತ್ತು. ಕೆಲವು ದಾನಿಗಳ ನೆರವಿನಿಂದ, ಕಾರ್ಯಸಮಿತಿಯ ಪ್ರೋತ್ಸಾಹದಿಂದ ಒಂದು ಸುಸಜ್ಜಿತ ಆಫ್‌ಸೆಟ್ ವಿಭಾಗ ಸಿದ್ಧವಾಗಿದೆ. ಇದೇ ಮೊದಲ ಬಾರಿಗೆ ಸಾಹಿತ್ಯ ಸಮ್ಮೇಳನದ ಆಹ್ವಾನ ಪತ್ರಿಕೆಗಳನ್ನು, ಸಮ್ಮೇಳನದ ನೆನಪಿನ ಸಂಚಿಕೆಗಳನ್ನು, ಬಿಡುಗಡೆಯಾಗಲಿರುವ ಪುಸ್ತಕಗಳನ್ನು ಈ ಮುದ್ರಣಾಲಯದಲ್ಲೇ ಮುದ್ರಿಸಿ ಹೊರತರಲಾಗಿದೆ. ಅತ್ಯಲ್ಪ ಕಾಲದಲ್ಲೇ ಈ ಕಾರ್ಯವನ್ನು ತುಂಬ ಶ್ರಮವಹಿಸಿ ನಿರ್ವಹಿಸಿದ ಮುದ್ರಣಾಲಯದ ಸಿಬ್ಬಂದಿಯನ್ನು ಅಭಿನಂದಿಸಬೇಕಾಗಿದೆ.

ಈ ಸಮ್ಮೇಳನದ ಸ್ವಾಗತಸಮಿತಿಯವರ ಸಹಾಯ-ಸಹಕಾರದಿಂದ ಸಾಹಿತ್ಯ ಪರಿಷತ್ತಿನ ಅನೇಕ ಅಲಭ್ಯ ಕೃತಿಗಳು ಮರುಮುದ್ರಣಗೊಂಡಿರುವುದು ಈ ಸಮ್ಮೇಳನದ ಗಮನಾರ್ಹ ಸಾಧನೆಯಾಗಿದೆ. ಅರವತ್ತೇಳನೆಯ ಸಮ್ಮೇಳನದ ಸಂಸ್ಮರಣೆಗಾಗಿ ಹೊರತರುತ್ತಿರುವ ಅರವತ್ತೇಳು ಪುಸ್ತಕಗಳಿಗೆ ಅಗತ್ಯವಾದ ಸುಮಾರು ಹದಿನಾರು ಲಕ್ಷ ರೂ. ಬೆಲೆಯ ಮುದ್ರಣಕಾಗದವನ್ನು ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ತರಿಸಿಕೊಟ್ಟು ಪರಿಷತ್ತಿಗೆ ಕೀರ್ತಿತರುವ ಪ್ರಕಟಣೆಗಳಿಗೆ ನೆರವಾಗಿದ್ದಾರೆ.

ಕನಕಪುರ ಒಂದು ತಾಲ್ಲೂಕು ಕೇಂದ್ರ, ದೊಡ್ಡ ನಗರಗಳಂತೆ ಇಲ್ಲಿ ಎಲ್ಲ ಸೌಲಭ್ಯಗಳನ್ನು ನಿರೀಕ್ಷಿಸಲಾಗದಿದ್ದರೂ ಸ್ವಾಗತ ಸಮಿತಿಯವರು, ವಿಶೇಷವಾಗಿ ಸ್ವಾಗತ ಸಮಿತಿ ಅಧ್ಯಕ್ಷರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಮತ್ತು ಸಮನ್ವಯಾಧ್ಯಕ್ಷರಾದ ಶ್ರೀ ಡಿ.ಕೆ. ಶಿವಕುಮಾರ್ ಅವರು ಅಹರ್ನಿಶಿ ದುಡಿದು 'ನ ಭೂತೋ ನ ಭವಿಷ್ಯತಿ' ಎನ್ನುವಂತೆ ಎಲ್ಲ ಅನುಕೂಲಗಳನ್ನು ಕಲ್ಪಿಸಿಕೊಟ್ಟಿದ್ದಾರೆ. ಅವರ ಶ್ರಮ ಸಾರ್ಥಕವಾಗಲು ತಮ್ಮ ಸಹಕಾರ ಅತ್ಯಗತ್ಯ. ನಾಡಿನ ಮೂಲೆ ಮೂಲೆಗಳಿಂದ ಆಗಮಿಸಿರುವ ತಮಗೆ ಈ ಮೂರುದಿನಗಳಲ್ಲಿ ಅಲ್ಪ ಸ್ವಲ್ಪ ತೊಂದರೆಗಳೇನಾದರೂ ಉಂಟಾದಲ್ಲಿ ತಾವು ಅದನ್ನು ಸಹಿಸಿಕೊಂಡು ನಮ್ಮೊಡನೆ ಸಹಕರಿಸಿ ಸಮ್ಮೇಳನವನ್ನು ಯಶಸ್ವಿಗೊಳಿಸಬೇಕೆಂದು ವಿನಮ್ರವಾಗಿ ಪ್ರಾರ್ಥಿಸಿಕೊಳ್ಳುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತು ಅಖಂಡ ಕರ್ನಾಟಕದ ಎಲ್ಲಾ ವರ್ಗದ ಸಾಹಿತಿಗಳಿಗೂ ಸಾಹಿತ್ಯಾಭಿಮಾನಿಗಳಿಗೂ ಸೇರಿದುದಾಗಿದೆ. ಇಲ್ಲಿ ಬೇಕು ಬೇಡ ಎಂಬ ಭಾವನೆಗಳಿಗೆ ಅವಕಾಶವಿಲ್ಲ; ಅವಕಾಶವಿರಲೂ ಬಾರದು. ಪ್ರೀತಿ ವಿಶ್ವಾಸಗಳಿಂದ ಕನ್ನಡ ನಾಡು ನುಡಿಗಳಿಗಾಗಿ ದುಡಿಯುವ ಕವಿ, ಕಲಾವಿದ, ಕಾರ್ಮಿಕ, ಕೃಷಿಕ, ರಾಜಕಾರಣಿ ಎಲ್ಲರೂ ನಮಗೆ ಬೇಕಾದವರೆ. ಕನ್ನಡ ನಾಡಿನ ಋಣತೀರಿಸುವುದಕ್ಕೆ ಬದ್ಧಕಂಕಣರಾದ ಎಲ್ಲ ಮಹನೀಯರಿಗೂ ಮತ್ತೊಮ್ಮೆ ಹಾರ್ದಿಕ ಸ್ವಾಗತವನ್ನು ಬಯಸುತ್ತೇನೆ. ಕನ್ನಡದ ಶ್ರೇಷ್ಠ ಕಾದಂಬರಿಕಾರರೂ, ವಿಚಾರವಂತ ಲೇಖಕರೂ ಆದ ಡಾ. ಎಸ್.ಎಲ್. ಭೈರಪ್ಪನವರ ಅಧ್ಯಕ್ಷತೆಯಲ್ಲಿ ನಡೆಯುವ ಮೂರುದಿನಗಳ ನುಡಿಹಬ್ಬ ನಾಡು ನುಡಿಯಾರಾಧಕರಿಗೆಲ್ಲಾ ಆನಂದ ತರಲಿ, ಕನ್ನಡ ಸಾಹಿತ್ಯ ಸಮ್ಮೇಳನ ಒಂದು ಜಾತ್ರೆಯಲ್ಲ, ಸಾಹಿತ್ಯ ಯಾತ್ರೆ ಎಂಬುದನ್ನು ಮನಗಾಣಿಸಲಿ ಎಂದು ಹಾರೈಸಿ ನನ್ನ ಪ್ರಾಸ್ತಾವಿಕ ಮಾತುಗಳನ್ನು ಮುಗಿಸುತ್ತೇನೆ.



# ಅಭಿನಂದನ ಸಮಾರಂಭ

ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।
ಗುರುಸ್ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀಗುರವೇ ನಮಃ ॥

ಇಂದಿನ ಅಭಿನಂದನಾ ಸಮಾರಂಭದ ಅಧ್ಯಕ್ಷರೂ, ಕರ್ನಾಟಕದ ಮಾಜಿ ಮುಖ್ಯಮಂತ್ರಿಗಳೂ ಆದ ಸನ್ಮಾನ್ಯ ವೀರಪ್ಪಮೊಯಿಲಿ ಅವರೇ, ಈ ಕಾರ್ಯಕ್ರಮವನ್ನು ಉದ್ಘಾಟಿಸಲು ಆಗಮಿಸಿರುವ ಕೇಂದ್ರ ಸರ್ಕಾರದ ಯೋಜನಾ ಸಚಿವರೂ, ಆತ್ಮೀಯ ಮಿತ್ರರೂ ಆದ ಶ್ರೀ ಎಂ.ವಿ. ರಾಜಶೇಖರನ್ ಅವರೇ, ಈ ಸಮಾರಂಭಕ್ಕೆ ವಿಶೇಷ ಆಹ್ವಾನಿತರಾದ ಜನಪ್ರಿಯ ಶಾಸಕರೂ, ಮಾಜಿ ಸಚಿರರೂ ಆದ ಶ್ರೀ ಸೋಮಣ್ಣನವರೇ, ಗ್ರಂಥಬಿಡುಗಡೆ ಮಾಡಲು ದಯಮಾಡಿಸಿರುವ ಶ್ರೇಷ್ಠಸಾಹಿತಿಗಳೂ, ವಿಶ್ರಾಂತ ಕುಲಪತಿಗಳೂ ಆದ ಪದ್ಮಶ್ರೀ ದೇ. ಜವರೇಗೌಡ ಅವರೇ, ಮುಖ್ಯಅತಿಥಿಗಳಾಗಿ ಆಗಮಿಸಿರುವ ಹಿರಿಯರೂ ಶಿಕ್ಷಣತಜ್ಞರೂ ಆದ ಪ್ರೊ. ಎಸ್.ಆರ್. ರೋಹಿಡೇಕರ್ ಅವರೇ, ಅಭಿನಂದನ ನುಡಿಗಳನ್ನು ಹೇಳಲು ದಯಮಾಡಿಸಿರುವ ಕನ್ನಡದ ಶ್ರೇಷ್ಠ ಸಂಶೋಧಕರೂ, ಕರ್ನಾಟಕದ ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿಗಳೂ. ನನ್ನ ಆಪ್ತಮಿತ್ರರೂ ಆದ ಡಾ. ಎಂ.ಎಂ. ಕಲಬುರ್ಗಿ ಅವರೇ, ಅಭಿನಂದನ ನುಡಿಗಳನ್ನಾಡಲು ಬಂದಿರುವ ಮತ್ತೋರ್ವ ಶ್ರೇಷ್ಠಕವಿಗಳೂ, ವಿಧಾನ ಪರಿಷತ್ತಿನ ಮಾಜಿ ಸದಸ್ಯರೂ ಆದ ಡಾ. ಸಿದ್ಧಲಿಂಗಯ್ಯನವರೇ, ಖ್ಯಾತಸಾಹಿತಿ ವಿಮರ್ಶಕರಾದ ಡಾ. ವಿಜಯಾ ಸುಬ್ಬರಾಜ್ ಅವರೇ, ಈ ಅಭಿನಂದನ ಸಮಾರಂಭಕ್ಕೆ ವಿಶ್ವಾಸದಿಂದ ದಯಮಾಡಿಸಿರುವ ಪರಮಪೂಜ್ಯರೇ. ಹಿರಿಯರೇ, ಅಭಿಮಾನಿಗಳೇ ಮಿತ್ರರೇ ಬಂಧುಗಳೇ ತಮಗೆಲ್ಲ ಶರಣು ಶರಣಾರ್ಥಿಗಳನ್ನು ಸಮರ್ಪಿಸುತ್ತೇನೆ.

ನಾನು ಇಂದು ತಮ್ಮ ಮುಂದೆ ನಿಂತು ಅಭಿವಂದನೆ ಸ್ವೀಕರಿಸಲು ಕಾರಣೀಭೂತರಾದ ಸುತ್ತೂರು ವೀರಸಿಂಹಾಸನಾಧೀಶ್ವರರಾದ ಕೈಲಾಸವಾಸಿಗಳಾದ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳ ಪಾದಪದ್ಮಂಗಳಿಗೆ ಶಿರಸಾಷ್ಟಾಂಗ ನಮಸ್ಕಾರಗಳನ್ನು ಸಮರ್ಪಿಸುತ್ತೇನೆ. ನಾನು ಕನ್ನಡ ಆನರ್ಸ್‌ಗೆ ಸೇರಿದರೆ ಮಾತ್ರ ವಿದ್ಯಾರ್ಥಿನಿಲಯದಲ್ಲಿ ಪ್ರವೇಶ ನೀಡಲಾಗುವುದು ಎಂದು ಹೇಳಿ ಒತ್ತಾಯದಿಂದ ನಾನು ಕನ್ನಡ ಓದುವಂತೆ ಮಾಡಿದ ಶ್ರೀಗಳವರ ಅಪೇಕ್ಷೆಯ ಮೇರೆಗೆ ನಾನು ಕನ್ನಡ ಸಾಹಿತ್ಯಲೋಕಕ್ಕೆ ಕಿಂಚಿತ್‌ಸೇವೆ ಸಲ್ಲಿಸಲು ಸಾಧ್ಯವಾಯಿತು.

ನಾನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷನಾಗಿದ್ದಾಗ ಪ್ರತಿಷ್ಠಾನಕ್ಕೆ ಒಂದು ನೆಲೆ ಇಲ್ಲದುದಕ್ಕಾಗಿ ಪ್ರತಿಷ್ಠಾನದ ಗೌರವಾಧ್ಯಕ್ಷರಾಗಿದ್ದ ದಿ. ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾವ್ ಅವರೊಂದಿಗೆ ಪತ್ರಿಕಾಗೋಷ್ಠಿಯನ್ನು ನಡೆಸಿ. ನೀಡಿದ ಹೇಳಿಕೆಗೆ ಸ್ಪಂದಿಸಿ ಪ್ರತಿಷ್ಠಾನದ ನಿವೇಶನದ ಸಮಸ್ಯೆಗಳನ್ನು ಕೂಡಲೇ ನಿವಾರಿಸುವಂತೆಯೂ ಪ್ರತಿಷ್ಠಾನದ ನಿರ್ವಹಣೆಗಾಗಿ ಒಂದು ಲಕ್ಷರೂಪಾಯಿಗಳನ್ನು ಮಂಜೂರುಮಾಡಿ ಸರ್ಕಾರದ ಆದೇಶವನ್ನು ಹೊರಡಿಸಿದವರು ಸನ್ಮಾನ್ಯ ವೀರಪ್ಪ ಮೊಯಿಲಿ ಅವರು. ಅಂದಿನ ಸಕಾಲಿಕ ನೆರವಿನಿಂದ ಇಂದು ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ ಮೂರಂತಸ್ತಿನ ಕಟ್ಟಡವನ್ನು ನಿರ್ಮಿಸಿ, ಪ್ರಮುಖ ಸಂಶೋಧನ ಸಂಸ್ಥೆಯಾಗಿ, ಕೆಲವರು ಪಿಎಚ್.ಡಿ. ಪದವಿಗಾಗಿ ವ್ಯಾಸಂಗ ಮಾಡುತ್ತಿರುವುದು ಹೆಮ್ಮೆಯ ಸಂಗತಿ. ಇದಕ್ಕೆ ಶ್ರೀ ವೀರಪ್ಪ ಮೊಯಿಲಿ ಅವರೇ ಕಾರಣಕರ್ತರು.

ಈ ಸಮಾರಂಭವನ್ನು ಉದ್ಘಾಟಿಸಿದ ಶ್ರೀ ಎಂ.ವಿ. ರಾಜಶೇಖರನ್ ಅವರು ಕೃಷಿ, ಗ್ರಾಮೀಣಾಭಿವೃದ್ಧಿ, ಯುವಶಕ್ತಿ, ಶಿಕ್ಷಣ, ನೀರಾವರಿ, ಮಾನವ ಸಂಪನ್ಮೂಲ ಸದ್ಬಳಕೆ, ಪರಿಸರ –ಇವೇ ಮೊದಲಾದ ವಿಚಾರಗಳನ್ನು ಕುರಿತು ದೇಶವಿದೇಶಗಳ ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿ ಪ್ರಬಂಧಗಳನ್ನು ಮಂಡಿಸಿ ಅಪಾರ ಕೀರ್ತಿಯನ್ನು ಗಳಿಸಿದ್ದಾರೆ. ಅವರ ನಿಷ್ಠೆ, ಪ್ರಾಮಾಣಿಕತೆ, ನಿರಂತರಕಾಯಕ, ಸರಳತೆ, ಸಜ್ಜನಿಕೆಗಳಿಂದ ಅತ್ಯಂತ ಜನಪ್ರಿಯರಾಗಿದ್ದಾರೆ. ಈ ನನ್ನ ಪರಮಮಿತ್ರರು, ನನ್ನ ಸಹಪಾಠಿಗಳಾಗಿದ್ದುದೇ ಅಲ್ಲದೆ, ಈ ಸಮಾರಂಭವನ್ನು ಉದ್ಘಾಟಿಸಲು ತಮ್ಮ ಬಿಡುವಿಲ್ಲದ ಕಾರ್ಯಗಳ ಮಧ್ಯೆ ಬಿಡುವು ಮಾಡಿಕೊಂಡು ಆಗಮಿಸಿದ್ದು ನನಗೆ ಅತ್ಯಂತ ಸಂತೋಷವನ್ನುಂಟುಮಾಡಿದೆ. ತಮಗೆ ಸರ್ವಶ್ರೇಯಸ್ಸನ್ನು ಕೋರುತ್ತೇನೆ.

ಈ ಸಮಾರಂಭದ ವಿಶೇಷ ಆಹ್ವಾನಿತರಾಗಿ ಆಗಮಿಸಿರುವ ಬಿನ್ನಿಪೇಟೆಯ ಜನಪ್ರಿಯ ಶಾಸಕರೂ, ಮಾಜಿ ಸಚಿವರೂ, ಅನೇಕ ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಗಳಲ್ಲಿ ನನ್ನನ್ನು ತೊಡಗಿಸಿಕೊಂಡು ನಿರಂತರವಾಗಿ ದುಡಿಯುತ್ತಿರುವ ಶ್ರೀ ಸೋಮಣ್ಣ ಅವರಿಗೆ ಸಮಸ್ತಸನ್ಮಂಗಳುಂಟಾಗಲಿ ಎಂದು ಪ್ರಾರ್ಥಿಸುತ್ತೇನೆ.

'ಎಲ್ಲಾದರೂ ಇರು ಎಂತಾದರೂ ಇರು, ಎಂದೆಂದಿಗೂ ನೀ ಕನ್ನಡವಾಗಿರು', 'ಕನ್ನಡಕ್ಕಾಗಿ ಕೈ ಎತ್ತು, ನಿನ್ನ ಕೈ ಕಲ್ಪವೃಕ್ಷವಾಗುತ್ತದೆ' ಎಂದು ಘೋಷಣೆ ಮಾಡಿದ ರಾಷ್ಟ್ರಕವಿಗಳೂ, ನನ್ನ ಪೂಜ್ಯ ವಿದ್ಯಾಗುರುಗಳೂ ಆದ ಕುವೆಂಪು ಅವರ ಕವಿವಾಣಿಯಂತೆ, ರಾಜ್ಯಾದ್ಯಂತ ಕನ್ನಡ ಸಾಹಿತ್ಯ ಸೇವೆಯಲ್ಲಿ ತೊಡಗಿರುವ ಡಾ. ದೇಜಗೌ ಅವರು ನನಗೆ ಆಪ್ತರಷ್ಟೇ ಅಲ್ಲದೆ ಕನ್ನಡದ ವಿಷಯದಲ್ಲಿ ಮಾರ್ಗದರ್ಶಕರೂ ಆಗಿದ್ದಾರೆ. ಬಹಳ ವರ್ಷಗಳಿಂದ ನನ್ನನ್ನು ಅತ್ಯಂತ ಸನಿಹದಿಂದ ಬಲ್ಲ ಶ್ರೀಯುತರು ಕನ್ನಡ–ಇಂಗ್ಲಿಷ್ ನಿಘಂಟು, ಇಂಗ್ಲಿಷ್–ಕನ್ನಡ ನಿಘಂಟು, ವಿಶ್ವಕೋಶ, ವಿಷಯ ವಿಶ್ವಕೋಶಗಳ ರೂವಾರಿಗಳು. ನನ್ನ ಅವಧಿಯಲ್ಲಿ, ಸಂಪಾದನಾ ವಿಭಾಗದ, ಪ್ರಕಟನೆಗಳು, ನೂರನ್ನೂ ಮೀರಿದವು. ಕನ್ನಡ ಸಾಹಿತ್ಯದ ಸಮಗ್ರ ಪರಿಚಯವನ್ನೂ, ಪರಿಣತಿಯನ್ನೂ ಹೊಂದಿರುವ ದೇಜಗೌ ಅವರು "ಆರಾಧ್ಯ ಸಂಪದ" ಅಭಿನಂದನಾ ಗ್ರಂಥವನ್ನು ಬಿಡುಗಡೆ ಮಾಡಲಿರುವುದು ಅತ್ಯಂತ ಔಚಿತ್ಯಪೂರ್ಣವಾಗಿದೆ. ಅವರಿಗೆ ನನ್ನ ಅನಂತ ನಮನಗಳು.

ಮತ್ತೊಂದು ಅಭಿನಂದನಾ ಗ್ರಂಥವನ್ನು ಬಿಡುಗಡೆ ಮಾಡಬೇಕಾಗಿದ್ದವರು ನನ್ನ ಪ್ರಿಯ ಮಿತ್ರರಾದ ಡಾ.ಪ್ರಭುಶಂಕರ ಅವರು. ಶ್ರೀಯುತರು ಶ್ರೀರಾಮಕೃಷ್ಣಾಶ್ರಮದ ಒಂದು ಮಹತ್ತರವಾದ ಕಾರ್ಯಕ್ಕೆ ಅನಿವಾರ್ಯವಾಗಿ ಕಲ್ಕತ್ತೆಗೆ ಪ್ರಯಾಣಿಸಬೇಕಾಯಿತು. ಈ ಕೊರತೆಯನ್ನು ತುಂಬಲು ಉಗ್ರಾಣ ನಿಗಮದ ವ್ಯವಸ್ಥಾಪಕ ನಿರ್ದೇಶಕರೂ, ವಚನ ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿ ಅದರಲ್ಲೇ ಡಾಕ್ಟರೇಟ್ ಪದವಿಯನ್ನು ಪಡೆದಿರುವವರು, ಉಜ್ವಲ ವಾಗ್ಮಿಗಳಾದ, ಡಾ. ಸಿ. ಸೋಮಶೇಖರ ಅವರು. ಶ್ರೀಯುತರು ಕನ್ನಡ ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿದ್ದಾಗ, ಪಂಡಿತರತ್ನಂ ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ ಶತಮಾನೋತ್ಸವ ಕಾರ್ಯಕ್ಕೆ ವಿಶೇಷ ನೆರವನ್ನು ನೀಡಿ, ಈ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದೇ ಅಲ್ಲದೆ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ವೈಯಕ್ತಿಕ ನೆರವನ್ನೂ ನೀಡಿದ್ದಾರೆ. ಅವರ ಈ ತೆರನ ಕಾರ್ಯ ನಿರಂತರವಾಗಿ ನೆರವೇರಲಿ ಎಂದು ಹಾರೈಸುತ್ತೇನೆ.

ಈ ಸಮಾರಂಭಕ್ಕೆ ಮುಖ್ಯಅತಿಥಿಗಳಾಗಿ ಭಾಗವಹಿಸುತ್ತಿರುವ ವಯೋವೃದ್ಧರೂ, ಶಿಕ್ಷಣತಜ್ಞರೂ ಆದ ಪ್ರೊ. ಎಸ್.ಆರ್. ರೋಹಿಡೇಕರ್ ಅವರು ಕನ್ನಡ ಸಾಹಿತ್ಯದ ಬಗೆಗೆ ಅಪಾರ ಒಲವುಳ್ಳವರು. ಶ್ರೀಯುತರು ಕನ್ನಡ ಸರಳೀಕರಣ ಸಮಿತಿಯ ಸದಸ್ಯರಾಗಿದ್ದಾಗ, ಪ್ರೊ. ಬಿ.ಟಿ. ಸಾಸನೂರ ಅಧ್ಯಕ್ಷರಾಗಿದ್ದರು. ಅವರ ಶಿಷ್ಯರೂ ಡಾ.ಎಂ.ಎಂ. ಕಲಬುರ್ಗಿ ಅವರ ಗುರುಗಳೂ, ತನ್ನ ಪರಮಹಿತೈಷಿಗಳಾಗಿದ್ದ ಅವರ ಅವಧಿಯಲ್ಲಿ, ಡಾ. ರೋಹಿಡೇಕರ್ ಅವರ ಅಪಾರ ಪಾಂಡಿತ್ಯ, ಕನ್ನಡದ ಬಗೆಗೆ ಅತೀವ ಕಳಕಳಿಯನ್ನು ಕಂಡು ಸಂತೋಷಗೊಂಡಿದ್ದೇನೆ. ಅವರ ಆಗಮನ ನನಗೆ ತುಂಬ ಸಂತೋಷವನ್ನು ತಂದಿದೆ.

ಅಭಿನಂದನಾ ನುಡಿಗಳನ್ನು ಸಲ್ಲಿಸಿರುವ ನನ್ನ ಪರಮಮಿತ್ರರೂ, ಖ್ಯಾತಸಂಶೋಧಕರೂ, ವಿಶ್ರಾಂತ ಕುಲಪತಿಗಳೂ ಆದ ಡಾ. ಎಂ.ಎಂ. ಕಲಬುರ್ಗಿ ಅವರು ನನಗೆ ವಿಶ್ವವಿದ್ಯಾಲಯ ಧನಸಹಾಯ ಆಯೋಗದ ವತಿಯಿಂದ, ಗುಬ್ಬಿಯ ಮಲ್ಲಣಾರ್ಯರ ವೀರಶೈವಾಮೃತ ಮಹಾಪುರಾಣದ ಪರಿಷ್ಕೃತ ಯೋಜನೆಯನ್ನು ಸಿದ್ಧಪಡಿಸಿಕೊಟ್ಟವರು. ಅವರಿಗೆ ಧನ್ಯವಾದಗಳು.

ಮತ್ತೊಬ್ಬ ನನ್ನ ಮಿತ್ರರೂ, ಶ್ರೇಷ್ಠ ಕವಿಗಳೂ, ವಿಧಾನ ಪರಿಷತ್ತಿನ ಮಾಜಿ ಸದಸ್ಯರೂ, ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರೂ ಆದ ಡಾ. ಸಿದ್ಧಲಿಂಗಯ್ಯನವರಿಗೆ ಶುಭವನ್ನು ಕೋರುತ್ತೇನೆ. ಈ ಸಮಾರಂಭದಲ್ಲಿ ಅಭಿನಂದನಾ ನುಡಿಗಳನ್ನು ಸಲ್ಲಿಸಿರುವ ಏಕೈಕ ಮಹಿಳೆ ಡಾ. ವಿಜಯಾ ಸುಬ್ಬರಾಜ್ ಅವರು ಖ್ಯಾತ ವಿಮರ್ಶಕಿ, ಸಾಹಿತಿ. ಹಲವಾರು ವಿಚಾರ ಗೋಷ್ಠಿಗಳಲ್ಲಿ, ಕಾರ್ಯಕ್ರಮಗಳಲ್ಲಿ ನನ್ನೊಡನೆ ಭಾಗವಹಿಸಿದವರು, ಅವರಿಗೆ ಸುಸ್ವಾಗತ ಕೋರುತ್ತೇನೆ.

ಒಟ್ಟಿನಲ್ಲಿ ಹೇಳುವುದಾದರೆ ಅಭಿನಂದನಾ ಸಮಾರಂಭದಲ್ಲಿ ಭಾಗವಹಿಸುತ್ತಿರುವ, ಕೇಂದ್ರಸಚಿವರೂ, ಮಾಜಿ ಮುಖ್ಯಮಂತ್ರಿಗಳೂ, ಮಂತ್ರಿಗಳೂ, ಶಾಸಕರೂ ಮಾಜಿಉಪಕುಲಪತಿಗಳೂ, ಪ್ರಾಧ್ಯಾಪಕರೂ ಭಾಗವಹಿಸಿರುವುದು ಈ ಕಾರ್ಯಕ್ರಮಕ್ಕೆ ಒಂದು ಶೋಭೆಯನ್ನು ತಂದಿದೆ. ನನಗೆ ವಿಶೇಷವಾದ ತೃಪ್ತಿಯನ್ನೂ, ಸಮಾಧಾನವನ್ನೂ ಉಂಟುಮಾಡಿದೆ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಅಪಾರ ಕೃತಿಗಳು ಪ್ರಕಟವಾಗದಿರುವ ವಿಷಯ ಸರ್ವವೇದ್ಯವಾದುದು. ನಮ್ಮ ಪ್ರಾಚೀನರು ನಮಗೆ ಬಿಟ್ಟು ಹೋಗಿರುವ ಅಮೂಲ್ಯ ಆಸ್ತಿ ಹಸ್ತಪ್ರತಿಗಳು. ನಮ್ಮ ನಾಡಿನ ಧರ್ಮ, ಸಾಹಿತ್ಯ, ಸಂಸ್ಕೃತಿ, ಇತಿಹಾಸ, ಶಾಸ್ತ್ರ ಇವೇ ಮೊದಲಾದ ಸಂಗತಿಗಳು ಉಕ್ತವಾಗಿರುವುದು ಹಸ್ತಪ್ರತಿಗಳಲ್ಲಿ. ಇವುಗಳನ್ನು ಸಂರಕ್ಷಿಸಿ, ಅಮೂಲ್ಯ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸುವ ಸಂಸ್ಥೆಗಳಿಗೆ, ಆರ್ಥಿಕ ನೆರವು ನೀಡುವ ಜವಾಬ್ದಾರಿ ರಾಜ್ಯ ಮತ್ತು ಕೇಂದ್ರ ಸರ್ಕಾರಗಳಿಗೆ ಸಂಬಂಧಿಸಿದೆ. ಈ ನಿಟ್ಟಿನಲ್ಲಿ ಕೇಂದ್ರ ಸರ್ಕಾರ ಸೂಕ್ತಕ್ರಮ ಕೈಗೊಳ್ಳಬೇಕೆಂದು ಸನ್ಮಾನ್ಯ ಯೋಜನಾ ಸಚಿವರಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

ಎಂಬತ್ತನೆಯ ವಸಂತವನ್ನು ಕಂಡಿರುವ ನಾನು ಸಾಹಿತ್ಯಕ್ಷೇತ್ರಕ್ಕೆ ಸಲ್ಲಿಸಿರುವ ಸೇವೆ ಅತ್ಯಲ್ಪವಾದುದು ಎಂದು ಭಾವಿಸಿದ್ದೇನೆ. ಆದರೂ ನನ್ನ ಕೆಲವು ಸ್ನೇಹಿತರು, ಅಭಿಮಾನಿಗಳು ಈ ಅಭಿನಂದನಾ ಸಂಪುಟಗಳನ್ನು ಹೊರತಂದಿರುವುದು ಅವರ ಅಸಾಮಾನ್ಯ ಪ್ರೀತಿಗೆ, ಅಪಾರ ಅಭಿಮಾನಕ್ಕೆ ದ್ಯೋತಕವಾಗಿದೆ.

ನಾನು ಅದೃಷ್ಟಶಾಲಿ, ನನಗೆ ಅಪಾರ ಗುರುವರ್ಗ ದೊರೆತದ್ದು ನನ್ನ ಪುಣ್ಯವಿಶೇಷ. ಪ್ರೊ. ಎ.ಆರ್. ಕೃಷ್ಣಶಾಸ್ತ್ರೀ, ಪ್ರೊ. ಎ.ಎನ್. ಮೂರ್ತಿರಾವ್, ಪ್ರೊ. ಎಸ್.ವಿ. ರಂಗಣ್ಣ, ಪ್ರೊ. ನಾ. ಕಸ್ತೂರಿ, ಪ್ರೊ. ಕೆ.ವಿ. ಪುಟ್ಟಪ್ಪ, ಡಾ. ಡಿ.ಎಲ್. ನರಸಿಂಹಾಚಾರ್, ಪ್ರೊ|| ತೀ.ನಂ. ಶ್ರೀಕಂತಯ್ಯ, ಪ್ರೊ. ಕೆ.ವಿ. ರಾಘವಾಚಾರ್, ವಿ. ಸೀತಾರಾಮಯ್ಯ, ಜಿ.ಪಿ. ರಾಜರತ್ನಂ, ಸಿ.ಡಿ. ಗೋವಿಂದರಾವ್ -ಇವರೇ ಮೊದಲಾದವರು. ಇವರೆಲ್ಲ ಪ್ರಕಾಂಡ ಪಂಡಿತರು. ತ.ಸು. ಶಾಮರಾಯ, ಎಸ್.ವಿ. ಸಂಪತ್, ಎಲ್. ಗುಂಡಪ್ಪ, ಸಿ.ಡಿ. ನರಸಿಂಹಯ್ಯ ಜ್ಞಾನಸಿಂಧುಗಳು. ನಾನು ಈ ಸಿಂಧುವಿನಲ್ಲಿ ಒಂದು ಬಿಂದು ಮಾತ್ರ. ಈ ಸಾಹಿತ್ಯ ದಿಗ್ಗಜಗಳ ಜಾಡಿನಲ್ಲೇ ಸಾಗಿ ಬಂದಿದ್ದೇನೆ. ಆದರೆ ನನ್ನ ಗುರುಗಳದು ಆನೆಯ ಹೆಜ್ಜೆ, ನನ್ನದು ಆಡಿನ ಹೆಜ್ಜೆ, ಆದುದರಿಂದಲೇ ಅವರಿಗೂ ನನಗೂ ಅಜಗಜಾಂತರ.

ನಾನು ಸುಮಾರು ಐವತ್ತು ವರ್ಷಗಳಿಂದ ಬರೆಯುತ್ತಾ ಬಂದಿರುವ ಲೇಖನಗಳು, ಸಂಪಾದಿಸಿರುವ ಪ್ರಾಚೀನ ಕಾವ್ಯಗಳ ಪೀಠಿಕೆಗಳೂ "ಆರಾಧ್ಯಸಂಪದ" ಸಂಪುಟದಲ್ಲಿ ಸಮಾವೇಶಗೊಂಡಿವೆ. ಇವು ಆಯಾಕಾಲಕ್ಕೆ ಸಂದರ್ಭೋಚಿತವಾಗಿ ಬರೆದ ಲೇಖನಗಳು. ಇವನ್ನು ಬರೆಯುವ ಕಾಲಕ್ಕೆ ಉಪಲಬ್ಧವಿದ್ದ ಮಾಹಿತಿಯನ್ನೂ ಆಕರ, ಪರಿಕರಗಳನ್ನೂ ಬಳಸಿಕೊಳ್ಳಲಾಗಿದೆ. ಕಾಲ ಕಳೆದಂತೆ ಈ ಲೇಖನಗಳ ಬಗೆಗೆ ಹೊಸ ಮಾಹಿತಿಗಳೂ, ಆಕರಗಳೂ ಲಭ್ಯವಾಗಿವೆ.

ಆದುದರಿಂದ ನಾನು ಅಂದು ಬರೆದ ಲೇಖನಗಳೇ ಸಾರ್ವಕಾಲಿಕವಾದವುಗಳೆಂದು ಹೇಳಲಾಗದಿದ್ದರೂ ಆಯಾಯ ವಿಷಯಗಳ ಸ್ಥೂಲಪರಿಚಯವನ್ನು ಮಾಡಿಕೊಡುವಂತಹವು ಎಂದು ಹೇಳಲು ಬಯಸುತ್ತೇನೆ. ಆದುದರಿಂದ ನಾನು ಅಂದು ಬರೆದ ಲೇಖನಗಳೇ ಸರ್ವಶ್ರೇಷ್ಠವಾದವುಗಳೆಂದಾಗಲಿ, ಪರಮ ಪ್ರಮಾಣವಾದುವುಗಳೆಂದಾಗಲಿ ಭಾವಿಸುವುದಕ್ಕೆ ಎಡೆಯಿಲ್ಲ. ನಾನು ಎಂದಿಗೂ ಆ ರೀತಿ ಅಭಿಪ್ರಾಯಪಟ್ಟಿಲ್ಲ. ಹೊಸ ಆಕರ ಪರಿಕರಗಳಿಂದ ಆ ಲೇಖನಗಳು ಪರಿಷ್ಕರಣೆಗೊಳ್ಳುವುದು ಅಗತ್ಯವೂ ಹೌದು, ಅನಿವಾರ್ಯವೂ ಹೌದು. ಈ ಪರಿಷ್ಕರಣೆ ಯಾವುದೇ ಸಾಹಿತ್ಯದ ಜೀವಂತ ಲಕ್ಷಣ ಎಂದು ಭಾವಿಸಿದ್ದೇನೆ. ನನ್ನ ಅಭಿಪ್ರಾಯಗಳೂ ತೀರ್ಮಾನಗಳೂ ಸಾರ್ವಕಾಲಿಕವೆಂದು ನಾನೆಂದೂ ಭಾವಿಸಿಲ್ಲ. ಇಲ್ಲಿಯ ಲೇಖನಗಳು ಪರಿಷ್ಕರಣಗೊಂಡು ನಿರ್ದುಷ್ಟವಾಗಿ ಪ್ರಕಟಗೊಂಡರೆ ನನಗೆ ಅಪರಿಮಿತ ಸಂತೋಷವಾಗುತ್ತದೆ. ಈ ಕಾರ್ಯವಾಗುವುದಕ್ಕೆ ಮೊದಲು ಈ ಲೇಖನಗಳು ಯಾವ ಕಾಲಕ್ಕೆ ಯಾವ ಸನ್ನಿವೇಶಕ್ಕೆ ಬರೆದವುಗಳು ಎಂಬುದನ್ನು ಅನುಲಕ್ಷಿಸಬೇಕಾಗುತ್ತದೆ. ಈ ದೃಷ್ಟಿಯಿಂದ ಆರಾಧ್ಯ ಸಂಪದ ಸಂಪುಟದ ಲೇಖನಗಳು ಮರುಮೌಲ್ಯಮಾಪನಗೊಳ್ಳುವುದು ಅನಿವಾರ್ಯವೆಂದು ಭಾವಿಸುತ್ತೇನೆ.

"ಆರಾಧ್ಯ ಸಿರಿ" ಎಂಬ ಸಂಪುಟದಲ್ಲಿ ನನಗಿಂತ ಹಿರಿಯರೂ, ಕಿರಿಯರೂ, ಮಿತ್ರರೂ, ಅಭಿಮಾನಿಗಳೂ ನನ್ನ ಬಗ್ಗೆ ಅವರ ಅನಿಸಿಕೆಗಳನ್ನು ವ್ಯಕ್ತಪಡಿಸಿರುವ ಬರಹಗಳಿವೆ. ವಿವಿಧ ಸಂದರ್ಭ, ಸನ್ನಿವೇಶಗಳಲ್ಲಿ ವಿಭಿನ್ನ ವಿಷಯಗಳಿಗೆ ಸಂಬಂಧಿಸಿದ ವೈಯಕ್ತಿಕ ಲೇಖನಗಳು ಸಮಾವೇಶಗೊಂಡಿವೆ. ನನ್ನ ಬಗೆಗೆ ಅವರ ಒಲವು-ನಿಲವುಗಳ ನಿರೂಪಣೆ ಇದೆ. ಇವು ವ್ಯಕ್ತಿ, ವ್ಯಕ್ತಿಯಿಂದ ಸಮಯ ಸಂದರ್ಭಗಳಿಗೆ ಸಂಬಂಧಿಸಿದ ವಿಷಯಗಳನ್ನು ದಾಖಲಿಸಲಾಗಿದೆ. ಇದು ಒಂದು ಬಗೆಯ ಸ್ತುತಿಮಾಲೆಯಂತೆ ಕಂಡರೂ ಅಚ್ಚರಿಪಡಬೇಕಾಗಿಲ್ಲ.

ಇಲ್ಲಿಯ ಲೇಖನಗಳಲ್ಲಿ ಕೆಲವೆಡೆ ವಾಕ್ಯಗಳ ವಿಷಯಗಳ ಪುನರುಕ್ತಿಯಾಗಿರಬಹುದು. ವಿವಿಧ ಸಂದರ್ಭಗಳಲ್ಲಿ ಬರೆದ ಲೇಖನಗಳಲ್ಲಿ ಹೀಗಾಗುವುದು ಅನಿವಾರ್ಯ. ವಚನ ಸಾಹಿತ್ಯವನ್ನು ಕುರಿತ ಲೇಖನಗಳಲ್ಲಿ ವಾಕ್ಯಗಳೂ, ವಚನಗಳೂ ಪುನರುಕ್ತವಾಗುವುದು ಕಂಡುಬರಬಹುದು. ಹಾಗೆಯೇ ನಿಘಂಟನ್ನು ಕುರಿತ ಲೇಖನಗಳಲ್ಲಿಯೂ, ಪುನರುಕ್ತಿಗಳಾಗಿರಬಹುದು. ಈ ತೆರನ ಪ್ರಮಾದಗಳನ್ನು ಸಹೃದಯತೆಯಿಂದ ಪರಿಭಾವಿಸಬೇಕೆಂದು ಪ್ರಾರ್ಥಿಸುತ್ತೇನೆ.

ನನ್ನ ಬರಹಗಳ ಬಗೆಗೆ ನಾನು ಏನನ್ನೂ ಹೇಳಬೇಕಾಗಿಲ್ಲ. ಅವು ಜನತೆಯ ಮುಂದೆ ಇವೆ. ಅವುಗಳಲ್ಲಿ ಲೋಪದೋಷಗಳಿದ್ದರೆ ದಯವಿಟ್ಟು ತಿಳಿಸಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ. ಉಪಯುಕ್ತವಾದವುಗಳಿದ್ದರೆ ಸ್ವೀಕರಿಸಬೇಕೆಂದು ವಿನಂತಿಸುತ್ತೇನೆ.

ಈ ಅಭಿನಂದನಾ ಸಮಾರಂಭಕ್ಕೆ ಪ್ರೀತ್ಯಾದರಗಳಿಂದ ದಯಮಾಡಿಸಿರುವ ಮಿತ್ರರೇ, ಬಂಧುಗಳೇ ಹಾಗೂ ಗುರುಹಿರಿಯರೇ ತಮ್ಮ ವಿಶ್ವಾಸಕ್ಕೆ ಚಿರಋಣಿಯಾಗಿದ್ದೇನೆ.

ಈ ಅಭಿನಂದನಾ ಸಮಾರಂಭವನ್ನು ಅತ್ಯಂತ ವಿಶ್ವಾಸದಿಂದ ಏರ್ಪಡಿಸಿ ನಿರಂತರವಾಗಿ ದುಡಿದ ಈ ಸಮಿತಿಯ ಅಧ್ಯಕ್ಷರು ಮತ್ತು ಇನ್ನಿತರ ಪದಾಧಿಕಾರಿಗಳನ್ನು ಹೃದಯಪೂರ್ವಕವಾಗಿ ಅಭಿನಂದಿಸುತ್ತೇನೆ.

ಈ ಸಮಾರಂಭದ ಯಶಸ್ಸಿಗೆ ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ, ಕೆಲಸ ಮಾಡಿದ ಎಲ್ಲರಿಗೂ ನನ್ನ ಅನೇಕಾನೇಕ ಧನ್ಯವಾದಗಳು.



# ಕಲೆ

**ಕ**ಲೆ ತುಂಬ ವ್ಯಾಪಕವಾದ ಅರ್ಥವುಳ್ಳ ಒಂದು ಪರಿಭಾಷೆ. ಆದಿಮಾನವ ನಿಂದ ಆಧುನಿಕ ಮಾನವನವರೆಗೆ ಕಲೆ ನಿರಂತರವಾಗಿ ವಿಕಾಸಹೊಂದುತ್ತ ಬಂದಿರುವುದನ್ನು ಕಂಡುಕೊಳ್ಳಬಹುದಾಗಿದೆ. ಪ್ರಪಂಚದ ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಕಲೆ ಪ್ರಚಲಿತವಾಗಿದೆ.

ಭರತಖಂಡದಲ್ಲಿ ಈ ಕಲೆ ನಾನಾ ಸ್ತರಗಳಲ್ಲಿ ಅಭಿವ್ಯಕ್ತಿಗೊಂಡಿದೆ. ಇದಕ್ಕೆ ಸಾಕಷ್ಟು ಐತಿಹಾಸಿಕ ಮತ್ತು ಚಾರಿತ್ರಿಕ ದಾಖಲೆಗಳಿವೆ. ವ್ಯಾಪಕಾರ್ಥವುಳ್ಳ ಈ ಶಬ್ದದಲ್ಲಿ ವಿವಿಧವೃತ್ತಿಗಳಿಗೆ ಸಂಬಂಧಿಸಿದ ಕಲೆಗಳಿವೆ. ನೆಯ್ಗೆ, ಕುಂಬಾರಿಕೆ, ಕಂಚುಗಾರಿಕೆ ಮುಂತಾದುವನ್ನು ಉಪಯುಕ್ತ ಕಲೆಗಳೆಂದು ಕರೆದಿದ್ದಾರೆ. ಹಾಗೆಯೇ ಶಿಲ್ಪ, ಸಂಗೀತ, ಕಾವ್ಯ ಇವುಗಳಿಗೆ ಸಂಬಂಧಿಸಿದುದನ್ನು ಲಲಿತ ಕಲೆಗಳೆಂದು ಕರೆದಿದ್ದಾರೆ. ಇಂದು ಕಲೆ ಎಂದರೆ ಲಲಿತಕಲೆ ಎಂದೇ ರೂಢಿಯಲ್ಲಿ ಬಂದಿದೆ. ಕಲೆಯ ಈ ಸಂಕುಚಿತ ಅರ್ಥದಲ್ಲಿ ವಾಸ್ತುಶಿಲ್ಪ, ವರ್ಣಚಿತ್ರ, ರೇಖಾಚಿತ್ರ, ಸಂಗೀತ, ಕವಿತೆ ಇವು ಸೇರಿಕೊಂಡಿವೆ. ಪಾಶ್ಚಾತ್ಯ ವಿದ್ವಾಂಸರು ಕಲೆಯ ಬಗ್ಗೆ ವಿಶೇಷವಾದ ಜಿಜ್ಞಾಸೆಯನ್ನು ನಡೆಸಿದ್ದಾರೆ. ಸ್ಯಾಮುಯಲ್ ಜಾನ್ಸನ್ ಪ್ರಕೃತಿಯಲ್ಲಿ ಇಲ್ಲದಿರುವುದನ್ನು ಮನುಷ್ಯ ತನ್ನ ಪ್ರತಿಭೆಯಿಂದ ಸೃಷ್ಟಿಸುವುದೇ ಕಲೆ ಎಂದಿದ್ದಾನೆ. ಪ್ರಕೃತಿಯ ಪ್ರತಿಕೃತಿಯೇ ಕಲೆಯ ಮುಖ್ಯವಾದ ಅಂಶ.

ಕಲೆ ಬೆಳೆದುಬಂದದ್ದು ರಾಜಾಶ್ರಯದಿಂದ, ಶ್ರೀಮಂತರ ನೆರವಿನಿಂದ ಎಂಬುದು ನಿರ್ವಿವಾದವಾದುದು. ರಾಜಮಹಾರಾಜರು ಕಲೆಗಾರರಿಗೆ ಪ್ರೋತ್ಸಾಹವನ್ನು ನೀಡಿ ಅವರ ಕಲಾಕೃತಿಗಳನ್ನು ತಮ್ಮ ಮನೆಯಲ್ಲಿ ಸಿಂಗರಿಸಿ ಇಟ್ಟುಕೊಳ್ಳುತ್ತಿದ್ದರು. ಆದುದರಿಂದಲೇ ನಮ್ಮ ಪ್ರಾಚೀನರು "ವಿನಾಶ್ರಯಂ ನ ಶೋಭಂತೆ ಲತಾ ಕವಿತಾ" ಎಂದಿದ್ದಾರೆ. ಈ ಉಕ್ತಿ ಎಲ್ಲ ಕಲೆಗಳಿಗೂ ಅನ್ವಯವಾಗುತ್ತದೆ. ಪ್ರಾಚೀನ ಕಲಾಕೃತಿಗಳೆಲ್ಲ ಬಹುಮಟ್ಟಿಗೆ ಧರ್ಮಕ್ಕೆ ಮೀಸಲಾಗಿದ್ದುವು. ಕ್ರಮೇಣ ಕಾಲದೇಶ ಪರಿಸರಗಳಿಗೆ ಅನುಗುಣವಾಗಿ ಈ ದೃಷ್ಟಿ ಬದಲಾಗುತ್ತ ಬಂದಿದೆ. ಹಿಂದೆ ಧಾರ್ಮಿಕ ನಿಷ್ಠವಾಗಿದ್ದ ಕಲೆ ಈಗ ಸಮಾಜದ ಪ್ರತಿಬಿಂಬವಾಗಿದೆ.

ಕಲೆ ಇಂದು ಕೇವಲ ಚಿತ್ರಕಲೆಗಳಿಗೆ ಮಾತ್ರ ಸೀಮಿತಗೊಳಿಸಿಕೊಂಡಿದೆ. ಕರ್ನಾಟಕ ಚಿತ್ರಕಲೆಗಳಿಗೆ ಮಾತ್ರ ಪ್ರಸಿದ್ಧವಾದುದು. ಕಲೆಯ ಮೂಲ ಮತ್ತು ಚೂಲ ಆನಂದಾನುಭೂತಿಯನ್ನೂ ರಸಾನುಭೂತಿಯನ್ನೂ ಉಂಟುಮಾಡುವುದಾಗಿದೆ. ಇಂತಹ ಕಲೆಯನ್ನು ನಿರ್ಮಿಸುವ ಕಲೆಗಾರ ತುಂಬ ಪ್ರತಿಭಾವಂತನಾಗಿರಬೇಕು. ಕೆಲವು ವಿದ್ವಾಂಸರು ದೇವರು ಪ್ರಕೃತಿ ಮತ್ತು ಕಲೆಯಲ್ಲಿ ಸೌಂದರ್ಯ ರೂಪದಲ್ಲಿ ಮೈದೋರುತ್ತಾನೆಂದೂ ಸೌಂದರ್ಯಾಭಿವ್ಯಕ್ತಿಯೇ ಕಲೆಯೆಂದೂ ಅಭಿಪ್ರಾಯಪಟ್ಟಿದ್ದಾರೆ.

ಕಲೆ ನಿತ್ಯಜೀವನದಲ್ಲಿ ಉಪಯುಕ್ತವಾದ ಪಾತ್ರವನ್ನು ನಿರ್ವಹಿಸುತ್ತಿದೆ. ಕಲೆಗಾರನ ಪ್ರತಿಭೆಯಿಂದ ಹೊರಬಿದ್ದ ಕೃತಕಸೃಷ್ಟಿಯೇ ಕಲೆ ಎನ್ನಬಹುದು. ಇವು ಕಾಲ, ದೇಶ, ವ್ಯಕ್ತಿಗಳ ಬುದ್ಧಿಶಕ್ತಿಯನ್ನೂ ಉದ್ದೇಶ ಮುಂತಾದ ಅಂಶಗಳನ್ನು

ಅವಲಂಬಿಸಿರುತ್ತದೆ. ಅಪ್ರತಿಮ ಪ್ರತಿಭಾವಂತನ ಸೃಷ್ಟಿ ನವನವೋನ್ಮೇಷಶಾಲಿಯಾಗಿರಬಲ್ಲುದು. ಕಲೆಯ ಪರಮೋದ್ದೇಶ ನೀತಿ, ಧರ್ಮ ಮತ್ತು ಸತ್ಯಗಳ ಪ್ರತಿಪಾದನೆಯಾಗಿರಬೇಕು. ಇಂತಹ ಕಲಾಕೃತಿಗಳನ್ನು ಸೃಷ್ಟಿಸುವ ಕಲೆಗಾರ ನಿಜಕ್ಕೂ ಪ್ರತಿಭಾವಂತ.

ಯುಗಧರ್ಮ ಆಯಾ ಕಾಲದಲ್ಲಿ ಪ್ರಚಲಿತವಾದ ದೃಷ್ಟಿ. ಪರಿಶ್ರಮದಿಂದ ಕೂಡಿದ ಸೌಲಭ್ಯ. ನೆರೆನಾಡುಗಳ ಪ್ರಭಾವ, ಆರ್ಥಿಕ, ಔದ್ಯಮಿಕ ಪರಿಸ್ಥಿತಿ ಮುಂತಾದ ವಿವರಗಳನ್ನು ಅನುಸರಿಸಿ ಸಿದ್ಧವಾಗುವ ಕಲಾಭಿರುಚಿ ಜನಗಳ ಮನೋಧರ್ಮವನ್ನು ಅವಲಂಬಿಸಿರುತ್ತದೆ. ಕೆಲವೊಮ್ಮೆ ಕಲಾವಿದರು ಯುಗಧರ್ಮವನ್ನು ಗ್ರಹಿಸಿ ಮುಂಬರಲಿರುವ ರುಚಿಯನ್ನು ನಿರೀಕ್ಷಿಸಿಯೇ ಕಲಾಸೃಷ್ಟಿ ಮಾಡುತ್ತಾರೆ.

ಪಾಶ್ಚಾತ್ಯರಲ್ಲಿ ಲಿಯೋ ಟಾಲ್‌ಸ್ಟಾಯ್ What is art ಎಂಬ ಉದ್ಗ್ರಂಥವನ್ನೇ ಬರೆದಿದ್ದಾನೆ. ಕನ್ನಡದಲ್ಲಿ ಕಲೆಯನ್ನು ಕುರಿತು ಡಾ. ಶಿವರಾಮ ಕಾರಂತ, ಡಾ. ಎಂ.ಎಚ್. ಕೃಷ್ಣ ಇವರೇ ಮೊದಲಾದವರು ಕೃತಿಗಳನ್ನು ರಚಿಸಿದ್ದಾರೆ.

ಇಂದು ಕರ್ನಾಟಕದ ಅರಮನೆ ಗುರುಮನೆಗಳಲ್ಲಿ ಜೀವಂತವಾಗಿರುವ ಪ್ರಾಚೀನ ಚಿತ್ರಕಲೆಗಳು ನಮ್ಮ ಕಲಾವಿದರ ಪ್ರತಿಭೆಯನ್ನು ಎತ್ತಿ ಸಾರುತ್ತಿವೆ. ಮೈಸೂರಿನ ಜಗನ್ಮೋಹನ ಅರಮನೆಯಲ್ಲಿರುವ ಶ್ರೀ ವೆಂಕಟಪ್ಪನವರ ಕಲಾಕೃತಿಗಳು ಇದಕ್ಕೆ ನಿದರ್ಶನವಾಗಿವೆ.



# ಅಧ್ಯಕ್ಷ ಭಾಷಣ
## [ಹಸ್ತಪ್ರತಿ ಅಧ್ಯಯನ ಶಾಸ್ತ್ರದ ರಾಷ್ಟ್ರೀಯ ವಿಚಾರಗೋಷ್ಠಿ–ಉಜಿರೆ]

ಹಸ್ತಪ್ರತಿ ಅಧ್ಯಯನ ಶಾಸ್ತ್ರದ ಈ ರಾಷ್ಟ್ರೀಯ ವಿಚಾರಗೋಷ್ಠಿಯ ಅಧ್ಯಕ್ಷನಾಗಿ ಕೆಲವು ಸಂಗತಿಗಳನ್ನು ತಮ್ಮ ಮುಂದೆ ಸಾದರಪಡಿಸಲು ತುಂಬ ಸಂತೋಷವಾಗುತ್ತಿದೆ. ಪ್ರಪ್ರಥಮವಾಗಿ ಈ ವಿಚಾರಗೋಷ್ಠಿಗೆ ಕಾರಣೀಭೂತರಾದ ಶತಮಾನೋತ್ಸವದ ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಬಗೆಗೆ ಸ್ಥೂಲವಾದ ಕೆಲವು ಮಾಹಿತಿಗಳನ್ನು ನೀಡಿ ತರುವಾಯ ಅವರಿಗೆ ಪ್ರಿಯವಾಗಿದ್ದ ಹಸ್ತಪ್ರತಿ ಅಧ್ಯಯನದ ಬಗೆಗೆ ನನ್ನ ಅಭಿಪ್ರಾಯವನ್ನು ತಿಳಿಯಲಿಚ್ಛಿಸುತ್ತೇನೆ.

ನವೋದಯ ಸಾಹಿತ್ಯದ ಪ್ರತಿಭಾವಂತ ಸಾಹಿತಿಗಳಲ್ಲಿ ಪ್ರೊ. ಎಂ.ವಿ. ಸೀತಾರಾಮಯ್ಯನವರು ಪ್ರಮುಖರು. ಶ್ರೀಯುತರು ಕನ್ನಡ ಸಾಹಿತ್ಯದ ಕಾವ್ಯ, ಕಾದಂಬರಿ, ನಾಟಕ, ವ್ಯಕ್ತಿಚಿತ್ರ, ಜೀವನಚರಿತ್ರೆ, ಭಾಷೆ, ಛಂದಸ್ಸು, ವ್ಯಾಕರಣ, ಗ್ರಂಥಸಂಪಾದನೆ –ಇವೇ ಮೊದಲಾದ ಪ್ರಕಾರಗಳಲ್ಲಿ ಅನನ್ಯಸಾಧನೆಯನ್ನು ಮಾಡಿದ್ದಾರೆ. ಶತಮಾನಕ್ಕೆ ಸರಿಸಾಟಿಯೋ ಎಂಬಂತೆ ನೂರುಕೃತಿಗಳನ್ನು ಹೊರತಂದಿದ್ದಾರೆ. ಎಂ.ವಿ. ಸೀತಾರಾಮಯ್ಯನವರನ್ನೂ ಅವರು ನಡೆದು ಬಂದ ದಾರಿಯನ್ನೂ ಪರಿಶೀಲಿಸಿದವರಿಗೆ ಅವರ ಸಾಧನೆ ಆಶ್ಚರ್ಯವನ್ನೂ ಅದ್ಭುತವನ್ನೂ ಉಂಟುಮಾಡುವುದರಲ್ಲಿ ಯಾವ ಸಂಶಯವೂ ಇಲ್ಲ.

ಎಂ.ವಿ.ಸೀ ಇತಿವೃತ್ತಗಳು ಇಂತಿವೆ: ಶ್ರೀಯುತರು ಕೀರ್ತನಪರಂಪರೆಯ ಹರಿಕಾರರಾದ ತಿಮ್ಮಪ್ಪದಾಸರ ವಂಶಸ್ಥರು. ಇವರ ತಂದೆ ವೆಂಕಟದಾಸಪ್ಪ, ತಾಯಿ ಸಾವಿತ್ರಮ್ಮ. ಮೈಸೂರಿನ ಬನುಮಯ್ಯ ಶಾಲೆಯಲ್ಲಿ ಪ್ರೌಢಶಿಕ್ಷಣ, ಮಹಾರಾಜ ಕಾಲೇಜಿನಲ್ಲಿ ಬಿ.ಎ. ಪದವಿ, ಮೈಸೂರು ವಿಶ್ವವಿದ್ಯಾನಿಲಯದಿಂದ ಎಂ.ಎ. ಪದವಿ. ಇವರ ಮೇಲೆ ಪ್ರಭಾವ ಬೀರಿದವರು. ಬಿ.ಎಂ. ಶ್ರೀಕಂಠಯ್ಯ, ಎ.ಆರ್. ಕೃಷ್ಣಶಾಸ್ತ್ರೀ, ಟಿ.ಎಸ್. ವೆಂಕಣ್ಣಯ್ಯ, ತೀ.ನಂ. ಶ್ರೀಕಂಠಯ್ಯ, ಡಿ.ಎಲ್. ನರಸಿಂಹಾಚಾರ್ ಇವರೇ ಮೊದಲಾದವರು.

ಎಂ.ವಿ. ಸೀತಾರಾಮಯ್ಯನವರು ವಿದ್ಯಾಭ್ಯಾಸ ಮಾಡುತ್ತಿದ್ದಾಗಲೇ ಅಂದು ಪ್ರಸಿದ್ಧ ಸಂಗೀತ ವಿದ್ವಾಂಸರಾಗಿದ್ದ ಎಲ್. ರಾಜಾರಾಯರ ಬಳಿ ಮೃದಂಗವನ್ನು ಕಲಿತು ವೀಣೆ ಶೇಷಣ್ಣನವರ ಸಂಗೀತ ಕಚೇರಿಗೆ ಪಕ್ಕವಾದ್ಯ ನುಡಿಸುವಷ್ಟು ಪ್ರಭುತ್ವವನ್ನು ಪಡೆದಿದ್ದರು.

ಚಿತ್ರಕಲೆಯಲ್ಲಿ ಆಸಕ್ತಿಯನ್ನು ಹೊಂದಿದ್ದ ಎಂ.ವೀ. ಸೀತಾರಾಮಯ್ಯ ಅವರು ಅಂದಿನ ಸುಪ್ರಸಿದ್ಧ ಚಿತ್ರಕಲಾವಿದರಿಂದ ಕೆ. ವೆಂಕಟಪ್ಪನವರ ಶಿಷ್ಯರಾಗಿ ಚಿತ್ರಕಲೆಯಲ್ಲಿ ನೈಪುಣ್ಯವನ್ನು ಪಡೆದದ್ದೇ ಅಲ್ಲದೆ ಶಾಂತಿನಿಕೇತನಕ್ಕೆ ಹೋಗಿ ಹೆಚ್ಚಿನ ಪರಿಣತಿಯನ್ನು ಪಡೆದರು. ಶ್ರೀಯುತರು ರಚಿಸಿದ ಅನೇಕ ಚಿತ್ರಗಳು ಮೈಸೂರು ದಸರಾವಸ್ತುಪ್ರದರ್ಶನ ಮತ್ತು ಮದರಾಸಿನ ಕಾಂಗ್ರೆಸ್‌ವಸ್ತುಪ್ರದರ್ಶನಗಳಲ್ಲಿ ಪ್ರದರ್ಶನವಾಗಿದ್ದುವು.

ವಿದ್ಯಾರ್ಥಿದೆಸೆಯಿಂದಲೂ ಸಾಹಿತ್ಯದಲ್ಲಿ ಅಪಾರ ಆಸಕ್ತಿಯನ್ನು ಹೊಂದಿದ್ದ ಎಂ.ವಿ. ಸೀತಾರಾಮಯ್ಯನವರು ಸೃಜನಾತ್ಮಕ ಮತ್ತು ಸೃಜನೇತರ ಕ್ಷೇತ್ರಗಳಿಗೆ ಸಂಬಂಧಿಸಿದ ಅಸಂಖ್ಯಾತ ಕೃತಿಗಳನ್ನು ರಚಿಸಿದ್ದಾರೆ. ಅಲ್ಲದೆ ಶಾಸ್ತ್ರೀಯ ಸಾಹಿತ್ಯಕ್ಕೆ ಸಂಬಂಧಿಸಿದ ಕಾವ್ಯಮೀಮಾಂಸೆ, ಛಂದಸ್ಸು, ವ್ಯಾಕರಣ, ಗ್ರಂಥಸಂಪಾದನೆ ಇವೇ ಮೊದಲಾದ ಕ್ಷೇತ್ರಗಳ ಕೃತಿಗಳನ್ನೂ ಬರೆದಿದ್ದಾರೆ.

ಎಂ.ವಿ. ಸೀತಾರಾಮಯ್ಯನವರ ಸಮಗ್ರಸಾಹಿತ್ಯದಲ್ಲಿ ಹದಿಮೂರು ಕವನಸಂಕಲನಗಳೂ ಎಂಟು ಕಥಾಸಂಕಲನಗಳೂ ಹನ್ನೆರಡು ಕಾದಂಬರಿಗಳೂ ಎಂಟು ನಾಟಕಗಳೂ ಮೂರು ಪ್ರಬಂಧಸಂಕಲನಗಳೂ ಎರಡು ವ್ಯಕ್ತಿಚಿತ್ರಗಳೂ ನಾಲ್ಕು ಶಿಶುಸಾಹಿತ್ಯ ಕೃತಿಗಳೂ ಹತ್ತು ಶಾಸ್ತ್ರಗ್ರಂಥಗಳೂ ನಾಲ್ಕು ಸಂಪಾದಿತ ಕೃತಿಗಳೂ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದಿಂದ ಐದು ಕೃತಿಗಳೂ ಪ್ರಕಟವಾಗಿವೆ. ಶ್ರೀಯುತರ ಶತಮಾನೋತ್ಸವದ ಸಂಕೇತವಾಗಿ ನೂರುಕೃತಿಗಳು ಅವರ ಹೆಸರಿನಲ್ಲಿ ಕಂಡುಬರುವುದು ಕಾಕತಾಳೀಯವಾಗಿದೆ.

ಎಂ.ವಿ. ಸೀತಾರಾಮಯ್ಯನವರು ೧೯೩೪-೩೯ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿದ್ದರು. ೧೯೩೯-೪೦ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟಿನ ಸಹ ಸಂಪಾದಕರಾಗಿದ್ದರು. ಬೆಂಗಳೂರಿನ ಸರ್ಕಾರಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ೧೯೪೬ರಲ್ಲಿ ನೇಮಕಗೊಂಡು ೧೯೬೩ರಲ್ಲಿ ಪ್ರವಾಚಕರಾಗಿ ಸೇವೆ ಸಲ್ಲಿಸಿ ನಿವೃತ್ತರಾದರು. ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಯುಜಿಸಿ ಪ್ರಾಧ್ಯಾಪಕರಾಗಿ ಸೇವೆಯನ್ನು ಸಲ್ಲಿಸಿದ್ದಾರೆ.

ಕನ್ನಡದ ಕಣ್ವ, ನವೋದಯ ಸಾಹಿತ್ಯದ ಆಚಾರ್ಯ, ಯುಗಪ್ರವರ್ತಕ ಬಿ.ಎಂ. ಶ್ರೀಕಂಠಯ್ಯನವರ ಹೆಸರಿನಲ್ಲಿ ಅವರ ಶಿಷ್ಯರಾದ ಪ್ರೊ. ಎಂ.ವಿ. ಸೀತಾರಾಮಯ್ಯನವರು ಸ್ಥಾಪಿಸಿದ ಬಿ.ಎಂ.ಶ್ರೀಸ್ಮಾರಕ ಪ್ರತಿಷ್ಠಾನ ರಾಷ್ಟ್ರಕವಿ ಕುವೆಂಪು ಅವರಿಂದ ೧೯೭೯ರಲ್ಲಿ ವಿಧ್ಯುಕ್ತವಾಗಿ ಉದ್ಘಾಟನೆಗೊಂಡು ಕಾರ್ಯನಿರ್ವಹಿಸುತ್ತಿದೆ. ಈ ಪ್ರತಿಷ್ಠಾನದ ಗೌರವಾಧ್ಯಕ್ಷರಾಗಿ, ನಿವೃತ್ತ ಮುಖ್ಯನ್ಯಾಯಮೂರ್ತಿಗಳಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಸಂಸ್ಥೆಯ ಪುರೋಭಿವೃದ್ಧಿಗೆ ನಿರಂತರ ಮಾರ್ಗದರ್ಶನ ನೀಡುತ್ತಾ ಬಂದಿದ್ದಾರೆ. ಹೆಸರಾಂತ ಸಾಹಿತಿಗಳಾದ ಪ್ರೊ. ಎಲ್.ಎಸ್. ಶೇಷಗಿರಿರಾಯರು ಪ್ರತಿಷ್ಠಾನದ ಕಾರ್ಯಾಧ್ಯಕ್ಷರಾಗಿ ಗಣನೀಯ ಕಾರ್ಯವನ್ನು ನಿರ್ವಹಿಸಿದ್ದಾರೆ. ಇವರಾದ ಮೇಲೆ ಶ್ರೀ ಎಸ್. ಬಸವಾರಾಧ್ಯರು ಕಾರ್ಯಾಧ್ಯಕ್ಷರಾಗಿ ಒಂಬತ್ತುವರ್ಷಗಳ ಕಾಲ ಶ್ರೀಭವನದ ನಿರ್ಮಾಣಕ್ಕೆ ಅಹರ್ನಿಶಿ ದುಡಿದಿದ್ದಾರೆ.

ಬಿಎಂಶ್ರೀಸ್ಮಾರಕಪ್ರತಿಷ್ಠಾನ ಅದರ ಸಂಸ್ಥಾಪಕರಾದ ಎಂ.ವಿ. ಸೀತಾರಾಮಯ್ಯನವರ ಮನೆಯಲ್ಲಿಯೇ ಕಾರ್ಯನಿರ್ವಹಿಸುತ್ತಿತ್ತು. ಆಮೇಲೆ ಮಾಸ್ತಿ ವೆಂಕಟೇಶಅಯ್ಯಂಗಾರ್ ಅವರ ಮನೆಯಲ್ಲಿ ಸ್ವಲ್ಪಕಾಲ ಇದ್ದು ತರುವಾಯ ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಯಲ್ಲಿ ನೆಲೆಗೊಂಡಿತು. ಬಿಎಂಶ್ರೀ ಪ್ರತಿಷ್ಠಾನಕ್ಕೆ ಸ್ವಂತಕಟ್ಟಡ ಇರಲಿಲ್ಲ. ಎಂ.ವಿ. ಸೀತಾರಾಮಯ್ಯನವರು ಸಂಸ್ಥೆಯ ಕಟ್ಟಡಕ್ಕಾಗಿ ನರಸಿಂಹರಾಜ ಕಾಲೋನಿಯಲ್ಲಿ ಬೆಂಗಳೂರು ನಗರಪಾಲಿಕೆಯಿಂದ ಎರಡು ನಿವೇಶನಗಳನ್ನು ಪಡೆದುಕೊಂಡಿದ್ದರು. ಇವನ್ನು ಸ್ವಾಧೀನಪಡಿಸಿಕೊಂಡದ್ದು ಸನ್ಮಾನ್ಯ ಎಂ. ವೀರಪ್ಪ ಮೊಯಿಲಿ ಅವರು ಮುಖ್ಯಮಂತ್ರಿಗಳಾಗಿದ್ದಾಗ. ಈ ನಿವೇಶನದಲ್ಲಿ ನಿರ್ಮಾಣಗೊಳ್ಳಲಿರುವ ಶ್ರೀಭವನದ ಶಂಕುಸ್ಥಾಪನೆಯನ್ನು ಪರಮಪೂಜ್ಯ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು ಅಂದು ನೆರವೇರಿಸಿಕೊಟ್ಟರು. ಶ್ರೀಗಳವರು ಬಿಎಂಶ್ರೀಸ್ಮಾರಕಪ್ರತಿಷ್ಠಾನದ ಮಹಾಪೋಷಕರು. ಬಿಎಂಶ್ರೀ ಅವರ ಹುಟ್ಟೂರಾದ ಬೆಳ್ಳೂರಿನಲ್ಲಿ ಮಂಡ್ಯ ಜಿಲ್ಲಾಪರಿಷತ್ತಿನ ವತಿಯಿಂದ ಶ್ರೀ ಕೆ. ಸಿಂಗಾರಿಗೌಡರು ಅಧ್ಯಕ್ಷರಾಗಿದ್ದಾಗ ನಿರ್ಮಾಣವಾದ ಶ್ರೀಭವನದ ಉದ್ಘಾಟನಾ ಕಾರ್ಯವನ್ನು ಶ್ರೀಗಳವರೇ ನೆರವೇರಿಸಿಕೊಟ್ಟಿದ್ದಾರೆ.

ಬಿಎಂಶ್ರೀಸ್ಮಾರಕಪ್ರತಿಷ್ಠಾನ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗಳ ಸಂವರ್ಧನೆಗೆ ಮೀಸಲಾದ ಸಂಸ್ಥೆ. ಪ್ರಧಾನವಾಗಿ ಸಂಶೋಧನೆಗೆ ಸಂಬಂಧಿಸಿದ ಕಾರ್ಯಗಳನ್ನು ನಡೆಸುತ್ತಿದೆ. "ದೇಶದಲ್ಲಿ ಹುಳುತಿಂದುಹೋಗದೆ ಇರುವ ಗ್ರಂಥಗಳನ್ನೆಲ್ಲ

ಶೇಖರಿಸಿ ಒಂದನ್ನೂ ಬಿಡದೆ ಅಚ್ಚುಹಾಕಿಸುವುದು. ಅಚ್ಚಾದ ಮೇಲೆ ಎಲ್ಲವನ್ನೂ ಕೊನೆಮುಟ್ಟ ಶೋಧಿಸಿ ಹೊಸದಾಗಿ ಕಾಲಕ್ಕೆ ತಕ್ಕಂತೆ ರಚಿಸುವುದು" ಎಂಬ ಶ್ರೀವಾಣಿಯನ್ನು ಅಕ್ಷರಶಃ ಪ್ರತಿಪಾಲಿಸಿಕೊಂಡು ಬರುತ್ತಿದೆ. ಈ ದಿಸೆಯಲ್ಲಿ ಒಂದು ಸಾವಿರಕ್ಕೂ ಮಿಗಿಲಾದ ಹಸ್ತಪ್ರತಿಗಳನ್ನು ಸಂಗ್ರಹಿಸಿದೆ. ಈ ಹಸ್ತಪ್ರತಿಗಳನ್ನು ಓದುವುದು; ಸಂರಕ್ಷಿಸುವುದು ಪ್ರಾಚೀನಗ್ರಂಥಗಳನ್ನು ಶಾಸ್ತ್ರೀಯವಾಗಿ ಸಂಪಾದಿಸುವುದು ಈ ಸಂಬಂಧವಾಗಿ ತರಗತಿಗಳನ್ನು ನಡೆಸಿ ಆಸಕ್ತರಿಗೆ ತರಬೇತಿಯನ್ನು ನೀಡುತ್ತಿದೆ. ಕರ್ನಾಟಕದಲ್ಲಿ ಮತ್ತಾವ ಸಂಸ್ಥೆಯಿಂದಲೂ ಈ ಕಾರ್ಯ ನಡೆಯುತ್ತಿಲ್ಲ ಎಂಬುದು ಗಮನಾರ್ಹವಾದುದು.

ಬಿಎಂಶ್ರೀಸ್ಮಾರಕ ಪ್ರತಿಷ್ಠಾನ "ಲೋಚನ" ಎಂಬ ಷಾಣ್ಮಾಸಿಕ ಸಂಶೋಧನ ವಿದ್ವತ್‌ಪತ್ರಿಕೆಯನ್ನು ಪ್ರಕಟಿಸುತ್ತಿದೆ. ಪ್ರಸ್ತುತ ಪ್ರತಿಷ್ಠಾನ ಐವತ್ತಕ್ಕೂ ಹೆಚ್ಚಿನ ಮೌಲಿಕ ಗ್ರಂಥಗಳನ್ನು ಹೊರತಂದಿದೆ.

ಕನ್ನಡ ನಾಡು ನುಡಿಗಳಿಗಾಗಿ ದುಡಿದು ಮಡಿದಿರುವ ಮಹನೀಯರ ಬದುಕು ಬರಹಗಳನ್ನು ಕುರಿತು ಸಾಹಿತ್ಯೋಪಾಸಕರು ಎಂಬ ಉಪನ್ಯಾಸ ಮಾಲಿಕೆಯನ್ನು ಪ್ರಾರಂಭಿಸಿ ಮೂವತ್ತಕ್ಕೂ ಹೆಚ್ಚಿನ ಪುಣ್ಯಪುರುಷರ ಪರಿಚಯವನ್ನು ಮಾಡಿಕೊಡಲಾಗಿದೆ.

ಪ್ರತಿಷ್ಠಾನದಲ್ಲಿ ಸುಮಾರು ಇಪ್ಪತ್ತುಸಾವಿರ ಪುಸ್ತಕಗಳ ಒಂದು ಸುಸಜ್ಜಿತ ಗ್ರಂಥಭಂಡಾರವಿದೆ. ಇಂತಹ ಸಾರಸ್ವತ ಸಂಸ್ಥೆಯನ್ನು ಉಳಿಸಿ ಬೆಳೆಸಿ ಸಂರಕ್ಷಿಸುವ ಕಾರ್ಯ ಕನ್ನಡಜನತೆಯ ಕರ್ತವ್ಯವಾಗಿದೆ.

ಶ್ರೀವಾಣಿ: **"ಕನ್ನಡ ನಾಡಿಗೆ ಕನ್ನಡವೇ ಗತಿ । ಅನ್ಯಥಾ ಶರಣಂ ನಾಸ್ತಿ."**

ಕನ್ನಡ ನಾಡಿನಲ್ಲಿ ದಿವ್ಯತೇಜಸ್ಸಿದೆ. ಪಂಪ, ರನ್ನ, ಕುಮಾರವ್ಯಾಸ ಷಡಕ್ಷರಿ ಮುಂತಾದ ಕನ್ನಡ ಸಾಹಿತ್ಯ ರತ್ನಗಳನ್ನು ನೀವು ಕೇಳಿದ್ದೀರಿ. ಕನ್ನಡಿಗರಾದ ನೀವು ಯಾರಿಗೂ ತಲೆತಗ್ಗಿಸಬೇಕಾಗಿಲ್ಲ. ತಲೆಎತ್ತಿ ನಡೆಯಬೇಕಾಗಿದೆ.

> "ಕನ್ನಡಿಗರು ನಮ್ಮ ಹಿಂದಿನವರು ಏನು ಮಾಡಿದರು. ಇಂದಿನವರೇನು ಮಾಡುತ್ತಿದ್ದಾರೆ. ಮುಂದಿನವರೇನು ಮಾಡಬೇಕು ಎಂಬುದನ್ನು ತಿಳಿದು ವರ್ತಿಸಬೇಕಾಗಿದೆ. ಕನ್ನಡ ನನಗೆ ಮುಂದು ಉಳಿದುದು ಏನಿದ್ದರೂ ಅದರ ಹಿಂದು. ಕನ್ನಡದ ಕಾವಲುನಾಯಿ ನಾನು."

ಎಂ.ವಿ. ಸೀತಾರಾಮಯ್ಯನವರಿಗೆ ಪ್ರಾಚೀನ ಹಸ್ತಪ್ರತಿಗಳ ಸಂಗ್ರಹ ಸಂರಕ್ಷಣೆ ಅತ್ಯಂತ ಪ್ರಿಯವಾದ ಕಾರ್ಯವಾಗಿತ್ತು. ಈ ಸಂಬಂಧವಾಗಿ ವಚನಪಿತಾಮಹ ಫ.ಗು. ಹಳಕಟ್ಟಿ ಜನ್ಮಶತಮಾನೋತ್ಸವದ ಅಂಗವಾಗಿ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಒಂದು ವಿಚಾರಸಂಕಿರಣವನ್ನು ಏರ್ಪಡಿಸಿ ಹಳಕಟ್ಟಿ ಅವರ ಬದುಕು-ಬರಹ ಮತ್ತು ಹಸ್ತಪ್ರತಿಶಾಸ್ತ್ರಕ್ಕೆ ಸಂಬಂಧಿಸಿದಂತೆ ನಾಡಿನ ವಿದ್ವಾಂಸರಿಂದ ಪ್ರಬಂಧಗಳನ್ನು ಬರೆಸಿ ವಿಚಾರ ಸಂಕಿರಣದಲ್ಲಿ ಅವನ್ನು ಮಂಡಿಸಿದ ಮೇಲೆ ಅವೆಲ್ಲವನ್ನು "ಮಣಿಹ" ಎಂಬ ಹಳಕಟ್ಟಿ ಸಂಸ್ಮರಣಸಂಪುಟದಲ್ಲಿ ಹೊರತಂದಿದ್ದಾರೆ.

ಎಂ.ವಿ. ಸೀತಾರಾಮಯ್ಯನವರು ಅಪಾರ ಪರಿಶ್ರಮದಿಂದ, ಹಲವಾರು ವಿದ್ವಾಂಸರ ನೆರವಿನಿಂದ ಸಂಪಾದಿಸಿರುವ "ಶ್ರೀನೃಪತುಂಗದೇವಾನುಮತಮಪ್ಪ ಶ್ರೀವಿಜಯಕೃತ ಕವಿರಾಜಮಾರ್ಗಂ" ಕನ್ನಡ ಗ್ರಂಥಸಂಪಾದನ ಕ್ಷೇತ್ರದಲ್ಲಿ ಒಂದು ಮೈಲಿಗಲ್ಲಾಗಿದೆ. ಪರಂಪರಾಗತ ಮಾರ್ಗದಂತೆ ಪಠ್ಯಭಾಗದಲ್ಲೇ ಪ್ರತಿಪದ್ಯಕ್ಕೆ ಲಭ್ಯಪಾಠಾಂತರಗಳನ್ನು ಸೂಚಿಸದೆ ಅನುಬಂಧ-೬ರಲ್ಲಿ "ಮುಖ್ಯಪಾಠಾಂತರಗಳು" ಎಂಬ ಶಿರೋನಾಮೆಯಲ್ಲಿ ಕೊಡಲಾಗಿದೆ. ಪಠ್ಯ ಒಂದು ಕಡೆ, ಪಾಠಾಂತರ ಮತ್ತೊಂದು ಕಡೆ. ಪಾಠಾಂತರಗಳನ್ನು ಈ ರೀತಿ ಸೂಚಿಸಿರುವ ನೂತನ ವಿಧಾನದ ಬಗೆಗೆ ಯಾರಾದರೂ ಬೆಳಕು ಚೆಲ್ಲುವರೆಂದು ಭಾವಿಸಿದ್ದೇನೆ. ಎಂ.ವಿ. ಸೀತಾರಾಮಯ್ಯನವರು ಸಂಪಾದಿಸಿರುವ "ಉದಯಾದಿತ್ಯಾಲಂಕಾರಂ" ಮೊದಲಾದ ಕೃತಿಗಳ ಪಾಠಾಂತರಗಳನ್ನು ಪರಂಪರಾಗತ ಕ್ರಮದಂತೆ ಪಠ್ಯದ ಜೊತೆಯಲ್ಲೇ ಕೊಡಲಾಗಿದೆ.

ಬಂಧುಗಳೇ, ಕನ್ನಡ ಸಾಹಿತ್ಯದಲ್ಲಿ ಈವರೆಗೆ ಲಭ್ಯವಾಗಿರುವ ಪ್ರಾಚೀನ ಕೃತಿಗಳಿಗಿಂತಲೂ ಹೆಚ್ಚಿನ ಕೃತಿಗಳು ಸಂಪಾದನೆಯಾಗದೆ ಅಪ್ರಕಟಿತವಾಗಿ ಹಸ್ತಪ್ರತಿಗಳಲ್ಲೇ ಉಳಿದುಕೊಂಡಿವೆ. ಕರ್ನಾಟಕದ ಒಳಗೂ-ಹೊರಗೂ ಹರಡಿಕೊಂಡು ಹೋಗಿರುವ ಈ ಕನ್ನಡ ಹಸ್ತಪ್ರತಿಗಳನ್ನು ಒಂದು ಕಕ್ಷೆಗೆ ತರುವುದು ಹೇಗೆ? ಇವನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸುವವರು ಯಾರು? ಯಾವಾಗ?

ನನ್ನ ಸೇವಾವಧಿಯನ್ನೆಲ್ಲ ಹಸ್ತಪ್ರತಿಗಳೊಂದಿಗೇ ಕಳೆದಿದ್ದೇನೆ. ಸಹಸ್ರಾರು ಹಸ್ತಪ್ರತಿಗಳನ್ನು ಪರಿಶೀಲಿಸಿದ್ದೇನೆ. ನೂರಾರು ಕೃತಿಗಳನ್ನು ಪ್ರತಿಮಾಡಿದ್ದೇನೆ. ಅಪ್ರಕಟಿತ ಕೃತಿಗಳ ಬಗೆಗೆ ಒಲವಿರುವ ನನ್ನ ಸಮಸ್ಯೆಗಳಿಗೆ ತಾವು ಹೇಗೆ ಸ್ಪಂದಿಸುವಿರಿ? ಏನು ಪರಿಹಾರ ಸೂಚಿಸುವಿರಿ? ಈ ಸಂಬಂಧವಾಗಿ ಕನ್ನಡದ ಕಣ್ವ ಬಿ.ಎಂ. ಶ್ರೀಕಂಠಯ್ಯನವರ ಅಭಿಪ್ರಾಯ ಇಂತಿದೆ:

"ಮೊದಲು ಹಿಂದಿನಿಂದ ಬಂದ ಕಾವ್ಯಗಳನ್ನು ಏನು ಮಾಡುವಿರಿ? ಇವು ನಮ್ಮ ಹಿರಿಯರು ಗಳಿಸಿದ ಸ್ವತ್ತು. ಬಡತನವೋ, ಸಿರಿಯೋ ಇದ್ದುದನ್ನು ಉಳಿಸಿಕೊಂಡು ಮುಂದಕ್ಕೆ ಹೆಚ್ಚಿಸುತ್ತಾ ಹೋಗಬೇಕು. ಇದಲ್ಲದೆ ಇವು ತೀರ ಕೆಲಸಕ್ಕೆ ಬಾರದವೂ ಅಲ್ಲ. ಪೂರ್ವದ ಶಾಸನಗಳಿಂದ ಮೈಸೂರಿನ ಚರಿತ್ರೆಯನ್ನು ಕೂಡಿಸಬಹುದು. ಕಾವ್ಯಗಳಲ್ಲಿ ಚರಿತ್ರಾಂಶಗಳೂ ಆಚಾರ ವ್ಯವಹಾರಗಳೂ ದೇಶಕಾಲಭೇದಗಳೂ ತಿಳಿಯುತ್ತವೆ. ಮತಸಂಬಂಧವಾದ ವಿಷಯಗಳು ಎಷ್ಟೋ ಅಡಕವಾಗಿವೆ. ಇದರ ಜೊತೆಗೆ ಭಾಷೆಯ ಚರಿತ್ರೆಯನ್ನೂ ಕಾವ್ಯಮಾಲೆಯ ಬೆಳವಣಿಗೆಯನ್ನೂ ಸಂಗ್ರಹಿಸುವ ಆವಶ್ಯಕತೆ ಬೇರೆ ಇದೆ. ತಾಯಿಬೇರನ್ನು ಕಡಿದು ಮರವನ್ನು ಚಿಗುರಿಸುವುದಕ್ಕೆ ಹೇಗೆ ಆಗಲಾರದೋ ಹಾಗೆಯೇ ನಮ್ಮ ಪೂರ್ವವನ್ನು ಅಳಿಸಿಬಿಟ್ಟು ಭವಿಷ್ಯಕ್ಕೆ ಹಾರುವುದಕ್ಕೆ ಆಗಲಾರದು. ಆದ್ದರಿಂದ ಪೂರ್ವದ ಕಾವ್ಯಗಳ ವಿಷಯದಲ್ಲಿ ಹೀಗೆ ಮಾಡಬೇಕು. ದೇಶದಲ್ಲಿ ಹುಳುತಿಂದುಹೋಗದೆ ಉಳಿದಿರುವ ಗ್ರಂಥಗಳನ್ನೆಲ್ಲಾ ಶೇಖರಿಸಿ ಒಂದನ್ನೂ ಬಿಡದೆ ಅಚ್ಚುಹಾಕುವುದು. ಈ ಕೆಲಸವನ್ನು ಮೈಸೂರು ಸರ್ಕಾರದವರೂ ಕಾವ್ಯಮಂಜರಿ ಕಾವ್ಯಕಲಾನಿಧಿಗಳ ಸಂಪಾದಕರೂ ಆಗಲೇ ಮಾಡುತ್ತಲೇ ಇದ್ದಾರೆ. ಇವರಿಗೆ ಎಲ್ಲರೂ ಕೃತಜ್ಞರಾಗಿರತಕ್ಕದ್ದು." [ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, ಶ್ರೀಸಾಹಿತ್ಯ, ಪು. ೨೫೨-೨೫೩].



# ಕನ್ನಡ ರಾಜ್ಯೋತ್ಸವ

೧೯೫೬ ರಿಂದ ಪ್ರತಿವರ್ಷದ ನವೆಂಬರ್ ಒಂದರಂದು ಕನ್ನಡ ರಾಜ್ಯೋತ್ಸವವನ್ನು ಆಚರಿಸಲಾಗುತ್ತಿದೆ. ಕಳೆದ ನಲವತ್ತೆಂಟು ವರ್ಷಗಳಿಂದ ನಿರಂತರವಾಗಿ ಕನ್ನಡ ರಾಜ್ಯೋತ್ಸವವನ್ನು ನಡೆಸಿಕೊಂಡು ಬರುತ್ತಿರುವುದು ಸರ್ವರಿಗೂ ತಿಳಿದ ಸಂಗತಿಯೇ ಆಗಿದೆ. ೧೯೫೬ ರಂದು ಸಾಕಾರಗೊಂಡ ಕರ್ನಾಟಕ ರಾಜ್ಯ ೪೯ನೆಯ ರಾಜ್ಯೋತ್ಸವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಕರ್ನಾಟಕ ಸರ್ಕಾರ ಅಂದು ಸಾರ್ವತ್ರಿಕ ರಜೆಯನ್ನು ಘೋಷಿಸಿ ರಾಜ್ಯೋತ್ಸವ ಕಾರ್ಯಗಳಿಗೆ ಅನುವು ಮಾಡಿಕೊಟ್ಟಿದೆ. ಬಹುತೇಕ ಎಲ್ಲ ಸರ್ಕಾರಿ ಸಂಸ್ಥೆಗಳೂ ಶಿಕ್ಷಣ ಸಂಸ್ಥೆಗಳೂ ಇನ್ನಿತರ ಸಂಘ ಸಂಸ್ಥೆಗಳೂ ರಾಜ್ಯೋತ್ಸವವನ್ನು ಆಚರಿಸುವುದರ ಮೂಲಕ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಗಣನೀಯ ಸೇವೆಸಲ್ಲಿಸಿದವರನ್ನು ಸನ್ಮಾನಿಸುತ್ತಲೂ ಇವೆ. ಇಷ್ಟೇ ಅಲ್ಲದೆ ಕರ್ನಾಟಕದ ಹೊರಗಡೆ ಇರುವ ಕನ್ನಡಪರ ಸಂಘ ಸಂಸ್ಥೆಗಳೂ ಕನ್ನಡರಾಜ್ಯೋತ್ಸವ ಕಾರ್ಯಗಳನ್ನು ಆಚರಿಸುತ್ತಿರುವುದನ್ನು ಕಂಡಿದ್ದೇವೆ, ಕೇಳಿದ್ದೇವೆ.

ಕನ್ನಡ ರಾಜ್ಯೋತ್ಸವವನ್ನು ಆಚರಿಸುವುದರ ಉದ್ದೇಶವೇನು? ಔಚಿತ್ಯವೇನು? ಇದರಿಂದಾಗುವ ಫಲಾಫಲಗಳೇನು ಎಂಬ ವಿಷಯಗಳ ಬಗೆಗೆ ವಿಶ್ಲೇಷಣೆ ಮಾಡುವುದೂ ಸೂಕ್ತವಾದುದು. ಭಾರತದೇಶ ಸ್ವಾತಂತ್ರ್ಯಪಡೆದ ಮೇಲೆ ಭಾಷಾವಾರುಪ್ರಾಂತ್ಯಗಳ ರಚನೆಗೆ ವಿಶೇಷವಾದ ಒತ್ತುಕೊಡಲಾಯಿತು. ಕರ್ನಾಟಕದಲ್ಲಾದರೋ ಕರ್ನಾಟಕ ಏಕೀಕರಣಕ್ಕೆ ಹಲವಾರು ವರ್ಷಗಳಿಂದ ವಿಶೇಷ ಪ್ರಯತ್ನಗಳು ನಡೆಯುತ್ತಿದ್ದುದನ್ನು ದಾಖಲೆಗಳಿಂದ ಕಂಡುಕೊಳ್ಳಬಹುದಾಗಿದೆ. ಅನೇಕ ಮಹನೀಯರು ಬಹುಕಾಲ ಹೋರಾಡಿ ಏಕೀಕರಣ ಸಮಿತಿಗಳನ್ನು ಸ್ಥಾಪಿಸಿಕೊಂಡು ಜನತೆಯಲ್ಲಿ ಜಾಗೃತಿಯನ್ನುಂಟುಮಾಡಿ ರಾಷ್ಟ್ರನಾಯಕರ ಮನವನ್ನು ಒಲಿಸಿ ಬಹುದಿನದ ಕನಸನ್ನು ನನಸುಮಾಡಿದ್ದಾರೆ. ಆ ಮಹನೀಯರನ್ನೆಲ್ಲ ಈ ಹೊತ್ತಿನಲ್ಲಿ ನೆನೆಯಬೇಕಾದುದು ಕನ್ನಡಿಗರೆಲ್ಲರ ಆದ್ಯಕರ್ತವ್ಯವಾಗಿದೆ. ಅವರ ಆಸೆ ಆಕಾಂಕ್ಷೆಗಳನ್ನು ಪೂರೈಸುವುದು ಅಗತ್ಯವಾಗಿದೆ.

ಹತ್ತನೆಯ ಶತಮಾನದಲ್ಲಿದ್ದ ನೃಪತುಂಗ ತನ್ನ ಕವಿರಾಜಮಾರ್ಗದಲ್ಲಿ,

ಕಾವೇರಿಯಿಂದಮಾ ಗೋ
ದಾವರಿವರಮಿರ್ಪ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ ವಸು
ಧಾವಳಯ ವಿಲೀನವಿಶದ ವಿಷಯವಿಶೇಷಂ

ಎಂದು ಅಂದಿನ ಕನ್ನಡ ನಾಡಿನ ವ್ಯಾಪ್ತಿಯನ್ನು ಹೇಳಿದ್ದಾನೆ. ಅಷ್ಟೇ ಅಲ್ಲ,

ಪದನಱಿದು ನುಡಿಯಲುಂ ನುಡಿ
ದುದನಱಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುಱಿತೋ
ದದೆಯುಂ ಕಾವ್ಯಪ್ರಯೋಗಪರಿಣತ ಮತಿಗಳ್ ॥

ಎಂದು ಕನ್ನಡನಾಡಿನ ಜನತೆಯ ಬಗೆಗೆ ಅಭಿಮಾನದಿಂದ ಹೇಳಿದ್ದಾನೆ.

ಕರ್ನಾಟಕ ಏಕೀಕರಣವಾದ ಮೇಲೆ ಕನ್ನಡದ ಹಲವಾರು ಭಾಗಗಳು ಬೇರೆ ಬೇರೆ ಪ್ರಾಂತ್ಯಗಳಿಗೆ ಸೇರಿಹೋಗಿವೆ. ಗಡಿನಾಡಿನ ಸಮಸ್ಯೆ ಇನ್ನೂ ಬಗೆಹರಿದಿಲ್ಲ. ಅಚ್ಚಕನ್ನಡದ ಪ್ರದೇಶಗಳು ಕರ್ನಾಟಕದ ಹೊರಗೇ ಉಳಿದಿರುವುದು ಆತಂಕಕಾರಿಯಾಗಿದೆ. ಗಡಿನಾಡು ಮತ್ತು ಹೊರನಾಡು ಕನ್ನಡಿಗರ ಸ್ಥಿತಿ ಅತ್ಯಂತ ಚಿಂತಾಜನಕವಾಗಿದೆ. ನೃಪತುಂಗ ಹೇಳಿರುವ ಅಚ್ಚಕನ್ನಡ ಪ್ರದೇಶಗಳೆಲ್ಲ ಕರ್ನಾಟಕಕ್ಕೆ ಸೇರಬೇಕು. ಕನ್ನಡಿಗರ ಬಗೆಗೆ ಆತನು ನುಡಿದಿರುವ ಸೊಲ್ನುಡಿಗಳನ್ನು ನಾವು ಸಾರ್ಥಕಗೊಳಿಸಿಕೊಳ್ಳಬೇಕಾಗಿದೆ. ಜೊತೆಗೆ ಕರ್ನಾಟಕ ಏಕೀಕರಣವಾಗಿ ಈ ನಲವತ್ತೊಂಬತ್ತನೆಯ ರಾಜ್ಯೋತ್ಸವ ಸಂದರ್ಭದಲ್ಲಿ ನಾಡು, ನುಡಿ, ಸಾಹಿತ್ಯ, ಸಂಸ್ಕೃತಿ, ಶಿಕ್ಷಣ, ಧರ್ಮ –ಇವೇ ಮೊದಲಾದ ಕ್ಷೇತ್ರಗಳಲ್ಲಿ ಸಾಧಿಸಿರುವ ಪ್ರಗತಿಯನ್ನು ಪರಿವೀಕ್ಷಿಸಿ, ಈ ನಾಡಿನ ಹಿರಿಮೆ ಮತ್ತು ಗರಿಮೆಗಳನ್ನು ಅರ್ಥಮಾಡಿಕೊಂಡು ಪ್ರತಿಯೊಬ್ಬ ಕನ್ನಡಿಗನ ಮನದಲ್ಲಿ ಮನೆಯಲ್ಲಿ ಈ ಕನ್ನಡತನವನ್ನು ಜೀವಂತವಾಗಿರಿಸಿದರೆ ಕನ್ನಡ ರಾಜ್ಯೋತ್ಸವದ ಆಚರಣೆ ನಿಜಕ್ಕೂ ಅರ್ಥಪೂರ್ಣವಾಗಬಹುದಲ್ಲವೆ?

■

# ಶತಾಯುಷಿ ಡಾ. ಶಿವಕುಮಾರ ಮಹಾಸ್ವಾಮಿಗಳು

**ಭ**ರತಖಂಡ ಅನಾದಿಕಾಲದಿಂದ ಧರ್ಮದ ನಾಡು, ಮಠಗಳ ಬೀಡು ಎಂಬ ಖ್ಯಾತಿಯನ್ನು ತಳೆದಿದೆ. ಈ ನಾಡಿನಲ್ಲಿ ಅವತರಿಸಿದ ಬುದ್ಧ, ಬಸವ, ಶಂಕರ, ಮಧ್ವ, ರಾಮಾನುಜ ಮೊದಲಾದ ಆದ್ಯರೂ ತರುವಾಯದ ರಾಮಕೃಷ್ಣ ಪರಮಹಂಸ, ಸ್ವಾಮಿವಿವೇಕಾನಂದ, ರವೀಂದ್ರನಾಥ ಟ್ಯಾಗೂರ್, ಬಾಲಗಂಗಾಧರನಾಥತಿಲಕ್, ಮಹಾತ್ಮಗಾಂಧಿ – ಇವರೇ ಮೊದಲಾದ ಮಹಾಪುರುಷರು ಈ ರಾಷ್ಟ್ರದ ಸರ್ವತೋಮುಖವಾದ ಪ್ರಗತಿಗೆ ಕಾರಣೀಭೂತರಾಗಿದ್ದಾರೆ. ಸಹಸ್ರಾರು ವರ್ಷಗಳಿಂದ ಈ ನಾಡಿನ ಅನೇಕ ಮಠಮಾನ್ಯಗಳು ಧಾರ್ಮಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಿಗೆ ಲೋಕೋತ್ತರವಾದ ಕಾರ್ಯಗಳನ್ನು ನಿರ್ವಹಿಸುತ್ತಾ ಬಂದಿವೆ. ಕರ್ನಾಟಕದಲ್ಲಿ ಸ್ಥಾಪಿತವಾಗಿರುವ ಶ್ರೀ ಸಿದ್ಧಗಂಗಾಮಠ ಅತ್ಯಂತ ಪ್ರಮುಖವಾದುದು. ಶ್ರೀಮಠಕ್ಕೆ ಭವ್ಯವಾದ ಇತಿಹಾಸವಿದೆ. ಈ ಮಠದ ಇಂದಿನ ಶ್ರೀಗಳವರಿಗೆ ನಾಡಿನ ಎಲ್ಲವರ್ಗದ ಎಲ್ಲವರ್ಣದ ಜನತೆ ಮಹೋನ್ನತವಾದ ಗೌರವವನ್ನು ಸಲ್ಲಿಸುತ್ತಿದೆ.

ಶ್ರೀ ಸಿದ್ಧಗಂಗಾಮಠ ಸುಮಾರು ಆರುನೂರು ವರ್ಷಗಳ ಹಿಂದೆ ಶ್ರೀ ಗೋಸಲ ಸಿದ್ಧೇಶ್ವರರಿಂದ ಸ್ಥಾಪಿಸಲ್ಪಟ್ಟಿತು. ಅಂದಿನಿಂದ ಇಂದಿನವರೆಗೆ ಹಲವಾರು ಮಂದಿ ಶಿವಯೋಗಿಗಳ ತಪಸ್ಸಿನ ಫಲವಾಗಿ ಶ್ರೀಮಠ ಕಾರ್ಯವನ್ನು ನಿರ್ವಹಿಸುತ್ತಾ ಬಂದಿದೆ. ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಉತ್ತರ ಕರ್ನಾಟಕದಿಂದ ಶ್ರೀ ಅಟವೀಸ್ವಾಮಿಗಳು ಶ್ರೀಮಠಕ್ಕೆ ದಯಮಾಡಿಸಿದ್ದರು. ಆಗ ಇಲ್ಲಿ ಮಠಾಧಿಕಾರಿಗಳಾಗಿದ್ದ ಶ್ರೀರುದ್ರಸ್ವಾಮಿಗಳ ಅಪೇಕ್ಷೆಯಂತೆ ಕೆಲಕಾಲ ತಪೋನುಷ್ಠಾನಮಾಡಿಕೊಂಡಿದ್ದರು. ಶ್ರೀಗಳವರು ಕ್ರಿ.ಶ. ೧೯೦೧ರಲ್ಲಿ ಲಿಂಗೈಕ್ಯರಾದರು. ತರುವಾಯ ಪರಮಪೂಜ್ಯ ಶ್ರೀ ಉದ್ದಾನ ಮಹಾಸ್ವಾಮಿಗಳು ಮಠದ ಅಧಿಕಾರವನ್ನು ವಹಿಸಿಕೊಂಡರು. ಆ ಸಮಯದಲ್ಲಿ ಶ್ರೀಮಠಕ್ಕೆ ಯಾವ ವಿಧವಾದ ಸ್ಥಿರಆಸ್ತಿಯಾಗಲಿ ಚರಆಸ್ತಿಯಾಗಲಿ ಇರಲಿಲ್ಲ. ಆದಾಗ್ಯೂ ಪರಮಪೂಜ್ಯ ಉದ್ದಾನಶ್ರೀಗಳು ೧೯೧೭ರಲ್ಲಿ ಒಂದು ಉಚಿತ ವಿದ್ಯಾರ್ಥಿನಿಲಯವನ್ನು ಸಂಸ್ಕೃತ ಪಾಠಶಾಲೆಯನ್ನು ಭಕ್ತರ ಮತ್ತು ಮಹಾಜನತೆಯ ನೆರವಿನಿಂದ ಸ್ಥಾಪಿಸಿ ನಡೆಸಿಕೊಂಡು ಬರುತ್ತಿದ್ದರು. ೧೯೪೧ರಲ್ಲಿ ಉದ್ದಾನ ಮಹಾಸ್ವಾಮಿಗಳವರು ಲಿಂಗೈಕ್ಯರಾದರು. ತರುವಾಯ ಪರಮಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಶ್ರೀಮಠದ ಆಡಳಿತವನ್ನು ವಹಿಸಿಕೊಂಡರು.

ಡಾ. ಶಿವಕುಮಾರ ಸ್ವಾಮಿಗಳು ಶ್ರೀಮಠದ ಆಡಳಿತವನ್ನು ವಹಿಸಿಕೊಂಡ ಮೇಲೆ ದಾನಿಗಳ ಮತ್ತು ಭಕ್ತರ ನೆರವಿನಿಂದ ಸುಮಾರು ಒಂದುನೂರು ಮಂದಿ ವಿದ್ಯಾರ್ಥಿಗಳ ವಸತಿನಿಲಯವನ್ನು ಪ್ರಾರಂಭಿಸಿದರು. ಇದು ಕ್ರಮೇಣ ಬೆಳೆಯುತ್ತಾ ಬಂದು ಇಂದು ಏಳುಸಾವಿರದ ಐದುನೂರು ವಿದ್ಯಾರ್ಥಿಗಳಿಗೆ ಆಶ್ರಯವನ್ನು ನೀಡಿದೆ ಶ್ರೀಮಠ. ಇದರಲ್ಲಿ ಅನಾಥ ವಿದ್ಯಾರ್ಥಿಗಳೂ, ಬಡವಿದ್ಯಾರ್ಥಿಗಳೂ ಅಧಿಕವಾಗಿ ಆಶ್ರಯವನ್ನು ಪಡೆದಿದ್ದಾರೆ. ಶ್ರೀಮಠ ಪ್ರಾಥಮಿಕ ಹಂತದಿಂದ ಕಾಲೇಜು ಹಂತದವರೆಗೆ ಒಂದುನೂರ ಇಪ್ಪತ್ತೈದು ವಿದ್ಯಾಸಂಸ್ಥೆಗಳನ್ನು ನಡೆಸುತ್ತಿದೆ. ಶ್ರೀಮಠದಲ್ಲಿ ಎಲ್ಲಾ ಸಮಾಜಗಳ ಮಕ್ಕಳಿಗೂ ಆಶ್ರಯ ಕಲ್ಪಿಸಲಾಗಿದೆ. ಇದರಲ್ಲಿ ಬಡಮಕ್ಕಳೇ ಅಲ್ಲದೆ, ದೀನದಲಿತರ ಕುಟುಂಬಗಳಿಂದ ಬಂದವರೂ ನೆಲೆಯನ್ನು ಪಡೆದಿದ್ದಾರೆ. ಶ್ರೀಕ್ಷೇತ್ರದಲ್ಲಿ ಜಾತಿ, ಮತ, ಕುಲ, ಪಂಗಡಗಳ ಭೇದಭಾವವಿಲ್ಲದೆ ಎಲ್ಲರನ್ನೂ ಏಕಪ್ರಕಾರವಾಗಿ

ಪರಿಭಾವಿಸುತ್ತಿರುವುದು ಶ್ರೀಮಠದ ವೈಶಿಷ್ಟ್ಯವಾಗಿದೆ. ವಿದ್ಯಾರ್ಥಿಗಳಿಗೆ ಬಾಲ್ಯದಿಂದಲೇ ಭಾವೈಕ್ಯತೆಯ ಮನೋಭಾವವನ್ನುಂಟುಮಾಡುತ್ತಿರುವುದು ಅವರ ಭವಿಷ್ಯದ ಪ್ರಗತಿಗೆ ದಾರಿದೀಪವಾಗಿದೆ. ಪ್ರಾಚೀನ ವೇದಾಗಮೋಪನಿಷತ್ತುಗಳನ್ನು ಬೋಧಿಸುವ ಸಂಸ್ಕೃತವ್ಯಾಸಂಗಕ್ಕೂ ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನಗಳಿಗೆ ಸಂಬಂಧಿಸಿದ ಶಿಕ್ಷಣಕ್ಕೂ ಅವಕಾಶ ಕಲ್ಪಿಸಿರುವುದು ಶ್ರೀಮಠದ ಹೆಗ್ಗಳಿಕೆಯಾಗಿದೆ. ಪ್ರಾಚೀನ ಮತ್ತು ಆಧುನಿಕ ವಿದ್ಯಾಭ್ಯಾಸಪದ್ಧತಿಗಳ ರಸಸೇತುವೆನಿಸಿದೆ ಶ್ರೀ ಸಿದ್ಧಗಂಗಾಮಠ. ನಾಡಿನಾದ್ಯಂತ ಅಸಂಖ್ಯಾತ ವಿದ್ಯಾರ್ಥಿಗಳಿಗೆ ಶಿಕ್ಷಣ, ಪ್ರಸಾದ, ವಸತಿಸೌಕರ್ಯಗಳನ್ನು ಕಲ್ಪಿಸಿರುವ ಶ್ರೀಮಠ 'ನ ಭೂತೋ ನ ಭವಿಷ್ಯತಿ' ಎಂಬಂತೆ ಕಾರ್ಯವನ್ನು ನಿರ್ವಹಿಸುತ್ತಿದೆ.

ಸಿದ್ಧಗಂಗಾ ಮಠಕ್ಕೂ ನನಗೂ ಬಹುಕಾಲದ ಸಂಪರ್ಕವಿದೆ, ಸಂಬಂಧವಿದೆ. ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ನನಗೆ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಮಹೋಪಕಾರವನ್ನು ಮಾಡಿದ್ದಾರೆ. ಈ ಸಂಬಂಧವಾಗಿ ಶ್ರೀಗಳವರು ಮತ್ತು ನಾನು ಭಾಗವಹಿಸಿದ್ದ ಕೆಲವು ಸಮಾರಂಭಗಳು ಇಂತಿವೆ:

ನಾನು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗಿ ಚುನಾಯಿತನಾಗಿ ೧೯೮೮ ರಿಂದ ೨೦೦೧ ರವರೆಗೆ ಕಾರ್ಯವನ್ನು ನಿರ್ವಹಿಸಿದೆ. ಈ ಅವಧಿಯಲ್ಲಿ ದಿನಾಂಕ ೨೪.೫.೨೦೦೦ ರಂದು ನೆಲಮಂಗಲ ತಾಲ್ಲೂಕಿನ ಮಣ್ಣೆ ಎಂಬ ಗ್ರಾಮದಲ್ಲಿ ಒಂದು ಸಮಾರಂಭವನ್ನು ಏರ್ಪಡಿಸಲಾಗಿತ್ತು. ಈ ಮಣ್ಣೆ ಸುಪ್ರಸಿದ್ಧ ಐತಿಹಾಸಿಕ ಸ್ಥಳವಾಗಿತ್ತು. ಎಂಟನೆಯ ಶತಮಾನದಲ್ಲಿ ಶ್ರೀ ಪುರುಷನ ಕಾಲದಲ್ಲಿ ಈ ಮಣ್ಣೆ ಗಂಗರ ರಾಜಧಾನಿಗಳಲ್ಲಿ ಒಂದಾಗಿತ್ತು. ಗಂಗರ ತಾಮ್ರಶಾಸನಗಳಲ್ಲಿ ಈ ಮಣ್ಣೆಯನ್ನು ಮಾನ್ಯಪುರ ಎಂದು ಕರೆದಿದೆ. ಗಂಗರ ಕಾಲದಲ್ಲಿ ನಿರ್ಮಿತವಾದ ಕಪಿಲೇಶ್ವರ ದೇವಾಲಯ ಸೂಳೆಯರ ದೇವಸ್ಥಾನ, ಸೋಮೇಶ್ವರ ದೇವಸ್ಥಾನಗಳು ಹೆಚ್ಚಾಗಿ ಇಟ್ಟಿಗೆಗಳಿಂದಲೇ ಕಟ್ಟಿದ್ದು, ಅವುಗಳಲ್ಲಿನ ಕಲ್ಲಿನ ಕಂಬಗಳು, ಜಾಲಂಧ್ರಗಳು, ನಂದಿಮಂಟಪ ಮುಂತಾದುವು ಗಂಗರ ಶಿಲ್ಪದ ಮಾದರಿಗಳಾಗಿವೆ. ಈ ದೇವಾಲಯಗಳಲ್ಲಿ ಒಂದಾದ ಶ್ರೀಸೋಮೇಶ್ವರ ದೇವಾಲಯದ ಜೀರ್ಣೋದ್ಧಾರ ಮುಗಿದ ಮೇಲೆ ಒಂದು ಸಮಾರಂಭವನ್ನು ಏರ್ಪಡಿಸಲಾಗಿತ್ತು. ಆ ಕಾರ್ಯಕ್ರಮದ ದಿವ್ಯಸಾನ್ನಿಧ್ಯವನ್ನು ಪೂಜ್ಯಶ್ರೀ ಶಿವಕುಮಾರ ಸ್ವಾಮಿಗಳು ವಹಿಸಿದ್ದರು. ನನ್ನನ್ನು ಆ ಕಾರ್ಯಕ್ರಮದ ಅಧ್ಯಕ್ಷನನ್ನಾಗಿ ಮಾಡಲಾಗಿತ್ತು. ಅಂದಿನ ಕಾರ್ಯಕ್ರಮಗಳು ತಡವಾಗಿ ಪ್ರಾರಂಭವಾಗಿ ಮಧ್ಯಾಹ್ನ ಎರಡು ಗಂಟೆಯಾದರೂ ಮುಗಿಯುವ ಸೂಚನೆಗಳೇ ಕಂಡುಬರಲಿಲ್ಲ. ಶ್ರೀಗಳಾದರೂ ಸಕಾಲಕ್ಕೆ ದಯಮಾಡಿಸಿದ್ದರು. ಸಮಾರಂಭಕ್ಕೆ ಆಗಮಿಸಿದ್ದ ಭಕ್ತರೆಲ್ಲರೂ ಪ್ರಸಾದಕ್ಕೆ ಕಾದು ಕುಳಿತರು. ನನಗೂ ಹಸಿವಾಗಿದ್ದುದರಿಂದ ನನ್ನ ಅಧ್ಯಕ್ಷಭಾಷಣವನ್ನು ಬೇಗನೇ ಮುಗಿಸಿ ಶ್ರೀಗಳವರ ಆಶೀರ್ವಚನಕ್ಕೆ ಅನುವು ಮಾಡಿಕೊಟ್ಟೆ. ಆಗಿನ ಸನ್ನಿವೇಶವನ್ನು ಸೂಕ್ಷ್ಮವಾಗಿ ಗಮನಿಸಿದ ಶ್ರೀಗಳವರು ಸಂದರ್ಭೋಚಿತವಾದ ಸಂಕ್ಷಿಪ್ತ ಆಶೀರ್ವಚನವನ್ನು ನೀಡಿ ಎಲ್ಲರಿಗೂ ಸಂತೋಷವನ್ನುಂಟುಮಾಡಿದರು.

ಡಾ. ಶಿವಕುಮಾರ ಸ್ವಾಮಿಗಳವರ ಗುರುವಂದನಾಕಾರ್ಯ ಪ್ರತಿವರ್ಷವೂ ತಪ್ಪದೆ ನಡೆದುಕೊಂಡು ಬರುತ್ತಿರುವುದು ಸರ್ವವಿದಿತವಾದುದು. ಶ್ರೀಗಳವರ ೯೭ನೆಯ ದಿನಾಚರಣೆಯ ಸಂದರ್ಭದಲ್ಲಿ ಏಪ್ರಿಲ್ ೪, ೨೦೦೪ ರಂದು ಡಾ. ಎಸ್.ಜಿ. ನಾಗಲೋಟಿಮಠ, ಡಾ. ಎಚ್.ಎಲ್. ನಾಗೇಗೌಡ, ಎನ್.ಆರ್. ಜಗದೀಶ್ ಇವರ ಜೊತೆಯಲ್ಲಿ ನನ್ನನ್ನೂ ಸನ್ಮಾನಿಸಿದರು. ನನಗೆ "ಸಂಶೋಧಕ ಶಿವರತ್ನ" ಎಂಬ ಪ್ರಶಸ್ತಿಯನ್ನು ನೀಡಿ ಗೌರವಿಸಿದರು. ಅಂದು ಸಂಜೆ ನನ್ನ ಅಧ್ಯಕ್ಷತೆಯಲ್ಲಿ ನಡೆದ ಧಾರ್ಮಿಕ ಸಮಾವೇಶದಲ್ಲಿ ಡಾ. ಎಸ್.ಜಿ. ನಾಗಲೋಟಿ ಮಠ ಅವರು ವೀರಶೈವಧರ್ಮ ಆಚಾರಗಳ ಬಗೆಗೆ ಅಮೋಘವಾದ ಉಪನ್ಯಾಸವನ್ನು ನೀಡಿದರು. ಅಂದಿನ ಅರ್ಥಪೂರ್ಣ ಮೌಲಿಕ ಉಪನ್ಯಾಸ ಅಂದು ನೆರೆದಿದ್ದ ಭಕ್ತಸಮೂಹಕ್ಕೆ ರೋಮಾಂಚನವನ್ನುಂಟುಮಾಡಿತು. ಶಿವಪೂಜಾವಿಧಾನದ ಬಗ್ಗೆ ವೈಜ್ಞಾನಿಕ ವಿಧಾನವನ್ನೂ ವಿಶೇಷ ಭಕ್ತಿಶ್ರದ್ಧೆಗಳ ಮನವರಿಕೆಯನ್ನೂ ಮಾಡಿಕೊಟ್ಟಿತು.

ಇದೇ ೧೯೦೭ರ ಮಾರ್ಚ್ ತಿಂಗಳಲ್ಲಿ ಗೌರಿಬಿದನೂರು ತಾಲ್ಲೂಕಿನ ಹೊಸೂರಿನಲ್ಲಿ ವೀರಶೈವ ಸಮಾಜದವರು ಒಂದು ಕಾರ್ಯಕ್ರಮವನ್ನು ಏರ್ಪಡಿಸಿದ್ದರು. ಆ ಊರಿನ ಶ್ರೀ ವೀರಭದ್ರಸ್ವಾಮಿ ಸೇವಾಸಮಿತಿಯ ಆಶ್ರಯದಲ್ಲಿ ಪರಮಪೂಜ್ಯರ ದಿವ್ಯಸಾನ್ನಿಧ್ಯದಲ್ಲಿ ಈ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ನಾನು ಆ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದೆ. ಈ ಹೊಸೂರಿಗೆ ಐತಿಹಾಸಿಕ ಮಹತ್ವವಿದೆ. ಹೊಯ್ಸಳ ದೊರೆ ಮೂರನೆಯ ಬಲ್ಲಾಳ ಇದನ್ನು ವಶಪಡಿಸಿಕೊಂಡು ಹೊಸವೀಡು ಎಂದು ಹೆಸರಿಟ್ಟನೆಂದೂ ವಿಜಯನಗರ ರಾಜ್ಯದ ಗಡಿಯಲ್ಲಿದ್ದು ಅರಸರ ವಾಸಸ್ಥಾನವಾಗಿತ್ತೆಂದೂ ತಿಳಿದುಬರುತ್ತದೆ. ಈ ಊರಿನವರಾದ ಡಾ. ಎಚ್. ನರಸಿಂಹಯ್ಯನವರು ಶಿಕ್ಷಣ ಕ್ಷೇತ್ರದಲ್ಲಿ ಅತ್ಯಂತ ಪ್ರಸಿದ್ಧರಾದವರು. ಬೆಂಗಳೂರಿನ ನ್ಯಾಷನಲ್ ಕಾಲೇಜು ಅವರ ಖ್ಯಾತಿಗೆ ಸಾಕ್ಷೀಭೂತವಾಗಿದೆ. ಇವರು ತಮ್ಮ ಊರು ಹೊಸೂರಿನಲ್ಲಿ ಅತ್ಯಾಧುನಿಕ ಪ್ರೌಢಶಾಲೆಯನ್ನು ಸ್ಥಾಪಿಸಿದ್ದಾರೆ. ಅಂದಿನ ಕಾರ್ಯಕ್ರಮ ಈ ಶಾಲೆಯಲ್ಲೇ ಏರ್ಪಟಿತ್ತು. ಈ ಕಾರ್ಯಕ್ರಮದ ಅಂಗವಾಗಿ ಶ್ರೀಗಳಿಗೆ ಅತ್ಯಂತ ಪ್ರಿಯವಾದ ಶ್ರೀಮಠದ ಕಲಾವಿದರಿಂದ ಪ್ರದರ್ಶಿತವಾಗುವ ಜಗಜ್ಯೋತಿ ಬಸವೇಶ್ವರರ ನಾಟಕವೂ ಏರ್ಪಾಟಾಗಿತ್ತು. ಬಿಡುವಿಲ್ಲದ ಕಾರ್ಯಕ್ರಮಗಳಿಂದ ನಿರಂತರ ಓಡಾಟದಿಂದ ಶ್ರೀಗಳು ಜ್ವರದಿಂದ ಬಳಲುತ್ತಿದ್ದರು. ಆದರೂ ನಾಟಕವನ್ನು ನೋಡಲು ಉತ್ಸುಕರಾಗಿದ್ದರು. ಇದನ್ನು ಅರಿತ ನಾನು ಅಂದಿನ ಸಮಾರಂಭವನ್ನು ಆದಷ್ಟು ಬೇಗ ಮುಗಿಸಿಕೊಟ್ಟೆ. ಜ್ವರದಿಂದ ಬಳಲುತ್ತಿದ್ದರೂ ಬಸವೇಶ್ವರ ನಾಟಕವನ್ನು ಅಪಾರ ಆಸಕ್ತಿಯಿಂದ ವೀಕ್ಷಿಸುತ್ತಿದ್ದುದು ಶ್ರೀಗಳವರಿಗೆ ಜಗಜ್ಯೋತಿ ಬಸವೇಶ್ವರರ ಮೇಲಿನ ಅಪಾರ ಗೌರವಾಭಿಮಾನಗಳಿಗೆ ಜ್ವಲಂತಸಾಕ್ಷಿಯಾಗಿದೆ.

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಶತಮಾನೋತ್ಸವ ಗ್ರಂಥಪ್ರಕಟನಾಸಮಿತಿ ಹೊರತರಲಿರುವ 'ಗುರುಸ್ಮೃತಿ' ಸಂಪುಟಕ್ಕೆ ಶ್ರೀಗಳವರ ಸಾನ್ನಿಧ್ಯದಲ್ಲಿನ ಮೂರುಪ್ರಸಂಗಗಳಿಗೆ ಸಂಬಂಧಿಸಿದಂತೆ ವಸ್ತುನಿಷ್ಠವಾಗಿ ಈ ಲೇಖನವನ್ನು ಸಿದ್ಧಪಡಿಸಲಾಗಿದೆ. ಈ ವಿವಿಧ ಸಂದರ್ಭದ ಪ್ರಸಂಗಗಳು ಪರಮಪೂಜ್ಯ ಶ್ರೀಗಳವರ ಭವ್ಯವ್ಯಕ್ತಿತ್ವಕ್ಕೆ ನಿದರ್ಶನಗಳಾಗಿವೆ. ಈ ಗುರುಸ್ಮೃತಿಸಂಪುಟ ಶ್ರೀಗಳವರ ಅನುಪಮ ವ್ಯಕ್ತಿತ್ವಕ್ಕೂ ಆದರ್ಶ ಜೀವನವಿಧಾನಕ್ಕೂ ಹಿಡಿದ ಕೈಗನ್ನಡಿಯಾಗಿದೆ.



# ವಾತ್ಸಲ್ಯಮಯಿ
## [ಸುತ್ತೂರು ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು]

**ನಾ**ನು ಬೆಂಗಳೂರಿನಲ್ಲಿ ಇಂಟರ್‌ಮೀಡಿಯೇಟ್ ವ್ಯಾಸಂಗ ಮುಗಿಸಿ ಮೈಸೂರು ಮಹಾರಾಜ ಕಾಲೇಜಿನಲ್ಲಿ ಎಂ.ಎ. ವ್ಯಾಸಂಗ ಮಾಡುವ ಸನ್ನಿವೇಶ ಅದು. ನಾನು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ಮತ್ತು ಮನಶ್ಶಾಸ್ತ್ರದ ಎಂ.ಎ.ಗೆ ಅರ್ಜಿಯನ್ನು ಸಲ್ಲಿಸಿದ ಕಡುಬಡತನದಲ್ಲಿದ್ದ ನಾನು ಉಚಿತ ವಿದ್ಯಾರ್ಥಿ ನಿಲಯಗಳಲ್ಲೇ ವ್ಯಾಸಂಗವನ್ನು ಮುಗಿಸಿದ್ದೆ. ಹಾಗಾಗಿ ಉಚಿತ ವಿದ್ಯಾರ್ಥಿ ನಿಲಯದಲ್ಲಿ ಅವಕಾಶ ಲಭ್ಯವಾಗದಿದ್ದಲ್ಲಿ ನನ್ನ ವ್ಯಾಸಂಗವನ್ನು ಮುಂದುವರಿಸುವ ಸನ್ನಿವೇಶವೇ ಪ್ರಾಪ್ತವಾಗುತ್ತಿರಲಿಲ್ಲ. ಹೀಗಿರುವಲ್ಲಿ ಪರಿಚಯಸ್ಥರ ಮೂಲಕ ಸುತ್ತೂರು ಶ್ರೀಗಳವರನ್ನು ಭೇಟಿಯಾದಾಗ ಪೂಜ್ಯರು ನನ್ನ ಇತಿವೃತ್ತಗಳನ್ನೆಲ್ಲಾ ಕೇಳಿ ಕನ್ನಡ ಎಂ.ಎ.ಗೆ ಸೇರಿದರೆ ವಿದ್ಯಾರ್ಥಿನಿಲಯದಲ್ಲಿ ಸೀಟು ಕೊಡುವುದಾಗಿ ಹೇಳಿದರು. ಕನ್ನಡಕ್ಕೆ ಅಷ್ಟಾಗಿ ಮಾನ್ಯತೆ ಇಲ್ಲದಿದ್ದ ಆ ಕಾಲದಲ್ಲಿ ಮನಶ್ಶಾಸ್ತ್ರದ ಎಂ.ಎ. ಸೇರಿದರೆ ಮುಂದೆ ಪ್ರಯೋಜನವಾಗಬಹುದೆಂದು ನಾನು ಭಾವಿಸಿದ್ದೆ. ಆದರೆ ವಿದ್ಯಾರ್ಥಿನಿಲಯದಲ್ಲಿ ಪ್ರವೇಶ ದೊರೆಯದಿದ್ದಲ್ಲಿ ನನ್ನ ವ್ಯಾಸಂಗ ಮುಂದುವರಿಯುವಂತಿರಲಿಲ್ಲ. ಹಾಗಾಗಿ ನಾನು ಅನಿವಾರ್ಯವಾಗಿ ಕನ್ನಡ ಎಂ.ಎ.ಗೆ ಸೇರಿಕೊಂಡೆ. ಆಮೇಲೆ ಅದರ ಮಹತ್ವ ನನಗೆ ಅರಿವಾಯಿತು. ಶ್ರೀಗಳವರ ದೂರದೃಷ್ಟಿಯನ್ನು ಕಂಡು ಆಶ್ಚರ್ಯಚಕಿತನಾದೆ. ಕನ್ನಡದಲ್ಲಿ ಅಲ್ಪಸ್ವಲ್ಪ ಕೆಲಸ ಮಾಡಿ ಆ ಸಂಬಂಧವಾಗಿ ಇಂದು ನನಗೆ ಏನಾದರೂ ಪದವಿ, ಪ್ರಶಸ್ತಿ, ಘನತೆ, ಗೌರವಗಳು ಪ್ರಾಪ್ತವಾಗಿದ್ದರೆ ಶ್ರೀಗಳವರ ಕೃಪಾಕಟಾಕ್ಷದಿಂದಲೇ ಎಂದು ನಾನು ದೃಢವಾಗಿ ನಂಬಿದ್ದೇನೆ.

ಪರಮಪೂಜ್ಯ ಶ್ರೀಗಳವರ ಮಾನವೀಯತೆಗೆ ಶಿಷ್ಯವಾತ್ಸಲ್ಯಕ್ಕೆ ಒಂದು ಜ್ವಲಂತ ದೃಷ್ಟಾಂತವನ್ನು ಅನಿವಾರ್ಯವಾಗಿ ನೀಡಲೇಬೇಕಾಗಿದೆ. ನನ್ನ ವ್ಯಾಸಂಗವನ್ನು ಮುಗಿಸಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯಲ್ಲಿ ಉದ್ಯೋಗಕ್ಕೆ ಸೇರಿಕೊಂಡೆ. ಕೆಲವು ವರ್ಷಗಳಾದ ಮೇಲೆ ನನ್ನ ಚಿರಂಜೀವಿ ಇಂಟರ್‌ಮೀಡಿಯಟ್ ಮುಗಿಸಿ ಬಿ.ಇ.ಗೆ ಸೇರಬೇಕಾಯಿತು. ನಾನು ಶ್ರೀಗಳವರಿಗೆ ಈ ವಿಷಯವನ್ನು ಮೊದಲೇ ನಿವೇದಿಸಿಕೊಂಡು ನಮ್ಮ ಹುಡುಗನಿಗೆ ಒಂದು ಸೀಟನ್ನು ಕೊಡಬೇಕೆಂದು ಪ್ರಾರ್ಥಿಸಿಕೊಂಡಿದ್ದೆ. ಅದಕ್ಕೆ "ಆಗಲಿ ಹೋಗು" ಎಂದಿದ್ದರು. ಶ್ರೀಗಳವರ ಮಾತಿನಂತೆ ನಾನು ಬೇರೆ ಯಾವುದೇ ಕಾಲೇಜುಗಳಿಗೆ ಅರ್ಜಿಸಲ್ಲಿಸಲೇ ಇಲ್ಲ. ಆ ಕಾಲದಲ್ಲಿ ಇಂಜಿನಿಯರಿಂಗ್ ಸೀಟುಗಳಿಗೆ ಬಹಳ ಬೇಡಿಕೆಯೂ ಇತ್ತು, ಬೆಲೆಯೂ ಇತ್ತು. ಮೊದಲ ಪಟ್ಟಿ ಪ್ರಕಟವಾಯ್ತು. ಅದರಲ್ಲಿ ನಮ್ಮ ಹುಡುಗನ ಹೆಸರಿರಲಿಲ್ಲ. ನನಗೆ ಆತಂಕ ಹೆಚ್ಚಾಯಿತು. ಒಂದು ವರ್ಷ ವ್ಯರ್ಥವಾಗುವುದಲ್ಲ ಎಂಬ ಚಿಂತೆ ಆವರಿಸಿತು. ಆದರೂ ಪ್ರತಿನಿತ್ಯ ಶ್ರೀಗಳವರನ್ನು ತಪ್ಪದೆ ಭೇಟಿ ಮಾಡುತ್ತಿದ್ದೆ. ಶ್ರೀಗಳವರು ಮಾತ್ರ "ಆಗಲಿ ಹೋಗು" ಎಂದೇ ಹೇಳುತ್ತಿದ್ದರು. ಕೆಲವು ದಿನಗಳಾದ ಮೇಲೆ ಜೆಎಸ್‌ಎಸ್ ಇಂಜಿನಿಯರಿಂಗ್ ಕಾಲೇಜಿಗೆ ಹೆಚ್ಚಿನ ಸೀಟುಗಳು ಲಭ್ಯವಾದುವು. ಆಮೇಲೆ ಒಂದು ದಿನ ಹೋದಾಗ ಶ್ರೀಗಳವರು "ಏನು ಕೊಡುತ್ತೀಯಾ" ಎಂದು ಕೇಳಿದರು. "ನನ್ನ ಬಳಿ ಏನು ಇದೆ ಬುದ್ಧಿ?" ಎಂದೆ. "ಅಯ್ಯೋ ದಡ್ಡ, ಸರ್ಕಾರದ ನಿಯಮದಂತೆ ಫೀಜು ಕಟ್ಟಬೇಕು ಎಂಬುದಾದರೂ ಗೊತ್ತಿದೆಯಾ?" ಎಂದರು. 'ಇಲ್ಲ ಬುದ್ಧಿ' ಎಂದೆ. "ಅಯ್ಯೋ ದಡ್ಡ, ಸರ್ಕಾರ ನಿಗದಿಪಡಿಸಿರುವ ಶುಲ್ಕವನ್ನು ಕೊಟ್ಟು ಕಾಲೇಜಿಗೆ ಸೇರಿಸು ಹೋಗು" ಎಂದು ಒಂದು ಪತ್ರವನ್ನು ಬರೆದು ಕೊಟ್ಟರು. ಅದರಂತೆ ಸೇರಿಸಿದ್ದಾಯಿತು.

ಆಮೇಲೆ ಬಾಗಲಕೋಟೆ ಇಂಜಿನಿಯರಿಂಗ್ ಕಾಲೇಜಿನಲ್ಲಿ ಮೆರಿಟ್‌ಸೀಟು ಸಿಕ್ಕಿರುವುದಾಗಿ ಪತ್ರ ಬಂತು. ಆಗ ನನ್ನ ಮಗನಿಗೆ ಮೆರಿಟ್ ಸೀಟು ಸಿಕ್ಕಿರುವುದನ್ನು ತಿಳಿದ ಸೀಟಿನ ಇತರ ಆಕಾಂಕ್ಷಿಗಳು ಶ್ರೀಗಳವರಿಗೆ ಈ ವಿಷಯ ತಿಳಿಸಿದರು. ಶ್ರೀಗಳವರು ನನ್ನನ್ನು ಕರೆಸಿ "ನಿನ್ನ ಮಗನಿಗೆ ಮೆರಿಟ್ ಸೀಟು ಸಿಕ್ಕಿದೆಯಂತಲ್ಲ, ನೀನು ಇಲ್ಲಿ ಕಟ್ಟಿರುವ ಹಣವನ್ನು ಹಿಂದಕ್ಕೆ ತೆಗೆದುಕೊಂಡು ಅಲ್ಲಿಗೆ ಸೇರಿಸು. ಒಂದು ವರ್ಷವಾದ ಮೇಲೆ ಇದೇ ಕಾಲೇಜಿಗೆ ವರ್ಗ ಮಾಡಿಸಿಕೊಳ್ಳೋಣ" ಎಂದರು. ನಾನು ಇದರ ಸಾಧಕ–ಬಾಧಕಗಳನ್ನೆಲ್ಲ ಆಲೋಚಿಸಿ, "ಒಮ್ಮೆ ಈ ಕಾಲೇಜಿಗೆ ಸೇರಿಸಿದ ಮೇಲೆ ಬೇರೆ ಎಲ್ಲಿಗೆ ಕಳಿಸುವುದಕ್ಕೂ ನನ್ನ ಮನಸ್ಸು ಒಪ್ಪುವುದಿಲ್ಲ" ಎಂದೆ. "ಹೋಗಲಿ ಬಿಡು" ಎಂದು ಸುಮ್ಮನಾದರು. ನನ್ನಿಂದ ಕಾಲೇಜಿಗೆ ಬರುತ್ತಿದ್ದ ಸಹಸ್ರಾರು ರೂಪಾಯಿಗಳು ನಷ್ಟವಾದುವು ಎಂದು ಮನಸ್ಸಿನಲ್ಲೇ ಮರುಗಿದೆ. ಇದು ಒಂದು ಕಥೆಯಾದರೆ, ಅದರ ಮುಂದಿನ ವರ್ಷ ಮತ್ತೊಂದು ಪ್ರಸಂಗ ನಡೆಯಿತು.

ನನ್ನ ಮತ್ತೊಬ್ಬ ಮಗ ಇಂಟರ್‌ಮೀಡಿಯಟ್ ಮುಗಿಸಿದ ಮೇಲೆ ಬಿ.ಇ. ಓದಲೇಬೇಕೆಂದು ಹಠ ಹಿಡಿದ. ಅವನು ಪ್ರಥಮದರ್ಜೆಯಲ್ಲಿ ಮಾತ್ರ ಪಾಸಾಗಿದ್ದ. ಹಿಂದಿನ ವರ್ಷ ಪರಮಪೂಜ್ಯ ಸುತ್ತೂರು ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು ನನ್ನ ಹಿರಿಯ ಮಗನಿಗೆ ಇಂಜಿನಿಯರಿಂಗಿಗೆ ಸೀಟು ಕೊಟ್ಟು ಅವಕಾಶ ಮಾಡಿಕೊಟ್ಟಿದ್ದಾರೆ. ಮತ್ತೆ ಈ ಎರಡನೆಯ ಮಗನಿಗೆ ಯಾವ ಡೊನೇಷನ್ ಇಲ್ಲದೆ ಸೀಟು ಕೇಳುವುದಕ್ಕೆ ನನ್ನ ಮನಸ್ಸು ಒಪ್ಪಲಿಲ್ಲ. ನಾನು ಡೊನೇಷನ್ ಕೊಡುವ ಸ್ಥಿತಿಯಲ್ಲಿರಲಿಲ್ಲ. ಆದರೆ ನನ್ನ ಮಗ ಬೇರೆ ಯಾವುದನ್ನು ಓದುವುದಕ್ಕೂ ಸಿದ್ಧನಿರಲಿಲ್ಲ. ಈ ಧರ್ಮಸಂಕಟವನ್ನು ಪೂಜ್ಯರಿಗೆ ಆಪ್ತರಾಗಿದ್ದ ನನ್ನ ಮಿತ್ರರಲ್ಲಿ ಹೇಳಿಕೊಂಡೆ. ಅವರು ನನ್ನನ್ನು ಸಮಾಧಾನಪಡಿಸಿ ಶ್ರೀಗಳವರಿಂದ ಸೀಟು ಕೊಡಿಸುವುದಾಗಿ ಭರವಸೆ ನೀಡಿದರು. ನಾನು ಮಾತ್ರ ಶ್ರೀಗಳವರಲ್ಲಿಗೆ ಬರುವುದಿಲ್ಲ ಎಂದು ನನ್ನ ಮಿತ್ರರಿಗೆ ತಿಳಿಸಿಬಿಟ್ಟೆ. ಆಗ ನನ್ನ ಮಿತ್ರರು ನನ್ನ ಮಗನನ್ನು ಜೊತೆಯಲ್ಲಿ ಕರೆದುಕೊಂಡು ಶ್ರೀಗಳವರಲ್ಲಿಗೆ ಹೋದರು. ಕುಶಲ ಸಂಭಾಷಣೆಗಳೆಲ್ಲ ಆದಮೇಲೆ ನನ್ನ ಮಿತ್ರರು ಶ್ರೀಗಳವರಿಗೆ "ಇವನು ನಮ್ಮ ಹುಡುಗ, ಇವನಿಗೆ ತಮ್ಮ ಇಂಜಿನಿಯರಿಂಗ್ ಕಾಲೇಜಿನಲ್ಲಿ ಒಂದು ಸೀಟು ಕೊಡಬೇಕು. ಅದಕ್ಕಾಗಿ ಕರೆದುಕೊಂಡು ಬಂದಿದ್ದೀನಿ ಬುದ್ಧಿ" ಎಂದರು. ಆಗ ಶ್ರೀಗಳವರು, "ನೀವು ಯಾವ ಹೊತ್ತೂ ಏನನ್ನೂ ಕೇಳಿಲ್ಲ, ಶ್ರೀಮಠದ ಪರಮ ಅಭಿಮಾನಿಗಳು. ನೀವು ಈಗಲೇ ಕರೆದುಕೊಂಡು ಹೋಗಿ ಸೇರಿಸಿ" ಎಂದು ಪತ್ರವನ್ನು ಬರೆದುಕೊಟ್ಟರು. "ನಿಮ್ಮ ಹುಡುಗನನ್ನು ಇಲ್ಲೇ ಹಾಸ್ಟೆಲಿನಲ್ಲಿ ಸೇರಿಸಿಬಿಡಿ" ಎಂದು ಹೇಳಿಕಳುಹಿಸಿದರು. ಕೂಡಲೇ ಕಾಲೇಜಿಗೆ ಸೇರಿಸಿಬಿಟ್ಟದ್ದಾಯಿತು. ಕೆಲದಿನಗಳಾದ ಮೇಲೆ ಸೀಟು ಸಿಕ್ಕದ ಕೆಲವರು ನನ್ನ ಇಬ್ಬರು ಹುಡುಗರಿಗೆ ಸೀಟು ಕೊಟ್ಟಿದ್ದಾರೆ ಎಂದು ಗೊಣಗಾಡಿಕೊಂಡು ಶ್ರೀಗಳವರಿಗೂ ಈ ವಿಷಯ ತಿಳಿಸಿದರಂತೆ. ಆದರೆ ಪರಮಪೂಜ್ಯರು ಎಂದೂ ಈ ವಿಷಯವನ್ನು ನನ್ನಲ್ಲಿ ಪ್ರಸ್ತಾಪಿಸಿದವರೇ ಅಲ್ಲ. ಇಂತಹ ಮಹಾನುಭಾವರು, ಬಡವರ ಬಂಧು, ಪರಮಪೂಜ್ಯ ಜಗದ್ಗುರು ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು. ತ್ರಿಕಾಲದಲ್ಲಿಯೂ ಅಷ್ಟೇ ಅಲ್ಲ ಸದಾಕಾಲದಲ್ಲಿಯೂ ಸ್ಮರಣೀಯರು.

ಶ್ರೀಗಳವರ ಆಶೀರ್ವಾದ ಬಲದಿಂದಲೇ ನಾನು ಅನೇಕ ಮಹತ್ಕಾರ್ಯವನ್ನು ಸಾಧಿಸಿದ್ದೇನೆ ಎಂದು ಕಾಯಾ ವಾಚಾ ಮನಸಾ ನಂಬಿದ್ದೇನೆ. ನನ್ನ ಬಾಳಿನ ಭಾಗ್ಯದೇವತೆ, ಗ್ರಾಮಾಂತರದಿಂದ ಬಂದ ನನ್ನಂಥ ಕಾಡುಶಿಲೆಯನ್ನು ತಮ್ಮ ಮಾನವೀಯತೆ ಎಂಬ ಉಳಿಯಿಂದ ಕಟೆದು ಒಂದು ಆಕಾರವನ್ನು ಕೊಟ್ಟ ಪರಮ ತಪೋಧನರು. ಅವರು ನೀಡಿದ ಪರಮ ಪ್ರಸಾದದ ಪ್ರಭಾವದಿಂದ ನನ್ನಂಥವರು ಇನ್ನೂ ಜೀವಂತರಾಗಿದ್ದೇವೆ. ನಮ್ಮ ಕೊನೆಯ ಉಸಿರಿರುವ ತನಕ ಶ್ರೀಗಳವರ ಸ್ಮರಣೆ ನಿರಂತರವಾಗಿರುತ್ತದೆ. ನಾವು ಜೀವಂತವಾಗಿರುತ್ತೇವೆ. ಅತ್ಯಂತ ಪ್ರಾಂಜಲ ಮನಸ್ಸಿನಿಂದ ಶ್ರೀಗಳವರ ಶ್ರೀಪಾದಗಳಿಗೆ ಅನಂತ ನಮನಗಳನ್ನು ಸಲ್ಲಿಸುತ್ತೇನೆ.



# ಶಿವೈಕ್ಯರಾದ ಷ॥ಬ್ರ॥ ಪಟ್ಟದ ಶ್ರೀರೇಣುಕಶಿವಾಚಾರ್ಯ ಮಹಾಸ್ವಾಮಿಗಳು

**ಕ**ರ್ನಾಟಕದಲ್ಲಿ ಅನಾದಿಕಾಲದಿಂದ ವಿವಿಧ ಧರ್ಮಗಳ ಪೀಠಗಳೂ ಮಠಗಳೂ ಸ್ಥಾಪಿತವಾಗಿ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಮಹತ್ತರವಾದ ಕಾರ್ಯಗಳನ್ನು ನಿರ್ವಹಿಸುತ್ತ ಬಂದಿರುವುದನ್ನು ಇತಿಹಾಸದಿಂದ ಕಂಡುಕೊಳ್ಳಬಹುದಾಗಿದೆ. ಈ ಮಠಗಳು ದೀನದಲಿತೋದ್ಧಾರ ಮತ್ತು ಮಾನವ ಕಲ್ಯಾಣವನ್ನೇ ಪರಮೋದ್ದೇಶವೆಂದು ಭಾವಿಸಿ ಲೋಕೋತ್ತರ ಕಾರ್ಯಗಳನ್ನು ಮಾಡಿರುವುದನ್ನು ಅರಿತುಕೊಳ್ಳಬಹುದಾಗಿದೆ.

ಕರ್ನಾಟಕ, ವೀರಶೈವಮಠಗಳ ತವರೂರು. ಇತ್ತೀಚಿನ ಒಂದು ಗಣತಿಯಂತೆ ಕರ್ನಾಟಕದಲ್ಲಿ ಒಟ್ಟು ಐದು ಸಾವಿರದ ಏಳುನೂರಆರು ಮಠಗಳು ಅಸ್ತಿತ್ವದಲ್ಲಿದ್ದವು. ಅವುಗಳಲ್ಲಿ ಮೂರುಸಾವಿರದ ಮೂವತ್ತೆರಡು ಮಠಗಳು ಕಣ್ಮರೆಯಾಗಿವೆ. ಇಂದು ಲೆಕ್ಕಕ್ಕೆ ಒಂದು ಸಾವಿರದ ಎಂಟುನೂರ ಎಪ್ಪತ್ತೆಂಟು ಮಠಗಳು ಲಭ್ಯವಾಗಿವೆ. ಇವುಗಳಲ್ಲಿ ಏಳುನೂರಎಪ್ಪತ್ತೈದು ಮಠಗಳು ಮರೆಯಾಗಿವೆ. ಇಂದು ಅಸ್ತಿತ್ವದಲ್ಲಿರುವುದು ಒಂದುಸಾವಿರದ ಎಂಬತ್ತೊಂಬತ್ತು ಮಠಗಳು ಮಾತ್ರ. ಇವುಗಳಲ್ಲಿ ಗುರುವರ್ಗದ ಮಠಗಳು, ಶಿಷ್ಯವರ್ಗದ ಮಠಗಳು, ಪುತ್ರವರ್ಗದ ಮಠಗಳು, ವಿರಕ್ತಮಠಗಳು, ದಾಸೋಹ ಮಠಗಳು ಸೇರ್ಪಡೆಯಾಗಿವೆ.

ಗುರುಪೀಠಗಳೆಂಬ ಅಭಿಧಾನದಿಂದ ಲೋಕೋತ್ತರ ಕಾರ್ಯಗಳನ್ನು ಮಾಡುತ್ತಿರುವ ಪಂಚಪೀಠಗಳು ರಾಷ್ಟ್ರಾದ್ಯಂತ ಅನೇಕ ಶಾಖೋಪಶಾಖೆಗಳನ್ನು ಹೊಂದಿ ಅಸಂಖ್ಯಾತಭಕ್ತರ ಮುಕ್ತಿಯ ಪುಣ್ಯಕ್ಷೇತ್ರಗಳೆಂಬ ಪೂಜ್ಯಭಾವನೆಯನ್ನುಂಟುಮಾಡಿವೆ. ಈ ಮಠಗಳು ಸಾಹಿತ್ಯಕವಾಗಿಯೂ ಸಾಂಸ್ಕೃತಿಕವಾಗಿಯೂ ಮಹತ್ತರವಾದ ಕಾರ್ಯವನ್ನು ಮಾಡುತ್ತಿವೆ. ಧರ್ಮ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದ ಮಹತ್ಕೃತಿಗಳನ್ನು ಪ್ರಕಟಿಸಿ ಜನತೆಗೆ ಮಹೋಪಕಾರವನ್ನು ಮಾಡುತ್ತಿವೆ.

ಪಂಚಪೀಠಗಳ ಪರಂಪರೆಗೆ ಸೇರಿದ ಶಾಖಾಮಠಗಳಲ್ಲಿ ಬೆಂಗಳೂರು ಜಿಲ್ಲೆ ಆನೇಕಲ್ ತಾಲ್ಲೂಕಿನ ರಾಜಾಪುರದಲ್ಲಿರುವ ಶ್ರೀಸಂಸ್ಥಾನ ಮಠವು ಧಾರ್ಮಿಕ ಕೇಂದ್ರವಾಗಿ ಬೆಳೆದು ನಿಂತಿದೆ. ಇದು ಶ್ರೀ ರಂಭಾಪುರಿ ಪೀಠದ ಶಾಖಾಮಠವಾಗಿ ಬೆಳೆದು ಪ್ರಖ್ಯಾತವಾಗಿದೆ. ರಂಭಾಪುರಿ ಪೀಠದ ಅಧ್ಯಕ್ಷರಾಗಿದ್ದ ಶ್ರೀ ರೇವಣಸಿದ್ಧರು ರಾಜಾಪುರದಲ್ಲಿ ಅನುಷ್ಠಾನಗೊಂಡು ತಪಸ್ಸು ಮಾಡಿದ್ದಾರೆ. ಅಲ್ಲದೆ ಜಗದ್ಗುರು ರೇವಣಸಿದ್ಧರು ವಿಭೂತಿಪುರ ಸಂಸ್ಥಾನ ಮಠ, ರಾಜಾಪುರ ಸಂಸ್ಥಾನ ಮಠ, ತಮಿಳುನಾಡಿನ ಡೆಂಕಣಿಕೋಟೆ ತಾಲ್ಲೂಕಿನ ಬಳ್ಳನಪುರ ಸಂಸ್ಥಾನಮಠ, ಕೋಲಾರ ಜಿಲ್ಲೆಯ ನಾಗಲಾಪುರ ಸಂಸ್ಥಾನಮಠ ಮತ್ತು ಗುಮ್ಮಳಾಪುರದ ಸಂಸ್ಥಾನ ಮಠವನ್ನು ಸ್ಥಾಪಿಸಿರುವುದಾಗಿ ತಿಳಿದುಬರುತ್ತದೆ. ಶ್ರೀ ರೇವಣಸಿದ್ಧರು ತಮ್ಮ ಶಿಷ್ಯರಾದ ಶ್ರೀ ರುದ್ರೇಶ್ವರ ಶಿವಾಚಾರ್ಯ ಸ್ವಾಮಿಗಳನ್ನು ರಾಜಾಪುರ ಸಂಸ್ಥಾನ ಮಠದ ಪಟ್ಟಾಧಿಕಾರಿಯನ್ನಾಗಿ ಮಾಡಿದರೆಂದು ಪ್ರತೀತಿಯಿದೆ. ಇವರಾದ ಮೇಲೆ ಷ॥ ಬ್ರ॥ ಶ್ರೀ ರೇಣುಕ ಶಿವಾಚಾರ್ಯ ಸ್ವಾಮಿಗಳು ಶ್ರೀಮಠದ ಪಟ್ಟಾಧಿಕಾರವನ್ನು ವಹಿಸಿಕೊಂಡು ಕಾರ್ಯಭಾರವನ್ನು ನಿರ್ವಹಿಸುತ್ತಿದ್ದರು. ಪ್ರಸ್ತುತ ಶ್ರೀಗಳವರು ಶ್ರೀ ಬಸವರಾಜಯ್ಯ

ಮತ್ತು ಶ್ರೀಮತಿ ವೀರಮ್ಮನವರ ಪುತ್ರರಾಗಿ ೧೯೩೨ರ ಮೇ ೯ ರಂದು ಜನಿಸಿದರು. ಶ್ರೀಯುತರು ಬಾಲ್ಯದಲ್ಲೇ ಶ್ರೀ ಚೆನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಸ್ವಾಮಿಗಳ ಕೃಪಾಕಟಾಕ್ಷಕ್ಕೆ ಒಳಗಾಗಿದ್ದರು. ರಾಜಾಪುರದಲ್ಲಿ ಪ್ರಾಥಮಿಕ ಶಾಲೆ, ಹುಣಸಮಾರನಹಳ್ಳಿ ಮತ್ತು ಆನೇಕಲ್ಲು ಪಟ್ಟಣಗಳಲ್ಲಿ ಪ್ರೌಢಶಿಕ್ಷಣವನ್ನು ಮುಗಿಸಿ, ಬೆಂಗಳೂರಿನಲ್ಲಿ ಕಾಲೇಜು ಶಿಕ್ಷಣವನ್ನು ಪ್ರಾರಂಭಿಸಿದರು. ಬೆಂಗಳೂರಿನ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಸಂಸ್ಕೃತವನ್ನು ಕಲಿತು, ಶ್ರೀವೃಷಭಲಿಂಗ ದೇಶಿಕೇಂದ್ರ ಶಿವಾಚಾರ್ಯ ಸ್ವಾಮಿಗಳ ಅಪೇಕ್ಷೆಯಂತೆ ೧೯೬೫ರ ನವೆಂಬರ್ ೫ ರಂದು ಶ್ರೀ ರೇಣುಕ ಶಿವಾಚಾರ್ಯ ಸ್ವಾಮಿಗಳೆಂದು ಅಭಿಧಾನ ಪಡೆದು ಪಟ್ಟಾಧಿಕಾರ ವಹಿಸಿಕೊಂಡರು. ಅಂದಿನಿಂದ ಇಂದಿನವರೆಗೂ ದೇಶದ ನಾನಾ ಭಾಗಗಳಲ್ಲಿ ಸಂಚರಿಸಿ ವೀರಶೈವಧರ್ಮದ ತತ್ವಗಳನ್ನು ಪ್ರಚುರಪಡಿಸಿ ಮಠವನ್ನು ಅಭಿವೃದ್ಧಿಪಡಿಸಿದ್ದಾರೆ. ಪ್ರಾಚೀನ ಇತಿಹಾಸವನ್ನು ಹೊಂದಿರುವ ಶ್ರೀಮಠಕ್ಕೆ ಕರ್ನಾಟಕದ ರಾಜರು ದಾನದತ್ತಿಗಳನ್ನು ನೀಡಿದ್ದಾರೆ. ಇವು ಶಾಸನಗಳಲ್ಲಿ ದಾಖಲಾಗಿವೆ. ಶ್ರೀಮಠಕ್ಕೆ ಕರ್ನಾಟಕ ಸರ್ಕಾರದಿಂದಲೂ ಕೆಲವು ಸೌಲಭ್ಯಗಳು ಲಭ್ಯವಾಗುತ್ತಿವೆ. ಇದು ಕೇವಲ ದಾಸೋಹ ಮಠವಷ್ಟೇ ಅಲ್ಲದೆ ಶಿಕ್ಷಣ ಸಂಸ್ಥೆಗಳನ್ನೂ ನಡೆಸುತ್ತಿದೆ. ವೀರಶೈವ ಸಿದ್ಧಾಂತದ ಕೃತಿಗಳನ್ನೂ ಪ್ರಕಟಿಸಿದೆ.

ಷ॥ ಬ್ರ॥ ರೇಣುಕಶಿವಾಚಾರ್ಯಶ್ರೀಗಳು ಕರ್ನಾಟಕದ ಜನತೆಗೆ ಅದರಲ್ಲೂ ಬೆಂಗಳೂರು ಮತ್ತು ತಮಿಳುನಾಡಿನ ಕೃಷ್ಣಗಿರಿ ಮೊದಲಾದ ಪ್ರದೇಶಗಳಲ್ಲಿ ಅತ್ಯಂತ ಜನಪ್ರಿಯರಾಗಿದ್ದರು. ಶ್ರೀಗಳು ತಮ್ಮ ಭಕ್ತರ ವೈದಿಕಕಾರ್ಯಗಳಿಂದಷ್ಟೇ ಅಲ್ಲದೆ ತಮ್ಮ ವಿಶಿಷ್ಟಶೈಲಿಯಿಂದ ಏಕವಚನದಲ್ಲೇ ಶಿಷ್ಯರನ್ನು ಸಂಬೋಧಿಸುತ್ತ ಅವರಿಗೆಲ್ಲ ಅಚ್ಚುಮೆಚ್ಚಾಗಿದ್ದರು. ಇದರಿಂದಾಗಿ ಭಕ್ತರು ತಮ್ಮ ಎಲ್ಲ ವೈದಿಕ ಮತ್ತು ಇನ್ನಿತರ ಎಲ್ಲಾ ಕಾರ್ಯಗಳಿಗೂ ಶ್ರೀಗಳನ್ನು ಆಹ್ವಾನಿಸಲು ಮುಗಿಬೀಳುತ್ತಿದ್ದರು.

ರಾಜಾಪುರದ ಶ್ರೀಗಳಿಗೂ ನನಗೂ ಬಹಳ ನಿಕಟ ಬಾಂಧವ್ಯವಿತ್ತು. ಶ್ರೀಗಳ ಪೂರ್ವಾಶ್ರಮದ ವ್ಯಾಸಂಗಾವಧಿಯಲ್ಲಿ ಚಾಮರಾಜಪೇಟೆಯಲ್ಲಿದ್ದ ನಮ್ಮ ಮನೆಗೆ ಅನೇಕ ಬಾರಿ ಬಂದು ಹೋಗಿದ್ದಾರೆ. ಪ್ರಸಾದವನ್ನೂ ಸ್ವೀಕರಿಸಿದ್ದಾರೆ. ನಾನು ರಾಜಾಜಿನಗರದ ಸ್ವಂತ ಮನೆಗೆ ಬಂದಾಗ ೧೯೯೯ನೆಯ ಡಿಸೆಂಬರ್ ತಿಂಗಳಲ್ಲಿ ನನ್ನ ಶ್ರೀಮತಿ ಲಿಂಗೈಕ್ಯರಾದಾಗ ಆಕೆಯ ಎಲ್ಲ ಸಂಸ್ಕಾರ ಕಾರ್ಯಗಳನ್ನೂ ವಿಧಿವತ್ತಾಗಿ ನಡೆಸಿಕೊಟ್ಟು "ನಮ್ಮ ಹೆಣ್ಣುಮಗಳು ಹೊರಟು ಹೋದಳು" ಎಂದು ಬಹಳವಾಗಿ ಪರಿತಪಿಸಿದರು.

ನಾನು ೧೯೯೮ ರಿಂದ ೨೦೦೧ ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗಿದ್ದುದು ಶ್ರೀಗಳವರಿಗೆ ಅಪಾರ ಸಂತೋಷವನ್ನುಂಟುಮಾಡಿತ್ತು. ಅಷ್ಟೇ ಅಲ್ಲದೆ ಶ್ರೀಗಳು ಚುನಾವಣೆಗೆ ಬಂದು ಮತವನ್ನೂ ಚಲಾಯಿಸಿದ್ದರು. ನಾನು ಶ್ರೀಗಳ ಜೊತೆಯಲ್ಲಿದ್ದಾಗಲೆಲ್ಲ ಶ್ರೀಗಳನ್ನು ಕಾಣಲು ಬಂದವರಿಗೆಲ್ಲ "ನಮ್ಮ ಅಧ್ಯಕ್ಷರನ್ನು ನೋಡ್ರಿ" ಎಂದು ಪರಿಚಯಿಸುತ್ತಿದ್ದರು.

ಇದೇ ೨೦೦೬ರಲ್ಲಿ ಶ್ರೀಮಠದ ಇತಿಹಾಸವನ್ನು ಶ್ರೀಮಠದ ಸಂಸ್ಮರಣ ಸಂಪುಟ 'ರಾಜಾಪುರ ಶ್ರೀ' ಎಂಬ ಅಮೃತಮಹೋತ್ಸವದ ಸಂದರ್ಭದಲ್ಲಿ ಹೊರತಂದರು. ಈ ಸಂಸ್ಮರಣ ಸಂಪುಟದಲ್ಲಿ ಹಲವಾರು ಶ್ರೀಗಳವರ ಲೇಖನಗಳೂ ಅನೇಕ ವಿದ್ವಾಂಸರ ಮೌಲಿಕ ಲೇಖನಗಳೂ ಸೇರ್ಪಡೆಯಾಗಿವೆ. ಈ ಸಂಪುಟದ ಜವಾಬ್ದಾರಿಯನ್ನು ನನಗೇ ವಹಿಸಿದ್ದಲ್ಲದೆ ಈ ಸಂಪುಟದ ಪ್ರಧಾನ ಸಂಪಾದಕನನ್ನಾಗಿಯೂ ಮಾಡಿದ್ದರು.

ಶ್ರೀಮದ್ರಾಜಾಪುರ ವೀರಧರ್ಮಸಿಂಹಾಸನ ಸಂಸ್ಥಾನಮಠದ ಪೀಠಾಧಿಪತಿಗಳಾಗಿದ್ದ ಷ॥ ಬ್ರ॥ ಪಟ್ಟದ ಶ್ರೀರೇಣುಕ ಶಿವಾಚಾರ್ಯ ಮಹಾಸ್ವಾಮಿಗಳವರು ನಿರಾಡಂಬರದ ನಿರ್ಮಲ ಮನಸ್ಸಿನ ಪರಿಶುದ್ಧ ಅಂತಃಕರಣ ಉಳ್ಳವರಾಗಿದ್ದರು. ಇಂತಹ ಅಪರೂಪದ ಶ್ರೀಗಳವರು ದಿನಾಂಕ ೧.೭.೨೦೧೦ ರಂದು ಲಿಂಗೈಕ್ಯರಾದುದು ನಮಗೆಲ್ಲ ಅಸಹನೀಯ ದುಃಖವನ್ನುಂಟುಮಾಡಿದೆ. ದಯಾಮಯರಾದ ಪಾರ್ವತೀ ಪರಮೇಶ್ವರರು ಶ್ರೀಗಳವರ ಆತ್ಮಕ್ಕೆ ಚಿರಶಾಂತಿಯನ್ನೀಯಲಿ ಎಂದು ಅನನ್ಯಭಕ್ತಿಭಾವದಿಂದ ಪ್ರಾರ್ಥಿಸುತ್ತೇವೆ.

■

# ದಿವಂಗತ ಡಾ. ಎ.ಆರ್. ಕೃಷ್ಣಶಾಸ್ತ್ರಿಗಳು

**ಕ**ನ್ನಡ ಸಾರಸ್ವತ ಲೋಕಕ್ಕೆ ಡಾ. ಕೃಷ್ಣಶಾಸ್ತ್ರಿಗಳನ್ನು ಪರಿಚಯ ಮಾಡಿಕೊಡುವುದು ಸಾಹಸದ ಮಾತೇ ಸರಿ. ಆದರೂ ಅವರ ವಿದ್ಯಾರ್ಥಿಯಾಗಿ ಅವರ ನೇತೃತ್ವದಲ್ಲಿ ಕೆಲಕಾಲ ನಿಘಂಟಿನ ಕೆಲಸ ಮಾಡಿರುವ ನಾನು ಈ ಕೆಲವು ಅಂಶಗಳನ್ನು ನಿರೂಪಿಸಿಕೊಳ್ಳುತ್ತೇನೆ.

ನಾನು ನಿಘಂಟು ಕಚೇರಿಗೆ ೧೯೫೫ನೆಯ ಇಸವಿಯಲ್ಲಿ ಬಂದು ಸೇರಿದೆ. ಆಗ ಪ್ರಾ॥ ಡಿ.ಎಲ್. ನರಸಿಂಹಾಚಾರ್ಯರು ನಿಘಂಟಿನ ಮುಖ್ಯ ಸಂಪಾದಕರಾಗಿದ್ದರು. ಡಾ. ಕೃಷ್ಣಶಾಸ್ತ್ರಿಗಳು ನಿಘಂಟು ಸಂಪಾದಕ ಸಮಿತಿಯ ಅಧ್ಯಕ್ಷರಾಗಿದ್ದರು. ೧೯೫೬ನೆಯ ಇಸವಿಯಲ್ಲಿ ಶ್ರೀ ಡಿ.ಎಲ್. ನರಸಿಂಹಾಚಾರ್ಯರು ಕನ್ನಡ ಪ್ರಾಧ್ಯಾಪಕರಾಗಿ ನೇಮಕಗೊಂಡು ಮೈಸೂರಿಗೆ ಹಿಂದಿರುಗಿದರು. ಇಲ್ಲಿಯವರೆಗೆ ಶ್ರೀ ಕೃಷ್ಣಶಾಸ್ತ್ರಿಗಳಿಗೂ ನನಗೂ ನಿಘಂಟಿನ ಕಾರ್ಯದಲ್ಲಿ ನೇರವಾದ ಪರಿಚಯವಿರಲಿಲ್ಲ. ಶ್ರೀ ನರಸಿಂಹಾಚಾರ್ಯರು ಮೈಸೂರಿಗೆ ಹಿಂತಿರುಗಿದ ಮೇಲೆ ನಿಘಂಟಿನ ಮುಖ್ಯ ಸಂಪಾದಕರ ಹುದ್ದೆ ತೆರವಾಯಿತು. ಹೀಗಿರುವಲ್ಲಿ ಒಂದುದಿನ ಶ್ರೀ ಶಾಸ್ತ್ರಿಗಳು ಕಚೇರಿಗೆ ಬಂದರು. ನನ್ನನ್ನು ಒಂಟಿಯಾಗಿ ಹೊರಗೆ ಕರೆದು "ಏನಪ್ಪಾ, ನರಸಿಂಹಾಚಾರ್ಯರು ಮೈಸೂರಿಗೆ ಹೊರಟುಹೋದರು. ಇನ್ನು ನೀನು ಅವರ ಸ್ಥಾನವನ್ನು ತೆಗೆದುಕೊಂಡು ಕೆಲಸವನ್ನು ಮುಂದುವರಿಸಿ ಕೊಂಡು ಹೋಗಬೇಕು" ಎಂದು ಹೇಳಿದರು. ಅದಕ್ಕೆ ನಾನು "ನನ್ನ ಗುರುಗಳು ಕುಳಿತ ಪೀಠದಲ್ಲಿ ಕುಳಿತುಕೊಂಡು ಕೆಲಸ ಮಾಡುವ ಯೋಗ್ಯತೆ ನನಗಿಲ್ಲ ಸಾರ್. ನನಗಿಂತ ಹೆಚ್ಚು ವಿದ್ವಾಂಸರನ್ನು ಆ ಹುದ್ದೆಗೆ ನೇಮಿಸುವುದು ವಾಸಿ ಸಾರ್" ಎಂದು ನಮ್ರವಾಗಿ ಹೇಳಿದೆ. ಕೂಡಲೇ ಶ್ರೀ ಶಾಸ್ತ್ರಿಗಳು "ನರಸಿಂಹಾಚಾರ್ಯರು ನಿಘಂಟಿನ ಕೆಲಸಕ್ಕಾಗಿ ನಿನ್ನನ್ನು ಆರಿಸಿ ಕರೆದುಕೊಂಡು ಬಂದಿದ್ದಾರೆ. ನಿನ್ನ ಯೋಗ್ಯತೆ ಅವರಿಗೆ ಚೆನ್ನಾಗಿ ಗೊತ್ತಿದೆ. ಅಲ್ಲದೆ ನೀನು ಸಂಪಾದಿಸಿರುವ ಹರಿಶ್ಚಂದ್ರ ಕಾವ್ಯವೇ ಮೊದಲಾದ ಗ್ರಂಥಗಳಿಂದ ನೀನು ಈ ಕೆಲಸಕ್ಕೆ ಯೋಗ್ಯ ಎಂದು ನಾನು ಭಾವಿಸಿದ್ದೇನೆ. ಗುರುಗಳು ಕುಳಿತ ಪೀಠದಲ್ಲಿ ಹೇಗೆ ಕುಳಿತುಕೊಳ್ಳುವುದು ಎಂದು ಯೋಚಿಸಬೇಡ "ಶಿಷ್ಯಾದಿಚ್ಛೇತ್ ಪರಾಜಯಂ" ಎಂಬಂತೆ ನೀನು ಈ ಕೆಲಸವನ್ನು ವಹಿಸಿಕೋ" ಎಂದರು. ನಾನು ಮುಂದಕ್ಕೆ ಮಾತನಾಡಲಾರದೆ "ತಮ್ಮಿಷ್ಟ ಬಂದಂತೆ ಮಾಡಬಹುದು ಸಾರ್" ಎಂದುಬಿಟ್ಟೆ. ಅಲ್ಲಿಗೆ ಆ ಪ್ರಕರಣ ಮುಗಿಯಿತು.

ಹೀಗಿರುವಲ್ಲಿ ಶ್ರೀ ಶಾಸ್ತ್ರಿಗಳೇ ಕೆಲಕಾಲ ಸಂಪಾದಕರ ಕೆಲಸವನ್ನೂ ನೋಡಿಕೊಳ್ಳುತ್ತ ನಿಘಂಟಿನ ಎಂಟು ಮಾದರಿ ಪುಟಗಳ ಕರಡನ್ನು ಸಿದ್ಧಪಡಿಸುವ ತರಾತುರಿಯಲ್ಲಿದ್ದರು. ಅದಕ್ಕೆ ಬೇಕಾದ ಮಾಹಿತಿಗಾಗಿ ಕಚೇರಿಗೆ ಆಗಿಂದಾಗ್ಗೆ ಬರುತ್ತಿದ್ದರು. ಜೊತೆಗೆ ನಾನೂ ಒಂದೆರಡು ಬಾರಿ ಅವರ ಮನೆಗೆ ಹೋಗಿಬರುತ್ತಿದ್ದೆ. ಈ ಎಲ್ಲ ಪ್ರಕರಣಗಳನ್ನೂ ನೆನೆದಾಗ ಶ್ರೀ ಶಾಸ್ತ್ರಿಗಳ ಅಚ್ಚುಕಟ್ಟುತನ ಕಾರ್ಯಶ್ರದ್ಧೆ, ಪರಿಪೂರ್ಣ ಪಾಂಡಿತ್ಯ ಕಣ್ಮುಂದೆ ನಿಲ್ಲುತ್ತವೆ.

ಶಾಸ್ತ್ರಿಗಳು ಯಾವುದಾದರೂ ಕೆಲಸವನ್ನು ವಹಿಸಿಕೊಂಡರೆ ಎಷ್ಟು ನಿಷ್ಠೆಯಿಂದ ನಿರ್ವಹಿಸುತ್ತಿದ್ದರು ಎಂಬುದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಗೌರವ ಸಂಪಾದಕರಾಗಿ ಅವರು ಇದ್ದ ಕಾಲದಲ್ಲಿ ಕಚೇರಿಗೆ ಆಗಾಗ್ಗೆ ಬಂದು ನಡೆಯುತ್ತಿದ್ದ ಕೆಲಸವನ್ನು ನೋಡುತ್ತಿದ್ದರು. ಜೊತೆಗೆ ಆಯಾದಿನ ಬರೆದ ಹಸ್ತಪ್ರತಿಯನ್ನು ಮನೆಗೆ ತರಿಸಿಕೊಂಡು ವಿವರವಾಗಿ ಪರಿಶೀಲಿಸಿ ತಮ್ಮ ಸಲಹೆ ಸೂಚನೆಗಳೊಂದಿಗೆ ಹಿಂತಿರುಗಿಸುತ್ತಿದ್ದರು.

ಶಾಸ್ತ್ರಿಗಳು ಸಂಪಾದಕ ಸಮಿತಿಯ ಸಭೆಯ ಅಧ್ಯಕ್ಷತೆಯನ್ನು ದಕ್ಷತೆಯಿಂದ ಭೂಷಣಪ್ರಾಯವಾಗಿ ನಿರ್ವಹಿಸುತ್ತಿದ್ದರು. ಸದಸ್ಯರಿಗೆ ಬೇಸರವಾಗದಂತೆ ಆಗಾಗ ಚುಟಕುಗಳನ್ನು ಹಾರಿಸುತ್ತಿದ್ದರು. ಉಪಹಾರದ ಸಮಯದಲ್ಲಿ ಒಬ್ಬ ಸದಸ್ಯರು "ಶಾಸ್ತ್ರಿಗಳೇ ತಮ್ಮ ಆರೋಗ್ಯ ಹೇಗಿದೆ?" ಎಂದು ಕೇಳಿದರು. ಅದಕ್ಕೆ ಅವರು "ಈ ಕಾಯಕಲ್ಪ ತಗೊಳ್ಳುತ್ತಿರುವಾಗ ನನ್ನ ಆರೋಗ್ಯಕ್ಕೆ ಕೊರತೆಯಿಲ್ಲ" ಎಂದರು. ಅಂದಿನ ಉಪಹಾರದಲ್ಲಿ ಬಾದಾಮಿ ಹಲ್ವವನ್ನು ತರಿಸಲಾಗಿತ್ತು. ಅದನ್ನೇ ಶಾಸ್ತ್ರಿಗಳು ಕಾಯಕಲ್ಪ ಎಂದು ಕರೆದದ್ದು.

ಶಾಸ್ತ್ರಿಗಳು ಖಂಡಿತ ಸ್ವಭಾವದವರು. ಕಡ್ಡಿ ತುಂಡಾದಂತೆ ಮಾತನಾಡಿಬಿಡುತ್ತಿದ್ದರು. ಒಮ್ಮೆ ಯಾರೋ ಶಾಸ್ತ್ರಿಗಳನ್ನು ಹೊಗಳಿದರು. ಅದನ್ನು ಕೇಳಿದ ಶಾಸ್ತ್ರಿಗಳು "ಸ್ವಾಮಿ, ಆ ಹೊಗಳಿಕೆ ನನಗಲ್ಲ, ರಾಜಮಹಾರಾಜರಿಗೆ" ಎಂದು ನಿರ್ದಾಕ್ಷಿಣ್ಯವಾಗಿ ಹೇಳಿಬಿಟ್ಟರು. ಅವರಿಗೆ ಯಾರ ದಾಕ್ಷಿಣ್ಯವೂ ಬೇಕಾಗಿರಲಿಲ್ಲ. ಇದ್ದುದನ್ನು ಇದ್ದಂತೆ ಹೇಳಿಬಿಡುವುದು ಅವರ ಸ್ವಭಾವವಾಗಿತ್ತು.

ನಿಘಂಟಿನ ಕೆಲಸ ನಿಧಾನವಾಗಿ ಸಾಗುತ್ತಿದ್ದ ವಿಷಯದಲ್ಲಿ ಶಾಸ್ತ್ರಿಗಳಿಗೆ ಅಸಮಾಧಾನವಿತ್ತು. ಮೊದಲನೆಯ ಸಂಚಿಕೆಯನ್ನು ಅವರ ಮನೆಗೆ ತೆಗೆದುಕೊಂಡು ಹೋಗಿ ಕೊಟ್ಟಾಗ ಅವರಿಗೆ ಆದ ಸಂತೋಷ ಅಷ್ಟಿಷ್ಟಲ್ಲ. ನನ್ನನ್ನು ಕುರಿತು "ಏನಪ್ಪಾ, ಮೈಸೂರಿಗೆ ಹಿಂತಿರುಗಿಬಿಡಬೇಕೆಂದಿದ್ದಲ್ಲಾ. ಈಗ ನೋಡು, ಒಂದು ಸಂಚಿಕೆ ಹೊರಬಂದಿದೆಯಲ್ಲಾ. ಬಹಳ ಸಂತೋಷ. ದೇವರು ನಿನಗೆ ಒಳ್ಳೆಯದನ್ನು ಮಾಡಲಿ" ಎಂದು ಆಶೀರ್ವದಿಸಿದರು.

ಶ್ರೀ ಶಾಸ್ತ್ರಿಗಳು ಸ್ವಲ್ಪ ನಿಷ್ಠುರ ಸ್ವಭಾವದವರು. ಆದರೂ ಏಕೋ ಏನೋ ನನ್ನಲ್ಲಿ ಅಪರಿಮಿತವಾದ ವಿಶ್ವಾಸವನ್ನಿಟ್ಟು ಕೊಂಡಿದ್ದರು. ಕನ್ನಡ ನಿಘಂಟಿಗೆ ಶಾಸ್ತ್ರಿಗಳು ಸಲ್ಲಿಸಿದ ಸೇವೆ ಚಿರಸ್ಮರಣೀಯವಾದುದು. ಪ್ರಾರಂಭದ ಕಾಲದಲ್ಲಿ ಅವರ ಮಾರ್ಗದರ್ಶನ ವಿಶೇಷ ಫಲಕಾರಿಯಾಯಿತು. ಈ ಎಲ್ಲ ಹಿರಿಯರ ನಿರಂತರ ದುಡಿಮೆ, ನಿಸ್ವಾರ್ಥ ಸೇವೆಗಳಿಂದ ನಿಘಂಟಿನ ಕಾರ್ಯ ಸುಗಮವಾಯಿತು. ಈ ದೃಷ್ಟಿಯಿಂದ ಶ್ರೀಯುತರು ಪ್ರಾತಃಸ್ಮರಣೀಯರಾಗಿದ್ದಾರೆ.

ಕನ್ನಡ ಸಾಹಿತ್ಯಕ್ಕೆ ಶಾಸ್ತ್ರಿಗಳು ಸಲ್ಲಿಸಿರುವ ಸೇವೆ ಅನುಪಮವಾದುದು. 'ಪ್ರಬುದ್ಧ ಕರ್ಣಾಟಕ' ಇಂದು ಗಳಿಸಿರುವ ವಿಖ್ಯಾತಿಯು ಶಾಸ್ತ್ರಿಗಳವರಿಗೆ ಸಲ್ಲತಕ್ಕುದ್ದಾಗಿದೆ. ಅದರ ಹುಟ್ಟು, ಬೆಳವಣಿಗೆ, ಪ್ರಸಾರಕ್ಕಾಗಿ ಶಾಸ್ತ್ರಿಗಳು ಕಾಯೇನವಾಚಾ ಮನಸಾ ದುಡಿದಿದ್ದಾರೆ.

ಶಾಸ್ತ್ರಿಗಳು ರಚಿಸಿರುವ "ಶ್ರೀ ರಾಮಕೃಷ್ಣ ಪರಮಹಂಸರ ಚರಿತ್ರೆ", "ಭಾಸಕವಿ", "ಸಂಸ್ಕೃತ ನಾಟಕ", "ವಚನ ಭಾರತ", "ಕಥಾಮೃತ", "ಬಂಕಿಮಚಂದ್ರ" ಮೊದಲಾದ ಒಂದೊಂದು ಕೃತಿಯೂ ಅವರ ಅಪಾರ ವಿದ್ವತ್ತಿಗೆ ನಿದರ್ಶನವಾಗಿ ನಿಂತಿವೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶ್ರೀ ಶಾಸ್ತ್ರಿಗಳ ಹೆಸರು ಚಿರಂತನವಾಗಿ ನಿಲ್ಲತಕ್ಕದ್ದಾಗಿದೆ. ಅವರ ಸಾಹಿತ್ಯಮಾರ್ಗ ಸರ್ವರಿಗೂ ಆದರ್ಶಪ್ರಾಯವಾಗಿದೆ, ಅನುಕರಣೀಯವಾಗಿದೆ.

ಕನ್ನಡ ಸಾಹಿತ್ಯ ಲೋಕದಿಂದ ಕಣ್ಮರೆಯಾಗಿರುವ ಶ್ರೀ ಶಾಸ್ತ್ರಿಗಳು ತಮ್ಮ ಮೇರುಕೃತಿಗಳಿಂದ ಅಮರರಾಗಿದ್ದಾರೆ.



# ಆಚಾರ್ಯ ದೇವೋಭವ

ಪ್ರಾಚೀನ ಋಷಿವಾಣಿಯೊಂದು ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ, ಅತಿಥಿದೇವೋಭವ ಎಂದು ಹೇಳಿದೆ. ಮಾನವನಿಗೆ ಮಾತಾಪಿತೃಗಳು ಜನ್ಮದಾತರಾಗಿ ಎಷ್ಟು ಪೂಜ್ಯರೋ ವಿದ್ಯಾದಾತವಾಗಿ ಆಚಾರ್ಯರೂ ಅಷ್ಟೇ ಪೂಜ್ಯರು. ಅಂತಹ ಪ್ರಾಚೀನ ಋಷಿವಾಣಿಗೆ ತಕ್ಕಂತಿದ್ದವರು ಡಾ. ಡಿ.ಎಲ್. ನರಸಿಂಹಾಚಾರ್ಯರು. ಆಚಾರ್ಯರಾಗಿ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳಿಗೆ ಅವರು ಮಾಡಿದ ಮಹತ್ಕಾರ್ಯಗಳು ಸಾರ್ವತ್ರಿಕವಾಗಿ ಸಾರ್ವಕಾಲಿಕವಾಗಿ ನಿಲ್ಲುವಂತಹವು.

ಡಾ. ಡಿ.ಎಲ್. ನರಸಿಂಹಾಚಾರ್ಯರು ಹುಟ್ಟು ಆಚಾರ್ಯರು. ಅವರು ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿ ಆಚಾರ್ಯಪಟ್ಟವನ್ನು ಕೈಕೊಂಡ ಮೇಲೆ ಕನ್ನಡದ ಪ್ರಾಚಾರ್ಯರಾಗಿ ಸಹಸ್ರಾರು ವಿದ್ಯಾರ್ಥಿಗಳಿಗೆ ನಿಷ್ಪಕ್ಷಪಾತವಾಗಿ ವಿದ್ಯಾದಾನ ಮಾಡಿದ್ದಾರೆ. ಅವರ ಪಾಂಡಿತ್ಯಪೂರ್ಣ ಬೋಧನಕ್ಕೆ ಮಾರು ಹೋದವರು ಅಸಂಖ್ಯಾತ ಮಂದಿ. ಇಡೀ ಜೀವಮಾನವನ್ನೇ ವಿದ್ಯಾದಾನಕ್ಕಾಗಿ ವಿನಿಯೋಗಿಸಿದ ಡಾ. ಡಿ.ಎಲ್. ನರಸಿಂಹಾಚಾರ್ಯರು ಕನ್ನಡಕ್ಕೆ ಆರಾಧ್ಯಮೂರ್ತಿಯಾಗಿದ್ದಾರೆ, ಆದರ್ಶಗುರುವಾಗಿದ್ದಾರೆ.

ದೊಡ್ಡಬೆಲೆ ನರಸಿಂಹಾಚಾರ್ಯರಿಗೆ ಕನ್ನಡ ಸಾಹಿತ್ಯದ ಪ್ರಕಟಿತ, ಅಪ್ರಕಟಿತ ಕೃತಿಗಳೆಲ್ಲಾ ಕರತಲಾಮಲಕವಾಗಿದ್ದುವು. ಯಾವುದೇ ಕಾವ್ಯವನ್ನಾಗಿ ಅವರು ಒಮ್ಮೆ ಓದಿದ ಮೇಲೆ ಆ ಕಾವ್ಯದ ಮುಖ್ಯಭಾಗಗಳೆಲ್ಲಾ ಅವರ ಸ್ಮೃತಿಪಟಲದಲ್ಲಿ ನೆಲಸಿ ಬಿಡುತ್ತಿದ್ದವು. ಹೀಗಾಗಿ ಕನ್ನಡ ಸಾಹಿತ್ಯದ ಪ್ರಾಚೀನ ಪ್ರಕಟಿತ ಅಪ್ರಕಟಿತ ಕೃತಿಗಳ ಬಗೆಗೆ ಅಧಿಕಾರವಾಣಿಯಿಂದ ಮಾತನಾಡುವ ಅರ್ಹತೆಯನ್ನು ಸಂಪಾದಿಸಿ ಕೊಂಡಿದ್ದರು. ಪ್ರಾಚೀನ ಕವಿವಾಣಿಯೇ ಪಡಿಮೂಡಿದಂತಿತ್ತು ಶ್ರೀಯುತರ ಅಧಿಕಾರವಾಣಿ. ಕಾವ್ಯಗಳನ್ನಷ್ಟೇ ಅಲ್ಲದೆ ಕರ್ಣಾಟಕಕ್ಕೆ ಸಂಬಂಧಿಸಿದ ಸಹಸ್ರಾರು ಶಾಸನಗಳನ್ನೆಲ್ಲಾ ಚೆನ್ನಾಗಿ ವ್ಯಾಸಂಗ ಮಾಡಿ ಅವುಗಳಲ್ಲಿನ ಮುಖ್ಯವಾದ ಭಾಗಗಳನ್ನೆಲ್ಲಾ ಗುರುತು ಮಾಡಿಕೊಂಡಿದ್ದರು. ಶಾಸನಗಳಲ್ಲಿನ ವಿಶಿಷ್ಟ ಶಬ್ದಗಳೆಲ್ಲಾ ಅವರ ಕೋಶದಲ್ಲಿ ಸೇರಿಹೋಗಿದ್ದವು.

ಡಾ. ಡಿ.ಎಲ್. ನರಸಿಂಹಾಚಾರ್ಯರು ಜೈನ, ವೀರಶೈವ, ವೈಷ್ಣವ ಸಾಹಿತ್ಯಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದರು. ಅವರು ಸಂಪಾದಿಸಿ ಪ್ರಕಟಿಸಿರುವ ಸಿದ್ಧರಾಮ ಚಾರಿತ್ರ, ಪಂಪರಾಮಾಯಣ ಸಂಗ್ರಹ, ಸುಕುಮಾರ ಚರಿತೆ, ವಡ್ಡಾರಾಧನೆ ಮೊದಲಾದ ಈ ಗ್ರಂಥಗಳಿಗೆ ಬರೆದಿರುವ ವಿಸ್ತಾರವೂ ಪರಿಪೂರ್ಣವೂ ಆದ ಪೀಠಿಕೆಗಳೇ ಇದಕ್ಕೆ ಸಾಕ್ಷಿಯಾಗಿವೆ.

ಕನ್ನಡ ಸಾಹಿತ್ಯದಲ್ಲಿ ಗ್ರಂಥಸಂಪಾದನೆಯ ವಿಷಯವಾಗಿ ಯಾವೊಂದು ಗ್ರಂಥವೂ ರಚಿತವಾಗಿರಲಿಲ್ಲ. ಪ್ರಾಚೀನ ಮತ್ತು ಆಧುನಿಕ ಗ್ರಂಥಸಂಪಾದನಾ ವಿಧಾನಗಳನ್ನು ಅಧಿಕೃತವಾಗಿ, ತುಂಬ ಸಮರ್ಥವಾಗಿ ಡಾ. ನರಸಿಂಹಾಚಾರ್ಯರು ತಮ್ಮ 'ಕನ್ನಡ ಗ್ರಂಥಸಂಪಾದನೆ'ಯಲ್ಲಿ ವಿವರಿಸಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಈ ಗ್ರಂಥ ಒಂದು ಅಪೂರ್ವವಾದ ಕೊಡುಗೆ.

ಯಾವುದೇ ಭಾಷೆಯ ವ್ಯಾಸಂಗಕ್ಕೆ ನಿಘಂಟು ಒಂದು ಅತ್ಯವಶ್ಯಕವಾದ, ಅಪರಿಹಾರ್ಯವಾದ ಅಂಗ. ಕನ್ನಡಕ್ಕೆ ಶಾಸ್ತ್ರೀಯವಾದ ಆಧುನಿಕವಾದ ಸಮಗ್ರ ನಿಘಂಟಿನ ಕೊರತೆ ಹಿಂದಿನಿಂದಲೂ ಇದ್ದ ಅಂಶ ನರಸಿಂಹಾಚಾರ್ಯರಿಗೆ

ಮನವರಿಕೆಯಾಗಿತ್ತು. ಈ ಕೊರತೆಯನ್ನು ತುಂಬುವುದಕ್ಕಾಗಿ ಶ್ರೀಯುತರು ತಮ್ಮ ಜೀವಮಾನದ ಅವಧಿಯನ್ನೆಲ್ಲಾ ಸವೆಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಚಾರಿತ್ರಿಕ ವಿವರಣೆಗಳಿಂದ ಕೂಡಿದ ಭಾಷಾಶಾಸ್ತ್ರ ನಿಯಮಗಳಿಗನುಗುಣವಾದ ಪ್ರಮಾಣಭೂತವಾದ ಸಮಗ್ರನಿಘಂಟಿಗಾಗಿ ಸುಮಾರು ನಾಲ್ಕುದಶಕಗಳ ಕಾಲ ಅಹರ್ನಿಶಿದುಡಿದಿದ್ದಾರೆ. ಡಾ. ಡಿ.ಎಲ್. ನರಸಿಂಹಾಚಾರ್ಯರು ಸಂಸ್ಕೃತ, ಕನ್ನಡ, ಇಂಗ್ಲಿಷ್, ತಮಿಳು, ತೆಲುಗು, ಪ್ರಾಕೃತ ಇದೇ ಮೊದಲಾದ ಭಾಷೆಗಳಲ್ಲಿ ಪ್ರಭುತ್ವ ಸಂಪಾದಿಸಿಕೊಂಡಿದ್ದರಿಂದ ಅವರು ನಿಘಂಟಿನ ಕೆಲಸಕ್ಕೆ ಹೇಳಿಮಾಡಿಸಿದಂತಿದ್ದರು. ಶ್ರೀಯುತರಲ್ಲಿ ಅಪಾರವಾದ ಭಾಷಾ ಪಾಂಡಿತ್ಯವಿದ್ದುದರಿಂದ ಯಾವೊಂದು ಶಬ್ದದ ಅರ್ಥವನ್ನಾಗಲಿ, ನಿಷ್ಪತ್ತಿಯನ್ನಾಗಲಿ ಸುಗಮವಾಗಿ, ಸುಲಭವಾಗಿ ಬಿಡಿಸಿಹೇಳುತ್ತಿದ್ದರು. ಮತ್ತೊಂದು ವೈಶಿಷ್ಟ್ಯವೆಂದರೆ ಅವರಿಗೆ ಸ್ಮರಣಶಕ್ತಿ ಅದ್ಭುತವಾಗಿತ್ತು. ಯಾವುದಾದರೂ ಒಂದು ಶಬ್ದದ ಪ್ರಯೋಗವನ್ನು ಪರಿಶೀಲಿಸುತ್ತಿದ್ದಾಗ ಆ ಶಬ್ದದ ಬೇರೆ ಬೇರೆ ಕಾವ್ಯಗಳಲ್ಲಿನ ಪ್ರಯೋಗಗಳು ಪುಂಖಾನುಪುಂಖವಾಗಿ ಅವರ ಸ್ಮರಣಶಕ್ತಿಯಿಂದ ತಮ್ಮಷ್ಟಕ್ಕೆ ತಾವೇ ಹೊರಬರುತ್ತಿದ್ದವು. ಇದರಿಂದ ಶಬ್ದಗಳ ಖಚಿತವಾದ ಅರ್ಥಗಳನ್ನು ನಿರ್ಣಯಿಸುವುದು ಅವರಿಗೆ ಸುಲಭಸಾಧ್ಯವಾಗಿತ್ತು. ಇದರ ಜೊತೆಗೆ ಹಲವಾರು ಭಾಷೆಗಳ ಪರಿಚಯ ವಿದ್ದುದರಿಂದ ಯಾವುದೇ ಶಬ್ದದ ನಿಷ್ಪತ್ತಿಯನ್ನಾಗಲಿ ಕಂಡುಹಿಡಿದು ಆ ಶಬ್ದದ ಸರಿಯಾದ ಅರ್ಥವನ್ನು ಗುರುತಿಸಿ ಬಿಡುತ್ತಿದ್ದರು. ಶ್ರೀಯುತರ 'ಶಬ್ದವಿಹಾರ'ವನ್ನು ಅವಲೋಕಿಸಿದವರಿಗೆ ಈ ಮೇಲಿನ ಅಂಶಗಳು ಸ್ಪಷ್ಟಪಡುತ್ತವೆ.

ಡಾ. ಡಿ.ಎಲ್. ನರಸಿಂಹಾಚಾರ್ಯರು ನಿಗರ್ವಿಗಳು, ಅತ್ಯಂತ ಸರಳ ಸ್ವಭಾವದವರು, ಶಿಷ್ಯವಾತ್ಸಲ್ಯ ಪ್ರಪೂರ್ಣರು, ಸಂಪನ್ನರು, ಸಂಭಾವಿತರು ಸುಸಂಸ್ಕೃತರು. ವಿದ್ಯಾ ದದಾತಿ ವಿನಯಂ । ವಿನಯಾದ್ಯಾತಿ ಪಾತ್ರತಾಂ । ಪಾತ್ರತ್ವಾದ್ಧನ ಮಾಪ್ನುವತಿ । ಧನಾದ್ಧರ್ಮಂ ತತಸ್ಸುಖಂ । ಎಂಬ ಆರ್ಯೋಕ್ತಿಯುಂಟಷ್ಟೆ. ಅದರಂತೆ ವಿದ್ಯೆಗೆ ವಿನಯವೇ ಭೂಷಣ. ವಿದ್ಯೆ ವಿನಯಗಳೆರಡೂ ಒಬ್ಬರಲ್ಲೇ ಸಮಾವೇಶಗೊಂಡಿರುವುದು ತುಂಬಾ ಅಪೂರ್ವ. ಆದರೆ ಡಾ.ಡಿ.ಎಲ್. ನರಸಿಂಹಾಚಾರ್ಯರು ಇದಕ್ಕೆ ಅಪವಾದದಂತಿದ್ದರು. ಶ್ರೀಯುತರ ಅಪಾರವಾದ ಪಾಂಡಿತ್ಯವನ್ನು ಮನಗಂಡ ನಾಡಿನ ಜನತೆ 'ವಿಖ್ಯಾತ ವಿದ್ವನ್ಮಣಿ', 'ಪ್ರಕಾಂಡ ಪಂಡಿತ', 'ಸಾರಸ್ವತ ದಿಗ್ಗಜ', 'ಕನ್ನಡದ ಪಾಣಿನಿ', 'ಜಂಗಮ ವಿಶ್ವಕೋಶ', 'ಶಬ್ದಬ್ರಹ್ಮ' –ಈ ರೀತಿ ಸಂಬೋಧಿಸಿ ಶ್ರೀಯುತರಿಗೆ ತನ್ನ ಗೌರವವನ್ನು ಸಲ್ಲಿಸಿದೆ. ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಸಂವರ್ಧನೆಗಾಗಿ ತಮ್ಮ ಜೀವಿತವನ್ನೇ ಮುಡಿಪಾಗಿಟ್ಟು ದುಡಿದ ಕರ್ಮಯೋಗಿ ಡಾ. ಡಿ.ಎಲ್. ನರಸಿಂಹಾಚಾರ್ಯರ ಹೆಸರು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶಾಶ್ವತವಾಗಿ ನಿಲ್ಲುವಂತಹುದಾಗಿದೆ. ಅವರ ಶಿಷ್ಯಕೋಟಿಯಲ್ಲಿ ಒಬ್ಬನಾಗಿದ್ದುದು ನನ್ನ ಭಾಗ್ಯವಿಶೇಷ. ಪ್ರಾತಃಸ್ಮರಣೀಯರಾದ ಆಚಾರ್ಯರಿಗೆ ನನ್ನ ಅನಂತ ಪ್ರಣಾಮಗಳು.



# ನಾನು ಕಂಡಂತೆ ಡಾ. ಆರ್.ಸಿ. ಹಿರೇಮಠ

**ಕ**ರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರೂ, ಕುಲಪತಿಗಳೂ ಆಗಿದ್ದ ಡಾ. ಆರ್.ಸಿ. ಹಿರೇಮಠ ಅವರು ಪ್ರಾತಃಸ್ಮರಣೀಯರಾಗಿದ್ದಾರೆ. ಭಾಷಾವಿಜ್ಞಾನ, ವಚನಪರಿಷ್ಕರಣ, ಪ್ರಾಚೀನ ಕಾವ್ಯಗಳ ಸಂಪಾದನೆ, ಸಂಶೋಧನ ಕ್ಷೇತ್ರಗಳಲ್ಲಿ ಚಿರಸ್ಮರಣೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಈ ಎಲ್ಲ ಕ್ಷೇತ್ರಗಳಿಗೂ ಸಂಬಂಧಿಸಿದ ಸುಮಾರು ಅರವತ್ತೈದು ಕೃತಿಗಳು ಪ್ರಕಟವಾಗಿವೆ. ಹಲವಾರು ಸಂಶೋಧನ ಲೇಖನಗಳನ್ನೂ ಬರೆದಿದ್ದಾರೆ. ಇವೆಲ್ಲ ಡಾ. ಆರ್.ಸಿ. ಅವರಿಗೆ ಶಾಶ್ವತವಾದ ಕೀರ್ತಿಯನ್ನು ತಂದುಕೊಟ್ಟಿವೆ. ಶ್ರೀಯುತರ ಆತ್ಮಚರಿತೆ 'ಉರಿ ಬರಲಿ ಸಿರಿ ಬರಲಿ' ಕೃತಿಯಲ್ಲಿ ಅವರ ಜೀವನದ ಒಂದು ನೈಜಚಿತ್ರಣವನ್ನು ಕಾಣಬಹುದಾಗಿದೆ. ಆರ್.ಸಿ. ಅವರ ಅಂತ್ಯದ ಕೃತಿ ಮಹಾಯಾತ್ರೆ ಅತ್ಯಂತ ಮಹತ್ವದ ಕೃತಿ. ಹಲವಾರು ವರ್ಷಗಳ ನಿರಂತರ ವ್ಯಾಸಂಗದ ಫಲಶ್ರುತಿ. ವೀರಶೈವ ಧರ್ಮದ ಕೈಗನ್ನಡಿ.

ಡಾ. ಆರ್.ಸಿ. ಅವರು ಹಲವಾರು ವಿದ್ವತ್ ಸಂಸ್ಥೆಗಳ ಸಕ್ರಿಯ ಸದಸ್ಯರಾಗಿ ಮಹತ್ತರವಾದ ಸೇವೆಯನ್ನು ಸಲ್ಲಿಸಿದ್ದಾರೆ. ಅಂತಹವುಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸಂಪಾದಕ ಸಮಿತಿಯೂ ಒಂದು. ನಾನು ಕನ್ನಡ ನಿಘಂಟಿನ ಸಂಪಾದಕ, ಉಪಸಂಪಾದಕ, ಪ್ರಧಾನ ಸಂಪಾದಕನಾಗಿದ್ದಷ್ಟು ಕಾಲವೂ ಡಾ. ಆರ್.ಸಿ. ಅವರು ಈ ಸಮಿತಿಯ ಸದಸ್ಯರಾಗಿದ್ದುಕೊಂಡು ಅತ್ಯಂತ ಮೌಲಿಕ ಕೊಡುಗೆಯನ್ನು ನೀಡಿದ್ದಾರೆ. ಈ ಅವಧಿಯಲ್ಲಿ ನನ್ನ ಅವರ ಪರಿಚಯ ಗಾಢವಾಯಿತು. ಕನ್ನಡ ನಿಘಂಟಿನ ಸಂಪಾದಕ ಸಮಿತಿಯ ಸಭೆಗಳಿಗೆ ಸಿದ್ಧಪಡಿಸಿ ಕಳುಹಿಸುತ್ತಿದ್ದ ಹಸ್ತಪ್ರತಿ, ಅದರ ಅಚ್ಚುಕಟ್ಟು ಆರ್.ಸಿ. ಅವರಿಗೆ ತುಂಬ ಮೆಚ್ಚುಗೆಯಾಗಿದ್ದುವು. ಸಮಿತಿಯ ಸಭೆಗಳಲ್ಲಿ ಸದಸ್ಯರ ಪ್ರಶ್ನೆಗಳಿಗೆ ಸಂಪಾದಕರು ನೀಡುತ್ತಿದ್ದ ಉತ್ತರ ತುಂಬಾ ತೃಪ್ತಿಯನ್ನುಂಟುಮಾಡಿದ್ದುವು. ಶ್ರೀಯುತರು ಭಾಷಾಶಾಸ್ತ್ರ ದೃಷ್ಟಿಯಿಂದ ಅನೇಕ ಉತ್ತಮ ಸಲಹೆಗಳನ್ನು ನೀಡುತ್ತಿದ್ದರು. ವೀರಶೈವ ಪಾರಿಭಾಷಿಕ ಶಬ್ದಗಳಿಗೆ ಸಮಂಜಸವಾದ ಅರ್ಥವನ್ನು ಸೂಚಿಸುತ್ತಿದ್ದರು. ಹೀಗಾಗಿ ನನ್ನ ಅವರ ಸಂಬಂಧ ಮತ್ತಷ್ಟು ಗಾಢಗೊಂಡಿತು.

ನಾನು ನಿಘಂಟು ಕಚೇರಿ ಸೇರಿದಾಗಿನಿಂದ ನನ್ನ ಸಂಬಳದ ವಿಷಯದಲ್ಲಿ ಪರಿಷತ್ತಿಗೂ ಸರ್ಕಾರಕ್ಕೂ ವ್ಯವಹಾರ ನಡೆಯುತ್ತಲೇ ಇತ್ತು. ಬಹಳ ಕಾಲದವರೆಗೆ ಇದು ಇತ್ಯರ್ಥವಾಗಲೇ ಇಲ್ಲ. ಒಮ್ಮೆ ಈ ವಿಷಯ ಸಂಪಾದಕ ಸಮಿತಿಯ ಸಭೆಯಲ್ಲಿ ಚರ್ಚೆಗೆ ಬಂದಾಗ ನಾನು ನನ್ನನ್ನು ನನ್ನ ಮಾತೃಸಂಸ್ಥೆಗೆ ಕಳುಹಿಸಿಕೊಡುವಂತೆ ಅಧ್ಯಕ್ಷರಾಗಿದ್ದ ಪ್ರೊ. ತೀ.ನಂ. ಶ್ರೀಕಂಠಯ್ಯನವರಲ್ಲಿ ವಿನಂತಿಸಿಕೊಂಡೆ. ಆಗ ಸಭೆಯಲ್ಲಿದ್ದ ಡಾ. ಆರ್.ಸಿ. ಹಿರೇಮಠ ಅವರು "ಬಸವಾರಾಧ್ಯರ ಸಂಬಳವನ್ನು ಸರಿಪಡಿಸಲಾಗದಿದ್ದರೆ ಅವರನ್ನು ನಾನು ನಮ್ಮ ವಿಶ್ವವಿದ್ಯಾಲಯಕ್ಕೆ ಕರೆದುಕೊಂಡು ಹೋಗುತ್ತೇನೆ ಕಳುಹಿಸಿಕೊಡಿ" ಎಂದರು. ಆಗ ಪ್ರೊ. ಶ್ರೀಕಂಠಯ್ಯನವರು "ಬಸವಾರಾಧ್ಯರನ್ನು ಕಳುಹಿಸಿಕೊಟ್ಟರೆ ನಿಘಂಟಿನ ಸಂಪಾದಕರ ಕೆಲಸ ಮಾಡುವವರು ಯಾರು? ಇದು ಖಂಡಿತ ಸಾಧ್ಯವಿಲ್ಲ. ಅವರ ಸಂಬಳ ಸಾರಿಗೆಗಳನ್ನು ಇಲ್ಲಿಯೇ ಸರಿಪಡಿಸೋಣ" ಎಂದು ಸ್ಪಷ್ಟವಾಗಿ ತಿಳಿಸಿಬಿಟ್ಟರು. ಅಲ್ಲಿಗೆ ಆ ಪ್ರಕರಣ ನಿಂತಿತು.

ಡಾ. ಆರ್.ಸಿ. ಹಿರೇಮಠ ಅವರು ನಿಘಂಟು ಸಂಪಾದಕ ಸಮಿತಿಯ ಸಭೆಗೆ ಬಂದಿದ್ದಾಗ ಒಂದು ದಿನ ನಾನು ಹೊಸದಾಗಿ ಕಟ್ಟಿಸಿದ್ದ ಮನೆಗೆ ಬರುವಂತೆ ಆಹ್ವಾನಿಸಿ ಜೊತೆಯಲ್ಲೇ ಕರೆದೊಯ್ದೆ. ಅವರ ಜೊತೆಯಲ್ಲಿ ಅವರ ಶ್ರೀಮತಿಯವರೂ ಬಂದಿದ್ದರು. ಮನೆಯನ್ನೆಲ್ಲಾ ಸಂಪೂರ್ಣವಾಗಿ ವೀಕ್ಷಿಸಿದ ಆರ್.ಸಿ. ಅವರು ಅದರ ರಚನೆಯನ್ನೂ, ನಿರ್ಮಾಣವನ್ನೂ ನಕ್ಷೆಯನ್ನೂ ಬಹಳವಾಗಿ ಮೆಚ್ಚಿಕೊಂಡು ತಾವು ಕಟ್ಟಿಸಲಿರುವ ಮನೆಗೆ ನಮ್ಮ ಮನೆಯ ಮಾದರಿಯ ನಕ್ಷೆಯನ್ನೇ ಸಿದ್ಧಪಡಿಸಿಕೊಡುವಂತೆ ಕೇಳಿಕೊಂಡರು. ಅದರಂತೆ ನಕ್ಷೆಯನ್ನು ಸಿದ್ಧಪಡಿಸಿಕೊಟ್ಟೆ. ಮನೆಯನ್ನೂ ಅದೇ ಪ್ರಕಾರದಲ್ಲಿ ನಿರ್ಮಾಣ ಮಾಡಿದರು.

ಡಾ. ಆರ್.ಸಿ. ಅವರು ಶಿವಾಧೀನರಾಗುವ ಒಂದೆರಡು ತಿಂಗಳು ಮೊದಲು ನನಗೆ ಒಂದು ಪತ್ರವನ್ನು ಬರೆದರು. ಅದು ಅವರ ಸಾಂಸಾರಿಕ ಸಮಸ್ಯೆಗೆ ಸಂಬಂಧಿಸಿದುದಾಗಿತ್ತು. ಈ ಸಂಬಂಧವಾಗಿ ಹಲವರಿಗೆ ಪತ್ರ ಬರೆದಿದ್ದರೂ ಯಾರಿಂದಲೂ ಯಾವ ಉತ್ತರವೂ ಬಂದಿರಲಿಲ್ಲವಂತೆ. ನಾನು ಅವರ ಪತ್ರದ ಪ್ರಕಾರ ಈ ವ್ಯವಹಾರಕ್ಕೆ ಸಂಬಂಧಿಸಿದವರನ್ನೆಲ್ಲ ಸಂಪರ್ಕಿಸಿ ಯಾವುದಾದರೂ ಒಂದು ತೀರ್ಮಾನಕ್ಕೆ ಬರುವ ವ್ಯವಸ್ಥೆ ಮಾಡಿದೆ. ಯಾವುದೋ ಕಾರ್ಯಕ್ಕೆ ಬಂದಿದ್ದ ಡಾ. ಆರ್.ಸಿ. ಅವರ ಜೊತೆ ಓಡಾಡಿ ಪರಸ್ಪರ ಭೇಟಿ ಮಾಡಿಸಿ ಕಾರ್ಯ ಸುಗಮವಾಗುವಂತೆ ಮಾಡಿದೆ. ಆ ಕಾರ್ಯಭಾರದ ಸಂಪೂರ್ಣ ಹೊಣೆಗಾರಿಕೆಯನ್ನು ನನಗೆ ವಹಿಸಿ ಧಾರವಾಡಕ್ಕೆ ಹಿಂತಿರುಗಿದರು. ಆದರೆ ಸ್ವಲ್ಪ ದಿನಗಳಲ್ಲೇ ಅವರ ಆರೋಗ್ಯ ಕೆಟ್ಟು ಆಸ್ಪತ್ರೆ ಸೇರಿದವರು ಮತ್ತೆ ಮರಳಿ ಬರಲೇ ಇಲ್ಲ. 'ಕಾಲಪುರುಷರಿಗೆ ಗುಣಮಣಮಿಲ್ಲಂ ಗಡ' ಎಂಬಂತೆ ಒಂದು ಪ್ರಬುದ್ಧಜೀವ ಇದ್ದಕ್ಕಿದ್ದಂತೆಯೇ ಕಣ್ಮರೆಯಾದುದು ವಿಧಿವಿಲಾಸವೇ ಸರಿ.

ನನ್ನ ಮತ್ತು ಆರ್.ಸಿ. ಹಿರೇಮಠ ನಡುವೆ ನಡೆದ ಎಷ್ಟೋ ಪ್ರಕರಣಗಳಲ್ಲಿ ಒಂದೆರಡನ್ನು ದಾಖಲಿಸಿ ಅವರಿಗೆ ನನ್ನ ಅನಂತ ಪ್ರಣಾಮಗಳನ್ನು ಸಲ್ಲಿಸುತ್ತೇನೆ.



# ಕ.ವೆಂ. ರಾಘವಾಚಾರ್

೧೯೦೪-೧೯೭೭. ಪ್ರಸಿದ್ಧ ವಿದ್ವಾಂಸರು. ಗ್ರೀಕ್‌ಭಾಷೆಯಲ್ಲಿ ಪರಿಣತರಾಗಿದ್ದ ಇವರು ಆ ಭಾಷೆಯ ಅನೇಕ ನಾಟಕಗಳನ್ನು ಕನ್ನಡಿಸಿದ್ದಾರೆ. ಇವರು ತುಮಕೂರು ಜಿಲ್ಲೆ ಕಡಬದವರು, ಹುಟ್ಟಿದ್ದು ತಾಯಿಯ ತವರಾದ ಬೇಲೂರಿನಲ್ಲಿ. ಇವರದು ಶ್ರೀವೈಷ್ಣವ ಮನೆತನ. ಇವರ ತಾತ ಶ್ರೀನಿವಾಸಭಟ್ಟರು ಆಚಾರನಿಷ್ಠರೂ ಶಾಸ್ತ್ರವೇತ್ತರೂ ಘನಪಂಡಿತರೂ ಆಗಿದ್ದರು. ತಂದೆ ವೆಂಕಟಾಚಾರ್ಯರು, ತಾಯಿ ತಿರುಮಲಮ್ಮ, ಅಣ್ಣ ರಾಮಸ್ವಾಮಿ, ಜೊತೆಗೆ ಒಬ್ಬ ತಂಗಿ. ತಂದೆ ವೆಂಕಟಾಚಾರ್ಯರು ತುಮಕೂರಿನಲ್ಲಿ ವಕೀಲರಾಗಿದ್ದರು. ಚಿಕ್ಕಂದಿನಲ್ಲಿಯೇ ತಾಯಿಯನ್ನೂ ಅಣ್ಣನನ್ನೂ ಕಳೆದುಕೊಂಡ ರಾಘವಾಚಾರ್ಯರು ಚಿಕ್ಕಪ್ಪ ಶ್ರೀನಿವಾಸಯ್ಯಂಗಾರರ ಪೋಷಣೆಯಲ್ಲಿ ಬೆಳೆದು, ಅಭಿವೃದ್ಧಿಗೆ ಬಂದರು.

ರಾಘವಾಚಾರ್ಯರ ಪ್ರಾಥಮಿಕ ವ್ಯಾಸಂಗ ತುಮಕೂರಿನಲ್ಲಿ ಎಂ.ವಿ. ಸ್ಕೂಲಿನಲ್ಲಿಯೂ ಹೈಸ್ಕೂಲಿನ ವ್ಯಾಸಂಗ ಕೊಲಿಜಿಯೇಟ್ ಹೈಸ್ಕೂಲಿನಲ್ಲಿಯೂ ನಡೆಯಿತು. ಅಲ್ಲಿಯ ಅಧ್ಯಾಪಕರಾದ ಕೃಷ್ಣಸ್ವಾಮಿ ಅಯ್ಯರ್ ಮೊದಲಾದವರ ಮಾರ್ಗದರ್ಶನ ರಾಘವಾಚಾರ್ಯರ ಮೇಲೆ ತುಂಬ ಪ್ರಭಾವಬೀರಿತು. ಆ ಕಾಲಕ್ಕೆ ಅಲ್ಲಿ ಹಬ್ಬಿದ ಪ್ಲೇಗಿನಿಂದಾಗಿ ಬೆಂಗಳೂರಿನ ಕೋಟೆ ವಿ.ವಿ. ಸ್ಕೂಲಿನಲ್ಲಿ ವ್ಯಾಸಂಗವನ್ನು ಮುಂದುವರಿಸಿದರು. ಅಲ್ಲಿ ಪತ್ತೇದಾರಿ ಕಾದಂಬರಿಕಾರರಾದ ವಿದ್ವಾನ್ ಬಾಲಸರಸ್ವತಿಗಳ ಶಿಷ್ಯರಾಗುವ ಯೋಗ ಒದಗಿತು; ಅವರ ಪ್ರಭಾವಕ್ಕೂ ಒಳಗಾದರು. ಈ ಮಧ್ಯೆ ತಮ್ಮ ೧೬ನೆಯ ವಯಸ್ಸಿನಲ್ಲಿ ತಂದೆಯನ್ನೂ ಕಳೆದುಕೊಂಡ ಇವರು ಬೆಂಗಳೂರಿನಲ್ಲಿ ಚಿಕ್ಕಪ್ಪನವರ ಆಶ್ರಯದಲ್ಲಿದ್ದುಕೊಂಡು ವೆಸ್ಲಿಯನ್ ಹೈಸ್ಕೂಲಿಗೆ ಸೇರಿದರು. ಅಲ್ಲಿ ಉಪಾಧ್ಯಾಯರಾಗಿದ್ದ ಎಸ್. ವೆಂಕಟರಾಮನ್ ಅವರ ವ್ಯಕ್ತಿತ್ವದಿಂದ ಪ್ರಭಾವಿತರಾದರು. ಮುಂದೆ ಬೆಂಗಳೂರಿನ ಸೆಂಟ್ರಲ್ ಕಾಲೇಜನ್ನು ಸೇರಿ (೧೯೨೪-೧೯೨೮) ಗಣಿತಶಾಸ್ತ್ರ ಮತ್ತು ಭೌತಶಾಸ್ತ್ರಗಳನ್ನು ವ್ಯಾಸಂಗಮಾಡಿ ಬಿ.ಎ. ಪದವಿ ಗಳಿಸಿದರು. ಆ ಕಾಲೇಜಿನ ಅಧ್ಯಾಪಕ ವರ್ಗದಲ್ಲಿದ್ದ ಮೆಟ್ಕಾಫ್, ವೆಂಕಟರಾವ್ ತೆಲಂಗ್, ಬಿ.ಎಸ್. ಮಾಧವರಾವ್, ಸಿ.ಎನ್. ಶ್ರೀನಿವಾಸಯ್ಯಂಗಾರ್, ಬಿ. ವೆಂಕಟೇಶಾಚಾರ್ಯ, ಟಿ.ಎಸ್. ವೆಂಕಣ್ಣಯ್ಯ, ಎ.ಆರ್. ಕೃಷ್ಣಶಾಸ್ತ್ರೀ ಮುಂತಾದವರ ಮಾರ್ಗದರ್ಶನದಲ್ಲಿ ತಮ್ಮ ಬದುಕನ್ನು ರೂಪಿಸಿಕೊಂಡರು. ಅನಂತರ ಮೈಸೂರಿನ ಮಹಾರಾಜ ಕಾಲೇಜಿಗೆ ಬಂದು ೧೯೨೮ರಲ್ಲಿ ಕನ್ನಡ ಎಂ.ಎ. ತರಗತಿಗೆ ಸೇರಿದರು. ಅಲ್ಲಿ ಇಂಗ್ಲಿಷಿನ ಪ್ರಾಧ್ಯಾಪಕರೂ ಕನ್ನಡದ ಗೌರವ ಪ್ರಾಧ್ಯಾಪಕರೂ ಆಗಿದ್ದ ಬಿ.ಎಂ. ಶ್ರೀಕಂಠಯ್ಯನವರ ಪ್ರಭಾವಕ್ಕೆ ಒಳಗಾದರು. ಜೊತೆಗೆ ಟಿ.ಎನ್. ಸುಬ್ಬರಾಯಶಾಸ್ತ್ರಿಗಳು, ಡಿ. ಶ್ರೀನಿವಾಸಾರ್ಯರು, ಸಿ.ಆರ್. ನರಸಿಂಹಶಾಸ್ತ್ರಿಗಳು, ರಾಳ್ಳಪಲ್ಲಿ ಅನಂತಕೃಷ್ಣಶರ್ಮರು ಮೊದಲಾದ ಗುರುವರ್ಯರ ಮಾರ್ಗದರ್ಶನವೂ ಇವರಿಗೆ ಲಭಿಸಿತು. ೧೯೩೧ರಲ್ಲಿ ಎಂ.ಎ ಪದವಿಯನ್ನು ಪಡೆದರು. ತೀ.ನಂ. ಶ್ರೀಕಂಠಯ್ಯ ಮತ್ತು ಜಿ.ಪಿ. ರಾಜರತ್ನಂ ಅವರುಗಳು ಇವರ ಸಹಪಾಠಿಗಳಾಗಿದ್ದರು. ಎಂ.ಎ. ಪದವಿ ಪಡೆದ ಕೂಡಲೇ ಕೆಲಸ ಸಿಕ್ಕದಿದ್ದುದರಿಂದ ರಾಘವಾಚಾರ್ಯರು ಶಿಕ್ಷಣಕಾಲೇಜಿಗೆ ಸೇರಿ ೧೯೩೨ರಲ್ಲಿ ಬಿ.ಟಿ. ಪದವಿಯನ್ನು ಪಡೆದರು. ಆಗಲೂ ಕೆಲಸಸಿಕ್ಕದೆ ಬಿಡುವಿನ ವೇಳೆಯನ್ನು ಸದುಪಯೋಗಪಡಿಸಿಕೊಳ್ಳಲು ಬೆಂಗಳೂರಿಗೆ ಹೋಗಿ ಪಂಡಿತ ಪಿ.ಎಂ. ಸೋಮಸುಂದರಂ ಅವರಿಂದ ತಮಿಳನ್ನೂ ದಂಡಿನ ಯುನೈಟೆಡ್ ಥಿಯಾಲಾಜಿಕಲ್

ಕಾಲೇಜಿನಲ್ಲಿ ಗ್ರೀಕ್ ಪಂಡಿತರಾಗಿದ್ದ ಎಚ್.ಕೆ. ಮೌಲ್ಟನ್ ಅವರಿಂದ ಗ್ರೀಕನ್ನೂ ಅಭ್ಯಾಸ ಮಾಡಿದ ಇವರು, ಅನಂತರ ಆ ಭಾಷೆ ಮತ್ತು ಸಾಹಿತ್ಯಗಳಲ್ಲಿ ಒಳ್ಳೆಯ ಪಾಂಡಿತ್ಯವನ್ನು ಸಂಪಾದಿಸಿಕೊಂಡರು.

ಬೆಂಗಳೂರು ಇಂಟರ್ ಮೀಡಿಯೇಟ್ ಕಾಲೇಜು ಮತ್ತು ಜಿಲ್ಲಾ ನಾರ್ಮಲ್‌ಸ್ಕೂಲಿನಲ್ಲಿ ಸ್ವಲ್ಪಕಾಲ ಅಧ್ಯಾಪಕರಾಗಿ ಕೆಲಸ ಮಾಡಿದ ರಾಘವಾಚಾರ್ಯರು ಅನಂತರ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟಿನ ಸಾಹಿತ್ಯ ಸಹಾಯಕರಾಗಿ ನೇಮಕಗೊಂಡರು. ನಿಘಂಟಿನ ಪ್ರಧಾನ ಸಂಪಾದಕರಾಗಿದ್ದ ಬೆಳ್ಳಾವೆ ವೆಂಕಟನಾರಾಣಪ್ಪನವರು ಆಚಾರ್ಯರ ಮನಸ್ಸಿನ ಮೇಲೆ ಗಾಢವಾದ ಪ್ರಭಾವವನ್ನು ಬೀರಿದರು. ರಾಘವಾಚಾರ್ಯರು ವೆಂಕಟನಾರಣಪ್ಪನವರಿಗೆ ಬಲಗೈಯಂತಿದ್ದು ನಿಘಂಟಿನ ಕಾರ್ಯಭಾರವನ್ನು ಅತ್ಯಂತ ಆಸ್ಥೆಯಿಂದ ನಿರ್ವಹಿಸುತ್ತಿದ್ದರು. ಸುಮಾರು ೯ ವರ್ಷಗಳ ಕಾಲ ನಿಘಂಟಿನ ಕೆಲಸ ಮಾಡಿದ ಮೇಲೆ ಮಹಾರಾಜ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ನೇಮಕಗೊಂಡರು. ಈ ಮಧ್ಯೆ ೧೯೪೩ರಲ್ಲಿ ವೆಂಕಟನಾರಣಪ್ಪನವರು ತೀರಿಕೊಂಡ ಮೇಲೆ ಎಂ.ಆರ್. ಶ್ರೀನಿವಾಸಮೂರ್ತಿ ಅವರು ನಿಘಂಟಿನ ಪ್ರಧಾನ ಸಂಪಾದಕರಾದರು. ಆಗ ಮತ್ತೆ ನಿಘಂಟು ಕಚೇರಿಗೆ ಹೋದ ರಾಘವಾಚಾರ್ಯರು ಆ ಕಾರ್ಯವನ್ನು ಮುಗಿಸಿ ೧೯೪೬ರಲ್ಲಿ ತಮ್ಮ ಅಧ್ಯಾಪಕ ಹುದ್ದೆಗೆ ಮರಳಿದರು. ರಾಘವಾಚಾರ್ಯರು ಮೈಸೂರಿನ ಯುವರಾಜ, ಮಹಾರಾಜ ಕಾಲೇಜುಗಳಲ್ಲಿ ಅಧ್ಯಾಪಕರಾಗಿ ಸಹಸ್ರಾರುವಿದ್ಯಾರ್ಥಿಗಳಿಗೆ ವಿದ್ಯಾದಾನಮಾಡಿದ್ದಾರೆ. ಮಹಾರಾಜ ಕಾಲೇಜಿನಲ್ಲಿ ಭಾಷಾಶಾಸ್ತ್ರವನ್ನು ಬೋಧಿಸುತ್ತಿದ್ದ ಆಚಾರ್ಯರು ಆ ವಿಭಾಗದ ಉಪಪ್ರಾಧ್ಯಾಪಕರಾಗಿಯೂ ಕಾರ್ಯನಿರ್ವಹಿಸಿ, ೧೯೫೫ರಲ್ಲಿ ನಿವೃತ್ತರಾದರು. ಅನಂತರ ದೆಹಲಿ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಮೊಟ್ಟಮೊದಲ ಅಧ್ಯಾಪಕರಾಗಿ ನೇಮಕಗೊಂಡ ಆಚಾರ್ಯರು ಸುಮಾರು ಹತ್ತು ವರ್ಷಗಳ ಕಾಲ ಆ ಹುದ್ದೆಯಲ್ಲಿದ್ದರು (೧೯೬೯).

ಕನ್ನಡ-ಇಂಗ್ಲಿಷ್ ನಿಘಂಟುಗಳಿಗೆ ರಾಘವಾಚಾರ್ಯರು ಸಲ್ಲಿಸಿರುವ ಸೇವೆ ಸ್ಮರಣೀಯವಾದುದು. ಹಲವಾರು ಭಾಷೆಗಳಲ್ಲಿ ಪ್ರಭುತ್ವವನ್ನು ಪಡೆದಿದ್ದ ಆಚಾರ್ಯರಿಂದ ನಿಘಂಟಿನ ಕಾರ್ಯಕ್ಕೆ ಬಹಳಷ್ಟು ಪ್ರಯೋಜನವಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟಿಗೆ ಮೊದಲಿನಿಂದ ಕಡೆಯತನಕ ನಿರಂತರವಾಗಿ ದುಡಿದು, ಅಸಂಖ್ಯಾತ ಸಾರವತ್ತಾದ ಶಬ್ದಗಳನ್ನು ಸೃಷ್ಟಿಸಿ ಶಬ್ದಬ್ರಹ್ಮರೆನಿಸಿಕೊಂಡರು.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿಗೆ ಅದರ ಪ್ರಾರಂಭಾವಸ್ಥೆಯಿಂದ ದುಡಿದವರಲ್ಲಿ ರಾಘವಾಚಾರ್ಯರೂ ಒಬ್ಬರು. ಇವರು ೧೯೪೩ ರಿಂದ ೧೯೬೯ ರವರೆಗೆ ಸಂಪಾದಕ ಸಮಿತಿಯ ಸದಸ್ಯರಾಗಿದ್ದರು. ಆಮೇಲೆ ೧೯೬೯ ರಿಂದ ೧೯೭೭ರವರೆಗೆ ಸಂಪಾದಕ ಸಮಿತಿಯ ಉಪಾಧ್ಯಕ್ಷರಾಗಿ, ತರುವಾಯ ಆ ಸಮಿತಿಯ ಅಧ್ಯಕ್ಷರಾಗಿಯೂ ಕಾರ್ಯನಿರ್ವಹಿಸಿದರು. ಇಂಗ್ಲಿಷ್, ಸಂಸ್ಕೃತ, ತಮಿಳು ಭಾಷೆಗಳಲ್ಲಿನ ಇವರಿಗಿದ್ದ ಆಳವಾದ ಪಾಂಡಿತ್ಯ ಕನ್ನಡ ನಿಘಂಟಿನ ಕಾರ್ಯಕ್ಕೆ ವಿಶೇಷವಾದ ಪ್ರಯೋಜನವಾಯಿತು.

ಆಚಾರ್ಯರಿಗೆ ಬಾಲ್ಯದಿಂದಲೂ ಸೇವಾಕಾರ್ಯದಲ್ಲಿ ಅಮಿತವಾದ ಉತ್ಸಾಹ ಮತ್ತು ಶ್ರದ್ಧೆ. ೧೯೨೧ರಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಖಾದಿಧಾರಣೆ ಮಾಡಿದರು. ಅಂದಿನಿಂದ ಅವರ ಬಾಳಿನುದ್ದಕ್ಕೂ ಖಾದಿಯೇ ಇವರ ಖಾಸಗಿ ಮತ್ತು ಕಚೇರಿ ಉಡುಪಾಯಿತು. ಆ ಕಾಲಕ್ಕೇ ಇವರು ಕೋಹಿನೂರು ಸಂಘ ಎಂಬ ವಿದ್ಯಾರ್ಥಿ ಸಂಸ್ಥೆಯನ್ನು ಕಟ್ಟಿ ಎಂಟುವರ್ಷಗಳು ಅದರ ಕಾರ್ಯಕಲಾಪಗಳನ್ನು ನಿರ್ವಹಿಸಿದರು. ಹಿಂದೂಸ್ತಾನಿ ಸೇವಾದಳದ ಬೆಂಗಳೂರು ಶಾಖೆಯ ಸ್ವಯಂಸೇವಕ ತಂಡದ ಸದಸ್ಯರಾಗಿ ೧೯೨೪ರ ಡಿಸೆಂಬರ್ ತಿಂಗಳಲ್ಲಿ ಬೆಳಗಾವಿಯಲ್ಲಿ ನಡೆದ ಅಖಿಲಭಾರತ ಕಾಂಗ್ರೆಸ್‌ಅಧಿವೇಶನದಲ್ಲಿ ಸೇವೆ ಸಲ್ಲಿಸಿದರು. ಹಾಗೆಯೇ ೧೯೨೭ರ ಡಿಸೆಂಬರ್ ತಿಂಗಳಲ್ಲಿ ಮದರಾಸಿನಲ್ಲಿ ನಡೆದ ಕಾಂಗ್ರೆಸ್‌ಅಧಿವೇಶನದಲ್ಲೂ ಸ್ವಯಂಸೇವಕರಾಗಿ ಭಾಗವಹಿಸಿದರು. ಇದೇ ವರ್ಷದಲ್ಲಿ ಗಾಂಧೀಜಿ ಅವರು ನಂದಿಬೆಟ್ಟಕ್ಕೆ ಬಂದಿದ್ದಾಗ ಅವರ ಸಾನ್ನಿಧ್ಯಸೇವೆಯನ್ನೂ ಮಾಡಿದ್ದರು. ಅಲ್ಲದೆ ರಾಜಾಜಿ, ಮಹದೇವ ದೇಸಾಯಿ,

ಮದನಮೋಹನ ಮಾಲವೀಯ, ಮೋತಿಲಾಲ್ ನೆಹರು, ಕಸ್ತೂರಬಾ ಇವರೇ ಮೊದಲಾದ ರಾಷ್ಟ್ರನಾಯಕರ ಪರಿಚಯ ಸಾಹಚರ್ಯಗಳನ್ನೂ ಪಡೆದರು. ಕನ್ನಡ ಸಾಹಿತ್ಯ ಪರಿಷತ್ತಿನ ಕೆಲಸ ಕಾರ್ಯಗಳಲ್ಲೂ ಆಚಾರ್ಯರು ಸಹಕರಿಸಿದ್ದಾರೆ. ಪರಿಷತ್ತಿನ ಕಾರ್ಯದರ್ಶಿಗಳಾಗಿ (೧೯೪೨-೪೩; ೧೯೪೪-೪೫; ೧೯೪೬-೪೭). ಕನ್ನಡ ನುಡಿಯ ಸಂಪಾದಕರಾಗಿ ಇವರು ಸೇವೆ ಸಲ್ಲಿಸಿದರಲ್ಲದೆ ಕನ್ನಡ ಬಾವುಟ, ಬಿ.ಎಂ.ಶ್ರೀ ಅವರಿಗೆ ಅರ್ಪಿಸಿದ ಅಭಿನಂದನಗ್ರಂಥ ಸಂಭಾವನೆ ಈ ಕೃತಿಗಳ ಪ್ರಕಟಣೆಯಲ್ಲೂ ನೆರವಾಗಿದ್ದಾರೆ.

ರಾಘವಾಚಾರ್ಯರ ಸಾಹಿತ್ಯಸೇವೆ ಬಹುಮುಖವಾದುದು. ಗ್ರೀಕ್ ಮೂಲದಿಂದಲೇ ಕನ್ನಡಕ್ಕೆ ಹಲವಾರು ನಾಟಕಗಳನ್ನು ತಂದುಕೊಟ್ಟದ್ದು ಇವರ ವಿಶಿಷ್ಟವಾದ ಕೊಡುಗೆ. ಇವರು ಭಾಷಾಂತರಿಸಿದ ಸಾಫೊಕ್ಲೀಸನ ಅಂತಿಗೊನೆ ೧೯೫೬ರಲ್ಲಿ ಪ್ರಕಟವಾಯಿತು. ಅನಂತರ ಇವರು ಭಾಷಾಂತರಿಸಿದ ಆಗಮೆಮ್ನನ್, ಒಯ್ದಿಪೌಸ್ ದೊರೆ, ಕಪ್ಪೆಗಳು ಎಂಬ ನಾಟಕಗಳು 'ಮೂರು ಗ್ರೀಕ್‌ನಾಟಕಗಳು' ಎಂಬ ಹೆಸರಿನಿಂದ ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಪ್ರಕಟವಾದವು. ಜನ್ನನ ಯಶೋಧರ ಚರಿತೆಯ ಒಂದು ಹೊಸಪರಿಷ್ಕರಣವನ್ನು ಮೈಸೂರು ವಿಶ್ವವಿದ್ಯಾನಿಲಯದ ಮೂಲಕ ೧೯೪೧ರಲ್ಲಿ ಹೊರತಂದರು. ಇವರು ಸಿದ್ಧಪಡಿಸಿರುವ ಅರಿಸ್ಟಾಟಲ್‌ನ ಕಾವ್ಯಮೀಮಾಂಸೆ ಇನ್ನೂ ಅಚ್ಚಾಗದೆ ಉಳಿದುಕೊಂಡಿದೆ. ಆಚಾರ್ಯರು ಸಾಹಿತ್ಯ, ಸಂಸ್ಕೃತಿ, ಭಾಷಾಶಾಸ್ತ್ರ ಇವೇ ಮೊದಲಾದ ವಿಷಯಗಳನ್ನು ಕುರಿತು ಹಲವಾರು ಸಂಶೋಧನಾತ್ಮಕ ಲೇಖನಗಳನ್ನು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಬರೆದಿದ್ದಾರೆ. ಈ ಲೇಖನಗಳೆಲ್ಲ 'ನಂದಾ ನೆನಪು' (೧೯೮೩) ಎಂಬ ಸಂಪುಟದಲ್ಲಿ ಸಮಾವೇಶಗೊಂಡಿವೆ.

■

# ಪ್ರೊ. ಡಿ.ಕೆ. ಭೀಮಸೇನರಾವ್

ಜನನ ೧೯೦೪ ಮರಣ ೧೯೬೯. ಜೀವಿತಾವಧಿ ೬೫ ವರ್ಷಗಳು. ಹೈದರಾಬಾದ್ ಸಂಸ್ಥಾನದ ಕನ್ನಡ ಪ್ರದೇಶಗಳಲ್ಲಿ ಕನ್ನಡ ಜಾಗೃತಿಗಾಗಿ ಶ್ರಮಿಸಿದವರು. ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದರು. ರಾಯಚೂರು ಜಿಲ್ಲೆಯ ಸಿಂಧನೂರು ತಾಲ್ಲೂಕಿನ ದಿದ್ದಗಿ ಗ್ರಾಮದಲ್ಲಿ ಜನಿಸಿದವರು. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಅಲ್ಲೇ ಮುಗಿಸಿದರು. ಹೈದರಾಬಾದಿನಲ್ಲಿ ಮೆಟ್ರಿಕ್ಯುಲೇಷನ್ ಮುಗಿಸಿ ೧೯೨೬ರಲ್ಲಿ ಬಿ.ಎ. ಪದವಿ ಪಡೆದರು. ಇವರ ಶಿಕ್ಷಣಮಾಧ್ಯಮ ಉರ್ದು ಆಗಿದ್ದುದರಿಂದ ಮುಂದಿನ ಕನ್ನಡ ಎಂ.ಎ. ವ್ಯಾಸಂಗಕ್ಕೆ ತೊಂದರೆಯಾಯಿತು. ಆದರೆ ಮೈಸೂರು ವಿಶ್ವವಿದ್ಯಾಲಯ ೧೯೨೭ರಲ್ಲಿ ಪ್ರಾರಂಭಿಸಿದ ಕನ್ನಡ ಎಂ.ಎ. ಮೊದಲ ವರ್ಷಕ್ಕೆ ಪ್ರವೇಶ ನೀಡಿತು. ೧೯೨೯ರಲ್ಲಿ ಎಂ.ಎ. ಪದವಿಯನ್ನು ಪಡೆದ ಭೀಮಸೇನಾಚಾರ್ಯರು ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಸಂಶೋಧಕರಾಗಿ ನೇಮಕಗೊಂಡರು. ಆಮೇಲೆ ೧೯೩೩ ಕನ್ನಡ ಅಧ್ಯಾಪಕರಾಗಿ ತರುವಾಯ ಕನ್ನಡ ಪ್ರಾಧ್ಯಾಪಕರಾಗಿ ಇಲಾಖಾ ಮುಖ್ಯಸ್ಥರಾಗಿ ಸೇವೆಯನ್ನು ಸಲ್ಲಿಸಿ ನಿವೃತ್ತರಾದರು. ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಕನ್ನಡ ಸ್ನಾತಕೋತ್ತರ ಮತ್ತು ಸಂಶೋಧನಾ ವಿಭಾಗಗಳು ಪ್ರಾರಂಭವಾದದ್ದು ಇವರ ಪ್ರಯತ್ನದಿಂದ.

ಪ್ರೊ. ಭೀಮಸೇನರಾಯರಿಗೆ ಕನ್ನಡವೇ ಅಲ್ಲದೆ ತೆಲುಗು, ಉರ್ದು, ಮರಾಠಿ, ಪರ್ಷಿಯನ್, ಸಂಸ್ಕೃತ ಭಾಷೆ ಸಾಹಿತ್ಯಗಳಲ್ಲಿ ವಿಶೇಷ ಪರಿಶ್ರಮವಿತ್ತು. ಶ್ರೀಯುತರ ಅನೇಕ ಪ್ರೌಢಲೇಖನಗಳು ಪ್ರಕಟವಾಗಿವೆ. "ಹದಿಮೂರನೆಯ ಶತಮಾನದ ಕರ್ಣಾಟಕಾಂಧ್ರ ಮಹಾರಾಷ್ಟ್ರ ಸಾಹಿತ್ಯಾವಲೋಕನ" ಎಂಬ ಪ್ರೌಢಗ್ರಂಥ ಉಸ್ಮಾನಿಯಾ ವಿಶ್ವವಿದ್ಯಾಲಯದಿಂದ ಪ್ರಕಟವಾಗಿದೆ. "ಶಬ್ದಮಣಿದರ್ಪಣದ ಪಾಠಾಂತರಗಳು" ಇವರ ಸಂಪಾದಿತ ಗ್ರಂಥ. ಇದು ವಿದ್ಯಾರ್ಥಿಗಳಿಗೆ ತುಂಬ ಉಪಯುಕ್ತವಾಗಿದೆ. ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ಆಶ್ರಯದಲ್ಲಿ ೧೯೪೩ರಲ್ಲಿ ಇವರು ಮಾಡಿದ ಮೂರು ಉಪನ್ಯಾಸಗಳು 'ಅನುಭವಾಮೃತವೂ ಹರಿಕಥಾಮೃತವೂ' ಎಂಬ ಹೆಸರಿನಿಂದ ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ. 'ಪಂಚತಂತ್ರ', 'ಕನ್ನಡ ಹೂಮಾಲೆ' ಶ್ರೀಯುತರ ಮತ್ತೆರಡು ಕೃತಿಗಳು. ಸಾಹಿತ್ಯ ಮತ್ತು ಶಿಕ್ಷಣ ಕ್ಷೇತ್ರಗಳಿಗೆ ಶ್ರೀಯುತರು ನಿರಂತರವಾಗಿ ಸಲ್ಲಿಸಿದ ಸೇವೆಗಾಗಿ ಅವರಿಗೆ ಹೈದರಾಬಾದ್ ಕರ್ಣಾಟಕ ಪ್ರಾಂತ್ಯದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯೂ, ಆಂಧ್ರ ಪ್ರದೇಶದ ರಚನೆಯಾದ ಮೇಲೆ ಆಂಧ್ರ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಅಧ್ಯಕ್ಷತೆಯೂ ಪ್ರಾಪ್ತವಾದುವು. ಇವರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸಂಪಾದಕ ಸಮಿತಿಯ ಸದಸ್ಯರಾಗಿ ೧೯೪೪ ರಿಂದ ೧೯೬೯ ರವರೆಗೆ ಸೇವೆಯನ್ನು ಸಲ್ಲಿಸಿದ್ದಾರೆ. ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ೧೯೬೮ರಲ್ಲಿ ಶ್ರೀಯುತರಿಗೆ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

■

# ಎಚ್. ದೇವೀರಪ್ಪನವರು

ಇಪ್ಪತ್ತನೆಯ ಶತಮಾನದ ಸಂಶೋಧಕ ಸಾಹಿತಿಗಳಲ್ಲಿ ಎಚ್.ದೇವೀರಪ್ಪ ನವರು ಪ್ರಮುಖರು. ಯಾವ ಸದ್ದುಗದ್ದಲವೂ ಇಲ್ಲದೆ, ಯಾವ ವಾದವಿವಾದ ಗಳಿಗೂ ಸಿಲುಕದೆ ಸಾಹಿತ್ಯಸೇವೆಗೈದ ಮಹನೀಯರು. ಲೌಕಿಕವಾದ ಲಾಭಲೋಭಗಳಿಗೆ ವಶರಾಗದೆ ನಿಷ್ಕಾಮದೃಷ್ಟಿಯಿಂದ ಸೇವೆಗೈದ ಕಾಯಕ ಕಲಿಗಳು.

ಮಲೆನಾಡಿನ ರಮ್ಯಪ್ರಕೃತಿಯ ಮಧ್ಯದಲ್ಲಿ ತೀರ್ಥಹಳ್ಳಿಯ ಸಮೀಪದ ಮಲ್ಲಿಗೇನಹಳ್ಳಿಯಲ್ಲಿ ೬.೬.೧೯೧೩ ರಂದು ಜನಿಸಿದ ದೇವೀರಪ್ಪನವರು ತಮ್ಮ ಬರವಣಿಗೆಗಳಲ್ಲಿ ಮಲೆನಾಡಿನ ಚಿತ್ರಗಳನ್ನು ಬಿಡಿಸಿದ್ದಾರೆ. ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲಾ ವಿದ್ಯಾಭ್ಯಾಸವನ್ನು ತಮ್ಮ ಊರಿನಲ್ಲಿಯೂ ಶಿವಮೊಗ್ಗದಲ್ಲಿಯೂ ಮುಗಿಸಿ ಕನ್ನಡ ಎಂ.ಎ. ಪದವಿಯನ್ನು ಮೈಸೂರು ವಿಶ್ವವಿದ್ಯಾನಿಲಯದಿಂದ ಪಡೆದಿದ್ದಾರೆ. ವಿದ್ಯಾರ್ಥಿಯಾಗಿದ್ದಾಗಿನಿಂದಲೂ ಸಾಹಿತ್ಯಾಭಿರುಚಿಯನ್ನುಳ್ಳ ದೇವೀರಪ್ಪನವರಿಗೆ ಶ್ರೇಷ್ಠಗುರುಗಳ ಮಾರ್ಗದರ್ಶನ ಲಭಿಸಿತು. ಶ್ರೀಯುತರು ವಿದ್ಯಾರ್ಥಿದೆಸೆಯಲ್ಲೇ ಸ್ವಾತಂತ್ರ್ಯಚಳುವಳಿಯಲ್ಲಿ ಭಾಗವಹಿಸಿ ತಮ್ಮ ರಾಷ್ಟ್ರಾಭಿಮಾನವನ್ನು ಪ್ರಕಟಿಸಿದ್ದಾರೆ.

ವಿದ್ಯಾಭ್ಯಾಸ ಮುಗಿದ ಮೇಲೆ ಸ್ವಲ್ಪಕಾಲ ಅಧ್ಯಾಪಕರಾಗಿ ಕಾರ್ಯನಿರ್ವಹಿಸಿದ ದೇವೀರಪ್ಪನವರು ಆಮೇಲೆ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯಲ್ಲಿ ಪದವೀಧರ ತಜ್ಞರಾಗಿ ನೇಮಕಗೊಂಡು ಕ್ರಮೇಣ ಆ ಸಂಸ್ಥೆಯ ಸಹಾಯಕ ನಿರ್ದೇಶಕರಾಗಿ ಕೊನೆಗೆ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ಪ್ರಾಚ್ಯವಿದ್ಯಾಸಂಶೋಧನೆಯ ಕನ್ನಡವಿಭಾಗ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ವಿಲೀನಗೊಂಡಾಗ ಸಂಪಾದನ ವಿಭಾಗದ ನಿರ್ದೇಶಕರಾಗಿ ಸೇವೆಸಲ್ಲಿಸಿ ನಿವೃತ್ತರಾದರು. ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯ ಸರ್ವಾಂಗೀಣ ಪ್ರಗತಿಗೆ ತಮ್ಮ ಇಡೀ ಸೇವೆಯನ್ನೆಲ್ಲಾ ಸಲ್ಲಿಸಿದವರಲ್ಲಿ ದೇವೀರಪ್ಪನವರು ಅಗ್ರಗಣ್ಯರು.

ದೇವೀರಪ್ಪನವರ ಸಾಹಿತ್ಯ ಸೇವೆ ಬಹುಮುಖವಾದುದು. ಶ್ರೇಷ್ಠ ಸಂಶೋಧಕರೂ ಪ್ರಾಚೀನ ಗ್ರಂಥಸಂಪಾದಕರೂ ಆಗಿದ್ದ ಶ್ರೀಯುತರು ಅನೇಕ ಪ್ರಾಚೀನ ಕಾವ್ಯಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಕನ್ನಡ ಗ್ರಂಥಸಂಪಾದನ ಕ್ಷೇತ್ರದಲ್ಲಿ ಶಾಶ್ವತವಾದ ಸ್ಥಾನವನ್ನು ಗಳಿಸಿಕೊಂಡಿದ್ದಾರೆ. ತಮ್ಮ ಸಾಹಿತ್ಯ ಸೇವೆಗಾಗಿ ನಾಡಿನ ಸಂಘ ಸಂಸ್ಥೆಗಳಿಂದ ಸನ್ಮಾನಿತ ರಾದುದಷ್ಟೇ ಅಲ್ಲದೆ ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದಲೂ ಪುರಸ್ಕೃತರಾಗಿದ್ದಾರೆ.

ಗ್ರಂಥ ಸಂಪಾದನ ಕ್ಷೇತ್ರಕ್ಕೇ ಮಿಗಿಲಾಗಿ ಶ್ರಮಿಸಿದ ದೇವೀರಪ್ಪನವರು ಸಿಂಗಿರಾಜನ ಸಿಂಗಿರಾಜಪುರಾಣ (ಅಮಲ ಬಸವಚಾರಿತ್ರ), ನಂಜುಂಡನ ರಾಮನಾಥ ಚರಿತೆ (ಕುಮಾರರಾಮ ಸಾಂಗತ್ಯ), ಹರಿಹರೇತರಕೃತ ವಿರೂಪಾಕ್ಷಾಂಕಿತ ಶಿವಶರಣ ಸಂಪುಟ ಮೊದಲಾದ ಗ್ರಂಥಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಮೌಲಿಕವಾದ ಸಂಶೋಧನಾತ್ಮಕ ಪೀಠಿಕೆಗಳನ್ನು ಬರೆದಿದ್ದಾರೆ. ಹರಿಹರ ದೇವೀರಪ್ಪನವರ ಅಚ್ಚುಮೆಚ್ಚಿನ ಕವಿ. ತಮ್ಮ ಜೀವಮಾನದ ಬಹುಕಾಲವನ್ನು ಹರಿಹರನ ಕೃತಿಗಳ ಸಂಪಾದನೆಗಾಗಿಯೇ ವಿನಿಯೋಗಿಸಿದ್ದಾರೆ. ಶ್ರೀಯುತರು ಹರಿಹರನ ರಗಳೆಗಳ ಸಂಖ್ಯಾನಿರ್ಣಯವನ್ನು

ಕರಾರುವಾಕ್ಕಾಗಿ ಮಾಡುವ ಸಾಮರ್ಥ್ಯವನ್ನು ರೂಢಿಸಿಕೊಂಡಿದ್ದರು. ಅವರು ಅತ್ಯಂತ ಪರಿಶ್ರಮದಿಂದ ಸಂಪಾದಿಸಿರುವ 'ಶರಣ ಚರಿತಮಾನಸ' ಒಂದು ಜೀವಂತ ನಿದರ್ಶನವಾಗಿದೆ. ಈ ಗ್ರಂಥದ ದೀರ್ಘವಾದ ಪೀಠಿಕೆಯನ್ನು ಪರಿಶೀಲಿಸಿದ ಡಾ. ಡಿ.ಎಲ್. ನರಸಿಂಹಾಚಾರ್ಯರು ಬೆಲೆಯುಳ್ಳ ಮುನ್ನುಡಿಯನ್ನು ಬರೆದು ಹರಸಿದ್ದಾರೆ. ಹರಿಹರನ ಎಲ್ಲ ರಗಳೆಗಳನ್ನೂ ಶಾಸ್ತ್ರೀಯವಾಗಿ ಸಂಪಾದಿಸಿದ ಶ್ರೇಯಸ್ಸು ದೇವೀರಪ್ಪನವರಿಗೆ ಸಲ್ಲತಕ್ಕದ್ದಾಗಿದೆ.

ದೇವೀರಪ್ಪನವರು ಕಥೆಗಾರರೆಂದೂ, ಕಾದಂಬರಿಕಾರರೆಂದೂ, ನಾಟಕಕಾರರೆಂದೂ ಪರಿಗಣಿತರಾಗಿದ್ದಾರೆ. ಶ್ರೀಯುತರ "ಸುವರ್ಣ ಸಂಪುಟ" ಒಂದು ಉತ್ತಮ ಕಥಾಸಂಕಲನ. 'ಬೆಳುವಲದ ಮಡಿಲಲ್ಲಿ', 'ಹಳ್ಳಿಯ ಬದುಕು' ಕಾದಂಬರಿಗಳು. ಈ ಕೃತಿಗಳಲ್ಲಿ ಗ್ರಾಮೀಣ ಜೀವನದ ನೈಜಚಿತ್ರಣವನ್ನು ಕಾಣಬಹುದು. 'ಬೆಳುವಲದ ಮಡಿಲಲ್ಲಿ' ಚಲನಚಿತ್ರವಾಗಿ ಕನ್ನಡಿಗರ ಮನವನ್ನು ಸೂರೆಗೊಂಡಿದೆ. 'ಕಲಾಯೋಗಿ', 'ತುಂಗಭದ್ರ' ಇವು ಶ್ರೇಷ್ಠ ನಾಟಕಗಳು.

ದೇವೀರಪ್ಪನವರು ಇತರ ವಿದ್ವಾಂಸರ ಸಹಯೋಗದೊಂದಿಗೆ 'ಷಟ್ಸ್ಥಲ ವಲ್ಲಭ', 'ಅಜಿತಪುರಾಣ ಸಂಗ್ರಹ', 'ಗಿರಿಜಾ ಕಲ್ಯಾಣ ಸಂಗ್ರಹ', 'ಚೆನ್ನಮಲ್ಲಿಕಾರ್ಜುನ' (ಸಂಭಾವನ ಗ್ರಂಥ) ಮೊದಲಾದ ಕೃತಿಗಳನ್ನು ಹೊರತಂದಿದ್ದಾರೆ. ಶ್ರೀಯುತರು ಕೆಲವಾರು ಪಠ್ಯಪುಸ್ತಕಗಳ ಸದಸ್ಯರಾಗಿದ್ದುಕೊಂಡು ಸೇವೆ ಸಲ್ಲಿಸಿದ್ದಾರೆ.

ದೇವೀರಪ್ಪನವರ ನಡೆನುಡಿ ಆಚಾರವಿಚಾರಗಳು ಇತರರಿಗೆ ಮಾರ್ಗದರ್ಶಕವಾಗಿದ್ದುವು. ಸಹೃದಯತೆ, ಪ್ರಾಮಾಣಿಕತೆ, ಸೌಜನ್ಯತೆಗಳ ಸಾಕಾರಮೂರ್ತಿಯಂತಿದ್ದರು. ಇವರು ಜನಿಸಿದ್ದು ೬.೬.೧೯೧೩ ರಂದು. ಲಿಂಗೈಕ್ಯರಾದದ್ದು ೩.೧.೧೯೮೮. ಎಪ್ಪತ್ತೈದು ವರ್ಷಗಳ ಸಾರ್ಥಕ ಜೀವನವನ್ನು ಸವೆಸಿದ ಬಹುಮುಖ ಪ್ರತಿಭೆಯ ದೇವೀರಪ್ಪನವರ ಹೆಸರು ಇಪ್ಪತ್ತನೆಯ ಶತಮಾನದ ಸಾಹಿತಿಗಳ ಸಾಲಿನಲ್ಲಿ ಸ್ಥಿರವಾಗಿ ನಿಲ್ಲುವಂತಹುದಾಗಿದೆ.



# ಲಿಂಗೈಕ್ಯ ಚನ್ನಮಲ್ಲಿಕಾರ್ಜುನ ಮಾಸ್ತರ

**ಸು**ಮಾರು ಇಪ್ಪತ್ತೈದು ವರ್ಷಗಳ ಹಿಂದಿನ ಮಾತು. ನಾನು ಚನ್ನಮಲ್ಲಿಕಾರ್ಜುನ ಅವರನ್ನು ಮೈಸೂರಿನ ಅವರ ಮನೆಯಲ್ಲಿ ಮೊದಲ ಬಾರಿಗೆ ಕಂಡದ್ದು ಆ ಸಮಯದಲ್ಲಿ. ಮನೆಯೂ ಅಚ್ಚುಕೂಟವೂ ಗ್ರಂಥಭಂಡಾರವೂ ಎಲ್ಲಾ ಒಂದೇ ಕಡೆ ನೆಲೆಗೊಂಡಿದ್ದವು.

ಮೂರ್ತಿ ಚಿಕ್ಕದಾದರೂ ಕೀರ್ತಿ ಹಿರಿದಾದ ವ್ಯಕ್ತಿ ಚನ್ನಮಲ್ಲಿಕಾರ್ಜುನ ಅವರು. ಸದ್ಧರ್ಮದೀಪಿಕೆಯ ಮೂಲಕ ಅವರ ಹೆಸರನ್ನು ಕೇಳಿದ್ದ ನಾನು ಅವರನ್ನು ಕಂಡಾಗ ಅಮಿತಾನಂದಗೊಂಡೆ. ಏಕೆಂದರೆ ಆ ಇಳಿವಯಸ್ಸಿನಲ್ಲಿಯೂ ಅವರು ದಿನನಿತ್ಯದ ತಮ್ಮ ಎಲ್ಲ ಕಾರ್ಯಗಳನ್ನು ತಾವೇ ಮಾಡಿಕೊಂಡು ಅಚ್ಚುಕೂಟದ ಕಾರ್ಯವನ್ನು ನಿರ್ವಹಿಸುವುದರ ಜೊತೆಗೆ ತಮ್ಮ ಬರವಣಿಗೆಯ ಕೆಲಸವನ್ನೂ ಮಾಡುತ್ತಿದ್ದರು. ಅವರು ಶಿವಾನುಭವಿಯಾಗಿ, ಕಾಯಕ ಕಲಿಯಾಗಿ ಕರ್ಮಯೋಗಿಯಾಗಿ ಅಮರರಾಗಿದ್ದಾರೆ.

ಚನ್ನಮಲ್ಲಿಕಾರ್ಜುನ ಮಾಸ್ತರರು ವೀರಶೈವ ಸಾಹಿತ್ಯವನ್ನು, ಅದರಲ್ಲೂ ವಚನ ಸಾಹಿತ್ಯವನ್ನು, ಆಳವಾಗಿ ಅಭ್ಯಸಿಸಿದ್ದರು. ಸದ್ಧರ್ಮದೀಪಿಕೆಯಲ್ಲಿ ಅವರು ಬರೆಯುತ್ತಿದ್ದ ಹಲವಾರು ಲೇಖನಗಳೇ ಇದಕ್ಕೆ ಸಾಕ್ಷಿಯಾಗಿವೆ. ಕನ್ನಡ ಸಾಹಿತ್ಯ, ವೀರಶೈವ ಸಾಹಿತ್ಯ, ವಚನ ಸಾಹಿತ್ಯ –ಇವುಗಳ ತ್ರಿವೇಣೀ ಸಂಗಮವನ್ನು ಸದ್ಧರ್ಮದೀಪಿಕೆಯಲ್ಲಿ ಕಾಣಬಹುದಾಗಿದೆ.

ಚನ್ನಮಲ್ಲಿಕಾರ್ಜುನ ಮಾಸ್ತರು ಹಲವಾರು ಬಿಡಿಲೇಖನಗಳ ಜೊತೆಗೆ ನುಲಿಯ ಚಂದಯ್ಯನ ಶಾರದ, ಶರಣೆಯರ ತ್ರಿವಿಧಿ, ಕೋಳೂರು ಕೊಡಗೂಸಿನ ರಗಳೆ, ಉಡುತಡಿಯ ಮಹಾದೇವಿಯಕ್ಕನ ರಗಳೆಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಅಕ್ಕನ ವಚನಗಳ ಟೀಕೆ, ಕನ್ನಡ ಶಿವಯೋಗಪ್ರದೀಪಿಕೆಗಳನ್ನೂ ಅಚ್ಚುಹಾಕಿಸಿದ್ದಾರೆ. ಇವೆಲ್ಲಕ್ಕಿಂತ ಮಿಗಿಲಾದುದು, ಮಹತ್ತರವಾದುದು ಅವರ 'ಶ್ರೀ ಬಸವೇಶ್ವರನ ಕಾಲವಿಚಾರ' ಎಂಬ ಗ್ರಂಥ. ಇದು ಒಂದು ಸಂಶೋಧನಾತ್ಮಕ ಕೃತಿ. ಹಲವಾರು ವರ್ಷಗಳ ಅವಿರತ ವ್ಯಾಸಂಗದಿಂದ ಹೊರಬಂದಿರುವ ಈ ಕೃತಿ ವಿದ್ವಾಂಸರ ಗಮನವನ್ನು ಸೆಳೆದಿದೆ. ಮೆಚ್ಚುಗೆಯನ್ನು ಪಡೆದಿದೆ.

ಕೋಳೂರು ಕೊಡಗೂಸಿನ ರಗಳೆಯನ್ನು ಕ್ರಿ.ಶ. ೧೯೩೧ರಲ್ಲಿ ಪ್ರಕಟಿಸಿದ್ದಾರೆ. ಈ ಪುಟ್ಟ ರಗಳೆಗೆ ಒಂದು ಉಪಯುಕ್ತವಾದ ಮುನ್ನುಡಿಯನ್ನೂ ವಿಸ್ತಾರವಾದ ಅರ್ಥಕೋಶವನ್ನೂ ಕೊಟ್ಟು ಗ್ರಂಥ ಚಿಕ್ಕದಾದರೂ ಅದಕ್ಕೆ ಮೇಲ್ಮೆಯುಂಟಾಗುವಂತೆ ಮಾಡಿದ್ದಾರೆ. ಈ ರಗಳೆಯನ್ನು ಮೊದಲಸಲ ಪ್ರಕಟಿಸಿದ ಕೀರ್ತಿ ಶ್ರೀಯುತರಿಗೆ ಸಲ್ಲತಕ್ಕದ್ದಾಗಿದೆ.

ಹರಿಹರನ ರಗಳೆಗಳಲ್ಲಿ ಉಡುತಡಿಯ ಮಹಾದೇವಿಯಕ್ಕನ ರಗಳೆ ಮುಖ್ಯವಾದುದು. ಮಹಾದೇವಿಯಕ್ಕನ ಅತ್ಯಂತ ಸಮೀಪವರ್ತಿಯಾಗಿದ್ದ ಹರಿಹರನು ನಿಜಸಂಗತಿಗಳನ್ನು ಈ ರಗಳೆಯಲ್ಲಿ ನಿರೂಪಿಸಿದ್ದಾನೆ. ಕಲ್ಯಾಣದ ಅನುಭವ ಮಂಟಪದಲ್ಲಿ ಮಹಾಮಹಿಮರಾದ ಅಲ್ಲಮಪ್ರಭು, ಚೆನ್ನಬಸವಣ್ಣ, ಸಿದ್ಧರಾಮ, ಬಸವಣ್ಣನೇ ಮೊದಲಾದವರನ್ನು ಸಂಧಿಸಿ ಆಧ್ಯಾತ್ಮಿಕ ಚರ್ಚೆಯನ್ನು ನಡೆಸಿ ದಿಗಂಬರವನ್ನೇ ದಿವ್ಯಾಂಬರವನ್ನಾಗಿ ಮಾಡಿಕೊಂಡು ಚನ್ನಮಲ್ಲಿಕಾರ್ಜುನನನ್ನು

ಅರಸುತ್ತ ಶ್ರೀಶೈಲದತ್ತ ನಡೆದು ಅಲ್ಲಿಯ ಕದಳಿಯಲ್ಲಿ ಐಕ್ಯಳಾದ ಮಹಾಸಾಧ್ವಿ, ಇಂತಹ ಮಹಾಮಹಿಮಳ ಚರಿತ್ರೆಯನ್ನು ಸಂಪಾದಿಸಿ ಮೊದಲಬಾರಿಗೆ ಪ್ರಕಟಿಸಿ ನಾಡಿನ ಜನತೆಗೆ ಮಹೋಪಕಾರವನ್ನು ಮಾಡಿದ್ದಾರೆ ಶ್ರೀ ಚೆನ್ನಮಲ್ಲಿಕಾರ್ಜುನ ಮಾಸ್ತರು. ಹಲವಾರು ಪ್ರತಿಗಳ ಆಧಾರದಿಂದ ವಿಪುಲ ಪಾಠಾಂತರಗಳೊಂದಿಗೆ ಕವಿಕಾವ್ಯ ವಿಚಾರ ಅರ್ಥಕೋಶ ಗಳೊಂದಿಗೆ ಕ್ರಿ.ಶ. ೧೯೩೩ರಲ್ಲಿ ಪ್ರಕಟವಾಗಿರುವ ಈ ಕೃತಿ ಕನ್ನಡ ಸಾಹಿತ್ಯಕ್ಕೆ ಒಂದು ಉತ್ತಮ ಕೊಡುಗೆಯಾಗಿದೆ.

ಚನ್ನಮಲ್ಲಿಕಾರ್ಜುನ ಅವರ ಕೀರ್ತಿಗೆ ಕಳಸವಿಟ್ಟಂತಿರುವ ಕೃತಿ ಶ್ರೀ ಬಸವೇಶ್ವರನ ಕಾಲ ಕ್ರಿ.ಶ. ೧೯೫೦ರಲ್ಲಿ ಪ್ರಕಟವಾಗಿರುವ ಈ ಕೃತಿಯಲ್ಲಿ ಬಸವಣ್ಣನವರನ್ನು ಕುರಿತು ಅಂದಿನವರೆಗೆ ಉಪಲಬ್ಧವಿದ್ದ ಎಲ್ಲ ಮಾಹಿತಿಗಳೂ ಇವೆ. ಈ ಗ್ರಂಥರಚನೆಗಾಗಿ ಅವರು ಶಾಸ್ತ್ರಪುರಾಣೇತಿಹಾಸಗಳನ್ನೂ, ಪ್ರಚಲಿತ ದಂತಕತೆಗಳನ್ನೂ, ಸ್ಥಳಪುರಾಣಗಳನ್ನೂ, ಅಸಂಖ್ಯಾತ ಶಾಸನಗಳನ್ನೂ, ಲೆಕ್ಕವಿಲ್ಲದಷ್ಟು ಗ್ರಂಥಗಳನ್ನೂ ಅಭ್ಯಾಸಮಾಡಿದ್ದಾರೆ. ಚನ್ನಮಲ್ಲಿಕಾರ್ಜುನರ ತೀರ್ಮಾನಗಳನ್ನು ವಿದ್ವಾಂಸರು ಒಪ್ಪಲಿ ಬಿಡಲಿ, ಅವರ ಅಪಾರವಾದ ಶ್ರಮ, ಬಹುಕಾಲದ ವ್ಯಾಸಂಗ ಪರಿಶ್ರಮ ಈ ಗ್ರಂಥದ ಪ್ರತಿಪುಟದಲ್ಲಿಯೂ ಎದ್ದುಕಾಣುತ್ತದೆ. ಈ ಗ್ರಂಥದ ಬಗೆಗೆ ಪ್ರೊ. ಶಿ.ಶಿ. ಬಸವನಾಳರು ಹೇಳಿರುವ ಮಾತುಗಳು ಉಲ್ಲೇಖನಾರ್ಹವಾಗಿವೆ.

"ಸದ್ಧರ್ಮದೀಪಿಕೆಯ ಸಂಪಾದಕರಾದ ಶ್ರೀ ಚನ್ನಮಲ್ಲಿಕಾರ್ಜುನ ಅವರು ಬರೆದ 'ಬಸವೇಶ್ವರನ ಕಾಲ' ಎಂಬ ಗ್ರಂಥವನ್ನು ಆದ್ಯಂತವಾಗಿ ಓದಿದ್ದೇನೆ. ಬಸವೇಶ್ವರನ ಜೀವಿತಕಾಲ, ತಾಯಿ ತಂದೆಗಳು, ಅವರ ಶಿಕ್ಷಣ ಮುಂತಾದ ವಿಷಯಗಳ ಮೇಲೆ ಈ ಗ್ರಂಥದಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರು ಹೊಸಬೆಳಕು ಹಾಕಿದ್ದಾರೆಂದು ಹೇಳಲು ನನಗೆ ತುಂಬ ಸಂತೋಷವೆನಿಸುತ್ತದೆ.

ಈ ಗ್ರಂಥದಲ್ಲಿ ಗ್ರಂಥಕರ್ತರು ಅನುಸರಿಸಿದ ವಾದಸರಣಿ ಶಾಸ್ತ್ರಶುದ್ಧವೂ ತರ್ಕಬದ್ಧವೂ ಆಗಿದೆ. ಬಸವಣ್ಣನವರ ಬಗೆಗೆ ಶಾಸನಾಧಾರಗಳೂ ಸಾಕಷ್ಟು ದೊರೆಯುವುದಿಲ್ಲವೆಂದು ಇದುವರೆಗೆ ಪಂಡಿತರಲ್ಲಿದ್ದ ಅಭಿಪ್ರಾಯಕ್ಕೆ ಈ ಗ್ರಂಥದಿಂದ ಸರಿಯಾದ ಉತ್ತರ ದೊರೆಯುವುದೆಂಬಲ್ಲಿ ಸಂದೇಹವಿಲ್ಲ. ಬಸವಣ್ಣನವರ ಜೀವಿತ ಕಾಲವು ಕ್ರಿ.ಶ. ೧೧೦೬ ರಿಂದ ಕ್ರಿ.ಶ. ೧೧೬೭ ರವರೆಗೆ ಎಂದು ಶ್ರೀ ಮಲ್ಲಿಕಾರ್ಜುನರು ಸಿದ್ಧಮಾಡಿದುದನ್ನು ನಾನು ಅನುಮೋದಿಸುತ್ತೇನೆ. ಮಣಿಗವಳ್ಳಿ (ಮನಗೋಳಿ) ಶಾಸನವು ಬಸವಣ್ಣನವರಿಗೆ ಸಂಬಂಧಿಸಿದುದಲ್ಲವೆಂಬ ಅಭಿಪ್ರಾಯ ನಿರಾಧಾರವಾದುದೆಂದು ಸಿದ್ಧಿಸಲು ಶ್ರೀಚನ್ನಮಲ್ಲಿಕಾರ್ಜುನರು ಕೈಕೊಂಡ ವಿಚಾರಸರಣಿ ಬಹುಸಮಂಜಸವಾಗಿದೆ, ಅವರ ಸಂಶೋಧನಾಸಕ್ತಿಯನ್ನೂ ಚೆನ್ನಾಗಿ ಪ್ರದರ್ಶಿಸುತ್ತದೆ."

ಸುಮಾರು ನಾಲ್ಕೈದು ದಶಕಗಳ ಕಾಲ ಸಾಹಿತ್ಯ ಮತ್ತು ಸಂಸ್ಕೃತಿಗಳ ಸಂವರ್ಧನೆಗಾಗಿ ಅವಿಶ್ರಾಂತವಾಗಿ ಶ್ರಮಿಸಿದ ಧೀಮಂತರು ಶ್ರೀ ಚನ್ನಮಲ್ಲಿಕಾರ್ಜುನ ಅವರು ಲೌಕಿಕವಾದ ಯಾವ ಆಸೆ ಆಮಿಷಗಳಿಗೂ ಬಲಿಯಾಗದೆ ಸತ್ಯಶುದ್ಧ ಕಾಯಕವನ್ನು ಕೈಕೊಂಡು ನಿತ್ಯರಾದ ಶ್ರೀ ಚನ್ನಮಲ್ಲಿಕಾರ್ಜುನರು ಕನ್ನಡಿಗರೆಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.



# ಬೆಂಜಮಿನ್ ಲೂಯಿ ರೈಸ್

ಜನನ : ೧೭.೭.೧೮೩೭ ಮರಣ : ೧೦.೭.೧೯೨೭

ಇಂಗ್ಲೆಂಡಿನ ಹ್ಯಾರೋ ಪಟ್ಟಣದಲ್ಲಿ ಬಾಲ್ಯ ಹಾಗೂ ಶಿಕ್ಷಣವನ್ನು ಮುಗಿಸಿದ ಬೆಂಜಮಿನ್ ಲೂಯಿ ರೈಸ್ ಅವರು ಭಾರತಕ್ಕೆ ಬಂದಾಗ ಅವರಿಗೆ ಸುಮಾರು ೨೩ ವಯಸ್ಸು. ಅವರ ಮನೆತನಕ್ಕೆ ಮೈಸೂರು ಹೊಸದಲ್ಲ. ಬೆಂಜಮಿನ್ ಹಾಲ್ಟ್ ರೈಸ್ ಅವರು ಬೆಂಗಳೂರಿನ ಲಂಡನ್ ಮಿಷನರಿಯಲ್ಲಿ ಕ್ರೈಸ್ತಮತ ಪ್ರಚಾರಕರಾಗಿ ಹಲವಾರು ವರ್ಷ ಕೆಲಸಮಾಡಿದ್ದರು.

ಪಶ್ಚಿಮದಿಂದ ಬಂದವರು ಕೈಯಲ್ಲಿ ಬೈಬಲ್, ತಪ್ಪಿದರೆ ಅಧಿಕಾರದಂಡ ಹಿಡಿದಿರಬೇಕಾದುದು ಅಂದಿನ ಸಾಮಾನ್ಯ ರೂಢಿ. ಬೆಂಗಳೂರು ಸೆಂಟ್ರಲ್ ಹೈಸ್ಕೂಲಿನ ಮುಖ್ಯಾಧ್ಯಾಪಕರಾಗಿ ಕೆಲಸಕ್ಕೆ ಸೇರಿದ ಬಿ.ಎಲ್. ರೈಸ್ ಒಬ್ಬರು ಮಾತ್ರ ಕೆಲಮಟ್ಟಿಗೆ ಇದಕ್ಕೆ ಅಪವಾದ. ಹೈಸ್ಕೂಲು 'ಹೆಡ್ಮೇಸ್ಟ್ರಿಗೆ' ಅಧಿಕಾರ ಎಂಥದು? ಭಾರತದ ಇತರ ಹಲವು ಪ್ರಾಂತಗಳಂತೆ ಮೈಸೂರು ಸಂಸ್ಥಾನದಲ್ಲಿಯೂ ಅದೇ ತಾನೇ ವಿದ್ಯಾಇಲಾಖೆ ಏರ್ಪಟ್ಟಿತ್ತು. ಹೊಸವ್ಯವಸ್ಥೆ ಹೊಸವಾತಾವರಣ. ಇವೆಲ್ಲಕ್ಕಿಂತ ಹೆಚ್ಚಾಗಿ ತರುಣ ಲೂಯಿ ಅವರನ್ನು ಆಕರ್ಷಿಸಿದ್ದು ಇಲ್ಲಿಯ ಜನಜೀವನ. ಇಲ್ಲಿಯ ಭಾಷೆ ತಮಿಳಿನ ಒಂದು ಉಪಭಾಷೆ. ಇಲ್ಲಿಯ ಚರಿತ್ರೆಯೆಂದರೆ ಟೀಪುವಿನ ಪತನ; ಹೆಚ್ಚೆಂದರೆ ಹೈದರನ ರಾಜ್ಯಭಾರ. ಅದಕ್ಕೂ ಹಿಂದೆ ಹೋಗಲಾರದು. ಇವೇ ಮೊದಲಾದ ಹೇಳಿಕೆಗಳು ರೈಸರಲ್ಲಿ ಒಂದು ಬಗೆಯ ಅಸಮಾಧಾನವನ್ನುಂಟುಮಾಡಿದವು. ಆದರೆ ಅವರು ಅವನ್ನು ನಂಬಿ ಕೈಚೆಲ್ಲಿ ಕೂಡುವ ಪ್ರವೃತ್ತಿಯವರಾಗಿರಲಿಲ್ಲ.

ಯಾವುದೊಂದು ನಾಡು ಭೌಗೋಳಿಕವಾಗಿ ಚಿಕ್ಕದಿದ್ದರೂ ಅದರ ವಿಶಿಷ್ಟ ಪ್ರಾಕೃತಿಕ ಸ್ವರೂಪ ಹಾಗೂ ನೈಸರ್ಗಿಕ ಸಂಪನ್ಮೂಲಗಳು ಅದರ ಹಿಂದಿನ ಕಥೆಯನ್ನು ರೂಪಿಸುತ್ತವೆ. ಇಂಥ ಚರಿತ್ರೆ ಕಾಲಗರ್ಭದಲ್ಲಿ ಮುಚ್ಚಿಕೊಂಡಿದ್ದರೂ, ತಮ್ಮ ಶಕ್ತಿ ಹಾಗೂ ದುಡಿಮೆಯಿಂದ ಅದನ್ನು ಲೋಕಕ್ಕೆ ತೋರಬಲ್ಲ ಪುಣ್ಯಪುರುಷರು ಹುಟ್ಟೇ ಹುಟ್ಟುತ್ತಾರೆ. ಪ್ರಪಂಚದಲ್ಲಿಯೇ ಮಹತ್ವದ ಸ್ಥಾನ ಪಡೆದ ಗ್ರೀಸ್ ಪ್ಯಾಲೆಸ್ಟೈನ್, ಇಂಗ್ಲೆಂಡ್ ಮೊದಲಾದ ದೇಶಗಳೊಂದಿಗೆ ಹೋಲಿಸಿದಾಗ ಮೈಸೂರು ಯಾವ ರೀತಿಯಿಂದಲೂ ಕಡಮೆಯದಲ್ಲ ಎಂಬ ಭಾವನೆ ಅವರಲ್ಲಿ ಪ್ರಬಲವಾಯಿತು. ನಾಡಿನ ಕೋಟೆಕೊತ್ತಳಗಳು, ಗುಡಿ–ಗುಂಡಾರ ಹಾಗೂ ಮತ್ತಿತರ ಅವಶೇಷಗಳನ್ನು ನೋಡಿದಾಗ, ಕಂಡದ್ದಕ್ಕಿಂತ ಕಾಣಬೇಕಾದದ್ದೇ ಅಮಿತವಾಗಿದೆ ಎಂದು ಅವರು ಅಂದುಕೊಂಡರು.

ವಿದ್ಯಾಇಲಾಖೆಯಲ್ಲಿ ಸ್ಥಾನಿಕ ಭಾಷಾಸಾಹಿತ್ಯದ ಪರಿಚಯ ಅವರಿಗೆ ಸುಲಭವಾಗಿ ಉಂಟಾಯಿತು; ಆಳರಸರ ರಕ್ತಗತ ಪ್ರತಿನಿಧಿಯಾಗಿ ತಮ್ಮ ಹವ್ಯಾಸ, ಹಂಬಲದಂತೆ ಕೆಲಸ ಮಾಡುವ ಸ್ವಾತಂತ್ರ್ಯವನ್ನೂ ಪಡೆದುಕೊಂಡಿದ್ದರು. ಆರುವರುಷಗಳ ನಂತರ ಮೈಸೂರು ಹಾಗೂ ಕೊಡಗು ವಿಭಾಗದ ಶಾಲಾಇನ್ಸ್‌ಪೆಕ್ಟರರಾಗಿ ನೇಮಿತರಾದಾಗ ಜನತೆಯೊಂದಿಗೆ ಅವರಿಗೆ ಹೆಚ್ಚಿನ ಸಂಪರ್ಕ ದೊರೆಯಿತು. ಪ್ರವಾಸದ ಸಮಯದಲ್ಲಿ ಬೇರೆ ಬೇರೆ ಸ್ಥಳಗಳನ್ನು ಸಂದರ್ಶಿಸುತ್ತಿದ್ದಾಗ, ನಾಡಿನ ಗತವೈಭವದ ಹೊಸಹೊಸ ಸಂಗತಿಗಳನ್ನು ಗುರುತಿಸಲು ಅವರಿಗೆ ಸಾಧ್ಯವಾಯಿತು.

ಇದೇ ಸುಮಾರಿಗೆ ಭಾರತದ ಅನೇಕ ಪ್ರಾಂತಗಳಲ್ಲಿ 'ಗೆಜೆಟಿಯರ್'ನ ಕೆಲಸ ಆರಂಭವಾಗಿತ್ತು. 'ಗೆಜೆಟ್' ಅಂದರೆ ಅಧಿಕಾರ ಮುದ್ರೆ; ಹಿಂದಿನ ಕಾಲದ ರಾಜಮುದ್ರೆ ಇದ್ದ ಹಾಗೆ. ಗೆಜೆಟಿನಲ್ಲಿ ಪ್ರಕಟವಾದ ಅನಂತರವೇ ಸರಕಾರದ ನಿರ್ಣಯಗಳು ಕಾನೂನಿನ ಶಕ್ತಿ ಪಡೆಯುತ್ತವೆ. ಹಾಗೆಯೇ 'ಗೆಜೆಟಿಯರ್' ರಾಜಕೀಯದಲ್ಲಿ, ಆಡಳಿತೆಯಲ್ಲಿ ಅದು ವೇದವಾಕ್ಯವಿದ್ದಂತೆ. ಭಾರತ ದೇಶದ ಸಾಧನ–ಸಂಪತ್ತು, ಜನ, ಅವರ ರೀತಿ–ನಡಾವಳಿ, ಆಡಳಿತೆಯ ಕ್ರಮ ಇವುಗಳ ಯಥಾರ್ಥ ಹಾಗೂ ಪ್ರಮಾಣಭೂತ ನಿರೂಪಣೆಯು 'ಗೆಜೆಟಿಯರಿ'ನ ಮೂಲಕ ಸಿದ್ಧವಾಗಬೇಕು ಎಂಬ ವಿಚಾರ ಬಹಳ ದಿನಗಳಿಂದಲೂ ಆಳರಸರ ಮನಸ್ಸಿನಲ್ಲಿತ್ತು. ಅಂಥ ಕಾರ್ಯವನ್ನು ಕೈಕೊಳ್ಳಬೇಕು ಎಂಬ ಆ ದೇಶ ಕ್ರಿ.ಶ. ೧೮೬೭ರಲ್ಲಿ ಮೈಸೂರಿಗೂ ಬಂದಿತ್ತು; ಉಳಿದ ಪ್ರಾಂತಗಳಂತೆಯೇ ಇಲ್ಲಿಯೂ ಸಂಗ್ರಹದ ಕೆಲಸ ಮಂದಗತಿಯಲ್ಲಿ ಸಾಗಿತ್ತು.

ಡಾ. ವಿಲಿಯಂ ಹಂಟರ್ ಅವರು ಅಖಿಲಭಾರತ ಮಟ್ಟದಲ್ಲಿ ವಿಶೇಷಾಧಿಕಾರಿಯಾಗಿ ನಿಯುಕ್ತರಾದಾಗ 'ಗೆಜೆಟಿಯರ್' ಕೆಲಸಕ್ಕೆ ತೀವ್ರಚಾಲನೆ ದೊರೆಯಿತು. ಎಲ್ಲ ಪ್ರಾಂತಗಳಲ್ಲಿ ಪ್ರತ್ಯೇಕ ಅಧಿಕಾರಿಗಳು ನಿಯಮಕಗೊಂಡರು. ಮೈಸೂರು ಹಾಗೂ ಕೊಡಗು ವಿಭಾಗದ 'ಗೆಜೆಟಿಯರಿ'ನ ಹೊಣೆಯನ್ನು ರೈಸ್ ಅವರಿಗೆ ವಹಿಸಿಕೊಡಲಾಯಿತು.

ವಿದ್ಯಾಇಲಾಖೆಯ ಕೆಲಸವೇ ಕೈತುಂಬಿದಾಗ, ಅತೀವ ಕಾಲ ಶ್ರಮವನ್ನು ಹಿಂಡುವ 'ಗೆಜೆಟಿಯರಿ'ನ ಕಾರ್ಯಭಾರ ರೈಸ್ ಅವರ ಮೈಮೇಲೆ ಬಿತ್ತು. ಆದರೆ ಅದನ್ನು ಎದುರಿಸಬಲ್ಲ ಸಾಮರ್ಥ್ಯವನ್ನೂ ಎದೆಗಾರಿಕೆಯನ್ನೂ ಅವರು ಪಡೆದವರಾಗಿದ್ದರು. ಯೋಜನೆ ಅವರ ಬಳಿ ಸಿದ್ಧವಾಗಿಯೇ ಇತ್ತು. ಡಾಕ್ಟರ್ ಹಂಟರ್ ಅವರೊಂದಿಗೆ ಚರ್ಚಿಸಿ ಕೆಲಸವನ್ನು ಆರಂಭಿಸಿದರು. ಎರಡು ವರ್ಷಗಳ ನಂತರ ಹಂಟರ್ ಇನ್ನೊಮ್ಮೆ ಬಂದಾಗ 'ಗೆಜೆಟಿಯರಿನ' ಕೆಲವು ಮುದ್ರಿತಭಾಗಗಳನ್ನು ನೋಡಿ, ಅಲ್ಲಿಯ ವಿಷಯ ಸಂಗ್ರಹದ ಮೌಲಿಕತೆಯನ್ನು ಕಂಡು ಬೆರಗಾದರು.

ಮೈಸೂರು ಗೆಜೆಟಿಯರ್ ಸರಕಾರದ ಪ್ರಕಟನೆಯಾಗಿದ್ದರೂ ಇನ್ನುಳಿದ ಪ್ರಕಟಣೆಗಳಿಗಿಂತ ಭಿನ್ನವಾದುದು. ವಿಷಯ ಸಂಗ್ರಹದ ರೀತಿ ಎಲ್ಲ ಪ್ರಾಂತಗಳಲ್ಲಿಯೂ ಒಂದೇ ಬಗೆಯಲ್ಲಿ ನಡೆದದ್ದು; ದೇಶದ ಪ್ರಾಕೃತಿಕ ಭೂವರ್ಣನೆ, ವನಸ್ಪತಿ ವಿಚಾರ, ಪ್ರಾಣಿಪ್ರಪಂಚ ಇವೆಲ್ಲ ಒಂದು ಕಡೆ; ಮಾನವೀಯ ವಂಶ ವಿಸ್ತಾರ, ಇತಿಹಾಸ, ಧರ್ಮ, ಭಾಷಾ – ಸಾಹಿತ್ಯ ಕಲೆ, ಉದ್ಯೋಗ, ಕೊನೆಯದಾಗಿ ಆಡಳಿತಕ್ರಮ ಇವೇ ಮೊದಲಾದ ವಿಷಯಗಳ ಬಗ್ಗೆ ಅಂಕಿ ಸಂಖ್ಯೆಗಳ ಆಧಾರದಿಂದ ಮಾಡಿದ ವಿವೇಚನೆ ಇನ್ನೊಂದು ಕಡೆ. ಇದು ಮೊದಲನೆಯ ಸಂಪುಟದ ವಿಷಯ. ಇನ್ನು ಎರಡನೆಯ ಸಂಪುಟದಲ್ಲಿ ಒಂದೊಂದು ಜಿಲ್ಲೆಯ ಸವಿಸ್ತರ ವರ್ಣನೆ ಇದೆ. ಸಾಮಾನ್ಯವಾಗಿ 'ಗೆಜೆಟಿಯರಿ'ನ ವಿಷಯ ಸಂಕಲನವು ಜಿಲ್ಲಾಧಿಕಾರಿಗಳು ಅಥವಾ ಅವರ ಸಹಾಯಕರಿಂದ ಆದದ್ದು. ಆದರೆ ಕಲ್ಲು–ಮಣ್ಣಿನಿಂದ ಕಲಾಕೃತಿ ನಿರ್ಮಿಸುವಂಥ ಸಿದ್ಧಿ ರೈಸ್ ಅವರ ಲೆಕ್ಕಣಿಕೆಯಲ್ಲಿದ್ದುದರಿಂದ ಈ 'ಗೆಜೆಟಿಯರ' ಜೀವಕಳೆ ತುಂಬಿ ನಿಂತಿದೆ; ಪುಟಪುಟಕ್ಕೂ ಅವರ ಪರಿಶ್ರಮ ವಿದ್ವತ್ತು ಮೂಡಿದೆ.

ಪ್ರಕಟವಾದ ಇಪ್ಪತ್ತು ವರ್ಷಗಳ ನಂತರ ಈ ಸಂಪುಟಗಳು ರೈಸ್ ಅವರಿಂದಲೇ ಪರಿಷ್ಕೃತವಾದದ್ದು ಕನ್ನಡಿಗರ ಇನ್ನೊಂದು ಸುಕೃತವೆನ್ನಬೇಕು. ಪ್ರತಿಯೊಂದು ರಂಗದಲ್ಲಿಯೂ ಬೆಳೆದು ನಿಂತ ಮೈಸೂರಿನ ಸೌಭಾಗ್ಯವನ್ನು ಅವರು ಪ್ರತ್ಯಕ್ಷವಾಗಿ ಕಂಡವರಾದುದರಿಂದ, ಇತಿಹಾಸ ಹಾಗೂ ಭಾಷಾಸಂಶೋಧನೆಯ ಕಾರ್ಯದಲ್ಲಿ ಬಹುಮುಖ್ಯವಾದ ಪಾತ್ರವನ್ನು ಅವರು ನಿರ್ವಹಿಸಿದವರಾದುದರಿಂದ ಈ ಪರಿಷ್ಕೃತ ಆವೃತ್ತಿ ಚೊಕ್ಕ ಚಿನ್ನವಾಗಿದೆ. ಸುಮಾರು ಎಪ್ಪತ್ತು ವರ್ಷಗಳ ಹಿಂದೆ ಅವರು ಕಂಡುಹಿಡಿದ ಐತಿಹಾಸಿಕ ಸಂಗತಿಗಳು ಇಂದಿಗೂ ಪ್ರಮಾಣಭೂತವಾಗಿವೆ; ಮಾತ್ರವಲ್ಲ, ನಾವು ಆ ಅಂಶಗಳಲ್ಲಿ ಹೇಳಿಕೊಳ್ಳುವಂಥ ಪ್ರಗತಿಯನ್ನು ಮುಂದೆ ಸಾಧಿಸಲು ಸಮರ್ಥರಾಗಿಲ್ಲ.

ವಿದ್ಯಾ ಇಲಾಖೆಯ ಮುಖ್ಯಾಧಿಕಾರಿಯಾಗಿ ಇಲ್ಲಿಯ ಪ್ರಾಥಮಿಕ ಶಿಕ್ಷಣದ ಆಸ್ತಿಭಾರಹಾಕಿ ತಮ್ಮ ದಕ್ಷತೆಯನ್ನು ಮೆರೆದ ರೈಸ್ ಅವರಿಗೆ ಹಿಡಿದ ಕೆಲಸವನ್ನು ಯಶಸ್ವಿಯಾಗಿ ಸಾಧಿಸುವ ವಿಚಕ್ಷಣತೆ ಜಾಯಮಾನವೇ ಆಗಿತ್ತು. ಕ್ರಿ.ಶ. ೧೮೮೧ರ ಜನಗಣನೆಯ ಮುಖ್ಯಾಧಿಕಾರಿಯಾಗಿ ಸಲ್ಲಿಸಿದ ವರದಿಯೂ, ಭಾರತ ಸರಕಾರದ ಆಜ್ಞೆಯ ಮೇರೆಗೆ ರಚಿಸಿದ ಪ್ರಾಚೀನ ಸಂಸ್ಕೃತ ಗ್ರಂಥಗಳ ನಾಮಾವಳಿಯೂ ಇದಕ್ಕೆ ನಿದರ್ಶನವಾಗಿವೆ. ಭಾರತ ಸರಕಾರದ ವಿದ್ಯಾಭ್ಯಾಸ ನಿಯೋಗದ (ಹಂಟರ್ ಕಮಿಶನ್) ಕಾರ್ಯದರ್ಶಿಯಾಗಿ ಮಾಡಿದ ಕೆಲಸವೂ ಮಹತ್ವದ್ದಾಗಿದೆ.

'ಗೆಜೆಟಿಯರಿ'ನ ಕೆಲಸ ಕೈಕೊಳ್ಳುವ ಮುನ್ನವೇ ಪರಿಶೋಧನೆಯ ಹೊಣೆ ಅವರ ಪಾಲಿಗೆ ಬಂದಿತ್ತು; ಭಾರತ ಸರಕಾರದಿಂದ ಈ ಕಾರ್ಯಕ್ಕೆ ನಿಯುಕ್ತರಾದ ಅವರು ಆ ಮೊದಲೇ ಹಲವು ಶಾಸನಗಳನ್ನು ಪರಿಶೋಧಿಸಿ ಪ್ರಕಟಿಸಿದ್ದರು. ಅವರು ಬೆಳಕಿಗೆ ತಂದ ಅಶೋಕನ ಶಾಸನಗಳು ಅವರ ಕೀರ್ತಿಯನ್ನು ವಿಸ್ತರಿಸಿದವು. ಶಾಸನಗಳ ಆಧಾರದಿಂದ ಇತಿಹಾಸದ ಮೇಲಿನ ಮುಸುಕನ್ನು ಹರಿದೊಗೆದುದಲ್ಲದೆ, ಸಾವಿರಾರು ಶಾಸನಗಳ ಮೂಲ ಅವತರಣಿಕೆ ಮತ್ತು ಅವುಗಳ ಭಾಷಾಂತರಗಳನ್ನು ಪ್ರಕಟಿಸಿ ಸಂಶೋಧಕರಿಗೆ ನಿಕ್ಷೇಪವನ್ನು ಒದಗಿಸಿದವರು ರೈಸ್ ಅವರು. ಮೈಸೂರು, ಕೊಡಗು, ಶ್ರವಣಬೆಳಗೊಳ ಮೊದಲಾದ ಶಾಸನಗಳು ಅವರ ಪರಿಶ್ರಮದ ಫಲವಾಗಿ ಬೆಳಕು ಕಂಡಿವೆ. 'ಎಪಿಗ್ರಾಫಿಕಾ ಕರ್ನಾಟಿಕಾ'ದ ಹಲವು ಸಂಪುಟಗಳು ಅವರ ಕಾರ್ಯಕ್ಷಮತೆಯನ್ನು ಎತ್ತಿ ತೋರಿಸುತ್ತಿವೆ.

ಕ್ರಿ.ಶ. ೧೮೮೪ರಲ್ಲಿ ಮೈಸೂರು ಪ್ರಾಚ್ಯವಿದ್ಯಾಇಲಾಖೆ ಸ್ಥಾಪಿತವಾದಾಗ ರೈಸ್ ಅವರೇ ಡೈರೆಕ್ಟರರಾಗಿ ಬಂದು ಇಪ್ಪತ್ತು ವರ್ಷಗಳವರೆಗೆ ಆ ಸ್ಥಾನವನ್ನು ಅಲಂಕರಿಸಿದರು. 'ಗೆಜೆಟಿಯರಿ'ನಂತೆ ಮೈಸೂರು ಪ್ರಾಚ್ಯವಿದ್ಯಾ ಇಲಾಖೆಯೂ, ವಿದ್ವತ್ತು ಹಾಗೂ ದಕ್ಷತೆಯ ಪ್ರತೀಕವಾಗಿ ಭಾರತದಲ್ಲಿಯೂ ವಿದೇಶಗಳಲ್ಲಿಯೂ ವಿಖ್ಯಾತವಾಯಿತು.

ಹೆಸರಿಸಬೇಕಾದ ಅವರ ಇತರ ಕಾರ್ಯಗಳಲ್ಲಿ ಕನ್ನಡ ಕವಿಚರಿತ್ರಕಾರರಾದ ನರಸಿಂಹಾಚಾರ್ಯರನ್ನು ಬೆಳಕಿಗೆ ತಂದದ್ದೂ ಒಂದು. ನರಸಿಂಹಾಚಾರ್ಯರು ಸಹಾಯಕರಾಗಿ ಪ್ರಾಚ್ಯವಿದ್ಯಾ ಇಲಾಖೆಗೆ ಬರುವ ಮೊದಲೇ ಅವರ ನಿಷ್ಠೆಯನ್ನೂ, ಸಂಶೋಧನ ಸಾಮರ್ಥ್ಯವನ್ನೂ ರೈಸ್ ಅವರು ಗುರುತಿಸಿದ್ದರು; 'ಗೆಜೆಟಿಯರಿ'ನ ದ್ವಿತೀಯ ಆವೃತ್ತಿಯಲ್ಲಿ ಕವಿಚರಿತ್ರಕಾರನ ಸಂಶೋಧನ ಸಾಮಗ್ರಿಯನ್ನೂ ಬಳಸಿಕೊಳ್ಳಲಾಗಿತ್ತು. ಆರಂಭದಿಂದಲೂ ತಮ್ಮ ಕಾರ್ಯದಲ್ಲಿ ರೈಸ್ ಅವರಿಂದ ದೊರೆತ ಪ್ರೋತ್ಸಾಹ ಮತ್ತು ಮಾರ್ಗದರ್ಶನವನ್ನು ಆಚಾರ್ಯರು ಕೃತಜ್ಞತೆಯಿಂದ ಸ್ಮರಿಸಿದರು; ಹಾಗೂ ತಮ್ಮ ಕೃತಿಗಳಿಂದ ರೈಸ್ ಅವರನ್ನು ಮಾತ್ರವಲ್ಲ, ಅಖಿಲ ಕನ್ನಡಿಗರನ್ನೂ ಮೆಚ್ಚಿಸಿದರು.

ನಲವತ್ತೈದು ವರ್ಷಗಳ ವಾಸ್ತವ್ಯದ ಕೊನೆಗೆ ಸ್ವದೇಶಕ್ಕೆ ಹಿಂತಿರುಗುವಾಗಲೂ ರೈಸ್ ಅವರು ತಮ್ಮ ಮನಸ್ಸನ್ನು ಮೈಸೂರಲ್ಲಿಯೇ ಬಿಟ್ಟರು. ಒಂದೂವರೆಸಾವಿರ ವರ್ಷಗಳ ಅಖಂಡಇತಿಹಾಸವನ್ನು ಹೊರಗೆಡವಿ ಕನ್ನಡಿಗರ ಸ್ವರೂಪದರ್ಶನ ಮಾಡಿಕೊಟ್ಟರೂ ತಮ್ಮ ಕರ್ತವ್ಯಭಾರ ಮುಗಿದಂತೆ ಅವರಿಗೆ ಅನಿಸಲಿಲ್ಲ. ಕನ್ನಡ ಭಾಷೆಯ ಪ್ರಾಚೀನತೆಯನ್ನು ಪ್ರಸ್ತಾಪಿಸಿ, ಹಳಗನ್ನಡದ ಹಲವು ಕಾವ್ಯಗಳನ್ನು ಪ್ರಕಟಿಸಿ ತಮ್ಮ ಅನನ್ಯ ನಿಷ್ಠೆಯನ್ನು ವ್ಯಕ್ತಪಡಿಸಿದಾಗಲೂ ಅವರು ತೃಪ್ತರಾಗಲಿಲ್ಲ.

ಮುಪ್ಪು ಅಡರಿ ದೇಹ ಸೋತಾಗಲೂ ಮೈಸೂರು ಹಾಗೂ ಕನ್ನಡ ಭಾಷೆಯನ್ನು ಮರೆಯುವುದು ಅವರಿಗೆ ಸಾಧ್ಯವಾಗಲಿಲ್ಲ. ಕವಿಚರಿತ್ರೆಯ ಸಂಪುಟಗಳನ್ನು ಇಂಗ್ಲಿಷಿಗೆ ಭಾಷಾಂತರಿಸುವ ತಮ್ಮ ಹಂಬಲವನ್ನು ಅವರು ವ್ಯಕ್ತಪಡಿಸಿದ್ದರು; ಪ್ರಾಚ್ಯವಿದ್ಯಾ ಇಲಾಖೆಯ ಪ್ರಗತಿಯನ್ನೂ, ಕವಿಚರಿತ್ರಕಾರರ ಸಂಶೋಧನಾಕಾರ್ಯವನ್ನೂ ಆಸಕ್ತಿಯಿಂದ ಕೇಳಿ ತಿಳಿದುಕೊಳ್ಳುತ್ತಿದ್ದರು. ವ್ಯಾಧಿಯಿಂದ ಕಾಲುಗಳನ್ನು ಕಳೆದುಕೊಂಡು ಪರಾವಲಂಬಿಯಾಗಿ ಒಂಬತ್ತು ವರ್ಷ ನರಳಿದರೂ 'ಕನ್ನಡ, ಕನ್ನಡ' ಎಂದೇ ಕನವರಿಸಿದ ಆ ಜೀವ ಕನ್ನಡ ನಾಡು-ನುಡಿಯ ಸಂಪರ್ಕಕ್ಕಾಗಿ ಹಾತೊರೆಯುತ್ತಿತ್ತು. ದಿವಂಗತ ಎಸ್.ಬಿ. ಶಾಸ್ತ್ರಿಗಳು ತಮ್ಮ ವಿದೇಶ ಪ್ರವಾಸದಲ್ಲಿ ರೈಸ್‌ರನ್ನು ಕಾಣಲು ಹೋದಾಗ ಅವರ ಹೃದಯ ತುಂಬಿ ಬಂದಿತು; ಶಾಸ್ತ್ರಿಗಳು ಇಂಗ್ಲಿಷಿನಲ್ಲಿ ಮಾತಾಡಲು ಆರಂಭಿಸಿದಾಗ, "ಊಂ-ಹೂಂ, ಬೇಡ. ಕನ್ನಡ, ನನ್ನ ಕನ್ನಡದಲ್ಲಿ ಮಾತಾಡಿರಿ!" ಎಂದರಂತೆ.

ಮುಂದಿನ ಜನ್ಮದಲ್ಲಿಯಾದರೂ ಕರ್ನಾಟಕದಲ್ಲಿ ಜನ್ಮತಾಳಬೇಕೆಂಬ ಹಂಬಲವೇನೋ ಅವರಿಗೆ!

**ಕೃತಿಗಳು**

Gazzetteer of Mysore and Coorg, Mysore Inscriptions, Find of Roman coins near Bangalore, Edicts of Asoka in Mysore, Coorg Inscriptions, Inscriptions at Sravana Belgola, Inscriptions in Mysore District, ಕರ್ಣಾಟಕ ಭಾಷಾಭೂಷಣ (ಪರಿಷ್ಕೃತ), ಕರ್ಣಾಟಕ ಶಬ್ದಾನುಶಾಸನ -ಇತ್ಯಾದಿ.

■

# ದಿವಾನ್ ಬಹದ್ದೂರ್ ರಾಜಸಭಾಭೂಷಣ ಡಾ. ಕೆ.ಪಿ. ಪುಟ್ಟಣ್ಣಶೆಟ್ಟರು

ಸ್ವಾತಂತ್ರ್ಯ ಪೂರ್ವದಲ್ಲಿ ಕರ್ನಾಟಕದ ಏಕೀಕರಣಕ್ಕೆ ಮೊದಲು ಮೈಸೂರು ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರ್ (ಕ್ರಿ.ಶ. ೧೯೦೨-೧೯೪೦) ಅವರ ಕಾಲದಲ್ಲಿ ಆಡಳಿತ ನಡೆಸಿದವರಲ್ಲಿ ಸರ್ ಕೆ.ಪಿ. ಪುಟ್ಟಣ್ಣಶೆಟ್ಟರು ಪ್ರಮುಖರು. ಇವರು ಧರ್ಮಪುರಿ ಜಿಲ್ಲೆಯ ಹೊಸೂರಿನಲ್ಲಿ ೨೧.೪.೧೮೫೬ರಲ್ಲಿ ಜನಿಸಿದರು. ಬೆಂಗಳೂರಿನ ವೆಸ್ಲಿಯೆನ್ ಮಿಷನ್ ಹೈಸ್ಕೂಲಿನಲ್ಲಿಯೂ, ತರುವಾಯ ಸೆಂಟ್ರಲ್ ಕಾಲೇಜಿನಲ್ಲಿಯೂ ವ್ಯಾಸಂಗಮಾಡಿದರು. ಮೈಸೂರು ಸರಕಾರದಲ್ಲಿ ಸಣ್ಣ ಹುದ್ದೆಯಿಂದ ಪ್ರಾರಂಭಿಸಿ ಅತ್ಯುನ್ನತ ಹುದ್ದೆಗಳನ್ನು ಅಲಂಕರಿಸಿ ಮಹತ್ತರ ಲೋಕೋತ್ತರ ಕಾರ್ಯಗಳನ್ನು ಮಾಡಿದ್ದಾರೆ.

ಸರ್ ಕೆ.ಪಿ. ಪುಟ್ಟಣ್ಣಶೆಟ್ಟರು ಸ್ವಾತಂತ್ರ್ಯಪೂರ್ವದಲ್ಲಿ ಇಂಗ್ಲೀಷರ ಆಳ್ವಿಕೆಯಲ್ಲಿ ನಾಡು-ನುಡಿಗಳಿಗೆ ಮಹತ್ತರ ಸೇವೆಯನ್ನು ಸಲ್ಲಿಸಿದ ಮಹನೀಯರು. ಬ್ರಿಟಿಷ್ ಉನ್ನತ ಅಧಿಕಾರಿಗಳ ಮೆಚ್ಚುಗೆಯನ್ನು ಪಡೆದಿದ್ದ ಶ್ರೀನಾಲ್ವಡಿ ಕೃಷ್ಣರಾಜರ ಆಡಳಿತ ಕ್ರಮವನ್ನು ಮಹಾತ್ಮಗಾಂಧಿಯವರೂ ಮೆಚ್ಚಿಕೊಂಡಿದ್ದರು.

ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯಲ್ಲಿ ಪುಟ್ಟಣ್ಣಶೆಟ್ಟರು ಪ್ರಮುಖ ಪಾತ್ರವನ್ನು ವಹಿಸಿದ್ದರು. ಸರ್ ಎಂ. ವಿಶ್ವೇಶ್ವರಯ್ಯ, ಎಚ್.ವಿ. ನಂಜುಂಡಯ್ಯ, ಕರ್ಪೂರ ಶ್ರೀನಿವಾಸರಾವ್, ಆಲೂರ ವೆಂಕಟರಾವ್ ಮುಂತಾದ ಮಹನೀಯರ ಮಹತ್ತರ ಪ್ರಯತ್ನದ ಫಲವಾಗಿ ಕನ್ನಡ ಸಾಹಿತ್ಯ ಪರಿಷತ್ತನ್ನು ೧೯೧೫ರಲ್ಲಿ ಸ್ಥಾಪಿಸಿದರು. ಅಷ್ಟೇ ಅಲ್ಲ ಈ ಸಂಸ್ಥೆಗೆ ಉದಾರವಾದ ಆರ್ಥಿಕ ನೆರವನ್ನೂ ನೀಡಿದ್ದಾರೆ.

ಕೆ.ಪಿ. ಪುಟ್ಟಣ್ಣಶೆಟ್ಟರು ೧೯೧೧ರಲ್ಲಿ ಎಕ್ಸಿಕ್ಯೂಟಿವ್ ಕೌನ್ಸಿಲ್ ಸದಸ್ಯರಾಗಿ ಖ್ಯಾತಿಯನ್ನು ಗಳಿಸಿದರು. ಅವರಿಗೆ ಭಾರತ ಸರಕಾರದಿಂದ "ದಿವಾನ್ ಬಹದ್ದೂರ್" ಪ್ರಶಸ್ತಿಯನ್ನು ನಾಲ್ವಡಿ ಕೃಷ್ಣರಾಜ ಒಡೆಯರಿಂದ 'ರಾಜಸಭಾಭೂಷಣ' ಪ್ರಶಸ್ತಿಯನ್ನು, ೧೯೧೭ರಲ್ಲಿ ಸಿ.ಐ.ಇ. ಸನ್ಮಾನವೂ, ೧೯೨೫ರಲ್ಲಿ ಸರ್ ಎಂಬ ಪ್ರಶಸ್ತಿಯೂ, ೧೯೩೬ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಎಲ್.ಎಲ್.ಡಿ. ಗೌರವ ಪ್ರಶಸ್ತಿ ಇವುಗಳನ್ನು ನೀಡಲಾಗಿದೆ.

೧೯೨೧ರಲ್ಲಿ ಚಿಕ್ಕಮಗಳೂರಿನಲ್ಲಿ ನಡೆದ ಏಳನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಅನೇಕ ಮಹತ್ತರ ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ. ೧೯೩೬ರಲ್ಲಿ ಬೆಂಗಳೂರಿನಲ್ಲಿ ನಡೆದ ವಿಶೇಷ ಸಾಹಿತ್ಯೋತ್ಸವದ ಪ್ರಾರಂಭವನ್ನು ನಡೆಸಿಕೊಟ್ಟಿದ್ದಾರೆ.

ಪುಟ್ಟಣ್ಣಶೆಟ್ಟರು ೧೯೦೭ರಲ್ಲಿ ಸೊಲ್ಲಾಪುರದಲ್ಲಿ ನಡೆದ ವೀರಶೈವ ಮಹಾಸಭೆಯ ಅಧಿವೇಶನದ ಅಧ್ಯಕ್ಷತೆಯನ್ನು, ೧೯೧೭ರಲ್ಲಿ ದಾವಣಗೆರೆಯಲ್ಲಿ ನಡೆದ ಅಧಿವೇಶನದ ಅಧ್ಯಕ್ಷತೆಯನ್ನು ವಹಿಸಿ ಸಾರ್ಥಕ ಉಪನ್ಯಾಸಗಳನ್ನು ನೀಡಿದ್ದಾರೆ. ಸ್ವಧರ್ಮದ ಆಚಾರ-ವಿಚಾರಗಳಲ್ಲಿ ಪುಟ್ಟಣ್ಣಶೆಟ್ಟರು ಅತೀವ ನಿಷ್ಠೆಯುಳ್ಳವರಾಗಿದ್ದರು. ಗುರುಲಿಂಗ ಜಂಗಮ ಸೇವೆಯಲ್ಲಿ ವಿಶೇಷವಾದ ಆಸಕ್ತಿಯನ್ನು ಹೊಂದಿದ್ದರು.

ಸಂಸ್ಕೃತ ಭಾಷೆಯ "ಶ್ರೀಕರಭಾಷ್ಯ", "ಶಿವಸಹಸ್ರನಾಮ ಭಾಷ್ಯ" ಇವುಗಳ ಪ್ರಕಟಣೆಗೂ ಸಂಸ್ಕೃತ ಭಾಷೆಗಳ ಅಭಿವೃದ್ಧಿಗೂ ವಿಶೇಷ ನೆರವನ್ನು ನೀಡಿದ್ದಾರೆ. ಹುಬ್ಬಳ್ಳಿಯ ಮೂರುಸಾವಿರ ಮಠದ ಶ್ರೀಗಳವರಿಗೂ ಅಗತ್ಯ ನೆರವನ್ನು ಒದಗಿಸಿದ್ದಾರೆ.

ಗ್ರಾಮಾಂತರ ಜನರಿಗೂ ಕನ್ನಡ ಭಾಷೆಯ ಮೂಲಕ ಜ್ಞಾನಪ್ರಸಾರವಾಗಬೇಕು ಎಂಬ ಸದುದ್ದೇಶದಿಂದ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗಕ್ಕೆ ಒಂದು ಪುದುವಟ್ಟನ್ನು ಇಟ್ಟು ಪ್ರಚಾರೋಪನ್ಯಾಸ ಮೂಲಕ ಉಪಯುಕ್ತ ಹೊತ್ತಗೆಗಳನ್ನು ತರಲು ಕಾರಣಕರ್ತರಾಗಿದ್ದಾರೆ.

೧೯೧೩ ರಿಂದ ೧೯೨೦ ರವರೆಗೆ ಬೆಂಗಳೂರಿನ ಪೌರಸಭಾಧ್ಯಕ್ಷರಾಗಿ ಚಿರಸ್ಮರಣೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಸುಮಾರು ಐವತ್ತು ವರ್ಷಗಳಿಗೂ ಹೆಚ್ಚು ಕಾಲ ಅದರ ಸಂಬಂಧವನ್ನು ಹೊಂದಿದ್ದರು. ಅವರು ಬೆಂಗಳೂರಿನ ಬಗೆಗೆ ಹೊಂದಿದ್ದ ಅಪಾರ ಪ್ರೀತಿಯ ಕುರುಹಿನ ಕಾಣಿಕೆಯೇ ಎಂಬಂತೆ ಬೆಂಗಳೂರು ಪುರಭವನ ಅವರ ಹೆಸರಿನಲ್ಲಿ ನಿರ್ಮಾಣವಾಯಿತು. ೧೯೩೩ ಮಾರ್ಚ್ ೬ ರಂದು ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ್ ಅವರು ಶಂಕುಸ್ಥಾಪನೆ ಮಾಡಿದರು. ೧೯೩೫ ಸೆಪ್ಟೆಂಬರ್ ೧೧ ರಂದು ಯುವರಾಜರಾದ ಶ್ರೀಕಂಠೀರವ ನರಸರಾಜ ಒಡೆಯರ್ ಅವರಿಂದ ಉದ್ಘಾಟನೆಯಾಯಿತು.

ಸರ್ ಕೆ.ಪಿ. ಪುಟ್ಟಣ್ಣ ಶೆಟ್ಟರು ಲಿಂಗೈಕ್ಯರಾಗುವುದಕ್ಕೆ ಕೆಲವು ದಿನಗಳ ಮೊದಲು ಬೆಂಗಳೂರಲ್ಲಿ ಬಡವಿದ್ಯಾರ್ಥಿಗಳಿಗಾಗಿ "ವೀರಶೈವ ಉಚಿತ ಪ್ರಸಾದ ನಿಲಯ"ವನ್ನು ಅಂದಿನ ದಿವಾನರಾಗಿದ್ದ ಸರ್ ಇಸ್ಮಾಯಿಲ್ ಅವರಿಂದ ಉದ್ಘಾಟನೆಯನ್ನು ೧೯೩೮ರಲ್ಲಿ ಮಾಡಿಸಿದರು. ಈ ಉಚಿತ ವಿದ್ಯಾರ್ಥಿನಿಲಯದಲ್ಲಿ ವ್ಯಾಸಂಗ ಮಾಡಿದವರಲ್ಲಿ ನಾನೂ ಒಬ್ಬ.

ಪುಟ್ಟಣ್ಣಶೆಟ್ಟರ ಧರ್ಮಪತ್ನಿಯವರಾದ ಶ್ರೀಮತಿ ಪಾರ್ವತಮ್ಮನವರೂ ಸಹ ಸಮಾಜ ಸೇವೆಯಲ್ಲಿ ಆಸಕ್ತರಾಗಿ ಬೆಂಗಳೂರಿನ ಚಾಮರಾಜಪೇಟೆಯಲ್ಲಿ 'ಶಾರದಾ ಸ್ತ್ರೀ ಸಮಾಜ'ವನ್ನು ಸ್ಥಾಪಿಸಿ ತನ್ಮೂಲಕ ಸಮಾಜಕ್ಕೆ ಸೇವೆಯನ್ನು ಸಲ್ಲಿಸಿದ್ದಾರೆ.

ಕನ್ನಡ ನಾಡಿನಲ್ಲಿ ಹುಟ್ಟಿಬೆಳೆದು ಮಾನವೀಯ ಮೌಲ್ಯಗಳ ಸಂರಕ್ಷಣೆಗಾಗಿ ಲೋಕೋತ್ತರ ಕಾರ್ಯಗಳನ್ನು ಮಾಡಿರುವ ದಿವಾನ್ ಬಹದ್ದೂರ್ ರಾಜಸಭಾ ಭೂಷಣ ಸಿ.ಐ.ಇ. ಸರ್, ಎಲ್‌ಎಲ್‌ಡಿ ಕೆ.ಪಿ. ಪುಟ್ಟಣ್ಣಶೆಟ್ಟರು ಚಿರಸ್ಮರಣೀಯರಾಗಿದ್ದಾರೆ. ಅವರ ಎಲ್ಲ ಸಾಧನೆ ಸಿದ್ಧಿಗಳ ಶಾಶ್ವತ ಸಂಕೇತವೆಂಬಂತೆ ಕೆ.ಪಿ. ಪುಟ್ಟಣ್ಣಶೆಟ್ಟಿ ಪುರಭವನ ರಾರಾಜಿಸುತ್ತಿದೆ.

■

# ಕರ್ನಾಟಕದ ಶತಾಯುಷಿ ನಿಟ್ಟೂರು ಶ್ರೀನಿವಾಸರಾಯರು

"ಶತಮಾನಂ ಭವತಿ ಶತಾಯುಃ ಪುರುಷೇವೇಂದ್ರಿಯೇ ಪ್ರತಿಷ್ಠತಿ" ಎಂಬ ಆರ್ಯೋಕ್ತಿ ಇದೆ. ಹಿರಿಯರು ಕಿರಿಯರಿಗೆ ನೂರುವರ್ಷ ಬದುಕಿ ಬಾಳು ಎಂದು ಆಶೀರ್ವದಿಸುವುದು ಹಿಂದಿನಿಂದ ರೂಢಿಯಲ್ಲಿ ಬಂದಿದೆ. ನಿಟ್ಟೂರು ಶ್ರೀನಿವಾಸರಾಯರ ಹಿರಿಯರು ಅವರಿಗೆ ಮಾಡಿದ ಈ ಆಶೀರ್ವಾದದ ಫಲವಾಗಿಯೇ ಶ್ರೀಯುತರು ನೂರನೆಯ ವರ್ಷಕ್ಕೆ ಕಾಲಿಟ್ಟಿದ್ದಾರೆ. ಕೇವಲ ಆಶೀರ್ವಾದವೊಂದೇ ಇದಕ್ಕೆ ಕಾರಣವಲ್ಲ. ವ್ಯಕ್ತಿಯ ರೀತಿ-ನೀತಿ, ಆಚಾರ-ವಿಚಾರ, ಸಂಪ್ರದಾಯ-ಸಂಸ್ಕಾರಗಳೂ ಶತಾಯುಗಳಾಗುವುದಕ್ಕೆ ಪ್ರಮುಖ ಕಾರಣಗಳಾಗಿವೆ. ನಿಟ್ಟೂರು ಶ್ರೀನಿವಾಸರಾಯರ ಪ್ರಗತಿಗೆ ಸಂಪ್ರದಾಯಬದ್ಧ ಕಟ್ಟುನಿಟ್ಟು ನಿಯಮಗಳ ಪರಿಪಾಲಕರಾದ ತಂದೆತಾಯಿಗಳೂ ಪ್ರಕಾಂಡ ಪಂಡಿತರೂ ಉನ್ನತ ಹುದ್ದೆಯಲ್ಲಿದ್ದ ಬಂಧುಬಾಂಧವರೂ ಗುರುಹಿರಿಯರೂ ಇದಕ್ಕೆ ಕಾರಣಕರ್ತರಾಗಿದ್ದಾರೆ. ಈ ಎಲ್ಲ ಹಿರಿಯರ ಮೇಧಾವಿಗಳ ಸಮಸ್ತ ಸದ್ಗುಣಗಳನ್ನು ಗರ್ಭೀಕರಿಸಿಕೊಂಡು ಉತ್ತಮ ನಡೆ-ನುಡಿ, ಆಚಾರ-ವಿಚಾರಗಳಿಂದ ಉತ್ತುಂಗ ಶಿಖರಕ್ಕೇರಿದವರು ಶ್ರೀನಿವಾಸರಾಯರು. ಅವರ ನಯವಿನಯ, ಸರಳ ಸಜ್ಜನಿಕೆ ಅಪ್ರತಿಮ ದೇಶಭಕ್ತಿ ಅವರನ್ನು ಒಬ್ಬ ಆದರ್ಶವ್ಯಕ್ತಿಯನ್ನಾಗಿ ರೂಪಿಸಿದವು.

ಶ್ರೀನಿವಾಸರಾಯರ ತಂದೆಯವರು ಶಾಮಣ್ಣನವರು ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರು. ಅವರು ಶಿಸ್ತಿನ ಸಿಪಾಯಿಗಳೆಂದೇ ಹೆಸರು ಗಳಿಸಿದ್ದರು. ಸಂಪ್ರದಾಯ ನಿಯಮಗಳನ್ನು ಕಟ್ಟುನಿಟ್ಟಾಗಿ ಪರಿಪಾಲಿಸುತ್ತಿದ್ದರು. ಅಷ್ಟೇ ಅಲ್ಲ, ಮಿಗಿಲಾದ ದೇಶಭಕ್ತರೂ ಆಗಿದ್ದರು. ಇವರ ಹೆಂಡತಿ ಸೀತಮ್ಮನವರು. ಸೀತಮ್ಮನವರ ಅಣ್ಣಂದಿರಲ್ಲಿ ಒಬ್ಬರಾದ ಪ್ರೊ. ಹಿರಿಯಣ್ಣನವರು ಭಾರತೀಯ ತತ್ವಶಾಸ್ತ್ರದಲ್ಲಿ ಪ್ರಖ್ಯಾತ ವಿದ್ವಾಂಸರು. ಮತ್ತೊಬ್ಬ ಅಣ್ಣ ಮೈಸೂರು ದಿವಾನರಾಗಿದ್ದ ಎಂ.ಎನ್. ಕೃಷ್ಣರಾಯರು. ಒಬ್ಬ ತಮ್ಮ ಡಿ.ವಿ.ಜಿ. ಅವರಿಗೆ ಅಚ್ಚುಮೆಚ್ಚಿನವರಾಗಿದ್ದ ಸೀತಾರಾಮಯ್ಯನವರು. ಇಂತಹ ಸುಸಂಸ್ಕೃತ ವಿದ್ಯಾವಂತ ಮನೆತನದ ಸೀತಮ್ಮ ಮತ್ತು ಶ್ಯಾಮಣ್ಣನವರ ಸುಪುತ್ರರೇ ಶ್ರೀನಿವಾಸರಾಯರು. ಇವರು ದಿನಾಂಕ ೨೪.೮.೧೯೦೩ರಲ್ಲಿ ಬೆಂಗಳೂರಲ್ಲಿ ಜನ್ಮತಾಳಿದರು.

ಶ್ಯಾಮಣ್ಣನವರು ಸೇವೆ ಸಲ್ಲಿಸುತ್ತಿದ್ದ ಚಳ್ಳಕೆರೆ ಮೊದಲಾದ ಊರುಗಳಲ್ಲಿ ಶ್ರೀನಿವಾಸರಾಯರ ಪ್ರಾಥಮಿಕ ವಿದ್ಯಾಭ್ಯಾಸ ನಡೆಯಿತು. ಅವರ ಪ್ರೌಢಶಾಲಾ ವಿದ್ಯಾಭ್ಯಾಸ ಶಿವಮೊಗ್ಗದಲ್ಲಿ ಆಯಿತು. ಇಲ್ಲಿ ಉಪಾಧ್ಯಾಯರಾಗಿದ್ದ ಎಂ.ಆರ್. ಶ್ರೀನಿವಾಸಮೂರ್ತಿಗಳು ಶ್ರೀನಿವಾಸರಾಯರ ಅಚ್ಚುಮೆಚ್ಚಿನ ಗುರುಗಳಾಗಿದ್ದರು. ಅವರ ಬಗೆಗೆ ಅಪಾರ ಗೌರವಾದರಗಳನ್ನು ಇಂದಿಗೂ ಉಳಿಸಿಕೊಂಡದ್ದಾರೆ. ತರುವಾಯ ಬೆಂಗಳೂರಿನ ಕೊಲಿಜಿಯೇಟ್ ಹೈಸ್ಕೂಲನ್ನು ಸೇರಿ ವ್ಯಾಸಂಗವನ್ನು ಮುಂದುವರಿಸಿದರು. ಕೊನೆಗೆ ಸೆಂಟ್ರಲ್ ಕಾಲೇಜನ್ನು ಸೇರಿ ಬಿ.ಎಸ್ಸಿ ಪದವಿಯನ್ನು ಪಡೆದುಕೊಂಡರು. ಅದಾದ ಮೇಲೆ ಮದರಾಸಿನಲ್ಲಿ ಬಿ.ಎಲ್. ಪದವಿಯನ್ನು ಪಡೆದು ಬಂದರು. ಶ್ರೀಯುತರು ಬಿ.ಎಸ್ಸಿ ಮುಗಿಸುತ್ತಿರುವಾಗಲೇ ಅವರ ಸೋದರಮಾವನವರ ಮಗಳಾದ ಪದ್ಮಮ್ಮ ಅವರೊಂದಿಗೆ ವಿವಾಹವಾಗಿತ್ತು.

ನಿಟ್ಟೂರು ಶ್ರೀನಿವಾಸರಾಯರು ಸೆಂಟ್ರಲ್‌ಕಾಲೇಜಿನಲ್ಲಿ ಓದುತ್ತಿದ್ದಾಗಲೇ ಅಲ್ಲಿಯ ಕರ್ನಾಟಕಸಂಘದ ಸೇವೆಗೆ ತಮ್ಮನ್ನು ತೊಡಗಿಸಿಕೊಂಡರು. ಸೆಂಟ್ರಲ್‌ಕಾಲೇಜಿನ ಕರ್ಣಾಟಕಸಂಘ ೧೯೧೮ರಲ್ಲಿ ಪ್ರಾರಂಭವಾಯಿತು. ಇದು ರಾಜ್ಯದಲ್ಲೇ

ಮೊಟ್ಟಮೊದಲನೆಯದಾಗಿತ್ತು. ಈ ಸಂಘ ಹೊರತರುತ್ತಿದ್ದ ಪ್ರಬುದ್ಧ ಕರ್ನಾಟಕ ಅದರ ಜೀವನಾಡಿಯಾಗಿತ್ತು. ಈ ಪತ್ರಿಕೆಯ ಮಾರಾಟ ಮತ್ತು ಚಂದವಸೂಲಿಯಲ್ಲಿ ಶ್ರೀನಿವಾಸರಾಯರು ಪ್ರಮುಖಪಾತ್ರ ವಹಿಸಿದ್ದರು.

ಬಿ.ಎಸ್ಸಿ., ಬಿ.ಎಲ್. ಮುಗಿಸಿದ್ದ ಶ್ರೀನಿವಾಸರಾಯರು ಬೆಂಗಳೂರಿನ ಶಂಕರನಾರಾಯಣರಾಯರ ಕಛೇರಿಯಲ್ಲಿ ೧೯೨೦ರಲ್ಲಿ ವಕೀಲಿವೃತ್ತಿಯನ್ನು ಪ್ರಾರಂಭಿಸಿದರು. ಈ ವೃತ್ತಿಯಲ್ಲಿ ಗಣನೀಯ ಪ್ರಗತಿಯನ್ನು ಸಾಧಿಸಿದ ಶ್ರೀನಿವಾಸರಾಯರು ವಕೀಲರ ಸಂಘದ ಮುಖ್ಯಸ್ಥರೂ ಆದರು. ಅದೇ ಅಲ್ಲದೆ ೧೯೫೫ರಲ್ಲಿ ಅಡ್ವೊಕೇಟ್ ಜನರಲ್ ಆಗಿಯೂ ನೇಮಕಗೊಂಡರು. ಜೊತೆಗೆ ೧೯೫೫ರಲ್ಲಿ ಕರ್ನಾಟಕ ಸರಕಾರದ ಉಚ್ಛನ್ಯಾಯಾಲಯದ ನ್ಯಾಯಮೂರ್ತಿಗಳಾಗಿ ನೇಮಕಗೊಂಡದ್ದಲ್ಲದೆ ೧೯೬೧ರಲ್ಲಿ ಮುಖ್ಯನ್ಯಾಯಾಧೀಶರಾಗಿಯೂ ಅಧಿಕಾರ ವಹಿಸಿಕೊಂಡರು. ಇದೇ ಅವಧಿಯಲ್ಲಿ ಕರ್ನಾಟಕ ರಾಜ್ಯದ ರಾಜ್ಯಪಾಲರಾಗಿಯೂ ಸೇವೆಯನ್ನು ಸಲ್ಲಿಸಿ ೧೯೬೩ರಲ್ಲಿ ನಿವೃತ್ತರಾದರು. ಅದಾದ ಮೇಲೆ ೧೯೬೪ರಲ್ಲಿ ಪ್ರಥಮ ವಿಜಿಲೆನ್ಸ್ ಕಮೀಷನರಾಗಿ ನೇಮಕಗೊಂಡು ೧೯೬೮ರಲ್ಲಿ ನಿವೃತ್ತರಾದರು. ಇದೇ ಅಲ್ಲದೆ ಸಂತಾನಂ ಸಮಿತಿಯ ಶಿಫಾರಸ್ಸಿಗೆ ಅನುಸಾರವಾಗಿ ಕೇಂದ್ರೀಯ ಭ್ರಷ್ಟಾಚಾರ ನಿರ್ಮೂಲನ ಸಮಿತಿಯ ಆಯುಕ್ತರಾಗಿಯೂ ಸೇವೆಯನ್ನು ಸಲ್ಲಿಸಿದ್ದಾರೆ.

ನಿಟ್ಟೂರು ಶ್ರೀನಿವಾಸರಾಯರು ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರು. ಅವರು ಗಾಂಧೀಜಿಯನ್ನು ಸಂದರ್ಶಿಸಿದ್ದರು. ಗಾಂಧೀಜಿ ಪ್ರಭಾವ ಅವರ ಮೇಲೆ ತುಂಬ ಪರಿಣಾಮವನ್ನು ಬೀರಿತು. ಇದರ ಪರಿಣಾಮವಾಗಿ ಶ್ರೀನಿವಾಸರಾಯರೂ ಅವರ ಶ್ರೀಮತಿ ಅವರೂ ಗಾಂಧೀಜಿ ಅವರ ಜೀವನಚರಿತ್ರೆಯನ್ನು ಕನ್ನಡಕ್ಕೆ ಅನುವಾದಿಸಿದರು. ಅಂತೆಯೇ ಭಗವದ್ಗೀತೆಯ ಅನಾಸಕ್ತಿಯೋಗವನ್ನು ಕನ್ನಡಕ್ಕೆ ಪರಿವರ್ತಿಸಿದರು.

ಕನ್ನಡ ಪ್ರಕಾಶನ ಸಾಹಿತ್ಯ ಚರಿತ್ರೆಯಲ್ಲಿ ಶ್ರೀನಿವಾಸರಾಯರ ಹೆಸರು ಶಾಶ್ವತವಾಗಿ ಉಳಿದಿರುವುದು ಅವರು ೧೯೨೮ರಲ್ಲಿ ಪ್ರಾರಂಭಿಸಿದ ಸತ್ಯಶೋಧನ ಪ್ರಕಾಶನ ಮಂದಿರ ಮತ್ತು ಪುಸ್ತಕಾಲಯದಿಂದ. ಈ ಪ್ರಕಾಶನ ಸಂಸ್ಥೆಯಿಂದ ಪ್ರವರ್ಧಮಾನಕ್ಕೆ ಬರುತ್ತಿದ್ದ ಅನೇಕ ಸಾಹಿತಿಗಳಿಗೆ ಪ್ರೋತ್ಸಾಹ ನೀಡಿದರು. ಅವರ ಪುಸ್ತಕಗಳನ್ನು ಪ್ರಕಟಿಸಿದರು. ಯುವಪ್ರತಿಭೆಗಳಿಗೆ ಪ್ರೋತ್ಸಾಹ ನೀಡುವುದು ಈ ಪ್ರಕಾಶನ ಮಂದಿರದ ಧ್ಯೇಯೋದ್ದೇಶಗಳಲ್ಲಿ ಪ್ರಮುಖವಾಗಿತ್ತು. ಕರ್ನಾಟಕದ ಎಲ್ಲ ಭಾಗಗಳಲ್ಲೂ ಪ್ರಕಟವಾದ ಕನ್ನಡ ಪುಸ್ತಕಗಳೆಲ್ಲ ಒಂದೆಡೆ ಓದುಗರಿಗೆ ಲಭ್ಯವಾಗುವಂತೆ ಮಾಡಿದ್ದು ಅವರ ಮಹತ್ವದ ಸಾಧನೆಯಾಗಿದೆ.

ನಿಟ್ಟೂರು ಶ್ರೀನಿವಾಸರಾಯರಿಗೂ ಕನ್ನಡ ಸಾಹಿತ್ಯ ಪರಿಷತ್ತಿಗೂ ಹಲವಾರು ವರ್ಷಗಳಿಂದ ನಿಕಟ ಸಂಪರ್ಕವಿತ್ತು. ಶ್ರೀಯುತರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು, ಕನ್ನಡ ನುಡಿ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಮತ್ತು ಪರಿಷತ್ತಿನ ಮಹತ್ವದ ಪ್ರಕಟಣೆಗಳ ಬಗೆಗೆ ನಿರಂತರವಾಗಿ ತಮ್ಮ ಸಲಹೆ-ಸೂಚನೆ ಮಾರ್ಗದರ್ಶನಗಳನ್ನು ನೀಡುತ್ತಾ ಬಂದಿದ್ದಾರೆ.

ಬರೋಡದಲ್ಲಿ ನಡೆದ ಹೊರನಾಡು ಕನ್ನಡಿಗರ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದುದು ಶ್ರೀನಿವಾಸರಾಯರ ಹೆಗ್ಗಳಿಕೆಯಾಗಿದೆ. ದಕ್ಷಿಣ ಭಾರತ ಹಿಂದಿಪ್ರಚಾರಸಭೆಯ ಡಿ.ಲಿಟ್ ಪ್ರಶಸ್ತಿಯನ್ನು ಶ್ರೀನಿವಾಸರಾಯರಿಗೆ ಪ್ರದಾನ ಮಾಡಿದುದು ಕನ್ನಡಿಗರಿಗೆ ಸಂದ ಗೌರವವಾಗಿದೆ. ಹಲವಾರು ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಘ ಸಂಸ್ಥೆಗಳೊಂದಿಗೆ ನಿಕಟಸಂಪರ್ಕವನ್ನು ಶ್ರೀನಿವಾಸರಾಯರು ಇಂದಿಗೂ ಇಟ್ಟುಕೊಂಡಿದ್ದಾರೆ.

ಒಂದು ಶತಮಾನವನ್ನು ಸಂಪೂರ್ಣವಾಗಿ ಕಂಡಿರುವ ನಿಟ್ಟೂರು ಶ್ರೀನಿವಾಸರಾಯರು ಪ್ರತಿನಿತ್ಯ ಒಂದಲ್ಲ ಒಂದು ಕಾರ್ಯದಲ್ಲಿ ತಮ್ಮನ್ನು ನಿರಂತರವಾಗಿ ತೊಡಗಿಸಿಕೊಂಡಿದ್ದಾರೆ. ಪರಿಶುದ್ಧವಾದ ನಡೆನುಡಿಗಳಿಂದ ಸರಳ ಸಜ್ಜನಿಕೆಯಿಂದ ಸಮಾಜದ ಎಲ್ಲ ವರ್ಗದವರ ಗೌರವಾದರಗಳಿಗೆ ಪಾತ್ರರಾಗಿದ್ದಾರೆ. ಸಾಹಿತಿಗಳಾಗಿ, ಸ್ವಾತಂತ್ರ್ಯ ಹೋರಾಟಗಾರರಾಗಿ, ನ್ಯಾಯಾಂಗವೇತ್ತರಾಗಿ, ಸಾಮಾಜಿಕ ಸಾಂಸ್ಕೃತಿಕ ಚಟುವಟಿಕೆಗಳ ನೇತಾರರಾಗಿ ಕರ್ಮಯೋಗಿಗಳಾಗಿ ಕರ್ನಾಟಕಕ್ಕೆ ಭೂಷಣಪ್ರಾಯರೆನಿಸಿದ್ದಾರೆ. ಈ ಹಿರಿಯ ಚೇತನವನ್ನು ಕನ್ನಡ ಜನತೆ ಆದರಾಭಿಮಾನಗಳಿಂದ ಸತ್ಕರಿಸಿ, ಸನ್ಮಾನಿಸಿ, ಗೌರವಿಸುತ್ತಿರುವುದು ಸಾರ್ಥಕವಾಗಿದೆ.

■

# ಕನ್ನಡ ನಿಘಂಟು ಕ್ಷೇತ್ರಕ್ಕೆ ತೀ.ನಂ.ಶ್ರೀ ಅವರ ಕೊಡುಗೆ

ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳ ಸಂವರ್ಧನೆಗೆ ನಿರಂತರವಾಗಿ ದುಡಿದವರಲ್ಲಿ ತೀನಂಶ್ರೀ ಅವರು ಮುಖ್ಯರು. ಶ್ರೀಯುತರು ಮೈಸೂರು ಮತ್ತು ಕರ್ಣಾಟಕ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಕನ್ನಡಕ್ಕೆ ಸ್ಥಿರವಾದ ಆಸ್ತಿಭಾರವನ್ನು ಹಾಕಿಕೊಟ್ಟಿದ್ದಾರೆ. ಭಾಷಾಶಾಸ್ತ್ರದಲ್ಲಿ ಮಿಗಿಲಾದ ಪಾಂಡಿತ್ಯವನ್ನು ಸಂಪಾದಿಸಿಕೊಂಡು ಭಾಷಾಶಾಸ್ತ್ರದ ಬೋಧನೆಗೆ ವಿಶೇಷ ಆಸಕ್ತಿಯನ್ನು ತೋರಿದ್ದಾರೆ. ದೇಶವಿದೇಶಗಳಲ್ಲಿ ಸಂಚರಿಸಿ ಭಾಷಾಶಾಸ್ತ್ರದ ಬಗೆಗೆ ವಿಶೇಷ ಉಪನ್ಯಾಸಗಳನ್ನಿತ್ತಿದ್ದಾರೆ. ತೀನಂಶ್ರೀ ಅವರ ಹೆಸರು ಶಾಶ್ವತವಾಗಿ ನಿಂತಿರುವುದು ಅವರು ಕನ್ನಡ ನಿಘಂಟಿಗೆ ಸಲ್ಲಿಸಿದ ಅಭೂತಪೂರ್ವ ಸೇವೆಯಿಂದ. ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸಿ ಪ್ರಕಟಿಸಿರುವ ಕನ್ನಡ ನಿಘಂಟಿನ ಪ್ರಥಮ ಸಂಪುಟದ ಮೊದಲ ಕೆಲವು ಸಂಚಿಕೆಗಳು ತೀನಂಶ್ರೀ ಅವರ ಅಪಾರ ವಿದ್ವತ್ತನ್ನು ಪ್ರತಿಬಿಂಬಿಸುವಂತಿವೆ.

ತೀನಂಶ್ರೀ ಅವರು ಕನ್ನಡ ನಿಘಂಟಿಗೆ ಅವಿಸ್ಮರಣೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ನಿಘಂಟು ರಚನೆಗಾಗಿ ನೇಮಿಸಿದ ಪ್ರಪ್ರಥಮ ಉಪಸಮಿತಿಯ ಸದಸ್ಯರೂ, ಕಾರ್ಯದರ್ಶಿಗಳೂ ಆಗಿದ್ದರು. ೧೯೪೬ನೆಯ ಇಸವಿಯಿಂದ ಈ ನಿಘಂಟಿನ ಗೌರವ ಸಂಪಾದಕರಾಗಿ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ತೀನಂಶ್ರೀ ಅವರು ಪ್ರಾಧ್ಯಾಪಕರಾಗಿ ಮೈಸೂರಿಗೆ ಬಂದು ನೆಲಸಿದ ಮೇಲೆ ನಿಘಂಟು ಸಂಪಾದಕ ಸಮಿತಿಯ ಅಧ್ಯಕ್ಷತೆಯನ್ನು ವಹಿಸಿಕೊಂಡು ೧೯೫೮ ರಿಂದ ತಮ್ಮ ಬಹುಮಟ್ಟಿನ ಸಮಯವನ್ನು ನಿಘಂಟಿಗೆ ಧಾರೆಯೆರೆದಿದ್ದಾರೆ. ಅವರು ೧೯೬೨ರಲ್ಲಿ ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತರಾದ ಮೇಲೆ ಯಾವ ಆರ್ಥಿಕ ಪ್ರತಿಫಲಾಪೇಕ್ಷೆಯೂ ಇಲ್ಲದೆ ನಿಘಂಟಿಗಾಗಿ ಪೂರ್ಣಕಾಲ ದುಡಿದ ಮಹನೀಯರು, ಪ್ರಾತಃಸ್ಮರಣೀಯರು. ತೀನಂಶ್ರೀ ಅವರೇ ಆದಿಯಾಗಿ ಹಲವರು ಘನವಿದ್ವಾಂಸರು ಹಾಕಿದ ಭದ್ರವಾದ ಬುನಾದಿಯ ಮೇಲೆ ನಿರ್ಮಾಣವಾಗುತ್ತಿರುವ ಈ ನಿಘಂಟು ತನ್ನ ಮೊದಲಿನ ದೃಢತೆಯನ್ನು ಪಾಂಡಿತ್ಯವನ್ನು ಕ್ರಮೇಣ ಕಳೆದುಕೊಳ್ಳುತ್ತಾ ಬರುತ್ತಿದೆ. ಪ್ರತಿಫಲಾಪೇಕ್ಷೆಯಿಲ್ಲದೆ ನಿರಪೇಕ್ಷೆಯಿಂದ ದುಡಿದ ಡಾ. ಎ.ಆರ್. ಕೃಷ್ಣಶಾಸ್ತ್ರಿ, ಪ್ರೊ. ತೀ.ನಂ. ಶ್ರೀಕಂಠಯ್ಯನವರು ಡಾ. ಡಿ.ಎಲ್. ನರಸಿಂಹಾಚಾರ್ಯರು –ಇವರೇ ಮೊದಲಾದ ಪ್ರಾಚಾರ್ಯರ ಪುಣ್ಯ ಪ್ರಭಾವದಿಂದ ಕನ್ನಡಿಗರು ಈ ತೆರನ ಅತ್ಯಾಧುನಿಕ ನಿಘಂಟನ್ನು ಕಾಣಬಹುದಾಗಿದೆ.

ನಿಘಂಟು ರಚನೆಗೆ ಬೇಕಾಗಿರುವುದು ಹಲವಾರು ಭಾಷೆಗಳ ಪರಿಚಯ, ಕೆಲವಾರು ಭಾಷೆಗಳಲ್ಲಿ ಪಾಂಡಿತ್ಯ. ತೀನಂಶ್ರೀ ಅವರಿಗೆ ದ್ರಾವಿಡ ಭಾಷೆಗಳ ಸಂಪೂರ್ಣ ಪರಿಚಯವೂ ಕನ್ನಡ ಸಂಸ್ಕೃತ ಇಂಗ್ಲಿಷ್ ಭಾಷೆಗಳಲ್ಲಿ ಆಳವಾದ ಪಾಂಡಿತ್ಯವೂ ಇದ್ದಿತು. ಜೊತೆಗೆ ಭಾಷಾಶಾಸ್ತ್ರದಲ್ಲಿ ಅಪರಿಮಿತವಾದ ಪರಿಣತಿಯಿತ್ತು. ಹೀಗಾಗಿ ಯಾವುದೇ ಉಲ್ಲೇಖವನ್ನು ತೆಗೆದುಕೊಳ್ಳಲಿ– ಅದನ್ನು ಸಮಗ್ರವಾಗಿ ಸ್ವಯಂಪೂರ್ಣವಾಗಿ ಸಿದ್ಧಪಡಿಸುತ್ತಿದ್ದ ಸಾಧನಸಂಪತ್ತು ಅವರಲ್ಲಿತ್ತು.

ತೀನಂಶ್ರೀ ಅವರು ಕೈಕೊಂಡಿದ್ದ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಭಾಷಾಶಾಸ್ತ್ರ ತತ್ತ್ವಗಳಿಗೆ ಅನುಸಾರವಾಗಿ ಚಾರಿತ್ರಿಕ ವಿವರಣೆಯಿಂದ ಕೂಡಿದ ಪ್ರಮಾಣಭೂತವೂ ಸಮಗ್ರವೂ ಆದ ನಿಘಂಟು. ಈ ನಿಘಂಟಿನಲ್ಲಿ ಜೈನ ವೀರಶೈವ ಬ್ರಾಹ್ಮಣ ಸಾಹಿತ್ಯಕ್ಕೆ ಸಂಬಂಧಪಟ್ಟ ಧಾರ್ಮಿಕ ಮತ್ತು ದಾರ್ಶನಿಕ ಶಬ್ದಗಳು, ಸಂಗೀತ ನೃತ್ಯ ಶಿಲ್ಪ ಮೊದಲಾದ ಕಲೆಗಳಿಗೆ ಸಂಬಂಧಿಸಿದ ಪ್ರಾಚೀನ ಪಾರಿಭಾಷಿಕ ಶಬ್ದಗಳು ವ್ಯಾಕರಣ ಛಂದಸ್ಸು ಅಲಂಕಾರ ತರ್ಕ ವೈದ್ಯ

ಜ್ಯೋತಿಷ ಕಾಮಶಾಸ್ತ್ರ ಗಣಿತ ಮುಂತಾದ ಶಾಸ್ತ್ರಗಳಿಗೆ ಸಂಬಂಧಿಸಿದ ಶಬ್ದಗಳು ಇತರ ವೈಜ್ಞಾನಿಕ ಶಬ್ದಗಳು ಸೇರ್ಪಡೆಯಾಗಿವೆ. ಈ ಎಲ್ಲ ಶಬ್ದಗಳ ನಿರ್ದುಷ್ಟವೂ ನಿಷ್ಕೃಷ್ಟವೂ ಆದ ಅರ್ಥಗಳನ್ನು ನಿರ್ಣಯಿಸುವಲ್ಲಿ ತೀನಂಶ್ರೀ ಅವರ ಪಾತ್ರ ಹಿರಿದಾಗಿತ್ತು. ಶ್ರೀಯುತರ ಅಪಾರವಾದ ಜ್ಞಾನಸಂಪತ್ತಿಯಿಂದ ಈ ಪಾರಿಭಾಷಿಕ ಶಬ್ದಗಳ ಅರ್ಥ, ವ್ಯುತ್ಪತ್ತಿಯನ್ನು ಖಚಿತವಾಗಿ ನಿರ್ದೇಶಿಸಲಾಗುತ್ತಿತ್ತು. ಈ ನಿಘಂಟಿನಲ್ಲಿಯ ಶಬ್ದಗಳ ಅರ್ಥವಿವರಣೆ, ಪ್ರಯೋಗಗಳನ್ನು ಸೂಚಿಸುವ ರೀತಿ, ನಿಷ್ಪತ್ತಿ ವಿಧಾನ, ವಿರಾಮ ಚಿಹ್ನೆಗಳು, ಅಕ್ಷರಗಳ ಗಾತ್ರ –ಇವೇ ಮೊದಲಾದ ಎಲ್ಲ ಅಂಶಗಳನ್ನೂ ತೀನಂಶ್ರೀ ಅವರು ಕೂಲಂಕಷವಾಗಿ ಪರಿಶೀಲಿಸಿ ಇವುಗಳಲ್ಲಿ ಅನುಸರಿಸಬೇಕಾದ ನಿಯಮಗಳನ್ನು ನಿರ್ಧರಿಸಿದ್ದಾರೆ.

ನಿಘಂಟಿನ ಪ್ರಾರಂಭದ ಸಂಚಿಕೆಗಳನ್ನು ಸಿದ್ಧಪಡಿಸುವಲ್ಲಿ ತೀನಂಶ್ರೀ ಅವರ ಪಾತ್ರ ಪ್ರಮುಖವಾಗಿತ್ತು. ಅವರು ಪ್ರತಿಯೊಂದು ಪದವನ್ನೂ ಅದರ ಅರ್ಥಗಳನ್ನು ನಿಷ್ಕೃಷ್ಟವಾಗಿ ನಿರ್ಧರಿಸುವಲ್ಲಿ, ಅಚ್ಚಿನಕಾರ್ಯ ಪ್ರಾರಂಭವಾದ ಮೇಲೆ ಆರಂಭದ ಕರಡಚ್ಚಿನ ಪ್ರತಿಗಳನ್ನು ಬೇಸರವಿಲ್ಲದೆ ಹತ್ತಾರು ಸಲ ಪರಿಶೀಲಿಸುವಲ್ಲಿ ನಿಘಂಟು ರಚನೆಯ ಕಾರ್ಯ ವಿಧಾನದ ನಿರ್ದೇಶನದಲ್ಲಿ –ಒಟ್ಟಿನಲ್ಲಿ ನಿಘಂಟಿನ ಸ್ವರೂಪವನ್ನು ನಿರ್ಧರಿಸುವಲ್ಲಿ ಮಹತ್ತರವಾದ ಪಾತ್ರವನ್ನು ನಿರ್ವಹಿಸಿದ್ದಾರೆ.

ಯಾವುದೇ ನಿಘಂಟು ಪರಿಪೂರ್ಣವಾಗಬೇಕಾದರೆ ಅದು ಆ ಭಾಷೆಯಲ್ಲಿನ ಎಲ್ಲ ಶಬ್ದಗಳನ್ನೂ ಆ ಶಬ್ದಗಳಿಗಿರುವ ಎಲ್ಲ ಅರ್ಥಗಳನ್ನೂ ಒಳಕೊಂಡಿರಬೇಕು. ಅಲ್ಲದೆ, ಆ ಭಾಷೆಯ ಎಲ್ಲ ಭಾಗದ ಶಬ್ದಗಳೂ ಅರ್ಥಗಳೂ ಅದರಲ್ಲಿ ಸೇರ್ಪಡೆಯಾಗಿರಬೇಕು. ಉದಾ: ಮೈಸೂರು ಕನ್ನಡ, ಉತ್ತರ ಕರ್ನಾಟಕದ ಕನ್ನಡ, ದಕ್ಷಿಣ ಕರ್ನಾಟಕದ ಕನ್ನಡ ಇತ್ಯಾದಿ. ತೀನಂಶ್ರೀ ಅವರು ಈ ಎಲ್ಲ ಭಾಗದ ಶಬ್ದಗಳೂ ಅರ್ಥಗಳೂ ಈ ನಿಘಂಟನಲ್ಲಿ ಬಿಟ್ಟುಹೋಗದ ಹಾಗೆ ನೋಡಿಕೊಂಡಿದ್ದಾರೆ. ಆಯಾ ಭಾಗದ ಸದಸ್ಯರನ್ನು ಈ ಬಗೆಗೆ ವಿಶೇಷವಾಗಿ ಉಪಯೋಗಿಸಿಕೊಂಡಿದ್ದಾರೆ.

ವಿವರಣ ಚಿಹ್ನೆಗಳು ನಿಘಂಟಿನಲ್ಲಿ ಮಹತ್ತ್ವದ ಪಾತ್ರವನ್ನು ನಿರ್ವಹಿಸುತ್ತವೆ. ತೀನಂಶ್ರೀ ಅವರು ವಿವರಣ ಚಿಹ್ನೆಗಳ ನಿರ್ದಿಷ್ಟ ಬಳಕೆಗೆ ನಿಯಮಗಳನ್ನು ನಿರೂಪಿಸಿದರು. ಕಾಮ ಅರ್ಧವಿರಾಮ ಪೂರ್ಣವಿರಾಮ ದುಂಡುಕಂಸ ಚೌಕಕಂಸ ಮತ್ತು ಸಂಪಾದಕೀಯ ಕಂಸಗಳನ್ನು ಗೊತ್ತಾದ ಎಡೆಗಳಲ್ಲಿ ಮಾತ್ರ ಬಳಸಿದ್ದಾರೆ.

ವಿವಿಧ ರೀತಿಯ ಮುದ್ರಣದ ಅಕ್ಷರಗಳು ನಿಘಂಟಿನಲ್ಲಿ ಗಮನಾರ್ಹವಾದ ಕಾರ್ಯವನ್ನು ಮಾಡುತ್ತವೆ. ಶಬ್ದಗಳನ್ನು ಒಂದು ತೆರನ ಅಕ್ಷರಗಳಲ್ಲಿಯೂ ಅದರ ಅರ್ಥಗಳನ್ನು ಬೇರೆ ತೆರನ ಅಕ್ಷರಗಳಲ್ಲಿಯೂ ಸೂಚಿಸಿ ನಿಘಂಟಿಗೆ ಮುದ್ರಣದಲ್ಲಿ ಒಂದು ಅಂದವನ್ನೂ ಅದನ್ನು ಅವಲೋಕಿಸುವವರಿಗೆ ಒಂದು ವಿಧಾನವನ್ನೂ ತೀನಂಶ್ರೀ ಅವರು ಹಾಕಿಕೊಟ್ಟಿದ್ದಾರೆ. ನಿಘಂಟಿನ ಒಂದೆರಡು ಉಲ್ಲೇಖಗಳಿಂದ ಈ ಎಲ್ಲ ಅಂಶಗಳನ್ನೂ ಸ್ಪಷ್ಟಪಡಿಸಬಹುದು.

**ಅಂಗಣ** (ನಾ) ೧. ಮನೆಗೆ ಸೇರಿರುವ, ಆವರಣವುಳ್ಳ ಅಥವಾ ಇಲ್ಲದ ಬಯಲು: ಮನೆಯಂಗಣದೊಳ್ ಮನಮೊಸೆದಾಡುವ ಮಕ್ಕಳ ವಿನೋದಮಂ ಕಾಣ್ಬ ದಿವಸ ಮೆಂದಾದಪುದೋ (ಸುಕುಮಾ. ೯–೧೦೧); ನಿಮ್ಮ ಭಕ್ತರ ಮನೆಯಂಗಣ ಪ್ರಯಾಗದಿಂದಧಿಕ ನೋಡಾ (ಮಹದೇ. ೪೦–೪); ಘಟವಾರಿಸಂಭವನ ಅಂಗಣವ ಸಾರಿದಿರಿ ಗಡ (ತೊರರಾ. ೫–೩–೮೭); ೨ ಮಧ್ಯಸ್ಥಳ; ಸ್ಥಳ : ಅಮಿತೈಶ್ವರ್ಯದಂಗಣವಾಗಿ ಮಹೇಂದ್ರರಮಣಿಯ ಪುರಮೊಪ್ಪುತಿಹುದು (ಅಂಜಚ. ೩–೨); ಗಾಂಧಾರವಿಷಯಾಂಗಣದಿ ನಿತ್ಯಾಲೋಕಪುರವುಂಟಲ್ಲಿ (ಜೀವಂಚ ೭–೧೧). 'ಅಂಗಳ' ೨ ಪರಾ.

॥ ತುಳು ॥

ಅಜ್ಜಣ ಓಡಾಡುವ ಜಾಗ, ಪ್ರದೇಶ, ಅಂಗಳ ಎಂಬ ಅರ್ಥದಲ್ಲಿ ಅಂಗಣ ಶಬ್ದ ಸಂಸ್ಕೃತದಲ್ಲಿ ಉಂಟು. ರಾಜಾಂಗಣ, ಸಭಾಂಗಣ, ಸಮರಾಂಗಣ ಇತ್ಯಾದಿಗಳನ್ನು ಹೋಲಿಸಿ. 'ಶಬ್ದಮಣಿದರ್ಪಣ'ದ ಮೇರೆಗೆ, ಅಂಗಣ < ಸಂ. ಅಂಕನ (ಶಮದ. ೨೭೮ ಪ್ರಯೋ); ಇನ್ನೊಂದು ಸೂತ್ರದ ಮೇರೆಗೆ, ಅಂಗಣ ಎಂಬುದು "ತತ್ಸಮ" ಶಬ್ದಗಳಲ್ಲಿ ಒಂದು (ಶಮದ. ೨೯೮ ಪ್ರಯೋ). ಅಂಕಣ, ಅಂಗಣ, ಅಂಗಳ ಈ ಮೂರಕ್ಕೂ ಮೂಲಸಂಬಂಧವುಂಟೆಂದು ತೋರುತ್ತದೆ. ಮೂಲಶಬ್ದವು ದೇಶ್ಯವೆ. ಸಂಸ್ಕೃತದಿಂದ ಬಂದದ್ದೆ ಎಂಬುದು ನಿರ್ಧರವಾಗಬೇಕಾಗಿದೆ. ಅಂ– ೦ (<ಅಗಂ) + ಕಳ ಎಂದು ಅಂಗಳ ಶಬ್ದಕ್ಕೆ ನಿಷ್ಪತ್ತಿ ಹೇಳುವುದೂ ಉಂಟು; "ಅಗಂ" ಎಂಬುದಕ್ಕೆ 'ಅಗ–'[೧] ಪರಾ)]

**ಅಕ್ಕರೆ ೨** (ನಾ). ಆಚೆಯ ದಡ : ನಾನು ನಿನ್ನನ್ನು ಈ ನದಿಯಿಂದ ದಾಟಿಸುವೆನು. ಅಕ್ಕರೆಯಲ್ಲಿ (ಅತ್ತ [ತಥಾ] + ಕರೆ = ಅಕ್ಕರೆ) ಸೂರ್ಯದೇವನ ಅರಮನೆಗೆ ಹೋಗುವ ದಾರಿಯಿದೆ (ಪಂಚಾಮೃ. ೪೯)

[ಆ + ಕರೆ ॥ ತಮಿ ಅಕ್ಕರೈ; ಮಲ. ಅಕ್ಕರ, ತುಳು ಅಕರ, ಅಕಾರ, ಆಕರ = ಅಲ್ಲಿ, ದೂರದಲ್ಲಿ]

**ಅಕ್ಕಸ ೨** (ನಾ). (ಉಕ) ರೋಷ : ಆಕ್ರೋಶ : ನಕ್ಕು ನುಡಿವರ ಮುಂದೆ ಮುಕ್ಕರಿಸಿದವರು ತಾಳು, ಅಕ್ಕಸವ ಮಾಡುವರ ಅಕ್ಕರದಿ ತಾಳು (ಜಗದಾ. ೧೦೨), ಮೊಗ್ಗಾವಿಯು ಇಂಥ ಮಳೆಯನ್ನು ಕಂಡಿದ್ದಿಲ್ಲ; ಅಪ್ಪಾ, ಅದರ ಅಕ್ಕಸವೆಷ್ಟು, ಒಗರೆಷ್ಟು ಹಟವೆಷ್ಟು; (ಸಮಜೀ. ೧೭೦), ನಾನೇ ಈ ಸ್ಥಳಬಿಟ್ಟು ಹೊರಟು ಹೋಗುವೆನು, ಎಂದು ಅಕ್ಕಸದಿಂದ ನುಡಿಯುತ್ತ ತಾನು ಕುಳಿತ ಸ್ಥಳದಿಂದ ಚಟ್ಟನೆ ಎದ್ದು ಹೊರಟವನು (ಶೈವಸು. ೩೧೫). [ಪ್ರಾ. ಅಕ್ಕೋಸ, ಅಕೋಸ (<ಸಂ ಆಕ್ರೋಶ); ಪಾಲಿ. ಅಕ್ಕೋಸ. ಹಿಂ. ಮರಾ. ಅಕಸ್; ತೆಲು. ಅಕ್ಕಸಮು, ಅಕ್ಕಸು, ಅಕ್ಕಸ್ಸು]

ಈ ಮೇಲಿನ ಮೂರು ಉಲ್ಲೇಖಗಳಲ್ಲಿ ಅಂಗಳ ಶಬ್ದಕ್ಕೆ ಕೊಟ್ಟಿರುವ ನಿಷ್ಪತ್ತಿ ವಿದ್ವಾಂಸರ ಈವರೆಗಿನ ಎಲ್ಲ ಅಭಿಪ್ರಾಯಗಳನ್ನೂ ಒಳಗೊಂಡಿರುವುದು ಸ್ಪಷ್ಟವಾಗುತ್ತದೆ. ಇಲ್ಲಿ ಕೊಟ್ಟಿರುವ ಸಂಕೇತಗಳೂ ವಿಶಿಷ್ಟಾರ್ಥದಲ್ಲಿ ಬಳಕೆಯಾಗಿವೆ.

ಈ ಚಿಹ್ನೆಯನ್ನು ವಿಶೇಷಾಂಶಗಳನ್ನು ಕೊಡುವುದಕ್ಕೆ ಉಪಯೋಗಿಸಿದೆ. ಹಾಗೆಯೇ ಜ್ಞಾತಿಶಬ್ದಗಳನ್ನು ಸೂಚಿಸುವುದಕ್ಕೆ ೧೧ ಈ ಚಿಹ್ನೆಯನ್ನೂ ಹೋಲಿಕೆಗಾಗಿ ಬೇರೆ ಭಾಷೆಗಳ ಶಬ್ದಗಳನ್ನೂ ಕೊಡುವಾಗ ಈ ಚಿಹ್ನೆಯನ್ನೂ ಕೊಟ್ಟಿದೆ. ಅಕ್ಕರೆ ೨ ಶಬ್ದದಲ್ಲಿ [ತಥಾ] ಎಂಬ ಸಂಕೇತವನ್ನು ಬಳಸಿದೆ. ಇದನ್ನು ಇಂಗ್ಲಿಷಿನ Sic ಎಂಬುದಕ್ಕೆ ಪರ್ಯಾಯವಾಗಿ ಉಪಯೋಗಿಸಿದೆ. ಅಕ್ಕರೆ[2] ಶಬ್ದಕ್ಕೆ ಕೊಟ್ಟಿರುವ; "ನಾನು ನಿನ್ನನ್ನು ಈ ನದಿಯಿಂದ ದಾಟಿಸುವೆನು. ಅಕ್ಕರೆಯಲ್ಲಿ (ಅತ್ತ [ತಥಾ] + ಕರೆ ಅಕ್ಕರೆ) ಸೂರ್ಯದೇವನ ಅರಮನೆಗೆ ಹೋಗುವ ದಾರಿಯಿದೆ (ಪಂಚಾಮೃ. ೪೯) ಈ ಪ್ರಯೋಗದಲ್ಲಿರುವ (ಅತ್ತ + ಕರೆ = ಅಕ್ಕರೆ) ಎಂದಿರುವುದನ್ನು ಯಾವೊಂದು ಬದಲಾವಣೆಯೂ ಮಾಡದೆ ಇರುವುದನ್ನು ಇರುವ ಹಾಗೆ ಉದ್ಧರಿಸಿದೆ ಎಂದು ಈ ಸಂಕೇತ ಸೂಚಿಸುತ್ತದೆ. ಈ ನಿಘಂಟಿನ ಉದ್ದಕ್ಕೂ ಈ ತೆರನ ಅನೇಕ ಚಿಹ್ನೆಗಳನ್ನೂ ಸಂಕೇತಗಳನ್ನೂ ತೀನಂಶ್ರೀ ಅವರು ಬಳಸಿ ಇದು ಒಂದು ಅತ್ಯಾಧುನಿಕವಾದ ಸಮಗ್ರ ನಿಘಂಟನ್ನಾಗಿ ಮಾಡಿದ್ದಾರೆ.

ಪ್ರಕೃತ ಈ ನಿಘಂಟಿನ ಕಾರ್ಯದಲ್ಲಿ ಅವರಿಗೂ ನನಗೂ ಇದ್ದ ಸಂಬಂಧದ ಒಂದೆರಡು ಸ್ಮೃತಿಗಳನ್ನೂ ಅನಿವಾರ್ಯವಾಗಿ ಹೇಳಬೇಕಾಗಿದೆ. ತೀನಂಶ್ರೀ ಅವರು ಹಾಕಿಕೊಟ್ಟ ನಿಯಮಗಳನ್ನು ಚಾಚೂತಪ್ಪದೆ ನಾನು ಪರಿಪಾಲಿಸಿಕೊಂಡು ಬರುತ್ತಿದ್ದೆ. ಆದರೆ ಕೆಲವೊಂದು ಸಂದರ್ಭಗಳಲ್ಲಿ ಈ ನಿಮಗಳನ್ನು ಸಡಿಲಗೊಳಿಸುವುದು ಅನಿವಾರ್ಯವಾಗುತ್ತಿತ್ತು. ಅಂತಹ ಸಂದರ್ಭಗಳಲ್ಲಿ ನಾನು ನಿಯಮಗಳನ್ನೇ ಪಟ್ಟಾಗಿ ಹಿಡಿದು ಜಗ್ಗಿಸಿದಾಗ ತೀನಂಶ್ರೀ ಅವರು ಗಾಂಪರೊಡೆಯರ ಕಥೆಗಳನ್ನು ಹೇಳಿ ತಾವೂ ನಕ್ಕು ನನ್ನನ್ನೂ ನಗಿಸಿ ಸಮಾಧಾನಪಡಿಸಿ ನಿಯಮಾವಳಿಗಳಿಗೆ ನಿಬಂಧನೆಗಳನ್ನು ಮಾಡುತ್ತಿದ್ದರು. ಒಮ್ಮೆ ನಿಘಂಟಿನ ಕರಡನ್ನು ಪರಿಶೀಲಿಸುತ್ತಿದ್ದಾಗ ಅಂಟು ಶಬ್ದಕ್ಕೆ ಆಧುನಿಕ ಕಾವ್ಯಗಳಿಂದ ಯಾವ ಪ್ರಯೋಗಗಳೂ ಸಂಗ್ರಹವಾಗಿರಲಿಲ್ಲ. ಅದು ತೀನಂಶ್ರೀ ಅವರಿಗೆ ತುಂಬ ಅಸಮಾಧಾನ ಉಂಟುಮಾಡಿತು. ಏನಪ್ಪಾ ಈ ರೂಢಿಯ ಶಬ್ದಕ್ಕೆ ಆಧುನಿಕ ಪ್ರಯೋಗಗಳೇ ಕೊಟ್ಟಿಲ್ಲವಲ್ಲ. ಏನು ಮಾಡುವುದು. ನಾವೇ ರೂಢಿಯ ಒಂದು ಪ್ರಯೋಗವನ್ನು ಕೊಡೋಣ ಎಂದು ಹೇಳಿದರು. ಆ ವೇಳೆಗೆ ಸರಿಯಾಗಿ ಅವರ ಮಗ ಶ್ರೀ ನಾಗಭೂಷಣ ಅವರು ನಾವು ಕೆಲಸ ಮಾಡುತ್ತಿದ್ದ ಕೋಣೆಗೆ ಬಂದು "ಏನಣ್ಣಾ ಇಷ್ಟು ಹೊತ್ತಾದರೂ ಊಟಕ್ಕೆ ಏಳುವುದಿಲ್ಲವೆ? ನೀವೂ ಬಸವಾರಾಧ್ಯರೂ ನಿಘಂಟಿಗೆ ಅಂಟಿಕೊಂಡುಬಿಟ್ಟಿದ್ದೀರಲ್ಲಾ" ಎಂದು ಸಹಜವಾಗಿಯೇ ಹೇಳಿದರು. ಅದನ್ನು ಕೇಳಿ ತೀನಂಶ್ರೀ ಅವರಿಗೆ ತುಂಬ ಸಂತೋಷವಾಯಿತು. ಕಾರಣ ಅಂಟು ಶಬ್ದಕ್ಕೆ ಒಂದು ರೂಢಿಯ ಪ್ರಯೋಗ ಸಿಕ್ಕಿದ ಹಾಗಾಯಿತಲ್ಲ ಎಂದು.

ತೀನಂಶ್ರೀ ಅವರು ನಿಘಂಟು ಕಾರ್ಯಕ್ಕಾಗಿಯೇ ಅವತರಿಸಿದ್ದಂತಿದ್ದರು. ಅವರ ಅಪಾರವಾದ ಪಾಂಡಿತ್ಯದ ಸದುಪಯೋಗವಾದುದು ಈ ಕನ್ನಡ ನಿಘಂಟಿನಲ್ಲಿ. ಅವರು ವಿಶೇಷ ಆಸಕ್ತಿ ಆಸ್ಥೆ ತಳೆದಿದ್ದುದೂ ಇದೇ ಕೆಲಸದಲ್ಲಿ. ತಮ್ಮ ಅಂತಿಮವೂ ದೀರ್ಘವೂ ಆದ ದೆಹಲಿ ಕಲ್ಕತ್ತೆಯ ಪ್ರವಾಸವನ್ನು ಮುಗಿಸಿಕೊಂಡು ಬಂದ ಮೇಲೆ ಮತ್ತೆಲ್ಲಿಯೂ ಹೋಗದೆ ಉಳಿದೆಲ್ಲ ಕಾಲವನ್ನೂ ನಿಘಂಟಿಗಾಗಿಯೇ ವಿನಿಯೋಗಿಸುವುದಾಗಿ ಅವರು ಹೇಳಿಹೋಗಿದ್ದರು. ಹೋಗಿದ್ದವರು ಮತ್ತೆ ಬರಲೇ ಇಲ್ಲ. ಕಾಲಪುರುಷಂಗೆ ಗುಣಮಣುವಿಲ್ಲ. ನಿಘಂಟು ಕೆಲಸದಲ್ಲಿ ನಿರತರಾದವರಿಗೆ ತೀನಂಶ್ರೀ ಅವರ ನೆನಪು ನಂದಾದೀಪದಂತೆ ಸದಾ ಪ್ರಕಾಶಮಾನವಾಗಿರುವುದರಲ್ಲಿ ಸಂದೇಹವಿಲ್ಲ.

■

# ಕಣ್ಮರೆಯಾದ ವಿದ್ವನ್ಮಣಿ ಹೆಮ್ಮಿಗೆ ದೇಶಿಕಾಚಾರ್ಯ

**ಪಂ**ಡಿತ ದೇಶಿಕಾಚಾರ್ಯರು ನಿಘಂಟು ಕಚೇರಿಗೆ ಸೇರಿ ಸುಮಾರು ಹನ್ನೊಂದು ವರ್ಷಗಳಾದುವು. ಈ ಅವಧಿಯಲ್ಲಿ ಅವರ ಮತ್ತು ನನ್ನ ಪರಿಚಯ ಸಂಬಂಧ, ಆತ್ಮೀಯವಾಗಿದ್ದುವು. ಶ್ರೀಮಾನ್ ದೇಶಿಕಾಚಾರ್ಯರು ನಿಘಂಟು ಕಚೇರಿಗೆ ಸೇರುವುದಕ್ಕೆ ಮುಂಚೆ ಕೋಲಾರದ ಪ್ರೌಢಶಾಲೆಯಲ್ಲಿ ಕನ್ನಡ ಪಂಡಿತರಾಗಿದ್ದರು. ಅಲ್ಲಿ ಅವರು ತಮ್ಮ ವೃತ್ತಿಯ ಜೊತೆಗೆ ರಾಮಾಯಣ, ಮಹಾಭಾರತ ಮುಂತಾದವುಗಳ ಪ್ರವಚನವನ್ನು ನಡೆಸಿ ಅತ್ಯಂತ ಜನಪ್ರಿಯರಾಗಿದ್ದರು. ನಿಘಂಟು ಕಚೇರಿಗೆ ನನ್ನನ್ನು ಸಂಪಾದಕರಿಗೆ ಪಧವೀಧರ ಸಹಾಯಕನನ್ನಾಗಿಯೂ, ಶ್ರೀಮಾನ್ ದೇಶಿಕಾಚಾರ್ಯರನ್ನು ಪಂಡಿತ ಸಹಾಯಕರನ್ನಾಗಿಯೂ ಪರಿಷತ್ತು ನೇಮಿಸಿ ಕೊಂಡಿತು. ಮೊದಮೊದಲ ದಿನಗಳಲ್ಲಿ ಸಂಪಾದಕರು, ಪದವೀಧರ ಸಹಾಯಕರು, ಪಂಡಿತ ಸಹಾಯಕರು ಮೂರೇ ಜನರಿದ್ದುದರಿಂದ ನಮ್ಮ ಸಂಪರ್ಕ ಅತಿನಿಕಟವಾಗಿದ್ದಿತು.

ಶ್ರೀಮಾನ್ ದೇಶಿಕಾಚಾರ್ಯರು ನನ್ನನ್ನು ಹಲವಾರು ವಿಧದಲ್ಲಿ ಪ್ರೋತ್ಸಾಹಿಸಿ ಉಪಕರಿಸಿದ್ದಾರೆ. ನಾನು ಸಂಪಾದಿಸಿದ ಚೇರಮ ಕಾವ್ಯ, ಉದ್ಭಟದೇವ ಚರಿತೆ, ತ್ರಿಪುರದಹನ ಸಾಂಗತ್ಯ ಮುಂತಾದ ಅಪ್ರಕಟಿತ ಕಾವ್ಯಗಳ ಸಂಸ್ಕರಣ ಕಾರ್ಯದಲ್ಲಿ ನನಗೆ ವಿಶೇಷವಾಗಿ ನೆರವಾಗಿದ್ದಾರೆ.

ಆಜಾನುಬಾಹುಗಳಾಗಿದ್ದ ಶ್ರೀ ದೇಶಿಕಾಚಾರ್ಯರ ನಡೆನುಡಿಗಳು ಅತ್ಯಂತ ಸರಳ. ಕಚ್ಚೆಪಂಚೆ, ಷರಟು, ಶಲ್ಯ, ಟೋಪಿ ಇವಿಷ್ಟೇ ಅವರ ದೈನಂದಿನ ಉಡುಪು.

ಸಂಪಾದಕರಿಗೆ ಪಂಡಿತ ಸಹಾಯಕರಾಗಿ ಕೆಲಸಕ್ಕೆ ಸೇರಿದ ದೇಶಿಕಾಚಾರ್ಯರು ತಮ್ಮ ವಿಶೇಷವಾದ ಪಾಂಡಿತ್ಯದಿಂದ ಸಹಾಯಕ ಸಂಪಾದಕರಾಗಿ ಉಪಮುಖ್ಯಸಂಪಾದಕರಾಗಿ ಕನ್ನಡ ನಿಘಂಟಿಗೆ ಚಿರಸ್ಮರಣೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಅವರ ಅಪಾರವಾದ ಪಾಂಡಿತ್ಯ, ನಿಷ್ಕೃಷ್ಟ ನಿರ್ದುಷ್ಟ ಸ್ಪಷ್ಟ ಅಭಿಪ್ರಾಯಗಳು ಸರ್ವರಿಗೂ ಮೆಚ್ಚುಗೆಯಾಗಿದ್ದುವು. ಕಚೇರಿಯಲ್ಲಿ ಅವರ ಕೆಲಸ ಕಾರ್ಯಗಳು ಅತ್ಯಂತ ತೃಪ್ತಿಕರವಾಗಿರುತ್ತಿದ್ದುವು. ನಿಘಂಟಿನ ಕೆಲಸದಲ್ಲಿ ಅವರು ಆತ್ಮೀಯತೆಯನ್ನುಳ್ಳವರಾಗಿದ್ದರು. ವಿದ್ಯಾರ್ಥಿ ದೆಸೆಯಲ್ಲಿಯೇ ಹಲವಾರು ಹಳಗನ್ನಡ ಗ್ರಂಥಗಳನ್ನು, ಸಂಸ್ಕೃತ ಕಾವ್ಯಗಳನ್ನು ಓದುವ ಸುಯೋಗ ಒದಗಿಬಂದಿದ್ದ ಶ್ರೀಮಾನ್ ದೇಶಿಕಾಚಾರ್ಯರಿಗೆ ಮುಂದಿನ ವ್ಯಾಸಂಗಕ್ಕೆ ಭದ್ರವಾದ ಬುನಾದಿಯನ್ನು ಹಾಕಿದಂತಾಯಿತು. ವಿದ್ಯಾರ್ಥಿದೆಸೆಯಲ್ಲೇ ಮೈಸೂರು ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯಲ್ಲಿದ್ದ ಬಹುಮಟ್ಟಿನ ಎಲ್ಲ ಗ್ರಂಥಗಳನ್ನೂ ತಿರುವಿಹಾಕಿದುದಾಗಿ ಅವರೇ ಹೇಳಿದ್ದರು. ಈ ಮಾತು ಉತ್ಪ್ರೇಕ್ಷೆಯಲ್ಲವೆಂಬುದು ನಾವು ಪ್ರತಿದಿನವೂ ಅವರೊಡನೆ ನಡೆಸುತ್ತಿದ್ದ ಚರ್ಚೆ, ವಿಚಾರವಿನಿಮಯಗಳಿಂದ ಸುಸ್ಪಷ್ಟವಾಗುತ್ತಿದ್ದಿತು. ಸಂಸ್ಕೃತದಲ್ಲಾದರೂ ಅವರಿಗಿದ್ದ ಪಾಂಡಿತ್ಯ ಅದ್ವಿತೀಯವಾದುದು. ಶ್ರೀಮಾನ್ ದೇಶಿಕಾಚಾರ್ಯರು ಕೇವಲ ಶುಷ್ಕ ಪಂಡಿತರಾಗಿರಲಿಲ್ಲ. ಇವರಿಗೆ ನಿಷ್ಕೃಷ್ಟವಾದ ಆಂಗ್ಲಸಾಹಿತ್ಯ ಇಂಗ್ಲೀಷಿನ ಪರಿಚಯವೂ ಇದ್ದಿತು. ಇವರು Upper secondary ಸ್ಕೂಲಿನಲ್ಲಿ ಇಂಗ್ಲಿಷ್ ಉಪಾಧ್ಯಾಯರಾಗಿದ್ದುದಲ್ಲದೆ ಮುಖ್ಯೋಪಾಧ್ಯಾಯರೂ ಆಗಿದ್ದರು. ಇವರಿಗೆ ಬಹುಶಃ ಇಂಗ್ಲಿಷ್‌ಭಾಷಾ

ಪರಿಚಯವಿಲ್ಲವೆಂದೇ ಭಾವಿಸಿದ್ದ ನನಗೆ, ಅವರ ಆಂಗ್ಲಭಾಷಾ ಇಂಗ್ಲಿಷ್ ಪಾಂಡಿತ್ಯವೆಷ್ಟೊಂದು ಆಳವಾದುದೆಂಬುದರ ಅನುಭವ ಕ್ರಮೇಣ ಉಂಟಾಯಿತು. ಸಂಸ್ಕೃತ, ಇಂಗ್ಲಿಷ್ ಈ ಮೂರೂ ಭಾಷೆಗಳಲ್ಲಿ ಅವರಿಗೆ ಅಪರಿಮಿತವಾದ ಪಾಂಡಿತ್ಯವಿತ್ತು.

ಶ್ರೀಮಾನ್ ದೇಶಿಕಾಚಾರ್ಯರು ವೇಷಭೂಷಣಗಳಲ್ಲಿ ಅಲೌಕಿಕರಂತೆ ಕಂಡುಬರುತ್ತಿದ್ದರೂ ಅವರು ಸಂಪೂರ್ಣ ಲೌಕಿಕರು. ಲೌಕಿಕರೊಡನೆ ಅವರು ಬೆರೆತುಕೊಳ್ಳುತ್ತಿದ್ದ ರೀತಿ, ಅವರು ಆಧುನಿಕ ಪ್ರಜ್ಞೆಯನ್ನು ಸಂಪೂರ್ಣವುಳ್ಳವ ರಾಗಿದ್ದಾರೆಂಬುದಕ್ಕೆ ಸಾಕ್ಷಿಯಾಗಿದ್ದಿತು. ಒಂದೆರಡು ಬಾರಿ ನಾನು ಅವರೊಡನೆ ವಿನೋದಕ್ಕಾಗಿ "ಈ ಸಂಪ್ರದಾಯ ನಿಮ್ಮೊಂದಿಗೇ ಹೋಗಲಿ. ನಿಮ್ಮ ಮಕ್ಕಳಿಗೆ ಇದನ್ನು ಕಲಿಸಬೇಡಿ" ಎಂದಾಗ ಅವರು ಈಗ ನಾನು ಇದನ್ನು ಬಿಡುವುದು ಸಾಧ್ಯವಿಲ್ಲ. ಆದರೆ ನಮ್ಮ ಹುಡುಗರಿಗೆ ಇದನ್ನು ಅನುಸರಿಸಬೇಕೆಂದು ಕಟ್ಟಳೆಯನ್ನೇನೂ ವಿಧಿಸುವುದಿಲ್ಲ. ಕಾಲ ದೇಶ ಪರಿವರ್ತನೆಗಳಂತೆ ಬದಲಾವಣೆ ಅನಿವಾರ್ಯ. ನಮ್ಮ ಹುಡುಗರಿಗೆ ನಾನು ಯಾವೊಂದು ನಿರ್ಬಂಧವನ್ನೂ ಹಾಕಿಲ್ಲ ಎಂದು ಹೇಳಿದರು. ಈ ಮಾತು ಸತ್ಯ ಎಂಬುದು ಅವರ ಹುಡುಗರನ್ನು ಕಂಡ ಯಾರಿಗಾದರೂ ಅರ್ಥವಾಗುತ್ತಿತ್ತು.

ಲೋಕದಲ್ಲಿ ಅಸಾಧ್ಯವಾದುದು ಯಾವುದೂ ಇಲ್ಲ ಎಂಬ ದೃಢವಾದ ನಂಬಿಕೆ ಶ್ರೀಮಾನ್ ದೇಶಿಕಾಚಾರ್ಯರದು. ಅವರು ಶಬ್ದಗಳಿಗೆ ಅರ್ಥೈಸುತ್ತಿದ್ದ ರೀತಿ, ಅವುಗಳ ವ್ಯುತ್ಪತ್ತಿಯನ್ನು ಊಹಿಸುತ್ತಿದ್ದ ವಿಧಾನ ನಿಜವಾಗಿಯೂ ಶ್ಲಾಘನೀಯವಾದುದು. ಅವರು ಯಾವೊಂದು ಶಬ್ದಕ್ಕೂ ಅರ್ಥ ತಿಳಿಯದು ಎಂದು ಸಂಪೂರ್ಣವಾಗಿ ಒಪ್ಪಿಕೊಂಡುದನ್ನು ನಾನು ಕಂಡಿಲ್ಲ ಕೇಳಿಲ್ಲ.

ಶ್ರೀಮಾನ್ ದೇಶಿಕಾಚಾರ್ಯರು ಪ್ರತಿಭಾ ಸಂಪನ್ನರಾದ ಕವಿಗಳು. ಸಂಸ್ಕೃತ, ಹಳಗನ್ನಡ, ಹೊಸಗನ್ನಡ ಈ ಮೂರರಲ್ಲಿಯೂ ಲೀಲಾಜಾಲವಾಗಿ ಕಾವ್ಯವನ್ನೂ ರಚಿಸುವುದು ಅವರಿಗೆ ಕರತಲಾಮಲಕವಾಗಿದ್ದಿತು. ಇವರ ಕಂದಪದ್ಯಗಳು ರನ್ನ ಜನ್ನರ ಕಂದಗಳಂತೆ ಸುಲಲಿತವೂ ಸುಮಧುರವೂ ಆಗಿರುತ್ತವೆಂದು ಹಿರಿಯರೊಬ್ಬರು ಉಸುರಿದ ನೆನಪು ನನಗಿದೆ. ಇವರು ಆಶುಕವಿಗಳು. ಸುಪ್ರೌಢ ಹಳಗನ್ನಡದಲ್ಲಿ ಕಾವ್ಯವನ್ನೂ ಬರೆಯಬಲ್ಲವರೆಂಬುದಕ್ಕೆ ಅವರ ವರದಕರಕಮಲಸ್ತವಂ, ಮುಕುಂದಮಾಲಾಸ್ತೋತ್ರಗಳೇ ಸಾಕ್ಷಿ.

ಶ್ರೀಮಾನ್ ದೇಶಿಕಾಚಾರ್ಯರು ಕರ್ತವ್ಯಪ್ರಜ್ಞೆಯಲ್ಲಿ ನಿಮಗ್ನರಾಗಿ, ಬಾಹ್ಯಪ್ರಪಂಚವನ್ನೇ ಮರೆದಿರುತ್ತಿದ್ದರೆಂಬುದಕ್ಕೆ ಒಂದು ಪ್ರಸಂಗವನ್ನು ಜ್ಞಾಪಿಸಿಕೊಳ್ಳಬಹುದು. ಒಮ್ಮೆ ಅವರು ಅಭಿಮಾನಿಗಳೊಬ್ಬರು ಕೊಟ್ಟ ಬಾಳೆಯ ಹಣ್ಣನ್ನು ಮೇಜಿನ ಅರೆಯಲ್ಲಿ ಹಾಕಿದ್ದರು. ಕೆಲಸದ ನಡುವೆ ಅದನ್ನು ತಿನ್ನುವುದನ್ನಾಗಲೀ, ಮನೆಗೆ ಕೊಂಡೊಯ್ಯುವುದಾಗಲೀ ಮರೆತುಬಿಟ್ಟರು. ಕಛೇರಿಗೆ ಬಂದರೂ ಎರಡು ಮೂರು ದಿನಗಳು ಅದನ್ನು ಗಮನಿಸಲೇ ಇಲ್ಲ. ಕೊನೆಗೊಮ್ಮೆ ತಮ್ಮ ಭಾಗವತವನ್ನು ಹುಡುಕುವ ಸಂದರ್ಭದಲ್ಲಿ ಅರೆಗೆ ಕೈಹಾಕಿದಾಗ ಆ ಭಾಗವತವೆಲ್ಲ ಅಸ್ತವ್ಯಸ್ತವಾಗಿ ಚೆಲ್ಲಾಪಿಲ್ಲಿಯಾಗಿ ಚೂರುಚೂರಾಗಿತ್ತು. ಅವರಿಟ್ಟಿದ್ದ ಬಾಳೆಯ ಹಣ್ಣಿಗಾಗಿ ಮೇಜಿನ ಅರೆಯೊಳಕ್ಕೆ ಅಳಿಲೊಂದು ನುಗ್ಗಿ ಬಾಳೆಯ ಹಣ್ಣನ್ನು ತಿಂದುದಲ್ಲದೆ ಹಣ್ಣಿನೊಂದಿಗೆ ಭಾಗವತವನ್ನು ಆ ದೆಶೆಗೆ ತಂದಿದ್ದಿತು.

ಶ್ರೀಮಾನ್ ದೇಶಿಕಾಚಾರ್ಯರು ಒಳ್ಳೆಯ ರಸಿಕರು; ವಾಗ್ಮಿಗಳು; ಉತ್ತಮ ವಿಮರ್ಶಕರು ಎಲ್ಲಕ್ಕಿಂತ ಮಿಗಿಲಾಗಿ ಸರಳ ನಡೆನುಡಿಗಳನ್ನುಳ್ಳವರು, ಸದ್ಗುಣ ಸಂಪನ್ನರು. ಇವರ ಸ್ನೇಹಿತವರ್ಗ ಅಪಾರವಾಗಿದ್ದಿತು. ನಿಘಂಟಿಗೆ ಅವರು ಸಲ್ಲಿಸಿರುವ ಸೇವೆ ಬಹುಕಾಲ ಸ್ಮರಿಸುವಂತಹುದು. ಪುಣ್ಯಾತ್ಮರಾದ ಹೆಮ್ಮಿಗೆ ದೇಶಿಕಾಚಾರ್ಯರ ಆತ್ಮಕ್ಕೆ ಭಗವಂತನು ಚಿರಶಾಂತಿಯನ್ನೀಯಲಿ ಎಂದು ಪ್ರಾರ್ಥಿಸುತ್ತೇನೆ.

■

# ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ

ನವೋದಯ ಸಾಹಿತ್ಯದ ಅಗ್ರಪಂಕ್ತಿಗೆ ಸೇರಿದವರಲ್ಲಿ ಎಂ.ಆರ್. ಶ್ರೀನಿವಾಸ ಮೂರ್ತಿ ಅವರೂ ಒಬ್ಬರು. ಇವರು ೧೮೯೨ರಲ್ಲಿ ಜನ್ಮತಳೆದು ೧೯೫೩ರಲ್ಲಿ ದೈವಾಧೀನರಾದರು. ಶ್ರೀಯುತರ ಜನ್ಮಶತಾಬ್ದಿಯನ್ನು ಇಂದು ನಾವು ಆಚರಿಸುತ್ತಿದ್ದೇವೆ. ಒಂದುವರ್ಷ ತಡವಾಗಿಯಾದರೂ ಈ ಕಾರ್ಯವನ್ನು ಆಚರಿಸುತ್ತಿದ್ದೇವೆ ಎಂಬುದೇ ಸಮಾಧಾನದ ಸಂಗತಿಯಾಗಿದೆ.

ಎಂ.ಆರ್.ಶ್ರೀ ಅವರ ಜೀವನ ಚರಿತ್ರೆ ವೈಶಿಷ್ಟ್ಯಪೂರ್ಣವಾಗಿದೆ, ವೈವಿಧ್ಯಮಯ ವಾಗಿದೆ. ಇವರ ಪೂರ್ವಿಕರು ಆಂಧ್ರಪ್ರದೇಶದವರು. ಆದರೆ ಇವರ ತಂದೆ ಶ್ರೀ ಎಂ.ಆರ್. ರಾಮಚಂದ್ರರಾಯರು ಮೈಸೂರಿನವರು. ಇವರ ತಾಯಿ ಸಾವಿತ್ರಮ್ಮನವರು ಕೃಷ್ಣಗಿರಿಯವರು. ಇವರ ಮಾತೃಭಾಷೆ ತೆಲುಗು. ಬಿ.ಎ. ಪದವೀಧರರಾದ ರಾಮಚಂದ್ರರಾಯರು ಗುಮಾಸ್ತರಾಗಿ ಕೆಲಸಕ್ಕೆ ಸೇರಿ ಅಮಲ್ದಾರರಾಗಿ ನಿವೃತ್ತರಾದರು. ಈ ದಂಪತಿಗಳಿಗೆ ಒಂಬತ್ತು ಜನ ಮಕ್ಕಳು. ಆರುಗಂಡು, ಮೂರುಹೆಣ್ಣು. ಗಂಡುಮಕ್ಕಳಲ್ಲಿ ಎರಡನೆಯವರೇ ಎಂ.ಆರ್. ಶ್ರೀನಿವಾಸಮೂರ್ತಿಗಳು. ಪ್ರಾಥಮಿಕ ಮಾಧ್ಯಮಿಕ ವಿದ್ಯಾಭ್ಯಾಸವನ್ನು ಬೇರೆಡೆಗಳಲ್ಲಿ ಮುಗಿಸಿದ ಎಂಆರ್‌ಶ್ರೀ ಅವರು ಪ್ರೌಢಶಾಲಾ ವ್ಯಾಸಂಗಕ್ಕೆ ಬೆಂಗಳೂರಿಗೆ ಬಂದರು. ಸೆಂಟ್ರಲ್ ಕಾಲೇಜ್ ಕಟ್ಟಡದಲ್ಲಿ ನಡೆಯುತ್ತಿದ್ದ ಪ್ರೌಢಶಾಲೆಯಲ್ಲಿ ತಮ್ಮ ವ್ಯಾಸಂಗವನ್ನು ಮುಂದುವರಿಸಿದರು. ಪ್ರತಿಭಾಶಾಲಿಗಳಾಗಿದ್ದ ಎಂಆರ್‌ಶ್ರೀ ಅವರು ವಿದ್ಯಾರ್ಥಿ ದೆಸೆಯಲ್ಲೇ ಪದ್ಯಗಳನ್ನು ಬರೆದು ಬಂಧುಮಿತ್ರರ ಮುಂದೆ ಓದುತ್ತಿದ್ದರು. ಎಫ್.ಎ. ವ್ಯಾಸಂಗವನ್ನು ಸೆಂಟ್ರಲ್ ಕಾಲೇಜಿನಲ್ಲಿಯೇ ಮುಂದುವರಿಸಿದ ಎಂಆರ್‌ಶ್ರೀ ಅವರು ಅಲ್ಲೇ ಸಾಹಿತ್ಯವ್ಯಾಸಂಗ ಮಾಡುತ್ತಿದ್ದ ತೆಲಾಂಗ್ ಎಂಬ ವಿದ್ಯಾರ್ಥಿಯ ಸಹವಾಸದಿಂದ ಕನ್ನಡ ಕಾವ್ಯಗಳ ಪರಿಚಯ ಮಾಡಿಕೊಂಡರು. ಸ್ವಸಾಮರ್ಥ್ಯದಿಂದ ಹಳಗನ್ನಡಕಾವ್ಯಗಳ ಅಭ್ಯಾಸವನ್ನು ಕೈಕೊಂಡು ಸೆಂಟ್ರಲ್‌ಕಾಲೇಜಿನ ಗ್ರಂಥಭಂಡಾರದಲ್ಲಿದ್ದ ಎಲ್ಲ ಪುಸ್ತಕಗಳನ್ನೂ ವ್ಯಾಸಂಗಮಾಡಿದ್ದರಂತೆ. ಇವರು ಬಿ.ಎ. ಮುಗಿಸುವ ವೇಳೆಗೆ ವಚನ ಸಾಹಿತ್ಯದ ಅನೇಕ ವಚನಗಳು ಹಳಗನ್ನಡ ಕಾವ್ಯಗಳ ಅನೇಕ ಭಾಗಗಳು ಇವರಿಗೆ ಮುಖೋದ್ಗತವಾಗಿದ್ದುವು. ತಾವು ವ್ಯಾಸಂಗಮಾಡಿದ ಸಾಹಿತ್ಯಕೃತಿಗಳ ಸ್ವಾರಸ್ಯವನ್ನು ಸಾಹಿತ್ಯಪ್ರಿಯರಾದ ತಮ್ಮ ತಂದೆಯವರ ಬಳಿ ಪ್ರತಿದಿನ ರಾತ್ರಿ ವಿವರಿಸಿ ಸಂತೋಷಿಸುತ್ತಿದ್ದರು. ಎಂಆರ್‌ಶ್ರೀ ಅವರು ಬಿ.ಎ. ತರಗತಿಯಲ್ಲಿ ಓದುತ್ತಿದ್ದಾಗಲೇ ಸಾವಿತ್ರಿ ಎಂಬ ಕಾದಂಬರಿಯನ್ನು ತಾವು ಕಂಡ ಒಂದು ಸಂದರ್ಭದ ಚಿತ್ರಣವನ್ನು ಆಧರಿಸಿ ಬರೆದಿದ್ದಾರೆ. ಬಿ.ಎ. ಮುಗಿಸಿದ ಎಂಆರ್‌ಶ್ರೀ ಅವರು ಲಾ ವ್ಯಾಸಂಗ ಮಾಡಲು ಬೊಂಬಾಯಿಗೆ ಹೋಗಿ ಅಲ್ಲಿ ಆರುತಿಂಗಳಿದ್ದು ಶಿವಮೊಗ್ಗೆಗೆ ಹಿಂತಿರುಗಿ ಅಲ್ಲೇ ಉಪಾಧ್ಯಾಯವೃತ್ತಿಯನ್ನು ಕೈಕೊಂಡರು.

ಶ್ರೀನಿವಾಸಮೂರ್ತಿ ಅವರು ಪ್ರೌಢಶಾಲೆಯಲ್ಲಿ ಓದುತ್ತಿದ್ದಾಗಲೇ ಅವರ ಸೋದರಮಾವನ ಮಗಳು ಲಕ್ಷ್ಮಮ್ಮನೊಡನೆ ಮದುವೆಯಾಯಿತು. ಶಿವಮೊಗ್ಗ ಪ್ರೌಢಶಾಲೆಯ ಬದಲಿಕೆಲಸ ಹೋಗಿ ತೀರ್ಥಹಳ್ಳಿ ಕನ್ನಡ ಪ್ರೌಢಶಾಲೆಯ ಕಾಯಂ ಕೆಲಸ ದೊರಕಿತು. ದಕ್ಷತೆ, ನಿಷ್ಠೆ, ಪ್ರಾಮಾಣಿಕತೆಗಳಿಂದ ಸೇವೆಸಲ್ಲಿಸಿದ ಎಂಆರ್‌ಶ್ರೀ ಅವರು ನಾರ್ಮಲ್ ಸ್ಕೂಲುಗಳ ಮುಖ್ಯೋಪಾಧ್ಯಾಯರಾಗಿ, ಇನ್ಸ್‌ಪೆಕ್ಟರ್ ಆಗಿ, ಜಿಲ್ಲಾವಿದ್ಯಾಧಿಕಾರಿಗಳಾಗಿ ಕಾರ್ಯನಿರ್ವಹಿಸಿದ್ದಾರೆ. ಶ್ರೀಯುತರ ಪಾಂಡಿತ್ಯವನ್ನು ಮನಗಂಡ ವಿದ್ಯಾಇಲಾಖೆಯವರು ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್ ಕನ್ನಡ ನಿಘಂಟು ಕಾರ್ಯಕ್ಕೆ ಎರವಲುಸೇವೆಯ ಮೇಲೆ ಕಳಿಸಿಕೊಟ್ಟರು. ಬೆಳ್ಳಾವೆ ವೆಂಕಟನಾರಾಯಣಪ್ಪನವರು ಪ್ರಧಾನ ಸಂಪಾದಕರಾಗಿದ್ದಾಗ

ಎಂಆರ್‌ಶ್ರೀ ಅವರು ಸಹಾಯಕಸಂಪಾದಕರಾಗಿ ಕೆಲಸಮಾಡಿ ಬೆಳ್ಳಾವೆಯವರ ನಂತರ ಪ್ರಧಾನಸಂಪಾದಕರಾಗಿ ೧೯೪೬ರಲ್ಲಿ ಆ ಕಾರ್ಯವನ್ನು ಮುಗಿಸಿ ವಿದ್ಯಾಇಲಾಖೆಗೆ ಹಿಂತಿರುಗಿ ೧೯೪೭ ನವೆಂಬರ್‌ನಲ್ಲಿ ನಿವೃತ್ತರಾದರು.

ಎಂಆರ್‌ಶ್ರೀ ಅವರು ತಮ್ಮ ಸೇವಾವಧಿಯನ್ನೆಲ್ಲ ವಿದ್ಯಾಕ್ಷೇತ್ರದಲ್ಲೇ ಕಳೆದು ಆಕ್ಷೇತ್ರಕ್ಕೆ ಸಂಬಂಧಿಸಿದಂತೆ ಆಳವಾದ ವಿಷಯಜ್ಞಾನವನ್ನು ಸಂಪಾದಿಸಿಕೊಂಡಿದ್ದರು. ಆದುದರಿಂದ ಅವರು ನಿವೃತ್ತರಾದ ಮೇಲೂ ವಿದ್ಯಾ ಇಲಾಖೆಯ ಸಂಬಂಧ ಮುಂದುವರಿಯಿತು. ಪಠ್ಯಪುಸ್ತಕಗಳ ಸಿದ್ಧತೆಯಲ್ಲಿ ಎಂಆರ್‌ಶ್ರೀ ಅವರು ಮಹತ್ತರವಾದ ಕಾರ್ಯವೆಸಗಿದ್ದಾರೆ. ಪಠ್ಯಪುಸ್ತಕಸಿದ್ಧತೆ ಮತ್ತು ಸಂಸ್ಕರಣಸಮಿತಿಯ ಸದಸ್ಯರಾಗಿ, ಅಧ್ಯಕ್ಷರಾಗಿ ಶ್ರೇಷ್ಠಪಠ್ಯಪುಸ್ತಕಗಳನ್ನು ಸಿದ್ಧಪಡಿಸಿದ ಕೀರ್ತಿ ಎಂಆರ್‌ಶ್ರೀಗೆ ಪ್ರಾಪ್ತವಾಯಿತು.

ಮೈಸೂರು ಸಂಸ್ಥಾನದಲ್ಲಿ ಸ್ಕೌಟ್ ಕಾರ್ಯಾಚರಣೆ ಪ್ರಾರಂಭವಾದಂದಿನಿಂದ ಅದರ ಧ್ಯೇಯಸಾಧನೆಗಾಗಿ ಎಂಆರ್‌ಶ್ರೀ ಅವರು ವಿಶೇಷವಾಗಿ ದುಡಿದಿದ್ದಾರೆ. ಅನೇಕ ಸ್ಕೌಟ್ ಶಿಕ್ಷಣಶಿಬಿರಗಳನ್ನು ನಡೆಸಿದ್ದಾರೆ. ಮಕ್ಕಳಲ್ಲಿ ಸಾಹಸ, ಸಹಕಾರ, ಸ್ವಾವಲಂಬನೆ, ನಿಯಮಪಾಲನೆ ಮುಂತಾದ ಗುಣಗಳು ಬೆಳೆಯಲು ಸಹಕಾರಿಯಾದ ಈ ಪದ್ಧತಿಯನ್ನು ಎಂಆರ್‌ಶ್ರೀ ಬಹಳವಾಗಿ ಮೆಚ್ಚಿಕೊಂಡು ವ್ಯಾಪಕವಾಗಿ ಅದರ ಪ್ರಚಾರ ನಡೆಸಿದರು. ಸ್ಕೌಟ್ ಪತ್ರಿಕೆಯ ಸಹಾಯಕ ಸಂಪಾದಕರಾಗಿ, ಸಂಪಾದಕರಾಗಿ ಅನೇಕ ಉಪಯುಕ್ತ ಲೇಖನಗಳನ್ನು ಸಂಪಾದಿಸಿ ಪ್ರಕಟಿಸಿದರು. "ಸ್ಕೌಟ್‌ಗಳ ಕೈಪಿಡಿ"ಯನ್ನು ಬರೆದು ಶಾಶ್ವತ ಉಪಕಾರ ಮಾಡಿದ್ದಾರೆ. ಸ್ಕೌಟ್‌ಗಳಿಗಾಗಿಯೇ 'ಕಂಠೀರವ ವಿಜಯ'ವನ್ನು ಬರೆದು ಅರಸರ ಸಮಕ್ಷ ಸ್ಕೌಟ್‌ಗಳು ಅಭಿನಯಿಸುವಂತೆ ಮಾಡಿ ಅರಸರಿಂದ ಸನ್ಮಾನಿತರಾದರು. ಎಂಆರ್‌ಶ್ರೀ ಅವರು ಸ್ಟೇಟ್ ಆರ್ಗನೈಸಿಂಗ್‌ಕಮೀಷನರಾಗಿ ಸ್ಕೌಟ್‌ಸಂಸ್ಥೆಗೆ ಕೀರ್ತಿಯನ್ನು ತಂದರು.

ಎಂಆರ್‌ಶ್ರೀ ಅವರು ಶ್ರೇಷ್ಠವಾಗ್ಮಿಗಳೆಂದು ಎಲ್ಲರಿಂದಲೂ ಹೊಗಳಿಕೆಗೆ ಪಾತ್ರರಾಗಿದ್ದರು. ಅವರಷ್ಟು ಪ್ರಭಾವಯುತವಾಗಿ ಉಪನ್ಯಾಸಮಾಡುತ್ತಿದ್ದವರು ಮತ್ತೊಬ್ಬರಿರಲಿಲ್ಲ ಎಂದು ಅವರ ಹಿರಿಯ ಸಮಕಾಲೀನರು ಮುಕ್ತಕಂಠದಿಂದ ಹೊಗಳಿದ್ದಾರೆ. "ಕನ್ನಡ ವಾಗ್ಮಿಗಳಲ್ಲಿ ಮೂರ್ತಿಗಳಿಗಿಂತ ಮೇಲ್ಮಟ್ಟದವರು ಯಾರಾದರೂ ಇದ್ದರೆ ಅವರು ನನಗೆ ತಿಳಿಯದವರು. ಸುಸಂಸ್ಕೃತ ಜನರ ದೃಷ್ಟಿಯಿಂದ ಕನ್ನಡದಲ್ಲಿ ಅತ್ಯುತ್ತಮ ಭಾಷಣಕಾರರೆಂದರೆ ನನಗೆ ಪರಿಚಿತರಾದವರಲ್ಲಿ ವೆಂಕಣ್ಣಯ್ಯನವರೊಬ್ಬರು, ಶ್ರೀನಿವಾಸಮೂರ್ತಿಗಳೊಬ್ಬರು" ಎಂದಿದ್ದಾರೆ ಡಿವಿಜಿ ಅವರು.

ಎಂ.ಆರ್. ಶ್ರೀನಿವಾಸಮೂರ್ತಿ ಅವರು ಕಥೆ, ಪದ್ಯ, ನಾಟಕ, ತತ್ತ್ವ, ಇತಿಹಾಸ ಶೋಧನೆ ಮೊದಲಾದ ಸಾಹಿತ್ಯ ಪ್ರಕಾರಗಳಲ್ಲಿ ಬಹುಕಾಲ ನಿಲ್ಲುವ ಕೃತಿಗಳನ್ನು ರಚಿಸಿದ್ದಾರೆ. ಅವರು ಸುಮಾರು ೩೦ ಲೇಖನಗಳನ್ನೂ ೪೦ ವಿಮರ್ಶೆಗಳನ್ನೂ ಮುನ್ನುಡಿಗಳನ್ನೂ ಬರೆದಿದ್ದಾರೆ. ಇಷ್ಟೇ ಅಲ್ಲದೆ ಇನ್ನೂ ಕೆಲವು ಅಸಮಗ್ರ ಅಪ್ರಕಟಿತ ಲೇಖನಗಳಿರಬಹುದು ಎಂದು ಭಾವಿಸುತ್ತೇವೆ.

ಎಂಆರ್‌ಶ್ರೀ ಅವರ ವಿಶೇಷ ಒಲವು ವೀರಶೈವ ಸಾಹಿತ್ಯದ ಕಡೆ ಎಂದು ನಿರ್ವಿವಾದವಾಗಿ ಹೇಳಬಹುದು. 'ಶೂನ್ಯಸಂಪಾದನೆ'ಗಳಿಗೆ ಸಂಬಂಧಿಸಿದಂತೆ ನಡೆದಿರುವ ಎಲ್ಲ ಅಧ್ಯಯನಗಳಿಗೂ ಎಂಆರ್‌ಶ್ರೀ ಅವರ 'ಶೂನ್ಯಸಂಪಾದನೆಗಳು' ಎಂಬ ಲೇಖನವೇ ಆಕರ ಎಂದು ಹೇಳಬಹುದು. ಮೈಸೂರು ವಿಶ್ವವಿದ್ಯಾಲಯಕ್ಕಾಗಿ ಎಂಆರ್‌ಶ್ರೀ ಅವರು ವೀರಶೈವ ಸಾಹಿತ್ಯದ ಸಮಗ್ರಚರಿತ್ರೆಯನ್ನು ರಚಿಸಿದ್ದರಂತೆ. ಆ ಗ್ರಂಥ ಪ್ರಕಟವಾಗಲಿಲ್ಲವಂತೆ. ಅದರ ಹಸ್ತಪ್ರತಿ ಎಲ್ಲಿದೆ ಎಂಬುದು ತಿಳಿದುಬಂದಿಲ್ಲ.

ಎಂಆರ್‌ಶ್ರೀ ಅವರು ಕವಿಗಳೂ ಆಗಿದ್ದರು. ಅವರ ಪ್ರಥಮಕಾವ್ಯ ವೃತ್ತಗಳಲ್ಲಿ ಬರೆದ ಒಂದು ಶತಕ. "ಶ್ರೀನಿವಾಸಮೂರ್ತಿಗಳಲ್ಲಿ ಹಲವು ವಿರೋಧಾಭಾಸಗಳಿದ್ದುವು. ಮೋಹಕವಾದ ಸೌಂದರ್ಯ, ಆದರೆ ಕೆಚ್ಚೆದೆ. ಜನ್ಮತಃ ಮಾಧ್ವರು, ಆದರೆ ಸ್ಮಾರ್ತರ ಸ್ನೇಹ, ಅದ್ವೈತದಲ್ಲಿ ಪಕ್ಷಪಾತ, ವೀರಶೈವದಲ್ಲಿ ಅಭಿಮಾನ, ವ್ಯಾಸಂಗ ಮಾಡಿದ್ದು ವಿಜ್ಞಾನ, ಬರೆದದ್ದು ಸಾಹಿತ್ಯ, ಓದಿದ್ದು ಇಂಗ್ಲೀಷು, ಬರೆದದ್ದು ಕನ್ನಡ; ಮನೆಯಲ್ಲಿ ಮಾತನಾಡುತ್ತಿದ್ದುದು ತೆಲುಗು, ಭಾಷಣ

ಮಾಡುತ್ತಿದ್ದುದು ಕನ್ನಡ. ರತ್ನದಂಥ ಮನುಷ್ಯ, ಚಿನ್ನದಂಥ ಸ್ನೇಹ; ಪರಿಶುದ್ಧವಾದ ಶೀಲ; ಅವುಗಳಲ್ಲಿ ವಿರೋಧವೂ ಇಲ್ಲ. ಆಭಾಸವೂ ಇಲ್ಲ. ಹೊರಗೆ ಹೇಗೋ ಒಳಗೂ ಹಾಗೇ. ಅವರ ಬರವಣಿಗೆಯೂ ಭಾಷಣವೂ ನಡವಳಿಕೆಯೂ ನಿರ್ಮಲವಾದ ಕನ್ನಡಿಯಂತಿರುತ್ತಿದ್ದವು. ಒಂದು ಪೆಡಸಾದ ಮಾತಾಗಲಿ, ಶುಷ್ಕಪಾಂಡಿತ್ಯ ಪ್ರದರ್ಶನವಾಗಲಿ, ಬೆರಗುಗೊಳಿಸಬೇಕೆಂಬ ದುರಭಿರುಚಿಯಾಗಲಿ ಇರಲಿಲ್ಲ. ಕುತ್ಸಿತವಿರಲಿಲ್ಲ, ಕೀಳುತನವಿರಲಿಲ್ಲ, ತುಂಬಿದ ಕೊಡ." ಎ.ಆರ್. ಕೃಷ್ಣಶಾಸ್ತ್ರಿಗಳು ಎಳೆಎಳೆಯಾಗಿ ಬಿಡಿಸಿರುವ ಎಂಆರ್‌ಶ್ರೀ ಅವರ ನೈಜಚಿತ್ರ ಇದು.

ಎಂ.ಆರ್. ಶ್ರೀನಿವಾಸಮೂರ್ತಿಗಳಿಗೆ ಲಭ್ಯವಾದ ಪ್ರಶಸ್ತಿಗಳು ಹಲವಾರು. ಶ್ರೀಯುತರು ಅರಮನೆ ಗುರುಮನೆ ಸಂಘ ಸಂಸ್ಥೆಗಳಿಂದ ಸನ್ಮಾನಿತರಾಗಿದ್ದಾರೆ. ೧೯೫೦ರಲ್ಲಿ ಸೊಲ್ಲಾಪುರದಲ್ಲಿ ನಡೆದ ಮೂವತ್ತಮೂರನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ೧೯೫೦ ರಿಂದ ೧೯೫೩ ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು.

ಎಂಆರ್‌ಶ್ರೀ ಅವರ ಜನನ ೨೮.೮.೧೮೯೨ ಮರಣ ೧೬.೯.೧೯೫೩. ಇಂದಿಗೆ ೧೦೧ ವರ್ಷಗಳಾಗಿರುವ ಶ್ರೀಯುತರ ಜನ್ಮಶತಾಬ್ದಿಯನ್ನು ಇಂದು ಆಚರಿಸುತ್ತಿರುವುದು ಒಂದು ಪುಣ್ಯವಿಶೇಷವೆಂದು ನಾನು ಭಾವಿಸಿದ್ದೇನೆ. ಇಂತಹ ಕಾರ್ಯವನ್ನು ಕೈಕೊಳ್ಳಲು ಪ್ರೇರಣೆ ನೀಡಿದವರು ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವಾಧ್ಯಕ್ಷರೂ ಎಂಆರ್‌ಶ್ರೀ ಅವರ ಶಿಷ್ಯರೂ ಆದ ಸನ್ಮಾನ್ಯ ನಿಟ್ಟೂರು ಶ್ರೀನಿವಾಸರಾಯರು. ಈ ಕಾರ್ಯಕ್ರಮಕ್ಕೆ ನೆರವು ನೀಡಿದವರು ಶಂ.ಬಾ. ಜೋಷಿ ದತ್ತಿನಿಧಿ, ಚಂದ್ರಶೇಖರಶರ್ಮ ದತ್ತಿನಿಧಿ, ರಾಜರತ್ನಂ ದತ್ತಿನಿಧಿ, ವೆಂಕಟರಂಗಪ್ಪ ದತ್ತಿನಿಧಿಯ ಸಂಸ್ಥಾಪಕರು ಮತ್ತು ಶ್ರೀ ಎ. ನರಸಿಂಹಮೂರ್ತಿ ಮತ್ತು ಶ್ರೀ ಎಂ. ಮಲ್ಲಿಕಾರ್ಜುನಯ್ಯನವರು. ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಎಲ್ಲ ವಿಧದ ನೆರವನ್ನೂ ನೀಡಿದೆ. ಈ ಎಲ್ಲ ಮಹನೀಯರನ್ನು ನಾನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

"ಕನ್ನಡವನ್ನು ಮಾತನಾಡುವವರು, ಕನ್ನಡದ ಅಭಿಮಾನಿಗಳು, ಕನ್ನಡದ ಸೇವೆ ಮಾಡುವವರು ಎಲ್ಲರೂ ಕನ್ನಡಿಗರೇ. ಅವರು ಎಲ್ಲಿದ್ದರೂ ಅದು ಕನ್ನಡ ನಾಡೇ."

"ಉತ್ತರ ಹಿಂದೂಸ್ಥಾನದಲ್ಲಿ ಕನ್ನಡವನ್ನು ಬೋಧಿಸುವ ಭಾಷಾವ್ಯಾಸಂಗದ ಪಾಠಶಾಲೆಗಳನ್ನು ಅಲ್ಲಿಯ ಸರ್ಕಾರಗಳು ಸ್ಥಾಪಿಸಬೇಕು. ನಮ್ಮ ರಾಷ್ಟ್ರನಾಯಕರು ಕನ್ನಡ ನಾಡಿಗೆ ಬಂದಾಗ ಹಿಂದಿಯನ್ನು ಕಲಿಯಿರಿ, ನಾನು ಹಿಂದಿಯಲ್ಲೇ ಮಾತನಾಡುವುದು ಎಂಬ ಪ್ರಭುತ್ವದ ಧೋರಣೆಯನ್ನು ಬಿಟ್ಟು ಸೌಜನ್ಯದಿಂದ ಕನ್ನಡದಲ್ಲಿಯೇ ಮಾತನಾಡುವ ಮತ್ತು ಕನ್ನಡಕ್ಕೂ ಗೌರವ ಕೊಡುವ ಶುಭಕಾಲ ಬರಲೆಂದು ಹಾರೈಸುತ್ತೇನೆ."

"ವಿಶ್ವವಿದ್ಯಾನಿಲಯಗಳಲ್ಲಿ ಸಹ ಕನ್ನಡವೇ ಜ್ಞಾನಸಾಹಿತ್ಯ ಬೋಧನೆಗೆ ವಾಹಕವಾಗಬೇಕು. ಕ್ಲಿಷ್ಟ ವಿಚಾರಗಳನ್ನು ಕನ್ನಡದಲ್ಲಿಯೇ ಆಲೋಚನೆ ಮಾಡುವ ಮತ್ತು ಕನ್ನಡದಲ್ಲಿಯೇ ವ್ಯಕ್ತಗೊಳಿಸುವ ರೂಢಿಯನ್ನು ನಾವು ಪಡೆಯಬೇಕು. ಯಾವ ಕಾರಣದಿಂದಲೇ ಆಗಲಿ ಕನ್ನಡಕ್ಕೆ ಪ್ರಮುಖಸ್ಥಾನ ದೊರೆಯದೆ ಹೋದರೆ ಅದು ಕುಂಠಿತವಾಗುತ್ತದೆ, ಜನತೆ ಕ್ಷೀಣಿಸುತ್ತದೆ, ಮುಂದಿನ ಕನ್ನಡ ಸಾಹಿತ್ಯವೆಲ್ಲ ಗಿಳಿಹಾಡು. ಅರ್ಜುನನ ಜೋಗೀಹಾಡುಗಳಲ್ಲಿ ಮುಕ್ತಾಯವಾಗುತ್ತದೆ. ಕನ್ನಡಿಗರು ಹಳ್ಳಿಯ ಗಮಾರರಾಗುತ್ತಾರೆ."

೧೯೫೦ ರಿಂದ ೧೯೫೩ ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಇವರು ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಪರಿಷತ್ತಿನ ಸರ್ವಾಂಗೀಣ ಪ್ರಗತಿಗೆ ವಿಶೇಷವಾಗಿ ಶ್ರಮಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ಕೈಕೊಂಡಿದ್ದ ಕನ್ನಡ ನಿಘಂಟಿಗೆ ಸರ್ಕಾರದಿಂದ ಒಂದು ಲಕ್ಷ ರೂಪಾಯಿಗಳನ್ನು ದೊರಕಿಸಿಕೊಟ್ಟು ಅದಕ್ಕೆ ಒಂದು ಭದ್ರವಾದ ಬುನಾದಿಯನ್ನು ಹಾಕಿದರು. ಕನ್ನಡ ನುಡಿ, ಸಾಹಿತ್ಯ ಪರಿಷತ್ಪತ್ರಿಕೆಗಳಲ್ಲಿ ಸಂಪಾದಕರಾಗಿ ಉನ್ನತಮಟ್ಟದ ಬರವಣಿಗೆಗಳನ್ನು ಬರೆದರು.

■

# ಆಸ್ಥಾನವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ

**ಕ**ರ್ನಾಟಕ ರಾಜ್ಯದ ಕೋಲಾರ ಜಿಲ್ಲೆ, ಗೌರೀಬಿದನೂರು ತಾಲ್ಲೂಕಿನ ಸಣ್ಣಗ್ರಾಮ ಗುಂಡ್ಲಹಳ್ಳಿಯ ಬಡಕುಟುಂಬದಲ್ಲಿ ಶ್ರೀಯುತರ ಜನನವಾಯಿತು.

ಪ್ರಾಥಮಿಕಶಿಕ್ಷಣ ಹಳ್ಳಿಯಲ್ಲಿ ನಡೆಯಿತು. ಬಡತನದ ಬವಣೆಯಿಂದಾಗಿ ಮುಂದಿನ ಶಿಕ್ಷಣಕ್ಕೆ ಅವಕಾಶವಾಗಲಿಲ್ಲ. ರೈತಾಪಿವೃತ್ತಿಯಲ್ಲಿ ಬಾಲ್ಯಕಳೆದು ಯೌವನಕ್ಕೆ ಅಡಿಯಿಟ್ಟರು. ಇಪ್ಪತ್ತೆರಡರ ಹರಯ, ವಿದ್ಯಾಕಾಂಕ್ಷೆ ಮಿಗಿಲಾಯಿತು. ಪರಿಚಿತರ ಹೆಂಡದ ಲಾರಿಯೊಂದು ಬಿಟ್ಟಿಯಾಗಿ ಹಳ್ಳಿಯಿಂದ ಬೆಂಗಳೂರಿಗೆ ಅವರನ್ನು ತಂದುಬಿಟ್ಟಿತು (೧೯೩೦). ಹಳ್ಳಿಯಿಂದ ಬರುವಾಗ ತಂದೆಯವರು ಹರಸಿ ಕೊಟ್ಟದ್ದು ಐದುರೂಪಾಯಿಗಳು. ಭಿಕ್ಷಾಪಾತ್ರೆಕೊಂಡು, ಭಿಕ್ಷಾನ್ನಉಂಡು, ಬೀದಿಯ ದೀಪದಡಿಯಲ್ಲಿ ಅಭ್ಯಾಸ ಆರಂಭವಾಯಿತು. ಹರಯಕ್ಕೆ ಬಂದವನೆಂದು ವಾರಾನ್ನ ನೀಡಲೂ ಹಿಂಜರಿದವರು ಕೆಲವೇ ದಿನಗಳಲ್ಲಿ ಮನೆಗೆ ಬರಮಾಡಿಕೊಂಡು ಪ್ರಸಾದನೀಡಿ ಪೋಷಿಸಿದರು.

### ವಿದ್ಯಾಭ್ಯಾಸ

ಹಳ್ಳಿಗನಾಗಿ ಬಂದವನು ವಿದ್ವಾಂಸರ ಆಶ್ರಯದಲ್ಲಿ ವೇದಾಧ್ಯಯನ ಮಾಡಿದನು. ಸಂಸ್ಕೃತದ ಅಕ್ಷರಾಭ್ಯಾಸದಿಂದ ಆರಂಭಿಸಿ ಹತ್ತುವರ್ಷಗಳಲ್ಲಿ ಪರಿಣತರಾದರು (೧೯೩೧-೧೯೪೧). ಸಂಸ್ಕೃತ, ಕನ್ನಡ, ಹಿಂದಿ ಭಾಷೆಗಳಲ್ಲಿ ಪದವೀಧರರಾದರು. ಬಾಲ್ಯದಿಂದ ಒಡನಾಡಿಯಾಗಿದ್ದ ತೆಲುಗಿನಲ್ಲೂ ಪಾಂಡಿತ್ಯ ಬೆಳೆಯಿತು. ಓದಿನೊಡನೆ ಭಾಷಣ, ಲೇಖನಗಳೂ ಬೆಳೆದುಬಂದವು. ಪರಂಪರೆಯಿಂದ ಬೆನ್ನಿಗೆ ಬರಲಿದ್ದ ಪೀಠಾಧಿಕಾರವನ್ನು ಬದಿಗೊತ್ತಿ ಶಿಕ್ಷಣಕ್ಷೇತ್ರದಲ್ಲಿ ಶ್ರಮಿಸುವ ನಿರ್ಧಾರಮಾಡಿದರು.

### ಮಹಾತ್ಮಾಜಿಯವರ ಆದರ್ಶ

ವಿದ್ಯಾರ್ಥಿದೆಸೆಯಿಂದಲೇ ಮಹಾತ್ಮಾಗಾಂಧೀಜಿಯವರ ಆದರ್ಶ ಅವರದು. ಮಹಾತ್ಮರು ಬೆಂಗಳೂರಿಗೆ ಬಂದಾಗ ಮುಂಜಾನೆ, ಸಂಜೆ ಮಹಾತ್ಮರ ಪ್ರಾರ್ಥನಾಸಭೆಗಳಿಗೆ ಹಾಜರಿ ತಪ್ಪುತ್ತಿರಲಿಲ್ಲ. ಮಹಾತ್ಮರು ಹರಿಜನ ದೇವಾಲಯ ಪ್ರವೇಶ ಸಂದರ್ಭದಲ್ಲಿ ಯರವಾಡ ಸೆರೆಮನೆಯಲ್ಲಿ (೧೯೩೩) ಮೊದಲ ಉಪವಾಸ ೨೧ ದಿನ ಆರಂಭಿಸಿದಾಗ ಕಳವಳಗೊಂಡ ಶ್ರೀಯುತರು ಪೂನಾಕ್ಕೆ ತೆರಳಿದರು. ಉಪವಾಸ ಮುಕ್ತಾಯವಾಗುವವರೆಗೆ ಮುಂಬೈ ಆರ್ಯಸಮಾಜದಲ್ಲಿ ತಂಗಿದ್ದು ಮುಕ್ತಾಯದ ದಿನ ಮಹಾತ್ಮರನ್ನು ಸಂದರ್ಶಿಸಿ ಹಿಂತಿರುಗಿದರು. ಸ್ವಾಮಿ ದಯಾನಂದ ಸರಸ್ವತಿ, ಶ್ರದ್ಧಾನಂದರು, ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದ ಮುಂತಾದವರ ಆದರ್ಶದಲ್ಲಿ ನಡೆವ ಹಂಬಲ. ಲಿಂ. ಹರ್ಡೇಕರ್ ಮಂಜಪ್ಪನವರ ಗ್ರಂಥಗಳಿಂದ ಸ್ಫೂರ್ತಿಪಡೆದು ಶಿವಶರಣಸಾಹಿತ್ಯದಲ್ಲಿ ಅನೇಕ ಲೇಖನಗಳನ್ನು ಪ್ರಕಟಮಾಡಿದ್ದಾರೆ.

### ನ್ಯಾಯಕ್ಕಾಗಿ ಹೋರಾಟ

ಸಾರ್ವಜನಿಕರಿಗಾಗಿ ತೆರೆದ ಬೆಂಗಳೂರಿನ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ವೇದವೇದಾಂತಾದಿ ಶಾಸ್ತ್ರಗಳು ಕಾಲೇಜಿನಿಂದ ಬೇರ್ಪಟ್ಟಿದ್ದವು. ಹಿಂದುಳಿದವರ ಪಾಲಿಗಿದ್ದದ್ದು ಸಾಹಿತ್ಯ, ತರ್ಕ ಮತ್ತು ವ್ಯಾಕರಣಗಳು

ಮಾತ್ರ ಆದರೂ ಅಲ್ಲಿ ಬಗೆಬಗೆಯ ಕಿರುಕುಳಗಳು. ಈ ಅನ್ಯಾಯಗಳನ್ನು ಕುರಿತು ಶ್ರೀಯುತರ ಲೇಖನಿ(೧೯೩೬)ಯಿಂದ ಹೊರಟ ಲೇಖನಗಳು ಜನತೆಯನ್ನು ಎಚ್ಚರಿಸಿದವು. ಪ್ರಜಾಪ್ರತಿನಿಧಿ ಸಭೆಯಲ್ಲಿ ಗೊಂದಲವಾಯಿತು. ಫಲವಾಗಿ ಹಿಂದುಳಿದ ವಿದ್ಯಾರ್ಥಿಗಳ ಹಿತರಕ್ಷಣೆಗಾಗಿ ಲಿಂ. ಸರ್ ಕೆ.ಪಿ. ಪುಟ್ಟಣ್ಣಶೆಟ್ಟರ ಅಧ್ಯಕ್ಷತೆಯಲ್ಲಿ (೧೯೩೭) ಕಾರ್ಯಕಾರಿ ಮಂಡಳಿಯ ರಚನೆ. ಶ್ರೀಕ್ಷೇತ್ರ ಸಿದ್ಧಗಂಗೆಯಲ್ಲಿ ವ್ಯಾಸಂಗ. ೧೯೪೨ರ ತರುವಾಯ ಅದೇ ಸಂಸ್ಕೃತ ಕಾಲೇಜಿನಲ್ಲಿ ಸಾಹಿತ್ಯ ವಿಭಾಗದಲ್ಲಿ ಪಂಡಿತರಾಗಿ ನೇಮಕ. ಅನಂತರ ಕಾ.ಕಾ. ಮಂಡಳಿಯ ಅಧ್ಯಕ್ಷರಾಗಿ ಬಂದ ದಿವಾನ್ ಬಹದ್ದೂರ್ ಲಿಂ.ಪಿ. ಮಹಾದೇವಯ್ಯನವರ ಸಲಹೆಗಾರರೆನಿಸಿ, ಸಂಸ್ಕೃತ ಕಾಲೇಜಿನಲ್ಲಿ ಮತ್ತೆ ವೇದವೇದಾಂತ ತರಗತಿಗಳು ಮತ್ತು ಜೈನಸಿದ್ಧಾಂತಗಳ ಸ್ಥಾಪನೆಗೆ ಕಾರಣರಾದರು. ವೇದಾಂತದಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತಗಳ ಜೊತೆಗೆ "ಶಕ್ತಿವಿಶಿಷ್ಟಾದ್ವೈತ"ವನ್ನು ಪ್ರಾರಂಭಿಸಿದ ಹಿರಿಮೆ ಇವರದು. ವೇದಾಂತಕ್ಕೆ ಅಗತ್ಯವಾದ ಪಠ್ಯಪುಸ್ತಕಗಳ ರಚನೆ, ಪ್ರಕಟನೆ.

**ಕ್ರಾಂತಿಯ ಫಲ**

ಕಾಲೇಜಿನ ಪ್ರಗತಿಯನ್ನು ಕಂಡು ಹರ್ಷಗೊಂಡ ಕೊಡುಗೈದೊರೆಗಳು ಪ್ರೋತ್ಸಾಹಿಸಿ ನೀಡಿದ ಸುಮಾರು ಒಂದುಲಕ್ಷ ರೂಪಾಯಿಗಳ ಕೊಡುಗೆಗಳು ವಿದ್ಯಾರ್ಥಿಗಳ ಉಪಹಾರನಿಧಿ, ಸಾಹಿತ್ಯ ಪ್ರೋತ್ಸಾಹನಿಧಿ ಮತ್ತು ಬಹುಮಾನನಿಧಿಗಳ ರೂಪದಲ್ಲಿ ನಿಕ್ಷೇಪಗೊಳ್ಳಲು ಕಾಲೇಜಿನ ಅಧ್ಯಕ್ಷ ದಿ. ಕೆ.ಎಸ್. ಧರಣೇಂದ್ರಯ್ಯನವರ ಜೊತೆ ಶ್ರೀಯುತರು ಶ್ರಮಿಸಿದರು. ನೂತನವಾಗಿ ಆರಂಭಗೊಂಡ ಶಕ್ತಿವಿಶಿಷ್ಟಾದ್ವೈತ ವಿಭಾಗದ ಸಹಅಧ್ಯಾಪಕರಾಗಿ ನೇಮಕಗೊಂಡ (೧೯೪೮) ಶ್ರೀಯುತರು ಆ ವಿಭಾಗಕ್ಕೆ ಬೇಕಾದ ಪಠ್ಯಗ್ರಂಥಗಳನ್ನು ಸಿದ್ಧಪಡಿಸಲೆಂದು ಆವರೆಗೆ ಪ್ರಕಟವಾಗದಿದ್ದ ಅನೇಕ 'ಉಪನಿಷತ್ ಭಾಷ್ಯಗಳು', 'ಬ್ರಹ್ಮಸೂತ್ರ ವೃತ್ತಿ' ಮುಂತಾದುವನ್ನು ಸಂಪಾದಿಸಿ ಭಾಷಾಂತರಿಸಿ ಪ್ರಕಟಮಾಡಿದರು.

ಕಾಲೇಜಿನ ಪ್ರಗತಿಯನ್ನು ಸಹಿಸದೆ ಕೆಲವರ ದೃಷ್ಟಿ ತಾಗಿದಂತಾಗಿ ಅಧ್ಯಕ್ಷರಿಗೆ ನಿವೃತ್ತಿಯಾಯಿತು, ಪ್ರಿನ್ಸಿಪಾಲರಿಗೆ ವರ್ಗವಾಯಿತು, ಶ್ರೀಯುತರು ಮೈಸೂರಿಗೆ ಬರುವಂತಾಯಿತು (೧೯೫೨).

**ಹೊಸಸವಾಲು**

ಅದುವರೆಗೆ ಕೇವಲ ಒಂದು ವರ್ಗಕ್ಕೆ ಮೀಸಲಾಗಿದ್ದ ಮೈಸೂರಿನ ಮಹಾರಾಜ ಸಂಸ್ಕೃತ ಕಾಲೇಜಿಗೆ ವರ್ಗವಾದ ಮೊದಲ ಬ್ರಾಹ್ಮಣೇತರ ಅಧ್ಯಾಪಕರು ಇವರು. ಈ ವರ್ಗದಿಂದಾಗಿ ಅಲ್ಲಿಯೂ ಶಕ್ತಿವಿಶಿಷ್ಟಾದ್ವೈತ ವೇದಾಂತ ವಿಭಾಗ ತೆರೆಯಿತು. ಈ ಅವಧಿಯಲ್ಲಿ ಅವರು ಎದುರಿಸಿದ ಎಡರುಗಳು ಅನೇಕ. ಆ ವಿಭಾಗವನ್ನು ಆರಂಭಿಸಿ ಆರು ವರ್ಷಗಳ ಕಾಲ ಆ ವಿಭಾಗದ ಅಧ್ಯಾಪಕರಾಗಿ ಪರೀಕ್ಷಕರಾಗಿದ್ದರೂ, ಶಕ್ತಿವಿಶಿಷ್ಟಾದ್ವೈತ ಪರೀಕ್ಷೆಯ ಪದವಿ ಅವರಿಗೂ ಅಗತ್ಯವಾಯಿತು. ೧೯೫೬ರಲ್ಲಿ ಪೂರ್ವ-ಉತ್ತರ ವಿಭಾಗಗಳೆರಡರಲ್ಲಿಯೂ ಒಮ್ಮೆಗೆ ವಿದ್ವತ್ ಪರೀಕ್ಷೆಗೆ ಕುಳಿತು ಸರ್ವ ಪ್ರವೀಣರಾಗಿ ಉತ್ತೀರ್ಣರಾದರು.

**ಆಗಮವಿಭಾಗದಲ್ಲಿ ನೂತನ ಶಾಖೆಯ ಪ್ರಾರಂಭ**

ಅದೇವರ್ಷ 'ವೀರಶೈವಾಗಮ' ವಿಭಾಗವನ್ನು ನೂತನವಾಗಿ ಆರಂಭಿಸಲು ಕಾರಣರಾದ ಶ್ರೀಯುತರನ್ನೇ ಸರ್ಕಾರ ಅಲ್ಲಿ ಪ್ರಾಧ್ಯಾಪಕರನ್ನಾಗಿ ನೇಮಿಸಿತು. ಆ ವಿಭಾಗದ ಪಠ್ಯಗ್ರಂಥಗಳಾದ 'ವೀರಶೈವಾಗಮ ಪ್ರಯೋಗರತ್ನಂ' ಮುಂತಾದ ಕೃತಿಗಳನ್ನು ರಚಿಸಿ ಪ್ರಕಟಿಸಿದರು.

**ಮತ್ತೆ ಶಕ್ತಿವಿಶಿಷ್ಟಾದ್ವೈತ ವಿಭಾಗಕ್ಕೆ**

೧೯೬೨ರಲ್ಲಿ ಶಕ್ತಿವಿಶಿಷ್ಟಾದ್ವೈತ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದ ಆಸ್ಥಾನ ಮಹಾವಿದ್ವಾನ್ ಪಂಡಿತ ರತ್ನಂ ದಿ. ಸಿರಸಿ ಗುರುಶಾಂತ ಶಾಸ್ತ್ರಿಯವರು ನಿವೃತ್ತರಾದ ಮೇಲೆ ಶ್ರೀಯುತರು ಮತ್ತೆ 'ಶಕ್ತಿವಿಶಿಷ್ಟಾದ್ವೈತ' ವಿಭಾಗಕ್ಕೆ ಪ್ರಾಧ್ಯಾಪಕರಾಗಿ ನೇಮಕವಾದರು.

ವಿವಿಧ ಪಠ್ಯಪುಸ್ತಕ ಸಮಿತಿಗಳಲ್ಲಿ, ಸಂಸ್ಕೃತಶಿಕ್ಷಣ ಮಂಡಲಿಯಲ್ಲಿ ಸದಸ್ಯರಾಗಿ ಅನೇಕ ಪಠ್ಯಪುಸ್ತಕಗಳ ರಚನೆಗಾಗಿ ಶ್ರಮಿಸಿದರು. ವೀರಶೈವ ವೇದ-ಪ್ರಯೋಗ ತರಗತಿಗಳನ್ನು ತೆರೆಯಲು ಕಾರಣರಾಗಿ ಅದಕ್ಕೆ ಅಗತ್ಯವಾದ 'ವೀರಶೈವ ಪೂರ್ವಪ್ರಯೋಗರತ್ನಂ' ಮೊದಲಾದ ಕೃತಿಗಳನ್ನು ರಚಿಸಿ ಪ್ರಕಟಿಸಿದರು. ಬೆಂಗಳೂರು ಮತ್ತು ಮೈಸೂರು ಸಂಸ್ಕೃತ ಕಾಲೇಜುಗಳಲ್ಲಿ ಸುಮಾರು ಮೂವತ್ತುಮೂರು ವರ್ಷಗಳ ಕಾಲ ಅಧ್ಯಾಪಕ-ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನೂರಾರುಮಂದಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿ ೧೯೭೫ರಲ್ಲಿ ನಿವೃತ್ತರಾದರು.

**ಲೇಖಕರಾಗಿ**

೧೯೪೫ರಲ್ಲಿ ತಾವು ಆರಂಭಿಸಿದ "ಪ್ರಬೋಧ ಪುಸ್ತಕ ಮಾಲೆ"ಯಲ್ಲಿ ಮತ್ತು ಇತರತ್ರ ಈವರೆಗೆ ಶ್ರೀಯುತರ ಸುಮಾರು ೮೫ ಗ್ರಂಥಗಳು ಪ್ರಕಟವಾಗಿವೆ. ಅನೇಕ ಉಪನಿಷತ್‌ಭಾಷ್ಯಗಳ ಮೂಲ ಮತ್ತು ಕನ್ನಡ ಅನುವಾದಗಳು ಪ್ರಕಟವಾಗಿವೆ. ವಿವಿಧ ಸಂಸ್ಕೃತ, ಕನ್ನಡ ನಿಯತಕಾಲಿಕೆಗಳಲ್ಲಿ ವಿವಿಧ ವಿದ್ವತ್‌ಸಂಪುಟಗಳಲ್ಲಿ ಸಾವಿರಕ್ಕೂ ಮಿಕ್ಕು ಪುಟಗಳಷ್ಟು ಲೇಖನಗಳು ಪ್ರಕಟವಾಗಿವೆ. ಕಾವ್ಯ, ನಾಟಕ, ಪ್ರಬಂಧ, ಕಥೆ, ವಿಮರ್ಶೆ ಮೊದಲಾದವು ಇವರ ಬರವಣಿಗೆಯ ಹರಹಿನಲ್ಲಿವೆ. ಇವರ ಕೃತಿಗಳನ್ನು ಮೈಸೂರು ವಿಶ್ವವಿದ್ಯಾನಿಲಯದ 'ಪ್ರಸಾರಾಂಗ', ಕರ್ನಾಟಕ ವಿಶ್ವವಿದ್ಯಾನಿಲಯ, ಕನ್ನಡ ಸಾಹಿತ್ಯ ಪರಿಷತ್ತು, ಇಂಡಿಯಾ ಬುಕ್ ಹೌಸ್, ಭಾರತ-ಭಾರತಿ ಪುಸ್ತಕ ಸಂಪದಗಳು, ವಿವಿಧ ಮಠಗಳು ಪ್ರಕಟಿಸಿವೆ. "ಕನ್ನಡ ನುಡಿ" ಸಂಪಾದಕರಾಗಿ ಇವರ ಸೇವೆ (೧೯೪೮) ಪತ್ರಿಕಾ ಪ್ರಪಂಚಕ್ಕೂ ಸಂದಿದೆ.

ಇತ್ತೀಚೆಗೆ ಶ್ರೀಯುತರು ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳವರ ಸಮಗ್ರ ಕೃತಿಗಳನ್ನು ಒಂದೇ ಸಂಪುಟದಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯವಿದ್ಯಾಸಂಶೋಧನಾಲಯ ಪ್ರಕಟಿಸಿರುವ ಶ್ರೀಪತಿ ಪಂಡಿತಾರಾಧ್ಯ ವಿರಚಿತ "ಶ್ರೀಕರ ಭಾಷ್ಯ"ವನ್ನು ಸಂಪಾದಿಸಿ ಸಂಸ್ಕೃತ ಕನ್ನಡದಲ್ಲಿ ವಿಸ್ತಾರವಾದ ಭೂಮಿಕೆಯನ್ನು ಬರೆದು ಎರಡು ಸಂಪುಟಗಳಲ್ಲಿ ಸಿದ್ಧಪಡಿಸಿ ಕೊಟ್ಟಿದ್ದಾರೆ. ಈ ಕೃತಿಯ ಬಗ್ಗೆ ಇತ್ತೀಚೆಗೆ ಪ್ರಕಟವಾದ "ಶ್ರೀಕರಭಾಷ್ಯ ಪ್ರಶಸ್ತಿ" ಎಂಬ ಕೃತಿ ಶ್ರೀಯುತರ ವಿದ್ವತ್ತಿಗೆ ಪರಿಶ್ರಮಕ್ಕೆ ಹಿಡಿದ ಕನ್ನಡಿ.

**ಸನ್ಮಾನ-ಪ್ರಶಸ್ತಿಗಳು**

ಬಹುಮುಖ ಪ್ರತಿಭೆಯ ಶ್ರೀಯುತರ ಸೇವೆಯನ್ನು ವಿವಿಧ ಧರ್ಮಪೀಠಗಳು ಗೌರವಿಸಿ ಸನ್ಮಾನಿಸಿವೆ. ಮೈಸೂರಿನ ಮಹಾರಾಜರು ಇವರನ್ನು (೧೯೪೮) 'ಆಸ್ಥಾನ ವಿದ್ವಾಂಸ'ರನ್ನಾಗಿ ಗೌರವಿಸಿದ್ದಾರೆ. ಕೇಂದ್ರ ಸರ್ಕಾರ (೧೯೭೦) ಮತ್ತು ರಾಜ್ಯ ಸರ್ಕಾರಗಳೂ (೧೯೭೯) ಇವರನ್ನು ಗೌರವಿಸಿವೆ.

ಉಜ್ಜಯಿನಿ, ವಾರಾಣಸಿ, ನಾಗಪುರ ಮುಂತಾದ ಕಡೆ ನಡೆದ ವಿದ್ವತ್ ಸಭೆಗಳಲ್ಲಿ, ಸಾಹಿತ್ಯ ಸಮ್ಮೇಳನಗಳಲ್ಲಿ ಭಾಗವಹಿಸಿ ಸರಸ್ವತಿಯ ಸೇವೆಯನ್ನು ಮಾಡಿದ್ದಾರೆ. ಶ್ರೀಯುತರು ಉತ್ತಮವಾಗ್ಮಿಗಳೂ, ಕಾವ್ಯ(ವಾಚನ) ವ್ಯಾಖ್ಯಾನ ವಿಚಕ್ಷಣರೂ ಶ್ರದ್ಧಾವಂತ ವೈದಿಕ-ಆಗಮಿಕರೂ ಆಗಿದ್ದರು.



# ವಿದ್ವಾನ್ ಬಿ.ಕೆ. ಶಿವಯ್ಯನವರು

ಸಂಸ್ಕೃತ ಕನ್ನಡ ಉಭಯ ಭಾಷಾವಿದ್ವಾಂಸರಾದ ವಿದ್ವಾನ್ ಬಿ.ಕೆ. ಶಿವಯ್ಯನವರು ಕರ್ನಾಟಕದ ಎಲ್ಲ ಭಾಗದ ವಿಶೇಷವಾಗಿ ಬೆಂಗಳೂರಿನ ಜನತೆಗೆ ಚಿರಪರಿಚಿತರು. ಶ್ರೀಯುತರು ಶಾಲಾ ಕನ್ನಡ ಶಿಕ್ಷಕರಾಗಿ, ಪಂಡಿತ ಪರೀಕ್ಷೆ ಮಾಡಿಕೊಂಡ ತರುವಾಯ ಪ್ರೌಢಶಾಲೆ ಹಾಗೂ ಪದವಿಪೂರ್ವ ಕಾಲೇಜುಗಳಿಗೆ ಕನ್ನಡ ಅಧ್ಯಾಪಕರಾಗಿ ಬಹುಕಾಲ ಸೇವೆಸಲ್ಲಿಸಿ ನಿವೃತ್ತರಾಗಿದ್ದಾರೆ.

ಶ್ರೀಯುತರು ಅಧ್ಯಾಪಕರಾಗಿ ಪ್ರಸಿದ್ಧರಾಗಿರುವುದಕ್ಕಿಂತ ಪೌರೋಹಿತರಾಗಿ ಪ್ರಖ್ಯಾತರಾಗಿರುವುದು ಸರ್ವವಿದಿತ. ಪೌರೋಹಿತ್ಯದ ಜೊತೆಗೆ ಜ್ಯೋತಿಷ್ಯವನ್ನೂ ಬಲ್ಲ ಶಿವಯ್ಯನವರು ಎಲ್ಲವರ್ಗದ ಜನರ ಅಪಾರಪ್ರೀತಿ ವಿಶ್ವಾಸಗಳಿಗೆ ಭಾಜನರಾಗಿದ್ದಾರೆ. ಇದಕ್ಕೆ ಕಾರಣ ಶ್ರೀಯುತರು ಯಾವುದೇ ಕಾರ್ಯಕ್ಕೆ ಇಂತಿಷ್ಟೇ ಹಣ ಕೊಡಬೇಕೆಂದು ಎಂದೂ ಕಡ್ಡಾಯ ಮಾಡಿದವರಲ್ಲ. ಹಣ ಕೊಟ್ಟವರೂ ಕೊಡದವರೂ ಒಂದೇ ಎಂಬ ವಿಶಾಲ ಭಾವನೆಯನ್ನು ರೂಢಿಸಿಕೊಂಡಿದ್ದರು.

ಶ್ರೀಮಾನ್ ಶಿವಯ್ಯನವರು ಉಭಯಭಾಷಾ ಪಂಡಿತರಾದರೂ ಅವರಿಂದ ಕೃತಿರಚನೆಯಾಗಲಿ ಸಾಹಿತ್ಯ ಕಾರ್ಯವಾಗಲಿ ಸಾಧ್ಯವಾಗಲಿಲ್ಲ. ಇದಕ್ಕೆ ಕಾರಣ ಇವರ ಎಡೆಬಿಡದ ಕಾರ್ಯಕ್ರಮಗಳು. ವಿದ್ಯಾಇಲಾಖೆಯ ಪಠ್ಯಪುಸ್ತಕ ಸಮಿತಿಗಳಲ್ಲಿ ವಿಶೇಷವಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಶಾಲೆಗಳ ಕಾರ್ಯಕ್ರಮಗಳಲ್ಲಿ ನಿರಂತರವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಬಿ.ಕೆ. ಶಿವಯ್ಯನವರು ವೈದಿಕರಾದರೂ ಲೌಕಿಕವನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದಾರೆ. ಸಂದರ್ಭೋಚಿತವಾಗಿ ಸಮರ್ಪಕವಾಗಿ ಕಾರ್ಯಕ್ರಮಗಳನ್ನು ನಿರ್ವಹಿಸುವ ಸಾಮರ್ಥ್ಯವನ್ನು ಪಡೆದಿದ್ದಾರೆ. ಆದ್ದರಿಂದಲೇ ಬೆಂಗಳೂರಿನಲ್ಲಿ ಮಾತ್ರವಲ್ಲದೆ ಕರ್ನಾಟಕದ ಅನೇಕ ಭಾಗಗಳಿಂದ ಕರೆಗಳು ಬರುತ್ತಲೇ ಇದ್ದುವು. ಶ್ರೀ ಶಿವಯ್ಯನವರು ಕಾರ್ಯಕ್ರಮವನ್ನು ವಹಿಸಿಕೊಂಡರೆ ಶಾಸ್ತ್ರೋಕ್ತವಾಗಿ ಸಮರ್ಪಕವಾಗಿ ಕಾರ್ಯವನ್ನು ನಡೆಸಿಕೊಡುತ್ತಾರೆ ಎಂಬ ನಂಬಿಕೆ ವಿಶ್ವಾಸ ಜನತೆಯಲ್ಲಿ ಮನೆಮಾಡಿಕೊಂಡಿತ್ತು.

ವಿದ್ವಾನ್ ಶಿವಯ್ಯನವರು ಘನವಿದ್ವಾಂಸರು, ಅಷ್ಟೇ ವಿನಯವಂತರು. ದೈವಭಕ್ತಿ ಧರ್ಮಶ್ರದ್ಧೆಯುಳ್ಳ ಶ್ರೀಯುತರು ತಮ್ಮ ನಿಸ್ವಾರ್ಥಸೇವೆಯಿಂದ ಜನಮನದಲ್ಲಿ ಸ್ಥಿರವಾಗಿ ನೆಲೆಸಿದ್ದಾರೆ. ಇಂತಹ ವಯೋವೃದ್ಧರೂ ಜ್ಞಾನವೃದ್ಧರೂ ಮೃದುಭಾಷಿಗಳೂ ಸರಸಸಜ್ಜನಸಂಪನ್ನರಿಗೆ ದಯಾಮಯರಾದ ಪಾರ್ವತಿ ಪರಮೇಶ್ವರರು ದೀರ್ಘಾಯುರಾರೋಗ್ಯ ಗಳನ್ನು ಕರುಣಿಸಲಿ ಎಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

■

# ಡಾ. ಎಚ್.ಟಿ. ಸಾಸನೂರ ಒಂದು ಸ್ಮರಣೆ

ಉತ್ತರ ಕರ್ನಾಟಕದ ಬಿಜಾಪುರ ಜಿಲ್ಲೆಯ ಸಾಹಿತಿಗಳ ಸಾಲಿನಲ್ಲಿ ಸಾಸನೂರ ಮನೆತನದ ಹೆಸರು ಅಚ್ಚಳಿಯದೆ ಉಳಿದುಕೊಂಡು ಬಂದಿದೆ. ಬಿಜಾಪುರದಲ್ಲಿ ಹುಟ್ಟಿಬೆಳೆದ ಪ್ರೊ. ಎ.ಟಿ. ಸಾಸನೂರ, ಡಾ. ಎಚ್.ಟಿ. ಸಾಸನೂರ, ಪ್ರೊ. ಬಿ.ಟಿ. ಸಾಸನೂರ –ಈ ಸಾಹಿತ್ಯ ರತ್ನತ್ರಯ ಸೋದರರು ಶಿಕ್ಷಣಕ್ಷೇತ್ರಕ್ಕೆ ತಮ್ಮನ್ನು ಅರ್ಪಿಸಿಕೊಂಡವರು. ಸಹಸ್ರಾರು ವಿದ್ಯಾರ್ಥಿಗಳನ್ನೂ ಅಸಂಖ್ಯಾತ ಅಭಿಮಾನಿಗಳನ್ನೂ ಪಡೆದವರು.

ಸಾಸನೂರ ಮನೆತನದ ಹಿರಿಯರಾದ ಪ್ರೊ. ಎ.ಟಿ. ಸಾಸನೂರ ಅವರು ಅಪಾರ ವ್ಯಾಸಂಗ ಪರಿಶ್ರಮ ಪಾಂಡಿತ್ಯಗಳಿಂದ ಅಂದಿನ ವಿದ್ಯಾರ್ಥಿಗಳ ವಿದ್ವಾಂಸರ ಆದರಾಭಿಮಾನಗಳಿಗೆ ಭಾಜನರಾಗಿದ್ದುದು ಸರ್ವವಿದಿತ. ಇಂತಹ ಪ್ರಕಾಂಡ ಪಂಡಿತರು ಅತ್ಯಂತ ಕಿರಿಯವಯಸ್ಸಿನಲ್ಲಿ ವಿಧಿವಶರಾದುದು ಒಂದು ವಿಪರ್ಯಾಸವೇ.

ಪ್ರಸ್ತುತ ಡಾ. ಎಚ್.ಟಿ. ಸಾಸನೂರ ಅವರು ತಮ್ಮ ಅಗ್ರಜರಂತೆಯೇ ಶಿಕ್ಷಣಕ್ಷೇತ್ರಕ್ಕೆ ಸಂಪೂರ್ಣವಾಗಿ ಮುಡಿಪಾದವರು. ಅವರ ವಿದ್ಯಾರ್ಥಿಯಾಗುವ ಸೌಭಾಗ್ಯ ನನಗೆ ಅಲಭ್ಯವಾದರೂ ಅವರ ತಮ್ಮಂದಿರಾದ ಪ್ರೊ. ಬಿ.ಟಿ. ಸಾಸನೂರ ಅವರ ಮೂಲಕ ಪರಿಚಯವಾದುದು ಒಂದು ಪುಣ್ಯವಿಶೇಷವೆಂದೇ ನಾನು ಭಾವಿಸಿದ್ದೇನೆ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ನಾನು ಸೇವೆಯಲ್ಲಿದ್ದಾಗಿನ ಒಂದು ಸಂದರ್ಭ: ಒಮ್ಮೆ ಪ್ರೊ. ಬಿ.ಟಿ. ಸಾಸನೂರ ಅವರು ನನ್ನನ್ನು ಸಂಪರ್ಕಿಸಿ ತಮ್ಮ ಅಣ್ಣಂದಿರಾದ ಪ್ರೊ. ಎಚ್.ಟಿ. ಸಾಸನೂರ ಅವರು ಸ್ನೇಹಿತರೊಂದಿಗೆ ಮೈಸೂರಿಗೆ ಬಂದು ಒಂದು ದಿನ ಅಲ್ಲಿ ಉಳಿಯಲು ಇಚ್ಛಿಸಿರುವರೆಂದೂ ಅವರು ಉಳಿಯಲು ವಿಶ್ವವಿದ್ಯಾನಿಲಯದ ಅತಿಥಿಗೃಹದಲ್ಲಿ ವ್ಯವಸ್ಥೆ ಮಾಡಬೇಕೆಂದೂ ತಿಳಿಸಿದರು. ಅದರಂತೆ ನಾನು ಎಲ್ಲ ವ್ಯವಸ್ಥೆಗಳನ್ನೂ ಮಾಡಿದೆ. ಮೈಸೂರಿಗೆ ಬಂದವರು ನೇರವಾಗಿ ನಮ್ಮ ಮನೆಗೆ ಬಂದರು. ತೀರ ಕಿರಿದಾದ ನನ್ನ ಮನೆಗೆ ಹಿರಿದಾದ ಮನದ ಈ ವಯೋವೃದ್ಧರು ಬಂದು ಚಹಾ ಮಾಡಿಸಿಕೊಂಡು ಕುಡಿದರು. ಆಮೇಲೆ ಎಲ್ಲರೂ ವಿಶ್ವವಿದ್ಯಾನಿಲಯದ ಅತಿಥಿಗೃಹಕ್ಕೆ ಹೋದೆವು. ಅಲ್ಲಿ ಎಲ್ಲ ವ್ಯವಸ್ಥೆಗಳಾದ ಮೇಲೆ ಡಾ. ಎಚ್.ಟಿ. ಸಾಸನೂರ ಅವರು "ನೀವು ರಾತ್ರಿ ನಮ್ಮ ಜೋಡಿ ಊಟ ಮಾಡಬೇಕ್ರಿ" ಎಂದು ಪ್ರೀತಿ ಒತ್ತಾಯಗಳಿಂದ ಹೇಳಿದ್ದು ನನ್ನ ನೆನಪಿನಲ್ಲಿ ಇಂದಿಗೂ ಉಳಿದಿದೆ. ಅಂದು ಅವರೊಡನೆ ಸಂತೋಷದಿಂದ ಊಟೋಪಚಾರಗಳನ್ನು ಮುಗಿಸಿ ಮಾರನೆಯ ದಿನ ಅವರನ್ನು ಬೀಳ್ಕೊಡಲಾಯಿತು. ಇದಾದ ಮೇಲೆ ಡಾ. ಎಚ್.ಟಿ. ಸಾಸನೂರ ಅವರು ಆಗಿಂದಾಗ್ಗೆ ಯೋಗಕ್ಷೇಮಕ್ಕೆ ಪತ್ರಗಳನ್ನು ಬರೆಯುತ್ತಿದ್ದುದೇ ಅಲ್ಲದೆ ಬಿಜಾಪುರಕ್ಕೆ ಒಮ್ಮೆ ಬರಬೇಕೆಂದು ಒತ್ತಾಯಿಸುತ್ತಿದ್ದರು. ಅವರ ಅಕ್ಷರಗಳು ಮುತ್ತಿನಂತಿದ್ದುವು. ಪತ್ರಗಳು ಸಂಕ್ಷೇಪವಾಗಿರುತ್ತಿದ್ದುವು.

ಪ್ರೊ. ಬಿ.ಟಿ. ಸಾಸನೂರ ಅವರು ಲೋಕಸೇವಾ ಆಯೋಗದ ಸದಸ್ಯರಾಗಿದ್ದಾಗ ಮೈಸೂರಿಗೆ ಬಂದಿದ್ದವರು ಕೊಳ್ಳೇಗಾಲ ತಾಲ್ಲೂಕಿನ ಹನೂರಿಗೆ ಹೋಗೋಣವೆಂದರು. ಅಲ್ಲಿ ಡಾ. ಎಚ್.ಟಿ. ಸಾಸನೂರ ಅವರ ಮಗಳು ಮತ್ತು ಅಳಿಯ ಇದ್ದರು. ಅವರ ಅಳಿಯ ಡಾಕ್ಟರ್ ಆಗಿದ್ದರು. ನಾವು ಅವರಲ್ಲಿಗೆ ಹೋದಾಗ ಆ ದಂಪತಿಗಳು ನಮ್ಮನ್ನು

ಅತ್ಯಂತ ಪ್ರೀತ್ಯಾದರಗಳಿಂದ ಬರಮಾಡಿಕೊಂಡು ಭೂರಿಭೋಜನಗಳಿಂದ ಸತ್ಕರಿಸಿ ಒಂದು ದಿನ ಅಲ್ಲೇ ಉಳಿಸಿಕೊಂಡು ಮಾರನೆಯ ದಿನ ತುಂಬ ವಿಶ್ವಾಸದಿಂದ ಕಳಿಸಿಕೊಟ್ಟರು.

ಮೈಸೂರು ವಿಶ್ವವಿದ್ಯಾನಿಲಯದ ಸೇವೆಯಿಂದ ನಾನು ನಿವೃತ್ತನಾಗಿ ಬೆಂಗಳೂರಿಗೆ ಬಂದು ನೆಲಸಿದ ಮೇಲೆ ಡಾ. ಬಿ.ಟಿ. ಸಾಸನೂರ ಅವರು ಬೆಂಗಳೂರಿಗೆ ಬಂದಾಗಲೆಲ್ಲ ಅವರ ಜೊತೆಯಲ್ಲಿ ಇರುವ ಸದವಕಾಶ ಪ್ರಾಪ್ತವಾಗುತ್ತಿತ್ತು. ಆ ಹಿರಿಯರಿಗೆ ನನ್ನಲ್ಲಿ ಏನೋ ಒಂದು ಬಗೆಯ ಮಮಕಾರವಿತ್ತು.

ಪ್ರೊ. ಬಿ.ಟಿ. ಸಾಸನೂರ ಅವರ ಚಿರಂಜೀವಿಯ ವಿವಾಹ ಹುಬ್ಬಳ್ಳಿಯಲ್ಲಿ ನಡೆಯಿತು. ಬಿ.ಟಿ. ಸಾಸನೂರ ಅವರು ನನಗಾಗಿ ತಮ್ಮ ಪಕ್ಕದ ಕೋಲಿಯನ್ನು ಕಾದಿರಿಸಿದ್ದರು. ಆದರೂ ನಾನು ಅವರ ಕೋಲಿಯಲ್ಲಿಯೇ ಇರುತ್ತಿದ್ದುದು ಒಂದು ವಿಶೇಷವೇ ಸರಿ.

ಡಾ. ಎಚ್.ಟಿ. ಸಾಸನೂರ ಅವರು ತಮ್ಮ ಪಿಎಚ್.ಡಿ. ನಿಬಂಧವನ್ನು ಅಚ್ಚುಮಾಡಿಸುವ ಸನ್ನಿವೇಶ ಒದಗಿಬಂತು. ಪುಸ್ತಕ ಮುದ್ರಣದಲ್ಲಿ ಅಲ್ಪಸ್ವಲ್ಪ ಅನುಭವವಿದ್ದ ನಾನು ಪುಸ್ತಕದ ಆಕಾರ ವಿನ್ಯಾಸ ಇವುಗಳ ಬಗೆಗೆ ತಿಳಿಸಿ ಅಚ್ಚಾಗಿದ್ದ ಕೆಲವು ಪಿಎಚ್.ಡಿ. ನಿಬಂಧಗಳನ್ನೂ ತೋರಿಸಿದೆ. ಕೊನೆಗೆ ಡಾ. ಎಚ್.ಟಿ. ಸಾಸನೂರ, ಪ್ರೊ. ಬಿ.ಟಿ. ಸಾಸನೂರ ಮತ್ತು ನಾನು ಸೇರಿ ಒಂದು ಆಕಾರವನ್ನು ಗೊತ್ತುಮಾಡಿ ಅದರ ಮುದ್ರಣಕಾರ್ಯವನ್ನು ಸಾಸನೂರರಿಬ್ಬರಿಗೂ ನನಗೂ ಪರಿಚಿತರಾಗಿದ್ದ ಬಿಜಾಪುರದವರೇ ಆದ ಶ್ರೀ ಕೌಜಲಗಿ ಅವರ 'ಬೃಂದಾವನ ಪ್ರಿಂಟರ್ಸ್'ಗೆ ಒಪ್ಪಿಸಲಾಯಿತು. ಕರಡಚ್ಚುಗಳನ್ನು ತಿದ್ದಲು ಡಾ. ಎಚ್.ಟಿ. ಸಾಸನೂರ ಅವರು ತಮ್ಮ ನೆಚ್ಚಿನ ಶಿಷ್ಯರಲ್ಲೊಬ್ಬರಾದ ಶ್ರೀ ಗುಲಗಂಜಿ ಅವರನ್ನು ಕಳಿಸಿದ್ದರು. ಆದರೂ ಕೂಡ ಸಂದೇಹ ಬಂದ ಕಡೆ ಮೂಲ ಆಕರಗಳನ್ನು ಮತ್ತೊಮ್ಮೆ ತಾಳೆ ನೋಡುವುದು ಅಂತಿಮವಾಗಿ ಕರಡಚ್ಚು ತಿದ್ದುವುದು ಈ ಕಾರ್ಯಗಳನ್ನು ಪ್ರೊ. ಬಿ.ಟಿ. ಸಾಸನೂರ ಅವರೂ ನಾನೂ ನಿರ್ವಹಿಸಿದೆವು. ಅಂತೂ ಆ ಕೃತಿ ಸರ್ವಾಂಗ ಸುಂದರವಾಗಿ ಪ್ರಕಟವಾಯಿತು. ನಾನು ಮಾಡಿದ ಕಾರ್ಯವನ್ನು ಬಹುವಾಗಿ ಮೆಚ್ಚಿಕೊಂಡ ಡಾ. ಎಚ್.ಟಿ. ಸಾಸನೂರ ಅವರು ಆ ಗ್ರಂಥದ ಪೀಠಿಕೆಯಲ್ಲಿ ದಾಖಲಿಸಿದ್ದಾರೆ. ಅಷ್ಟಕ್ಕೇ ತೃಪ್ತರಾಗದ ಶ್ರೀಯುತರು ಮುದ್ರಕರಿಂದ ಹಿಡಿದು ಈ ಕಾರ್ಯದಲ್ಲಿ ನೆರವಾದವರಿಗೆಲ್ಲ ಒಂದು ಔತಣಕೂಟವನ್ನೇ ಏರ್ಪಡಿಸಿದ್ದರು. ಎಚ್.ಟಿ. ಸಾಸನೂರರ ಅಪಾರ ಕಳಕಳಿಗೆ ಇದು ಸಾಕ್ಷಿಯಾಗಿದೆ.

ಕೆಲವು ವರ್ಷಗಳ ಹಿಂದೆ ನನ್ನ ಚಿರಂಜೀವಿಯ ವಿವಾಹಕ್ಕೆ ಆಮಂತ್ರಣ ಪತ್ರವನ್ನು ಡಾ. ಎಚ್.ಟಿ. ಸಾಸನೂರ ಅವರಿಗೆ ಕಳಿಸಿ ತಪ್ಪದೆ ಬರಬೇಕೆಂದು ಕೇಳಿಕೊಂಡಿದ್ದೆ. ಶ್ರೀಯುತರು ತಮ್ಮ ಎಲ್ಲ ಕಾರ್ಯಗಳನ್ನೂ ಬದಿಗೊತ್ತಿ ಬಿಜಾಪುರದಿಂದ ಬೆಂಗಳೂರಿಗೆ ಬಂದು ಮದುಮಕ್ಕಳನ್ನು ಹರಸಿ ಆಶೀರ್ವದಿಸಿದ ಸಂದರ್ಭ ನನ್ನ ಮನಸ್ಸಿನಲ್ಲಿ ಸದಾ ಹಚ್ಚಹಸುರಾಗಿದೆ.

ಡಾ. ಎಚ್.ಟಿ. ಸಾಸನೂರ ಅವರು ವಯೋವೃದ್ಧರೂ ಜ್ಞಾನವೃದ್ಧರೂ ಅಪಾರ ಲೋಕಾನುಭವವುಳ್ಳವರೂ ಆಗಿದ್ದರು. ಶ್ರೀಯುತರು ವಿಧಾನ ಪರಿಷತ್ತಿನ ಸದಸ್ಯರಾಗಿ ಆಯ್ಕೆಗೊಂಡದ್ದು ಅವರ ಅಪಾರ ಜನಪ್ರಿಯತೆಗೆ ನಿದರ್ಶನವಾಗಿದೆ. ಎಲ್ಲ ಜೀವಿಗಳಲ್ಲಿಯೂ ಒಳಿತನ್ನೇ ಕಾಣುವ ಎಲ್ಲ ಜೀವಿಗಳಿಗೂ ಒಳಿತನ್ನೇ ಬಯಸುವ ನಿರಾಡಂಬರ ಸರಳ ಸಜ್ಜನ ಸಾಕಾರಮೂರ್ತಿ ಡಾ. ಎಚ್.ಟಿ. ಸಾಸನೂರ ಅವರು. ಶ್ರೀಯುತರಿಂದ ಉಪಕಾರ ಪಡೆದವರು ಎಷ್ಟೋ ಮಂದಿ. ಅವರು ಕಟ್ಟಿ ಬೆಳೆಸಿದ ಶಿಕ್ಷಣಸಂಸ್ಥೆಗಳು ಹಲವಾರು. ಇಂತಹ ಪುಣ್ಯಾತ್ಮರನ್ನು ಸಂಸ್ಮರಿಸಿಕೊಳ್ಳುವುದೇ ಒಂದು ಭಾಗ್ಯವಿಶೇಷ. ಸಾಸನೂರು ಮನೆತನ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅದರಲ್ಲೂ ಉತ್ತರ ಕರ್ನಾಟಕದ ಜನತೆಯ ಮನೋಮಂದಿರದಲ್ಲಿ ಶಾಶ್ವತವಾಗಿ ರಾರಾಜಿಸುವುದರಲ್ಲಿ ಯಾವ ಸಂಶಯವೂ ಇಲ್ಲ. ಪ್ರಾತಃಸ್ಮರಣೀಯರಾದ ಡಾ. ಎಚ್.ಟಿ. ಸಾಸನೂರ ಅವರು ನಿರಂತರವಾಗಿ ನನ್ನ ಸ್ಮೃತಿಸ್ಮರಣೆಯಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದಾರೆ. ಶ್ರೀಯುತರಿಗೆ ನನ್ನ ಅನಂತ ನಮನಗಳು.

■

# ನಾ ಕಂಡಂತೆ ಗೆಳೆಯ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ

ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತಿಗಳ ಸಾಲಿನಲ್ಲಿ ಪ್ರಮುಖರಾದವರು ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು. ಶ್ರೀಯುತರು ನಾಡಿನ ಹಿರಿಯ ಕವಿಗಳೆಂದು ಪರಿಗಣಿತರಾಗಿದ್ದಾರೆ. ಅಷ್ಟೇ ಅಲ್ಲ, ಹೆಸರಾಂತ ವಿಮರ್ಶಕರು, ಚಿಂತಕರು, ಜೀವನ ಚರಿತ್ರಕಾರರು, ಅನುವಾದಕರು, ಗ್ರಂಥಸಂಪಾದಕರು. ಕರ್ನಾಟಕ ಸರಕಾರದ ಉನ್ನತಹುದ್ದೆಗಳನ್ನು ಅಲಂಕರಿಸಿ ಅವಕ್ಕೆ ಘನತೆಯನ್ನು ತಂದುಕೊಟ್ಟವರು. ಬೆಂಗಳೂರು, ಮೈಸೂರು, ಕರ್ನಾಟಕ, ಗುಲ್ಬರ್ಗಾ ಮತ್ತು ಮಂಗಳೂರು ವಿಶ್ವವಿದ್ಯಾಲಯಗಳ ಅಕಾಡೆಮಿಕ್ ಕೌನ್ಸಿಲ್, ಸೆನೆಟ್ ಮತ್ತು ಸಿಂಡಿಕೇಟ್ ಸಮಿತಿ ಸದಸ್ಯರಾಗಿ ಸೇವೆಸಲ್ಲಿಸಿದವರು. ಈ ಎಲ್ಲ ವಿಶ್ವವಿದ್ಯಾನಿಲಯಗಳಲ್ಲಿ ವಿಶೇಷೋಪನ್ಯಾಸಗಳನ್ನು ನೀಡಿದ್ದೇ ಅಲ್ಲದೆ ವಿಚಾರ ಸಂಕಿರಣಗಳಲ್ಲಿ ಪ್ರಬಂಧ ಮಂಡನೆ ಮಾಡಿದವರು. ಕೇಂದ್ರಸಾಹಿತ್ಯ ಅಕಾಡೆಮಿಯ ವಿವಿಧ ವಿಭಾಗಗಳ ಸದಸ್ಯರಾಗಿ ಸೇವೆ ಸಲ್ಲಿಸಿದವರು. ನಾಡಿನ ಅಸಂಖ್ಯಾತ ಪದವಿ ಪ್ರಶಸ್ತಿಗಳಿಗೆ ಭಾಜನರಾದವರು.

ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಅದರಲ್ಲೂ ವಚನ ಸಾಹಿತ್ಯಕ್ಕೆ, ವಿಶೇಷವಾಗಿ ಶೂನ್ಯಸಂಪಾದನೆಗಳ ಬಗೆಗೆ ಹೆಚ್ಚಿನ ಅಧ್ಯಯನವನ್ನು ಮಾಡಿದ್ದಾರೆ. ಗುಲ್ಬರ್ಗ ವಿಶ್ವವಿದ್ಯಾನಿಲಯದ ಬಸವಾದಿಶರಣ ಸಾಹಿತ್ಯಕೇಂದ್ರದ ನಿರ್ದೇಶಕರಾಗಿ ಮೂರುವರ್ಷಗಳು ಮಹತ್ತರ ಸೇವೆಯನ್ನು ಸಲ್ಲಿಸಿದ್ದಾರೆ.

ಪ್ರಸ್ತುತ ಈ ದೈತ್ಯಪ್ರತಿಭೆಯ ದೈತ್ಯಶಕ್ತಿಯ ಪ್ರೊ. ಸಿದ್ಧಲಿಂಗಯ್ಯನವರ ಸಾಹಿತ್ಯ ವಿವೇಚನೆಗೆ ತೊಡಗದೆ ನನಗೆ ವಹಿಸಿರುವ ನಾ ಕಂಡಂತೆ ಗೆಳೆಯ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ ಎಂಬ ವಿಷಯದ ಬಗೆಗೆ ಕೆಲವು ಪ್ರಸಂಗಗಳನ್ನು ದಾಖಲಿಸಿದ್ದೇನೆ.

ನನಗೂ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರಿಗೂ ಐದುವರ್ಷಗಳ ವಯಸ್ಸಿನ ಅಂತರವಿದೆ. ನಾನು ೧೯೫೪ರಲ್ಲಿ ಕನ್ನಡ ನಿಘಂಟಿನ ಕಾರ್ಯಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತಿಗೆ ಬಂದವನು. ೧೯೭೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಉಪಸಂಪಾದಕನಾಗಿ ನೇಮಕಗೊಂಡವನು. ನನ್ನದೂ ಸಿದ್ಧಲಿಂಗಯ್ಯನವರದು ಈ ದೀರ್ಘಾವಧಿಯ ಸ್ನೇಹ. ನನ್ನ ೮೦ನೆಯ ವರ್ಷಕ್ಕೆ ನನ್ನ ಸ್ನೇಹಿತರೂ ಅಭಿಮಾನಿಗಳೂ ಒಂದು ಸಂಭಾವನಾ ಗ್ರಂಥವನ್ನು ಹೊರತಂದರು. ನನ್ನ ಪ್ರಿಯಮಿತ್ರರಿಗೂ ಈ ೮೦ನೆಯ ವಯಸ್ಸಿಗೆ ಸಂಭಾವನಾ ಗ್ರಂಥವನ್ನು ಹೊರತರುತ್ತಿರುವುದು ಕಾಕತಾಳೀಯವೆಂದೇ ಭಾವಿಸಿದ್ದೇನೆ.

ಪ್ರೊ. ಸಿದ್ಧಲಿಂಗಯ್ಯನವರ ಕರ್ತವ್ಯನಿಷ್ಠೆಗೆ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ನಡೆದ ಒಂದು ಘಟನೆಯೇ ಸಾಕ್ಷಿಯಾಗಿದೆ. ಅದು ಇಂತಿದೆ: ಕನ್ನಡ ಸಾಹಿತ್ಯ ಪರಿಷತ್ತಿಗೆ ಶಾಶ್ವತವಾದ ಕೀರ್ತಿಯನ್ನು ತಂದು ಕೊಟ್ಟಿರುವುದು ಕನ್ನಡ ನಿಘಂಟು ಯೋಜನೆ. ಡಾ. ಎ.ಆರ್. ಕೃಷ್ಣಶಾಸ್ತ್ರೀ, ಪ್ರೊ. ತೀ.ನಂ. ಶ್ರೀಕಂಠಯ್ಯ, ಪ್ರೊ. ಡಿ.ಎಲ್. ನರಸಿಂಹಾಚಾರ್, ಪ್ರೊ. ಕ.ವೆಂ. ರಾಘವಾಚಾರ್ ಇವರೆಲ್ಲರೂ ಕನ್ನಡ ನಿಘಂಟು ಸಂಪಾದಕ ಸಮಿತಿಯ ಅಧ್ಯಕ್ಷರೂ ಉಪಾಧ್ಯಕ್ಷರೂ ಪ್ರಧಾನ ಸಂಪಾದಕರೂ ಆಗಿದ್ದವರು. ಎರಡನೆಯ ಸಂಪುಟದ ಸಂಪಾದಕ ಸಮಿತಿಯ ಅಧ್ಯಕ್ಷರಾಗಿ ಎಂ. ಮರಿಯಪ್ಪಭಟ್ಟರೂ

ಉಪಾಧ್ಯಕ್ಷರು ಮತ್ತು ಪ್ರಧಾನ ಸಂಪಾದಕರಾಗಿ ಜಿ. ವೆಂಕಟಸುಬ್ಬಯ್ಯನವರೂ ಅಧಿಕಾರ ನಿರ್ವಹಿಸಿದ್ದಾರೆ. ಮೂರು ಮತ್ತು ನಾಲ್ಕನೆಯ ಸಂಪುಟಗಳಲ್ಲಿಯೂ ಇದೇ ಕ್ರಮ ಮುಂದುವರಿದು ಐದು ಮತ್ತು ಆರನೆಯ ಸಂಪುಟಗಳ ಸಂಪಾದಕ ಸಮಿತಿಯ ಅಧ್ಯಕ್ಷರೂ ಪ್ರಧಾನ ಸಂಪಾದಕರೂ ಜಿ. ವೆಂಕಟಸುಬ್ಬಯ್ಯನವರೇ ಆಗಿದ್ದರು. ೧೯೭೦ರಲ್ಲಿ ಮೊದಲನೆಯ ಸಂಪುಟ ಬಿಡುಗಡೆಯಾದರೆ. ೧೯೯೦ರಲ್ಲಿ ಆರನೆಯ ಸಂಪುಟ ಬಿಡುಗಡೆ ಯಾಯಿತು. ಇಪ್ಪತ್ತುವರ್ಷಗಳ ಅವಧಿಯಲ್ಲಿ ಪ್ರಕಟವಾದದ್ದು ನಾಲ್ಕುಸಂಪುಟಗಳು ಮಾತ್ರ. ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು ೧೯೮೯ ರಿಂದ ೧೯೯೨ ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಕನ್ನಡ ನಿಘಂಟಿನ ಕಾರ್ಯ ಸಾಕಷ್ಟು ತಡವಾಗುತ್ತಿರುವುದನ್ನು ಸಂಪಾದಕ ಸಮಿತಿಯ ಸಭೆಯಲ್ಲಿ ಪ್ರಸ್ತಾಪಿಸಲಾಯಿತು. ಸಂಪಾದಕ ಸಮಿತಿಯ ಅಧ್ಯಕ್ಷರೂ ಪ್ರಧಾನಸಂಪಾದಕರೂ ಒಬ್ಬರೇ ಆಗಿರುವುದರಿಂದ ಈ ಕಾರ್ಯ ವಿಳಂಬವಾಗುತ್ತಿದೆ ಎಂದೂ ಸಂಪಾದಕ ಸಮಿತಿಯ ಅಧ್ಯಕ್ಷರೂ ಪ್ರಧಾನ ಸಂಪಾದಕರೂ ಬೇರೆ ಬೇರೆ ಆದರೆ ಈ ಕಾರ್ಯವನ್ನು ಜಾಗ್ರತೆ ಮುಗಿಸಬಹುದು ಎಂಬ ಸಲಹೆಯನ್ನು ಪರಿಷತ್ತಿನ ಅಧ್ಯಕ್ಷರು ಸಭೆಯ ಮುಂದಿಟ್ಟರು. ಸರ್ಕಾರದ ಪ್ರತಿನಿಧಿಗಳಾಗಿದ್ದ ಡಾ. ಸಿದ್ಧಯ್ಯಪುರಾಣಿಕರೂ ಇತರ ಸದಸ್ಯರೂ ಈ ಸಲಹೆಯನ್ನು ಒಪ್ಪಿದರು. ಆದರೆ ಈ ಬದಲಾವಣೆಗೆ ಒಪ್ಪದ ಜಿ. ವೆಂಕಟಸುಬ್ಬಯ್ಯನವರು ಈ ಎರಡೂಸ್ಥಾನಗಳಿಗೆ ರಾಜೀನಾಮೆ ಕೊಟ್ಟರು. ಈ ವಿಷಯ ಎಲ್ಲ ಪತ್ರಿಕೆಗಳಲ್ಲಿ ವರದಿಯಾಗಿ ಪರಿಷತ್ತಿನ ಅಧ್ಯಕ್ಷರ ನಿಲುವನ್ನು ಖಂಡಿಸಲಾಗಿತ್ತು. ಪರಿಷತ್ತಿನ ಅಧ್ಯಕ್ಷರಾಗಿದ್ದ ಸಿದ್ಧಲಿಂಗಯ್ಯನವರು ನಿಘಂಟಿನ ಕಾರ್ಯವನ್ನು ಅಂಕಿಅಂಶಗಳಿಂದ ಎಳೆಎಳೆಯಾಗಿ ಬಿಡಿಸಿ ಪತ್ರಿಕೆಗಳಿಗೆ ಬಿಡುಗಡೆ ಮಾಡಿದರು. ನಿಘಂಟಿನ ಅಧ್ಯಕ್ಷಸ್ಥಾನಕ್ಕೂ ಪ್ರಧಾನಸಂಪಾದಕಸ್ಥಾನಕ್ಕೂ ಸಂಪಾದಕ ಸಮಿತಿಯಲ್ಲೇ ಬೇರೆಯವರನ್ನು ಆರಿಸಲಾಯಿತು. ಇದರಿಂದಾಗಿ ನಿಘಂಟಿನ ಏಳನೆಯ ಸಂಪುಟ ೧೯೯೩ರಲ್ಲೂ, ಎಂಟನೆಯ ಸಂಪುಟ ೧೯೯೫ರಲ್ಲೂ ಹೊರಬಂದವು. ನಿಘಂಟಿನ ಪ್ರಕಟನ ಕಾರ್ಯದಲ್ಲಿ ಪ್ರೊ. ಸಿದ್ಧಲಿಂಗಯ್ಯ ಅವರು ತಾಳಿದ ದಿಟ್ಟನಿಲವು ಮೆಚ್ಚತಕ್ಕುದಾಗಿದೆ.

ಕೋಲಾರಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ೧೯೯೪ನೆಯ ನವೆಂಬರ್ ೧೭ ರಂದು ಗೌರೀಬಿದನೂರಿನ ಆಚಾರ್ಯಪಾಠಶಾಲೆಯ ಪ್ರಾರ್ಥನಾಮಂದಿರದಲ್ಲಿ ಪ್ರೊ. ಎನ್. ಬಸವಾರಾಧ್ಯ ಅವರ ಸಮಗ್ರ ಸಾಹಿತ್ಯ ಸಮೀಕ್ಷೆ ಮತ್ತು 'ಶ್ರೇಷ್ಠಸಾಹಿತಿ ಪ್ರಶಸ್ತಿ ಪ್ರದಾನ ಸಮಾರಂಭ'ವನ್ನು ಏರ್ಪಡಿಸಿತ್ತು. ಈ ಸಮಾರಂಭದ ಒಂದು ಗೋಷ್ಠಿಯ ಅಧ್ಯಕ್ಷತೆಯನ್ನು ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ ಅವರು ವಹಿಸಿದ್ದರು. ಅಂದಿನ ಸಮಾರಂಭಕ್ಕೆ ಹೋಗುವ ಮೊದಲು ಗೌರೀಬಿದನೂರಿನ ಹತ್ತಿರವಿದ್ದ ಹೊಸೂರಿಗೆ ಹೋಗಿ ಅಲ್ಲಿಯ ಸುಪ್ರಸಿದ್ಧ ವೀರಭದ್ರಸ್ವಾಮಿಯ ಪೂಜೆಮಾಡಿಸಿಕೊಂಡು ಹೋಗೋಣ ಎಂದು ವಿಚಾರ ಗೋಷ್ಠಿಗಳಲ್ಲಿ ಭಾಗವಹಿಸಲಿದ್ದ ಪ್ರೊ. ಎಚ್.ಆರ್. ದಾಸೇಗೌಡ, ಪ್ರೊ. ಎಂ.ಎಚ್. ಕೃಷ್ಣಯ್ಯ, ಟಿ.ಆರ್. ಮಹಾದೇವಯ್ಯ, ಪ್ರೊ. ಅ.ರಾ. ಮಿತ್ರ, ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ ಅವರಿಗೆ ನಾನು ತಿಳಿಸಿದೆ. ನಾವು ಹೊಸೂರಿಗೆ ಬರುವ ವಿಷಯವನ್ನು ಕೇಳಿ ನಮ್ಮ ಬಂಧುಗಳಾದ ಅರ್ಚಕರು ಮಧ್ಯಾಹ್ನದ ಊಟಕ್ಕೆ ಅವರ ಮನೆಗೆ ಎಲ್ಲರೂ ಬರುವಂತೆ ವಿನಂತಿಸಿಕೊಂಡರು. ಸಮಾರಂಭ ಸಂಜೆ ೪.೩೦ಕ್ಕೆ ಇದ್ದುದರಿಂದ ಮಧ್ಯಾಹ್ನದ ಊಟಕ್ಕೂ ಹೊಸೂರಿಗೆ ಬರುವುದಾಗಿ ತಿಳಿಸಿದೆವು. ಅಲ್ಲದೆ ಊಟಕ್ಕೆ ಯಾವ ಸಿಹಿಯನ್ನೂ ಮಾಡಿಸದೆ ರಾಗಿಮುದ್ದೆ ಸೊಪ್ಪಿನಸಾರನ್ನು ಮಾಡಿಸುವಂತೆಯೂ ಒಟ್ಟು ಆರುಜನ ಊಟಕ್ಕೆ ಮಧ್ಯಾಹ್ನ ಎರಡುಗಂಟೆಗೆ ಬರುವುದಾಗಿಯೂ ತಿಳಿಸಿದೆವು. ಅದರಂತೆ ನಾವು ಆರುಜನವೂ ಒಂದು ವಾಹನದಲ್ಲಿ ಬೆಂಗಳೂರಿಂದ ಹೊರಟು ಒಂದು ಗಂಟೆಗೆ ಹೊಸೂರನ್ನು ತಲುಪಿ ಕೈಕಾಲು ಮುಖ ತೊಳೆದುಕೊಂಡು ವೀರಭದ್ರಸ್ವಾಮಿ ಪೂಜೆಯನ್ನು ಮಾಡಿಸಿ ಊಟಕ್ಕೆ ಸಿದ್ಧವಾದೆವು. ಅತಿಥಿಗಳಿಗೆಲ್ಲ ಮೊದಲು ಊಟಕ್ಕೆ ಬಡಿಸಿ ಆಮೇಲೆ ನನಗೆ ಬಡಿಸುವಂತೆ ಹೇಳಿದೆ. ಅದರಂತೆ ಅವರು ಒಂದು ಸುತ್ತು ಬಡಿಸುವಾಗ ಪ್ರೊ. ಸಿದ್ಧಲಿಂಗಯ್ಯನವರು ಎರಡು ಮುದ್ದೆಗಳನ್ನು ಬಡಿಸಿಕೊಂಡು ಬಿಟ್ಟಿದ್ದಾರೆ. ಬಿಸಿ ಬಿಸಿ ರಾಗಿಮುದ್ದೆ ಸೊಪ್ಪಿನ ಸಾರಿನ ಸಡಗರದಲ್ಲಿ ಯಾರೂ ಇತ್ತ ಲಕ್ಷ್ಯವನ್ನೇ ಕೊಟ್ಟಿಲ್ಲ. ಆಮೇಲೆ ನನಗೆ ಊಟಕ್ಕೆ ಬಿಡಿಸುವಂತೆ ಹೇಳಿದಾಗ ಅನ್ನಸಾರು ಬಡಿಸಿದನು. ರಾಗಿಮುದ್ದೆಯನ್ನು ಬಡಿಸಿ ಎಂದಾಗ ಸಾಹೇಬರು ತಮ್ಮ ಮುದ್ದೆಯನ್ನೂ ತಾವೇ ಬಡಿಸಿಕೊಂಡು ಬಿಟ್ಟರು. ಅತಿಥಿಗಳಿಗೆ ರಾಗಿಮುದ್ದೆ ಮಾಡಲು ಸಂಕೋಚಪಟ್ಟು ಒಬ್ಬೊಬ್ಬರಿಗೆ ಒಂದೊಂದು ಮುದ್ದೆಯನ್ನು ಮಾಡಿದ್ದರಂತೆ. ನಾನು ಸಿದ್ಧಲಿಂಗಯ್ಯನವರ ಕಡೆ ನೋಡಿದಾಗ ಒಳಗೊಳಗೇ ಗುಸುಗುಸು ನಗುತ್ತಿದ್ದರು. ನಾನು "ಅತಿಥಿದೇವೋಭವ" ಎಂದುಕೊಂಡು ಇದ್ದ ಊಟವನ್ನೇ ಮಾಡಿದೆ.

ಊಟೋಪಚಾರ ಮುಗಿಸಿಕೊಂಡು ಸಕಾಲಕ್ಕೆ ಸರಿಯಾಗಿ ಸಮಾರಂಭಕ್ಕೆ ಹೋದೆವು. ಎರಡನೆಯ ಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿದ್ದ ಸಿದ್ಧಲಿಂಗಯ್ಯನವರು ಅತ್ಯಂತ ಮೌಲಿಕ ಭಾಷಣವನ್ನು ಮಾಡಿದರು. ಸಂದರ್ಭೋಚಿತವಾದ ಅವರ ಭಾಷಣ ಎಲ್ಲರ ಮೆಚ್ಚುಗೆಯನ್ನೂ ಗಳಿಸಿತು. ಎರಡು ಮುದ್ದೆಗಳನ್ನು ಕಬಳಿಸಿದ್ದ ನನ್ನ ಮಿತ್ರರ ಭಾಷಣ ನನಗೂ ಸಂತೋಷವನ್ನು ಉಂಟುಮಾಡಿತು.

ಬೆಂಗಳೂರಲ್ಲಿ ಒಮ್ಮೆ ನಡೆದ ಧಾರ್ಮಿಕ ವಿಚಾರ ಸಂಕಿರಣದಲ್ಲಿ ನಾನು ಒಂದು ಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿದ್ದೆ. ಜಿ.ಎಸ್. ಸಿದ್ಧಲಿಂಗಯ್ಯನವರು ಆ ಗೋಷ್ಠಿಯಲ್ಲಿ ಒಬ್ಬ ಪ್ರಬಂಧಕಾರರಾಗಿದ್ದರು. ಒಬ್ಬಿಬ್ಬರು ಪ್ರಬಂಧ ಮಂಡಿಸಿದ ಮೇಲೆ ಸಿದ್ಧಲಿಂಗಯ್ಯನವರ ಸರದಿ ಬಂದಾಗ ಶ್ರೀಗಳವರ ಅಭಿಪ್ರಾಯಗಳ ಬಗೆಗೆ ಅಸಮಾಧಾನವಿದ್ದುದು ನನಗೆ ಕಂಡುಬಂದಿತು. ಆಗ ನಾನು ಈ ವಿಷಯಗಳ ಬಗೆಗೆ ಆಮೇಲೆ ವಿಚಾರ ಮಾಡೋಣ. ಈಗ ಪ್ರಬಂಧವನ್ನು ಮಂಡಿಸಿ ಎಂದು ಕಿವಿಮಾತನ್ನು ಹೇಳಿದೆ. ಅದರಂತೆ ಶ್ರೀಯುತರು ತಮ್ಮ ವಿದ್ವತ್ಪೂರ್ಣವಾದ ಪ್ರಬಂಧವನ್ನು ಮಂಡಿಸಿದರು. ಅಧ್ಯಕ್ಷ ಭಾಷಣದಲ್ಲಿ ಯಾರ ಹೆಸರನ್ನೂ ಹೇಳದೆ ವಿದ್ವಾಂಸರಲ್ಲಿನ ಅಭಿಪ್ರಾಯ ಭೇದಗಳನ್ನು ಸಮನ್ವಯಗೊಳಿಸಿ, ಸಿದ್ಧಲಿಂಗಯ್ಯನವರ ವೈಯಕ್ತಿಕ ಸಾಧನೆಗಳು ಬಗೆಗೆ ಬೆಳಕು ಚೆಲ್ಲಿದೆ. ಶ್ರೇಷ್ಠಕವಿಗಳಾಗಿರುವ ಸಿದ್ಧಲಿಂಗಯ್ಯನವರು ಶ್ರೇಷ್ಠಸಾಹಿತಿಗಳೂ ಉತ್ತಮವಿಮರ್ಶಕರೂ ವಚನಸಾಹಿತ್ಯ ಸಂಶೋಧಕರೂ ಆಗಿರುವರಲ್ಲದೆ ಅನೇಕ ಕೃತಿಗಳನ್ನೂ ಹೊರತಂದಿದ್ದಾರೆ. ಸರ್ಕಾರವಾಗಲಿ ಸಮಾಜವಾಗಲಿ ಅವರಿಗೆ ಏನನ್ನು ನೀಡಿದೆ ಎಂದು ಪ್ರಶ್ನಿಸಿದೆ. ಈ ಮಾತುಗಳು ಎಲ್ಲರಿಗೂ ಪ್ರಿಯವಾದಂತೆ ಕಂಡುಬಂದವು.

ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಬಸವಾದಿ ಶರಣರ ಸಾಹಿತ್ಯ ಕೇಂದ್ರದ ನಿರ್ದೇಶಕರಾಗಿದ್ದಾಗ ನನ್ನಿಂದ ಆ ಕೇಂದ್ರದ ಒಂದು ಗ್ರಂಥವನ್ನು ಬಿಡುಗಡೆ ಮಾಡಿಸಿದರು. ಆ ಸಂದರ್ಭದಲ್ಲಿ ಹಾಜರಿದ್ದ ಆ ಪೀಠದ ಪ್ರತಿಷ್ಠಾಪಕರಾಗಿದ್ದ ಶ್ರೀ ಗಳಂಗಪ್ಪನವರು "ಸಾಹೇಬರೇ ನೀವು ಎಷ್ಟೇ ಪುಸ್ತಕ ಬೇಕಾದರೂ ಸಿದ್ಧಪಡಿಸಿ ಬಿಡುಗಡೆ ಮಾಡಿಸಿರಿ. ಈಗ ಇಟ್ಟಿರುವ ರೊಕ್ಕ ಸಾಲದಿದ್ದರೆ ಮತ್ತೆ ರೊಕ್ಕ ಕೊಡತೀನಿ" ಎಂದು ಹೇಳಿದ್ದು ನನಗೆ ಅತಿಯಾದ ಸಂತೋಷವಾಯಿತು. ಈ ಸಾಹಿತ್ಯ ಪ್ರಕಟಣೆಯ ಬಗೆಗೆ ಅವರಿಗೆ ಸಹಜವಾಗಿದ್ದ ಅಭಿಮಾನ ಪ್ರೀತ್ಯಾದರಗಳ ಸಂಕೇತವಾಗಿತ್ತು.

ವಚನ ಸಾಹಿತ್ಯ ಅದರಲ್ಲೂ ಶೂನ್ಯಸಂಪಾದನೆಗಳ ಬಗೆಗೆ ವಿಶೇಷ ಅಧ್ಯಯನ ನಡೆಸಿದ್ದಾರೆ. ತುಮಕೂರಿನ ಸಿದ್ಧಗಂಗಾ ಮಠದಲ್ಲಿ ಎರಡು ವರ್ಷಗಳ ಕಾಲ ಪ್ರತಿಭಾನುವಾರ ಶೂನ್ಯಸಂಪಾದನೆಗಳ ಬಗೆಗೆ ಉಪನ್ಯಾಸ ನೀಡಿರುವುದು ಇದಕ್ಕೆ ದೃಷ್ಟಾಂತವಾಗಿದೆ.

ಸಿದ್ಧಲಿಂಗಯ್ಯನವರು ಭಾರತೀಯ ಮತ್ತು ಪಾಶ್ಚಾತ್ಯ ಸಾಹಿತ್ಯಗಳ ಬಗೆಗೆ ಸಾಕಷ್ಟು ಅಧ್ಯಯನ ನಡೆಸಿದ್ದಾರೆ. ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿದ್ದಾರೆ.

ಬಹುಕಾಲದ ನಮ್ಮ ಸ್ನೇಹಕ್ಕೆ ಯಾವುದೇ ಸಂದರ್ಭದಲ್ಲಾಗಲಿ ಸನ್ನಿವೇಶದಲ್ಲಾಗಲಿ ಪರಿಸ್ಥಿತಿಯಲ್ಲಾಗಲಿ ಚ್ಯುತಿಯುಂಟಾಗಿಲ್ಲ.

ನನ್ನ ಈ ಸನ್ಮಿತ್ರರು ಹಲವಾರು ಉನ್ನತ ಹುದ್ದೆಗಳನ್ನು ಅಲಂಕರಿಸಿದ್ದೇ ಅಲ್ಲದೆ ವಿವಿಧ ಸಾಹಿತ್ಯ ಪ್ರಕಾರದ ನೂರಾರು ವಿಶಿಷ್ಟ ಕೃತಿಗಳನ್ನು ನಾಡಿಗೆ ನೀಡಿದ್ದಾರೆ. ಕೇಂದ್ರ ಸರ್ಕಾರ, ರಾಜ್ಯಸರ್ಕಾರ, ಸಮಾಜ ಸಂಘ ಸಂಸ್ಥೆಗಳು ಈ ಸಾಹಿತ್ಯ ದೈತ್ಯನಿಗೆ ಮಹತ್ತರ ಪದವಿ ಪ್ರಶಸ್ತಿಗಳನ್ನು ನೀಡಿ ಪುರಸ್ಕರಿಸಲಿ ಎಂದು ಹಾರೈಸುತ್ತೇನೆ.

ವಯೋವೃದ್ಧರೂ ಜ್ಞಾನವೃದ್ಧರೂ ನನ್ನ ಪರಮಮಿತ್ರರೂ ಆದ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ ಅವರಿಗೆ ಲೌಕಿಕ ಮತ್ತು ಪಾರಮಾರ್ಥಿಕ ಪದವಿ ಪ್ರಶಸ್ತಿಗಳು ಪ್ರಾಪ್ತವಾಗಲಿ ಎಂದೂ ಅವರ ಭವಿಷ್ಯದ ಬಾಳು ಬಂಗಾರವಾಗಲಿ ಎಂದೂ ಹರಸಿ, ಹಾರೈಸಿ, ಆಶೀರ್ವದಿಸುತ್ತೇನೆ.



# ಲಿಂಗೈಕ್ಯ ವಿ.ಎಸ್. ಚರಂತಿಮಠ

"ಎತ್ತಣ ಕೋಗಿಲೆ ಎತ್ತಣ ಮಾಮರ ಎತ್ತಣಿಂದೆತ್ತ ಸಂಬಂಧವಯ್ಯಾ" ಎಂಬ ಅಕ್ಕಗಳ ವಚನೋಕ್ತಿಯಂತೆ ಯಾವುದೋ ವಿಷಯವನ್ನು ವ್ಯಾಸಂಗ ಮಾಡಿ ಮತ್ತಾವುದೋ ಕಾಯಕವನ್ನು ಕೈಕೊಂಡು ಕನ್ನಡ ಸಾಹಿತ್ಯಕ್ಕೆ ಅಪಾರ ಸೇವೆಯನ್ನು ಸಲ್ಲಿಸಿರುವವರು ಹಲವಾರು ಮಂದಿ. ಅವರಲ್ಲಿ ಶ್ರೀ ವಿ.ಎಸ್. ಚರಂತಿಮಠ ಅವರು ಪ್ರಮುಖರು. ಅವರು ಯಾವ ಸದ್ದುಗದ್ದಲವೂ ಇಲ್ಲದೆ ತಮ್ಮ ಸಾಹಿತ್ಯ ಕಾಯಕವನ್ನು ನಿರಂತರವಾಗಿ ಮಾಡಿ ಹಲವಾರು ಮೌಲಿಕ ಕೃತಿಗಳನ್ನು ರಚಿಸಿದ್ದಾರೆ. ಯಾರಿಂದಲೂ ಗುರುತಿಸಲ್ಪಡದೆ ಎಲೆಮರೆಯ ಕಾಯಿಯಂತೆ ತಮ್ಮ ಸಾಹಿತ್ಯ ಸೇವೆಯನ್ನು ಮಾಡಿ ಕೃತಾರ್ಥರಾಗಿದ್ದಾರೆ. ಯಾವ ಪದವಿ ಪ್ರಶಸ್ತಿಗಳನ್ನು ಅರಸದೆ ಅವು ಯಾವುವೂ ಲಭ್ಯವಾಗದೆ ಉಪೇಕ್ಷಿತ ಸಾಹಿತಿಯಾಗಿ ಜೀವನ ಯಾತ್ರೆಯನ್ನು ಮುಗಿಸಿದ ಸಜ್ಜನರಾಗಿದ್ದಾರೆ.

ಶ್ರೀ ವಿ.ಎಸ್. ಚರಂತಿಮಠ ಅವರು ಮೈಸೂರು ವಿಶ್ವವಿದ್ಯಾನಿಲಯದ ಅರ್ಥಶಾಸ್ತ್ರದ ಎಂ.ಎ. ಪದವೀಧರರು. ಶ್ರೀಯುತರು ಕರ್ನಾಟಕ ಸರಕಾರದ ಕೈಗಾರಿಕಾ ಇಲಾಖೆಯ ಉಪನಿರ್ದೇಶಕರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಇನ್ನಿತರ ಇಲಾಖೆಯಲ್ಲಿ ಸೇವೆಗೈದು ಸೈ ಎನಿಸಿಕೊಂಡ ಮಹನೀಯರು.

ಶ್ರೀ ಚರಂತಿಮಠ ಅವರಿಗೆ ನಾಡುನುಡಿಗಳ ಬಗೆಗೆ ಅಪಾರ ಅಭಿಮಾನವಿತ್ತು. ದಾವಣಗೆರೆಯ ನಿವಾಸಿಗಳಾದ ಶ್ರೀಯುತರಿಗೆ ಕರ್ನಾಟಕದ ರೂವಾರಿ ಮಾಜಿ ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರ ಪರಿಚಯ ಚೆನ್ನಾಗಿತ್ತು. ಹಾಗಾಗಿ ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಶ್ರೀ ನಿಜಲಿಂಗಪ್ಪನವರ ಜೊತೆಯಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಕರ್ನಾಟಕ ಏಕೀಕರಣದ ಕಲ್ಪನೆ ಅವರ ಪ್ರಮುಖ ಆಶಯಗಳಲ್ಲಿ ಪ್ರಧಾನವಾಗಿತ್ತು.

ಶ್ರೀ ಚರಂತಿಮಠ ಅವರ ಮಾತೃಭಾಷೆ ಕನ್ನಡ. ಅವರು ಕನ್ನಡ, ಇಂಗ್ಲಿಷ್ ಎರಡು ಭಾಷೆಗಳಲ್ಲೂ ಪ್ರಭುತ್ವವನ್ನು ಪಡೆದಿದ್ದರು. ಬಹುಮುಖಪ್ರತಿಭೆಯ ಚರಂತಿಮಠ ಅವರು ಕವಿಯಾಗಿ, ನಾಟಕಕಾರರಾಗಿ, ವಿಮರ್ಶಕರಾಗಿ ಸಾಹಿತ್ಯಲೋಕದಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಶ್ರೀಯುತರು ಸುಮಾರು ಇಪ್ಪತ್ತೈದು ಕೃತಿಗಳನ್ನು ಬರೆದು ಪ್ರಕಟಿಸಿದ್ದಾರೆ. ಅಪ್ರಕಟಿತ ಕೃತಿಗಳೂ ಸಾಕಷ್ಟಿವೆ. ಸಿದ್ದವನಹಳ್ಳಿ ನಿಜಲಿಂಗಪ್ಪನವರ ಹುಟ್ಟುಹಬ್ಬದ ಸಂಕೇತವಾಗಿ ಅವರ ಜೀವನ ಚರಿತ್ರೆಯನ್ನು ಒಳಗೊಂಡಂತೆ 'ಕರ್ನಾಟಕದ ಇತಿಹಾಸ' ಎಂಬ ಕೃತಿಯನ್ನು ರಚಿಸಿದ್ದಾರೆ. 'ಮಾತೃಶ್ರೀ' ಎಂಬ ಕಾದಂಬರಿಯನ್ನು ಕನ್ನಡದಲ್ಲಿ ಬರೆದಿದ್ದಾರೆ. ಚಿತ್ತರಗಿ ಇಳಕಲ್ ಶ್ರೀ ವಿಜಯ ಮಹಾಂತರ ಜೀವನ ಚರಿತ್ರೆಯನ್ನು 'ದಿ ಲೈಟ್ ಡಿವೈನ್' ಎಂಬ ಹೆಸರಿನಲ್ಲಿ ಇಂಗ್ಲೀಷಿನಲ್ಲಿ ಬರೆದಿದ್ದಾರೆ. ಅಂತೆಯೇ ಆಂಗ್ಲಭಾಷೆಯಲ್ಲಿ 'ಅನುಭವ ಮಂಟಪ ಅಂಡ್ ವೀರಶೈವ ಕಲ್ಚರ್', 'ಸಾಗಾ ಆಫ್ ಸಾಫರಾಸ್' (ಮಹಾಂತ ಜೋಳಿಗೆಯ ಫಲಶ್ರುತಿಗೆ ಸಂಬಂಧಿಸಿದ್ದು), 'ಬಸವೇಶ್ವರ ಅಂಡ್ ಜೀಸಸ್ ಕಿಸ್ತ', 'ಬಸವೇಶ್ವರ ಅಂಡ್ ಮಹಮ್ಮದ ಪೈಗಂಬರ್', 'ವರ್ಡ್ ಆಫ್ ವಚನಾಸ್', 'ದಿ ಬಸವ ಲೈಟ್ ಎಂಟರ್‌ನಲ್', 'ಶ್ರೀ ಬಸವೇಶ್ವರ ಅಂಡ್ ಅಂಬೇಡ್ಕರ್' –ಇವೇ ಮೊದಲಾದ ಕೃತಿಗಳನ್ನು ಬರೆದು ಪ್ರಕಟಿಸಿದ್ದಾರೆ. ಭಾಲ್ಕಿ ಪಟ್ಟದ ದೇವರ ಶತಾಯುಷ್ಯದ ಬಗೆಗೆ 'ಚೆನ್ನಬಸವ' ಎಂಬ ಕೃತಿ ರಚಿತವಾಗಿ ಪ್ರಕಟವಾಗಿದೆ. ಕವಿಯಾದ

ಚರಂತಿಮಠ ಅವರು 'ಬೆತ್ತಲೆ ಪದ್ಯಗಳು' ಎಂಬ ಕವನ ಸಂಕಲನವನ್ನೂ ಹೊರತಂದಿದ್ದಾರೆ. ಇವೇ ಅಲ್ಲದೆ 'ದಲಿತ ದ್ರಷ್ಟಾರ ಜಗಜೀವನರಾಂ', 'ಶ್ರೀ ಜಗಜ್ಯೋತಿ ಬಸವೇಶ್ವರರು', 'ಡಾ. ಬಿ.ಆರ್. ಅಂಬೇಡ್ಕರರ ತೌಲನಿಕ ಚರಿತ್ರೆ', 'ಬಸವಣ್ಣನವರ ವಚನಗಳಲ್ಲಿ ದಲಿತ ದರ್ಶನ', 'ಲೋಕನಾಯಕ ಭೀಮಣ್ಣ ಖಂಡ್ರೆ', 'ಬೆಳವಡಿ ಮಲ್ಲಮ್ಮ', 'ಅಂಬೇಡ್ಕರ್ ಸ್ವರೂಪ ದರ್ಶನ', 'ವಚನ ವೈಭವ', 'ಕರೆದಿತ್ತು ಕಲ್ಯಾಣ' ಮೊದಲಾದ ಗ್ರಂಥಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಕೆಲವು ಪ್ರಕಟವಾಗಿವೆ. ಉಳಿದವು ಇನ್ನೂ ಪ್ರಕಟವಾಗಿಲ್ಲ. ವಿ.ಎಸ್. ಚರಂತಿಮಠ ಅವರು ಅನೇಕ ಸಂಶೋಧನ ಲೇಖನಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಕೆಲವು ಬಸವ ಬೆಳಗು, ಬಸವಪಥ, ಶಾಂತಿಕಿರಣ ಮೊದಲಾದ ಮಾಸಿಕ ತ್ರೈಮಾಸಿಕ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಉಳಿದವು ಇನ್ನೂ ಬೆಳಕು ಕಾಣಬೇಕಾಗಿದೆ.

ಶ್ರೀ ವಿ.ಎಸ್. ಚರಂತಿಮಠ ಅವರು ತಮ್ಮ ಅನುಪಮ ಸಾಹಿತ್ಯ ಸೇವೆಯಿಂದ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪರಿಗಣಿತರಾಗಿದ್ದಾರೆ. ಶ್ರೀಯುತರ ಅಪ್ರಕಟಿತ ಸಾಹಿತ್ಯವನ್ನು ಕನ್ನಡಪರ ಸಂಘ ಸಂಸ್ಥೆಗಳು, ಸರ್ಕಾರಿ ಸಂಸ್ಥೆಗಳು ಪ್ರಕಟಿಸುವುದು ಅಗತ್ಯವಾಗಿದೆ. ಯಾವೊಂದು ಪ್ರತಿಫಲಾಪೇಕ್ಷೆಯಿಲ್ಲದೆ ಕನ್ನಡ ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಕೃತಿರಚನೆ ಮಾಡಿ ಅಜ್ಞಾತವಾಗಿ ಜೀವನದ ಅಮರಯಾತ್ರೆಯನ್ನು ಮುಗಿಸಿ ಕೃತಕೃತ್ಯರಾದ ಶ್ರೀ ವಿ.ಎಸ್. ಚರಂತಿಮಠ ಅವರನ್ನು ಕನ್ನಡ ಸಾಹಿತ್ಯಲೋಕ ಪರಿಗಣಿಸಿ ಆದರಿಸುವುದು ಒಬ್ಬ ನೈಜ ಕನ್ನಡ ಸಾಹಿತ್ಯಾಭಿಮಾನಿಗಳಿಗೆ ಸಲ್ಲಿಸಬೇಕಾದ ಗೌರವ ಎಂದು ನಾನು ಭಾವಿಸಿದ್ದೇನೆ. ಶ್ರೀಯುತರ ವಿಮರ್ಶಾಕೃತಿಗಳು ತೌಲನಿಕ ಕೃತಿಗಳು ಕನ್ನಡ ಜನತೆಯ ಆದರಾಭಿಮಾನಗಳನ್ನು ಗಳಿಸುತ್ತವೆ ಎಂದು ದೃಢವಿಶ್ವಾಸವುಳ್ಳವನಾಗಿದ್ದೇನೆ.



# ನಾನು ಕಂಡಂತೆ ಡಾ. ಗುಂಜಾಳರು

**ಡಾ.** ಎಸ್.ಆರ್. ಗುಂಜಾಳ ಅವರು ನವೋದಯ ಸಾಹಿತಿಗಳ ಸಾಲಿನಲ್ಲಿ ಪ್ರಮುಖರು. ಶ್ರೀಯುತರು ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. ಮತ್ತು ಪಿಎಚ್.ಡಿ. ಪದವಿಗಳನ್ನೂ ದೆಹಲಿ ವಿಶ್ವವಿದ್ಯಾಲಯದಿಂದ ಎಂ.ಲಿಬ್.ಸೈನ್ಸ್ ಪದವಿಯನ್ನೂ ಪಡೆದಿದ್ದಾರೆ. ತಮ್ಮ ಸೇವಾವಧಿಯನ್ನೆಲ್ಲ ಗ್ರಂಥಾಲಯ ವಿಜ್ಞಾನಕ್ಕೇ ಮೀಸಲಾಗಿರಿಸಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ಅಸಂಖ್ಯಾತ ವಿದ್ಯಾರ್ಥಿಗಳಿಗೆ ಬೋಧನೆ ಮಾಡಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯ, ಗುಲ್ಬರ್ಗ ವಿಶ್ವವಿದ್ಯಾಲಯಗಳಲ್ಲಿ ಸೇವೆಯನ್ನು ಸಲ್ಲಿಸಿರುವ ಗುಂಜಾಳರು ಹನ್ನೆರಡುಜನ ವಿದ್ಯಾರ್ಥಿಗಳಿಗೆ ಪಿಎಚ್.ಡಿಗೆ ಮಾರ್ಗದರ್ಶನ ಮಾಡಿದ್ದಾರೆ. ಆರುಜನ ಈಗಾಗಲೇ ಪಿಎಚ್.ಡಿ. ಪದವಿಯನ್ನು ಪಡೆದಿದ್ದಾರೆ.

ಗ್ರಂಥಾಲಯ ವಿಜ್ಞಾನಕ್ಕೆ ಸಂಬಂಧಿಸಿದಂತೆ ಸುಮಾರು ಮೂವತ್ತಕ್ಕೂ ಮಿಕ್ಕು ಕೃತಿಗಳನ್ನೂ ಐವತ್ತಕ್ಕೂ ಮಿಕ್ಕು ಲೇಖನಗಳನ್ನೂ ಬರೆದಿದ್ದಾರೆ. ಅವುಗಳಲ್ಲಿ 'ಐವರು ಗ್ರಂಥಾಲಯ ವಿಜ್ಞಾನಿಗಳು', 'ಗ್ರಂಥಾಲಯದ ಅಂತರಂಗ', 'ಕರ್ನಾಟಕ ರಾಜ್ಯದಲ್ಲಿ ಗ್ರಂಥಾಲಯಗಳು', 'ಗ್ರಂಥಾಲಯ ವಿಜ್ಞಾನ ಪೀಠಿಕೆ', 'ಗ್ರಂಥಾಲಯ ವಿಜ್ಞಾನದ ಪಂಚಸೂತ್ರಗಳು', 'ಗ್ರಂಥಾಲಯ ವಿಜ್ಞಾನದರ್ಶನ', 'ಗ್ರಂಥಾಲಯ ಅಂದು-ಇಂದು', 'ಕಾಲೇಜು ಗ್ರಂಥಾಲಯ', 'ಇಂಗ್ಲಿಷ್-ಕನ್ನಡ ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ಪಾರಿಭಾಷಿಕ ಶಬ್ದಕೋಶ' ಹೆಸರಿಸತಕ್ಕವು.

ಡಾ. ಗುಂಜಾಳ ಅವರು ಕೇವಲ ಗ್ರಂಥವಿಜ್ಞಾನಕ್ಕೆ ಸಂಬಂಧಿಸಿದ ಕೃತಿಗಳನ್ನಷ್ಟೇ ಅಲ್ಲದೆ ಶ್ರೀ ಜತ್ತಿಯವರ ಬಾಳು ಬದುಕು, ಡಾ. ಎಚ್.ಎಫ್. ಕಟ್ಟೀಮನಿಯವರು, ಮಂಗಳಿ ಸೋಮಣ್ಣನವರ ಜೀವನ ಚರಿತ್ರೆ, ವಚನಪಿತಾಮಹ ಫ.ಗು. ಹಳಕಟ್ಟಿ ಎಂಬ ಜೀವನ ಚರಿತ್ರೆಗಳನ್ನು ಬರೆದಿದ್ದಾರೆ. 'ಚೆನ್ನಪ್ಪ ಉತ್ತಂಗಿ ಜೀವನ ಮತ್ತು ಕೃತಿಗಳು' ಶ್ರೀಯುತರ ಪಿಎಚ್.ಡಿ. ಪ್ರಬಂಧ.

ಬಸವಣ್ಣನವರ ಪದಪ್ರಯೋಗ ಕೋಶ, ಬಸವ ಸಾಹಿತ್ಯದರ್ಪಣ, ಲಿಂಗಾಯತ ಬಿಬ್ಲಿಯಾಗ್ರಫಿ ಎಂಬ ಆಕರ ಗ್ರಂಥಗಳನ್ನೂ ಸಂಕಲಿಸಿದ್ದಾರೆ.

ಡಾ. ಗುಂಜಾಳರು ಗ್ರಂಥಾಲಯ ಜರ್ನಲ್‌ಗಳ ಸಂಪಾದಕರಾಗಿಯೂ ಇಪ್ಪತ್ತು ವಿವಿಧ ವಿಶ್ವವಿದ್ಯಾಲಯಗಳ ವಿವಿಧ ಸಮಿತಿಗಳ ಸದಸ್ಯರಾಗಿಯೂ ಡೆಲ್ಲಿ, ಕಲ್ಕತ್ತ, ಗುಲ್ಬರ್ಗ, ನಾಗಪುರ, ಹುಬ್ಬಳ್ಳಿ ಗ್ರಂಥಾಲಯ ಸಂಘ ಸಂಸ್ಥೆಗಳ ಸದಸ್ಯ, ಉಪಾಧ್ಯಕ್ಷ, ಅಧ್ಯಕ್ಷರಾಗಿಯೂ ಗಣನೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಇವೆಲ್ಲದರ ಜೊತೆಗೆ 'ನಾನು' ಎಂಬ ಆತ್ಮಚರಿತ್ರೆಯನ್ನೂ ಬರೆದಿದ್ದಾರೆ.

ಪಿಎಚ್.ಡಿ.ಯಲ್ಲಿ ಚಿನ್ನದ ಪದವನ್ನು ಪಡೆದ ಗುಂಜಾಳರು, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ದೇವರಾಜ ಬಹಾದ್ದೂರ್ ಬಹುಮಾನ, ತಾಪೆಶೆಟ್ಟಿ ಬಹುಮಾನಗಳನ್ನೂ ಪಡೆದಿದ್ದಾರೆ. ರಾಷ್ಟ್ರೀಯ ಅಂತಾರಾಷ್ಟ್ರೀಯ ಸಮ್ಮೇಳನಗಳಲ್ಲಿ ಭಾಗವಹಿಸಿರುವ ಡಾ. ಗುಂಜಾಳರು ಮೂರ್ತಿಚಿಕ್ಕುದಾದರೂ ಅಪಾರಕೀರ್ತಿಯನ್ನು ಪಡೆದ ಪ್ರತಿಭಾವಂತರು. ಪ್ರಸ್ತುತ ಬೆಳಗಾವಿಯ ರುದ್ರಾಕ್ಷಿಮಠದ ಲಿಂಗಾಯತ ಸಂಶೋಧನಾ ಕೇಂದ್ರ ಗ್ರಂಥಾಲಯದ ನಿರ್ದೇಶಕರಾಗಿ ಅಹರ್ನಿಶಿ ದುಡಿಯುತ್ತಿರುವ ಡಾ. ಗುಂಜಾಳರು ಸವ್ಯಸಾಚಿಯಂತೆ ಸಾಹಿತ್ಯ ಮತ್ತು ಗ್ರಂಥಾಲಯ ವಿಜ್ಞಾನಗಳೆರಡಕ್ಕೂ ಚಿರಸ್ಮರಣೀಯವಾದ ಕಾಣಿಕೆಯನ್ನು ನೀಡಿದ್ದಾರೆ.

■

# ಪ್ರೊ. ಸಿ.ಜಿ. ಪುರುಷೋತ್ತಮ ಅವರ ಸಾಹಿತ್ಯಸೇವೆ –ಒಂದು ವಿಹಂಗಮ ನೋಟ

ಸುಮಾರು ಐವತ್ತು ವರ್ಷಗಳ ಹಿಂದೆ 'ದೇವಭಾಷೆ' ಎನಿಸಿದ್ದ ಸಂಸ್ಕೃತ ಜನಸಾಮಾನ್ಯರಿಗೆ ಅಲಭ್ಯವಾಗಿದ್ದು ಕೇವಲ ಕೆಲವೇ ವಿಶಿಷ್ಟವರ್ಗದವರ ಸ್ವತ್ತಾಗಿತ್ತು. ಅಷ್ಟೇ ಏಕೆ ಕನ್ನಡವೂ ಕೂಡ ಅಂದಿನ ಜನತೆಯ ಅವಜ್ಞತೆಗೆ ಒಳಗಾಗಿತ್ತು. ಇಂತಹ ಪರ್ವಕಾಲದಲ್ಲಿ ನನ್ನ ಮಿತ್ರರಾದ ಶ್ರೀ ಸಿ.ಜಿ. ಪುರುಷೋತ್ತಮ ಅವರ ೧೯೪೬ರಲ್ಲಿ ಸಂಸ್ಕೃತ ಆನರ್ಸ್ ತರಗತಿಗೆ ಸೇರಿಕೊಂಡರು. ನಾನೂ ಕೂಡ ಅದೇ ವರ್ಷ ಕನ್ನಡ ಆನರ್ಸ್ ತರಗತಿಗೆ ಸೇರಿಕೊಂಡೆ. ಸಂಸ್ಕೃತ ಭಾಷೆಗಳಿಗೆ ಅವಿನಾಭಾವ ಸಂಬಂಧವಿದ್ದರೂ ಅಂದು ಅವನ್ನು ವ್ಯಾಸಂಗ ಮಾಡುವವರಿಗೆ ಅಷ್ಟೊಂದು ಮಾನ್ಯತೆ ಇರಲಿಲ್ಲ. ಕನ್ನಡ ಆನರ್ಸ್‌ಗೆ ಸೇರಿಕೊಂಡ ನನ್ನನ್ನು ಗೇಲಿಮಾಡಿದ ನನ್ನ ಸ್ನೇಹಿತರೂ ಇಂದೂ ಇದ್ದಾರೆ, ಅನಾಮಧೇಯರಾಗಿದ್ದಾರೆ. ನಾನು ಮತ್ತು ಪುರುಷೋತ್ತಮ ಅವರು ಇಂಗ್ಲಿಷ್ ತರಗತಿಗಳಿಗೆ ಸಹಪಾಠಿಗಳಾಗಿದ್ದೆವು. ಅಂದಿನ ನಮ್ಮ ಬಾಲ್ಯಸ್ನೇಹ ಇಂದೂ ಅದೇ ರೀತಿ ಮುಂದುವರಿದಿದೆ. ಪುರುಷೋತ್ತಮ ಅವರು ಆನರ್ಸ್ ಮತ್ತು ಎಂ.ಎ.ಗಳಲ್ಲಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾಗಿ ಬಹುಮಾನಗಳನ್ನೂ ಪ್ರಶಸ್ತಿಗಳನ್ನೂ ಪಡೆದಿದ್ದಾರೆ. ವಿದ್ಯಾಭ್ಯಾಸ ಮುಗಿದ ಮೇಲೆ ನಾವಿಬ್ಬರೂ ಬೇರೆ ಬೇರೆ ಹುದ್ದೆಗಳಲ್ಲಿ ಸೇರಿಕೊಂಡೆವು. ನಾನು ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯಲ್ಲಿ ನೇಮಕಗೊಂಡೆ. ಪುರುಷೋತ್ತಮ ಅವರು ಸಂಸ್ಕೃತ ಉಪನ್ಯಾಸಕರಾಗಿ ನೇಮಕಗೊಂಡರು. ಅವರು ಬಹುಕಾಲ ಮೈಸೂರಿನಲ್ಲೇ ಇದ್ದುದರಿಂದ ನಮ್ಮ ಭೇಟಿ ಮೇಲಿಂದ ಮೇಲೆ ಆಗುತ್ತಿತ್ತು. ನಾವಿಬ್ಬರೂ ಬಡತನದ ಕುಟುಂಬಗಳಿಂದ ಬಂದವರಾಗಿದ್ದು ಉಚಿತ ವಿದ್ಯಾರ್ಥಿನಿಲಯಗಳಲ್ಲೇ ವ್ಯಾಸಂಗವನ್ನು ಮುಂದುವರಿಸಿದವರು. ಜೀವನದ ಕಷ್ಟಕಾರ್ಪಣ್ಯಗಳನ್ನು ಬಾಲ್ಯದಲ್ಲೇ ಕಂಡಿದ್ದ ನಮಗೆ ಬೇರೆ ಹವ್ಯಾಸಗಳಿಲ್ಲದೆ ನಮ್ಮ ಜೀವನ ವೃತ್ತಿಯನ್ನೇ ಪರಮೋದ್ದೇಶವಾಗಿ ಭಾವಿಸಿ ನಿಸ್ವಾರ್ಥದಿಂದ ಸೇವೆ ಸಲ್ಲಿಸಿದವರು. ಹೀಗಾಗಿ ನಮ್ಮಿಬ್ಬರಲ್ಲಿ ಏಕಮನೋಭಿಪ್ರಾಯ ನೆಲೆಗೊಂಡಿತ್ತು.

ಪ್ರೊ. ಪುರುಷೋತ್ತಮ ಅವರು ಸಂಸ್ಕೃತ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ಅಸಂಖ್ಯಾತ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿದ್ದಾರೆ. ತಮ್ಮ ಕಾಯಕವನ್ನು ಕೇವಲ ವಿದ್ಯಾದಾನಕ್ಕೆ ಮಾತ್ರ ಸೀಮಿತಗೊಳಿಸದೆ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯಗಳಿಗೆ ವಿಶೇಷವಾಗಿ ವಿನಿಯೋಗಿಸಿದ್ದಾರೆ. ಶ್ರೀಯುತರು ಅಚ್ಚಕನ್ನಡಿಗರು. ಕನ್ನಡ ಭಾಷೆ ಸಾಹಿತ್ಯವನ್ನು ಅತ್ಯಂತ ಪರಿಶ್ರಮದಿಂದ ರೂಢಿಸಿಕೊಂಡರು. ಮೇಲಾಗಿ ಅವರು ಭಾವುಕರು. ಕವಿಹೃದಯ ಅವರದು. ಸಂಸ್ಕೃತದಲ್ಲಿ ಸ್ವತಂತ್ರ ಕವಿತೆಗಳನ್ನೂ ಕಾವ್ಯಗಳನ್ನೂ ರಚಿಸಿದ ಶ್ರೇಯಸ್ಸು ಅವರಿಗಿದೆ.

ಪ್ರೊ. ಸಿ.ಜಿ. ಪುರುಷೋತ್ತಮ ಅವರು ಚತುರ್ಭಾಷಾವಿದ್ವಾಂಸರು. ಸಂಸ್ಕೃತದಲ್ಲಿ ಎಂ.ಎ. ಪದವಿಯನ್ನು ಪಡೆದು ಆ ಭಾಷೆಯಲ್ಲಿ ಕೃತಿರಚನಾ ಸಾಮರ್ಥ್ಯವನ್ನೂ ಭಾಷಾಂತರ ಪ್ರಾವೀಣ್ಯವನ್ನೂ ಪಡೆದುಕೊಂಡರು. ಹಿಂದಿ, ಇಂಗ್ಲಿಷ್, ಕನ್ನಡ ಈ ಭಾಷೆಗಳಲ್ಲಿಯೂ ಪರಿಣತಿಯನ್ನು ಪಡೆದುಕೊಂಡರು. ಹೀಗಾಗಿ ಭಾಷಾಂತರ ಕಾರ್ಯವನ್ನು ಶ್ರೀಯುತರು ಲೀಲಾಜಾಲವಾಗಿ ನಿರ್ವಹಿಸಬಲ್ಲವರಾದರು. 'ಅಥರ್ವವೇದ'ವನ್ನು ಕುರಿತು ಪುರುಷೋತ್ತಮ ಅವರು ಮೈಸೂರು

ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸಮಾಲೆಯಲ್ಲಿ ನೀಡಿದ ಉಪನ್ಯಾಸ ಪುಸ್ತಕ ರೂಪದಲ್ಲಿ ಪ್ರಕಟವಾಗಿ ನಾಲ್ಕು ಮುದ್ರಣಗಳನ್ನೂ ಕಂಡಿದೆ. ಕಾವ್ಯತರಂಗಿಣೀ ಭಾಗ ೧ ಮತ್ತು ೨ರಲ್ಲಿ ಕುವೆಂಪು ಅವರ ಭಾವಗೀತೆಗಳನ್ನೂ ಹೆಸರಾಂತ ಹಿಂದಿ, ಕನ್ನಡ, ಜಾನಪದ ವಿದ್ವಾಂಸರ ಕೃತಿಗಳ ತದ್ವತ್ ಭಾಷಾಂತರವನ್ನೂ ಸ್ವತಂತ್ರ ನವ್ಯಕವಿತೆಗಳನ್ನೂ ಕಾಣಬಹುದಾಗಿದೆ. ಇದಲ್ಲದೆ ಆದಿಚುಂಚನಗಿರಿ ಸುಪ್ರಭಾತ ಸ್ತೋತ್ರ, ವಿಶ್ವನಾಥ ಸುಪ್ರಭಾತ ಸ್ತೋತ್ರ ಎಂಬ ವೃತ್ತಗಳಲ್ಲಿ ರಚಿತವಾಗಿರುವ ಈ ಸ್ತೋತ್ರಗಳು ಧ್ವನಿಸುರುಳಿಗಳಾಗಿ ಪ್ರಚುರವಾಗಿವೆ. ಶ್ರೀಯುತರು ಕುವೆಂಪು ಅವರ ರಾಮಾಯಣ ದರ್ಶನಂ ಮಹಾಕಾವ್ಯವನ್ನೂ ಸರ್ವಜ್ಞಕವಿಯ ೫೫೮ ವಚನಗಳನ್ನೂ ಕನ್ನಡದಿಂದ ಸಂಸ್ಕೃತಕ್ಕೂ ಮತ್ತು ಸಂಸ್ಕೃತ ಮಹಾಭಾರತ ವನಪರ್ವದ ೩೧೦೦ ಶ್ಲೋಕಗಳನ್ನು ಸಂಸ್ಕೃತದಿಂದ ಕನ್ನಡಕ್ಕೂ ಅನುವಾದಿಸಿದ್ದಾರೆ. ಸಂಸ್ಕೃತ ಕನ್ನಡ ಭಾಷೆಗಳೆರಡರಲ್ಲೂ ಶ್ರೀಯುತರಿಗಿರುವ ಆಳವಾದ ಪಾಂಡಿತ್ಯಕ್ಕೆ ಇವು ದ್ಯೋತಕವಾಗಿವೆ. ಈ ಉಭಯ ಭಾಷೆಗಳಲ್ಲೂ ಕವಿತಾರಚನಾಶಕ್ತಿಯನ್ನು ರೂಢಿಸಿಕೊಂಡಿದ್ದಾರೆ, ಸಿದ್ಧಿಸಿಕೊಂಡಿದ್ದಾರೆ. ಅಷ್ಟೇ ಅಲ್ಲ ಶ್ರೀಯುತರು ಪ್ರಾಚೀನ ಮತ್ತು ಆಧುನಿಕ ಛಂದಸ್ಸುಗಳೆರಡರಲ್ಲೂ ಕವಿತಾರಚನೆ ಮಾಡುವ ಸಾಮರ್ಥ್ಯವನ್ನೂ ಪಡೆದುಕೊಂಡಿದ್ದಾರೆ.

ಪ್ರೊ. ಸಿ.ಜಿ. ಪುರುಷೋತ್ತಮ ಅವರ ಕನ್ನಡ ಸಂಸ್ಕೃತ ಅನುವಾದ ಕಾರ್ಯವನ್ನು ದೇಶೀಯ ವಿದೇಶೀಯ ವಿದ್ವಾಂಸರು ಮೆಚ್ಚಿಕೊಂಡಿದ್ದಾರೆ. ಪ್ರೊ. ತೀ.ನಂ. ಶ್ರೀಕಂಠಯ್ಯ, ಡಾ. ಸುನೀತಕುಮಾರ್ ಚಟರ್ಜಿ, ಡಾ. ಕೆ. ಕೃಷ್ಣಮೂರ್ತಿ. ಡಾ. ಸಿ.ಡಿ. ದೇಶಮುಖ್, ಡಾ. ಪಿ.ವಿ. ಕಾಣೆ, ಡಾ. ಸುಕುಮಾರ ಸೇನ್, ಡಾ. ಎ.ಎನ್. ಉಪಾಧ್ಯೆ, ಡಾ. ಡಿ.ವಿ. ಗುಂಡಪ್ಪ, ಡಾ. ಎಸ್.ಎಂ. ಕತ್ರೆ, ಶ್ರೀ ಎಲ್.ಸಿ. ಜೈನ್ ಮೊದಲಾದ ಸ್ವದೇಶಿ ವಿದ್ವಾಂಸರೂ, ಪ್ರೊ. ಎಲ್. ಆಖ್ಯಾಡಾರ್ಫ್, ಹ್ಯಾಂಬರ್ಗ್ ವಿಶ್ವವಿದ್ಯಾನಿಲಯ, ಡಾ. ರಾಲ್ಫ್ ಎಲ್. ಟರ್ನರ್, ಲಂಡನ್ ಸ್ಕೂಲ್ ಆಫ್ ಓರಿಯಂಟಲ್ ಅಂಡ್ ಆಫ್ರಿಕನ್ ಸ್ಟಡೀಸ್, ಇಂಗ್ಲೆಂಡ್, ಪ್ರೊ. ಎನ್. ತ್ಸುಜಿ, ಟೋಕಿಯೊ ವಿಶ್ವವಿದ್ಯಾಲಯ –ಇವರೇ ಮೊದಲಾದ ವಿದೇಶೀ ವಿದ್ವಾಂಸರು ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಇವರೇ ಅಲ್ಲದೆ ಸಮಕಾಲೀನ ಆಧುನಿಕ ಪ್ರಾಧ್ಯಾಪಕರೂ ವಿದ್ವಾಂಸರೂ ಪುರುಷೋತ್ತಮ ಅವರ ಅನುವಾದ ಕಾರ್ಯವನ್ನು ಮೆಚ್ಚಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ಅಜ್ಞಾತ ಬಡಕುಟುಂಬದಲ್ಲಿ ಜನಿಸಿ ಅನಾಥನಾದ ಈ ಬಾಲಕ ಸ್ವಸಾಮರ್ಥ್ಯದಿಂದ, ಅವಿರತವಾದ ಪರಿಶ್ರಮದಿಂದ ಚತುರ್ಭಾಷಾ ಪಂಡಿತರಾದುದಷ್ಟೇ ಅಲ್ಲದೆ ಕನ್ನಡ ಸಂಸ್ಕೃತ ಭಾಷೆಗಳಿಗೆ ಸಲ್ಲಿಸಿರುವ ಸೇವೆ ಚಿರಸ್ಮರಣೀಯವಾದುದು. ಶ್ರೀಯುತರು ಕೆಲವು ಬಿಡಿಲೇಖನಗಳನ್ನೂ ಬರೆದಿದ್ದಾರೆ. ಅವುಗಳಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ಆರನೆಯ ಸಂಪುಟದಲ್ಲಿ ಪ್ರಕಟವಾಗಿರುವ ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳ ಲೇಖನ ಉಲ್ಲೇಖಾರ್ಹವಾಗಿದೆ.

ಪ್ರೊ. ಸಿ.ಜಿ. ಪುರುಷೋತ್ತಮ ಅವರು ಅತ್ಯಂತ ಸರಳಸ್ವಭಾವದವರು, ನಿಗರ್ವಿಗಳು, ಉದಾರಿಗಳು, ಸೌಜನ್ಯವೇ ಸಾಕಾರವೆತ್ತಂತಿರುವವರು. ಇಂತಹ ನನ್ನ ಸನ್ಮಿತ್ರರು ಶತಾಯುಗಳಾಗಿ ಸಾಹಿತ್ಯಕ್ಷೇತ್ರಕ್ಕೆ ಮಿಗಿಲಾದ ಸೇವೆಯನ್ನು ಸಲ್ಲಿಸುವಂತಾಗಲಿ ಎಂದು ಮನಃಪೂರ್ವಕವಾಗಿ ಹಾರೈಸುತ್ತೇನೆ.



# ದಿವಂಗತ ಪಂಡಿತ ಎಸ್. ಬಸಪ್ಪನವರು

ಸರಳ ಸಜ್ಜನಿಕೆಯ ಸಾಕಾರಮೂರ್ತಿ, ವಿದ್ಯಾವಿನಯಸಂಪನ್ನ ಪಂಡಿತ ಎಸ್. ಬಸಪ್ಪನವರು ದಿನಾಂಕ ೧೩.೨.೧೯೭೫ ರಂದು ಗುರುವಾರ ಮೈಸೂರಿನಲ್ಲಿ ಶಿವಾಧೀನರಾದರು. ಶ್ರೀಯುತರ ಅಗಲಿಕೆಯಿಂದ ಕನ್ನಡ ಸಾರಸ್ವತ ಪ್ರಪಂಚ ಗ್ರಂಥಸಂಪಾದನ ಕ್ಷೇತ್ರದ ಶ್ರೇಷ್ಠ ವಿದ್ವಾಂಸನೊಬ್ಬನನ್ನು ಕಳೆದುಕೊಂಡಿತು.

ಶಿವಮೊಗ್ಗ ಜಿಲ್ಲೆಯ ಚೆನ್ನಗಿರಿ ತಾಲ್ಲೂಕಿನ ಗೊಪ್ಪೇನಹಳ್ಳಿಯ ಸರ್ಜಾ ಮನೆತನದಲ್ಲಿ ಜನಿಸಿದ ಬಸಪ್ಪನವರು ತಮ್ಮ ವಿದ್ಯಾಭ್ಯಾಸವನ್ನು ಮೈಸೂರು ಸರ್ಕಾರಿ ಟ್ರೈನಿಂಗ್ ಕಾಲೇಜಿನಲ್ಲಿ ಮುಗಿಸಿದರು. ಪಂಡಿತ ಪದವಿಯನ್ನು ಪಡೆದ ನಂತರ ಮಂಡ್ಯ ಮುನಿಸಿಪಲ್ ಪ್ರೌಢಶಾಲೆಯಲ್ಲಿ ಉಪಾಧ್ಯಾಯರಾಗಿ ತಮ್ಮ ಸೇವೆಯನ್ನು ಆರಂಭಿಸಿದರು. ತಮ್ಮ ಜೀವನದಲ್ಲಿನ ಕಟ್ಟುನಿಟ್ಟಿನ ಶಿಸ್ತು, ಸೇವಾನಿಷ್ಠೆ ಮತ್ತು ಶಿಷ್ಯವಾತ್ಸಲ್ಯಗಳಿಂದ ಒಳ್ಳೆಯ ಹೆಸರನ್ನು ಪಡೆದರು.

ಅನಂತರ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯಲ್ಲಿ ಸಹಾಯಕ ಸಂಶೋಧಕರಾಗಿ ನೇಮಕಗೊಂಡು ಪೂರ್ಣಸೇವೆಯನ್ನು ಸಲ್ಲಿಸಿ ಅಲ್ಲಿಯೇ (ಕನ್ನಡ ಅಧ್ಯಯನ ಸಂಸ್ಥೆ) ನಿವೃತ್ತರಾದರು. ತಮ್ಮ ಸೇವಾವಧಿಯಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ವತಿಯಿಂದ ಲಕ್ಕಣ ದಂಡೇಶನ 'ಶಿವತತ್ತ್ವ ಚಿಂತಾಮಣಿ', ಕುಮಾರವ್ಯಾಸ ಭಾರತದ 'ಸಭಾಪರ್ವ' ಮತ್ತು ಕೆರೆಯ ಪದ್ಮರಸ 'ದೀಕ್ಷಾಬೋಧೆ'ಗಳನ್ನು ಸಂಪಾದಿಸಿ ಪ್ರಕಟಿಸಿದರು. ತಮ್ಮ ಬಿಡುವಿನ ವೇಳೆಯಲ್ಲಿ ನನ್ನ ಜೊತೆಗೆ ರಾಘವಾಂಕನ ಹರಿಶ್ಚಂದ್ರ ಕಾವ್ಯವನ್ನು ಸಂಪಾದಿಸಿದರು. ಅಲ್ಲದೆ ತಾವೇ ನನ್ನಯ್ಯನ 'ಪ್ರಾಕ್ತನ ಗಣಕಥಾವಳಿ' ಮತ್ತು ಕುಮಾರಪದ್ಮರಸನ 'ಸಾನಂದಚರಿತೆ'ಯನ್ನೂ ಸಂಪಾದಿಸಿದ್ದಾರೆ.

ನನ್ನ ಸಹೋದ್ಯೋಗಿಯಾಗಿ ನಾನು ಅವರಲ್ಲಿ ಮೆಚ್ಚಿಕೊಂಡದ್ದು ಅವರ ಕರ್ತವ್ಯನಿಷ್ಠೆ, ಸಂಪಾದನಕಾರ್ಯದಲ್ಲಿ ಪಾಠಶುದ್ಧಿಗಾಗಿ ಅವರು ವಹಿಸುತ್ತಿದ್ದ ಶ್ರಮ. ಯಾವುದೇ ಸಮಸ್ಯೆ ಬಂದರೂ ಪಟ್ಟುಹಿಡಿದು, ತಾಳ್ಮೆಯಿಂದ ಒಂದಲ್ಲ ಹಲವು ಬಾರಿ ಪರಿಶೀಲಿಸಿ ಅವರು ಕೈಕೊಳ್ಳುತ್ತಿದ್ದ ನಿರ್ಣಯಗಳು ಎಲ್ಲರ ಮೆಚ್ಚುಗೆಯನ್ನೂ ಗಳಿಸುತ್ತಿದ್ದುವು. ಗ್ರಂಥಗಳಿಗೆ ಪೀಠಿಕೆಗಳನ್ನು ಬರೆಯುವಾಗ ಅವರು ನಡೆಸುತ್ತಿದ್ದ ತಳಮುಟ್ಟ ಸಂಶೋಧನೆ ಆ ಕ್ಷೇತ್ರದಲ್ಲಿ ಇತರರು ಕೈಹಾಕದಂತೆ ಮಾಡಿವೆ. ಅದರ ಫಲವಾಗಿ ಮೂಡಿಬಂದ ಅವರ ಗ್ರಂಥಗಳ ಪೀಠಿಕೆಗಳು ಕನ್ನಡ ಸಾಹಿತ್ಯಕ್ಕೆ ಉತ್ತಮ ಕೊಡುಗೆಯಾಗಿವೆ. ಅವುಗಳಲ್ಲಿ ಅವರ ಆಳವಾದ ಅಭ್ಯಾಸ, ವಿಶಾಲವಾದ ಲೋಕಾನುಭವ, ಸಮತೂಕದ ವಿಮರ್ಶೆ ಮುಂತಾದುವು ಕಂಡುಬರುತ್ತವೆ.

ಶುದ್ಧ ಶರಣಸಂಪ್ರದಾಯವನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದ ಬಸಪ್ಪನವರ ವ್ಯಕ್ತಿತ್ವ ಆಕರ್ಷಣೀಯವಾಗಿದ್ದಿತು. ಸುಂದರ ಮೈಕಟ್ಟಿನ ಆ ವ್ಯಕ್ತಿ ಯಾರ ಗಮನವನ್ನಾದರೂ ಸೆಳೆಯುತ್ತಿದ್ದರು. ಗಂಭೀರ ಮುಖಮುದ್ರೆಯ ಅವರು ತಮ್ಮ ಸರಸಸಲ್ಲಾಪಗಳಿಂದ ಒಡನಾಡಿಗಳ ಹೃದಯವನ್ನು ಗೆದ್ದುಕೊಂಡಿದ್ದರು. ತಮ್ಮ ಜೀವನದ ಕಷ್ಟಕೋಟಲೆಗಳೇನೇ ಇದ್ದರೂ ಅವನ್ನು ನುಂಗಿಕೊಂಡು ಸಂತೋಷವನ್ನು ಇತರರಲ್ಲಿ ಹಂಚಿಕೊಂಡವರು.

ತುಂಬುಸಂಸಾರವಂದಿಗರಾದ ಇವರು ಪತ್ನಿ, ಇಬ್ಬರು ಪುತ್ರರು ಮತ್ತು ಐದು ಜನ ಪುತ್ರಿಯರನ್ನು ಅಗಲಿ ಹೋಗಿದ್ದಾರೆ. ಬಾಳಿನ ಉದ್ದಕ್ಕೂ ನಿಷ್ಕಾಮ ಕರ್ಮಿಯಂತೆ ದುಡಿದು ತನಗಾಗಲಿ ತನ್ನ ಸಂಸಾರಕ್ಕಾಗಲಿ ಯಾವ ರೀತಿಯ ಆಧಾರವನ್ನೂ ಮಾಡಿಕೊಳ್ಳದ ಶ್ರೀಯುತರ ಕುಟುಂಬವರ್ಗದವರಿಗೆ ಕರ್ನಾಟಕ ಜನತೆ ಮತ್ತು ಸರ್ಕಾರ ಈ ಸಂದರ್ಭದಲ್ಲಿ ಆರ್ಥಿಕ ನೆರವು ನೀಡಬೇಕೆಂದು ಬಿನ್ನೈಸಿಕೊಳ್ಳುತ್ತೇನೆ. ದಯಾಮಯರಾದ ಶ್ರೀ ಪಾರ್ವತೀ ಪರಮೇಶ್ವರರು ದಿವಂಗತರ ಆತ್ಮಕ್ಕೆ ಚಿರಶಾಂತಿಯನ್ನೂ ಅವರ ಕುಟುಂಬವರ್ಗದವರಿಗೆ ಈ ದುರ್ಭರ ದುಃಖವನ್ನು ಭರಿಸುವ ತಾಳ್ಮೆಯನ್ನೂ ಕರುಣಿಸಲಿ ಎಂದು ಪ್ರಾರ್ಥಿಸುತ್ತೇನೆ. ■

# ಶಾಸನಗಳ ಅಧ್ವರ್ಯು : ಡಾ. ಜಿ.ಎಸ್. ಗಾಯಿ

ಸರಳ ನಿರಾಡಂಬರ ವ್ಯಕ್ತಿಯಾದ ಡಾ. ಗೋವಿಂದಸ್ವಾಮಿರಾವ್ ಗಾಯಿ ಅವರು ೧೯೧೭ರಲ್ಲಿ ವಿಜಾಪುರದಲ್ಲಿ ಜನ್ಮತಾಳಿದರು. ಬಾಲ್ಯದಲ್ಲೇ ಅಪ್ರತಿಮ ಪ್ರತಿಭೆತೋರಿದ ಇವರು ಪಿ.ಡಿ.ಜೆ. ಹೈಸ್ಕೂಲ್ ಮತ್ತು ಪುಣೆಯ ವಾಡಿಯಾ ಕಾಲೇಜಿನಲ್ಲಿ ಅಧ್ಯಯನ ಮಾಡಿದರು. ಸಂಸ್ಕೃತದಲ್ಲಿ ಬಿ.ಎ. (ಆನರ್ಸ್) ಪದವಿಯನ್ನು ೧೯೩೯ರಲ್ಲಿ ಮುಂಬಯಿ ವಿಶ್ವವಿದ್ಯಾನಿಲಯದಿಂದ ಪಡೆದರು. ಅದೇ ವರ್ಷ ಪ್ರಾರಂಭವಾದ ಪುಣೆಯ ಡೆಕ್ಕನ್‌ಕಾಲೇಜಿನ ಸ್ನಾತಕೋತ್ತರ ಸಂಶೋಧನಾ ಸಂಸ್ಥೆಯಲ್ಲಿ ಶಿಷ್ಯವೃತ್ತಿಯನ್ನು ಪಡೆದರು. ಇವರು ಭಾಷಾಶಾಸ್ತ್ರದಲ್ಲಿ ವಿಶೇಷ ಸಂಶೋಧನೆಯನ್ನು ಕೈಕೊಂಡು ಹಳಗನ್ನಡ ಐತಿಹಾಸಿಕ ವ್ಯಾಕರಣವಾದ "Historical Grammar of Old Kannada based on the inscriptions of the 8th, 9th and 10th centuries" ಎಂಬ ನಿಬಂಧವನ್ನು ಸಿದ್ಧಪಡಿಸಿದರು. ಮುಂಬಯಿ ವಿಶ್ವವಿದ್ಯಾನಿಲಯವು ಈ ನಿಬಂಧಕ್ಕೆ ೧೯೪೬ರಲ್ಲಿ ಪಿಎಚ್.ಡಿ. ಪದವಿಯನ್ನು ನೀಡಿತು. ಈ ನಿಬಂಧವನ್ನು ಸಿದ್ಧಪಡಿಸುವಲ್ಲಿ ಶ್ರೀಯುತರು ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಭಂಡಾರದಲ್ಲಿ ವಿಷಯ ಸಂಗ್ರಹಿಸುವಾಗ ಡಾ. ಎ.ಎನ್. ನರಸಿಂಹಯ್ಯ ಮತ್ತು ಡಾ. ಡಿ.ಎಲ್. ನರಸಿಂಹಾಚಾರ್ ಮುಂತಾದವರಿಂದ ತುಂಬ ಉಪಕೃತಗೊಂಡಿದ್ದಾರೆ. ಈ ನಿಬಂಧವು ೧೯೪೭ರಲ್ಲಿ ಡೆಕ್ಕನ್ ಕಾಲೇಜಿನಿಂದಲೇ ಪ್ರಕಟವಾಯಿತು.

ಡಾ. ಬಿ.ಎಸ್. ಗಾಯಿ ಅವರು ಕೇಂದ್ರಸರಕಾರದ ಶಾಸನ ಇಲಾಖೆಯಲ್ಲಿ ೧೯೪೬ರಲ್ಲಿ ಕೆಲಸಕ್ಕೆ ಸೇರಿದರು. ಸುಮಾರು ೬ ವರ್ಷಗಳ ಕಾಲ ಮುಂಬಯಿ ಕರ್ನಾಟಕ ವಿಭಾಗಗಳಲ್ಲಿ ಸಂಚರಿಸಿ ಅನೇಕ ಕನ್ನಡ ಶಾಸನಗಳನ್ನು ಕಂಡುಹಿಡಿದು ಸಂಪಾದಿಸಿದರು. ಆಮೇಲೆ ೧೯೫೦–೫೫ ರವರೆಗೆ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ ಭಾಷಾಶಾಸ್ತ್ರದ ಉಪಪ್ರಾಧ್ಯಾಪಕರಾಗಿಯೂ ಆ ಸಂಸ್ಥೆಯ ನಿರ್ದೇಶಕರಾಗಿಯೂ ಇದ್ದರು.

ಶಾಸನಗಳಲ್ಲಿ ಪರಿಣತರಾಗಿದ್ದ ಇವರ ಖ್ಯಾತಿ ನಾಡಿನಾದ್ಯಂತ ಹರಡಿತ್ತು. ರಾಕ್‌ಫೆಲರ್‌ಫೌಂಡೇಶನ್‌ರವರ ಆಮಂತ್ರಣದ ಮೇರೆಗೆ ೧೯೫೬ರಲ್ಲಿ ಅಮೇರಿಕಕ್ಕೆ ಹೋದರು. ಅಲ್ಲಿಯ ಕೆಲವು ವಿಶ್ವವಿದ್ಯಾನಿಲಯಗಳಿಗೆ ಭೇಟಿ ನೀಡಿ ಭಾಷಾಶಾಸ್ತ್ರದ ಬಗ್ಗೆ ವಿಚಾರ ವಿನಿಮಯ ಮಾಡಿಕೊಂಡರು. ಅಮೇರಿಕದಿಂದ ಹಿಂದಿರುಗುವಾಗ ಇಂಗ್ಲೆಂಡ್, ಫ್ರಾನ್ಸ್, ಹಾಲೆಂಡ್, ಜರ್ಮನಿ, ~ಟಲಿ ಮುಂತಾದ ದೇಶಗಳಿಗೆ ಭೇಟಿಯಿತ್ತು ಅಲ್ಲಿನ ಹಲವು ವಿದ್ವಾಂಸರನ್ನೂ ವಿದ್ಯಾರ್ಥಿಗಳನ್ನೂ ಸಂದರ್ಶಿಸಿದರು. ಅನಂತರ ೧೯೫೮ ರಿಂದ ಕೇಂದ್ರ ಸರಕಾರದ ಶಾಸನ ಇಲಾಖೆಯ ಉದಕಮಂಡಲದ ಕಚೇರಿಯಲ್ಲಿ ತಮ್ಮ ಕೆಲಸವನ್ನು ಮುಂದುವರಿಸಿದರು. ಆ ಶಾಖೆಯ ಮುಖ್ಯಸ್ಥರಾಗಿ ೧೯೬೨ರಲ್ಲಿ ನೇಮಕಗೊಂಡರು. (Chief Epigraphist to the Government of India).

ಭಾರತ ಸರಕಾರದ ಈ ಇಲಾಖೆಯು ಶಾಸನಗಳ ಸಂಗ್ರಹಣ, ಸಂಶೋಧನ ಮತ್ತು ಪ್ರಕಟಣಾ ಕಾರ್ಯಗಳನ್ನು ಕೈಕೊಂಡಿದೆ. ಇಡೀರಾಷ್ಟ್ರಕ್ಕೆ ಇದು ಏಕೈಕಸಂಸ್ಥೆ. ಇದರ ಕಾರ್ಯವೃತ್ತಿ ಭರತಖಂಡವನ್ನೆಲ್ಲ ಒಳಗೊಂಡಿದೆ. ಸು.೬೦,೦೦೦ ಶಾಸನಗಳ ಪಡಿಯಚ್ಚುಗಳನ್ನು ಈ ಇಲಾಖೆಯಲ್ಲಿ ಸಂಗ್ರಹಿಸಲಾಗಿದೆ. ಶ್ರೀಯುತರು ೧೯೬೯ರಲ್ಲಿ ಸಿಲೋನಿನಲ್ಲಿ ನಡೆದ

ಅಂತರ ರಾಷ್ಟ್ರೀಯ ಪುರಾತತ್ತ್ವದ ದ್ವಿತೀಯ ಸಮ್ಮೇಳನದಲ್ಲಿ (Second International Conference on Asian Archoelogy) ಭಾರತ ಸರಕಾರದ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ಆ ಸಮ್ಮೇಳನದ ಅಂಗವಾಗಿ ನಡೆದ ಶಾಸನಶಾಸ್ತ್ರ ಮತ್ತು ಲಿಪಿಶಾಸ್ತ್ರದ ವಿಭಾಗದ (Epigraphy and Paleography) ಅಧ್ಯಕ್ಷತೆಯನ್ನು ವಹಿಸಿದ್ದರು. ಈ ಸಂಗತಿ ನಿಜಕ್ಕೂ ಕನ್ನಡಿಗರಿಗೆ ಹೆಮ್ಮೆಯನ್ನು ತರುವಂತಹುದು.

ಮುಂಬಯಿ ಕರ್ನಾಟಕದ ಸು. ೪೦೦ ಶಾಸನಗಳ ಸಂಪುಟವನ್ನು ಪ್ರಕಟಿಸಿದ್ದಾರೆ. ಭಾರತದ ಅದರಲ್ಲೂ ವಿಶೇಷವಾಗಿ ಕರ್ನಾಟಕ ಇತಿಹಾಸ, ಭಾಷಾಶಾಸ್ತ್ರ ಮತ್ತು ಸಂಸ್ಕೃತಿಗಳ ಬಗ್ಗೆ ಸು. ೭೫ ಸಂಶೋಧನಾ ಲೇಖನಗಳನ್ನು ಹಲವಾರು ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟಿಸಿ ಮಹದುಪಕಾರವನ್ನು ಮಾಡಿದ್ದಾರೆ.

ಶ್ರೀಯುತರು ಹಲವಾರು ವಿದ್ವತ್ಸಂಘ ಸಂಸ್ಥೆಗಳ ಸದಸ್ಯರಾಗಿದ್ದುಕೊಂಡು ಮಹತ್ವದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ಕೈಕೊಂಡಿರುವ ಕನ್ನಡ ನಿಘಂಟಿನಲ್ಲಿ ಬರುವ ಶಾಸನೋಕ್ತ ಶಬ್ದಾರ್ಥ ವಿವರಣೆಗೆ ಇವರು ನೀಡುವ ಸಹಾಯ ಮಿಗಿಲಾದುದು. ಇಂತಹ ಅಂತರರಾಷ್ಟ್ರೀಯ ಖ್ಯಾತಿವೆತ್ತ ಡಾ. ಜಿ.ಎಸ್. ಗಾಯಿ ಅವರು ವಿಜಾಪುರ ಜಿಲ್ಲೆಗೆ ಗೌರವವನ್ನು ತಂದವರಲ್ಲಿ ಪ್ರಮುಖರಾಗಿದ್ದಾರೆ.



# ಡಾ. ಎಂ.ಎಂ. ಕಲಬುರ್ಗಿ

ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖ ಸಂಶೋಧಕರಲ್ಲಿ ಡಾ. ಎಂ.ಎಂ. ಕಲಬುರ್ಗಿ ಅವರು ಒಬ್ಬರು. ಶ್ರೀಯುತರು ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಕೃಷಿಗೈದು ಪ್ರಸಿದ್ಧರಾಗಿದ್ದಾರೆ. ಕವಿರಾಜಮಾರ್ಗಪರಿಸರದ ಕನ್ನಡಸಾಹಿತ್ಯ ಕಲಬುರ್ಗಿ ಅವರ ಪಿಎಚ್.ಡಿ ಮಹಾಪ್ರಬಂಧ. ಹಲವಾರು ದೃಷ್ಟಿಗಳಿಂದ ಪರಿಶೀಲನಾರ್ಹವಾದುದು. ಸುಮಾರು ಮೂರುದಶಕಗಳಿಗಿಂತಲೂ ಹೆಚ್ಚು ಕಾಲದಿಂದ ನಾನು ಶ್ರೀಯುತರನ್ನು ಬಲ್ಲವನಾಗಿದ್ದೇನೆ.

ಹೈದರಾಬಾದಿನಲ್ಲಿ ನಡೆದ ಭಾಷಾಶಾಸ್ತ್ರದ ತರಬೇತಿ ಶಿಬಿರದಲ್ಲಿ ನನ್ನ ಅವರ ಪ್ರಥಮ ಭೇಟಿ ಆಯಿತು. ಆ ವೇಳೆಗಾಗಲೇ ನಾನು ಹರಿಶ್ಚಂದ್ರಕಾವ್ಯವೇ ಮೊದಲಾದ ಕೆಲವು ಪ್ರಾಚೀನ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿದ್ದೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಸಂಪಾದಕನಾಗಿದ್ದೆ. ಪರಸ್ಪರ ಭೇಟಿಯಾದ ಕೂಡಲೇ ಕಲಬುರ್ಗಿ ಅವರು ಆಶ್ಚರ್ಯಚಕಿತರಾದರು. ನನ್ನ ವೇಷಭೂಷಣಗಳನ್ನು ನೋಡಿದ ಶ್ರೀಯುತರು ದಿಗ್ಭ್ರಾಂತರಾದರು. ಹರಿಶ್ಚಂದ್ರಕಾವ್ಯವೇ ಮೊದಲಾದ ಪ್ರಾಚೀನ ಕೃತಿಗಳನ್ನು ಸಂಪಾದಿಸಿದ್ದ ನಾನು ಹಳೆಯ ಕಾಲದ ಪಂಡಿತರಂತೆ ಇದ್ದಿರಬಹುದೆಂದು ಅವರು ಕಲ್ಪಿಸಿಕೊಂಡಿದ್ದರು. ಅದಕ್ಕೆ ತದ್ವಿರುದ್ಧವಾದ ನನ್ನ ವೇಷಭೂಷಣಗಳು ಅವರನ್ನು ಭ್ರಾಂತಿಗೊಳಿಸಿದ್ದರಲ್ಲಿ ಆಶ್ಚರ್ಯವೇನೂ ಇರಲಿಲ್ಲ. ಆಮೇಲೆ ನಮ್ಮ ಸ್ನೇಹ ಪತ್ರವ್ಯವಹಾರ ಮುಂದುವರಿಯಿತು. ಕಲಬುರ್ಗಿ ಅವರ ಗುರುಗಳಾಗಿದ್ದ ಡಾ. ಆರ್.ಸಿ. ಹಿರೇಮಠ ಅವರು ಕನ್ನಡ ನಿಘಂಟು ಸಂಪಾದಕ ಸಮಿತಿಯ ಸದಸ್ಯರಾಗಿದ್ದುಕೊಂಡು ನನ್ನ ಅತ್ಯಂತ ಆತ್ಮೀಯರೂ ಹಿತೈಷಿಗಳೂ ಆಗಿದ್ದುದು ಇದಕ್ಕೆ ಮತ್ತೊಂದು ಕಾರಣವಿರಬಹುದು.

ಕಲಬುರ್ಗಿ ಅವರ ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯವನ್ನು ಕುರಿತು ಒಂದು ದೀರ್ಘವಾದ ವಿಮರ್ಶೆಯನ್ನು ಬರೆದಿದ್ದುದಲ್ಲದೆ ಕೆಲವಾರು ಅಂಶಗಳ ಬಗ್ಗೆಯೂ ಅವರೊಡನೆ ಚರ್ಚಿಸಿದ್ದೆ.

ನಾನು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನಾ ವಿಭಾಗದ ಉಪನಿರ್ದೇಶಕನಾಗಿದ್ದಾಗ ಅನೇಕ ಪ್ರಾಚೀನ ಅಪ್ರಕಟಿತ ಕೃತಿಗಳ ಬಗೆಗೆ ಮೇಲಿಂದ ಮೇಲೆ ವಿಚಾರ ಮಾಡುವುದೂ ಪತ್ರವ್ಯವಹಾರ ಮಾಡುವುದೂ ಅವ್ಯಾಹತವಾಗಿ ನಡೆದಿತ್ತು.

ನಾನು ನನ್ನ ಹುದ್ದೆಯಿಂದ ನಿವೃತ್ತನಾಗುವ ಸಂದರ್ಭದಲ್ಲಿ ವಿಶ್ವವಿದ್ಯಾನಿಲಯದ ಧನಸಹಾಯ ಆಯೋಗದ ವತಿಯಿಂದ ಯಾವುದಾದರೂ ಒಂದು ಸಾಹಿತ್ಯದ ವಿಷಯವನ್ನು ಆಯ್ಕೆ ಮಾಡಿಕೊಳ್ಳಬೇಕೆಂದಿದ್ದಾಗ ಕಲಬುರ್ಗಿ ಅವರು "ಗುಬ್ಬಿಯ ಮಲ್ಲಣಾರ್ಯರ ವೀರಶೈವಾಮೃತ ಮಹಾಪುರಾಣದ ಅಧಿಕೃತ ಸಂಪಾದನಾ ಕಾರ್ಯವನ್ನು ಕೈಕೊಳ್ಳುವಂತೆ ತಿಳಿಸಿದ್ದೇ ಅಲ್ಲದೆ ಅದಕ್ಕೆ ಸಂಬಂಧಿಸಿದ ಯೋಜನೆಯನ್ನೂ ಸಿದ್ಧಮಾಡಿಕೊಟ್ಟರು. ಆ ಕಾರ್ಯ ಮುಂದುವರಿಯಿತು."

ಒಮ್ಮೆ ನಾನು ಧಾರವಾಡಕ್ಕೆ ಹೋದಾಗ ನನ್ನ ಮಿತ್ರರ ಮನೆಗೆ ಹೋದೆ. ಅವರು ಅನಾರೋಗ್ಯಪೀಡಿತರಾಗಿದ್ದು ಮಾರನೆಯ ದಿನ ಚಿಕಿತ್ಸೆಗಾಗಿ ಆಸ್ಪತ್ರೆಗೆ ದಾಖಲಾಗುವುದರಲ್ಲಿದ್ದರು. ನಾನು ಅವರ ವ್ಯಾಧಿಯೇನೆಂದು ಕೇಳಿದಾಗ ಮೊಳೆರೋಗ ಎಂದು ತಿಳಿಸಿದರು. ನಾನು ಈ ರೋಗದ ಚಿಕಿತ್ಸೆಯನ್ನು ಪಡೆದು ಆಸ್ಪತ್ರೆಗೆ ಸೇರದೆಯೇ ಅದರ ಪರಿಹಾರೋಪಾಯವನ್ನು ಆಮೇಲೆ ಕಂಡುಕೊಂಡಿದ್ದೆ. ಅದರಂತೆ ನನ್ನ ಮಿತ್ರರನ್ನು ಸಮಾಧಾನಪಡಿಸಿ ನನ್ನ ಚಿಕಿತ್ಸೆಯಲ್ಲಿ ವಿಶ್ವಾಸವಿಡುವಂತೆ ಕೇಳಿಕೊಂಡೆ. ಮೂರು ನಾಲ್ಕು ದಿನಗಳು ಅವರ ಮನೆಯಲ್ಲೇ ಇದ್ದು ಚಿಕಿತ್ಸೆ ನಡೆಸಿದ ತರುವಾಯ ಅವರು ಸಂಪೂರ್ಣ ಗುಣಮುಖರಾಗಿ ತಮ್ಮ ದೈನಂದಿನ ಕಾರ್ಯಗಳಲ್ಲಿ ನಿರತರಾದರು.

ಡಾ. ಎಂ.ಎಂ. ಕಲಬುರ್ಗಿ ಅವರು ನನ್ನ ಆಪ್ತಮಿತ್ರರಲ್ಲೊಬ್ಬರು. ಸದಾ ವ್ಯಾಸಂಗ ನಿರತರಾದ ಶ್ರೀಯುತರು ಹಲವಾರು ಯೋಜನೆಗಳನ್ನು ತಮ್ಮ ತಲೆಯಲ್ಲಿ ತುಂಬಿಕೊಂಡೇ ಇರುತ್ತಾರೆ. ಅರುವತ್ತು ವಸಂತಗಳನ್ನು ಕಂಡಿರುವ ಶ್ರೀಯುತರು ಇನ್ನೂ ಹಲವಾರು ವಸಂತಗಳನ್ನು ಕಾಣುವಂತಾಗಲಿ ಎಂದು ಮನದುಂಬಿ ಹಾರೈಸುತ್ತೇನೆ. ■

# ನಾ ಕಂಡ ಶ್ರೀ ಎಂ.ಪಿ. ಪ್ರಕಾಶ್

**ಕ**ರ್ನಾಟಕ ಕಂಡ ಅತ್ಯಂತ ಅಪರೂಪದ ಶ್ರೇಷ್ಠರಾಜಕಾರಣಿಗಳಲ್ಲಿ ಪ್ರಕಾಶ್ ಅವರು ಪ್ರಮುಖರು. ಶ್ರೀಯುತರು ಕೇವಲ ರಾಜಕಾರಣಿ ಅಷ್ಟೇ ಅಲ್ಲ, ಸಾಹಿತ್ಯ, ಸಿನಿಮಾ, ರಂಗಭೂಮಿ ಮೊದಲಾದ ಕ್ಷೇತ್ರಗಳಲ್ಲಿ ಸಾಕಷ್ಟು ಕೃಷಿಮಾಡಿದವರು. ಬಹುಮುಖಪ್ರತಿಭೆಯ ಪ್ರಕಾಶ್ ಅವರು ಕರ್ನಾಟಕದಲ್ಲಿ ಎಲ್ಲರಿಗೂ ಚಿರಪರಿಚಿತರಾದವರು.

ಎಂ.ಎ., ಎಲ್‌ಎಲ್.ಬಿ. ಪದವೀಧರರಾದ ಶ್ರೀಯುತರು ವಕೀಲಿ ವೃತ್ತಿಯಿಂದ ಸೇವೆಯನ್ನು ಕೈಕೊಂಡರೂ ರಾಜಕೀಯ ಪ್ರವೇಶದಿಂದ ಬೆಳಕಿಗೆ ಬಂದವರು. ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ಕ್ಷೇತ್ರದಿಂದ ವಿಧಾನಸಭೆಗೆ ಆರಿಸಿ ಬಂದವರು. ಶ್ರೀಯುತರು ಸಾರಿಗೆ, ಕಾರ್ಮಿಕ, ಕೃಷಿ, ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಕಂದಾಯ ಮೊದಲಾದ ಖಾತೆಗಳ ಸಚಿವರಾಗಿ ಕಾರ್ಯಗಳನ್ನು ಸಮರ್ಥವಾಗಿ ನಿರ್ವಹಿಸಿ ಖ್ಯಾತನಾಮರಾಗಿದ್ದಾರೆ. ಅವರ ಅಪಾರ ರಾಜಕೀಯ ಅನುಭವದ ಫಲವಾಗಿ ಇಂದು ಕರ್ನಾಟಕ ಸರ್ಕಾರದ ಉಪಮುಖ್ಯಮಂತ್ರಿಗಳಾಗಿದ್ದಾರೆ. ನಿಷ್ಠೆ, ದಕ್ಷತೆ, ಪ್ರಾಮಾಣಿಕತೆಗಳಿಂದ ತಮ್ಮ ವ್ಯಕ್ತಿತ್ವವನ್ನೂ ಬಹುಮುಖ ಪ್ರತಿಭೆಯನ್ನು ಪ್ರಕಾಶಪಡಿಸಿದ್ದಾರೆ.

ನಿರಂತರ ರಾಜಕೀಯ ಚಟುವಟಿಕೆಗಳ ಮಧ್ಯೆಯೂ ಪ್ರಕಾಶ್ ಅವರು ಕೃತಿರಚನೆಗೆ ಅವಕಾಶ ಮಾಡಿಕೊಂಡು ನಾಲ್ಕೈದು ವಿಶಿಷ್ಟ ಕೃತಿಗಳನ್ನು ರಚಿಸಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ತರಗತಿಗಳಿಗೆ ಶ್ರೀಯುತರ ಒಂದು ಕೃತಿ ಪಠ್ಯವಾಗಿದ್ದುದು ಅದರ ಮೌಲ್ಯವನ್ನು ಸಾರುವಂತಹುದಾಗಿದೆ. ವಿಭಿನ್ನ ರುಚಿಯ ವಿಶಿಷ್ಟಕೃತಿಗಳನ್ನು ರಚಿಸಿದ ಕೀರ್ತಿಗೆ ಭಾಜನರಾಗಿದ್ದಾರೆ.

ಪ್ರಕಾಶ್ ಅವರ ಅತ್ಯಂತ ಅಭಿರುಚಿಯ ಕ್ಷೇತ್ರ ಸಿನಿಮಾ ಮತ್ತು ರಂಗಭೂಮಿ. ರಾಷ್ಟ್ರಪ್ರಶಸ್ತಿ ಪುರಸ್ಕೃತವಾದ ಎರಡು ಚಿತ್ರಗಳೂ ಸೇರಿದಂತೆ ಮೂರು ಚಲನ ಚಿತ್ರಗಳಲ್ಲೂ ಅಭಿನಯಿಸಿರುವ ಕೀರ್ತಿ ಪ್ರಕಾಶ್ ಅವರದು.

ರಂಗಭೂಮಿ ಕಾರ್ಯಕ್ರಮಗಳಲ್ಲಿ ಪ್ರಕಾಶ್ ಅವರಿಗೆ ಅಪಾರ ಆಸಕ್ತಿಯಿರುವುದು ಸರ್ವವಿದಿತ. "ಸಂಗ್ಯಾ ಬಾಳ್ಯಾ" ಸೇರಿದಂತೆ ಅನೇಕ ರಂಗಪ್ರಯೋಗಳನ್ನು ನಡೆಸಿರುವುದು ಅವರ ರಂಗಭೂಮಿಯ ಅಭಿರುಚಿಗೆ ದ್ಯೋತಕವಾಗಿದೆ. ಜಾನಪದ, ಸಂಗೀತ, ಸಾಹಿತ್ಯ ಇವುಗಳ ಬಗೆಗೆ ನಿರಂತರ ಆಸಕ್ತಿ, ಅಭಿರುಚಿ, ಅನುಸಂಧಾನವುಳ್ಳವರು. ಸದಾ ಚಿಂತನಶೀಲವಾದ ಮನಸ್ಸು ಪ್ರಕಾಶ್ ಅವರದು. ಈ ಎಲ್ಲ ದೃಷ್ಟಿಗಳಿಂದ ಪ್ರಕಾಶ್ ಅವರು ಜನತೆಯ ಪ್ರೀತಿವಿಶ್ವಾಸಗಳಿಗೆ ಪಾತ್ರರಾಗಿದ್ದಾರೆ.

ಸಾರ್ವಜನಿಕ ಮತ್ತು ಸಾಹಿತ್ಯಕ ಕಾರ್ಯಗಳಲ್ಲಿ ಪ್ರಕಾಶ್ ಅವರು ಸದಾ ಮಗ್ನರಾಗಿರುತ್ತಾರೆ. ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗಿದ್ದಾಗ ಬಳ್ಳಾರಿ ಜಿಲ್ಲಾ ಹನ್ನೊಂದನೆಯ ಸಾಹಿತ್ಯ ಸಮ್ಮೇಳನವು ಹೂವಿನ ಹಡಗಲಿಯಲ್ಲಿ ಅತ್ಯಂತ ವ್ಯವಸ್ಥಿತವಾಗಿ ನೆರವೇರಿತು. ಕುಂ. ವೀರಭದ್ರಪ್ಪನವರು ಸಮ್ಮೇಳನಾಧ್ಯಕ್ಷರಾಗಿದ್ದರು. ಅನೇಕ ಹಿರಿಯ ಸಾಹಿತಿಗಳ ಉಪಸ್ಥಿತಿಯಲ್ಲಿ ಪಾಲ್ಗೊಳ್ಳುವಿಕೆಯಲ್ಲಿ ನೆರವೇರಿದ ಈ ಸಮ್ಮೇಳನಕ್ಕೆ ಪ್ರಕಾಶ್ ಅವರು ಅಧ್ವರ್ಯುಗಳಾಗಿದ್ದರು. ಶ್ರೀಯುತರ

ನೇತೃತ್ವದಲ್ಲಿ ಎಲ್ಲ ಕಾರ್ಯಕ್ರಮಗಳೂ ಸಾಂಗೋಪಾಂಗವಾಗಿ ನೆರವೇರಿದವು. ಸಮ್ಮೇಳನಾಧ್ಯಕ್ಷರ ಭಾಷಣದಲ್ಲಿನ ಈ ವಾಕ್ಯಗಳು ಉಲ್ಲೇಖಾರ್ಹವಾಗಿವೆ.

"ಈ ಗ್ರಾಮವನ್ನು, ಈ ಪ್ರದೇಶವನ್ನು ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ಸದೃಢಗೊಳಿಸಿರುವ ಸನ್ಮಾನ್ಯ ಎಂ.ಪಿ. ಪ್ರಕಾಶ್‌ರವರನ್ನು ಮಾತಾಡಿಸಲೆಂದೇ ಕೊಟ್ಟೂರಿಂದ ನಾವಿಲ್ಲಿಗೆ ಬಂದು ಹೋಗುತ್ತಿದ್ದ ದಿನಗಳನ್ನು ತುಂಬ ಸಂತೋಷದಿಂದ ನೆನಪಿಸಿಕೊಳ್ಳುತ್ತಿರುವೆ. ಅವರು ಈ ಭಾಗದಲ್ಲಿ ಹಮ್ಮಿಕೊಳ್ಳುತ್ತಿದ್ದ ಒಂದಲ್ಲಾ ಒಂದು ಸಾಹಿತ್ಯಕ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ನಾವೆಲ್ಲ ತುದಿಗಾಲ ಮೇಲೆ ನಿಂತಿರುತ್ತಿದ್ದೆವು. ಈ ಭಾಗದಲ್ಲಿ ಎಲೆಮರೆಯ ಕಾಯಿಗಳಂತಿದ್ದ ಅನೇಕ ಜನ ಪ್ರತಿಭಾವಂತರನ್ನು ಸಾಮಾಜಿಕವಾಗಿ ಪರಿಚಯಿಸಿದ. ಈ ಪ್ರದೇಶವನ್ನು ಸಾಂಸ್ಕೃತಿಕವಾಗಿ ಸಂಸ್ಕರಿಸಿದ ಶ್ರೇಯಸ್ಸು ಪ್ರಕಾಶ್‌ರವರಿಗೇ ಸಲ್ಲಬೇಕು. ಹುಲಿಗುಡ್ಡ ಏತನೀರಾವರಿ ಯೋಜನೆಯನ್ನು ಕಾರ್ಯರೂಪಕ್ಕೆ ತರುವುದರ ಮೂಲಕ. ಮೊದಲ ಘಟ್ಟದ ಬಳಿ ತುಂಗಭದ್ರೆಗೆ ಅಡ್ಡಲಾಗಿ ಸೇತುವೆ ಕಟ್ಟಿ ಈ ಭಾಗವನ್ನು ಧಾರವಾಡ ಜಿಲ್ಲೆಗೆ ಬೆಸೆಯುವುದರ ಮೂಲಕ ಅನೇಕ ಜನೋಪಯೋಗಿ ಕಟ್ಟಡಗಳನ್ನು ಇಲ್ಲಿ ಸ್ಥಾಪಿಸುವುದರ ಮೂಲಕ ಶ್ರೀ ಪ್ರಕಾಶ್‌ರವರು ತ್ರಿಭುವನಮಲ್ಲನ ಕಾಲದ ವೈಭವವನ್ನು ಮರುಕಳಿಸುವಂತೆ ಮಾಡಿದ್ದಾರೆ. ಸ್ವತಃ ಅತ್ಯುತ್ತಮ ಲೇಖಕರೂ; ಅತ್ಯುತ್ತಮ ವಾಗ್ಮಿಗಳೂ; ಅತ್ಯುತ್ತಮ ಕಲಾವಿದರೂ; ಅತ್ಯುತ್ತಮ ರಾಜಕಾರಣಿಗಳೂ ಆಗಿರುವ ಪ್ರಕಾಶ್ ನಮ್ಮ ಜಿಲ್ಲೆಯ ಅತ್ಯುತ್ತಮ ಕೊಡುಗೆ ಎಂದು ಹೇಳಲು ನನಗೆ ಹೆಮ್ಮೆ ಎನಿಸುತ್ತದೆ. ಇಂಥವರ ನೇತೃತ್ವದಲ್ಲಿ ನಡೆಯುತ್ತಿರುವ ಈ ಸಮ್ಮೇಳನದಲ್ಲಿ ಭಾಗವಹಿಸುವುದೇ ಅತ್ಯಂತ ಸಂತೋಷದ ಕೆಲಸವೆಂದು ನಾನು ಭಾವಿಸುತ್ತೇನೆ."

ಎರಡು ದಿನಗಳು ಅಭೂತಪೂರ್ವವಾಗಿ ನೆರವೇರಿದ ಈ ಸಮ್ಮೇಳನದ ಮತ್ತೊಂದು ಮಹತ್ವದ ಕಾರ್ಯವೆಂದರೆ ಹೂವಿನಹಡಗಲಿಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಆಡಳಿತ ಕಚೇರಿಯನ್ನು ಸ್ಥಾಪಿಸಿದುದು. ಈ ನೂತನ ಕಾರ್ಯಾಲಯವನ್ನು ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀ ಪ್ರಕಾಶ್ ಅವರು ನನ್ನಿಂದಲೇ ಉದ್ಘಾಟನೆ ಮಾಡಿಸಿದರು. ಈ ಎಲ್ಲ ದೃಷ್ಟಿಗಳಿಂದ ಹೂವಿನಹಡಗಲಿಯಲ್ಲಿ ನಡೆದ ಬಳ್ಳಾರಿ ಜಿಲ್ಲಾ ೧೧ನೆಯ ಸಾಹಿತ್ಯ ಸಮ್ಮೇಳನವು ಚಿರಸ್ಮರಣೀಯವಾಗಿದೆ. ಇದರ ಶ್ರೇಯಸ್ಸೆಲ್ಲಾ ಸ್ವಾಗತ ಸಮಿತಿ ಅಧ್ಯಕ್ಷರಾದ ಶ್ರೀ ಪ್ರಕಾಶ್ ಅವರಿಗೇ ಸಲ್ಲತಕ್ಕದ್ದಾಗಿದೆ.

ಅಪಾರ ಲೋಕಾನುಭವ ನಿರಂತರ ವ್ಯಾಸಂಗಗಳಿಂದ ಪ್ರಕಾಶ್ ಅವರ ವ್ಯಕ್ತಿತ್ವ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ವಿಶ್ವದ ಬಹುತೇಕ ರಾಜ್ಯಗಳಿಗೆ ಭೇಟಿ ಕೊಟ್ಟಿದ್ದರೂ ಭಾರತೀಯ ಸಂಸ್ಕೃತಿಯನ್ನು ಅಚ್ಚಳಿಯದೆ ಕಾಪಾಡಿಕೊಂಡು ಬಂದಿರುವ ಅಪರೂಪದ ವ್ಯಕ್ತಿ. ಈ ಸುಸಂಸ್ಕೃತ ವ್ಯಕ್ತಿಗೆ ಸ್ವಸಾಮರ್ಥ್ಯದಿಂದ ಬಯಸದೇ ಬಂದ ಕರ್ನಾಟಕದ ಉಪಮುಖ್ಯಮಂತ್ರಿ ಪದವಿಗಾಗಿ ಜನತೆ ಅತ್ಯಂತ ಸಂತೋಷಭರಿತರಾಗಿದ್ದಾರೆ. ಪ್ರೀತ್ಯಾದರಗಳಿಂದ ಅಭಿನಂದಿಸಿದ್ದಾರೆ. ಶ್ರೀಯುತರ ನೂರ್ಕಾಲಬಾಳಲೆಂದು ಮನಃಪೂರ್ವಕವಾಗಿ ಹಾರೈಸುತ್ತೇನೆ. ಸ್ವಸಾಮರ್ಥ್ಯದಿಂದ ಅಯಾಚಿತವಾಗಿ ಸಂಪ್ರಾಪ್ತವಾಗಿರುವ ಈ ಉಪಮುಖ್ಯಮಂತ್ರಿಸ್ಥಾನ ತಮಗೆ ಶ್ರೇಯಸ್ಸನ್ನೂ ಪ್ರೇಯಸ್ಸನ್ನೂ ಉಂಟುಮಾಡಲಿ ಎಂದು ಪ್ರಾರ್ಥಿಸುತ್ತೇವೆ.

■

# ಶ್ರೀ ಜೆ.ಎಚ್. ಪಟೇಲ್

**ಕ**ನ್ನಡ ಸಾರಸ್ವತ ಪ್ರಪಂಚದಲ್ಲಿ ಚಿಂತನಶೀಲ ರಾಜಕಾರಣಿ, ಅತ್ಯಂತ ಸ್ನೇಹಪರವ್ಯಕ್ತಿ, ಸಮಾಜವಾದಿ ಧುರೀಣ, ಸಂಯುಕ್ತ ಜನತಾದಳದ ಮುಖಂಡ, ನೇರನುಡಿಯ ದಕ್ಷಆಡಳಿತಗಾರ, ರಾಷ್ಟ್ರ ಕಂಡ ಅತ್ಯಂಥ ಶ್ರೇಷ್ಠರಾಜಕಾರಣಿ, ಕರ್ನಾಟಕದ ಹದಿನೈದನೆಯ ಮುಖ್ಯಮಂತ್ರಿ, ಬದುಕನ್ನು ಅತ್ಯಂತ ಉತ್ಸಾಹದಿಂದ ಪ್ರೀತಿಸುತ್ತಿದ್ದ ವಿಶಿಷ್ಟ ವಿನೂತನ ಕೀರ್ತಿಗೆ ಭಾಜನರಾಗಿದ್ದವರು ಸನ್ಮಾನ್ಯ ಜಯದೇವಪ್ಪ ಹಾಲಪ್ಪ ಪಟೇಲರು.

೧.೧೦.೧೯೩೦ರಲ್ಲಿ ಕಾರಿಗನೂರಿನಲ್ಲಿ ಜನಿಸಿ, ೧೯೫೪ರಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿ, ಅದೇ ವರ್ಷ ಶ್ರೀಮತಿ ಸರ್ವಮಂಗಳಮ್ಮ ಅವರನ್ನು ವಿವಾಹವಾಗಿ, ೧೯೪೭ರಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡು, ೧೯೭೫-೧೯೭೭ರ ತುರ್ತುಪರಿಸ್ಥಿತಿ ಹೋರಾಟದಲ್ಲಿ ಜೈಲುವಾಸ ಅನುಭವಿಸಿ, ೧೯೬೦ರಲ್ಲಿ ತಾಲ್ಲೂಕು ಪಂಚಾಯಿತಿಗೆ ಸ್ಪರ್ಧಿಸುವ ಮೂಲಕ ಸಾರ್ವಜನಿಕ ಜೀವನ ಪ್ರವೇಶಿಸಿ, ೧೯೬೨ರಲ್ಲಿ ವಿಧಾನಸಭೆಗೆ ಸ್ಪರ್ಧಿಸಿ ಸೋಲನುಭವಿಸಿ, ೧೯೬೪ರಲ್ಲಿ ವಿಧಾನ ಪರಿಷತ್ತಿಗೆ ಸ್ಪರ್ಧಿಸಿ ಸೋಲನುಭವಿಸಿ, ೧೯೬೭ರಲ್ಲಿ ಲೋಕಸಭೆಗೆ ಆಯ್ಕೆಯಾಗಿ, ಪ್ರಥಮಬಾರಿಗೆ ಲೋಕಸಭೆಯಲ್ಲಿ ಕನ್ನಡದಲ್ಲಿ ಭಾಷಣ ಮಾಡಿ ಇತಿಹಾಸ ಸೃಷ್ಟಿಸಿ, ೧೯೮೩ರಲ್ಲಿ ವಿಧಾನಸಭೆಗೆ ಸ್ಪರ್ಧಿಸಿ ಗೆದ್ದು ಅಬಕಾರಿ ಮತ್ತು ವಿದ್ಯುತ್ ಸಚಿವರಾಗಿ, ೧೯೮೫ರಲ್ಲಿ ಬೃಹತ್ ಕೈಗಾರಿಕಾ ಸಚಿವರಾಗಿ, ೧೯೮೬ರಲ್ಲಿ ವಿದ್ಯುತ್ ಸಚಿವರಾಗಿ, ೧೯೯೪ರಲ್ಲಿ ಉಪಮುಖ್ಯಮಂತ್ರಿಯಾಗಿ ೧೯೯೬ರಲ್ಲಿ ಮುಖ್ಯಮಂತ್ರಿಯಾಗಿ, ೧೯೯೯ರ ಚುನಾವಣೆಯಲ್ಲಿ ಸೋಲು ಅನುಭವಿಸಿದ್ದು –ಇವು ಪಟೇಲ ಜೀವನದ ಘಟ್ಟಗಳು.

ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆಗೊಂಡಾಗ ಸನ್ಮಾನ್ಯ ಪಟೇಲರನ್ನು ಸಂದರ್ಶಿಸಲು ಪದಾಧಿಕಾರಿಗಳ ಸಮೇತ ಹೋದಾಗ ಅನೇಕ ಮಂದಿ ಅವರ ಸಂದರ್ಶನಕ್ಕಾಗಿ ಕಾದು ಕುಳಿತಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ತಮ್ಮ ಸಂದರ್ಶನಕ್ಕಾಗಿ ಬಂದಿರುವರು ಎಂಬ ವಿಷಯವನ್ನು ಕೇಳುತ್ತಲೇ ಕೂಡಲೇ ಹೊರಬಂದು ನಮ್ಮನ್ನು ಬರಮಾಡಿಕೊಂಡು ನನ್ನ ಹೆಗಲಮೇಲೆ ಕೈಹಾಕಿ ಛಾಯಾಚಿತ್ರಗಾರರನ್ನು ಕರೆಸಿ ಭಾವಚಿತ್ರವನ್ನು ತೆಗೆಸಿ ನಮ್ಮ ಎಲ್ಲ ಕಾರ್ಯಗಳಿಗೂ ಪ್ರೋತ್ಸಾಹ ನೀಡುವುದಾಗಿ ಭರವಸೆಯನ್ನು ನೀಡಿ, ಅವರ ಕನ್ನಡಪರ ಅಭಿಮಾನವನ್ನು, ಪರಿಷತ್ತಿನ ಬಗೆಗೆ ಅವರಿಗಿದ್ದ ಗೌರವ ಭಾವನೆಯನ್ನು ಸಾದರಪಡಿಸಿದರು. ಕಾವೇರಿಯನ್ನು ಕನಕಪುರಕ್ಕೆ ಹರಿಸಿ, ಅಖಿಲ ಭಾರತ ೬೭ನೆಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ವಿಧ್ಯುಕ್ತವಾಗಿ ಉದ್ಘಾಟಿಸಿ ಪಟೇಲರು ಮಾಡಿದ ಲಿಖಿತಭಾಷಣ ತರುವಾಯ ಮಾಡಿದ ಅಲಿಖಿತ ಭಾಷಣ ಸಮಸ್ತಜನರನ್ನೂ ತಲ್ಲಣಗೊಳಿಸಿತು. ತಿಳಿಹಾಸ್ಯಪೂರಿತವಾದ ಅಂದಿನ ಭಾಷಣ ಒಂದು ಐತಿಹಾಸಿಕ ದಾಖಲೆಯಾಗಿದೆ. ಅವರ ಅಂದಿನ ಭಾಷಣದಿಂದ ಪ್ರಭಾವಿತರಾದವರು ಎಷ್ಟೋ ಮಂದಿ. ಪಟೇಲರ ಅಪಾರ ಲೋಕಾನುಭವಕ್ಕೆ ಇದು ಹಿಡಿದ ಕೈಗನ್ನಡಿಯಾಗಿದೆ.

ಪಟೇಲರು ಕಲೆ, ಸಾಹಿತ್ಯ, ಸಂಗೀತ, ಇತಿಹಾಸ ಮೊದಲಾದ ಸೃಜನಾತ್ಮಕ ವಿಷಯಗಳ ಬಗೆಗೆ ಅಪಾರ ಅಭಿರುಚಿಯನ್ನು ಹೊಂದಿದ್ದರು. ಪ್ರಾಚೀನ ಆಧುನಿಕ ಕವಿ ಕಾವ್ಯಗಳ ಬಗೆಗೆ ಅಧಿಕಾರವಾಣಿಯಿಂದ ಮಾತನಾಡುವ ಸಾಮರ್ಥ್ಯವನ್ನೂ ಹೊಂದಿದ್ದರು. ಎಂತಹ ಜಟಿಲವಾದ ವಿಷಯವನ್ನಾಗಲಿ ಸುಲಲಿತವಾಗಿ ವಿಶ್ಲೇಷಿಸುವ ವಾಕ್ಚಾತುರ್ಯವನ್ನು

ಹೊಂದಿದ್ದರು. ಮದಿರೆ, ಮಾನಿನಿಯರ ಬಗೆಗೆ ಪಟೇಲರಿಗೆ ಒಲವಿತ್ತು ಎಂಬ ಅಭಿಪ್ರಾಯವಿದೆ. ತಮಗಿರುವ ಅಭ್ಯಾಸಗಳ ಬಗೆಗೆ ಅವರು ಬಹಿರಂಗವಾಗಿಯೇ ಹೇಳಿಕೊಂಡಿದ್ದಾರೆ. ಯಾವುದೇ ಮುಚ್ಚುಮರೆ ಅವರಿಗಿರಲಿಲ್ಲ. ತಮ್ಮ ವೈಯಕ್ತಿಕ ಚಪಲಗಳಿದ್ದರೂ ಬೇರೊಬ್ಬರಿಗೆ ತೊಂದರೆಯಾಗದಂತೆ ನಡೆದುಕೊಳ್ಳುತ್ತಿದ್ದರು. ಈ ಎಲ್ಲ ಕಾರ್ಯಗಳನ್ನು ಮಾಡಿ ಸಜ್ಜನರಂತೆ ತೋರಿಕೆಗೆ ಒಳಗಾಗಲಿಲ್ಲ. ಪಟೇಲರ ನಿರ್ಭಿಡೆ ವ್ಯಕ್ತಿತ್ವಕ್ಕೆ ಇದು ನಿದರ್ಶನವಾಗಿದೆ.

ಪಟೇಲರು ಲೋಕಸಭೆಯಲ್ಲಿ ಕನ್ನಡದಲ್ಲಿ ಭಾಷಣ ಮಾಡಿದ್ದು ಒಂದು ಐತಿಹಾಸಿಕ ದಾಖಲೆಯಾಗಿದೆ. ಅವರ ಕನ್ನಡ ಪ್ರೇಮಕ್ಕೆ ಓಡಿದ ಕೈಗನ್ನಡಿಯಾಗಿದೆ. ರಾಷ್ಟ್ರಕವಿಗಳೂ, ನನ್ನ ವಿದ್ಯಾಗುರುಗಳೂ ಆದ ಕುವೆಂಪು ಅವರು ಪಟೇಲರು ಲೋಕಸಭೆಯಲ್ಲಿ ಕನ್ನಡದಲ್ಲಿ ಮಾತಾಡಿದ್ದನ್ನು ಕೇಳಿ "ಇಂದು ನನ್ನ ಹೊಟ್ಟೆಗೆ ಹಂಡೆ ಹಾಲು ಸುರಿದಷ್ಟು ಸಂತೋಷವಾಯಿತು" ಎಂದು ಉದ್ಗಾರವನ್ನು ಸೂಚಿಸಿದ್ದಾರೆ.

ಪಟೇಲರ ಹಾಸ್ಯಪ್ರವೃತ್ತಿ ಅನ್ಯಾದೃಶವಾದುದು. ಎಂತಹ ಜಟಿಲ ಸಮಸ್ಯೆಯಾಗಲಿ, ಮಹತ್ತರ ರಾಜಕಾರಣಿ ಸಭೆಯಾಗಲಿ, ಯಾವುದೇ ಸಂದರ್ಭವಾಗಲಿ ತಮ್ಮ ತಿಳಿಯಾದ ಹಾಸ್ಯದಿಂದ, ಸಂದರ್ಭೋಚಿತವಾದ ಉದಾಹರಣೆಗಳಿಂದ ಎಲ್ಲವನ್ನೂ ತಿಳಿಗೊಳಿಸಿದ್ದಾರೆ. "ನಕ್ಕ ನಗಿಸುವ ಕೆಳೆ ಲೇಸು" ಎಂಬ ನಾಣ್ಣುಡಿಯಿಂದ ತಾವೂ ನಕ್ಕಿದ್ದಾರೆ, ಇತರರನ್ನೂ ನಗಿಸಿದ್ದಾರೆ. ಇಂತಹ ಅಭೂತಪೂರ್ವವಾದ ಶಕ್ತಿ ಪಟೇಲರಿಗೊಬ್ಬರಿಗೇ ಕರಗತವಾಗಿತ್ತು.

ಮನೆ ಮನಗಳು ಒಡೆದು ಹೋಗಿರುವ ಜನತಾದಳವನ್ನು ಒಗ್ಗೂಡಿಸುವ ಮಹತ್ಕಾರ್ಯದಲ್ಲಿ ಪಟೇಲರ ಪಾತ್ರ ಗಣನೀಯವಾದದ್ದು. ತಮ್ಮ ಅನಾರೋಗ್ಯವನ್ನೂ ಲೆಕ್ಕಿಸದೆ ಇದಕ್ಕಾಗಿ ಅಹರ್ನಿಶಿ ದುಡಿದು ಈ ಕಾರ್ಯಕ್ಕೆ ಒಂದು ಮೂರ್ತಸ್ವರೂಪವನ್ನು ಕೊಟ್ಟಿದ್ದರು.

ಈ ಒಗ್ಗೂಡಿಸುವ ಕಾರ್ಯವನ್ನು ಕೈಗೂಡಿಸಲೇಬೇಕೆಂದು ಪಣತೊಟ್ಟು ನಿರಂತರವಾಗಿ ಶ್ರಮಿಸಿ ತಮ್ಮ ಕನಸು ನನಸಾಗುವ ಮೊದಲೇ ಇಹಲೋಕ ಯಾತ್ರೆಯನ್ನು ಮುಗಿಸಿಬಿಟ್ಟರು.

ಕನ್ನಡನಾಡು ಕಂಡರಿಯದ ಬಹುಮುಖಪ್ರತಿಭೆಯ ಶ್ರೇಷ್ಠರಾಜಕಾರಿಣಿ, ಮಹಾಮಾನವತಾವಾದಿ, ದೀನದಲಿತೋದ್ಧಾರ ಕಾರ್ಯಗಳ ರೂವಾರಿ, ನಿಶ್ಚಿಂತ ನಿರ್ಲಿಪ್ತ, ನಿರ್ವಿಕಾರ ಮನೋಭಾವದ ನಿರಾಭಾರಿ, ಶರಣ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಗುರುಲಿಂಗಜಂಗಮ ಸೇವೆಯಲ್ಲಿ ತತ್ಪರನಾದ ಮಹಾಂತನೆ, ಸರ್ವಧರ್ಮ ಸಮನ್ವಯ ಭಾವನೆಯನ್ನು ಹೊಂದಿ ಸ್ವಧರ್ಮದಲ್ಲಿ ಅತೀವ ನಿಷ್ಠೆಯನ್ನು ತಳೆದಿದ್ದ ಧರ್ಮಸಮನ್ವಯಕಾರ, ಮರ್ತ್ಯದ ಮಣಿಹವನ್ನು ಮುಗಿಸಿ ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು ಎಂಬ ನಿಜಸಿದ್ಧಾಂತವನ್ನು ಸಾರ್ಥಕಗೊಳಿಸಿದ ಮಹಿಮಾನ್ವಿತನೇ ಬದುಕು ಜಟಕಾ ಬಂಡಿ ವಿಧಿಯದರ ಸಾಹೇಬರ, ಕುದುರೆ ನೀನ್ ಅವನು ಪೇಳ್ದಂತೆ ಪಯಣಿಗರು ಮದುವೆಗೋ ಮಸಣಕೋ ಹೋಗೆಂದ ಕಡೆಗೋಡು ಎಂಬುದನ್ನು ಸಾಕಾರಗೊಳಿಸಿದ ನಿರ್ವಿಕಾರ ಮೂರ್ತಿಯೆ ನಿನಗಿದೋ ನನ್ನ ಪುಷ್ಪಾಂಜಲಿ, ನಿನಗಿದೋ ನನ್ನ ಬಾಷ್ಪಾಂಜಲಿ, ನಿನಗಿದೋ ನನ್ನ ಶ್ರದ್ಧಾಂಜಲಿ.

ಪಟೇಲರ ನಿಧನವನ್ನು ಬಸವಣ್ಣನವರ ಈ ವಚನ ಸಾಂಕೇತಿಕವಾಗಿ ಪ್ರತಿನಿಧಿಸುತ್ತದೆ:

ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಯಿತ್ತು
ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯಿತ್ತು,
ಆಚಾರವೆಂಬ ಕಾಯಾಯಿತ್ತು ನಿಷ್ಪತ್ತಿಯೆಂಬ ಹಣ್ಣಾಯಿತ್ತು
ನಿಷ್ಪತ್ತಿಯೆಂಬ ಹಣ್ಣು ತೊಟ್ಟುಬಿಟ್ಟು ಕಳಚಿಬೀಳುವಲ್ಲಿ
ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.

■

# ಕ.ಮ.ಶಿ. ಚಂದ್ರಶೇಖರಯ್ಯನವರು

**ಶಿ**ವಮೊಗ್ಗ ಜಿಲ್ಲೆಯ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿರುವ ಶ್ರೀ ಕ.ಮ.ಶಿ. ಚಂದ್ರಶೇಖರಯ್ಯನವರನ್ನು ಕಳೆದ ಮೂರುವರ್ಷಗಳಿಂದ ತೀರಾ ಹತ್ತಿರದಿಂದ ಬಲ್ಲವನಾಗಿದ್ದೇನೆ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗಿ ಶ್ರೀಯುತರು ಮಾಡಿರುವ ಕಾರ್ಯಕ್ರಮಗಳನ್ನು ಆಸಕ್ತಿಯಿಂದ ನೋಡಿದ್ದೇನೆ. ಕೆಲವು ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದೇನೆ.

ಕ.ಮ.ಶಿ. ಚಂದ್ರಶೇಖರಯ್ಯನವರು ಉನ್ನತ ಸರ್ಕಾರೀ ಹುದ್ದೆಯಲ್ಲಿದ್ದು ನಿವೃತ್ತರಾದ ಮೇಲೆ ಶಿವಮೊಗ್ಗ ಜಿಲ್ಲೆಯ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆಗೊಂಡು ಅವರ ಅವಧಿಯ ಉದ್ದಕ್ಕೂ ಸಾರ್ಥಕ ಸಾಹಿತ್ಯ ಸೇವೆಯನ್ನು ಸಲ್ಲಿಸಿದ್ದಾರೆ. ಉನ್ನತ ಹುದ್ದೆಯಲ್ಲಿದ್ದೆನೆಂಬ ಗರ್ವವಾಗಲಿ, ಅಹಂಭಾವವಾಗಲಿ, ಪ್ರತಿಷ್ಠೆಯಾಗಲಿ ಅವರಲ್ಲಿ ಲವಲೇಶವೂ ಇರಲಿಲ್ಲ.

ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಸಭೆಗಳಲ್ಲಿ ಶ್ರೀ ಚಂದ್ರಶೇಖರಯ್ಯನವರು ಸಕ್ರಿಯವಾಗಿ ಭಾಗವಹಿಸುತ್ತಿದ್ದುದರ ಜೊತೆಗೆ ಪರಿಷತ್ತಿನ ಕಾರ್ಯಚಟುವಟಿಕೆಗಳ ಬಗೆಗೆ ವಿಶೇಷ ಕಾಳಜಿ ವಹಿಸುತ್ತಿದ್ದರು. ಪರಿಷತ್ತಿನ ಘನತೆ ಗೌರವಗಳನ್ನು ಕಾಪಾಡುವುದರಲ್ಲಿ ಅನುಸರಿಸಬೇಕಾದ ವಿಧಿವಿಧಾನಗಳ ಬಗೆಗೆ ಅತ್ಯಂತ ಆಸಕ್ತಿಯಿಂದ ತಮ್ಮ ಅಭಿಪ್ರಾಯಗಳನ್ನು ಮಂಡಿಸುತ್ತಿದ್ದರು. ವಿತಂಡವಾದಮಾಡುವುದಾಗಲಿ ಪ್ರತಿಷ್ಠೆ ಪ್ರದರ್ಶನ ಮಾಡುವುದಾಗಲಿ ಇವರ ಸ್ವಭಾವದಲ್ಲೇ ಇರಲಿಲ್ಲ. ಒಟ್ಟಿನಲ್ಲಿ ಶ್ರೀ ಚಂದ್ರಶೇಖರಯ್ಯನವರು ಸಭೆಗೆ ಭೂಷಣಪ್ರಾಯರಾಗಿದ್ದುದು ನನಗೆ ತುಂಬ ಸಂತೋಷವನ್ನುಂಟು ಮಾಡಿತ್ತು.

ಶ್ರೀ ಚಂದ್ರಶೇಖರಯ್ಯನವರು ಶಿವಮೊಗ್ಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಮೂರುವರ್ಷಗಳ ಅವಧಿಯಲ್ಲಿ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ಸಮ್ಮೇಳನಗಳನ್ನು ಅತ್ಯಂತ ಯಶಸ್ವಿಯಾಗಿ ನಡೆಸಿದ್ದಾರೆ. ನಾನು ಭಾಗವಹಿಸಿದ್ದ ಮೂರು ನಾಲ್ಕು ಸಮ್ಮೇಳನಗಳು ಅಚ್ಚುಕಟ್ಟಾಗಿ ವ್ಯವಸ್ಥಿತವಾಗಿ ನಡೆದು ಜಿಲ್ಲೆಗೆ ಕೀರ್ತಿಯನ್ನು ತಂದುಕೊಟ್ಟಿವೆ.

ಶಿವಮೊಗ್ಗ ಜಿಲ್ಲೆಗೆ ವಹಿಸಿದ್ದ ಎಲ್ಲ ದತ್ತಿಕಾರ್ಯಕ್ರಮಗಳನ್ನು ದತ್ತಿದಾತರ ಆಶಯಗಳಿಗನುಗುಣವಾಗಿ ತಜ್ಞ ವಿದ್ವಾಂಸರಿಂದ ಉಪನ್ಯಾಸಗಳನ್ನು ಏರ್ಪಡಿಸಿ ಸಮರ್ಪಕವಾಗಿ ನಿರ್ವಹಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ದತ್ತಿಗಳಲ್ಲೇ ಅತಿವಿಶಿಷ್ಟವಾದುದೂ ಆರ್ಥಿಕವಾಗಿ ಹಿರಿದಾದುದೂ ಆದ ಭೂಪಾಳಂ ಚಂದ್ರಶೇಖರಯ್ಯ ಅವರ ದತ್ತಿ ಕಾರ್ಯಕ್ರಮಗಳ ರೂಪರೇಷೆಗಳನ್ನು ನಿರ್ಧರಿಸಿ ದತ್ತಿದಾತರ ಬಂಧುವರ್ಗದವರನ್ನು ಪರಿಷತ್ತಿನ ಪದಾಧಿಕಾರಿಗಳಿಗೆ ಭೇಟಿ ಮಾಡಿಸಿ ಅದಕ್ಕೆ ಒಂದು ಮೂರ್ತಸ್ವರೂಪವನ್ನು ಕೊಟ್ಟಿದ್ದಾರೆ. ಹೀಗೆ ಹಲವು ಹತ್ತಾರು ಕಾರ್ಯಗಳಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡು ಪರಿಷತ್ತಿನ ಎಲ್ಲ ಕಾರ್ಯಗಳನ್ನು ವ್ಯವಸ್ಥಿತವಾಗಿ ನಿರ್ವಹಿಸಿ ಕೃತಾರ್ಥರಾಗಿದ್ದಾರೆ, ಕೃತಕೃತ್ಯರಾಗಿದ್ದಾರೆ.

ಶ್ರೀ ಚಂದ್ರಶೇಖರಯ್ಯನವರು ವಿದ್ವಾಂಸರು, ಸಾಹಿತ್ಯಪ್ರಿಯರು, ಶಿಕ್ಷಣಾಸಕ್ತರು. ಲೌಕಿಕವಾದ ಯಾವ ಲಾಭಲೋಭಗಳಿಗೂ ಒಳಗಾದವರಲ್ಲ. ಅವರ ನಡೆನುಡಿ ಆಚಾರವಿಚಾರಗಳು ಮೆಚ್ಚುವಂತಹವು. ಇತರರಿಗೆ ಆದರ್ಶಪ್ರಾಯವಾದುವು. ಶ್ರೀಯುತರು ನಯವಿನಯ ಸಂಪನ್ನರು. ಇಂತಹ ಸರಳ ಸಾತ್ವಿಕ ಸಜ್ಜನರನ್ನೂ ಪರಮ ಸಾತ್ವಿಕರನ್ನೂ ಧರ್ಮಾನುರಾಗಿಗಳನ್ನು ಪ್ರಾಮಾಣಿಕರನ್ನೂ ಇಂದಿನ ಕಾಲದಲ್ಲಿ ಸಂದರ್ಶಿಸುವುದು ತೀರ ಅಪರೂಪ. ವಯೋವೃದ್ಧರೂ ಜ್ಞಾನವೃದ್ಧರೂ ಆದ ಶ್ರೀ ಚಂದ್ರಶೇಖರಯ್ಯನವರು ನೂರುಕಾಲ ಬಾಳಿ ಸಮಾಜಕ್ಕೆ ಕಣ್ಣಾಗಿರಲಿ ಎಂದು ಹಾರೈಸುತ್ತೇನೆ. ಶ್ರೀಯುತರಿಗೆ ದಯಾಮಯರಾದ ಪಾರ್ವತೀ ಪರಮೇಶ್ವರರು ದೀರ್ಘಾಯುರಾರೋಗ್ಯ ಐಶ್ವರ್ಯಾದಿಗಳನ್ನಿತ್ತು ಕರುಣಿಸಲಿ ಎಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇನೆ.

■

# ನಾನು ಕಂಡಂತೆ ಪ್ರೊ. ಎಚ್.ಎಸ್. ಹರಿಶಂಕರ್

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಹಲವಾರು ದೃಷ್ಟಿಗಳಿಂದ ಮಹತ್ವವನ್ನು ಪಡೆದುಕೊಂಡಿದೆ. ಈ ಸಂಸ್ಥೆಯಲ್ಲಿ ಕನ್ನಡ, ಜಾನಪದ, ಭಾಷಾಶಾಸ್ತ್ರ, ದಕ್ಷಿಣ ಭಾರತೀಯ ಭಾಷಾವ್ಯಾಸಂಗ ಇವೇ ಮೊದಲಾದ ವಿಷಯಗಳಲ್ಲಿ ಎಂ.ಎ. ಪದವಿ ತರಗತಿಗಳನ್ನು ನಡೆಸುತ್ತಿರುವುದು ಸರ್ವವಿದಿತವಾದದ್ದು ಸರಿಯಷ್ಟೆ. ಈ ಸಂಸ್ಥೆಯಲ್ಲಿ ಗ್ರಂಥಸಂಪಾದನೆ, ಭಾಷಾಂತರ, ದಾಸಸಾಹಿತ್ಯ, ಶಾಸನ ಪರಿಷ್ಕರಣ ಮೊದಲಾದ ವಿಶಿಷ್ಟ ವೈವಿಧ್ಯಪೂರ್ಣ ವಿಭಾಗಗಳ ಜೊತೆಗೆ ಕನ್ನಡ ವಿಶ್ವಕೋಶ ವಿಭಾಗ ಎಂಬ ಪ್ರಮುಖವಾದ ವಿಭಾಗವನ್ನೂ ಹೊಂದಿದೆ. ಇಂದಿನ ಅನೇಕ ಸುಪ್ರಸಿದ್ಧ ಸಾಹಿತಿಗಳು ಇಲ್ಲಿ ವ್ಯಾಸಂಗ ಮಾಡಿದ್ದಾರೆ. ಇಲ್ಲವೆ ಬೋಧನೆಯನ್ನಾದರೂ ಮಾಡಿದ್ದಾರೆ. ಈ ಎಲ್ಲ ದೃಷ್ಟಿಗಳಿಂದ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯಕ್ಕೆ ನೇತ್ರಪ್ರಾಯವಾಗಿದೆ ಎಂದರೆ ಅತಿಶಯೋಕ್ತಿಯಲ್ಲ.

ಪ್ರೊ. ಎಚ್.ಎಸ್. ಹರಿಶಂಕರ್ ಅವರು ಈ ಸಂಸ್ಥೆಯ ಕನ್ನಡ ಎಂ.ಎ., ಎಂ.ಫಿಲ್ (ಭಾಷಾಂತರ) ಮಾಡಿಕೊಂಡಿದ್ದಾರೆ. ಜೊತೆಗೆ ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. (ರಷ್ಯನ್); ರಷ್ಯನ್ ಭಾಷಾ ವಿಶೇಷ ಶಿಕ್ಷಣ, ಮಾಸ್ಕೊ ಸ್ಟೇಟ್ ವಿಶ್ವವಿದ್ಯಾಲಯ, ಮಾಸ್ಕೊ (ರಷ್ಯಾ); ಕರ್ನಾಟಕ ಸಂಸ್ಕೃತ ಪರೀಕ್ಷಾ ಮಂಡಲಿಯ ಕಾವ್ಯ (ಸಂಸ್ಕೃತ) ಇವೇ ಮೊದಲಾದ ಪದವಿ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಶ್ರೀಯುತರಿಗೆ ಕನ್ನಡ, ಹಿಂದಿ, ಇಂಗ್ಲಿಷ್, ಸಂಸ್ಕೃತ, ತೆಲುಗು ಮತ್ತು ರಷ್ಯನ್ ಭಾಷೆಗಳಲ್ಲಿ ಪರಿಶ್ರಮವಿದೆ.

ಪ್ರೊ. ಎಚ್.ಎಸ್. ಹರಿಶಂಕರ್ ಅವರು ಸುಮಾರು ಮೂವತ್ತು ವರ್ಷಗಳು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ವಿವಿಧ ಪ್ರಕಾರಗಳಲ್ಲಿ ಬೋಧನೆಯನ್ನು ಮಾಡಿದ್ದಾರೆ. ಜೊತೆಗೆ ಸುಮಾರು ಇಪ್ಪತ್ತು ವರ್ಷಗಳು ವಿವಿಧ ವಿಷಯಗಳನ್ನು ಕುರಿತು ಸಂಶೋಧನೆಯನ್ನು ಮಾಡಿದ್ದಾರೆ. ಈ ದೀರ್ಘಾವಧಿಯ ಶೈಕ್ಷಣಿಕ ಹಿನ್ನೆಲೆಯಲ್ಲಿ ಶ್ರೀಯುತರು ನಾಲ್ವರು ಪಿ.ಎಚ್.ಡಿ. ವಿದ್ಯಾರ್ಥಿಗಳಿಗೂ ಮತ್ತು ನಾಲ್ವರು ಎಂ.ಫಿಲ್ (ಕನ್ನಡ) ವಿದ್ಯಾರ್ಥಿಗಳಿಗೂ, ಒಬ್ಬ ಎಂ.ಫಿಲ್ (ಭಾಷಾಂತರ) ವಿದ್ಯಾರ್ಥಿಗೂ ಮಾರ್ಗದರ್ಶನ ಮಾಡಿದ್ದಾರೆ.

ಪ್ರೊ. ಎಚ್.ಎಸ್. ಹರಿಶಂಕರ ಅವರು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಹತ್ತಾರು ವಿಚಾರ ಗೋಷ್ಠಿಗಳಲ್ಲೂ ಸಮ್ಮೇಳನಗಳಲ್ಲೂ ಕಮ್ಮಟಗಳಲ್ಲೂ ಭಾಗವಹಿಸಿದ್ದಾರೆ. ೧೯೭೫, ೧೯೭೮ ರಲ್ಲಿ ರಷ್ಯಾದ ಮಾಸ್ಕೋದಲ್ಲಿ ನಡೆದ ವಿಚಾರಗೋಷ್ಠಿಗಳಲ್ಲಿ ಪಾಲ್ಗೊಂಡಿದ್ದಾರೆ. ೧೯೭೭ರಲ್ಲಿ ಮಾಸ್ಕೊ ಸ್ಟೇಟ್ ವಿಶ್ವವಿದ್ಯಾನಿಲಯದಲ್ಲಿ ಒಂದು ವರ್ಷದ ರಷ್ಯನ್ ಭಾಷಾ ಶಿಕ್ಷಣ ಕಾರ್ಯಾನುಭವವನ್ನೂ ಪಡೆದಿದ್ದಾರೆ. ಮಾಸ್ಕೋದ ಸುಪ್ರಸಿದ್ಧ ಪ್ರಕಟಣ ಸಂಸ್ಥೆ 'ರಾದುಗಾ'ದಲ್ಲಿ ೧೯೮೮ ರಿಂದ ೧೯೯೦ ರವರೆಗೆ ಪ್ರಥಮ ದರ್ಜೆಯ ಭಾಷಾಂತರಕಾರರಾಗಿ ಕಾರ್ಯವನ್ನು ನಿರ್ವಹಿಸಿದ್ದಾರೆ. ಅಲ್ಲದೆ ರೇಡಿಯೊ ಮಾಸ್ಕೋದಲ್ಲಿ ೧೯೮೮ ರಿಂದ ೧೯೯೦ ರವರೆಗೆ ಒಪ್ಪೊತ್ತಿನ ವಾರ್ತಾವಾಚಕರಾಗಿ ಕಾರ್ಯವನ್ನು ಮಾಡಿದ್ದಾರೆ. ಶ್ರೀಯುತರು ತಜ್ಞ ಸಂಪನ್ಮೂಲ ವ್ಯಕ್ತಿಯಾಗಿಯೂ ಸೇವೆಯನ್ನು ಸಲ್ಲಿಸಿದ್ದಾರೆ.

ಶ್ರೀಯುತರು ಮೈಸೂರು ವಿಶ್ವವಿದ್ಯಾಲಯದ ಕನ್ನಡ ವಿಶ್ವಕೋಶ, ಪ್ರಬುದ್ಧ ಕರ್ಣಾಟಕ, ವಿಶ್ವವಿದ್ಯಾನಿಲಯದ ಸಾಹಿತ್ಯ ಚರಿತ್ರೆ, ಪುಸ್ತಕ ಪ್ರಪಂಚ, ಭಾರತೀಯ ವಿದ್ಯಾಭವನದ ಸ್ವಾತಂತ್ರ್ಯ ಸಂಗ್ರಾಮದ ಸಂಪುಟಗಳು. ಅಭಿನಂದನ ಸಂಪುಟಗಳು –ಇವುಗಳಿಗೆ ಮೌಲಿಕ ಲೇಖನಗಳನ್ನು ಬರೆದಿದ್ದಾರೆ. ಅಲ್ಲದೆ ಮಾಸ್ಕೊ ರಾದುಗಾ ಸಂಸ್ಥೆಯ ಎಲ್ಲ ರಷ್ಯನ್ ಪುಸ್ತಕಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. 'ಕಷ್ಟಾಂಕ ಮತ್ತು ಇತರ ಕತೆಗಳು' ಈ ಕೃತಿಗೆ ಸೋವಿಯತ್ ಪ್ರಶಸ್ತಿ ಲಭಿಸಿದೆ.

ಎರಡು ಮಹಾಕಾವ್ಯಗಳು, ತಿರುಮಲಾರ್ಯ, ಚಿಕದೇವರಾಯ ಸಪ್ತಪದಿ ಇವೇ ಮೊದಲಾದ ಕನ್ನಡ ಮತ್ತು ರಷ್ಯನ್ ಈ ಎರಡು ಭಾಷೆಗಳ ಸುಮಾರು ಇಪ್ಪತ್ತೈದಕ್ಕಿಂತಲೂ ಮಿಗಿಲಾದ ಕೃತಿಗಳನ್ನು ರಚಿಸಿದ್ದಾರೆ.

ಶ್ರೀಯುತರು ಐಎಎಸ್ ಮತ್ತು ಐಪಿಎಸ್ ಅಧಿಕಾರಿಗೆ ಕನ್ನಡವನ್ನು ಬೋಧಿಸಿದ್ದಾರೆ. ಕನ್ನಡ ಅಧ್ಯಯನ ಸಂಸ್ಥೆಯ ವತಿಯಿಂದ ಅಮೆರಿಕ, ಜರ್ಮನ್, ಬ್ರಿಟನ್, ರಷ್ಯ, ದಕ್ಷಿಣ ಅಮೇರಿಕಾ ದೇಶಗಳ ವಿದ್ಯಾರ್ಥಿಗಳಿಗೆ ಕನ್ನಡವನ್ನು ಕಲಿಸಿದ್ದಾರೆ. ಈ ಎಲ್ಲ ಕಾರ್ಯಚಟುವಟಿಕೆಗಳ ಮಧ್ಯೆಯೂ ಕೆಲವು ಸಾರ್ವಜನಿಕ ಸಂಸ್ಥೆಗಳ ಸದಸ್ಯರಾಗಿಯೂ ಸೇವೆಯನ್ನು ಸಲ್ಲಿಸಿದ್ದಾರೆ.

ಪ್ರೊ. ಎಚ್.ಎಸ್. ಹರಿಶಂಕರ್ ಅವರು ರಷ್ಯ, ಜರ್ಮನಿ, ಹಾಲೆಂಡ್, ಇಂಗ್ಲೆಂಡ್, ಲಾಕ್ವಿಯ, ಫ್ರಾನ್ಸ್ ಮೊದಲಾದ ದೇಶಗಳ ಪರ್ಯಟನವನ್ನು ಮಾಡಿ ಅಪಾರ ಲೋಕಾನುಭವವನ್ನು ಗಳಿಸಿಕೊಂಡಿದ್ದಾರೆ.

ಶ್ರೀ ಹರಿಶಂಕರ್ ಅವರನ್ನು ನಾನು ಬಹಳ ವರ್ಷಗಳಿಂದ ಅತ್ಯಂತ ನಿಕಟವಾಗಿ ಬಲ್ಲವನಾಗಿದ್ದೇನೆ. ನಾನು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಉಪನಿರ್ದೇಶಕನಾಗಿದ್ದುದರಿಂದ ಅವರ ಕಾರ್ಯಗಳನ್ನು ಗಮನವಿಟ್ಟು ಪರಿಶೀಲಿಸಿದ್ದೇನೆ. ಶ್ರೀಯುತರು ಸಂಸ್ಥೆಯ ತಮ್ಮ ಕೆಲಸಕಾರ್ಯಗಳನ್ನು ಅತ್ಯಂತ ಸಮರ್ಪಕವಾಗಿ ನಿರ್ವಹಿಸುತ್ತಿದ್ದರು. ಇದರ ಹಿಂದೆ ಮತ್ತೊಂದು ಅಂಶವೂ ಅಡಗಿದೆ. ಹರಿಶಂಕರ್ ಅವರ ತಂದೆಯವರಾದ ಪ್ರೊ. ಎಚ್.ಎಂ. ಶಂಕರನಾರಾಯಣರಾಯರಿಗೆ ನನ್ನ ಮೇಲೆ ಅಪಾರವಾದ ಪ್ರೀತಿವಿಶ್ವಾಸಗಳಿದ್ದವು. ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಸಂಪಾದಕನಾಗಿ ಕಾರ್ಯವನ್ನು ನಿರ್ವಹಿಸುತ್ತಿದ್ದುದು ಅವರಿಗೆ ತುಂಬ ಸಂತೋಷವನ್ನುಂಟುಮಾಡಿತ್ತು. ಅವರ ಕೆಲವು ಗುರುಗಳು ನನಗೂ ಗುರುಗಳಾಗಿದ್ದರು. ಈ ಗುರುಗಳ ಬಗೆಗೆ ನಮ್ಮಿಬ್ಬರ ಭಕ್ತಿ, ನಿಷ್ಠೆ, ಗೌರವಗಳು ಏಕರೀತಿಯಾಗಿದ್ದುವು. ಹೀಗಾಗಿ ನಾನು ಆಗಾಗ ಪ್ರೊ. ಶಂಕರನಾರಾಯಣರಾಯರ ಮನೆಗೆ ಹೋಗಿಬರುತ್ತಿದ್ದೆ. ಜೊತೆಗೆ ನಾನು ಸಂಪಾದಿಸಿದ್ದ ರಾಘವಾಂಕನ ಹರಿಶ್ಚಂದ್ರಕಾವ್ಯದ ಪ್ರಕಟನೆಯನ್ನು ಅವರ ಶಾರದಾ ಮಂದಿರದಿಂದ ಒಮ್ಮೆ ಮುದ್ರಣ ಮಾಡಿದ್ದರು. ಹೀಗಾಗಿ ಅವರ ಜ್ಯೇಷ್ಠ ಸುಪುತ್ರನ ಮೇಲೆ ನನಗೂ ಮಮಕಾರವಿತ್ತು. ಇದು ನಮ್ಮ ಬಾಂಧವ್ಯದ ಬೆಸುಗೆ.

ಪ್ರೊ. ಎಚ್.ಎಸ್. ಹರಿಶಂಕರ ಅವರು ಸೃಜನಶೀಲ ಸಾಹಿತಿಗಳೆಂದು ಪರಿಗಣಿತರಾಗದಿದ್ದರೂ ಸೃಜನೇತರ ಸಾಹಿತಿಯಾಗಿ ಉಳಿಯುವಂತಹವರು, ನೆನೆಯುವಂತಹವರು. ಶ್ರೀಯುತರು ತಮ್ಮ ಅಪಾರ ಲೋಕಾನುಭವದಿಂದ ಅನುಪಮ ವಿಶಿಷ್ಟ ಕೃತಿಗಳಿಂದ ಅನನ್ಯ ಸಾಹಿತ್ಯ ಸೇವೆಯಿಂದ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಿರಂತನವಾಗಿ ಉಳಿಯುವುದರಲ್ಲಿ ಯಾವ ಸಂದೇಹವೂ ಇಲ್ಲ.



# ನಾ ಕಂಡಂತೆ ಪ್ರೊ. ಎಂ.ವಿ. ಶ್ರೀನಿವಾಸ್

ಸುಮಾರು ಇಪ್ಪತ್ತೈದು ವರ್ಷಗಳ ಹಿಂದಿನ ಮಾತು. ನಾನು ಮೈಸೂರು ವಿಶ್ವವಿದ್ಯಾನಿಲಯದ ಇಂದಿನ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಉಪನಿರ್ದೇಶಕನಾಗಿದ್ದಾಗ ಶ್ರೀ ಎಂ.ವಿ. ಶ್ರೀನಿವಾಸ್ ಅವರು ಇತಿಹಾಸ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದರು. ಕನ್ನಡ ಅಧ್ಯಯನ ಸಂಸ್ಥೆಯಲ್ಲಿ 'ಯುಜಿಸಿ' ನಿವೃತ್ತ ಪ್ರಾಧ್ಯಾಪಕರಾಗಿದ್ದ ನನ್ನ ಸಹೋದ್ಯೋಗಿ ಪ್ರೊ. ಜಿ. ಬ್ರಹ್ಮಪ್ಪನವರು, ಪ್ರೊ. ಎಂ.ವಿ. ಶ್ರೀನಿವಾಸ್ ಅವರನ್ನು ನನ್ನ ಬಳಿಗೆ ಕರೆತಂದು ಪರಿಚಯ ಮಾಡಿಕೊಟ್ಟರು. ಮೊದಲ ಭೇಟಿಯಲ್ಲಿಯೇ ಶ್ರೀನಿವಾಸ್ ಅವರ ಕನ್ನಡ ಅಭಿಮಾನ ಅವರ ಮಾತಿನ ರೀತಿನೀತಿಗಳು ನನಗೆ ಪ್ರಿಯವಾದುವು. ಅಂದಿನಿಂದ ನಮ್ಮ ಸ್ನೇಹ ಬಲಗೊಂಡಿತು.

ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಡಾ. ಪ್ರಭುಶಂಕರ್ ಎಂಬ ಕನ್ನಡ ಪ್ರಾಧ್ಯಾಪಕರು ನಮಗೆಲ್ಲ ಚಿರಪರಿಚಿತರಾಗಿದ್ದರು. ನಮಗೆಲ್ಲರಿಗಿಂತ ಜಿ. ಬ್ರಹ್ಮಪ್ಪನವರು ವಯಸ್ಸಿನಲ್ಲಿ ಹಿರಿಯರಾಗಿದ್ದರು. ಅವರಿಗೆ ಒಂದು ಗೌರವ ನಿಧಿಯನ್ನು ಅರ್ಪಿಸಬೇಕೆಂದು ಶ್ರೀನಿವಾಸ್ ಒಂದು ಸಲಹೆಯನ್ನು ಮಾಡಿದರು. ಅದರಂತೆ ನಾನು ಮತ್ತು ಪ್ರಭುಶಂಕರ್ ಸಮಿತಿಯ ಪದಾಧಿಕಾರಿಗಳಾಗಿ ಶ್ರೀನಿವಾಸ್ ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸಿ ಸ್ವಲ್ಪ ಕಾಲದ ಮೇಲೆ ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಶ್ರೀ ಹೆಗ್ಗಡೆಯವರ ಅಧ್ಯಕ್ಷತೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಒಂದು ಕಾರ್ಯಕ್ರಮವನ್ನು ಮಾಡಿ ಗೌರವ ನಿಧಿಯನ್ನು ಪ್ರೊ. ಬ್ರಹ್ಮಪ್ಪನವರಿಗೆ ಅರ್ಪಿಸಿದೆವು.

ನಾನು ನಿವೃತ್ತನಾದ ಮೇಲೆ ಬೆಂಗಳೂರಿನಲ್ಲಿ ನೆಲಸಿದೆ. ಇಲ್ಲಿಯ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷನೂ ಆದೆ. ಈ ಪ್ರತಿಷ್ಠಾನದಲ್ಲಿ ಕನ್ನಡ ನಾಡುನುಡಿಗಾಗಿ ದುಡಿದು ಮಡಿದವರ ಸ್ಮರಣಾರ್ಥವಾಗಿ 'ಸಾಹಿತ್ಯೋಪಾಸಕರು' ಎಂಬ ಸಾಹಿತ್ಯ ಮಾಲಿಕೆಯನ್ನು ಪ್ರಾರಂಭಿಸಿ ವಿದ್ವಾಂಸರಿಂದ ಉಪನ್ಯಾಸಗಳನ್ನು ಮಾಡಿಸಿ ಆ ಉಪನ್ಯಾಸಗಳನ್ನು ಪುಸ್ತಕ ರೂಪದಲ್ಲಿಯೂ ಹೊರತರಲಾಗುತ್ತಿತ್ತು. ಈ ಮಾಲಿಕೆಯ ಉಪನ್ಯಾಸಗಳಿಗೆ ಶ್ರೀನಿವಾಸ್ ಅವರನ್ನು ಆಗಾಗ ಆಹ್ವಾನಿಸುತ್ತಿದ್ದೆ. ಶ್ರೀಯುತರು ಕಾರ್ಯಕ್ರಮಗಳಿಗೆ ಬಂದು ಉಪನ್ಯಾಸಗಳನ್ನು ಮಾಡುತ್ತಿದ್ದುದೇ ಅಲ್ಲದೆ ಅವನ್ನು ಬರೆದೂ ಕೊಡುತ್ತಿದ್ದರು.

ಪ್ರೊ. ಶ್ರೀನಿವಾಸ್ ಅವರು ಸುಪ್ರಸಿದ್ಧ ಇತಿಹಾಸಕಾರರಾಗಿದ್ದುದರಿಂದ ಬೆಂಗಳೂರಿನ ಮಿಥಿಕ್ ಸೊಸೈಟಿಯಲ್ಲಿ ಅವರ ಉಪನ್ಯಾಸಗಳು ಮೇಲಿಂದ ಮೇಲೆ ನಡೆಯುತ್ತಿದ್ದುವು. ನಾನೂ ಆ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದೆ. ಪ್ರೊ. ಶ್ರೀನಿವಾಸ್ ಅವರು ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಭಾಷಣ ಮಾಡುವ ಸಮಾನ ಪ್ರಭುತ್ವವನ್ನು ಪಡೆದಿದ್ದಾರೆ.

ಪ್ರೊ. ಶ್ರೀನಿವಾಸ್ ಅವರು ಉತ್ತಮ ಸಂಶೋಧಕರು, ಆದರ್ಶ ಶಿಕ್ಷಕರು. ಶ್ರೀಯುತರು ವಿದ್ಯಾರ್ಥಿದೆಸೆಯಿಂದಲೇ ಸಂಶೋಧನಾಸಕ್ತಿಯನ್ನು ಬೆಳೆಸಿಕೊಂಡಿದ್ದರು. ಪ್ರತಿಭಾವಂತ ವಿದ್ಯಾರ್ಥಿ ಎನಿಸಿಕೊಂಡಿದ್ದರು. ಶ್ರೀಯುತರು ಇತಿಹಾಸ, ಸಾಹಿತ್ಯಕ್ಕೆ ಸಂಬಂಧಿಸಿದಂತೆ ಇಪ್ಪತ್ತೈದು ಕೃತಿಗಳನ್ನು ರಚಿಸಿ ಪ್ರಕಟಿಸಿದ್ದಾರೆ. ಅಲ್ಲದೆ ನೂರಾಐವತ್ತಕ್ಕೂ ಮಿಗಿಲಾದ ವಿದ್ವತ್ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. ಸುಮಾರು ಹದಿನೈದು ವಿದ್ಯಾರ್ಥಿಗಳಿಗೆ ಪಿಎಚ್.ಡಿಗೆ ಮಾರ್ಗದರ್ಶನ ಮಾಡಿದ್ದಾರೆ. ಹೀಗೆ ಹಲವಾರು ಪ್ರಸಂಗಗಳಲ್ಲಿ ಶ್ರೀಯುತರು ತಮ್ಮ ಕಾರ್ಯಚಟುವಟಿಕೆಗಳನ್ನು ವಿಸ್ತರಿಸಿಕೊಂಡು ಎಲ್ಲರ ಪ್ರೀತ್ಯಾದರಗಳಿಗೆ ಭಾಜನರಾಗಿದ್ದಾರೆ. ಕಾರ್ಯಸಂಘಟಕರಾದ ಶ್ರೀನಿವಾಸ್ ಅವರು ಇತಿಹಾಸಕಾರರ ಒಂದು ತಂಡವನ್ನೇ ಕಟ್ಟಿದ್ದಾರೆ.

ಪ್ರೊ. ಶ್ರೀನಿವಾಸ್ ಅವರ ನಾಡುನುಡಿಯ ಸೇವೆಯನ್ನು ಪರಿಗಣಿಸಿ ಇದೇ ೨೦೧೦ರ ಫೆಬ್ರುವರಿಯಲ್ಲಿ ಆಯೋಜಿಸಿದ್ದ ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆ ಮಾಡಿದ್ದರು. ಶ್ರೀಯುತರು ಸಮ್ಮೇಳನಾಧ್ಯಕ್ಷರಾಗಿ ಎಲ್ಲ ಕಾರ್ಯಗಳನ್ನೂ ಅತ್ಯಂತ ಯಶಸ್ವಿಯಾಗಿ ನೆರವೇರಿಸಿಕೊಟ್ಟಿದ್ದಾರೆ. ಪ್ರೊ. ಶ್ರೀನಿವಾಸ್ ಅವರು ನಾಡನುಡಿಗಳಿಗೆ ಸಲ್ಲಿಸಿರುವ ಮತ್ತು ಸಲ್ಲಿಸುತ್ತಿರುವ ಅನುಪಮ ಸೇವೆಯನ್ನು ಪರಿಗಣಿಸಿ ಅವರ ಅಭಿಮಾನಿಗಳೂ ಶಿಷ್ಯರೂ ಅಭಿನಂದನ ಗ್ರಂಥವನ್ನು ಹೊರತರಲು ತೀರ್ಮಾನಿಸಿರುವುದು ಅಭಿನಂದನೀಯವಾದುದು. ಈ ಕಾರ್ಯದಲ್ಲಿ ಭಾಗಿಯಾಗುವುದು ನನಗೆ ತುಂಬ ಸಂತೋಷವನ್ನುಂಟುಮಾಡಿದೆ. ಪ್ರೊ. ಶ್ರೀನಿವಾಸ್ ಅವರು ಶತಾಯುಗಳಾಗಲಿ ಎಂದು ಪ್ರಾರ್ಥಿಸುತ್ತೇನೆ.

■

# ಟಿ.ಆರ್. ಮಹಾದೇವಯ್ಯ

ಶ್ರೀ ಟಿ.ಆರ್. ಮಹಾದೇವಯ್ಯ ಅವರನ್ನು ನಾನು ಬಹುಕಾಲದಿಂದ ಬಲ್ಲವನಾಗಿದ್ದೇನೆ. ಅವರು ಕನ್ನಡ ನಿಘಂಟು ಕಚೇರಿಗೆ ಸಹಾಯ ಸಂಪಾದಕರಾಗಿ ನೇಮಕಗೊಂಡಾಗ ನಾನು ನಿಘಂಟಿನ ಸಂಪಾದಕನಾಗಿದ್ದೆ. ಹೀಗಾಗಿ ಅವರು ಸುಮಾರು ಮೂವತ್ತು ವರ್ಷಗಳಿಗೂ ಮೀರಿ ನನಗೆ ಪರಿಚಿತರಾಗಿದ್ದಾರೆ. ನಿಘಂಟು ಕಚೇರಿಯಲ್ಲಿ ನನ್ನ ಸಹೋದ್ಯೋಗಿಯಾಗಿ ಸೇವೆ ಸಲ್ಲಿಸಿದ್ದಾರೆ. ಕಾಲಾಂತರದಲ್ಲಿ ಅವರು ನಿಘಂಟಿನ ಉಪಸಂಪಾದಕರಾಗಿಯೂ ದುಡಿದಿದ್ದಾರೆ. ನಿಘಂಟಿನ ಕೆಲಸಕ್ಕೆ ಮುಖ್ಯವಾಗಿ ಬೇಕಾದುದು ಪ್ರಾಮಾಣಿಕತೆ, ನಿಷ್ಠೆ, ಶ್ರದ್ಧೆ. ಶ್ರೀಯುತರು ಈ ಮೂರನ್ನೂ ಮೈಗೂಡಿಸಿಕೊಂಡಿದ್ದರು. ಜೊತೆಗೆ ಸಾಕಷ್ಟು ಪಾಂಡಿತ್ಯವನ್ನೂ ಸಂಪಾದಿಸಿಕೊಂಡಿದ್ದರು. ನಿಘಂಟು ಕಚೇರಿಯಲ್ಲಿ ಇದ್ದಷ್ಟು ಕಾಲವೂ ನಿಷ್ಠೆಯಿಂದ ದುಡಿದಿದ್ದಾರೆ. ಈಗಲೂ ಅವರು ನಿಘಂಟಿನ ಕರಡಚ್ಚು ತಿದ್ದುವ ಕಾರ್ಯವನ್ನು ನಿರ್ವಹಿಸಿದ್ದಾರೆ.

ಸಾಹಿತ್ಯಕವಾಗಿಯೂ ಮಹಾದೇವಯ್ಯನವರು ಸಾಕಷ್ಟು ಹೆಸರುಗಳಿಸಿದ್ದಾರೆ. ಯಾವುದೇ ಕಾರ್ಯವನ್ನಾಗಲಿ ಅವರು ಶ್ರದ್ಧೆವಹಿಸಿ ಮಾಡುವುದನ್ನು ನಾನು ಕಂಡಿದ್ದೇನೆ. ನಾನೂ ಅವರೂ ಒಂದು ಇಂಗ್ಲಿಷ್ ನಿಘಂಟನ್ನು ಕನ್ನಡಕ್ಕೆ ಅನುವಾದಿಸುವ ಕಾರ್ಯವನ್ನು ಕೈಕೊಂಡೆವು. ಈ ಸಂದರ್ಭದಲ್ಲಿ ನಾನು ಅನಾರೋಗ್ಯಕ್ಕೊಳಗಾದಾಗ ಶ್ರೀಯುತರೇ ಬಹುಮಟ್ಟಿನ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸಿದ್ದಾರೆ. 'ಸಚಿತ್ರ ಶಾಲಾ ನಿಘಂಟು' ಎಂಬ ಹೆಸರಿನಿಂದ ಈ ನಿಘಂಟು ಐಬಿಎಚ್ ಸಂಸ್ಥೆಯಿಂದ ಸರ್ವಾಂಗ ಸುಂದರವಾಗಿ ಪ್ರಕಟವಾಗಿದೆ.

ಮಹಾದೇವಯ್ಯನವರು ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃತಿರಚನೆ ಮಾಡಿದ್ದಾರೆ. ಕವಿಕಾವ್ಯ ಪರಿಚಯ, ವ್ಯಕ್ತಿಚಿತ್ರ, ವಿಮರ್ಶೆ, ಮಕ್ಕಳ ಸಾಹಿತ್ಯ, ಜೀವನ ಚರಿತ್ರೆ, ಲಘುಪ್ರಬಂಧ ಇವೇ ಮೊದಲಾದ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಕೃತಿರಚನೆ ಮಾಡಿದ್ದಾರೆ. ವಚನಸಾಹಿತ್ಯವನ್ನೂ ವೀರಶೈವಶರಣರನ್ನೂ ಕುರಿತಂತೆ ವಿಶೇಷವಾಗಿ ಅಭ್ಯಾಸ ಮಾಡಿದ್ದಾರೆ. ಶ್ರೀಯುತರು ಕೆಲವಾರು ಉದ್ಗ್ರಂಥಗಳ ಸಂಪಾದಕರಾಗಿಯೂ ಕಾರ್ಯ ನಿರ್ವಹಿಸಿದ್ದಾರೆ. ಅವುಗಳಲ್ಲಿ ಸಿದ್ಧಗಂಗಾಶ್ರೀ, ಉಪನ್ಯಾಸ ಸಂಚಯ, ಸಮರ್ಪಣೆ ಮೊದಲಾದುವು ಸೇರಿವೆ.

ಮಹಾದೇವಯ್ಯನವರು ಅನೇಕ ಸಂಘಸಂಸ್ಥೆಗಳೊಡನೆ, ಮಠಮಾನ್ಯಗಳೊಡನೆ ನಿಕಟಸಂಪರ್ಕವನ್ನಿಟ್ಟುಕೊಂಡಿದ್ದಾರೆ. ಅತ್ಯಂತ ಕಾಳಜಿಯಿಂದ ಇವುಗಳಿಗೆ ಸಂಬಂಧಿಸಿದ ಕಾರ್ಯಕಲಾಪಗಳನ್ನು ನಡೆಸುತ್ತ ಬಂದಿದ್ದಾರೆ. ಹೀಗಾಗಿ ಮಠಮಾನ್ಯಗಳಿಂದಲೂ ಸಂಘ ಸಂಸ್ಥೆಗಳಿಂದಲೂ ಸನ್ಮಾನಿತರಾಗಿದ್ದಾರೆ. ಸಮಾಜದ ಎಲ್ಲ ವರ್ಗದವರೊಂದಿಗೂ ತಮ್ಮ ಸೇವಾಮನೋಭಾವದಿಂದ ಸುಮಧುರಬಾಂಧವ್ಯವನ್ನು ಬೆಳಸಿಕೊಂಡು ಬಂದಿದ್ದಾರೆ. ಅಪಾರ ಅಭಿಮಾನಿ ಬಳಗವನ್ನು ಗಳಿಸಿಕೊಂಡಿದ್ದಾರೆ.

ಮಹಾದೇವಯ್ಯನವರು ಬೆಂಗಳೂರಿನ ಶ್ರೀ ರೇಣುಕಾಚಾರ್ಯ ಮತ್ತು ನಿಜಲಿಂಗಪ್ಪ ಸಂಜೆಕಾಲೇಜುಗಳಲ್ಲಿ ಕನ್ನಡ ಉಪನ್ಯಾಸಕರಾಗಿ ಸಾವಿರಾರು ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿದ್ದಾರೆ. ಜನಪ್ರಿಯ ಅಧ್ಯಾಪಕ ಎಂಬ ಕೀರ್ತಿಗೆ ಪಾತ್ರರಾಗಿದ್ದಾರೆ. ವಿದ್ಯಾರ್ಥಿಗಳಿಗೆ ಅವರಲ್ಲಿದ್ದ ಗುರುಭಕ್ತಿ, ಆದರಾಭಿಮಾನಿಗಳೇ ಇಂದಿನ ಅವರ ಗೌರವ ಸಮರ್ಪಣೆಯ ಅಭಿನಂದನಾಕಾರ್ಯಕ್ಕೆ ನಾಂದಿ ಎಂದು ಹೇಳಬಹುದು.

ಮಹಾದೇವಯ್ಯನವರು ಅತ್ಯಂತ ಸರಳಸ್ವಭಾವದವರು, ಸಜ್ಜನಿಕೆಗೆ ಹೆಸರಾದವರು. ಪ್ರಾಮಾಣಿಕತೆ ಶ್ರದ್ಧೆನಿಷ್ಠೆಗಳು ಬಾಲ್ಯದಿಂದಲೇ ಅವರೊಂದಿಗೆ ಬೆಳೆದುಕೊಂಡು ಬಂದಿವೆ. ಯಾರೊಡನೆಯೂ ಯಾವ ಸಂದರ್ಭದಲ್ಲಿಯೂ ವಿಶ್ವಾಸವನ್ನೂ ಕೆಡಿಸಿಕೊಂಡವರಲ್ಲ. ಈ ದೃಷ್ಟಿಯಿಂದ ಅವರೊಬ್ಬರು ಅಜಾತಶತ್ರು, ಅವರ ಕಾಯಕನಿಷ್ಠೆ ಅವರಿಗೆ ಶ್ರೀರಕ್ಷೆಯಾಗಿದೆ. ಇಂತಹ ಶ್ರೇಷ್ಠ ಕಿರಿಯ ಮಿತ್ರರೊಬ್ಬರಿಗೆ ಅರವತ್ತರ ಅಭಿನಂದನೆಯನ್ನು ಸಲ್ಲಿಸುತ್ತಿರುವುದು ನನಗೆ ತುಂಬ ಅಭಿಮಾನದ ಮತ್ತು ಸಂತೋಷದ ಸಂಗತಿಯಾಗಿದೆ. ಈ ತೆರನ ಅಭಿನಂದನ ಕಾರ್ಯಗಳು ನಿರಂತರವಾಗಿ ನಡೆಯಲಿ ಶ್ರೀಯುತರು ನೂರುಕಾಲ ಬಾಳಿ ನಾಡುನುಡಿಗಳಿಗೆ ಮಹತ್ತರವಾದ ಸೇವೆಸಲ್ಲಿಸಲಿ ಎಂದು ಹಾರೈಸುತ್ತೇನೆ. ■

# ಎಪ್ಪತ್ತೇಳರ ಡಾ. ನಿರುಪಮಾ

ಇಪ್ಪತ್ತನೆಯ ಶತಮಾನದ ಕರ್ನಾಟಕ ಮಹಿಳಾ ಸಾಹಿತಿಗಳಲ್ಲಿ ಡಾ. ನಿರುಪಮಾ ಅವರ ಹೆಸರು ಸದಾ ಹಚ್ಚಹಸರಾಗಿರುವಂತಹುದು. ಎಪ್ಪತ್ತೇಳು ವಸಂತಗಳನ್ನು ಕಂಡಿರುವ ನಿರುಪಮಾ ಅವರು ಇಂದಿಗೂ ಜೀವನೋತ್ಸಾಹ ಮತ್ತು ಲವಲವಿಕೆಯಿಂದ ಕೂಡಿರುವುದಕ್ಕೆ ಇತ್ತೀಚೆಗೆ ಬಿಡುಗಡೆಯಾದ 'ಸಾಹಿತ್ಯದ ಸೊಬಗು', 'ರಾಷ್ಟ್ರೀಯತೆ ಮತ್ತು ಕಾವ್ಯ', 'ಸ್ವಾತಂತ್ರ್ಯಾನಂತರದ ಭಾರತೀಯ ಲೇಖಕರು' ಎಂಬ ಅವರ ಈ ಕೃತಿಗಳೇ ಜೀವಂತಸಾಕ್ಷಿಯಾಗಿವೆ.

ಡಾ. ನಿರುಪಮಾ ಅವರದು ವೈಶಿಷ್ಟ್ಯಪೂರ್ಣವಾದ ಬದುಕು. ವೈವಿಧ್ಯಮಯ ವಾದ ಬರವಣಿಗೆ. ಅವರು ತೆಲುಗು, ಕನ್ನಡ, ಒರಿಯ, ಇಂಗ್ಲಿಷ್, ಹಿಂದಿ, ಸಂಸ್ಕೃತ ಭಾಷೆಗಳಲ್ಲಿ ಬಲ್ಲಿದರು. ಅವರು ಕನ್ನಡವೇ ಅಲ್ಲದೆ ಇನ್ನಿತರ ಭಾಷೆಗಳಲ್ಲಿ ಕೃತಿಗಳನ್ನು ಬರೆದಿರುವುದೇ ಇದಕ್ಕೆ ನಿದರ್ಶನವಾಗಿದೆ. ಮಕ್ಕಳ ಸಾಹಿತ್ಯ, ದಾಸಸಾಹಿತ್ಯಗಳಲ್ಲಿ ಅಪಾರಆಸಕ್ತಿಯನ್ನು ಹೊಂದಿರುವ ನಿರುಪಮಾ ಅವರು ಕರ್ನಾಟಕ ಮಕ್ಕಳಸಾಹಿತ್ಯಪರಿಷತ್ತನ್ನು ಕಟ್ಟಿ "ಅಷ್ಟಭಾಷಾ ಮಕ್ಕಳಸಾಹಿತ್ಯಸಮ್ಮೇಳನ"ವನ್ನು ನಡೆಸಿದ್ದಾರೆ. "ಅಖಿಲ ಕರ್ನಾಟಕ ಹರಿದಾಸ ಸಾಹಿತ್ಯ ಪ್ರತಿಷ್ಠಾನ"ವನ್ನು ಸ್ಥಾಪಿಸಿದ್ದೇ ಅಲ್ಲದೆ ಹಂಪೆಯಲ್ಲಿ ಪುರಂದರ ಉತ್ಸವವನ್ನು ನಡೆಸಲು ಕಾರಣಕರ್ತರಾಗಿದ್ದಾರೆ.

ಭಾಷಾಂತರ ಕಲೆಗೆ ನಿರುಪಮ ಅವರ ಕೊಡುಗೆ ಅನನ್ಯವಾದುದು. ಇವರು ೨೦೦೨ರಲ್ಲಿ "ಭಾಷಾಂತರ ಅಧ್ಯಯನ ಸಂಸ್ಥೆ"ಯನ್ನು ಪ್ರಾರಂಭಿಸಿ ರಾಷ್ಟ್ರಾದ್ಯಂತ ಸಾವಿರಾರು ಅನುವಾದಕರನ್ನು ಈ ಕಾರ್ಯದಲ್ಲಿ ತೊಡಗಿಸಿಕೊಂಡು ಹಲವಾರು ಕಾರ್ಯಕ್ರಮಗಳನ್ನು ನಡೆಸಿದ್ದಾರೆ. ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನಗಳನ್ನು ಬಳಸಿ ಭಾಷಾಂತರ ಕಾರ್ಯವನ್ನು ಸರಳಗೊಳಿಸುವ ವಿಧಿವಿಧಾನಗಳತ್ತ ಚಿಂತನೆ ನಡೆಸಿದ್ದಾರೆ.

ಡಾ. ನಿರುಪಮಾ ಅವರು ಹಲವಾರು ಸಂಘ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದ್ದಾರೆ. ೧೯೭೧ರಲ್ಲಿ 'ವಿಚಾರ ವಿನಿಮಯ ಸಂಸ್ಥೆ'ಯನ್ನೂ ೧೯೭೪ರಲ್ಲಿ 'ಆರತಿ ಪಬ್ಲಿಕೇಷನ್ಸ್' ಅನ್ನು ೧೯೮೫ರಲ್ಲಿ 'ಕರ್ನಾಟಕ ಮಕ್ಕಳ ಸಾಹಿತ್ಯ ಪರಿಷತ್ತ'ನ್ನೂ ಕಟ್ಟಿದ್ದಾರೆ. ನಿರುಪಮಾ ಅವರು ತಾವು ಬರೆದ ಪುಸ್ತಕಗಳನ್ನು ಮಾತ್ರ ಪ್ರಕಟಿಸದೆ ಇತರ ಲೇಖಕಿಯರನ್ನು ಬರವಣಿಗೆಯಲ್ಲಿ ತೊಡಗಿಸಿ ಅವರು ಬರೆದ ಕೃತಿಗಳನ್ನು ತಮ್ಮ ಪ್ರಕಾಶನದಲ್ಲಿ ಪ್ರಕಟಿಸಿ ಪ್ರೋತ್ಸಾಹಿಸುತ್ತಿದ್ದುದು ಸರ್ವರೂ ಮೆಚ್ಚಬೇಕಾದ ಸಂಗತಿಯಾಗಿದೆ. ಪ್ರಕಾಶನ ಕ್ಷೇತ್ರದಲ್ಲಿ ಅವರು ಸಲ್ಲಿಸಿದ ಸೇವೆಗೆ "ದಕ್ಷಿಣ ಭಾರತದ ಅತ್ಯುತ್ತಮ ಪ್ರಕಾಶಕರು" ಪ್ರಶಸ್ತಿ ಲಭ್ಯವಾಗಿದೆ. ಇದರ ಜೊತೆಗೆ "ರಾಜ್ಯೋತ್ಸವ ಪ್ರಶಸ್ತಿ", ಕರ್ನಾಟಕ ಲೇಖಕಿಯರ ಸಂಘದ "ಅನುಪಮ ಪ್ರಶಸ್ತಿ", ಶಾಶ್ವತಿ ಸಂಸ್ಥೆಯ "ಸದೋದಿತ ಪ್ರಶಸ್ತಿ" ಗಾಯನ ಸಮಾಜದಿಂದ "ಲಿಪಿಪ್ರಜ್ಞೆ" ಪ್ರಶಸ್ತಿ, ಧಾರವಾಡದ "ಮಕ್ಕಳ ಮನೆ ಪ್ರಶಸ್ತಿ", "ಯುನಿಸೆಫ್ ಮಕ್ಕಳ ಸಾಹಿತ್ಯ ಪ್ರಶಸ್ತಿ", "ಆರ್ಯಭಟ ಪ್ರಶಸ್ತಿ", ಮಿಥಿಕ್ ಸೊಸೈಟಿಯಿಂದ "ವರ್ಷದ ಸಂಶೋಧಕಿ ಸನ್ಮಾನ", ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ –ಇವೇ ಮೊದಲಾದ ಪ್ರಶಸ್ತಿಗಳೂ ಸನ್ಮಾನಗಳೂ ಪ್ರಾಪ್ತವಾಗಿವೆ.

ಡಾ. ನಿರುಪಮಾ ಅನೇಕ ಸಂಘ ಸಂಸ್ಥೆಗಳ ಸದಸ್ಯರಾಗಿ ಅನುಪಮ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಮಿಥಿಕ್ ಸೊಸೈಟಿಯ ಕಾರ್ಯಕಾರಿ ಸಮಿತಿ ಸದಸ್ಯೆಯಾಗಿ ಇಪ್ಪತ್ತೇಳು ವರ್ಷಗಳ ಸೇವೆ; ಕರ್ನಾಟಕ ಲೇಖಕಿಯರ ಸಂಘದ ಸ್ಥಾಪಕ ಸದಸ್ಯೆ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಪುಸ್ತಕ ಪ್ರಾಧಿಕಾರ ಇವುಗಳ ಸದಸ್ಯರಾಗಿ ದೂರದರ್ಶನ ಆಯ್ಕೆ ಸಮಿತಿ ಸದಸ್ಯೆಯಾಗಿ ನಿರಂತರವಾಗಿ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ.

ವಯೋವೃದ್ಧರೂ ಜ್ಞಾನವೃದ್ಧರೂ ಆದ ಡಾ. ನಿರುಪಮಾ ಅವರು ಅನೇಕ ಪ್ರಶಸ್ತಿ ಪದವಿ ಪುರಸ್ಕಾರಗಳಿಗೆ ಭಾಜನರಾಗಿದ್ದರೂ ತಮ್ಮ ಬರವಣಿಗೆಯನ್ನು ಮಾತ್ರ ನಿಲ್ಲಿಸಿಲ್ಲ. ತಾವೂ ಬರೆಯುತ್ತಾರೆ, ಇತರರಿಂದಲೂ ಬರೆಸಿ ಪ್ರಕಟಿಸುತ್ತಿದ್ದಾರೆ. ಇದು ಅತ್ಯಂತ ಮೆಚ್ಚುಗೆಯ ಕಾರ್ಯ. ಕಥೆ, ಕಾದಂಬರಿ, ಇತಿಹಾಸ, ಕಾನೂನು, ಅನುವಾದ, ಮಕ್ಕಳ ಸಾಹಿತ್ಯ –ಈ ಪ್ರಕಾರಗಳಲ್ಲಿ ಮೌಲಿಕ ಕೃತಿಗಳನ್ನು ರಚಿಸಿರುವ ಡಾ. ನಿರುಪಮಾ ಅವರು ಎಲ್ಲ ಕನ್ನಡಿಗರ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದಾರೆ. ಇವರಿಗೆ ಅರ್ಪಿಸಲಿರುವ "ನಿರುಪಮ ಲೋಕ" ಎಂದೆಂದಿಗೂ ನಿರುಪಮವೇ ಆಗಿರಲಿ. ಈ ಲೋಕವನ್ನು ಪ್ರವೇಶಿಸಲು ಅನುವು ಮಾಡಿಕೊಟ್ಟ ಸಂಪಾದಕರಿಗೆ ವಂದನೆಗಳು. ■

# ಶಿವಾಧೀನರಾದ ಪ್ರಾಧ್ಯಾಪಕ ಬಿ. ವೀರಭದ್ರಯ್ಯ

**ಸು**ಮಾರು ಮೂರು ನಾಲ್ಕು ದಶಕಗಳ ಕಾಲ ವಿದ್ಯಾರ್ಥಿಗಳ ಒಡನಾಡಿಯಾಗಿದ್ದು ಅವರಿಗೆ ವಿದ್ಯಾದಾನ ಮಾಡಿದ ಶ್ರೇಷ್ಠ ಪ್ರಾಧ್ಯಾಪಕರಲ್ಲಿ ಶ್ರೀ ವೀರಭದ್ರಯ್ಯನವರೂ ಒಬ್ಬರು. ಆದರೆ ಪ್ರಾಧ್ಯಾಪಕ ವೃತ್ತಿಯ ಜೊತೆಗೆ ಅವರು ಮಾಡಿದ ಸಾಹಿತ್ಯಿಕ ಮತ್ತು ಸಾರ್ವಜನಿಕ ಕಾರ್ಯಗಳಿಂದ ಅವರು ಹೆಸರು ಚಿರಸ್ಥಾಯಿಯಾಗಿ ಉಳಿಯುವಂತಹುದಾಗಿದೆ. ಈ ಕ್ಷೇತ್ರಗಳಲ್ಲಿನ ಅವರ ಕಳಕಳಿ ಇತರರಿಗೆ ಮಾರ್ಗದರ್ಶಕವಾಗಿದೆ. ಇಂತಹ ಸರಳ ಸಜ್ಜನ, ನಯವಿನಯಗಳ ಸಾಕಾರಮೂರ್ತಿ ಪ್ರೊ. ಬಿ. ವೀರಭದ್ರಯ್ಯನವರು.

ತುಮಕೂರಿನ ಶ್ರೀ ಸಿದ್ಧಗಂಗಾ ಕಾಲೇಜಿನಲ್ಲಿ ರಾಜ್ಯಶಾಸ್ತ್ರ ಪ್ರಾಧ್ಯಾಪಕರಾಗಿ ತಮ್ಮ ಸೇವಾವಧಿಯನ್ನೆಲ್ಲಾ ಅಲ್ಲೇ ಮುಗಿಸಿದ ವೀರಭದ್ರಯ್ಯನವರ ಅಚಲ ಸೇವಾನಿಷ್ಠೆ ಎಣೆತೊಣೆಯಿಲ್ಲದ್ದು. ಇದು ಅವರ ಕಾಯಕದ ಒಂದು ಮುಖವಾದರೆ, ಸಾಹಿತ್ಯಸೇವೆ ಅವರ ಕಾಯಕದ ಮತ್ತೊಂದು ಮುಖ. ಇದಕ್ಕೆ ಕಾರಕ ಪ್ರೇರಕ ಪೂರಕರಾದವರು ಅವರ ಮಾವಂದಿರಾದ ದಿವಂಗತ ಟಿ.ಎನ್. ಮಹಾದೇವಯ್ಯನವರು. ಮಾವನವರನ್ನೇ ಕಾಣದ ವೀರಭದ್ರಯ್ಯನವರು ಅವರ ಸಾಹಿತ್ಯದಿಂದ ಪ್ರಭಾವಿತರಾದವರು. ಅವರ ಸಮಗ್ರಸಾಹಿತ್ಯವನ್ನು ಏಕಾಂಗಸಾಹಸಿಯಾಗಿ ಪ್ರಕಟಿಸಿ ಮಾವನವರ ಹೆಸರನ್ನು ಸಾಹಿತ್ಯಚರಿತ್ರೆಯಲ್ಲಿ ನೆಲೆಗೊಳಿಸಿದ ಅಪರೂಪದ ಅಳಿಯ. ಅದಕ್ಕಾಗಿ ತನುಮನಧನವನ್ನೆಲ್ಲಾ ಧಾರೆಯೆರೆದ ಮಹಾನುಭಾವ.

ದಿವಂಗತ ಟಿ.ಎನ್. ಮಹಾದೇವಯ್ಯನವರು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಿಂದ ಬಿ.ಎಸ್ಸಿ ಪದವಿಯನ್ನು ಪಡೆದು, ಕಂದಾಯ ಇಲಾಖೆಯಲ್ಲಿ ಶಿರಸ್ತೇದಾರ್ ಅಮಲ್ದಾರ್, ಅಸಿಸ್ಟೆಂಟ್ ಕಮೀಷನರ್ ಆಗಿ ಸೇವೆಯಲ್ಲಿದ್ದಾಗಲೇ ಶಿವನ ಪಾದವನ್ನು ಸೇರಿಕೊಂಡ ಅತ್ಯಂತ ಪ್ರಾಮಾಣಿಕ, ಪರಮನಿಷ್ಠ ಅಧಿಕಾರಿಯೆಂದು ಕೀರ್ತಿ ಪಡೆದವರು. ಇದಕ್ಕಿಂತ ಮಿಗಿಲಾಗಿ ಅವರು ಕನ್ನಡ ಸಾಹಿತ್ಯ ಕ್ಷೇತ್ರದ ವಿವಿಧ ಪ್ರಕಾರಗಳಲ್ಲಿ ರಚಿಸಿದ ಅನುಪಮ ಕೃತಿಗಳಿಂದ ಅಮರರಾಗಿದ್ದಾರೆ. ನವೋದಯ ಸಾಹಿತ್ಯದ ಪ್ರಮುಖರಲ್ಲಿ ಪರಿಗಣಿತರಾಗಿದ್ದಾರೆ. ಕವಿಯಾಗಿ, ಕಾದಂಬರಿಕಾರರಾಗಿ, ಕಥೆಗಾರರಾಗಿ, ಪ್ರಬಂಧಕಾರರಾಗಿ, ನಾಟಕಕಾರರಾಗಿ, ವಿಮರ್ಶಕರಾಗಿ, ವಚನಕಾರರಾಗಿ ಇವೇ ಮೊದಲಾದ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಅಸಂಖ್ಯಾತ ಕೃತಿಗಳನ್ನು ರಚಿಸಿದ್ದಾರೆ. ಕನ್ನಡದ ಕಣ್ವ ಬಿ.ಎಂ. ಶ್ರೀಕಂಠಯ್ಯನವರು ಮಹಾದೇವಯ್ಯ ಅವರ ಕವನಗಳನ್ನು ಓದಿ ಮೆಚ್ಚುಗೆಯನ್ನು ಸೂಚಿಸಿದ್ದಾರೆ.

ಪ್ರೊ. ವಿರಭದ್ರಯ್ಯನವರು ರಾಜ್ಯಶಾಸ್ತ್ರದ ಅಧ್ಯಾಪಕರಾಗಿದ್ದರೂ ಸಾಹಿತ್ಯದ ಅಪಾರ ಒಲವುಳ್ಳವರಾಗಿದ್ದರೂ ತಮ್ಮ ಮಾವನವರ ಅಪಾರ ಅಪ್ರಕಟಿತ ಕಾವ್ಯವಾಣಿ ಅವರಿಗೆ "ಗೋಲ್ಡನ್‌ಟ್ರೆಷರಿ"ಯಾಯಿತು. ಈ ಸಾಹಿತ್ಯ ಪ್ರಕಟಣೆ ಮಾಡುವವರಾರು? ಈ ಸಾಹಿತ್ಯದ ರಾಶಿಯನ್ನೆಲ್ಲಾ ವಿಂಗಡಿಸಿ ಅವುಗಳಿಗೆ ಸಂಬಂಧಿಸಿದಂತೆ ಗಣ್ಯವಿದ್ವಾಂಸರಿಂದ ವಿಮರ್ಶೆಯನ್ನು ಬರೆಸಿ ಒಂದೊಂದಾಗಿ ಪ್ರಕಟಿಸುತ್ತಾ ಬಂದರು. ಇದಕ್ಕಾಗಿ ಸಾಲಸೋಲಗಳನ್ನು ಮಾಡಿದರು. ಅಷ್ಟೇ ಏಕೆ? ನಿವೃತ್ತಿಯಿಂದ ಬಂದ ಹಣವನ್ನೆಲ್ಲಾ ವಿನಿಯೋಗಿಸಿ ಕೃತಾರ್ಥರಾದರು. ಯಾರೊಬ್ಬರಿಂದಲೂ ಪುಕ್ಕಟೆ ಕೆಲಸ ಮಾಡಿಸಿಕೊಳ್ಳಲಿಲ್ಲ. ಎಲ್ಲಾ ವಿದ್ವಾಂಸರಿಗೂ ಯಥೋಚಿತವಾಗಿ ಗೌರವಧನವನ್ನು ನೀಡಿದ್ದಾರೆ. ತಮ್ಮ ಮಾವನವರ

ಹೆಸರಿನಲ್ಲಿ ದತ್ತಿಗಳನ್ನೂ ಸ್ಥಾಪಿಸಿದ್ದಾರೆ. ವಿಚಾರ ಸಂಕಿರಣಗಳನ್ನು ನಡೆಸಿದ್ದಾರೆ. ಟಿ.ಎನ್.ಎಂ. ಸ್ಮಾರಕ ಗ್ರಂಥಮಾಲೆ ಎಂಬ ಹೆಸರಿನಿಂದ ಈ ಕೃತಿ ಪ್ರಕಟಣಕಾರ್ಯವನ್ನು ನಿರ್ವಹಿಸುತ್ತಾ ಬಂದರು. ತಮ್ಮ ಮಾವನವರ ಹೆಸರನ್ನು ಅಜರಾಮರಗೊಳಿಸಿದ ಹಿಂದೆಂದೂ ಕಂಡರಿಯದ ತ್ಯಾಗಜೀವಿ ವೀರಭದ್ರಯ್ಯ ಅವರು.

ವೀರಭದ್ರಯ್ಯ ಅವರ ಅಂತಿಮ ಆಸೆ ಅವರು ಜೀವಿಸಿದ್ದಾಗ ಈಡೇರಲಿಲ್ಲ. ತಮ್ಮ ಮಾವನವರ ಹೆಸರಿನಲ್ಲಿ ಟಿ.ಎನ್.ಎಂ. ಸ್ಮಾರಕ ಪ್ರತಿಷ್ಠಾನವನ್ನು ಸ್ಥಾಪಿಸಬೇಕೆಂದೂ ನಾನು ಅದರ ಅಧ್ಯಕ್ಷನಾಗಿರಬೇಕೆಂದೂ ಬಹಳ ದಿನಗಳಿಂದ ಹೇಳುತ್ತಲೇ ಬಂದಿದ್ದರು. ಅವರು ಶಿವೈಕ್ಯರಾಗುವ ಹಿಂದಿನ ದಿನ ರಾತ್ರಿ ಈ ವಿಷಯವನ್ನು ಮತ್ತೆ ಪ್ರಸ್ತಾಪಿಸಿ ತಮಗೆ ಸರಕಾರದಿಂದ ಬರಲಿರುವ ವೈದ್ಯಕೀಯ ವೆಚ್ಚದ ಹಣವನ್ನು ಈ ಪ್ರತಿಷ್ಠಾಪನ ಸ್ಥಾಪನೆಗೆ ಬಳಸಿಕೊಳ್ಳಬೇಕೆಂದೂ ಅತ್ಯಂತ ಕಳಕಳಿಯಿಂದ ಕೇಳಿಕೊಂಡಿದ್ದರು. ಆದರೆ ಮರುದಿನ ಆದದ್ದೇನು? ಬೆಂದಬಿದಿಗೆ ಕಣ್ಣಿಲ್ಲಕ್ಕುಂ! ಪ್ರೊ.ವೀರಭದ್ರಯ್ಯ ಅವರನ್ನು ನೆನೆದಾಗಲೆಲ್ಲ ಈ ವಚನ ನನ್ನ ಕಣ್ಣಮುಂದೆ ನಿಲ್ಲುತ್ತದೆ.

> ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ
> ಲಿಂಗವೆಂಬ ಎಲೆಯಾಯಿತ್ತು ಲಿಂಗವೆಂಬ ಎಲೆಯ ಮೇಲೆ
> ವಿಚಾರವೆಂಬ ಹೂವಾಯಿತ್ತು ಆಚಾರವೆಂಬ ಕಾಯಾಯಿತ್ತು
> ನಿಷ್ಪತ್ತಿಯೆಂಬ ಹಣ್ಣಾಯಿತ್ತು ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಕಳಚಿ ಬೀಳುವಲ್ಲಿ
> ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ ॥

ಮಾನವ ಬಾಳು ಎಷ್ಟು ಅಸ್ಥಿರ, ಅಧ್ರುವ, ಅಶಾಶ್ವತ ಎಂಬುದನ್ನು ಸಾಕಾರಗೊಳಿಸುವ ಈ ವಚನ ಸಾಕ್ಷೀಭೂತವಾಗಿದೆ.

■

# ನಿರಂತರ ಕಾಯಕ ಕಲಿ "ಮಧುವ್ರತ"

**ಪ್ರಾ**ಚೀನ ಕನ್ನಡ ಸಾಹಿತ್ಯ ತನ್ನ ಲೋಕೋತ್ತರ ಕೃತಿಗಳಿಂದ ಸಾರ್ವಕಾಲಿಕ ಮೌಲ್ಯಗಳ ಸಾಹಿತ್ಯದಿಂದ ಹಿರಿಮೆ-ಗರಿಮೆಗಳಿಂದ ಪ್ರಸ್ತುತವಾಗಿದೆ, ಜೀವಂತವಾಗಿದೆ. ಆಧುನಿಕ ಕನ್ನಡ ಸಾಹಿತ್ಯ ವೈಚಾರಿಕತೆಯಿಂದ ವೈವಿಧ್ಯತೆಯಿಂದ ವೈಶಿಷ್ಟ್ಯಪೂರ್ಣವಾಗಿದೆ. ವಿವಿಧ ಪ್ರಕಾರಗಳಲ್ಲಿ ಅಪಾರ ಸಾಹಿತ್ಯ ಸೃಷ್ಟಿಯಾಗುತ್ತಿದೆ. ಗುಣದಲ್ಲಿಯೂ ಗಾತ್ರದಲ್ಲಿಯೂ ಮಹತ್ವದ ಕೃತಿಗಳು ಪ್ರಕಟವಾಗುತ್ತಿವೆ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಸಾಧನೆ ಮಾಡಿದವರಿದ್ದಾರೆ. ನೂರಾರು ಕವನ ಸಂಕಲನಗಳನ್ನು ತಂದವರಿದ್ದಾರೆ, ಕಾದಂಬರಿಗಳನ್ನು ಬರೆದವರಿದ್ದಾರೆ. ಇಷ್ಟೇ ಏಕೆ ನಾಲ್ಕುನೂರಕ್ಕಿಂತಲೂ ಮಿಗಿಲಾದ ಧರ್ಮಗ್ರಂಥಗಳನ್ನು ರಚಿಸಿರುವ ಮಠಾಧೀಶರಿದ್ದಾರೆ, ಐದುನೂರಕ್ಕಿಂತಲೂ ಹೆಚ್ಚು ಪತ್ತೇದಾರಿ ಕಾದಂಬರಿಗಳನ್ನು ಬರೆದವರಿದ್ದಾರೆ. ಈ ಅಪಾರ ಪ್ರಮಾಣದ ಸಾಹಿತ್ಯ ನಿರ್ಮಾಪಕರ ಅಪೂರ್ವಪಟ್ಟಿಗೆ ಸೇರಿದವರಲ್ಲಿ ಡಾ. ಬಿ.ಎಸ್. ಸ್ವಾಮಿ ಅವರೂ ಒಬ್ಬರು. ಯಾವ ಸದ್ದುಗದ್ದಲವೂ ಇಲ್ಲದೆ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಇನ್ನೂರಕ್ಕೂ ಮಿಕ್ಕ ಕೃತಿರಚನೆ ಮಾಡಿದ ದೈತ್ಯಪ್ರತಿಭೆಯ, ದೈತ್ಯಶಕ್ತಿಯ ಬಿ.ಎಸ್. ಸ್ವಾಮಿ ಇವರಿಗೆ ಸಂದಿರುವ ಪ್ರಮುಖ ಪ್ರತಿಷ್ಠಿತ ಪ್ರಶಸ್ತಿಗಳಾದರೂ ಎಷ್ಟು?

ಒಬ್ಬ ತನ್ನ ಜೀವಿತಾವಧಿಯಲ್ಲಿ ಎಷ್ಟು ಕೃತಿಗಳನ್ನು ರಚಿಸಬಹುದು? ಆತನಿಗೆ ಒದಗಿಬಂದ ಸನ್ನಿವೇಶಗಳ ಅವಕಾಶಗಳು ಎಷ್ಟು? ಒದಗಿಬಂದ ಈ ಸಂದರ್ಭಗಳನ್ನು ಅವರು ಯಾವ ರೀತಿ ಸದುಪಯೋಗಪಡಿಸಿಕೊಂಡು ಸಾರ್ಥಕವಾದುದನ್ನು ಏನು ಮಾಡಿದ್ದಾರೆ, ಎಷ್ಟು ಮಾಡಿದ್ದಾರೆ ಎಂಬುದು ದಾಖಲೆಯಾಗಿ ಉಳಿಯುತ್ತದೆ. ಡಾ. ಬಿ.ಎಸ್. ಸ್ವಾಮಿ ಅವರು ಕನ್ನಡ ಎಂ.ಎ. ಮಾಡಿದವರು. ಮಲೆಯ ಮಾದೇಶ್ವರನನ್ನು ಕುರಿತು ಅಪಾರ ವ್ಯಾಸಂಗ ಮಾಡಿ ಪಿಎಚ್.ಡಿ. ಪದವಿಯನ್ನು ಪಡೆದವರು. ಪ್ರಾರಂಭದಲ್ಲಿ ಐದು ವರ್ಷಗಳು ಪ್ರೌಢಶಾಲಾ ಉಪಾಧ್ಯಾಯರಾಗಿ ಸೇವೆ ಸಲ್ಲಿಸಿದ ಮೇಲೆ ಆಕಾಶವಾಣಿಯಲ್ಲಿ ಸಹಾಯಕ ಸಂಪಾದಕರಾಗಿ ಕರ್ನಾಟಕದ ವಿವಿಧ ಆಕಾಶವಾಣಿ ಕೇಂದ್ರಗಳಲ್ಲಿ ಸುಮಾರು ಇಪ್ಪತ್ತು ವರ್ಷಗಳು ಸೇವೆ ಸಲ್ಲಿಸಿದ್ದಾರೆ. ಈ ಸೇವಾವಧಿ ಅವರ ಜೀವನದ ದಿಕ್ಕು ದೆಸೆಯನ್ನು ಬದಲಿಸಿತು. ಇದೊಂದು ಸುವರ್ಣಾವಕಾಶ. ಆಕಾಶವಾಣಿಯ ಕಾರ್ಯಕ್ರಮಗಳು ಸ್ವಾಮಿ ಅವರ ಪ್ರತಿಭೆಯ ವಿಕಾಸಕ್ಕೆ ಸಾಮರ್ಥ್ಯದ ಪ್ರಕಾಶಕ್ಕೆ ಮಹತ್ತರ ದಿಕ್ಸೂಚಿಗಳಾದುವು. ವಿವಿಧ ಕಾರ್ಯಕ್ರಮಗಳ ಯೋಜಕರಾಗಿ ನಿಯೋಜಕರಾಗಿ ಸಾಹಿತ್ಯದ ವಿವಿಧ ಪ್ರಕಾರಗಳ ಆವಿಷ್ಕರಣಕ್ಕೆ ಪರಿಷ್ಕರಣಕ್ಕೆ ಮಾರ್ಗಸೂಚಿಗಳಾದುವು. ಅವರ ಪ್ರತಿಭೆ ಪ್ರಕಾಶಮಾನವಾಯಿತು. ವ್ಯಾಸಂಗ ಅಪರಿಮಿತವಾಯಿತು. ತನ್ಮೂಲಕ ಅಸಂಖ್ಯಾತ ಕೃತಿಗಳು ಅವರ ಮೂಸೆಯಿಂದ ಹೊರಬಂದು ಪ್ರಕಟವಾದುವು. ಡಾ. ಸ್ವಾಮಿ ಅವರ ಸಾಹಿತ್ಯ ರಾಶಿಯಲ್ಲಿ ಕಥೆ, ಕಾದಂಬರಿ, ಕವನ, ನಾಟಕ, ರೂಪಕ, ಪ್ರಬಂಧ, ವಿಮರ್ಶೆ, ಸಂಪಾದನೆ. ವೈಚಾರಿಕ ಸಾಹಿತ್ಯ, ಸಂಶೋಧನೆ, ಜಾನಪದ, ಹಾಸ್ಯ, ಪ್ರವಾಸ, ಮಕ್ಕಳ ಸಾಹಿತ್ಯ, ವಯಸ್ಕರ ಶಿಕ್ಷಣ ಸಾಹಿತ್ಯ, ಜೀವನ ಚಿತ್ರಗಳು –ಇದೇ ಮೊದಲಾದ ಪ್ರಕಾರಗಳಿಗೆ ಸಂಬಂಧಿಸಿದ ಇನ್ನೂರಕ್ಕೂ ಹೆಚ್ಚಿನ ಕೃತಿಗಳು ಪ್ರಕಟವಾಗಿರುವುದು ಅವರ ದೈತ್ಯ ಪ್ರತಿಭೆ ಮತ್ತು ದೈತ್ಯ ಶಕ್ತಿಗೆ ಜ್ವಲಂತಸಾಕ್ಷಿಯಾಗಿವೆ. ಸ್ವಾಮಿ ಅವರು ಮಹಾಕಾವ್ಯವನ್ನೂ ಬರೆದಿದ್ದಾರೆ. ಅಷ್ಟೇ ಅಲ್ಲ ಚಲನಚಿತ್ರಗಳಿಗೂ ಸಂಭಾಷಣೆಗಳನ್ನು ರಚಿಸಿದ್ದಾರೆ. ಇವೆಲ್ಲ ಒಬ್ಬ ಚಲನಶೀಲ ಸಾಹಿತಿ ತನಗೆ ಲಭ್ಯವಾದ

ಸಮಯದಲ್ಲಿ, ಸನ್ನಿವೇಶದಲ್ಲಿ ಏನೆಲ್ಲ ಸಾಧಿಸಬಹುದು ಎಂಬುದಕ್ಕೆ ಸ್ಪಷ್ಟ ನಿದರ್ಶನವಾಗಿದೆ. ಸ್ವಾಮಿ ಅವರ ಸಾಹಿತ್ಯ ಸೃಷ್ಟಿ ಬತ್ತದ ತೊರೆ. ಪ್ರಶಾಂತವಾಗಿ ತುಂಬಿಹರಿಯುವ ಸಾಹಿತ್ಯ ಪ್ರವಾಹ. ಇದು ನಿರಂತರವಾಗಿ ಪ್ರವಹಿಸುತ್ತಿರಲಿ. ಎಂದೆಂದಿಗೂ ಬತ್ತದಿರಲಿ. ಸಾಹಿತ್ಯದ ಎಲ್ಲ ಪ್ರಕಾರಗಳನ್ನೂ ಸುತ್ತುವರಿದಿರಲಿ. ಡಾ. ಸ್ವಾಮಿ ಅವರಿಗೆ ಹಲವಾರು ಪ್ರಶಸ್ತಿಗಳೂ ಬಹುಮಾನಗಳೂ ಈಗಾಗಲೇ ಲಭ್ಯವಾಗಿದೆ. ಸನ್ಮಾನಗಳೂ ಸಾಕಷ್ಟು ಆಗಿವೆ. ಶ್ರೀಯುತರು ಅನೇಕ ಸಾಹಿತ್ಯ ಸಮ್ಮೇಳನಗಳಲ್ಲಿ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿದ್ದಾರೆ. ಇಷ್ಟೆಲ್ಲ ಮಹತ್ತರ ಸಾಹಿತ್ಯ ಸಾಧನೆಯನ್ನು ಮಾಡಿರುವ ಈ ಧೀಮಂತ ಸಾಹಿತಿಗೆ ಪ್ರತಿಷ್ಠಿತ ಪ್ರಶಸ್ತಿಗಳೂ ಸನ್ಮಾನಗಳೂ ಬಹುಮಾನಗಳೂ ಅಗತ್ಯವಾಗಿ ಅನಿವಾರ್ಯವಾಗಿ ಲಭ್ಯವಾಗುವ ಕಾಲ ಸನ್ನಿಹಿತವಾಗಿದೆ.

ಡಾ. ಬಿ.ಎಸ್. ಸ್ವಾಮಿ ಅವರ ಸಮಗ್ರ ಸಾಹಿತ್ಯವನ್ನು ಕುರಿತು ಈಗಾಗಲೇ ವಿಚಾರ ಸಂಕಿರಣಗಳಾಗಿವೆ. ಈ ಸಂಕಿರಣದಲ್ಲಿ ಮಂಡಿತವಾದ ಪ್ರಬಂಧಗಳು ಪುಸ್ತಕ ರೂಪದಲ್ಲಿ ಹೊರಬರಲಿದೆ. ಅದಕ್ಕೆ ಇದು ಒಂದು ನಾಂದಿ ತೋರಣವಾಗಲಿ.

ಡಾ. ಸ್ವಾಮಿ ಅವರ ಸಮಗ್ರ ಸಾಹಿತ್ಯವನ್ನು ಸಾಹಿತಿಗಳು ಸಹೃದಯರು ನಿಷ್ಪಕ್ಷಪಾತವಾಗಿ, ನಿಸ್ವಾರ್ಥ ದೃಷ್ಟಿಯಿಂದ ಅಭ್ಯಸಿಸಲಿ. ಅವರ ಸಾಹಿತ್ಯದಲ್ಲಿ ಕಂಡುಬಂದ ಲೋಪದೋಷಗಳನ್ನು ನಿರ್ಭಿಡೆಯಿಂದ ಅಭಿವ್ಯಕ್ತಪಡಿಸಲಿ. ಅಪಾರ ಗ್ರಂಥರಾಶಿಯನ್ನು ಕಂಡು ಮತ್ಸರಿಸಿ, ಕೊರಗಿ ಕರುಬಬಾರದು. ಸಂತೋಷದಿಂದ ಸ್ವೀಕರಿಸಿ ಅಭಿನಂದಿಸಬೇಕು. ಸಾಹಿತ್ಯ ಕ್ಷೇತ್ರದಲ್ಲಿ ವಿದ್ವತ್ ಕ್ಷೇತ್ರದಲ್ಲಿ ಜಾತೀಯತೆ ಪಕ್ಷಪಾತ ಸರ್ವಥಾ ಸಲ್ಲದು. ಯಾವ ನಾಡಿನಲ್ಲಿ ವಿದ್ವತ್ತಿಗೆ ಮನ್ನಣೆ ಇರುವುದಿಲ್ಲವೋ ಅದು ಅನಾಗರಿಕ ನಾಡು. ಜಾತಿ, ಮತ, ಪಕ್ಷ, ಪಂಥಗಳಿಂದ ವಿಮುಕ್ತವಾದ ಸಾಹಿತ್ಯ ಸಾರ್ವಕಾಲಿಕ ಸಾಹಿತ್ಯವಾಗುತ್ತದೆ. ಅಂತಹ ಸಾಹಿತ್ಯ ಸೃಷ್ಟಿಸಿದವರೆಲ್ಲ ಗಣ್ಯ ಮಾನ್ಯರಾಗುತ್ತಾರೆ. ಪ್ರಾಚೀನ ಸುಭಾಷಿತ "ವಿದ್ವಾನ್ ಸರ್ವತ್ರಂ ಪೂಜಯೇತ್" ಎಂದಿದೆ. ಈ ಎಲ್ಲ ದೃಷ್ಟಿಗಳಿಂದ ಡಾ. ಬಿ.ಎಸ್. ಸ್ವಾಮಿ ಅವರ ಮಹತ್ತು ಬೃಹತ್ತುಗಳಿಂದ ಕೂಡಿದ ಶ್ರೀಮಂತಸಾಹಿತ್ಯ ಬಹುಕಾಲ ಬದುಕಲಿ. ಅವರಿಗೆ ಅಪಾರ ಕೀರ್ತಿ ಗೌರವ ಪ್ರತಿಷ್ಠೆಗಳನ್ನು ತಂದುಕೊಡಲಿ ಎಂದು ಹಾರೈಸುತ್ತೇನೆ.



# ನಾನು ಕಂಡಂತೆ ಡಾ. ಮಳಲಿ ವಸಂತಕುಮಾರ್

ಮೈಸೂರು ವಿಶ್ವವಿದ್ಯಾನಿಲಯದ ಇಂದಿನ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಉಪನಿರ್ದೇಶಕನಾಗಿ ನಾನು ೧೯೭೧ ರಿಂದ ಸೇವೆಯಲ್ಲಿದ್ದೆ. ಆಗ ಈ ಸಂಸ್ಥೆಯಲ್ಲಿ ಕನ್ನಡ, ಜಾನಪದ, ಭಾಷಾಶಾಸ್ತ್ರ ಮೊದಲಾದ ವಿಷಯಗಳಲ್ಲಿ ಎಂ.ಎ. ತರಗತಿಗಳು ನಡೆಯುತ್ತಿದ್ದುವು. ಜೊತೆಗೆ ವಿಶ್ವಕೋಶ ವಿಭಾಗ; ಭಾಷಾಂತರ ವಿಭಾಗ, ಹರಿದಾಸ ಸಾಹಿತ್ಯ ವಿಭಾಗ, ಶಾಸನಪರಿಷ್ಕರಣ ವಿಭಾಗ ಮೊದಲಾದ ಸಾಹಿತ್ಯ ಘಟಕಗಳೂ ಕಾರ್ಯನಿರ್ವಹಿಸುತ್ತಿದ್ದುವು. ಮೈಸೂರು ವಿಶ್ವವಿದ್ಯಾನಿಲಯ ಪ್ರತಿಯೊಬ್ಬ ಅಧ್ಯಾಪಕ ಪ್ರಾಧ್ಯಾಪಕರಾದಿಯಾಗಿ ಅನಿವಾರ್ಯವಾಗಿ ಕನ್ನಡ ಅಧ್ಯಯನ ಸಂಸ್ಥೆಗೆ ಬರಲೇಬೇಕಾಗಿತ್ತು. ಹಾಗೆ ಬರುತ್ತಿದ್ದವರಲ್ಲಿ ಡಾ. ಮಳಲಿ ವಸಂತಕುಮಾರ್ ಅವರೂ ಒಬ್ಬರು. ಆಗ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ ಡಾ. ಹಾ.ಮಾ. ನಾಯಕ ಅವರಿದ್ದರು. ತರುವಾಯ ಡಾ. ಎಚ್. ತಿಪ್ಪೇರುದ್ರಸ್ವಾಮಿಗಳು ನಿರ್ದೇಶಕರಾಗಿದ್ದರು. ಆ ವೇಳೆಗಾಗಿಯೇ ಕನ್ನಡ ಉಪನ್ಯಾಸಕರಾಗಿದ್ದ ಡಾ. ಮಳಲಿ ವಸಂತಕುಮಾರ್ ಅವರು ಬರುತ್ತಿದ್ದರು. ನಮ್ಮ ವಿಭಾಗದ ಸಹಾಯಕ ನಿರ್ದೇಶಕರಾಗಿದ್ದ ಶ್ರೀ ಬಿ.ಎಸ್. ಸಣ್ಣಯ್ಯನವರಿಂದಾಗಿ ಡಾ. ಮಳಲಿ ಅವರು ನನಗೂ ಆಪ್ತರಾದರು. ಇದರ ಜೊತೆಗೆ ಡಾ. ತಿಪ್ಪೇರುದ್ರಸ್ವಾಮಿ ಅವರ ಸಂಭಾವನಾ ಗ್ರಂಥದ ಕಾರ್ಯದಲ್ಲಿ ಮಳಲಿ ಅವರು ನಿಯುಕ್ತರಾಗಿದ್ದುದರಿಂದ ನನಗೆ ಹೆಚ್ಚು ನಿಕಟವಾದರು. ಶ್ರೀಯುತರು ಸದಾ ಕಾರ್ಯಪ್ರವೃತ್ತರಾಗಿರುತ್ತಿದ್ದರು. ಅವರು ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳ ಆಪ್ತಕಾರ್ಯದರ್ಶಿಯಾಗಿಯೂ ಕಾರ್ಯನಿರ್ವಹಿಸಿದ್ದಾರೆ.

ಡಾ. ಮಳಲಿ ವಸಂತಕುಮಾರ್ ಅವರು ಮೈಸೂರು ವಿಶ್ವವಿದ್ಯಾನಿಲಯದ ಮಹಾರಾಜ ಕಾಲೇಜು, ಸಂಜೆ ಕಾಲೇಜು, ಯುವರಾಜ ಕಾಲೇಜು ಮತ್ತು ಹಾಸನ ಹಾಗೂ ಮಂಡ್ಯ ಸ್ನಾತಕೋತ್ತರ ಕೇಂದ್ರಗಳಲ್ಲಿ ದೀರ್ಘಕಾಲ ನೆಲಸಿ ಮಹತ್ತರ ಸೇವೆಯನ್ನು ಸಲ್ಲಿಸಿದ್ದಾರೆ.

ಡಾ. ಮಳಲಿ ವಸಂತಕುಮಾರ್ ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಾಪಕರ ಸಂಘದ ಅಧ್ಯಕ್ಷರಾಗಿಯೂ ಮತ್ತು ಮೈಸೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿಯೂ ಮಹತ್ತರವಾದ ಸೇವೆಯನ್ನು ಸಲ್ಲಿಸಿದ್ದಾರೆ. ಕನ್ನಡ ಕಾರ್ಯಕ್ರಮಗಳ ಬಗೆಗೆ ವಿಶೇಷ ಒಲವುಳ್ಳ ಮಳಲಿ ಅವರು ಗೋಕಾಕ್ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದೇ ಅಲ್ಲದೆ ಬಂಧನಕ್ಕೂ ಒಳಗಾಗಿದ್ದರು.

ಗ್ರಾಮಾಂತರ ಪ್ರದೇಶದಿಂದ ಬಂದಿರುವ ಮಳಲಿ ಅವರು ವ್ಯವಸಾಯದಲ್ಲೂ ಅದರಲ್ಲೂ ವಿಶೇಷವಾಗಿ ತೋಟಗಾರಿಕೆಯಲ್ಲೂ ತಮ್ಮ ಪ್ರಭುತ್ವವನ್ನು ಪ್ರದರ್ಶಿಸಿದ್ದಾರೆ. ಶ್ರೀಯುತರಿಗೆ ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ವಿಶ್ವಮಾನವ ಪ್ರಶಸ್ತಿ, ಹೊಯ್ಸಳ ಪ್ರಶಸ್ತಿ, ಸಾಹಿತ್ಯರತ್ನ –ಇವೇ ಮೊದಲಾದುವು ಪ್ರಾಪ್ತವಾಗಿವೆ. ಸಾಹಿತ್ಯಕ್ಷೇತ್ರದ ವಿವಿಧ ಪ್ರಕಾರಗಳಲ್ಲಿ ಗಣನೀಯ ಕಾರ್ಯವನ್ನೂ ಮಾಡಿದ್ದಾರೆ. ಕಾವ್ಯ, ನಾಟಕ, ಸಣ್ಣಕತೆ, ವಿಚಾರ ವಿಮರ್ಶೆ, ಸಂಶೋಧನೆ, ಸಂಪಾದನೆ ಈ ಪ್ರಕಾರಗಳಿಗೆ ಸಂಬಂಧಿಸಿದಂತೆ ಹೊರತಂದಿರುವ ನಲವತ್ತಕ್ಕಿಂತ ಹೆಚ್ಚಿನ ಕೃತಿಗಳು ಅವರ ಸಾಹಿತ್ಯ ಸಂಪತ್ತಿಗೆ ಜ್ವಲಂತ

ಸಾಕ್ಷಿಯಾಗಿವೆ. ರಾಷ್ಟ್ರಕವಿಗಳೂ ನನ್ನ ಪರಮಪೂಜ್ಯ ವಿದ್ಯಾಗುರುಗಳೂ ಆದ ಕುವೆಂಪು ಅವರ ಸಾಹಿತ್ಯವನ್ನೆಲ್ಲ ಕೂಲಂಕುಷವಾಗಿ ಅಭ್ಯಸಿಸಿ ವಿಶೇಷವಾಗಿ ಅವರ ನಾಟಕಗಳನ್ನು ಕುರಿತು ರಚಿಸಿರುವ ನಿಬಂಧ ಅವರ ಸಾಹಿತ್ಯ ಸೌಧಕ್ಕೆ ರನ್ನಕಳಸದಂತಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಸ್ಥಾನಕ್ಕೆ ನಾನು ಸ್ಪರ್ಧಿಸಿದ್ದೆ. ಆಗ ಡಾ. ಮಳಲಿ ವಸಂತಕುಮಾರ್ ಅವರೂ ಒಬ್ಬ ಅಭ್ಯರ್ಥಿಯಾಗಿದ್ದರು. ನಾವಿಬ್ಬರೂ ಒಬ್ಬ ಬಲಿಷ್ಠ ಅಭ್ಯರ್ಥಿಯನ್ನು ಎದುರಿಸಬೇಕಾಗಿತ್ತು. ಚುನಾವಣೆಯ ದಿನ ನಾವಿಬ್ಬರೂ ಪರಿಷತ್ತಿನಲ್ಲಿ ಸಂಧಿಸಿದೆವು. ನಾನು ಸಹಜವಾಗಿ ಅವರಿಗೆ ಶುಭಕೋರಿದಾಗ ಅವರು "ನಿಮ್ಮ ವಿರುದ್ಧ ನಾನು ಸ್ಪರ್ಧಿಸಬಾರದಾಗಿತ್ತು. ಯಾರೋ ಪಿತೂರಿ ಮಾಡಿ ನನ್ನನ್ನು ಪ್ರೇರೇಪಿಸಿದರು" ಎಂದು ಹೇಳಿ ಬಹುವಾಗಿ ಪರಿತಪಿಸಿ, ನನಗೆ ಚಹಾಪಾನ ಮಾಡಿಸಿ ಗೆಲುವನ್ನು ಹಾರೈಸಿದರು. ಹಿರಿಯರ ಬಗೆಗೆ ಅವರಿಗಿದ್ದ ಗೌರವದ ಸಂಕೇತವಾಗಿತ್ತು ಈ ಪ್ರಸಂಗ.

ನಾನಾ ಕ್ಷೇತ್ರಗಳಲ್ಲಿ ಬಹುಮುಖವಾದ ಸೇವೆಯನ್ನು ಸಲ್ಲಿಸಿ ನಿವೃತ್ತರಾಗಿರುವ ಡಾ. ಮಳಲಿ ವಸಂತಕುಮಾರ್ ಹಿಂದಿನದಾವುದನ್ನೂ ನೆನೆಯದಿರಲಿ: "ಗತಂ ನ ಸೋಚಯತ್ ಪ್ರಾಜ್ಞಃ" ಎಂಬಂತೆ ಮುಂದಿನ ಶುಭವನ್ನು ನಿರೀಕ್ಷಿಸಲಿ. ಅರವತ್ತರ ಸುವರ್ಣ ಸಂದರ್ಭದಲ್ಲಿ ಅವರಿಗೆ ಸಮರ್ಪಿತವಾಗಲಿರುವ "ವಸಂತ ವಿಶ್ವ" ಅವರ ಜೀವನದ ಹೊಂಬಾಗಿಲನ್ನು ತೆರೆಯಲಿ. ದಯಾಮಯರಾದ ಪಾರ್ವತೀ ಪರಮೇಶ್ವರರು ಅವರಿಗೂ ಅವರ ಕುಟುಂಬ ವರ್ಗದವರಿಗೂ ಸಮಸ್ತ ಸನ್ಮಂಗಲವನ್ನುಂಟುಮಾಡಲಿ ಎಂದು ಅನನ್ಯಭಕ್ತಿಭಾವದಿಂದ ಪ್ರಾರ್ಥಿಸುತ್ತೇನೆ.



# ನನ್ನ ಸಹೋದ್ಯೋಗಿಯಾಗಿದ್ದ ಡಾ. ಎಂ.ಪಿ. ಮಂಜಪ್ಪಶೆಟ್ಟಿ

ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನಾ ವಿಭಾಗದಲ್ಲಿ ನಾನು ಉಪನಿರ್ದೇಶಕನಾಗಿದ್ದಾಗ ಮಂಜಪ್ಪಶೆಟ್ಟಿ ಅವರು ಸಂಶೋಧಕ ಸಹಾಯಕರಾಗಿ ನೇಮಕಗೊಂಡು ಕೆಲಸಕ್ಕೆ ಸೇರಿಕೊಂಡರು. ಈ ಸಂಪಾದನಾ ವಿಭಾಗದ ಉಪನಿರ್ದೇಶಕರಾಗಿದ್ದ ನನ್ನ ಅಧೀನದಲ್ಲಿ ಒಬ್ಬ ಸಹಾಯಕ ನಿರ್ದೇಶಕರೂ ಆರು ಜನ ಹಿರಿಯ ಮತ್ತು ಕಿರಿಯ ಸಂಶೋಧಕ ಸಹಾಯಕರೂ ಕಾರ್ಯನಿರ್ವಹಿಸುತ್ತಿದ್ದರು. ನಾಡಿನಾದ್ಯಂತ ಹರಡಿಹೋಗಿದ್ದ ಓಲೆಗರಿ ಮತ್ತು ಕಾಗದದ ಹಸ್ತಪ್ರತಿಗಳನ್ನು ಸಂಗ್ರಹಿಸುವುದು ಮತ್ತು ಅವನ್ನು ವೈಜ್ಞಾನಿಕವಾಗಿ ಸಂರಕ್ಷಿಸುವುದು ಒಂದು ಕೆಲಸವಾದರೆ, ಇದಕ್ಕಿಂತ ಪ್ರಮುಖವಾದ ಕಾರ್ಯವೆಂದರೆ ಅಪ್ರಕಟಿತ ಪ್ರಾಚೀನ ಕಾವ್ಯಗಳ ಉಪಲಬ್ಧವಾದ ಶುದ್ಧವೂ ಪ್ರಾಚೀನವೂ ಆದ ಹಸ್ತಪ್ರತಿಯಿಂದ ಪ್ರತಿಮಾಡಿ, ಬೇರೆ ಹಸ್ತಪ್ರತಿಗಳಿಂದ ಪಾಠಾಂತರಗಳನ್ನು ಗುರುತುಮಾಡಿಕೊಂಡು ಆ ಕಾಲದ ಕವಿಯ ಪಾಠಗಳಿಗೆ ಸಮೀಪವಾದ ಪಾಠಗಳನ್ನು ಕಂಡುಹಿಡಿದು ಆ ಕಾವ್ಯವನ್ನು ಶಾಸ್ತ್ರೀಯವಾಗಿ ಸಂಪಾದಿಸಿ, ಸಮುಚಿತವಾದ ಕವಿಕಾವ್ಯ ವಿಷಯವನ್ನು ಸಿದ್ಧಪಡಿಸಿ ಪ್ರಕಟಿಸುವುದು ಸಂಪಾದನಾ ವಿಭಾಗದ ಮುಖ್ಯ ಕಾರ್ಯವಾಗಿತ್ತು. ಡಾ. ಮಂಜಪ್ಪಶೆಟ್ಟರು ಗ್ರಂಥ ಸಂಪಾದನಾ ನಿಯಮಗಳಿಗೆ ಅನುಸಾರವಾಗಿ ಹಲವಾರು ಅಪ್ರಕಟಿತ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಶ್ರೀಯುತರು ಕೆಲಕಾಲ ಕೊಡಗಿನ ಒಂದು ಕಾಲೇಜಿನಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿ ತರುವಾಯ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ನೇಮಕಗೊಂಡವರು, ಶ್ರೀಯುತರು ಕ್ಷಿಪ್ರದಲ್ಲೇ ಹಸ್ತಪ್ರತಿಗಳನ್ನು ಓದುವುದನ್ನು ಕರಗತಮಾಡಿಕೊಂಡರು. ಜೊತೆಗೆ ನಾಡಿನಾದ್ಯಂತ ಸಂಚರಿಸಿ ನೂರಾರು ಹಸ್ತಪ್ರತಿಗಳನ್ನು ಸಂಗ್ರಹಿಸಿ ತಂದಿದ್ದಾರೆ.

ಪ್ರಾರಂಭದಲ್ಲಿ ಸಾಹಿತ್ಯ ಗ್ರಂಥಗಳ ಸಂಪಾದನಾ ಕಾರ್ಯವನ್ನು ಮಂಜಪ್ಪಶೆಟ್ಟಿ ಅವರಿಗೆ ವಹಿಸಲಾಯಿತು. ತರುವಾಯ ವಿವಿಧ ಶಾಸ್ತ್ರಗ್ರಂಥಗಳ ಸಂಪಾದನ ಕಾರ್ಯವನ್ನು ಶ್ರೀಯುತರು ಸಮರ್ಥವಾಗಿ ನಿರ್ವಹಿಸಿದರು. ಡಾ. ಮಂಜಪ್ಪಶೆಟ್ಟರು ಸಂಪಾದಿಸಿರುವ ಒಂದು ಕಾವ್ಯವನ್ನು ದೃಷ್ಟಾಂತವಾಗಿ ನೋಡಬಹುದು; ಮೈಸೂರು ಅರಸನಾದ ಚಿಕ್ಕದೇವರಾಜನ ಆಶ್ರಿತನಾಗಿದ್ದ ತಿಮ್ಮಕವಿಯ ಆಜ್ಞಾನುಸಾರವಾಗಿ ಪಶ್ಚಿಮ ರಂಗಕ್ಷೇತ್ರ ಮಹಾತ್ಮೆ, ಚಿಕ್ಕದೇವರಾಜ ವಂಶಾವಳಿ ಮೊದಲಾದ ಕಾವ್ಯಗಳನ್ನು ಬರೆದಿದ್ದಾನೆ. ಇವು ಎರಡೂ ಚಂಪೂಶೈಲಿಯಲ್ಲಿವೆ. ಇವೆರಡು ಕೃತಿಗಳ ಸಂಪಾದನ ಕಾರ್ಯವನ್ನು ಡಾ. ಮಂಜಪ್ಪಶೆಟ್ಟರು ತುಂಬ ಸಮರ್ಪಕವಾಗಿ ಮಾಡಿದ್ದಾರೆ. ಸವಿಸ್ತಾರವಾದ ಪ್ರಸ್ತಾವನೆಯಲ್ಲಿ ಕವಿ ಕಾವ್ಯ ವಿಷಯಗಳನ್ನು ಸಂಗ್ರಹಿಸಿ ಸಮಗ್ರವಾಗಿ ನಿರೂಪಿಸಿದ್ದಾರೆ. ಶ್ರೀಯುತರು ಸಂಪಾದಿಸಿರುವ ಕೃತಿಗಳಲ್ಲೆಲ್ಲ ಈ ಸಮಗ್ರತೆಯನ್ನೂ ಅಚ್ಚುಕಟ್ಟುತನವನ್ನೂ ಕಾಣಬಹುದಾಗಿದೆ.

ಡಾ. ಮಂಜಪ್ಪಶೆಟ್ಟರು ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಿಗೆ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ. ಕಾವ್ಯ, ಸಾಹಿತ್ಯವಿಮರ್ಶೆ, ಸಂಶೋಧನೆ, ಗ್ರಂಥಸಂಪಾದನೆ, ಜೀವನಚರಿತ್ರೆ, ವ್ಯಾಕರಣ, ಛಂದಸ್ಸು, ಶಾಸನ, ಜಾನಪದ ಮುಂತಾದ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ನಲವತ್ತಕ್ಕೂ ಮಿಕ್ಕು ಕೃತಿಗಳನ್ನೂ ರಚಿಸಿದ್ದಾರೆ.

ಡಾ. ಮಂಜಪ್ಪಶೆಟ್ಟರಿಗೆ ಚುಟುಕುಸಾಹಿತ್ಯದಲ್ಲಿ ಅಪಾರ ಆಸಕ್ತಿ, ಅನೇಕ ಚುಟುಕುಪದ್ಯಗಳನ್ನು ಬರೆದು ಪ್ರಕಟಿಸಿದ್ದಾರೆ. ಈ ಆಸಕ್ತಿಯೇ ಅವರು ಮುಕ್ತಕಸಾಹಿತ್ಯದಲ್ಲಿ ವಿಶೇಷವಾಗಿ ಕೆಲಸ ಮಾಡಿ ಪಿಎಚ್.ಡಿ. ಪದವಿಯನ್ನು ಗಳಿಸುವುದಕ್ಕೂ ಅವಕಾಶ ಮಾಡಿಕೊಟ್ಟಿತು. ಇವರ ಈ ನಿರಂತರ ಸೇವೆಗೆ ಅನೇಕ ಸಂಘ ಸಂಸ್ಥೆಗಳಿಂದ ಹಲವಾರು ಪ್ರಶಸ್ತಿಗಳು ಲಭ್ಯವಾಗಿವೆ.

ಡಾ. ಮಂಜಪ್ಪಶೆಟ್ಟರು ಯಾವ ಸದ್ದುಗದ್ದಲವೂ ಇಲ್ಲದಂತೆ ಎಲೆಮರೆಯ ಕಾಯಿಯಂತೆ ನಿರಂತರವಾಗಿ ತಮ್ಮ ವ್ಯಾಸಂಗದಲ್ಲೇ ನಿರತರಾಗಿ ತಮ್ಮ ಪ್ರತಿಭೆಯಿಂದಾಗಿ ರಾಜ್ಯ ಮತ್ತು ರಾಷ್ಟ್ರಮಟ್ಟದ ಸಾಹಿತ್ಯ ಗೋಷ್ಠಿಗಳಲ್ಲಿ ಪ್ರಬಂಧಗಳನ್ನು ಮಂಡಿಸಿ ಮೆಚ್ಚುಗೆಯನ್ನು ಪಡೆದಿದ್ದಾರೆ. ಕೆಲವಾರು ಸಂಘ ಸಂಸ್ಥೆಗಳಲ್ಲಿ ಪದಾಧಿಕಾರಿಯಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಸೇವೆಯಿಂದ ನಿವೃತ್ತರಾದ ಮೇಲೂ ನಿರಂತರವಾಗಿ ಕಾವ್ಯ ಚಟುವಟಿಕೆಗಳಲ್ಲೇ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಶ್ರೀಯುತರ ಅರವತ್ತು ವರ್ಷಗಳ ಸಾರ್ಥಕ ಸೇವೆಯನ್ನು ಮನಗಂಡ ಅವರ ಅಭಿಮಾನಿಗಳ ಅಭಿನಂದನ ಗ್ರಂಥವನ್ನು ಸಮರ್ಪಿಸಲು ಸಂಕಲ್ಪಿಸಿರುವುದು ಸಮಯೋಚಿತವೂ ಸಮಂಜಸವೂ ಆಗಿದೆ. ಅರವತ್ತರ ಈ ವಿದ್ಯಾವಿನಯ ಸಂಪನ್ನ ಡಾ. ಮಂಜಪ್ಪಶೆಟ್ಟರಿಗೆ ಸಮಸ್ತ ಸನ್ಮಂಗಲವನ್ನು ಹಾರೈಸುತ್ತೇನೆ.

■



ಆರಾಧ್ಯ ಸಂಪದ-೨

ಈ ಸಂಪುಟದ ಹಲವು ಲೇಖನಗಳು ಮೇಲೆ ತಿಳಿಸಿದಂತೆ ಸುಮಾರು ನಲವತ್ತು ಐವತ್ತರ ಕಾಲಘಟ್ಟದಲ್ಲಿ ಬರೆದಂತಹವು. ಅವುಗಳನ್ನು ಬರೆಯುವ ವೇಳೆಗೆ ಲಭ್ಯವಿದ್ದ ಎಲ್ಲ ಮಾಹಿತಿಯನ್ನೂ ಬಳಸಿಕೊಳ್ಳಲಾಗಿದೆ. ಇಂದು ಅದೇ ವೇಳೆಗೆ ಅದೇ ವಿಷಯದ ಬಗೆಗೆ ಹೆಚ್ಚಿನ ಮಾಹಿತಿ ಲಭ್ಯವಾಗಿರಬಹುದು. ಅಂದಿನ ಅಭಿಪ್ರಾಯಗಳು ಇಂದು ಬದಲಾವಣೆಯಾಗಿರಬಹುದು. ಅಂದಿನ ವಿದ್ಯಮಾನಗಳನ್ನೂ ಸ್ಥಿತಿಗತಿಗಳನ್ನೂ ಇಂದಿನ ಕಾಲಘಟ್ಟದಲ್ಲಿ ವಿಮರ್ಶಿಸುವುದೂ ವಿಶ್ಲೇಷಿಸುವುದೂ, ಅಸಹಜ ಅಕಾಲಿಕ ಎಂದು ಕಾಣಬಹುದು. ಇವನ್ನು ಪರಿಶೀಲಿಸುವ ಸಹೃದಯರು ಈ ಅಂಶವನ್ನು ನೆನಪಿನಲ್ಲಿಟ್ಟುಕೊಳ್ಳಬೇಕೆಂದು ವಿನಂತಿಸಿಕೊಳ್ಳುತ್ತೇನೆ. ಹಿಂದೆ ಬರೆದಿರುವ ಈ ಲೇಖನಗಳಿಗೆ ಇಂದಿನ ಅಗತ್ಯ ತಿದ್ದುಪಡಿಗಳನ್ನು ಮಾಡಬೇಕಾಗಬಹುದು ಎಂಬುದನ್ನು ಮುಕ್ತಮನಸ್ಸಿನಿಂದ ಒಪ್ಪಿಕೊಳ್ಳುತ್ತೇನೆ. ನಾನು ಎಲ್ಲ ಕಾಲಕ್ಕೂ ಎಲ್ಲ ಜನಕ್ಕೂ ಒಪ್ಪಿಗೆಯಾಗಿರುವುದನ್ನೇ ಬರೆದಿದ್ದೇನೆ ಎಂಬ ಹಠವಾಗಲಿ, ಅಹಂಭಾವವಾಗಲಿ ನನ್ನಲ್ಲಿ ಎಳ್ಳಷ್ಟೂ ಇಲ್ಲ. ಈ ಲೇಖನಗಳನ್ನು ಬರೆದ ಕಾಲದೃಷ್ಟಿಯಿಂದ ಇವುಗಳ ಮೌಲ್ಯಮಾಪನವನ್ನು ಮಾಡಿಕೊಳ್ಳಬೇಕೆಂದು ವಿನಂತಿಸಿಕೊಳ್ಳುತ್ತೇನೆ.

– ಎನ್. ಬಸವಾರಾಧ್ಯ

ಪ್ರೊ. ಎನ್.ಬಸವಾರಾಧ್ಯರು ನಮ್ಮ ಮಧ್ಯದಲ್ಲಿ ವರ್ತಮಾನದ ಹಿರಿಯ ಜೀವ, ಸಜ್ಜನ. ವಿದ್ವತ್ ಸಾಧನೆಯ ತೊಂಬತ್ತರ ಗಡಿಯ ವಯೋವರ್ಧಿಷ್ಣು ಪಥಗಾಮಿ. ಪಕ್ವ ಮನಸ್ಸಿನ, ಪಳಗಿದ ಭಾವ ವ್ಯವಹಾರದ, ಚೈತನ್ಯವನ್ನು ರಕ್ಷಿಸಿಕೊಂಡು ಬಂದಿರುವ ಆಳೆತ್ತರದ ಜೀವಿ. ಇವರ ಸಾಹಿತ್ಯಿಕ, ಸಂಶೋಧಕ, ಶಾಸ್ತ್ರಜ್ಞಾನ ವೈದುಷ್ಯದ ಲೇಖನಗಳ ಸಂಚಯದ ಒಂದು ಭಾಗ 'ಆರಾಧ್ಯ ಸಂಪದ'ದಲ್ಲಿ ಈ ಮೊದಲೇ ಬೆಳಕು ಕಂಡಿದೆ. ಅದೊಂದು ಪ್ರಾಚೀನ ಕಾವ್ಯಗಳ ಆಸ್ವಾದ, ವಿಮರ್ಶೆ, ಬರೆಹದ ಶೈಲಿಯ ಒಂದು ಆರ್ಷೇಯ ಪ್ರತೀಕ ಅರ್ಥಾತ್ ಕ್ಲಾಸಿಕಲ್ ಬಗೆಯದು. ಸದ್ಯದ ತದ್ರೋ ವೈಶಿಷ್ಟ್ಯದ ಲೇಖನ ಸಂಚಯ 'ಆರಾಧ್ಯ ಸಂಪದ'ದ ಎರಡನೆಯ ಸಂಪುಟವಾಗಿ ಹೊರಬಂದಿದೆ. ಇದರಲ್ಲಿ ಸಾಹಿತ್ಯಿಕ ಲೇಖನಗಳು, ಕೃತಿಗಳಿಗೆ ಬರೆದ ಮುನ್ನುಡಿಗಳು, ಕೃತಿ ವಿಮರ್ಶಾ ಬರೆಹಗಳು, ಸಂಕೀರ್ಣ ಲೇಖನಗಳು, ವ್ಯಕ್ತಿ ಚಿತ್ರಗಳು – ಹೀಗೆ 5 ವಿಭಾಗಗಳಲ್ಲಿ ಆರಾಧ್ಯರ ವಿದ್ವತ್ತು, ಸಾಹಿತ್ಯಿಕ ಶೋಧಗಳು, ಅನುಭವ, ವೈವಿಧ್ಯಮಯ ಆಸಕ್ತಿ ಹಾಗೂ ನೋಟ ನಿಲುವುಗಳು ಕಾಣಬರುತ್ತವೆ. ಆರಾಧ್ಯರು ನೀಡಿರುವ ಪರಾಮರ್ಶನ ಗ್ರಂಥಗಳ ಹೆಸರೇ ಒಂದು ಗ್ರಂಥನಾಮಕೋಶದಂತಿದೆ. ಅವೆಲ್ಲವೂ ಇಂದಿನವರಿಗೆ ಲಭ್ಯವಾಗುವುದು ಕಷ್ಟ. ಆದರೆ ಅವುಗಳಿದ್ದ ಬಗ್ಗೆ ಲಭ್ಯವಾದ ಮಾಹಿತಿಯಂತು ದೊರೆಯುತ್ತದೆ.

– ಡಾ. ಎಂ.ಜಿ. ನಾಗರಾಜ್

ಶಕ್ತಿರ್ನಿಪುಣತಾ ಲೋಕಶಾಸ್ತ್ರಕಾವ್ಯಾದ್ಯವೇಕ್ಷಣಾತ್ ।
ಕಾವ್ಯಜ್ಞಶಿಕ್ಷಯಾಭ್ಯಾಸ ಇತಿ ಹೇತುಸ್ತದುದ್ಭವೇ ॥

[ಶಕ್ತಿ (ಪ್ರತಿಭೆ), ಲೋಕ ಮತ್ತು ಶಾಸ್ತ್ರದ ಹಾಗೂ ಕಾವ್ಯಾದಿಗಳ ಪರಿಚಯದಿಂದ ಬರುವ ನಿಪುಣತೆ(ವ್ಯುತ್ಪತ್ತಿ), ಕಾವ್ಯತತ್ತ್ವಜ್ಞರ ಉಪದೇಶದ ಮೂಲಕ ಕಾವ್ಯಾನುಶೀಲನೆ (ಅಭ್ಯಾಸ)–ಈ ಮೂರು ಒಟ್ಟಾಗಿ ಸೇರಿದಾಗ ಕಾವ್ಯಕ್ಕೆ ಕಾರಣವಾಗುತ್ತದೆ].

ಮಮ್ಮಟನ ಕಾವ್ಯಪ್ರಕಾಶದ ಕಾವ್ಯಹೇತುವನ್ನು ಹೇಳುವ ಈ ಕಾರಿಕೆ ಕನ್ನಡ ಸಾಹಿತ್ಯ ಲೋಕದ ಹಿರಿಯ ತಲೆಮಾರಿನ ಬಹುಶ್ರುತ ವಿದ್ವಾಂಸರಾದ ಪ್ರೊ. ಎನ್. ಬಸವಾರಾಧ್ಯರಿಗೆ ಸರ್ವವಿಧದಲ್ಲೂ ಅನ್ವರ್ಥವಾಗಿದೆ. ಪ್ರತಿಭಾವಂತರಾದ ಆರಾಧ್ಯರು ತಮ್ಮ ಇಡೀ ಜೀವನವನ್ನು ಪ್ರಾಚೀನ ಕನ್ನಡಶಾಸ್ತ್ರ, ಕಾವ್ಯ, ನಾಟಕ, ಹಸ್ತಪ್ರತಿಶಾಸ್ತ್ರ, ನಿಘಂಟು ಮೊದಲಾದ ಗ್ರಂಥಗಳ ಅಧ್ಯಯನದಿಂದ ಗಳಿಸಿದ ವ್ಯುತ್ಪತ್ತಿ ಮತ್ತು ಆಚಾರ್ಯ ತೀನಂಶ್ರೀ, ಡಿ.ಎಲ್.ಎನ್., ಕುವೆಂಪು ಮೊದಲಾದ ಕನ್ನಡ ಸಾಹಿತ್ಯ ತತ್ತ್ವಜ್ಞರ ಮಾರ್ಗದರ್ಶನದಲ್ಲಿ ಮಾಡಿದ ಅಭ್ಯಾಸ–ಈ ಮೂರೂ ಗುಣಗಳು ಒಟ್ಟಾಗಿ ಮೇಳೈಸಿದ್ದು ಅವು ಅವರ ಬರವಣಿಗೆಯಲ್ಲಿ ವ್ಯಕ್ತವಾಗುತ್ತಿವೆ. ಕಾವ್ಯಪ್ರಯೋಜನದಲ್ಲಿ ಮೌಲಿಭೂತವಾದದ್ದು ಕಾವ್ಯರಚನೆ ಅಥವಾ ಅಧ್ಯಯನದಿಂದುಂಟಾಗುವ ಅಪರಿಮಿತ ಆನಂದ. ತಮ್ಮ ಬರವಣಿಗೆ ಅಧ್ಯಯನಗಳಿಂದ ಉಂಟಾಗುವ ಅಲೌಕಿಕ ಆನಂದವನ್ನು ಸ್ವತಃ ಅನುಭವಿಸುತ್ತಾ, ಇತರರೊಂದಿಗೆ ಹಂಚಿಕೊಂಡು ತೃಪ್ತಿಪಡುವ ಹಿರಿಯ ಚೇತನ ಬಸವಾರಾಧ್ಯರು.

– ಡಾ.ಸಿ.ಶಿವಕುಮಾರಸ್ವಾಮಿ

ಪ್ರೊ. ಎನ್. ಬಸವಾರಾಧ್ಯ ಅಭಿನಂದನ ಸಮಿತಿ
ಬೆಂಗಳೂರು– ೫೬೦ ೦೧೦